# ಕುಮಾರರಾಮನ ಸಾಂಗತ್ಯಗಳು

ಜಿ. ವರದರಾಜರಾವ್, ಎಂ.ಎ., ಪಿಎಚ್.ಡಿ.
ಕನ್ನಡ ಅಧ್ಯಾಪಕ
ಮಾನಸ ಗಂಗೋತ್ರಿ, ಮೈಸೂರು-೬

ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು-೬

# ಕುಮಾರರಾಮನ ಸಾಂಗತ್ಯಗಳು

ಜಿ. ವರದರಾಜರಾವ್, ಎಂ.ಎ., ಪಿಎಚ್.ಡಿ.
ಕನ್ನಡ ಅಧ್ಯಾಪಕ
ಮಾನಸ ಗಂಗೋತ್ರಿ, ಮೈಸೂರು—೬



ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು-೬

KUMARA RAMANA SANGATYAGALU—Ph.D. Thesis by Dr. G. Varadaraja Rao, University of Mysore. Published by the Director, "Prasaranga" University of Mysore, Mysore-6.

ಮೊದಲ ಮುದ್ರಣ: ೧೯೬೬





ಪ್ರಕಾಶಕರು
ಡೈರೆಕ್ಟರ್, ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೬



ಸಾಧಾರಣ ಪ್ರತಿ: ರೂ. ೧೨-೦೦
~~ಕ್ಯಾಲಿಕೋ ಪ್ರತಿ: ರೂ. ೧೪-೦೦~~

ಮುದ್ರಕರು
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್
ಕೃಷ್ಣಮೂರ್ತಿಪುರಂ, ಮೈಸೂರು—೪

ಮೈಸೂರು ವಿಶ್ವವಿದ್ಯಾನಿಲಯಕ್ಕೆ
ಅರ್ಪಿಸಿದ
ಪಿಎಚ್.ಡಿ. ನಿಬಂಧ



## ಪ್ರಕಾಶಕರ ಮಾತು

ಡಾ. ಜಿ. ವರದರಾಜರಾಯರ "ಕುಮಾರರಾಮನ ಸಾಂಗತ್ಯಗಳು" ಎಂಬ ಈ ವಿದ್ವತ್ಪ್ರಬಂಧವನ್ನು ಕನ್ನಡಿಗರಿಗೆ ಬಹಳ ಸಂತೋಷದಿಂದ ಸಮರ್ಪಿಸುತ್ತಿದ್ದೇವೆ. ಇದರ ಪ್ರಕಟಣೆಯ ಕಾರ್ಯವನ್ನು ನಮಗೆ ವಹಿಸಿದ ಶ್ರೀಯುತರಿಗೆ ನಮ್ಮ ವಂದನೆಗಳು.

ವಿಶ್ವವಿದ್ಯಾನಿಲಯದ ಧನಸಹಾಯದ ಆಯೋಗದವರು (University Grants Commission) ಇದರ ಪ್ರಕಟಣೆಯ ವೆಚ್ಚವನ್ನು ಭಾಗಶಃ ವಹಿಸಿಕೊಂಡಿದ್ದಾರೆ. ಅವರ ಉದಾರ ಸಹಾಯಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

ಮೈಸೂರು
೭–೯–೧೯೬೬

**ಪ್ರಭುಶಂಕರ**
ಡೈರೆಕ್ಟರ್

# ಅರಿಕೆ

ಕುಮಾರರಾಮನ ಸಾಂಗತ್ಯದ ಪ್ರತಿಗಳನ್ನು ಕುರಿತು ಒಮ್ಮೆ ಶ್ರೀ. ಡಿ.ಎಲ್. ನರಸಿಂಹಾಚಾರ್, ಎಂ.ಎ. ಅವರಿಗೆ ನಾನು ಪತ್ರ ಬರೆದಾಗ, ಅವರು ಅವುಗಳನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಒಂದು ದೀರ್ಘ ಪ್ರಬಂಧವನ್ನು ಬರೆಯುವಂತೆ ನನಗೆ ಸಲಹೆ ಮಾಡಿದರು (ಶ್ರೀಯುತರ ಪತ್ರ, ೩೦-೩-೧೯೫೫). ಆಗ ನಾನು ಚಿತ್ರದುರ್ಗದಲ್ಲಿ ಇದ್ದದ್ದರಿಂದ, ನನ್ನ ಹಿತೈಷಿಗಳೂ ಹಿರಿಯ ಮಿತ್ರರೂ ಆಗಿದ್ದ ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಬಳಿಯಲ್ಲಿದ್ದ ಅಮೂಲ್ಯವಾದ ಪ್ರತಿಗಳನ್ನು ನೋಡುವ ಸದವಕಾಶವಿತ್ತು. ನನ್ನ ಗುರುಗಳ ಸಲಹೆಯ ಮೇರೆಗೆ ಆ ಪ್ರತಿಗಳನ್ನು ಪರಿಶೀಲಿಸಿದಾಗ ಅನೇಕ ಹೊಸ ವಿಷಯಗಳು ಕಂಡುಬಂದುವು. ಕುಮಾರರಾಮನ ಕಥೆಯನ್ನು ಮೂವರು ಕವಿಗಳು ಹೇಗೆ ನಿರೂಪಿಸಿದ್ದಾರೆ ಎಂಬುದನ್ನು ಪರಸ್ಪರವಾಗಿ ಹೋಲಿಸಿ ನೋಡುವುದೇ ಈ ಪ್ರಬಂಧದ ಮುಖ್ಯ ಗುರಿ. ಆದರೆ, ಆ ರಣಧೀರನನ್ನು ಕುರಿತು ಸಾಹಿತಿಗಳೂ, ಚರಿತ್ರಕಾರರೂ ಪದೇ ಪದೇ ವಿಚಾರಮಾಡಿರುವುದರಿಂದ ಅವನ ವ್ಯಕ್ತಿತ್ವದ ಮೇಲೆ ಬೆಳಕನ್ನು ಬೀರಬಲ್ಲ ಇತರ ರಚನೆಗಳನ್ನೂ ಅಭಿಪ್ರಾಯಗಳನ್ನೂ ಸಮೀಕ್ಷಿಸುವುದು ಸೂಕ್ತವೆಂದು ತೋರಿಬಂದಿತು. ಆದ್ದರಿಂದ ಅವುಗಳ ಕಡೆಗೂ ಇಲ್ಲಿ ಸಾಕಾದಷ್ಟು ಗಮನವನ್ನು ಕೊಟ್ಟಿದೆ.

ಈ ದೀರ್ಘ ಪ್ರಬಂಧದಲ್ಲಿ ಪ್ರತಿಪಾದಿಸಿರುವ ಮುಖ್ಯಾಂಶಗಳನ್ನು ಸಂಗ್ರಹವಾಗಿ ಹೀಗೆ ಸೂಚಿಸ ಬಹುದು:—

1. ಕುಮಾರರಾಮನ ಕಥೆಯನ್ನು ಆರು ಜನ ಕವಿಗಳು ಬರೆದಿರುವರೆಂಬ ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಅಭಿಪ್ರಾಯವನ್ನು ಸಕಾರಣವಾಗಿ ವಿಮರ್ಶಿಸಿ, ಅದು ಸೂಕ್ತವಲ್ಲ ವೆಂದು ತೋರಿಸಿಕೊಡಲಾಗಿದೆ.

2. ನಂಜುಂಡ, ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿಗಳ ಕೃತಿಗಳನ್ನು ತೌಲನಿಕ ವಾಗಿ ಪರಿಶೀಲಿಸಲಾಗಿದೆ.

3. ಜನಜನಿತವಾದ ಕಥೆಗಳು, ಯಕ್ಷಗಾನಗಳು, ಜನಪದ ಸಾಹಿತ್ಯ, ಕೈಫಿಯತ್ತುಗಳು ಮೊದಲಾದುವುಗಳಲ್ಲಿ ಚಿತ್ರಿತವಾಗಿರುವ ಕುಮಾರರಾಮನ ವ್ಯಕ್ತಿತ್ವವನ್ನು ಪರಿಚಯಮಾಡಿ ಕೊಡಲಾಗಿದೆ.

4. ಚಾರಿತ್ರಿಕ ದೃಷ್ಟಿಯಿಂದ ಕುಮಾರರಾಮನ ಸಾಂಗತ್ಯಗಳ ಸ್ಥಾನವನ್ನು ಆಧಾರ ಸಹಿತವಾಗಿ ವಿಚಾರಮಾಡಲಾಗಿದೆ.

5. ಸಾಹಿತ್ಯ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಕುಮಾರರಾಮನ ಸಾಂಗತ್ಯಗಳ ಮಹತ್ವವನ್ನು ವಿಮರ್ಶಿಸಲಾಗಿದೆ.

ಈ ಪ್ರಬಂಧ ರಚನೆಗೆ ಅಗತ್ಯವಾದ ಮೂರು ಕೃತಿಗಳೂ ಇನ್ನೂ ಅಚ್ಚಾಗದೆ ಇದ್ದದ್ದರಿಂದ (ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದವರು ಈಗ ತಾನೆ (೧೯೫೯) ನಂಜುಂಡನ ಕೃತಿಯ ಪೂರ್ವಾರ್ಧವನ್ನು ಮಾತ್ರ ಪ್ರಕಟಿಸಿರುತ್ತಾರೆ.*) ಅವುಗಳ ಕಥಾವಸ್ತುವನ್ನು ಆದಷ್ಟು ಸಂಗ್ರಹಿಸಿ ಕೊಡ ಬೇಕಾಯಿತು. ಇದಲ್ಲದೆ, ಇತರ ರಚನೆಗಳಲ್ಲಿ ಕಂಡುಬರುವ ಅಂಶಗಳಿಗೆ ಲೋಪ ಬಾರದಂತೆ ಅವುಗಳನ್ನೂ ಸಹ ವಿದ್ವಾಂಸರ ಮುಂದಿಡುವುದು ಅನಿವಾರ್ಯವೆನಿಸಿತು. ಆದ್ದರಿಂದ ಈ ಪ್ರಬಂಧವು ನನ್ನ ನಿರೀಕ್ಷೆಗಿಂತಲೂ ದೊಡ್ಡದಾಗಿ ಬೆಳೆದಿದೆ. ಕುಮಾರರಾಮನನ್ನು ಕುರಿತ ಸಂಗತಿಗಳು ಕೆದಕಿದಂತೆಲ್ಲ ಇಂದಿಗೂ ಹೆಚ್ಚು ಹೆಚ್ಚಾಗಿ

---

* ಇತ್ತೀಚೆಗೆ ಉತ್ತರಾರ್ಧವೂ ಪ್ರಕಟವಾಗಿದೆ (೧೯೬೪).

ದೊರೆಯುವ ಸಂಭವವಿದೆ. ಜನಪ್ರಿಯವಾದ ಆತನ ಚರಿತ್ರೆಗೆ ಆದಿಯಿರಬಹುದೇ ವಿನಾ ಅಂತ್ಯವಿಲ್ಲವೆಂದರೂ ಸಲ್ಲುತ್ತದೆ. ಮಾನವನಾಗಿದ್ದವನು ಮಹಿಮಾಪುರುಷನಾಗಿ ದೇವರೆನ್ನಿಸಿದ ಮೇಲೆ ಅವನ ಚರಿತ್ರೆಗೆ ಕೊನೆಯೆಲ್ಲಿ? ಪ್ರಕೃತದಲ್ಲಿ ಸಾಧ್ಯವಾದಷ್ಟು ವಿಷಯಗಳನ್ನು ಸಂಗ್ರಹಿಸಿರುವೆನೇ ಹೊರತು ಎಲ್ಲವನ್ನೂ ಹೇಳಿ ಮುಗಿಸಿದ್ದೇನೆಂಬ ಧೈರ್ಯ ನನಗಿಲ್ಲ. ಕುಮಾರರಾಮನಿಗೆ ಸಂಬಂಧಿಸಿದ ಎಡೆಗಳಲ್ಲಿ ಸಂಚರಿಸಿ ಸಂಗ್ರಹಿಸಬೇಕಾದ ಕಾರ್ಯ ಸಾಕಾದಷ್ಟು ಆಗಬೇಕಾಗಿದೆ.

ಈ ಪ್ರಬಂಧವನ್ನು ಬರೆಯುವಾಗ ನನಗೆ ಲಭಿಸಿದ ಹಸ್ತಪ್ರತಿಗಳನ್ನೆಲ್ಲ ನೋಡಿರುತ್ತೇನೆ. ನಂಜುಂಡ ಮತ್ತು ಮಹಲಿಂಗಸ್ವಾಮಿಯ ಕೃತಿಗಳಲ್ಲಿ ಹೆಚ್ಚು ಸಮಸ್ಯೆಗಳು ಉಂಟಾಗಲಿಲ್ಲ. ಪಾಂಚಾಳ ಗಂಗನ ಕೃತಿ ಮಾತ್ರ ಹಿಡಿತಕ್ಕೆ ಸಿಕ್ಕುವುದೇ ಕಷ್ಟವಾಗಿದೆ. ಅದರ ಒಂದು ಪ್ರತಿ ಇನ್ನೊಂದರಂತೆ ಇಲ್ಲದಿರುವುದರಿಂದ ಅದರ ಮೂಲಸ್ವರೂಪವನ್ನು ಆಧುನಿಕ ಗ್ರಂಥಸಂಪಾದನೆಯ ಶಾಸ್ತ್ರಕ್ಕೆ ಅನುಸಾರವಾಗಿ ನಿರ್ಧರಿಸುವತನಕ ಅದನ್ನು ಕುರಿತು ದೃಢವಾಗಿ ಏನನ್ನೂ ಹೇಳುವಂತಿಲ್ಲ. ಈ ಸಮಸ್ಯೆಯನ್ನು ಆದಷ್ಟುಮಟ್ಟಿಗೆ ಪರಿಹರಿಸುವ ಉದ್ದೇಶದಿಂದ ನನಗೆ ದೊರೆತ ೨೬ ಪ್ರತಿಗಳನ್ನು ವಿವರವಾಗಿ ನೋಡಿರುತ್ತೇನೆ. (ಈ ಸಂದರ್ಭದಲ್ಲಿ ಇನ್ನೂ ಕೆಲವು ಪ್ರತಿಗಳನ್ನು ನೋಡಬೇಕೆಂಬ ಹಂಬಲವಿತ್ತು. ಕಾರಣಾಂತರದಿಂದ ಅದು ಕೈಗೂಡದೆ ನಿರಾಶನಾಗಬೇಕಾಯಿತು.) ಸದ್ಯಕ್ಕೆ ಪಾಂಚಾಳ ಗಂಗನ ಪ್ರತಿಗಳಲ್ಲಿ ನನ್ನ ಗಮನಕ್ಕೆ ಬಂದ ಮೂರು ಪ್ರಭೇದಗಳನ್ನು ಇಲ್ಲಿ ಆಧಾರವಾಗಿಟ್ಟುಕೊಂಡು, ಬಹುಮಟ್ಟಿಗೆ ಅವುಗಳಲ್ಲಿನ ಸಾರ್ವತ್ರಿಕವಾದ ಅಂಶಗಳನ್ನೇ ಉದಾಹರಿಸಲಾಗಿದೆ. ಹಾಗೂ ಅನಿವಾರ್ಯವೆಂದು ಕಂಡುಬಂದಲ್ಲಿ ಆಯಾ ಪ್ರತಿಯ ಸಂಕೇತವನ್ನು ಸೂಚಿಸಲಾಗಿದೆ. ಆದಷ್ಟು ಬೇಗ ಪಾಂಚಾಳ ಗಂಗನ ಮೂಲಪ್ರತಿಯ ಸ್ವರೂಪದ ನಿಷ್ಕರ್ಷೆ ಆಗಬೇಕಾಗಿದೆ.

ನಾನು ಕೈಕೊಂಡ ಈ ಕೆಲಸಕ್ಕೆ ಸುಮಾರು ಐದು ವರ್ಷಗಳು ಹಿಡಿದಿವೆ. ಕೃತಿಗಳ ಸಂಗ್ರಹ, ಪ್ರತಿಗಳನ್ನು ನಕಲು ಮಾಡುವುದು ಮೊದಲಾದುವುಗಳಿಗೆ ಸುಮಾರು ಎರಡು ವರ್ಷಗಳೂ, ಇತರ ವಿಷಯ ಸಂಗ್ರಹ ಮತ್ತು ಪ್ರಬಂಧರಚನೆಗೆ ಎರಡು ವರ್ಷಗಳೂ, ಪ್ರಬಂಧದ ಪ್ರತಿಗಳನ್ನು ಸಿದ್ಧಪಡಿಸಲು ಒಂದು ವರ್ಷವೂ ಆಗಿರುತ್ತದೆ. ಈ ಕಾರ್ಯದಲ್ಲಿ ನನಗೆ ಅನೇಕರು ನೆರವಾಗಿದ್ದಾರೆ. ಹಸ್ತಪ್ರತಿಗಳನ್ನು ನಕಲು ಮಾಡುವುದರಲ್ಲಿ ನನ್ನ ಸಹಧರ್ಮಿಣಿಯ ಭಾಗವೂ ಸಾಕಾದಷ್ಟಿದೆ. ಚಿತ್ರದುರ್ಗದ ಪಾತಾಳೇಶ್ವರನ ಭಕ್ತರಾದ ಶ್ರೀ. ಮಂಜುನಾಥ ಅವರು ಮತ್ತೊಬ್ಬರಾಗಿರುತ್ತಾರೆ. ಕಥಾಸಂಗ್ರಹ, ಕೃತಿ ಸಂಗ್ರಹಗಳಲ್ಲಿ ನನಗೆ ಬೆಂಬಲವಾಗಿ ನಿಂತ ನನ್ನ ವಿದ್ಯಾರ್ಥಿಗಳಾಗಿದ್ದ ಶ್ರೀ. ಕೆ. ನಾಗೇಂದ್ರಪ್ಪ, ಶ್ರೀ. ಜಿ. ಸಿದ್ದಪ್ಪ, ಶ್ರೀ. ಎಸ್. ನಾಗರಾಜ ಅವರುಗಳನ್ನು ನಾನು ಮರೆಯುವಂತಿಲ್ಲ. ಕುಮಾರರಾಮನ ವಿಷಯದಲ್ಲಿ ನನಗೆ ಕುತೂಹಲವನ್ನುಂಟುಮಾಡಿದ ಶ್ರೀ. ಹುಲ್ಲೂರು ಶ್ರೀನಿವಾಸಜೋಯಿಸರಿಗೆ ನಾನು ಚಿರಋಣಿಯಾಗಿರುತ್ತೇನೆ. ಶ್ರೀಯುತರು ತಮ್ಮಲ್ಲಿದ್ದ ಅಮೂಲ್ಯವಾದ ಪ್ರತಿಗಳನ್ನೂ, ತಾವು ಶ್ರಮವಹಿಸಿ ಬರೆದಿದ್ದ ಲೇಖನಾದಿಗಳ ಪ್ರತಿಗಳನ್ನೂ ನೀಡಿ ನೆರವಾಗಿರುತ್ತಾರೆ. ಅವರಂತೆಯೇ ಅವರ ಮಕ್ಕಳಾದ ಶ್ರೀ. ಎಚ್.ಎಸ್. ಪಾಂಡುರಂಗ ಜೋಯಿಸರೂ ಈ ಬಗ್ಗೆ ಔದಾರ್ಯವನ್ನು ತೋರಿರುತ್ತಾರೆ. ಪ್ರತಿಗಳನ್ನು ದೊರಕಿಸಿಕೊಡುವುದರಿಂದ ತೊಡಗಿ, ಈ ಪ್ರಬಂಧವು ಮುಕ್ತಾಯವಾಗುವವರೆಗೆ ನನಗೆ ಧೈರ್ಯವನ್ನೂ ಹುಮ್ಮಸ್ಸನ್ನೂ ನೀಡಿ ಅಕ್ಷರಶಃ ಮಾರ್ಗದರ್ಶಿಗಳಾಗಿ ನಿಂತು ಉಪಕಾರ ಮಾಡಿರುವ ನನ್ನ ವಿದ್ಯಾಗುರುಗಳಾದ ಪ್ರೊ|| ಡಿ. ಎಲ್. ನರಸಿಂಹಾಚಾರ್, ಎಂ. ಎ., ಅವರಿಗೆ ನಾನು ಕೃತಜ್ಞನಾಗಿರುತ್ತೇನೆ. ನನ್ನ ಕೆಲಸಕ್ಕೆ ಮತ್ತಷ್ಟು ಉತ್ತೇಜನವಿತ್ತ ಮತ್ತೊಬ್ಬ ವಿದ್ಯಾಗುರುಗಳಾದ ಪ್ರೊ|| ತೀ. ನಂ. ಶ್ರೀಕಂಠಯ್ಯ, ಎಂ. ಎ., ಅವರಿಗೆ ಈ ಮೂಲಕ ನನ್ನ ವಂದನೆಗಳನ್ನು ಅರ್ಪಿಸಲಿಚ್ಛಿಸುತ್ತೇನೆ.

ಮದರಾಸು, ಧಾರವಾಡ ಮತ್ತು ಮೈಸೂರಿನ ಪ್ರಾಚ್ಯ ಪುಸ್ತಕಭಂಡಾರಗಳ ಅಧಿಕಾರಿಗಳು ವಿಶ್ವಾಸವಿಟ್ಟು ತಮ್ಮಲ್ಲಿದ್ದ ಹಸ್ತಪ್ರತಿಗಳನ್ನು ನೋಡಲು ಅವಕಾಶವಿತ್ತುದಕ್ಕಾಗಿ ಅವರಿಗೆಲ್ಲ ನನ್ನ ಹೃತ್ಪೂರ್ವಕ

ವಾದ ವಂದನೆಗಳು. ಕನ್ನಡ ಸಾಹಿತ್ಯ ಪರಿಷತ್ತಿನ ಪ್ರತಿಯೊಂದನ್ನು ದೀರ್ಘಕಾಲದವರೆಗೆ ನನಗೆ ಎರವಲು ಕೊಟ್ಟಿದ್ದಕ್ಕಾಗಿ ಆ ಸಂಸ್ಥೆಯ ಅಧಿಕಾರಿಗಳಿಗೆ ನಾನು ಆಭಾರಿಯಾಗಿದ್ದೇನೆ. ಮದರಾಸಿನ ಪ್ರಾಚ್ಯ ಪುಸ್ತಕಭಂಡಾರದ ಅಧಿಕಾರಿಗಳು ನಂಜುಂಡನ ಕೃತಿಯ ಕೆಲವು ಸಂಧಿಗಳನ್ನು ನನಗಾಗಿ ಪ್ರತಿ ಮಾಡಿಸಿ ಕೊಟ್ಟು ನೆರವಾಗಿದ್ದಾರೆ. ಮೈಸೂರಿನ ಪುರಾತತ್ವ ಇಲಾಖೆಯ ಅಮೂಲ್ಯವಾದ ಪುಸ್ತಕಭಂಡಾರದಲ್ಲಿ ಗ್ರಂಥಗಳನ್ನು ಪರಿಶೀಲಿಸಲು ಅವಕಾಶವಿತ್ತು ಉಪಕರಿಸಿದ ಅಲ್ಲಿನ ಅಧಿಕಾರಿಗಳಿಗೂ, ಭಾರತ ಸರ್ಕಾರದ ಶಾಸನದ ಇಲಾಖೆಯವರು ನನ್ನ ಕೋರಿಕೆಯ ಮೇರೆಗೆ ಅಪ್ರಕಟಿತವಾದ ರಾಮುಘಡದ ಶಾಸನಗಳ ನಕಲು ಗಳನ್ನು ಸಕಾಲದಲ್ಲಿ ಕಳುಹಿಸಿಕೊಟ್ಟದ್ದಲ್ಲದೆ, ಅವುಗಳನ್ನು ಈ ಪ್ರಬಂಧದಲ್ಲಿ ಬಳಸಿಕೊಳ್ಳಲು ಅನುಮತಿ ಯಿತ್ತುದಕ್ಕಾಗಿ ಅಲ್ಲಿನ ಅಧಿಕಾರಿಗಳಿಗೂ ನಾನು ಕೃತಜ್ಞನಾಗಿರುತ್ತೇನೆ. ಇಂತೆಯೇ ಮಹಾರಾಜಾ ಕಾಲೇಜಿನ ಪುಸ್ತಕಭಂಡಾರ, ಮೈಸೂರು ವಿಶ್ವವಿದ್ಯಾನಿಲಯದ ಪುಸ್ತಕಭಂಡಾರ, ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಪುಸ್ತಕಭಂಡಾರ ಮೊದಲಾದ ಸಂಸ್ಥೆಗಳಿಂದ ವಿಷಯಸಂಗ್ರಹಕ್ಕೆ ದೊರೆತ ಉಪಕಾರ ವನ್ನು ಇಲ್ಲಿ ಸ್ಮರಿಸಲಾಶಿಸುತ್ತೇನೆ. ನಾನಾ ರೀತಿಗಳಲ್ಲಿ ನನಗೆ ಸಹಾಯ ನೀಡಿದ ಡಾ॥ ದೇಸಾಯಿ ಪಾಂಡುರಂಗರಾವ್, ಶ್ರೀ. ಹುಯಿಲುಗೋಳ ನಾರಾಯಣರಾವ್, ಶ್ರೀ. ದ.ರಾ. ಬೇಂದ್ರೆ, ಶ್ರೀ. ಕಪಟರಾಳು ಕೃಷ್ಣರಾವ್, ಶ್ರೀ. ಎಂ. ಮರಿಯಪ್ಪಭಟ್, ಡಾ॥ ಬಿ. ಎಸ್. ಗದ್ದಗಿಮಠ, ಶ್ರೀ. ಎನ್. ಬಸವಾರಾಧ್ಯ, ಶ್ರೀ. ಕ. ರಾ. ಕೃ. ಮೊದಲಾದ ವಿದ್ವಾಂಸರಿಗೆ ನನ್ನ ಹೃತ್ಪೂರ್ವಕವಾದ ನಮಸ್ಕಾರಗಳು. ಇವರಲ್ಲದೆ ಈ ಕ್ಷೇತ್ರದಲ್ಲಿ ಈಗಾಗಲೇ ಶ್ರಮಿಸಿರುವ ಅನೇಕ ತಜ್ಞರ ಅಭಿಪ್ರಾಯಗಳನ್ನು ಈ ಪ್ರಬಂಧದಲ್ಲಿ ಆಗಿಂದಾಗ್ಗೆ ಬಳಸಿಕೊಂಡಿರುತ್ತೇನೆ. ಅವರೆಲ್ಲರಿಗೂ ನಾನು ಋಣಿಯಾಗಿರುತ್ತೇನೆ.

ಕುಮ್ಮಟದುರ್ಗದ ಸಂದರ್ಶನದಲ್ಲಿ ನನಗೆ ನೆರವಾದ ಗಂಗಾವತಿಯ ಶ್ರೀ. ನವಲಿ ವೇದವ್ಯಾಸರಾವ್, ಶ್ರೀ. ಹನುಮಂತಾಚಾರ್, ಸರ್ ಜೋಶಿ ಮತ್ತು ಇತರ ಮಿತ್ರರನ್ನು ನಾನು ಎಂದೆಂದಿಗೂ ಮರೆಯುವಂತಿಲ್ಲ. ಅಲ್ಲಿ ನಡೆದ ಗಣೇಶನ ಉತ್ಸವಕ್ಕಾಗಿ ನನ್ನನ್ನು ಬರಮಾಡಿಕೊಂಡು ಸತ್ಕರಿಸಿದುದಲ್ಲದೆ, ಎಷ್ಟೇ ಪ್ರಯಾಸ ವಾದರೂ ಗಣಿಸದೆ ೨೧–೯–೧೯೫೮ ರಂದು ಕುಮ್ಮಟದುರ್ಗವನ್ನು ನೋಡಲು ನನ್ನ ಜೊತೆಯಲ್ಲಿ ಬಂದ ಹಲವಾರು ಮಿತ್ರರಿಗೆ ನನ್ನ ವಂದನೆಗಳನ್ನು ಈ ಮೂಲಕ ಸಲ್ಲಿಸಬಯಸುತ್ತೇನೆ. ಆ ದಿನ ದಾರಿ ತಪ್ಪಿದ್ದ ನಮಗೆ ಕುಮ್ಮಟದುರ್ಗದ ಕಡೆಗೆ ಕೈ ತೋರಿಸಿದುದಲ್ಲದೆ, ಒಡಗೂಡಿ ಬಂದ ಮುಕ್ಕುಂಪೆಯ ಕುರುಬ ಜನಾಂಗಕ್ಕೆ ಸೇರಿದ ಓಲೆಕಾರ ನಾಗಪ್ಪನ ಉಪಕಾರವನ್ನು ಬಾಯಿಮಾತಿನಲ್ಲಿ ಹೇಳಿ ಮುಗಿಸಲಾರೆ.

ಹೀಗೆ ಕೈಕೊಂಡ ಕೆಲಸಕ್ಕೆ ನಾನಾ ವಿಧಗಳಲ್ಲಿ ನೆರವು ಲಭಿಸಲು ಇಂದು ತಕ್ಕಮಟ್ಟಿಗೆ ಕೆಲಸ ಮಾಡಿರುತ್ತೇನೆ. ಕುಮಾರರಾಮನನ್ನು ಕುರಿತು ಈವರೆಗೆ ನಡೆದಿರುವ ವಿಚಾರಗಳನ್ನೆಲ್ಲ ಸದ್ಯಕ್ಕೆ ಒಂದು ಕಡೆ ತಂದು ರಾಶಿ ಹಾಕಿರುತ್ತೇನೆ. ನನ್ನ ಕಣ್ಣಿಗೆ ಕಾಣದ್ದು, ಕಿವಿಗೆ ಬೀಳದ್ದು ಇನ್ನೂ ಇರಬಹುದು. ಆ ಕೆಲಸಕ್ಕೆ ಈ ಪ್ರಯತ್ನವು ನಾಂದಿಯಾದೀತೆಂದು ಎಣಿಸುತ್ತೇನೆ.

ಮೈಸೂರು
೨೮ - ೭ - ೧೯೬೦

ಜಿ. ವರದರಾಜರಾವ್

# ಕೃತಜ್ಞತೆ

ಮೈಸೂರು ವಿಶ್ವವಿದ್ಯಾನಿಲಯದವರು ಈ ದೀರ್ಘ ಪ್ರಬಂಧಕ್ಕೆ ೧೯೬೧ರಲ್ಲಿ ಪಿಎಚ್.ಡಿ. ಪದವಿಯನ್ನಿತ್ತು ಪುರಸ್ಕರಿಸಿದುದಲ್ಲದೆ, ಈಗ ಇದನ್ನು ತಾವೇ ಪ್ರಕಟಿಸಿ ಉತ್ತೇಜನವಿತ್ತಿರುವುದಕ್ಕಾಗಿ ಅಲ್ಲಿನ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿರುತ್ತೇನೆ. ಪರೀಕ್ಷಕರು ಮತ್ತು ನನ್ನ ಗುರುಗಳ ಸಲಹೆಯ ಮೇರೆಗೆ ಈ ಅಚ್ಚಿನ ಪ್ರತಿಯಲ್ಲಿ ಸೂಕ್ತವಾದ ಕೆಲವು ಮಾರ್ಪಾಡುಗಳನ್ನು ಮಾಡಿರುತ್ತೇನೆ. ಮುದ್ರಣಕಾರ್ಯದಲ್ಲಿ ನನಗೆ ನೆರವಿತ್ತು ಸಹಕರಿಸಿದ 'ಶಕ್ತಿ ವಿದ್ಯುತ್ ಮುದ್ರಣಾಲಯ'ದ ಒಡೆಯರೂ, ನನ್ನ ಮಿತ್ರರೂ ಆದ ಶ್ರೀ. ಆರ್. ವಿ. ಶ್ರೀನಿವಾಸಮೂರ್ತಿ, ಬಿ.ಎ., ಅವರಿಗೂ, ಪ್ರಕಟನಕಾರ್ಯದಲ್ಲಿ ವಿಶೇಷವಾಗಿ ಆಸಕ್ತಿ ವಹಿಸಿದ ಪ್ರಸಾರಾಂಗದ ಡೈರೆಕ್ಟರ್ ಡಾ|| ಪ್ರಭುಶಂಕರ್, ವಿಶ್ವವಿದ್ಯಾನಿಲಯದ ಈಗಿನ ರಿಜಿಸ್ಟ್ರಾರರಾದ ಶ್ರೀ. ಕೆ. ಆರ್. ರಾಮಚಂದ್ರನ್, ಎಂ.ಎಸ್‌ಸಿ., ಐ.ಎ.ಎಸ್., ಮತ್ತು ಸನ್ಮಾನ್ಯ ಮಿತ್ರರಾದ ಪ್ರೊ|| ಡಿ. ಜವರೇಗೌಡ, ಎಂ.ಎ. ಅವರುಗಳಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ಸಲ್ಲಿಸಬಯಸುತ್ತೇನೆ. ಇನ್ನೂ ಅಪ್ರಕಟಿತವಾಗಿರುವ ಅಮೂಲ್ಯವಾದ ರಾಮಘಡದ ಶಿಲಾಶಾಸನದ ಪ್ರತಿಯನ್ನು ನೀಡಿ, ಅದನ್ನು ಪ್ರಕಟಿಸಲು ಅನುಮತಿಯಿತ್ತ ಭಾರತ ಸರ್ಕಾರದ ಶಾಸನದ ಇಲಾಖೆಯ ಮೈಸೂರು ಕಚೇರಿಯ ಮುಖ್ಯಾಧಿಕಾರಿಗಳಾದ ಡಾ|| ಜಿ. ಎಸ್. ಗಾಯ್, ಎಂ.ಎ., ಪಿಎಚ್.ಡಿ., ಅವರಿಗೆ ನಾನು ಋಣಿಯಾಗಿದ್ದೇನೆ.

"ಸುದರ್ಶನ"
ಜಯನಗರ, ಮೈಸೂರು - ೪
೪—೯—೧೯೬೬

**ಜಿ. ವರದರಾಜರಾವ್**

# ಒಳಪಿಡಿ


| | | ಪುಟ |
|---|---|---|
| ೧. | ಪೀಠಿಕೆ | ೧–೫ |
| | ಸಾಂಗತ್ಯ ಗ್ರಂಥಗಳ ಸಮಾಲೋಕನ | ೧ |
| ೨. | ಕುಮಾರರಾಮನ ಸಾಂಗತ್ಯಗಳು | ೬–೨೮ |
| | ಕೃತಿಗಳ ಸಂಖ್ಯೆ | ೬ |
| | ಕೃತಿಗಳ ಹೆಸರು | ೯ |
| | ಕವಿಗಳ ಕಾಲ ವಿಚಾರ | ೧೪ |
| ೩. | ನಂಜುಂಡನ ಕುಮಾರರಾಮ ಚರಿತ | ೩೧–೮೪ |
| | ಹಸ್ತಪ್ರತಿಗಳು | ೩೧ |
| | ಪ್ರತಿಗಳ ಪರಿಶೀಲನೆ | ೩೨ |
| | ಕಥಾಸಂಗ್ರಹ | ೩೩ |
| | ಕೃತಿಯ ವೈಶಿಷ್ಟ್ಯಗಳು | ೮೦ |
| ೪. | ಪಾಂಚಾಳ ಗಂಗನ ಚೆನ್ನರಾಮನ ಸಾಂಗತ್ಯ | ೮೭–೧೧೫ |
| | ಹಸ್ತಪ್ರತಿಗಳು | ೮೭ |
| | ಪ್ರತಿಗಳ ಪರಿಶೀಲನೆ | ೮೯ |
| | ವರ್ಗೀಕರಣ | ೧೦೧ |
| | ಕಥಾಸಂಗ್ರಹ | ೧೦೫ |
| | ಕೃತಿಯ ವೈಶಿಷ್ಟ್ಯಗಳು | ೧೧೫ |
| ೫. | ಮಹಲಿಂಗಸ್ವಾಮಿಯ ಬಾಲರಾಮನ ಸಾಂಗತ್ಯ | ೧೧೯–೧೮೧ |
| | ಹಸ್ತಪ್ರತಿ | ೧೧೯ |
| | ಕಥಾಸಂಗ್ರಹ | ೧೨೦ |
| | ಉಪಕಥೆಗಳ ಸಂಗ್ರಹ | ೧೬೬ |
| | ಕೃತಿಯ ವೈಶಿಷ್ಟ್ಯಗಳು | ೧೭೮ |
| ೬. | ಮೂರು ಕೃತಿಗಳ ತುಲನೆ | ೧೮೨–೨೦೬ |
| | ಮೂರು ಕೃತಿಗಳಲ್ಲಿನ ಸಮಾನಾಂಶಗಳು | ೧೮೨ |
| | ನಂಜುಂಡ ಮತ್ತು ಪಾಂಚಾಳ ಗಂಗ | ೧೮೩ |
| | ನಂಜುಂಡ ಮತ್ತು ಮಹಲಿಂಗಸ್ವಾಮಿ | ೧೮೬ |
| | ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿ | ೧೮೭ |
| | ನಂಜುಂಡನಲ್ಲಿ ಕಂಡುಬರುವ ವಿಶೇಷಾಂಶಗಳು | ೧೯೬ |
| | ಪಾಂಚಾಳ ಗಂಗನಲ್ಲಿ ಕಂಡುಬರುವ ವಿಶೇಷಾಂಶಗಳು | ೧೯೭ |

| | | ಪುಟ |
|---|---|---|
| | ಮಹಲಿಂಗಸ್ವಾಮಿಯಲ್ಲಿ ಕಂಡುಬರುವ ವಿಶೇಷಾಂಶಗಳು | ೧೯೮ |
| | ಘಟನೆಗಳ ಪರಸ್ಪರಾವಲೋಕನ | ೧೯೯ |
| | ಸಾದೃಶ್ಯಗಳ ಸಮೀಕ್ಷೆ | ೨೦೪ |
| ೭. | **ಇತರ ರಚನೆಗಳು** | **೨೦೭–೨೫೧** |
| | ಜನಜನಿತವಾದ ಕಥೆಗಳು | ೨೦೭ |
| | ಕಥೆಗಳ ಸಾರ | ೨೨೭ |
| | ಪರಸ್ಪರ ಸಾಮ್ಯವೈಷಮ್ಯಗಳು | ೨೩೩ |
| | ಯಕ್ಷಗಾನಗಳು | ೨೩೪ |
| | ಯಕ್ಷಗಾನಗಳ ಮುಖ್ಯಾಂಶಗಳು | ೨೪೦ |
| | ತೆಲುಗಿನ "ಕುಮಾರರಾಮುನಿ ಕಥೆ"ಯ ಸಾರಾಂಶ | ೨೪೧ |
| | "ಕುಮಾರರಾಮುನಿ ಕಥೆ"ಯ ಮುಖ್ಯಾಂಶಗಳು | ೨೪೫ |
| | ತೆಲುಗು ಕಥೆಯ ವೈಶಿಷ್ಟ್ಯ | ೨೪೬ |
| | ಇತ್ತೀಚಿನ ಕೆಲವು ಕೃತಿಗಳು | ೨೪೭ |
| | ಕಥೆಗಳಿಗೂ ಕಾವ್ಯಗಳಿಗೂ ಇರುವ ಹೋಲಿಕೆಗಳು | ೨೪೮ |
| | ಈ ರಚನೆಗಳಲ್ಲಿ ಕಾಣದಿರುವ ಪ್ರಮುಖಾಂಶಗಳು | ೨೫೧ |
| ೮. | **ಜನಪದ ಸಾಹಿತ್ಯ** | **೨೫೨–೨೬೨** |
| ೯. | **ಕೈಫಿಯತ್ತುಗಳು** | **೨೬೩–೨೬೮** |
| ೧೦. | **ಚರಿತ್ರಾಂಶಗಳು** | **೨೬೯–೨೯೯** |
| | ಮುಖ್ಯ ಸ್ಥಳಗಳು | ೨೭೦ |
| | ಘಟನೆಗಳು | ೨೭೪ |
| | ವ್ಯಕ್ತಿಗಳು | ೨೮೪ |
| | ಇತಿಹಾಸ ಮತ್ತು ಐತಿಹ್ಯ | ೨೯೩ |
| ೧೧. | **ಮೂಲಕಥೆಯ ಸ್ವರೂಪ** | **೩೦೦–೩೦೭** |
| ೧೨. | **ಸಾಹಿತ್ಯ ವಿಮರ್ಶೆ** | **೩೦೮–೩೫೮** |
| | ವಸ್ತುವಿನ್ಯಾಸ | ೩೦೮ |
| | ವರ್ಣನೆಗಳು | ೩೧೩ |
| | ಪಾತ್ರ ಪರಿಶೀಲನೆ | ೩೨೮ |
| | ಶೈಲಿ | ೩೪೦ |
| | ಸಾಂಗತ್ಯ ಪ್ರಯೋಗ | ೩೫೦ |
| ೧೩. | **ಜೀವನ ಚಿತ್ರಣ** | **೩೫೯–೩೬೩** |
| ೧೪. | **ಕುಮಾರರಾಮನ ಸಾಂಗತ್ಯಗಳ ಸ್ಥಾನ** | **೩೬೪–೩೬೮** |

ಪುಟ

೧೫. ಅನುಬಂಧಗಳು ೩೭೧–೪೦೩

ಅನುಬಂಧ ೧—ಗಂಗನ ಪ್ರತಿಗಳ ಪರಸ್ಪರ ಸಂಬಂಧ ಸೂಚಿಕೆ
ಅನುಬಂಧ ೨—ಗಂಗನ ಪ್ರತಿಗಳ ವಿಷಯಾನುಕ್ರಮಣಿಕೆ
ಅನುಬಂಧ ೩—ಮೂರು ಕೃತಿಗಳ ಮುಖ್ಯ ಘಟನೆಗಳ ಕ್ರಮ
ಅನುಬಂಧ ೪—ಸಂಗೂರಿನ ಶಾಸನ
ಅನುಬಂಧ ೫—ತೀರ್ಥಹಳ್ಳಿಯ ಶಾಸನ
ಅನುಬಂಧ ೬—ರಾಮಘಡದ ಶಾಸನ ೧
ಅನುಬಂಧ ೭—ರಾಮಘಡದ ಶಾಸನ ೨
ಅನುಬಂಧ ೮—ಹಂಪೆಯ ಶಾಸನ
ಅನುಬಂಧ ೯—ಆಧಾರ ಸಾಹಿತ್ಯ
ಅನುಬಂಧ ೧೦—ಕೃತಿಗಳ ಸೂಚಿಕೆ
ಅನುಬಂಧ ೧೧—ಕೃತಿಕರ್ತರ ಸೂಚಿಕೆ
ಅನುಬಂಧ ೧೨—ಉಪಶಿರೋನಾಮೆಗಳ ಸೂಚಿಕೆ

# ಕೆಲವು ಸಂಕೇತಗಳ ವಿವರಣೆ

| | | |
|---|---|---|
| ಕಚ | .... | ಕರ್ಣಾಟಕ ಕವಿಚರಿತೆ |
| ಕಸಾಚ | .... | ಕನ್ನಡ ಸಾಹಿತ್ಯ ಚರಿತ್ರೆ |
| ಕಸಾಪಪ | .... | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ |
| ಕೆಕಜೀ | .... | ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ |
| ಜಕ | .... | ಜಯಕರ್ನಾಟಕ |
| ಜೋ. ಪ್ರ. | .... | ಜೋಯಿಸರ ಪ್ರತಿ |
| ಧಾ. ಪ್ರ. | .... | ಧಾರವಾಡದ ಪ್ರತಿ |
| ಪ್ರ. ಕ. | .... | ಪ್ರಬುದ್ಧ ಕರ್ಣಾಟಕ |
| ಮ. ಪ್ರ. | .... | ಮದರಾಸಿನ ಪ್ರತಿ |
| ಮೈ. ಪ್ರ. | .... | ಮೈಸೂರಿನ ಪ್ರತಿ |
| ABORI | .... | Annals of the Bhandarkar Oriental Research Institute |
| ARSE | .... | Annual Report on South Indian Epigraphy |
| BK | .... | Bombay Karnatak Inscriptions |
| DCKM | .... | A Descriptive Catalogue of Kannada Inscriptions |
| EC | .... | Epigraphia Carnatica |
| EI | .... | Epigraphia Indica |
| EMESI | .... | The Early Muslim Expansion in South India |
| FSVH | .... | Further Sources of Vijayanagar History |
| MAR | .... | Mysore Archeological Report |
| Mys. Gaz. | .... | Mysore Gezetteer |
| M | .... | Mackenzie's Collection |
| QJMS | .... | The Quarterly Journal of the Mythic Society |
| SII | .... | South Indian Inscriptions |
| SPLVE | .... | Social and Political Life in Vijayanagara Empire |
| VSCV | .... | Vijayanagara Sex-centenary Commemoration Volume |

ವಿ.ಸೂ.: ಪದ್ಯಗಳನ್ನು ನಿರ್ದೇಶಿಸುವಲ್ಲಿ ಮೊದಲನೆಯ ಸಂಖ್ಯೆ ಸಂಧಿಗೂ, ಎರಡನೆಯ ಸಂಖ್ಯೆ ಪದ್ಯಕ್ಕೂ ಅನ್ವಯಿಸುತ್ತದೆ. ಆಶ್ವಾಸವನ್ನು ಪ್ರತ್ಯೇಕವಾಗಿ ಸೂಚಿಸಲಾಗಿದೆ.

## ಸಮರ್ಪಣೆ

ನನ್ನ ಹಿತೈಷಿಗಳೂ
ಹಿರಿಯ ಸಂಶೋಧಕರೂ ಆಗಿದ್ದ
**ದಿ|| ಹುಲ್ಲೂರು ಶ್ರೀನಿವಾಸ ಜೋಯಿಸರು**
ಅವರಿಗೆ

# ೧. ಪೀಠಿಕೆ

## ಸಾಂಗತ್ಯ ಗ್ರಂಥಗಳ ಸಮಾಲೋಕನ

ಕನ್ನಡ ಸಾಹಿತ್ಯವು ಒಂದು ಸಾವಿರ ವರ್ಷಗಳಷ್ಟು ದೀರ್ಘಾವಧಿಯಲ್ಲಿ ಹೇಗೆ ಬೆಳೆದು ಬಂದಿದೆಯೆಂಬುದನ್ನು ವಿಚಾರ ಮಾಡಲು ಯಾರಿಗಾದರೂ ಹೆಮ್ಮೆಯಾಗದೆ ಇರದು. ಈ ವ್ಯಾಸಂಗವನ್ನು ಕೈಕೊಳ್ಳುವವರು ಈ ಅಪಾರವಾದ ಸಾಹಿತ್ಯ ಸಾಮಗ್ರಿಯನ್ನು ಬಗೆಬಗೆಯಾಗಿ ವಿಂಗಡಿಸಿಕೊಂಡಿರುವುದುಂಟು. ಸಾಧಾರಣವಾಗಿ ಬೇರೆಬೇರೆ ಧರ್ಮಗಳ ಆಧಾರದ ಮೇಲೂ, ಕೆಲವರು ಆಯಾ ಯುಗದ ಮುಖ್ಯ ಪ್ರೇರಕ ಶಕ್ತಿಗೆ ಅನುಗುಣವಾಗಿಯೂ, ಉಳಿದವರು ಪ್ರಮುಖ ಕವಿಗಳ ಹೆಸರಿನಲ್ಲಿಯೂ ವಿಭಾಗಿಸಲು ಪ್ರಯತ್ನಿಸಿರುತ್ತಾರೆ. ಶತಮಾನಗಳಿಗೆ ಅನುಸಾರವಾಗಿ ವಿಂಗಡಿಸಿ ಹೇಳುವುದಂತೂ ತುಂಬ ಸುಲಭವೂ ಸೂಕ್ತವೂ ಆದ ಮಾರ್ಗ. ಈ ವಿಭಜನೆಗಳ ಬಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳಿರಲಿ[1] ಕನ್ನಡ ಸಾಹಿತ್ಯವನ್ನು ಕಾಲಕಾಲಕ್ಕೆ ಆದ ಛಂದೋವಿಧಾನದ ಆಧಾರದ ಮೇಲೆ ವಿಭಾಗಿಸಿದರೆ ಸಾಹಿತ್ಯದ ಸ್ವರೂಪ ಮತ್ತು ವೈಶಿಷ್ಟ್ಯಗಳು ತಕ್ಕಮಟ್ಟಿಗೆ ತಾವಾಗಿಯೇ ವ್ಯಕ್ತವಾಗುತ್ತವೆ. ಈ ದೃಷ್ಟಿಯಿಂದ ನೋಡಿದಾಗ ಕನ್ನಡದಲ್ಲಿ ಚಂಪೂ, ವಚನ, ರಗಳೆ, ಷಟ್ಪದಿ ಕೀರ್ತನೆ ಮತ್ತು ಸಾಂಗತ್ಯದ ಮಾರ್ಗಗಳು ಗೋಚರವಾಗುತ್ತವೆ. ತ್ರಿಪದಿಯೇ ಅತ್ಯಂತ ಪ್ರಾಚೀನವಾದ ದೇಶೀಯ ಛಂದಸ್ಸಾದರೂ ಇತರ ಪ್ರಕಾರಗಳೊಂದಿಗೆ ಹೋಲಿಸಿ ನೋಡಿದರೆ, ಅದರಲ್ಲಿ ರಚಿತವಾಗಿರುವ ದೀರ್ಘಕೃತಿಗಳು ತುಂಬ ವಿರಳವೆಂದೇ ಹೇಳಬಹುದು.[2] ಪ್ರಕೃತದಲ್ಲಿ ಸಾಂಗತ್ಯದ ಕೃತಿಗಳನ್ನು ಗಮನದಲ್ಲಿಟ್ಟುಕೊಂಡು, ಅವುಗಳ ಬೆಳವಣಿಗೆ ಮತ್ತು ವಿಷಯ ವೈವಿಧ್ಯವನ್ನು ಸಂಕ್ಷಿಪ್ತವಾಗಿ ಅವಲೋಕಿಸಲಾಗುವುದು.

ಕನ್ನಡವಲ್ಲಿ ಸಾಂಗತ್ಯ ಗ್ರಂಥಗಳ ರಚನೆ ಎಂದು ಆರಂಭವಾಯಿತೆನ್ನುವ ವಿಷಯದಲ್ಲಿ ಒಮ್ಮತವಿಲ್ಲ. ದಿ|| ರಾ. ನರಸಿಂಹಾಚಾರ್ಯರು ತಮ್ಮ "ಕರ್ಣಾಟಕ ಕವಿಚರಿತೆ"ಯಲ್ಲಿ ಶಿಶುಮಾಯಣನನ್ನು ಪರಿಚಯ ಮಾಡಿಕೊಡುತ್ತ "ನಮಗೆ ದೊರೆತಿರುವ ಸಾಂಗತ್ಯ ಕವಿಗಳಲ್ಲಿ ಈತನೇ ಮೊದಲನೆಯವನು" ಎಂದು ಹೇಳಿರುತ್ತಾರೆ.[3] ಅವರ ಹೇಳಿಕೆಯ ಮೇರೆಗೆ ಕ್ರಿ.ಶ. ೧೩ನೆಯ ಶತಮಾನವೇ ಸಾಂಗತ್ಯದ ಆರಂಭಯುಗವಾಗುತ್ತದೆ. ಆದರೆ, ಶ್ರೀಯುತರ ಅಭಿಪ್ರಾಯವನ್ನು ಡಾ|| ಎ. ವೆಂಕಟಸುಬ್ಬಯ್ಯ, ಶ್ರೀ. ಮಂ. ಗೋವಿಂದ ಪೈ ಮತ್ತು ಡಾ|| ರಂ. ಶ್ರೀ. ಮುಗಳಿ ಅವರುಗಳು ಖಂಡಿಸಿ ಹೊಸ ಹೊಸ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. "ತ್ರಿಪುರದಹನ ಸಾಂಗತ್ಯ"ದಲ್ಲಿ ಕವಿ ತನ್ನ ಕೃತಿ "ಶಕವರ್ಷದ ಸಾವಿರದ ನೂಱಱೊಳುತ್ಸಕಲ ವಾದಾಱುವತ್ಸರದ ಪ್ರಕಟಿತ ಪುತ್ರಪರುಷ ಮಾಘ ಶುದ್ಧದಿಯಕಲಂಕ ಪಾಡ್ಯದೊಳಾಯ್ತು (ಪ. ೨೮೨)" ಎಂದು ಹೇಳಿಕೊಂಡಿರುತ್ತಾನೆ. ಈ ಪದ್ಯದಲ್ಲಿ ಬರುವ "ಉತ್ಸಕಲ" ಎಂಬ ಶಬ್ದಕ್ಕೆ ನಿರ್ದಿಷ್ಟವಾದ ಅರ್ಥವನ್ನು ಹೇಳಲಾಗದೆ ಇರುವುದೇ ಈತನ ಕಾಲ ನಿಷ್ಕರ್ಷೆಗೆ ತೊಡಕಾಗಿದೆ. ರಾ. ನರಸಿಂಹಚಾರ್ಯರು ಇದಕ್ಕೆ "ಶಕ ೧೧೦೦ ವರ್ಷಗಳಾದ ಮೇಲೆ ಪ್ರಭವಾದಿ ವತ್ಸರಗಳಲ್ಲಿ ಮಿಕ್ಕ ಕೊನೆಯ ೬ ವರ್ಷಗಳಲ್ಲಿಯ ನಂದನ ಎಂದು ಅರ್ಥ ಮಾಡಿದರೆ ಶಕ ೧೧೫೪ (೧೨೩೨) ಆಗುತ್ತದೆ" ಎಂದು ಅರ್ಥವನ್ನು ಕಲ್ಪಿಸಿ, ಕವಿಯ ಕಾಲವನ್ನು

---

1. ಕಸಾಚ. ಪು. ೩೫–೪೪.
2. "ಅನುಭವಮುಕುರ", "ಗುರುಬೋಧಾಮೃತ" "ಸೌಂದರ್ಯಕಥಾರತ್ನ" ಮತ್ತು "ಶಿಬಿರಾಯನ ಕಥೆ" ಎಂಬ ತ್ರಿಪದಿ ಗ್ರಂಥಗಳು ಸ್ವಲ್ಪ ದೀರ್ಘವಾಗಿರುವುದು ಕಂಡುಬರುತ್ತದೆ. ಕಚ. ಸಂ. ii, ಪು. ೯೨, ೧೪೭ ಮತ್ತು ೨೬೮; ಕಚ. ಸಂ. iii, ಪು. ೨೫೪.
3. ಕಚ. ಸಂ. i, ಪು. ೩೫೧.

ನಿರ್ಣಯಿಸಿರುತ್ತಾರೆ.[1] ಇದಲ್ಲದೆ, "ಅಂಜನಾಚರಿತ್ರೆ"ಯಲ್ಲಿ ಬರುವ ಜೈನ ಯತಿಪರಂಪರೆಯನ್ನೂ ಲಕ್ಷಿಸಿ ತಮ್ಮ ಅಭಿಪ್ರಾಯವನ್ನು ಮುಂದೆ ಇಟ್ಟಿರುತ್ತಾರೆ. ಕವಿಚರಿತೆಕಾರರ ಈ ಅಭಿಪ್ರಾಯವನ್ನು ಡಾ|| ಎ. ವೆಂಕಟಸುಬ್ಬಯ್ಯನವರು ಮುಖ್ಯವಾಗಿ ಎರಡು ಕಾರಣಗಳಿಂದ ಒಪ್ಪಿರುವುದಿಲ್ಲ. "ಪುತ್ರವರ್ಷ" ಮತ್ತು "ಉತ್ಸಕಲ" ಎಂಬ ಪದಗಳಿಗೆ ಅರ್ಥ ನಿಷ್ಕರ್ಷೆಯಾಗಿಲ್ಲದಿರುವುದರಿಂದ ಆ ಪದ್ಯವನ್ನು ಇವರು ಆಧಾರವಾಗಿ ಸ್ವೀಕರಿಸಲು ಸಿದ್ಧರಾಗಿಲ್ಲ. ಎರಡನೆಯದಾಗಿ, ಶಿಶುಮಾಯಣನ ತರುವಾಯ ಪುನಃ ಸಾಂಗತ್ಯ ಕೃತಿಯನ್ನು ನಾವು ಕಾಣುವುದು ಕ್ರಿ. ಶ. ೧೫ನೆಯ ಶತಮಾನದಲ್ಲಿ. ಸುಮಾರು ಎರಡು ಶತಮಾನಗಳಷ್ಟು ದೀರ್ಘಾವಧಿಯಲ್ಲಿ ಬೇರೆ ಯಾವ ಕೃತಿಯೂ ಕಾಣದಿರುವುದರಿಂದ ಶಿಶುಮಾಯಣನು ಕವಿಚರಿತೆಕಾರರು ಭಾವಿಸಿರುವಷ್ಟು ಪ್ರಾಚೀನನಿರಲಾರನೆಂದು ಇವರ ವಾದ. ಅನಂತರ, ಶಿಶುಮಾಯಣನು ಹೇಳಿರುವ ಜೈನ ಯತಿಪರಂಪರೆಯ ಆಧಾರದ ಮೇಲೆ ಆತನ ಕಾಲವನ್ನು ಕ್ರಿ. ಶ. ಸು. ೧೬೬೦ ಇರಬಹುದೆಂದು ಹೇಳಿರುತ್ತಾರೆ.[2] ಡಾ|| ಎ. ವೆಂಕಟಸುಬ್ಬಯ್ಯನವರ ಆಕ್ಷೇಪಣೆಗಳಿಗೆ ರಾ. ನರಸಿಂಹಾಚಾರ್ಯರವರೇ ಉತ್ತರವಿತ್ತಿದ್ದಾರೆ.[3] ಬೇರಾವ ಕೃತಿಗಳೂ ಸಿಕ್ಕದಿರುವುದು ಪ್ರಮಾಣವಾಗಲಾರದೆಂದೂ, ಜೈನ ಯತಿಯ ಸ್ತುತಿಯ ಬಗ್ಗೆ ತಮ್ಮ ಹೇಳಿಕೆಯೇ ಸೂಕ್ತವಾಗಿದೆಯೆಂದೂ ತಿಳಿಸಿರುತ್ತಾರೆ. ಶ್ರೀ ಮಂ. ಗೋವಿಂದ ಪೈ ಅವರು ಮೂಡಬಿದಿರೆಯ ಮಠದಲ್ಲಿರುವ "ತ್ರಿಪುರದಹನ ಸಾಂಗತ್ಯ"ದ ಪ್ರತಿಯಲ್ಲಿ, ಮೇಲೆ ಹೇಳಿದ ಕಾಲಸೂಚಿಯ ಪದ್ಯವು "ಶಕವರ್ಷದ ಸಾವಿರದ ನಾನೂಱಱಿೞ್ಕೊಳ್ವಿಕಲವಾದಾಱುವತ್ಸರದ" ಎಂಬುದಾಗಿ ಇರುವುದೆಂದೂ, ಅದರ ಆಧಾರದ ಮೇಲೆ ಕವಿಯ ಕಾಲವನ್ನು ಶಕ ೧೩೫೪, ಎಂದರೆ ಕ್ರಿ.ಶ. ೧೪೩೨ ಎಂದು ಹೇಳಬಹುದೆಂದೂ ಬರೆದಿರುತ್ತಾರೆ.[4] ಡಾ ರಂ. ಶ್ರೀ ಮುಗಳಿ ಅವರು ಶ್ರೀ ಮಂ. ಗೋವಿಂದ ಪೈ ಅವರ ಅಭಿಪ್ರಾಯವನ್ನು ಒಪ್ಪಿ, ಶಿಶುಮಾಯಣನಲ್ಲಿ ಕಂಡುಬರುವ ಹೊಸಗನ್ನಡದ ಪ್ರಯೋಗಗಳಿಂದಲೂ, "ಅಂಜನಾಚರಿತ್ರೆ" ಯಲ್ಲಿ ಕವಿ "ಉತ್ತರದೇಶದೊಳಗೆ ಸುರತ್ರಾಣನ ಪತ್ತಣವನು (ವಾದ?) ಬಿದಿರೆಯೊಳು ಕರ್ತಾರನಲ್ಲದುಳಿದ ದೈವವಿಲ್ಲೆಂದು ಮತ್ತರಾಗಿರುತಿಹರಲ್ಲಿ" ಎಂದು ಬಿದಿರೆಯ ಸುಲ್ತಾನನ ಹೆಸರನ್ನು ಹೇಳುವುದರಿಂದಲೂ ಅವನು ೧೫ನೆಯ ಶತಮಾನದ ಕೊನೆಗೆ ಬಹಮ್ಮನೀ ರಾಜ್ಯಗಳ ಸ್ಥಾಪನೆಯಾದ ಮೇಲೆ ಇದ್ದಿರಬೇಕೆಂದು ಹೇಳುತ್ತಾರೆ.[5] ಈ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದರೆ "ತ್ರಿಪುರದಹನ ಸಾಂಗತ್ಯ" ದ ಸಂದಿಗ್ಧ ಪದ್ಯಕ್ಕಿಂತಲೂ "ಅಂಜನಾಚರಿತ್ರೆ" ಯಲ್ಲಿ ಬರುವ ಬಿದಿರೆಯ ಸುಲ್ತಾನನ ಉಲ್ಲೇಖವು ಹೆಚ್ಚು ಸಹಾಯಕವಾಗಿ ತೋರುತ್ತದೆ. ಈ ಆಧಾರದ ಮೇಲೆ ಶಿಶುಮಾಯಣನನ್ನು ೧೫ ನೆಯ ಶತಮಾನಕ್ಕೆ ಸೇರಿದವನೆಂದು ಒಪ್ಪಿಕೊಳ್ಳಬಹುದು.[6] ಆದ್ದರಿಂದ,

---

1. ಕಚ. ಸಂ. i, ಪು. ೩೫೦.
2. ಕೆಕಜೀ. ಪು. ೨೨೮–೨೩೧.
3. ಕಚ. ಸಂ. iii, ಪು. lxxiii.
4. ಸ್ವದೇಶಾಭಿಮಾನಿ, ರಜತೋತ್ಸವ ಸಂಚಿಕೆ, ಪು. ೭೫; ಶ್ರೀ ಎಸ್. ಬಸವಾರಾಧ್ಯ ಅವರ ಉದ್ಧೃತ ಭಾಗದಿಂದ, ತ್ರಿಪುರದಹನ ಸಾಂಗತ್ಯ, ಪೀಠಿಕೆ, ಪು. vii.
5. ಕಸಾಚ. ಪು. ೨೩೮.
6. ಶಿಶುಮಾಯಣನು, ವಾದಿವಿದ್ಯಾನಂದಯೋಗಿಯೆಂಬುವನು ಬಿದಿರೆಯಲ್ಲಿ ಜಿನಭವನವನ್ನು ನಿರ್ಮಿಸಿದನೆಂದು "ಅಂಜನಾಚರಿತ್ರೆ" ಯಲ್ಲಿ ಹೇಳಿರುತ್ತಾನೆ. (ಗೊಂದಿಯೊಳಿಹ ಜಿನಬಿಂಬಕೆ ಮಂದರದಂದದ ಜಿನಭವನವನು ಚಂದ್ರತರದೆ ಸವೆಸಿದ ವಾದಿವಿದ್ಯಾನಂದಯೋಗಿಗೆ ನಮಿಸುವೆನು, i, ೪೯."—ಶ್ರೀ ಡಿ. ಎಲ್. ನರಸಿಂಹಾಚಾರ್ಯರ ಬಿದಿರೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಿಂದ, ಪು. ೪.) ಕೃಷ್ಣದೇವರಾಯನ ಸಮಕಾಲೀನನಾದ ವಾದಿವಿದ್ಯಾನಂದನೆಂಬ ಜೈನಯತಿ ಬಿದಿರೆಯಲ್ಲಿ ಪರಮತವಾದಿಗಳನ್ನು ಜಯಿಸಿ ಧರ್ಮಕಾರ್ಯ ಮಾಡಿದನೆಂದು ಶಿವಮೊಗ್ಗ ಜಿಲ್ಲೆಯ ನಗರ ಶಾಸನದಿಂದ ವ್ಯಕ್ತವಾಗುತ್ತದೆ (EC viii, Part ii, No. 46). ಆದ್ದರಿಂದ ಈ ಮೊದಲೇ ಡಾ|| ಎ. ವೆಂಕಟಸುಬ್ಬಯ್ಯನವರು ಗಮನಿಸಿರುವಂತೆ, ಕವಿ ಹೇಳಿರುವ ವಾದಿವಿದ್ಯಾನಂದಯೋಗಿ ಈತನೇ ಆಗಿದ್ದಲ್ಲಿ, ಶಿಶುಮಾಯಣನು ಕ್ರಿ.ಶ. ೧೬ನೆಯ ಶತಮಾನಕ್ಕೂ ಈಚಿನವನಾಗುವ ಸಂಭವವೂ ಇದೆ.

ಶಿಶುಮಾಯಣನ ಕಾಲವನ್ನು ಬಿದಿರೆಯ ಸುಲ್ತಾನರಿಂದೀಚೆಗೆ (ಕ್ರಿ. ಶ. ೧೪೯೩) ಎಂದು ಇಟ್ಟುಕೊಂಡರೆ, ಕ್ರಿ.ಶ. ಸು. ೧೪೧೦ ಕ್ಕೆ ಸೇರಿದ ದೇಪರಾಜನೇ ಸಾಂಗತ್ಯದ ಕವಿಗಳಲ್ಲಿ ಮೊದಲನೆಯವನಾಗುತ್ತಾನೆ. ೧೫ನೆಯ ಶತಮಾನದಿಂದ ಸಾಂಗತ್ಯದ ಕೃತಿಗಳು ಏಕಪ್ರಕಾರವಾಗಿ ಬೆಳೆದಿರುವುದೂ ಕಂಡುಬರುತ್ತದೆ.

ಸಾಂಗತ್ಯಗ್ರಂಥಗಳ ಸಂಖ್ಯಾಬಲದಿಂದ ಅವುಗಳ ವ್ಯಾಪ್ತಿಯನ್ನು ಹೇಳುವುದಾದರೆ ೧೭ನೆಯ ಶತಮಾನವನ್ನು ಪರ್ವಯುಗವೆನ್ನಬೇಕು. ಕವಿಚರಿತೆಕಾರರು ಹೇಳಿರುವ ಕೃತಿಗಳನ್ನು ಆಧಾರವಾಗಿಟ್ಟುಕೊಂಡರೆ ೧೫ ನೆಯ ಶತಮಾನದಲ್ಲಿ ಎಂಟು ಗ್ರಂಥಗಳೂ, ೧೬ನೆಯ ಶತಮಾನದಲ್ಲಿ ಇಪ್ಪತ್ತೆಂಟು ಗ್ರಂಥಗಳೂ, ೧೭ ನೆಯ ಶತಮಾನದಲ್ಲಿ ಅರುವತ್ತು ಗ್ರಂಥಗಳೂ, ೧೮ ನೆಯ ಶತಮಾನದಲ್ಲಿ ಹದಿನೇಳು ಗ್ರಂಥಗಳೂ, ೧೯ ನೆಯ ಶತಮಾನದಲ್ಲಿ ಎಂಟು ಗ್ರಂಥಗಳೂ ರಚನೆಯಾಗಿರುವುದು ತಿಳಿದುಬರುತ್ತದೆ. (ಕವಿಚರಿತೆಕಾರರು ಕಾಲವನ್ನು ಸೂಚಿಸದೆ ಬಿಟ್ಟಿರುವ ಕೃತಿಗಳೂ, ಪ್ರಾಸಂಗಿಕವಾಗಿ ಸಾಂಗತ್ಯವನ್ನು ಬಳಸಿರುವ ಕೃತಿಗಳೂ




ಈ ಲೆಕ್ಕಕ್ಕೆ ಸೇರಿಲ್ಲ.) ಈ ಸಂಖ್ಯಾಸೂಚಿ ಸಾಂಗತ್ಯಗ್ರಂಥಗಳ ಪ್ರಾಶಸ್ತ್ಯವನ್ನು ತಾನಾಗಿಯೇ ವಿಶದಪಡಿಸುತ್ತದೆ. ಇದನ್ನೇ ಒಂದು ನಕ್ಷೆಯ ರೂಪದಲ್ಲಿಯೂ ಇಲ್ಲಿ ತೋರಿಸಲಾಗಿದೆ. ಗುಣದ ದೃಷ್ಟಿಯಿಂದ ೧೬ ನೆಯ ಶತಮಾನವೇ ಶ್ರೇಷ್ಠವಾದುದೆನ್ನಬೇಕು. ಸುಪ್ರಸಿದ್ಧ ಸಾಂಗತ್ಯಕೃತಿಗಳಾದ ಮಂಗರಸನ "ನೇಮಿಜಿನೇಶ

ಸಂಗತಿ ", ನಂಜುಂಡನ "ಕುಮಾರರಾಮ ಚರಿತ", ಕನಕದಾಸರ "ಮೋಹನತರಂಗಿಣಿ", ರತ್ನಾಕರವರ್ಣಿಯ " ಭರತೇಶವೈಭವ " ಮೊದಲಾದುವು ಈ ಶತಮಾನದಲ್ಲಿ ರಚಿತವಾದುವು. ಹದಿನೈದನೆಯ ಶತಮಾನದಲ್ಲಿ ಸಾಗಿದ ಕೃಷಿ ಒಂದುನೂರು ವರ್ಷಗಳ ವೇಳೆಗೆ ಉತ್ತಮವಾದ ಕೃತಿಗಳನ್ನು ನೀಡುವುದು ಸೂಕ್ತವಾಗಿದೆ. ಅಲ್ಲಿಂದ ಮುಂದೆ ಅನುಕರಣೆಗಳು ಮೊದಲಾದದ್ದು ಸ್ವಾಭಾವಿಕವೇ ಸರಿ.

ಇನ್ನು ವಿಷಯ ವೈವಿಧ್ಯವನ್ನು ಕುರಿತು ವಿಚಾರಿಸಬಹುದು. ಕನ್ನಡ ಸಾಹಿತ್ಯದ ಇತರ ಪ್ರಕಾರಗಳ ಗಳಲ್ಲಿ ಕಂಡುಬರುವಂತೆಯೇ ಇಲ್ಲಿಯೂ ಜೈನ, ವೀರಶೈವ ಮತ್ತು ಬ್ರಾಹ್ಮಣ ಕವಿಗಳು ತಮ್ಮ ತಮ್ಮ ಮತಗಳ ಪ್ರಚಾರಕ್ಕಾಗಿ ಬೇರೆ ಬೇರೆ ಕಾಲಗಳಲ್ಲಿ ಕೃತಿಗಳನ್ನು ರಚಿಸಿರುತ್ತಾರೆ. ಜೈನ ಕವಿಗಳಲ್ಲಿ ರತ್ನಾಕರವರ್ಣಿಗೇ ಅಗ್ರಸ್ಥಾನ. ಅಷ್ಟೇ ಏಕೆ! ಸಾಂಗತ್ಯದ ಕವಿಗಳಲ್ಲಿಯೇ ಆತನಿಗೆ ಪ್ರಥಮಸ್ಥಾನ ದೊರೆತಿದೆ. ಈ ಮೊದಲೇ ಪಂಪನು ಹೇಳಿದ ವಿಷಯವನ್ನು ಮಾರ್ಪಡಿಸಿ, ಭರತನ ಪಾತ್ರಕ್ಕೆ ಪ್ರಾಧಾನ್ಯವನ್ನು ಕೊಟ್ಟು ಬರೆದಿರುವ ಈ ಕೃತಿ–ಕವಿಯ ದೃಷ್ಟಿಯ ಬಗ್ಗೆ ಭಿನ್ನಾಭಿಪ್ರಾಯ ಬರಬಹುದಾದರೂ–ಕಥಾ ಸಂವಿಧಾನ, ಸನ್ನಿವೇಶ ರಚನೆ, ವರ್ಣನಾಕೌಶಲ ಮುಂತಾದ ಇತರ ಕಾರಣಗಳಿಂದ ಎಲ್ಲರಿಗೂ ಅಚ್ಚುಮೆಚ್ಚಾಗಿ ಪರಿಣಮಿಸಿದೆ. "ದ್ವಾದಶಾನುಪ್ರೇಕ್ಷೆ", "ಸಂಯಕ್ತ್ವ ಕೌಮುದಿ", "ಸುವಿಚಾರಚರಿತೆ", " ಮುನಿವಂಶಾಭ್ಯುದಯ ", " ಅಹಿಂಸಾಚರಿತೆ ", " ಪೂಜ್ಯಪಾದ ಚರಿತೆ "—ಇವೇ ಮೊದಲಾದುವು ಜೈನಮತ ಪ್ರಕ್ರಿಯೆಗಳ ಪರಿಚಯವನ್ನು ವಿಶೇಷವಾಗಿ ಮಾಡಿಕೊಡುತ್ತವೆ. "ನೇಮಿಜಿನೇಶ ಸಂಗತಿ", "ಶಾಂತಿನಾಥ ಚರಿತೆ", "ವರ್ಧಮಾನ ಚರಿತೆ" ಮತ್ತು "ಚಂದ್ರಪ್ರಭ ಚರಿತೆ"ಗಳು ತೀರ್ಥಂಕರರ ಜೀವನವನ್ನು ಕುರಿತುದಾಗಿವೆ. "ಕಾಮನ ಕಥೆ", "ಜೀವಂಧರ ಸಾಂಗತ್ಯ", "ನಾಗಕುಮಾರ ಕಥೆ", "ವಿಜಯಕುಮಾರಿಯ ಚರಿತೆ", "ವಜ್ರಕುಮಾರ ಚರಿತೆ","ಸನತ್ಕುಮಾರ ಚರಿತೆ","ಭುಜಬಲಿ ಚರಿತೆ", "ಕಾರ್ಕಳದ ಗೊಮ್ಮಟೇಶ್ವರ ಚರಿತೆ", "ಧನ್ಯಕುಮಾರ ಚರಿತೆ" ಮತ್ತು "ಬಿಜ್ಜಳರಾಯ ಚರಿತೆ"ಗಳು ಜೈನಧರ್ಮಪ್ರಚಾರದಲ್ಲಿ ಸುಪ್ರಸಿದ್ಧ ವಾದ ಕಥೆಗಳ ಪಾತ್ರವನ್ನೂ ಪ್ರಾಶಸ್ತ್ಯವನ್ನೂ ಪ್ರಕಟಪಡಿಸುತ್ತವೆ. ಮುಖ್ಯವಾಗಿ ಜಟಿಲವಾದ ಚಂಪೂ ಗ್ರಂಥಗಳಲ್ಲಿ ಅಡಕವಾಗಿದ್ದ ಅನೇಕ ವಿಷಯಗಳು ಮತ್ತೊಮ್ಮೆ ಸರಳವಾದ ಭಾಷೆಯಲ್ಲಿ ಜನಸಾಮಾನ್ಯರಿಗೆ ಈ ಮೂಲಕ ಲಭಿಸುವಂತಾಯಿತು.

ಸರಳತೆಗೆ ಮನವೊಲಿದಿದ್ದ ವೀರಶೈವ ಕವಿಗಳ ರಚನೆಗೆ ಸಾಂಗತ್ಯದ ಸರಣಿ ತುಂಬ ಅನುಕೂಲ ವಾಯಿತು. ಹರಿಹರನ ರಗಳೆಯ ನಿರರ್ಗಳತೆಯೂ, ವಚನಗಳ ತಿಳಿಗನ್ನಡದ ಪ್ರಯೋಗವೂ, ಷಟ್ಪದೀ ಕಾವ್ಯಗಳ ಸರಳತೆಯೂ ಸಾಂಗತ್ಯದ ಬೆಳವಣಿಗೆಗೆ ತುಂಬ ಸಹಾಯಕವಾದುವು. ವೀರಶೈವ ಸಾಂಗತ್ಯಗಳಲ್ಲಿ "ಪರಮಾನುಭವಬೋಧೆ", "ಅನುಭವಮುದ್ರೆ" ಮತ್ತು "ಪ್ರಸಾದ ಸಾಂಗತ್ಯ"ಗಳು ನೇರವಾಗಿ ಮತ ಪ್ರಕ್ರಿಯೆಗಳನ್ನು ಕುರಿತು ಬರೆದ ರಚನೆಗಳು. " ಶಿವಗಣಚಾರಿತ್ರ", "ರೇಣುಕಾಚಾರ್ಯ ಚರಿತ್ರೆ", "ಬಸವಶಿಖಾಮಣಿ", "ಅಲ್ಲಮಪ್ರಭುವಿನ ಸಾಂಗತ್ಯ"ಗಳು ವೀರಶೈವ ಧರ್ಮಪ್ರವರ್ತಕರ ಜೀವನಚರಿತ್ರೆ ಗಳನ್ನು ಒಳಗೊಂಡಿವೆ. "ಸಾನಂದಗಣೇಶ್ವರನ ಸಾಂಗತ್ಯ", "ಹರಿಶ್ಚಂದ್ರ ಸಾಂಗತ್ಯ", "ನನ್ನಯ್ಯಗಳ ಚಾರಿತ್ರ", "ಸಿರಿಯಾಳಸೆಟ್ಟಿಯ ಸಾಂಗತ್ಯ", "ದೀಪದಕಲಿಯಾರ ಕಾವ್ಯ", "ಮಡಿವಾಳಯ್ಯನ ಚರಿತೆ"— ಇವೇ ಮೊದಲಾದುವು ಶಿವಭಕ್ತರ ಮಾಹಾತ್ಮ್ಯೆಯನ್ನು ಸಾರಿ ಹೇಳುತ್ತವೆ. ವೀರಶೈವ ಕವಿಗಳ ಒಲವು ಎಂದಿನಂತೆಯೇ ಶಿವಶರಣರ ಜೀವನವನ್ನು ಚಿತ್ರಿಸುವುದರ ಕಡೆಗೆ ಹೆಚ್ಚಾಗಿ ಹರಿದಿರುವುದನ್ನು ಕಾಣಬಹುದು.

ವೈಷ್ಣವರೂ ಸಾಂಗತ್ಯದ ರಚನೆಗೆ ಮಾರುವೋಗಿದ್ದರು. ದಾಸಸಾಹಿತ್ಯದ ಪ್ರಮುಖರಲ್ಲಿ ಒಬ್ಬರಾದ ಕನಕದಾಸರ "ಮೋಹನತರಂಗಿಣಿ" ಇಂದಿಗೂ ಬಹಳ ಪ್ರಿಯವಾದ ಗ್ರಂಥ. ಚಿಕ್ಕುಪಾಧ್ಯಾಯನೊಬ್ಬನೇ ಹತ್ತು ಸಾಂಗತ್ಯಗಳನ್ನು ಬರೆದಿರುತ್ತಾನೆ. ವಾದಿರಾಜರ "ವೈಕುಂಠವರ್ಣನೆ" ಭಕ್ತಿಸಾಹಿತ್ಯದಲ್ಲಿ ಸುಪ್ರಸಿದ್ಧ ವಾದ ಹಾಡುಗಬ್ಬ. ಪ್ರಧಾನಿ ತಿರುಮಲಾರ್ಯನ "ಕರ್ಣವೃತ್ತಾಂತ ಕಥೆ" ಮೆಚ್ಚಬಹುದಾದದ್ದು." ರುಕ್ಮಾಂಗದ

ಚರಿತೆ", "ಪ್ರಹ್ಲಾದ ಚರಿತೆ", "ಕೃಷ್ಣಗೋಪೀವಿಲಾಸ" ಮತ್ತು "ಪದ್ಮಿನೀ ಪರಿಣಯ" ಎಂಬ ಕೃತಿಗಳು ಈ ಕವಿಗಳ ಹರಿಭಕ್ತಿ ನಿರೂಪಣೆಯನ್ನು ಪರಿಚಯ ಮಾಡಿಕೊಡಬಲ್ಲವು.

ಆಧ್ಯಾತ್ಮಿಕ ಮತ್ತು ಧರ್ಮಪ್ರವರ್ತಕರ ವಿಚಾರವಾಗಿ ಸಾಂಗತ್ಯಗಳು ರಚನೆಯಾದಂತೆಯೇ, ಇತಿಹಾಸ ಮಿಶ್ರಿತವಾದ ಕೆಲವು ಕೃತಿಗಳೂ ರಚಿತವಾದುವು. ನಂಜುಂಡನ "ಕುಮಾರರಾಮ ಚರಿತ", ಪಾಂಚಾಳ ಗಂಗನ "ಚೆನ್ನರಾಮನ ಸಾಂಗತ್ಯ", ಗೋವಿಂದವೈದ್ಯನ "ಕಂಠೀರವ ನರಸರಾಜ ವಿಜಯ", ಸಿದ್ಧಕವಿಯ "ಸಿರುಮನ ಚರಿತೆ", ಚಾಮಯ್ಯನ "ದೇವರಾಜೇಂದ್ರ ಸಾಂಗತ್ಯ", ನೂರೊಂದನ "ಸೌಂದರಕಾವ್ಯ", ಪದ್ಮನಾಭನ "ಜಿನದತ್ತರಾಯಚರಿತೆ"—ಇವೇ ಮೊದಲಾದುವು ಪ್ರಮುಖವಾದುವು. ಈ ಭರದಲ್ಲಿ ಸ್ಥಳ ಪುರಾಣಗಳೂ, ಐತಿಹ್ಯಗಳೂ ಆಗಿದ್ದ ಅನೇಕ ಸಂಗತಿಗಳು ಸಾಂಗತ್ಯಗಳಾದುವು. ವೀರಜೀವನವನ್ನು ಕುರಿತು ಹಾಡಿದಂತೆಯೇ ಸಾಂಗತ್ಯದ ಕವಿಗಳು ವಿಲಾಸ ವಿನೋದಗಳನ್ನೇ ಪ್ರಧಾನವಾಗಿ ಚಿತ್ರಿಸಿರುವುದುಂಟು. ಪದ್ಮರಸನ "ಶೃಂಗಾರಕಥೆ"ಯಲ್ಲಿ ಹೆಸರೇ ಹೇಳುವಂತೆ ಶೃಂಗಾರರಸವೇ ಪ್ರಧಾನ. ವೀರ ಜನಪತಿಯ "ವಿಕ್ರಮವಿಲಾಸ"ವು ಉಜ್ಜಯಿನಿಯ ವಿಕ್ರಮಾದಿತ್ಯನನ್ನು ಕುರಿತುದಾದರೆ, ನರಸಿಂಹಕವಿಯ "ಮದನ ಮೋಹಿನಿ ಕಥೆ" ಮನರಂಜನೆಯನ್ನು ಉಂಟುಮಾಡುವಂತಹುದು.

ಈ ಅಪಾರವಾದ ಕೃತಿ ಸಮುದಾಯದಲ್ಲಿ ಹೆಂಗಸರೂ ಪಾತ್ರವಹಿಸಿದ್ದಾರೆನ್ನುವುದು ಸಂತೋಷದ ಸಂಗತಿ. ಶೃಂಗಾರಮ್ಮ ಎಂಬಾಕೆ "ಪದ್ಮಿನೀ ಕಲ್ಯಾಣ"ವನ್ನು ಬರೆದಿರುತ್ತಾಳೆ. ಮಹಾರಾಣಿಯಾಗಿದ್ದ ಚೆಲುವಾಂಬೆಯ "ವರನಂದೀ ಕಲ್ಯಾಣ" ಎಂಬ ಕೃತಿ ಸುಲ್ತಾನನ ಮಗಳ ವಿಷ್ಣುಭಕ್ತಿಯನ್ನು ಪ್ರತಿಪಾದಿಸುವ ಮನೋಹರವಾದ ರಚನೆ. ಹೆಳವನಕಟ್ಟೆ ಗಿರಿಯಮ್ಮನ "ಚಂದ್ರಹಾಸ ಸಾಂಗತ್ಯ" ವಂತೂ ಕನ್ನಡಿಗರೆಲ್ಲರಿಗೂ ತಿಳಿದ ಕೃತಿ. ಈಕೆಯೇ "ಉದ್ದಾಳಿಕನ ಕಥೆ" ಯನ್ನೂ ಬರೆದಿರುತ್ತಾಳೆ.

ನಿತ್ಯಜೀವನವನ್ನು ದೃಷ್ಟಿಯಲ್ಲಿಟ್ಟುಕೊಂಡು ಪತಿವ್ರತೆಯ ಬದುಕನ್ನು ಚಿತ್ರಿಸಿರುವ ಹೊನ್ನಮ್ಮನ "ಹದಿಬದೆಯ ಧರ್ಮ"ಕ್ಕೆ ಸಾಂಗತ್ಯ ಕೃತಿಗಳಲ್ಲಿ ವಿಶಿಷ್ಟವಾದ ಸ್ಥಾನವುಂಟು. ಹೆಂಗಸೊಬ್ಬಳು ತನ್ನ ಸಹೋದರಿಯರ ಪರವಾಗಿ ನಿಂತು "ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ, ಪೆಣ್ಣಲ್ಲವೆ ಪೊರೆದವಳು ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆನರು ಕಣ್ಣುಕಾಣದ ಗಾವಿಲರು," ಎಂದು ಕೆಚ್ಚಿನಿಂದ ಕೇಳುವ ಈ ನುಡಿಗಳು ಕನ್ನಡ ಸಾಹಿತ್ಯಕ್ಕೇ ಅಪೂರ್ವವಾದದ್ದು. ಈ ಕೃತಿಯಲ್ಲಿ ತೋರಿಬರುವ ಹೊನ್ನಮ್ಮನ ಶಾಸ್ತ್ರಜ್ಞಾನವೂ, ಊಳಿಗದ ಹೆಂಗಸಿನ ಕೆಚ್ಚೂ, ಪ್ರತಿಭೆಯೂ ಕುತೂಹಲಕಾರಿಯಾಗಿವೆ.

ಸಾಳ್ವನ "ವೈದ್ಯಸಾಂಗತ್ಯ"ವೆಂಬ ಕೃತಿ ಒಂದು ಶಾಸ್ತ್ರ ಗ್ರಂಥ. ಇದರಲ್ಲಿ ವೈದ್ಯಕ್ಕೆ ಸಂಬಂಧಿಸಿದ ಕೆಲವು ವಿಷಯಗಳನ್ನು ಪ್ರಸ್ತಾವಿಸಲಾಗಿದೆ.

ಸಂಗ್ರಹವಾದ ಈ ಸಮಾಲೋಕನದ ಮೂಲಕ ಸಾಂಗತ್ಯ ಗ್ರಂಥಗಳಿಗೆ ಕನ್ನಡದಲ್ಲಿ ಎಂಥ ವಿಶಿಷ್ಟವಾದ ಸ್ಥಾನವಿದೆಯೆಂಬುದು ವ್ಯಕ್ತವಾಗುತ್ತದೆ. ಇತರ ರಚನೆಗಳಲ್ಲಿ ಕಂಡುಬರುವ ವಿಷಯವೇ ಇಲ್ಲಿ ಪ್ರತಿಪಾದಿತ ವಾಗಿದ್ದರೂ, ಸರಳ ನಿರೂಪಣೆಯ ಮೂಲಕ ಬಹು ಜನಕ್ಕೆ ಅವು ತಿಳಿಯುವಂತಾಯಿತು. ಇತಿಹಾಸವನ್ನು ಅಲ್ಪ ಸ್ವಲ್ಪವಾದರೂ ನೇರವಾಗಿ ಹೇಳಬೇಕೆಂಬ ಹಂಬಲವೂ ಧೈರ್ಯವೂ ಮೊದಲಾಯಿತು. ಈ ಅಂಶವನ್ನೇ "ಕುಮಾರರಾಮನ ಸಾಂಗತ್ಯ"ಗಳನ್ನು ಗಮನಿಸಿ ಮುಂದೆ ದೀರ್ಘವಾಗಿ ವಿಚಾರಮಾಡಲಾಗಿದೆ.

# ೨. ಕುಮಾರರಾಮನ ಸಾಂಗತ್ಯಗಳು

## ಕೃತಿಗಳ ಸಂಖ್ಯೆ

ಮಾನ್ಯ ಎಚ್. ಎಚ್. ವಿಲ್ಸ್ನ್ ಅವರು ಪ್ರಕಟಿಸಿರುವ ಕರ್ನಲ್ ಮೆರ್ಕೆಂಜಿಯ ಹಸ್ತಪ್ರತಿಗಳ ಪಟ್ಟಿಯಲ್ಲಿ ಕುಮಾರರಾಮನ ಸಾಂಗತ್ಯವನ್ನು ಕುರಿತು ಬರೆದಿರುವ ಟಿಪ್ಪಣಿಯೇ ಸದ್ಯದಲ್ಲಿ ಅತ್ಯಂತ ಪ್ರಾಚೀನವಾದ ಉಲ್ಲೇಖವಾಗಿದೆ. ಈ ಪುಸ್ತಕಗಳ ಪಟ್ಟಿಯನ್ನು ೧೮೨೮ ರಲ್ಲಿ ಮೊದಲನೆಯ ಬಾರಿಯೂ, ೧೮೮೨ ರಲ್ಲಿ ಎರಡನೆಯ ಬಾರಿಯೂ ಪ್ರಕಟಿಸಲಾಯಿತು. ಈ ಪುಸ್ತಕದಲ್ಲಿ " ಸ್ಥಳೀಯ ಚರಿತ್ರೆ ಮತ್ತು ಜೀವನ ಚರಿತ್ರೆ " (Local History and Biography) ಎಂಬ ವಿಭಾಗದಲ್ಲಿ ಕುಮಾರರಾಮನ ಕೃತಿಯ ಪ್ರಸ್ತಾಪವನ್ನು ಮಾಡಿರುತ್ತಾರೆ. ಸಂಪಾದಕರು ನಾಲ್ಕು ಓಲೆಯ ಪ್ರತಿಗಳನ್ನೂ ನಾಲ್ಕು ಕಾಗದದ ಪ್ರತಿಗಳನ್ನೂ ಪರಿಶೀಲಿಸಿರುತ್ತಾರೆ. ಈ ಗ್ರಂಥದ ಪರಿಚಯಮಾಡಿಕೊಡುತ್ತ "ವಿಜಯನಗರದ ಬಳಿಯಲ್ಲಿರುವ ಹೊಸದುರ್ಗದ ಕಂಪಿಲರಾಯನ ಮಗ ಕುಮಾರರಾಮನ ಚರಿತ್ರೆ—ಬರೆದವನು, ನಂಜುಂಡ ಕವಿ" ಎಂದು ಹೇಳಿರುತ್ತಾರೆ.[1] ಇಲ್ಲಿ ಕೊಟ್ಟಿರುವ ಕಥಾಸಂಗ್ರಹವನ್ನು ನೋಡಿದರೆ, ಗಂಗನ ಕಥನ ರೀತಿಯನ್ನು ಹೋಲುತ್ತದೆ. ಕವಿಯ ಹೆಸರಿನ ಪಲ್ಲಟ ಹೇಗಾಯಿತೋ ತಿಳಿಯದು. ಮುಖ್ಯವಾಗಿ ಕುಮಾರರಾಮನ ಸಾಂಗತ್ಯದ ಹೆಸರನ್ನು ಬಹಳ ಹಿಂದೆಯೇ ವಿದ್ವಾಂಸರ ಗಮನಕ್ಕೆ ತಂದ ಕೀರ್ತಿ ಈ ಸಂಪಾದಕರಿಗೆ ಸೇರಿದ್ದು ಎಂದು ಹೇಳಬಹುದು.

ಅನಂತರ, ಮೇಲಿನಂತೆಯೇ, ಮತ್ತೊಂದು ವಿಸ್ತಾರವಾದ ಹಸ್ತಪ್ರತಿಗಳ ಪಟ್ಟಿಯನ್ನು ತಯಾರಿಸಿದ ರೆವರೆಂಡ್ ವಿಲಿಯಂ ಟೈಲರ್ ಅವರ ಸಂಪುಟಗಳಲ್ಲಿ ನಂಜುಂಡ ಮತ್ತು ಗಂಗನ ಕೃತಿಗಳ ಪ್ರಸ್ತಾಪ ಕಂಡುಬರುತ್ತದೆ. ಈ ಮಹನೀಯರು ಮೆರ್ಕೆಂಜಿ, ಈಸ್ಟ್ ಇಂಡಿಯಾ ಕಂಪೆನಿ ಮತ್ತು ಬ್ರೌನ್ ಅವರ ಬಳಿಯಲ್ಲಿದ್ದ ಹಸ್ತಪ್ರತಿಗಳ ಪರಿಚಯವನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಿರುತ್ತಾರೆ. ಮೊದಲನೆಯ ಸಂಪುಟ ೧೮೫೭ ರಲ್ಲಿಯೂ, ಎರಡನೆಯ ಸಂಪುಟ ೧೮೬೦ ರಲ್ಲಿಯೂ, ಮೂರನೆಯ ಸಂಪುಟ ೧೮೬೨ ರಲ್ಲಿಯೂ ಪ್ರಕಟವಾದುವು. ಈ ಸಂಕಲನದಲ್ಲಿ ಒಟ್ಟು ಇಪ್ಪತ್ತೆರಡು ಪ್ರತಿಗಳ ಪರಿಚಯವನ್ನು ಮಾಡಿಕೊಡಲಾಗಿದೆ.[2]

ರೆವರೆಂಡ್ ಎಫ್. ಕಿಟ್ಟೆಲ್ ಅವರು, ಕನ್ನಡ ಸಾಹಿತ್ಯವನ್ನು ಕುರಿತು ಬರೆದಿರುವ ತಮ್ಮ ಇಂಗ್ಲಿಷ್ ಪ್ರಬಂಧದಲ್ಲಿ, ಕ್ರಿ.ಶ. ೧೯ ನೆಯ ಶತಮಾನದಲ್ಲಿ ಪಾಂಚಾಳ ಚನ್ನಭುಜಂಗನ ಮಗನಾದ ಲಿಂಗಾಯಿತ ರಂಗಯ್ಯ ಎಂಬುವನು " ಕುಮಾರರಾಮ ಚರಿತ " ಎಂಬ ಕೃತಿಯನ್ನು ಬರೆದಿರುವನೆಂದೂ, ಇದರಲ್ಲಿ ೧೧ ಆಶ್ವಾಸಗಳೂ ೧೯೧೫ ಪದ್ಯಗಳೂ ಇವೆಯೆಂದೂ ಹೇಳಿರುತ್ತಾರೆ. ಇದು ಕನಕದಾಸರು " ಮೋಹನ ತರಂಗಿಣಿ "ಯನ್ನು ಬರೆದಿರುವಂತೆ ರಗಳೆಯಲ್ಲಿಯೇ ರಚಿತವಾಗಿದೆಯೆಂದೂ ತಿಳಿಸಿರುತ್ತಾರೆ.[3] ಶ್ರೀಯುತರು ಸಂಗ್ರಹಿಸಿಕೊಟ್ಟಿರುವ ಕಥೆಯನ್ನು[4] ನೋಡಿದರೆ ಇದು ಪಾಂಚಾಳಗಂಗನ ಕೃತಿಯೆಂದು ವಿದಿತವಾಗುತ್ತದೆ.

---

1. " Account of Kumara Rama, the son of Kampila Raya of Hosadurga near Vijayanagar, by Nanjunda Kavi " (The Mack. Collection, Ed. by H. H. Wilson, 1882, pp. 326-329.)
2. A Catalogue Raisonnee of Oriental Manuscripts, By Rev. William Taylor, Vols. I, II & III.
3. ನಾಗವರ್ಮನ ಕನ್ನಡ ಛಂದಸ್ಸು, ಇಂಗ್ಲಿಷ್ ಪ್ರಸ್ತಾವನೆ, ೧೮೭೫, ಪು. lxxiv-lxxv.
4. ಅದೇ. ಪು. xlix.

ಕವಿಯ ಹೆಸರಿನ ಪಲ್ಲಟವೇಕಾಯಿತೋ ತಿಳಿಯದು. ಕವಿಯ ಕಾಲವನ್ನು ೧೯ ನೆಯ ಶತಮಾನವೆಂದು ಯಾವ ಆಧಾರದ ಮೇಲೆ ಹೇಳಿರುವರೋ ಗೊತ್ತಾಗದು. ನಂಜುಂಡನ ಕೃತಿ ಇವರ ಗಮನಕ್ಕೆ ಬಂದಂತಿಲ್ಲ.

ಮಾನ್ಯ ಬಿ. ಎಲ್. ರೈಸ್, ಅವರು, ೧೮೮೪ ರಲ್ಲಿ ಪ್ರಕಟವಾದ "ಕರ್ಣಾಟಕ ಭಾಷಾಭೂಷಣ"ದ ಮುನ್ನುಡಿಯಲ್ಲಿ ಕೊಟ್ಟಿರುವ ಕವಿಗಳ ಚರಿತ್ರೆಯಲ್ಲಿಯೂ (ಪು. ೩೦), ೧೮೯೭ ರಲ್ಲಿ ಪ್ರಕಟವಾದ ಮೈಸೂರು ಗೆಜೆಟಿಯರಿನ ಮೊದಲನೆಯ ಸಂಪುಟದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಅವಲೋಕನವನ್ನು ಮಾಡುವ ಸಂದರ್ಭದಲ್ಲಿಯೂ[1] ಕುಮಾರರಾಮನ ಕಥೆಯನ್ನು ಬರೆದ ನಂಜುಂಡನ ಹೆಸರನ್ನು ಸೂಚಿಸಿರುತ್ತಾರೆ. ಅಲ್ಲದೆ, ಕ್ರಿ.ಶ.ಸು. ೧೮೦೦ರಲ್ಲಿ ಲಿಂಗಾಯಿತ ರಂಗಯ್ಯ ಎಂಬಾತನು ರಗಳೆಯ ಛಂದಸ್ಸಿನಲ್ಲಿ "ಕುಮಾರರಾಯ ಚರಿತ್ರ"ವನ್ನು ಬರೆದಿರುವನೆಂದೂ, ಈತನ ತಂದೆಯ ಹೆಸರು ಚನ್ನಭುಜಂಗನೆಂದೂ, ಈತನು ತಗಡೂರಿನ ವಿಷ್ಣುರಾಜನ ಆರಾಧಕನೆಂದೂ ತಿಳಿಸಿರುತ್ತಾರೆ.[2] ಇದು ಕಿಟ್ಟೆಲ್ ಅವರ ಅಭಿಪ್ರಾಯವನ್ನೇ ಪ್ರತಿಬಿಂಬಿಸುತ್ತದೆ.[3]

ಶ್ರೀ. ರಾ. ನರಸಿಂಹಾಚಾರ್ಯರು, ೧೯೧೯ ರಲ್ಲಿ ಪ್ರಕಟವಾದ ತಮ್ಮ "ಕರ್ಣಾಟಕ ಕವಿಚರಿತೆ"ಯ ಎರಡನೆಯ ಸಂಪುಟದಲ್ಲಿ ಈ ಕೃತಿಗಳನ್ನು ತಕ್ಕಮಟ್ಟಿಗೆ ವಿಶದವಾಗಿ ಪರಿಚಯಮಾಡಿಕೊಟ್ಟರು. ಶ್ರೀಯುತರು ನಂಜುಂಡ ಕವಿ ಮತ್ತು ಆತನ ರಚನೆಯನ್ನೂ[4] ಪಾಂಚಾಳ ಗಂಗ ಮತ್ತು ಆತನ ರಚನೆಯನ್ನೂ[5] ಕುರಿತು ಟಿಪ್ಪಣಿಗಳನ್ನು ಬರೆದ ಮೇಲೆ, ಈ ಬಗ್ಗೆ ಇತರ ವಿದ್ವಾಂಸರ ಲೇಖನಗಳು ಮೇಲಿಂದ ಮೇಲೆ ಬರಲಾರಂಭಿಸಿದುವು. ಶ್ರೀ. ಎಂ. ಎಚ್. ರಾಮಶರ್ಮರು ೧೯೨೯ ರಲ್ಲಿ ನಂಜುಂಡನ ಕೃತಿಯ ಕಥಾಸಾರವನ್ನು, ಅನೇಕ ಉಪಯುಕ್ತವಾದ ಟಿಪ್ಪಣಿಗಳೊಂದಿಗೆ ಇಂಗ್ಲಿಷಿನಲ್ಲಿ ಪ್ರಕಟಿಸಿದರು.[6] ಅವರೇ ಗಂಗನ ಕೃತಿಯ ಸಾರಾಂಶವನ್ನೂ ಬರೆದಿರುತ್ತಾರೆ.[7] ಡಾ|| ಎಂ.ಎಚ್. ಕೃಷ್ಣ ಅವರು, ಮೈಸೂರು ಪುರಾತತ್ವ ಇಲಾಖೆಯ ೧೯೨೯ನೆಯ ಇಸವಿಯ ವರದಿಯಲ್ಲಿ ನಂಜುಂಡನ ಗ್ರಂಥದ ವಿಚಾರವನ್ನೂ, ಅದರ ಐತಿಹಾಸಿಕ ಮಹತ್ವವನ್ನೂ ಕುರಿತು ಬರೆದಿರುತ್ತಾರೆ (ಪು. ೩೭-೪೭). ೧೯೪೧ ರಲ್ಲಿ ಶ್ರೀ. ಡಿ. ಎಲ್. ನರಸಿಂಹಾಚಾರ್ಯರು ನಂಜುಂಡನ ಕುಮಾರರಾಮನ ಸಾಂಗತ್ಯದ ಸ್ವಾರಸ್ಯವನ್ನು ಕುರಿತು ಒಂದು ಲೇಖನವನ್ನು ಬರೆದರು.[8] ೧೯೪೭ರಲ್ಲಿ ಶ್ರೀ. ಎ. ಆರ್. ಕೂಡ್ಲಿಗಿ ಎಂಬುವರು "ಕುಮಾರರಾಮನ ಚರಿತೆ" ಎಂಬುದಾಗಿ ಗಂಗ ಕವಿಯ ರಚನೆಯನ್ನು ಕುರಿತು ಒಂದು ಲೇಖನವನ್ನು ಪ್ರಕಟಿಸಿರುತ್ತಾರೆ.[9]

ಈ ಮಧ್ಯೆ, ಚಿತ್ರದುರ್ಗದ ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಕುಮಾರರಾಮನ ಬಗ್ಗೆ ಆಗಿಂದಾಗ್ಗೆ ಲೇಖನಗಳನ್ನು ಬರೆದುದಲ್ಲದೆ, ೧೯೪೧ರಲ್ಲಿ "ಗಂಡುಗಲಿ ಕುಮಾರರಾಮ" ಎಂಬ ಪುಸ್ತಕವನ್ನೇ ಪ್ರಕಾಶಕ್ಕೆ ತಂದರು.[10] ಈ ಪುಸ್ತಕದಲ್ಲಿ, ಕುಮಾರರಾಮನ ಕಥೆಯ ಸಾರವನ್ನೂ ಅದರಲ್ಲಿ ಅಡಕವಾಗಿರುವ ಐತಿಹಾಸಿಕ ಅಂಶಗಳನ್ನೂ ವಿವರವಾಗಿ ನಿರೂಪಿಸಿರುತ್ತಾರೆ. ಶ್ರೀಯುತರು ನಾಗಸಂಗಯ್ಯ ಎಂಬ ಕವಿ

---

1. Mys. Gaz. Vol. I, p. 500.
2. ಕರ್ಣಾಟಕ ಭಾಷಾಭೂಷಣ, ೧೮೮೪, ಮುನ್ನುಡಿ, ಪು. xxxiv.
3. ಶ್ರೀಯುತರು ಇದೇ ವಿವರಗಳನ್ನು ಭಟ್ಟಾಕಳಂಕನ "ಕರ್ಣಾಟಕ ಶಬ್ದಾನುಶಾಸನ"ಕ್ಕೆ ಬರೆದಿರುವ ಇಂಗ್ಲಿಷಿನ ಪೀಠಿಕಾಭಾಗದಲ್ಲಿಯೂ ಕೊಟ್ಟಿರುತ್ತಾರೆ. (The Literature of Karnataka, p. 44 and p. 48, 1890.)
4. ಕಚ. ii, ಪು. ೨೦೨-೨೦೬.
5. ಕಚ. ii, ಪು. ೪೨೩-೪೨೪.
6. QJMS. Vol. xx, No. 2, pp. 89-106; No. 3, pp. 201-211.
7. Supplement to QJMS. Oct. 1929, pp. 1-18.
8. ಕನ್ನಡ ನುಡಿ, ಸಂ iii, ಸಂ. ೪೪, ಪು. ೩೪೪-೩೪೮.
9. ಜಯಕರ್ನಾಟಕ, ೧೯೪೭, ಜೂನ್, ಪು. ೨೫೩-೨೫೫.
10. ಮಿಂಚಿನಬಳ್ಳಿ ಗ್ರಂಥಮಾಲೆ, ೪ ನೆಯ ವರ್ಷದ ೪ ನೆಯ ಕುಡಿ

ಯೊಬ್ಬನು ಬರೆದಿರುವ ಕೃತಿಯನ್ನು ಅವಲಂಬಿಸಿ ತಮ್ಮ ಗ್ರಂಥವನ್ನು ಬರೆದಿರುವುದಾಗಿ ತಿಳಿಸಿರುತ್ತಾರೆ.[1] ಇದೇ ಲೇಖಕರು "ವಾಗ್ಭೂಷಣ"ದಲ್ಲಿ ಕವಿಜಾಣ ಗಂಗಯ್ಯ ಎಂಬಾತನು ಬರೆದ ಮತ್ತೊಂದು ಕೃತಿಯನ್ನೂ,[2] "ಶರಣಸಾಹಿತ್ಯ"ದಲ್ಲಿ ಮಹಲಿಂಗಸ್ವಾಮಿಯೆಂಬಾತನು ಬರೆದ "ಬಾಲಕುಮಾರರಾಮನ ಸಾಂಗತ್ಯ" ಎಂಬ ಇನ್ನೊಂದು ಕೃತಿಯನ್ನೂ ಕುರಿತು ಪ್ರಸ್ತಾವಿಸಿರುತ್ತಾರೆ.[3] ಈ ವಿಚಾರವನ್ನು ಪುನಃಪುನಃ ತಮ್ಮ ಲೇಖನಗಳಲ್ಲಿ[4] ಹೇಳಿರುವುದಲ್ಲದೆ ೧೯೫೫ ರಲ್ಲಿ ಮತ್ತೆ ಪ್ರಕಟವಾದ ಅವರ ಪುಸ್ತಕದ ಹಿನ್ನುಡಿಯಲ್ಲಿ ಕುಮಾರರಾಮನ ಕಥೆಯನ್ನು ಕುರಿತು "ಪಾಂಚಾಳಗಂಗ, ನಂಜುಂಡ, ನಾಗಸಂಗಯ್ಯ, ಮಹಲಿಂಗಸ್ವಾಮಿ, ಕನ್ನಡ ಕವಿಜಾಣ ಗಂಗಯ್ಯ, ಗಂಗ" ಎಂಬುದಾಗಿ ಆರು ಜನರೂ, ಇತರ ಕೆಲವು ಅಜ್ಞಾತ ಕವಿಗಳೂ ಕೃತಿರಚನೆ ಮಾಡಿದ್ದಾರೆಂದು ಹೇಳಿರುತ್ತಾರೆ[5] ಈ ರೀತಿ ಕುಮಾರರಾಮನ ಕೃತಿಗಳ ಸಂಖ್ಯೆಯೂ, ಕವಿಗಳ ಸಂಖ್ಯೆಯೂ ಬೆಳೆಯುತ್ತಿರುವುದನ್ನು ಕಂಡು, ಇವುಗಳನ್ನು ಪರಸ್ಪರವಾಗಿ ಹೋಲಿಸಿ ನೋಡಬೇಕೆಂದು ನನಗೆ ಆಸಕ್ತಿಯುಂಟಾಯಿತು. ಶ್ರೀ. ಹುಲ್ಲೂರು ಶ್ರೀನಿವಾಸಜೋಯಿಸರ ಬಳಿಯಲ್ಲಿದ್ದ ಪ್ರತಿಗಳನ್ನು ನೋಡುವ ಸದವಕಾಶವೂ ನನಗೆ ಇದ್ದುದರಿಂದ ಈ ಕೆಲಸ ಮತ್ತಷ್ಟು ಸುಗಮವಾಯಿತು.

ಶ್ರೀ. ಹುಲ್ಲೂರು ಶ್ರೀನಿವಾಸಜೋಯಿಸರ ಬಳಿಯಲ್ಲಿ ನಾಗಸಂಗಯ್ಯ, ಕವಿಜಾಣಗಂಗಯ್ಯ, ಮತ್ತು ಮಹಲಿಂಗಸ್ವಾಮಿಗಳ ಹೆಸರಿನಲ್ಲಿದ್ದ ಕೃತಿಗಳಲ್ಲದೆ "ಭುಜಂಗೇಶ ಪುತ್ರ ಗಂಗ" ಕವಿ ರಚಿತವಾದ ಮತ್ತೊಂದು ಹಸ್ತಪ್ರತಿಯೂ ನನಗೆ ದೊರೆಯಿತು. ಅದು ಎಲ್ಲಕ್ಕಿಂತಲೂ ದೀರ್ಘವಾಗಿತ್ತು. ಈ ಕೃತಿಗಳನ್ನು ಕುತೂಹಲದಿಂದ ಪರಿಶೀಲಿಸುತ್ತಿರಬೇಕಾದರೆ ನಾಗಸಂಗಯ್ಯನ ಕೃತಿಗೂ ಭುಜಂಗೇಶಪುತ್ರಗಂಗನ ಕೃತಿಗೂ ಅನೇಕ ಎಡೆಗಳಲ್ಲಿ ಸಾಮ್ಯವಿರುವುದು ವಿದಿತವಾಯಿತು. ಶ್ರೀಯುತರ ಬಳಿಯಲ್ಲಿದ್ದ ಕವಿಜಾಣ ಗಂಗಯ್ಯನ ಕೃತಿ ಚಿಕ್ಕದಾಗಿದ್ದು ಬಹುಮಟ್ಟಿಗೆ ಸಮಗ್ರವಾಗಿದ್ದುದರಿಂದ ಅದನ್ನು ಮೇಲೆ ಹೇಳಿರುವ ಎರಡು ಕೃತಿಗಳೊಂದಿಗೂ ಹೋಲಿಸಿ ನೋಡಿದಾಗ ಅಲ್ಲಿಯೂ ಹಲವೆಡೆಗಳಲ್ಲಿ ಸಾಮ್ಯವು ಕಂಡುಬಂದಿತು. ಈ ಮಧ್ಯೆ. ನನ್ನ ವಿದ್ಯಾರ್ಥಿಯೊಬ್ಬನ ಮೂಲಕ ನನಗೆ ಮತ್ತೊಂದು ಹಸ್ತಪ್ರತಿ ದೊರೆಯಲು, ಅದನ್ನು ಇತರ ರಚನೆಗಳೊಂದಿಗೆ ತಾಳೆ ನೋಡಿದಾಗ, ಪರಸ್ಪರ ಸಂಬಂಧದ ಸ್ವರೂಪವು ಮತ್ತಷ್ಟು ವಿಶದವಾಯಿತು. ಹೀಗೆ ಬೇರೆ ಬೇರೆ ಕವಿಗಳು ಕುಮಾರರಾಮನ ಕಥೆಯನ್ನು ಹೇಗೆ ನಿರೂಪಿಸಿರಬಹುದು ಎಂಬುದನ್ನು ಪರಿಶೀಲಿಸಲು ಹೊರಟು, ಈ ರಚನೆಗಳೆಲ್ಲವೂ ಒಂದೇ ಕೃತಿಯ ಬೇರೆ ಬೇರೆ ಪ್ರತಿಗಳೆಂಬ ಅಂಶವು ಕ್ರಮಕ್ರಮವಾಗಿ ಸ್ಪಷ್ಟವಾಯಿತು. ಶ್ರೀ. ಹುಲ್ಲೂರು ಶ್ರೀನಿವಾಸಜೋಯಿಸರು ಈ ರಚನೆಗಳನ್ನು ಪರಸ್ಪರ ಹೋಲಿಸಿ ನೋಡಿದ್ದಂತೆ ಕಾಣುವುದಿಲ್ಲ. ಅಲ್ಲದೆ, ಅವರ ಬಳಿಯಲ್ಲಿದ್ದ ಒಂದು ಪ್ರತಿಯಲ್ಲಿ ಬರುವ "ಆಧಾರವಿಡಿದು ಹೇಳಿದ ನಾಗಸಂಗಯ್ಯ ಈ ಧರೆಯು ವಿದ್ವಾಂಸರೊಳಗೆ (I, ೧೨)" ಎಂಬ ಹೇಳಿಕೆ ಅವರಿಗೆ ಅದು ಬೇರೊಬ್ಬ ಕವಿಯದಿರಬೇಕೆಂದು ಎನ್ನಿಸಿದೆ. ಆ ಪ್ರತಿಯಲ್ಲಿ ಬೇರೆಲ್ಲಿಯೂ ಕವಿಯ ಹೆಸರು ಬಾರದಿರುವುದರಿಂದಲೂ, ಕಥಾಪ್ರಾರಂಭದ ಕೆಲವು ವಿವರಗಳು ಬೇರೆಯ ತೆರನಾಗಿರುವುದರಿಂದಲೂ ಈ ರೀತಿಯಾದ ಭಾವನೆಯುಂಟಾಗಿರುವುದು ಆಶ್ಚರ್ಯವೇನೂ ಅಲ್ಲ.[6] ಇಷ್ಟೇ ಅಲ್ಲದೆ, ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಈ ಹಿಂದೆ ಸೂಚಿಸಿರುವ

1. ಗಂಡುಗಲಿ ಕುಮಾರರಾಮ, ೧೯೪೧, ಪು. ೨.
2. ಈ ಲೇಖನದ ಪ್ರತಿಮಾತ್ರ ನನ್ನ ಗಮನಕ್ಕೆ ಬಂದಿದೆ: (ಸಂ ? ಸಂ ?)
3. ಸಂ. viii, ಸಂ. ೨, ಪು. ೮೧–೯೨, ಸಂ. ೩, ೯೩–೧೦೧.
4. ಶ್ರೀಯುತರ ಲೇಖನಗಳ ಪಟ್ಟಿಯನ್ನು ಕಡೆಯಲ್ಲಿ ಕೊಡಲಾಗಿದೆ.
5. ಗಂಡುಗಲಿ ಕುಮಾರರಾಮ, ೧೯೫೫, ಪು. ೧೨೪.
6. ಈ ಪ್ರತಿಯನ್ನು ಹೋಲುವ ಇನ್ನೊಂದು ಪ್ರತಿ ಮದರಾಸಿನ ಪ್ರಾಚ್ಯ ಪುಸ್ತಕ ಭಂಡಾರದಲ್ಲಿದೆ (D. 920). ಅದರಲ್ಲಿ ಕವಿಯ ಹೆಸರಿನ ಪದ್ಯ ಲೋಪವಾಗಿದೆ. ಅಲ್ಲಿನ ಸಂಪಾದಕರಿಗೂ ಶ್ರೀ. ಹುಲ್ಲೂರು ಶ್ರೀನಿವಾಸಜೋಯಿಸರಂತೆಯೇ ಶಂಕೆಯಾಗಿದೆ. (The main story is the same as that described above; but as

ಶ್ರೀ. ಎಸ್. ಆರ್. ಕೂಡ್ಲಿಗಿ ಅವರ "ಕುಮಾರರಾಮನ ಚರಿತೆ" ಎಂಬ ಲೇಖನದಲ್ಲಿ ಕಂಡುಬರುವ ಕೆಲವು ಕಥಾವ್ಯತ್ಯಾಸಗಳ ಆಧಾರದ ಮೇಲೆಯೇ ಅದನ್ನು ಬರೆದ ಗಂಗನು ಬೇರೊಬ್ಬ ಕವಿಯಿರಬೇಕೆಂದು ಎಣಿಸುವ ಅವರ ಅಭಿಪ್ರಾಯವೂ ಸಾಧುವಲ್ಲವೆಂದು ಪ್ರಕೃತ ಪರಿಸ್ಥಿತಿಯಲ್ಲಿ ವೇದ್ಯವಾಗುತ್ತದೆ. ಅಂತೂ, ಈ ಪರಸ್ಪರ ಸಾದೃಶ್ಯಾವಲೋಕನದಿಂದ, ನಾಗಸಂಗಯ್ಯ, ಭುಜಂಗೇಶಪುತ್ರ ಗಂಗ ಮತ್ತು ಕವಿಜಾಣ ಗಂಗ ಎಂಬ ಹೆಸರುಗಳಲ್ಲಿದ್ದ ರಚನೆಗಳೆಲ್ಲವೂ ಒಬ್ಬ ಕವಿಯದೇ ಎಂದೂ, ಇವುಗಳ ಕರ್ತೃವೇ ಪಾಂಚಾಳ ಗಂಗನೆಂದೂ ಮನವರಿಕೆಯಾಗುತ್ತದೆ. ಗಂಗನ ಕೃತಿಯಲ್ಲಿ ವಿದಿತವಾಗುವ ಪಾಠಾಂತರಗಳನ್ನೂ, ಕಥಾವ್ಯತ್ಯಾಸಗಳನ್ನೂ ಮುಂದೆ ವಿಸ್ತಾರವಾಗಿ ವಿಚಾರಮಾಡಲಾಗಿದೆ.[1] ಈ ಪ್ರತಿಗಳಲ್ಲಿ ಪರಸ್ಪರವಾಗಿ ಕಂಡುಬರುವ ಸಾಮ್ಯವನ್ನು ಸೂಚಿಸುವ ಅಂಕಿ ಅಂಶಗಳ ಪಟ್ಟಿಯೊಂದನ್ನು ಕಡೆಯಲ್ಲಿ ಕೊಡಲಾಗಿದೆ.[2] ಗಂಗನ ಕೃತಿಯ ಬಗ್ಗೆ ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರಿಗೆ ಉಂಟಾಗಿದ್ದ ಕಲ್ಪನೆ ಹೇಗೇ ಇರಲಿ, ಅವರು ಬೆಳಕಿಗೆ ತಂದಿರುವ ಮಹಲಿಂಗಸ್ವಾಮಿಯ ಕೃತಿ ತುಂಬ ಮಹತ್ವವಾದುದು. ಈವರೆಗೆ ಇದರ ಒಂದೇ ಒಂದು ಪ್ರತಿ ಲಭ್ಯವಾಗಿರುವುದು. ನಂಜುಂಡ ಮತ್ತು ಗಂಗನ ಕೃತಿಗಳಿಗೂ, ಇದಕ್ಕೂ ಕೆಲವು ಅಂಶಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. ಮುಖ್ಯವಾಗಿ, ಮೇಲಿನ ಪರಿಶೀಲನೆಯಿಂದ, ಕುಮಾರರಾಮನ ಕಥೆಯನ್ನು ಕುರಿತು ನಂಜುಂಡ, ಪಾಂಚಾಳ ಗಂಗ, ಮಹಲಿಂಗಸ್ವಾಮಿ ಎಂಬ ಮೂವರು ಕವಿಗಳು ಕೃತಿರಚನೆ ಮಾಡಿರುವರೆಂದು ಸ್ಪಷ್ಟವಾಗುತ್ತದೆ. ಇನ್ನು ಈ ಕೃತಿಗಳ ಹೆಸರು, ಕವಿ ವಿಚಾರ ಮುಂತಾದ ಇತರ ವಿವರಗಳನ್ನು ಗಮನಿಸಬಹುದು.

## ಕೃತಿಗಳ ಹೆಸರು

ಕುಮಾರರಾಮನ ಕಥೆಯನ್ನು ಒಳಗೊಂಡ ಈ ಕೃತಿಗಳನ್ನು ಸಾಧಾರಣವಾಗಿ "ಕುಮಾರರಾಮನ ಸಾಂಗತ್ಯ" ಎಂದು ಕರೆಯುವುದು ರೂಢಿ. ಕೆಲವು ಪ್ರತಿಕಾರರು "ರಾಮನಾಥನ ಸಾಂಗತ್ಯ" ಎಂಬುದಾಗಿ ಸೂಚಿಸುವುದೂ ಉಂಟು.[3] "ಕುಮಾರರಾಮನ ಕಥೆ" "ಕುಮಾರರಾಮನ ಚರಿತೆ" ಮುಂತಾದ ಹೆಸರುಗಳೂ ಆಗಿಂದಾಗ್ಗೆ ಕೇಳಿಬರುತ್ತವೆ.[4] ಪ್ರಕೃತದಲ್ಲಿ, ಆಯಾ ಕವಿಗಳು ತಮ್ಮ ತಮ್ಮ ಕೃತಿಗಳಿಗೆ ಏನು ಹೆಸರಿಟ್ಟಿರಬಹುದು ಎನ್ನುವ ವಿಷಯವು ವಿಚಾರಾರ್ಹವಾದುದು.

ಕವಿ ನಂಜುಂಡನು ತನ್ನ ಕೃತಿಯ ಪ್ರಾರಂಭದಲ್ಲಿ, ವಿದ್ವಾಂಸರು "ನಿನಗೀ ರಾಮನಾಥನ ಚರಿತವ

---

the readings and plot in several places differ, it is not possible to determine the authorship of this work, DCKM, Vol. v, p. 124.

1. ಅಧ್ಯಾಯ ೪, "ಪಾಂಚಾಳ ಗಂಗನ ಚೆನ್ನರಾಮನ ಸಾಂಗತ್ಯ".
2. ಅನುಬಂಧ ೧.
3. DCKM, D. 916.
4. ಜನಪ್ರಿಯವಾದ ಇಂಥ ಕೃತಿಗಳಿಗೆ ಹೀಗೆ ಬೇರೆ ಬೇರೆ ಹೆಸರುಗಳಿರುವುದೇನೂ ಹೊಸತಲ್ಲ. ಸಂಸ್ಕೃತದ "ವಿಕ್ರಮಾರ್ಕ ಚರಿತ"ಕ್ಕೆ ಹೀಗೆ ಹಲವಾರು ಹೆಸರುಗಳಿರುವುದಾಗಿ, ಅದನ್ನು ಸಂಪಾದಿಸಿ ಪ್ರಕಟಿಸಿರುವ ಎಫ್. ಎಜರ್ಟನ್ ಅವರು ಹೀಗೆ ಬರೆದಿರುತ್ತಾರೆ:—

"The work is called by a great variety of names, in the manuscripts. I have arbitrarily chosen *Vikrama Carita* because it is simplest and shortest that occurs. As there is no single name which can be said to have a claim to universality, or anything like it, on the basis of the manuscript usage, this seems a legitimate procedure.

The standard designation seems to be *Vikramarka Carita* (or *Caritra*).

—Vikrama's Adventures, Part I, Introduction, P. xlix

ಪೇಳ್ವುದನುಚಿತವಲ್ಲ ನೀನಿದನು ಅನುನಯದಿಂದ ಪೇಳೆನಲು" (I, ೬೭) ತಾನು ಅವರ ಮಾತಿಗನುಸಾರವಾಗಿ "ಮನವೊಲಿದಿದನುಸುರಿದೆನು" (I, ೬೭) ಎಂದು ಹೇಳಿಕೊಂಡಿರುತ್ತಾನೆ. ಕೆಲವು ಪ್ರತಿಗಳಲ್ಲಿ ಸಂಧಿಯ ಕಡೆಯಲ್ಲಿ "ಪರದಾರ ಸೋದರ ರಾಮನಾಥನ ಪದಕೃತಿ" ಎಂಬ ಹೆಸರನ್ನು ಒಳಗೊಂಡ ಪದ್ಯವೊಂದು ಕಂಡುಬರುತ್ತದೆ. ಕೃತಿಯನ್ನು ಮುಕ್ತಾಯ ಮಾಡುವ ಸಂದರ್ಭದಲ್ಲಿ, ಕವಿ ತನ್ನ ವಿವರಣಾದಿಗಳನ್ನು ಹೇಳಿರುವುದರ ಜೊತೆಗೆ "ಕವಿತಾವಿಶಾರದ ನಂಜುಂಡವಿರಚಿತಮಪ್ಪ ಕುಮಾರರಾಮಚರಿತ(ತ್ರ) ಮಹಾಪ್ರಬಂಧ" ಎಂಬುದಾಗಿ ಉಲ್ಲೇಖಿಸಿರುತ್ತಾನೆ. ಈ ಹೇಳಿಕೆಗಳನ್ನು ಗಮನಿಸಿದರೆ, ಈ ಕೃತಿಗೆ "ರಾಮನಾಥನ ಚರಿತ" ಎಂದೋ, "ಪರದಾರಸೋದರ ರಾಮನಾಥನ ಪದಕೃತಿ" ಎಂದೋ, "ಕುಮಾರರಾಮ ಚರಿತ" ಎಂದೋ ಹೆಸರಿರಬೇಕೆಂದು ತೋರಿಬರುತ್ತದೆ. ಸಂಧ್ಯಂತ್ಯದ ಪದ್ಯವು ಎಲ್ಲ ಪ್ರತಿಗಳಲ್ಲಿಯೂ, ಹಾಗೂ, ಒಂದೇ ಪ್ರತಿಯಲ್ಲಿ ಎಲ್ಲೆಡೆಗಳಲ್ಲಿಯೂ ನಿಯತವಾಗಿ ಕಂಡುಬರುವುದಿಲ್ಲ. ಆದ್ದರಿಂದ, ಉಳಿದೆರಡು ಹೆಸರುಗಳಲ್ಲಿ ಯಾವುದು ಸೂಕ್ತವಾಗಿದೆಯೆಂದು ಪರಿಶೀಲಿಸಬಹುದು. ನಂಜುಂಡನು ತನ್ನ ಕಥಾನಾಯಕನನ್ನು ಆಗಿಂದಾಗ್ಗೆ "ರಾಮನಾಥ" "ಕುಮಾರರಾಮ" ಮತ್ತು "ಚೆನ್ನಿಗರಾಮ" ಎಂಬುದಾಗಿ ಕರೆದರೂ, ಗ್ರಂಥದ ಸಮಾಪ್ತಿವಾಕ್ಯದಲ್ಲಿ "ಕುಮಾರರಾಮ ಚರಿತ ಮಹಾಪ್ರಬಂಧ" ಎಂದು ಹೇಳಿರುವುದು ತುಂಬ ಗಮನಾರ್ಹವಾದುದು. ಈ ಗ್ರಂಥಾಂತ್ಯದ ಗದ್ಯದಲ್ಲಿ ಕವಿಯ ಆತ್ಮವೃತ್ತಾಂತವೂ ಅಡಕವಾಗಿರುವುದಲ್ಲದೆ, ಇದರ ಮುಖ್ಯಾಂಶಗಳು ಎಲ್ಲ ಪ್ರತಿಗಳಲ್ಲಿಯೂ ನಿಯತವಾಗಿ ಕಂಡುಬರುತ್ತದೆ. ಆದ್ದರಿಂದ, ಇದು ಕವಿಕೃತವಾದದ್ದೆಂದು ಭಾವಿಸಲು ಯಾವ ಅಡ್ಡಿಯೂ ಇಲ್ಲ. ನಮ್ಮ ಕವಿಗಳು ಕಾವ್ಯದ ವಸ್ತುವನ್ನು ನಿರ್ದೇಶಿಸುವಾಗ ಕಥಾಮೂಲ, ಕಥಾನಾಯಕ ಮೊದಲಾದುವುಗಳನ್ನು ಬೇರೆ ಬೇರೆ ರೀತಿಗಳಲ್ಲಿ ಹೇಳಿದರೂ, ಗ್ರಂಥದ ಸಮಾಪ್ತಿವಾಕ್ಯದಲ್ಲಿ ಕಾವ್ಯದ ಹೆಸರನ್ನು ಖಚಿತವಾಗಿ ನಿರ್ದೇಶಿಸುವುದು ಒಂದು ಸಂಪ್ರದಾಯ.[1] ನಂಜುಂಡನೂ ಅದೇ ರೀತಿಯಾಗಿ ತನ್ನ ಕೃತಿಯ ಹೆಸರನ್ನು ಇಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾನೆಂದು ಭಾವಿಸುವುದು ಸೂಕ್ತವಾಗಿದೆ. ಆತನ ಕಾಲಕ್ಕಾಗಲೇ 'ಕುಮಾರರಾಮ' ಎಂಬ ಹೆಸರು ಹೇಗೆ ಜನಾದರಣೀಯವಾಗಿತ್ತೆಂಬುದನ್ನೂ ಇದು ವ್ಯಕ್ತಪಡಿಸುತ್ತದೆ.[2] ಇಂದಿಗೂ 'ಕುಮಾರರಾಮ', 'ಕೊಮರರಾಮ' ಎಂಬ ಹೆಸರುಗಳು ಉಳಿದ ಪ್ರಯೋಗಗಳಿಗಿಂತ ಹೆಚ್ಚು ಬಳಕೆಯಲ್ಲಿರುವುದು ಕಂಡುಬರುತ್ತದೆ. ಈ ಕಾರಣಗಳಿಂದ ನಂಜುಂಡನ ಕೃತಿಯನ್ನು 'ಕುಮಾರರಾಮ ಚರಿತ' ಎಂದು ಕರೆಯುವುದೇ ಸಾಧುವಾಗಿ ತೋರುತ್ತದೆ.[3]

ಗಂಗನ ಕೃತಿಯ ಹೆಸರಿನ ನಿಷ್ಕರ್ಷೆ ಸ್ವಲ್ಪಮಟ್ಟಿಗೆ ತೊಡಕಾದುದೇ ಸರಿ. ಪ್ರತಿಕಾರರು "ಕುಮಾರರಾಮನ ಸಾಂಗತ್ಯ" ಎಂಬುದಾಗಿಯೋ, "ರಾಮನಾಥನ ಸಾಂಗತ್ಯ ಗಂಗುಕೃತಿ" ಎಂಬುದಾಗಿಯೋ ಹೇಳಿರುವುದುಂಟು. ಈತನ ಕೃತಿಗಳನ್ನು ವಿಂಗಡಿಸುವಾಗ ಮದರಾಸಿನ ಪ್ರಾಚ್ಯ ಪುಸ್ತಕ ಭಂಡಾರದವರು

---

1. ಪಂಪನ "ವಿಕ್ರಮಾರ್ಜುನ ವಿಜಯ", ರನ್ನನ "ಸಾಹಸಭೀಮ ವಿಜಯ", ಕುಮಾರವ್ಯಾಸನ "ಕರ್ಣಾಟ ಭಾರತ ಕಥಾಮಂಜರಿ" ಮೊದಲಾದ ಪ್ರಯೋಗಗಳನ್ನು ಇಲ್ಲಿ ನೆನೆಯಬಹುದು.

2. ಕುಮಾರರಾಮನನ್ನು ಕುರಿತ ಶಾಸನಗಳಲ್ಲಿ, "ಕುಮಾರ ರಾಮನಾಥದೇವರು" (ಕ್ರಿ. ಶ. ೧೪೦೭), "ಕುಮಾರ ರಾಮನಾಥ" (ಕ್ರಿ. ಶ. ೧೪೩೩), "ರಾಮನಾಥವೊಡೆಯರು" (ಕ್ರಿ. ಶ. ೧೫೨೮) ಎಂಬ ಪ್ರಯೋಗಗಳಿವೆ. ಇಲ್ಲಿನ ಎರಡು ಪ್ರಾಚೀನ ಶಾಸನಗಳಲ್ಲಿಯೂ ಕಂಡುಬರುವ 'ಕುಮಾರ' ಎಂಬ ಪ್ರಯೋಗ ಬಹು ವಿಶಿಷ್ಟವಾದದ್ದು. "ಕುಮಾರ ರಾಮನಾಥ" ಎಂಬ ಈ ಹೆಸರೇ ಕಾಲಕ್ರಮೇಣ 'ಕುಮಾರರಾಮ' ಎಂದು ಬಳಕೆಗೆ ಬಂದು ಜನಾನುರಾಗವನ್ನು ಗಳಿಸಿರಬಹುದು.

3. ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದವರು "ರಾಮನಾಥ ಚರಿತ" ಎಂದು ಕರೆದಿರುತ್ತಾರೆ. ಅಲ್ಲದೆ, ಕುಮಾರರಾಮನ ಗುಣಗಳ ಕಡೆಗೂ ಲಕ್ಷ್ಯವಿಟ್ಟು, "ಪರದಾರಸೋದರ ರಾಮನಾಥ ಚರಿತ" ಎಂಬ ಹೆಸರನ್ನೂ ಬಳಸಿರುತ್ತಾರೆ.

ಒಟ್ಟಿನಲ್ಲಿ "ಕುಮಾರರಾಮನ ಕಥೆ" ಎಂಬುದಾಗಿ ನಿರ್ದೇಶಿಸುತ್ತಾರೆ.[1] ಶ್ರೀ. ರಾ. ನರಸಿಂಹಾಚಾರ್ಯರು "ಕುಮಟರಾಮನ ಕಥೆ" ಎಂದು ಕರೆದಿರುತ್ತಾರೆ.[2] ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದವರ ಹಸ್ತಪ್ರತಿಗಳ ಪಟ್ಟಿಯಲ್ಲಿಯೂ ಗಂಗನ ಕೃತಿಯನ್ನು "ಕುಮಟರಾಮನ ಸಾಂಗತ್ಯ (ಕಥೆ)" ಎಂದೇ ಸೂಚಿಸಲಾಗಿದೆ.[3] ಆದರೆ, ಅಲ್ಲಿನ ಗಂಗನ ಪ್ರತಿಗಳಲ್ಲಿ ಉತ್ತಮವೆಂದು ಎಣಿಸಿರುವ ಕೆ. ೧೯೯ನೆಯ ಸಂಖ್ಯೆಯ ಪ್ರತಿಯನ್ನು ನೋಡಿದಾಗ ಇದು ಕೇವಲ ಆ ಪ್ರತಿಗೆ ಯಾರೋ ಕೊಟ್ಟ ಹೆಸರೆಂದು ವಿದಿತವಾಗುತ್ತದೆ. ಪ್ರತಿಕಾರನು ಎಂದಿನಂತೆಯೇ "ರಾಮನ ಸಾಂಗತ್ಯ ಗಂಗುಪ್ರತಿ" ಎಂದು ಹೇಳಿರುತ್ತಾನೆ. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿರುವ ಗಂಗನ ನಾಲ್ಕು ಪ್ರತಿಗಳನ್ನೂ "ಕಂಪಿಲಿರಾಯನ ಸಾಂಗತ್ಯ" ಎಂದು ಕರೆಯಲಾಗಿದೆ. ಅಲ್ಲಿನ ಹಸ್ತಪ್ರತಿಗಳ ಪಟ್ಟಿಯಲ್ಲಿ "ಕುಮಟರಾಮನ ಕಥೆ" ಎಂದು ಸೂಚಿಸಲಾಗಿದೆ.[4] ಗಂಗನ ಕೃತಿಯನ್ನು ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಾಗಿ ಕರೆದಿರುವುದರಿಂದ, ಅವನ ಕೃತಿಯಲ್ಲಿಯೇ ಈ ಬಗ್ಗೆ ಏನಾದರೂ ಸೂಚನೆಗಳು ಕಂಡುಬರುತ್ತವೆಯೇ ಎಂದು ನೋಡಬಹುದು. ನಂಜುಂಡನ ಕೃತಿಯಲ್ಲಿ ಸಂಧಿಯ ಕಡೆಯಲ್ಲಿ ಕಂಡುಬರುವ "ಪರದಾರಸೋದರ ರಾಮನಾಥನ ಪದಕೃತಿ" ಎಂಬ ಹೆಸರನ್ನುಳ್ಳ ಪದ್ಯವು ಗಂಗನ ಕೆಲವು ಪ್ರತಿಗಳಲ್ಲಿ ಅಲ್ಪಸ್ವಲ್ಪ ಮಾರ್ಪಟ್ಟು ತೋರಿಬರುವುದುಂಟು. ಆದರೆ ಈ ಪದ್ಯವು ಗಂಗನ ಎಲ್ಲ ಪ್ರತಿಗಳಲ್ಲಿಯೂ ಕಾಣದೆ ಇರುವುದರಿಂದಲೂ, ಅಲ್ಲದೆ, ಬೇರೆ ಬೇರೆ ಎರಡು ಕೃತಿಗಳಲ್ಲಿಯೂ ಕಂಡುಬರುವುದರಿಂದಲೂ, ಈ ಹೇಳಿಕೆಯ ಆಧಾರದ ಮೇಲೆ ನಿರ್ಧರವಾಗಿ ಏನನ್ನೂ ಹೇಳುವಂತಿಲ್ಲ. "ಕುಮಟರಾಮನ ಕಥೆ" ಎಂಬ ಹೆಸರು ನನ್ನ ಗಮನಕ್ಕೆ ಬಂದ ಯಾವ ಪ್ರತಿಯಲ್ಲಿಯೂ ಗೋಚರವಾಗುವುದಿಲ್ಲ. ಕಡೆಯದಾಗಿ, ಕೃತಿಯ ಹೆಸರನ್ನು ಖಚಿತವಾಗಿ ನಿರ್ದೇಶಿಸುವ ಕವಿಕೃತವಾದ ಯಾವ ಸಮಾಪ್ತಿ ವಾಕ್ಯವೂ ಇಲ್ಲಿ ಕಂಡುಬರುವುದಿಲ್ಲ. ಆದ್ದರಿಂದ ಕಥಾಭಾಗದಲ್ಲಿಯೇ ಅಡಕವಾಗಿರುವ ಈ ಕೆಲವು ಪದ್ಯಗಳು ಈ ಬಗ್ಗೆ ಎಷ್ಟರಮಟ್ಟಿಗೆ ಸಹಾಯಕವಾಗಬಲ್ಲವು ಎನ್ನುವುದನ್ನು ಪರಿಶೀಲಿಸಬಹುದು :—

ಯಿನ್ನು ಪೇಳುವೆ **ಚೆನ್ನರಾಮನ ಕೃತಿಯನು**
ಚೆನ್ನಾಗಿ ಕೇಳಿ ಸಜ್ಜನರು
ಮುನ್ನಿನ ಪಾಂಡವ ಶೌರ್‍ಯದ ಪಂಥದಿ
ಬಣ್ಣಿಸುವೆನು ಧರೆಯೊಳಗೆ

(ಗಂ. ೧, i, ೧೩, ಜೋ. ಪ್ರ.)

ಯಿನ್ನು ಪೇಳುವೆ **ಚೆನ್ನರಾಮನ ಕೃತಿಯನು**
ಚೆನ್ನಾಗಿ [ಕೇಳಿ] ಬಲ್ಲವರು
ಮುನ್ನಿನ ಪಾಂಡವ ವರಸುತ ಕಥನವ
ಬಿನ್ನಾಣಿಸುವೆ ಧರೆಯೊಳಗೆ

(ಧಾ. ಪ್ರ. ೯೫, i, ೩)

ಯಿನ್ನು ಹೇಳುವೆ **ರಾಮನಾಥನ ಕೃತಿಯನು**
ಚೆನ್ನಾಗಿ ಕೇಳಿ ಕೋವಿದರು

1. DCKM, Vol. V, PP. 1232–1240.
2. ಕಚ. ಸಂ. ii, ಪು. ೪೨೩.
3. ಕೈಬರಹದ ಕನ್ನಡ ಗ್ರಂಥಗಳ ಅಕಾರಾದಿ ಸೂಚಿನೀ, ಪು. ೮.
4. A Descriptive Catalogne of Mss. Vol. III, P. 48.

ಮುನ್ನಿನ ಪಾಂಡವ ಸುತರ ಕದನಗಳನು
　ಬಿನ್ನಣಿಸುವೆ ಧರೆಯೊಳಗೆ
(ಮ. ಪ್ರ. ಡಿ. ೯೨೨, i, ೭)

ಶ್ರೀಕಾಂತನ ಕೃಪೆಯುಳ್ಳ **ಚೆನ್ನಿಗರಾಮ**
　ಲೋಕದೊಳಗೆ ಕೀರ್ತಿವಡೆದ
ಯಿಾ ಕೃತಿಯನು ಪೇಳಿದ ಗಂಗಯ್ಯ ಅ
　ನೇಕ ಸಜ್ಜನರು ಲಾಲಿಪುದು
(ಮ. ಪ್ರ. ಡಿ. ೯೧೮, v, ೧)

ಶ್ರೀಕಾಂತನ ಕೃಪೆಯುಳ್ಳ **ಚೆನ್ನಿಗರಾಮ**
　ಲೋಕದೊಳಗೆ ಕೀರ್ತಿವಡೆದ
ಯಿಾ ಕೃತಿಯನು ಪೇಳಿದ ಗಂಗನೊಲಿದು ಅ
　ನೇಕ ಪದ್ಯ ನರಲೊ (ರೊ ?)ಲಿಪುದು
(ಮ. ಪ್ರ. ಡಿ. ೯೧೭, ii, ೧)

ಕಾವ್ಯ ನಾಟಕ ವೃತ್ತ ಕಂದ ಪದ್ಯಗಳ
　ಭಾವದಿಂದಲಿ ಪೇಳ್ವರಿಗೆ
ಭುವನದ ಕವಿಗಳಿಗೆ ನಾನು ವಂದಿಸಿ
　ಪೇಳ್ವೆನು **ರಾಮನ ಕೃತಿಯ**
(ಮೈ. ಪ್ರ. ಕೆ. ೧೯೯, iii, ೯)

ಶ್ರೀಕಾಂತನ ಕೃಪೆಯುಳ್ಳನಕ ಸತ್ಯಪೆಯಿತ್ತು
　ಲೋಕದೊಳಗೆ ಕೀರ್ತಿವಡೆದ
ಯಿಾ ಕೃತಿಯನ್ನು ಪೇಳ್ದ ಗಂಗನೊಲಿದು ಅ
　ನೇಕ ಸಜ್ಜನರು ಲಾಲಿಪುದು
(ಮೈ. ಪ್ರ. ಕೆ. ೧೯೯, iv, ೧)

ಇಲ್ಲಿ ಬರುವ ಹೇಳಿಕೆಗಳಲ್ಲಿ ಬಹುಪಾಲನ್ನು ನೋಡಿದರೆ, ಕವಿಗೆ ತನ್ನ ಕೃತಿಯನ್ನು ನಿರ್ದೇಶಿಸುವಲ್ಲಿ "ಚೆನ್ನರಾಮ" ಅಥವಾ "ಚೆನ್ನಿಗರಾಮ" ಎಂಬ ಹೆಸರನ್ನು ಬಳಸುವುದರಲ್ಲಿ ಹೆಚ್ಚು ಅಭಿಮಾನವಿರುವಂತಿದೆ. ಕುಮಾರರಾಮನನ್ನು ಕುರಿತ ಒಂದು ಜನಪದ ರಚನೆಗೆ "ಚೆನ್ನಿಂಗ (ಚೆನ್ನಿಗ?) ರಾಮನ ಹಾಡುಗಬ್ಬ" ಎಂದು ಹೆಸರಿರುವುದಾಗಿ ನನ್ನ ಮಿತ್ರರಾದ ಡಾ॥ ಬಿ. ಎಸ್. ಗದ್ದಗಿಮಠ ಅವರಿಂದ ತಿಳಿದು ಬರುತ್ತದೆ[1] ಇದು ಕುಮಾರರಾಮನ ಚೆಲುವನ್ನು ಒತ್ತಿ ಹೇಳುವುದಕ್ಕಾಗಿ ಒಮ್ಮೊಮ್ಮೆ ಕವಿಗಳು ಆತನನ್ನು "ಚೆನ್ನಿಗ ರಾಮ" ಎಂದು ಸಂಬೋಧಿಸಿರುವುದನ್ನೇ ಹೋಲುತ್ತದೆ. ಪಾಂಚಾಳ ಗಂಗನ ಹಲವಾರು ಪ್ರತಿಗಳನ್ನು ಪರಿಶೀಲಿಸಿದರೆ, ಅಲ್ಲಿ ಆತನ ಸ್ಫುರದ್ರೂಪಕ್ಕೆ ಮರುಳಾದ ರತ್ನಾಜಿಯ ಪ್ರಕರಣದ ಕಥಾಭಾಗದ ಪಾಠವು ಬಹು

---

1. ಶ್ರೀಯುತರ ಪತ್ರ, ೧೨-೯-೧೯೫೮.

ಮಟ್ಟಿಗೆ ಹಾಗೆಯೇ ಉಳಿದುಕೊಂಡು ಬಂದಿರುವುದು ವೇದ್ಯವಾಗುತ್ತದೆ. ಈ ಎಲ್ಲ ಅಂಶಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು, ಕವಿಯ "ಚೆನ್ನರಾಮನ ಕೃತಿ" ಎಂಬ ಪ್ರಯೋಗವನ್ನೇ ಅವಲಂಬಿಸಿ, ಇತರ ಸಾಂಗತ್ಯ ಕೃತಿಗಳಂತೆಯೇ ಪಾಂಚಾಳ ಗಂಗನ ರಚನೆಯನ್ನು "ಚೆನ್ನರಾಮನ ಸಾಂಗತ್ಯ" ಎಂದು ಕರೆದು ಇಲ್ಲಿ ವ್ಯವಹರಿಸಲಾಗಿದೆ.

ಮಹಲಿಂಗಸ್ವಾಮಿಯ ಕೃತಿಯ ಹೆಸರೂ ಅನಿರ್ದಿಷ್ಟವಾಗಿದೆ. ಅದನ್ನು ಪ್ರತಿಮಾಡಿರುವಾತನು, ಪ್ರಾರಂಭದಲ್ಲಿ "ಬಾಲಕೊಮರಾಮನ ಸಾಂಗತ್ಯ ಬರೆವುದಕ್ಕೆ ಶುಭಮಸ್ತು" ಎಂಬುದಾಗಿಯೂ, ಕಡೆಯಲ್ಲಿ "ಬಾಲಕೊಮರಾಮನ ಸಾಂಗತ್ಯ ಶುಕ್ರವಾರ ಅಮೃತಘಳಿಗೆ ಮಧ್ಯಾಹ್ನ ಮುಹೂರ್ತ ಮಂಗಳವು" ಎಂಬುದಾಗಿಯೂ ಸೂಚಿಸಿರುತ್ತಾನೆ.

ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಪ್ರತಿಕಾರನನ್ನೇ ಅವಲಂಬಿಸಿ ಈ ಹೆಸರನ್ನೇ ತಮ್ಮ ಲೇಖನಗಳಲ್ಲಿ ಬಳಸಿರುತ್ತಾರೆ. ಕವಿಯಾದರೋ ಕೃತಿಯಲ್ಲಿ ಎಲ್ಲಿಯೂ ಹೀಗೆ ತಿಳಿಸಿಲ್ಲ. ಆದರೆ, ತನ್ನ ಕಥಾ ನಾಯಕನನ್ನೋ, ಕಥಾವಸ್ತುವನ್ನೋ ಕುರಿತು ಹೇಳುವಾಗ ಕೆಲವೆಡೆಗಳಲ್ಲಿ ಹೀಗೆ ಹೇಳಿರುತ್ತಾನೆ :–

**ರಾಮುಕೃತಿಯು** ಸಾರ ಯಾರು ಮಾಡಿದರೆಂದು
ಆಡರೆ ಜನರು ಲೋಕದೊಳಗೆ
ರೂಢಿಯೊಳು ಕ[ವಿ] ರತ್ನಾ ಹಂಪೆಯ ಚರಪತಿಯು
ಮಾಡಿದರ್ನುಹಲಿಂಗಸ್ವಾಮಿ
(i, ೧೬)

ಕೇಳಬೇಕೆನಲವರ್ಗೆ ಪೇಳುವದು ಯಿನ್ನೊಮ್ಮೆ
**ಬಾಲರಾಮನ ಸತ್ಯಕಥೆಯಾ**
ಪ್ರಾಣಕಾಂತೆಯರುಳಿದು ಪರಸತಿಯರು ತನ್ನ
ಕಾಂತೆ ಕಂಣ್ಮ (?) ಮನದೊಳಗೆ
(iv, ೮)

ನಡಸುವೆ **ರಾಮನ ಕಥಾಸಾರ** ಮುಂದಣ
ನುಡಿಯ ಪಾಲಿಸು ಸರಸ್ವತಿಯೆ
ಬಡವನ ಕಥೆಯೆಂದು ಜರಿಯದೆ ಬಲ್ಲಂತ
ಹಿರಿಯರು ವಲಿದು ಪಾಲಿಪುದು
(vi, ೫)

ಪಾಡುವೆ ಹರಸ್ತುತಿಯ ಬೇಡುವೆ ಶಿವನೊಮ್ಮೆ
ನಾಡ ದೈವಗಳ ನಯನದಲಿ
ನೋಡೇನು ಯಂಬತ್ತು ಪಾದಪಂಕ್ತಿಯನಿಟ್ಟು
**ರಾಮನ ಕೃತಿಯು** ನಡಸುವೆನು
(vii, ೫)

ಕೇಳಬಹುದು ಸತ್ಯ **ಬಾಲರಾಮನ ಕೃತಿಯು**
ಆಲಸ್ಯ ಮಾಡದೆ ಪ್ರವುಡರು

ಮೂಢರಿಗೆ ಮುಂದರ್ಥ ವಡದು ಪೇಳಲು
ಕುರುಡಗೆ ಕೋಲಾ ಪಿಡಿದಂತೆ ಕಾಣುವುದು
(ix, ೨)

**ಸತ್ಯದ ರಾಮನ ಕೃತಿಯ** ಲಾಲಿಸಿ ಕೇಳಿ
ಉತ್ತಮರು ಭಕ್ತಿ ಗ್ಣಾನಿಗಳು
ತಪ್ಪಲ್ಲ ತರಳನು ಸತ್ಯಕ್ಕೆ ನಡದನು
ಕತ್ತಲೆ ಬೆಳಕೆಂದು ತಿಳಿದು
(xii, ೫)

**ರಾಮನ ಕೃತಿಯೆನು** ಪೇಳ್ವೆನು ಲಾಲಿಸಿ
ಆಡರೆ ಕಲಹ ಮಾತುಗಳ
ಮೋಹನ ನಾಸಿಕರಾಗಿ ಕೇಳದೆ ಬಲ್ಲವರು (?)
ಪೇಳುವದು ಮೂಢ ಮೂರ್ಖರಿಗೆ
(xiii, ೬)

ಲಾಲಿಸಿ ಭಕ್ತಿಯಲಿ ಜ್ಞಾನ ಉಳ್ಳವರೊಲಿದು
**ಬಾಲರಾಮನ ಚರಿತೆಯನು**
ಹಾಲೊಳಮೃತ ಜನಿಸಿ ಮೇಲಾದ ತೆರದೊಳು
ಕೇಳುವರ ಕರ್ಣಕಿಂಪಹುದು
(xvi, ೪)

ಈ ಪದ್ಯಗಳಲ್ಲಿ ಕಂಡುಬರುವ "ರಾಮನ ಕೃತಿ", "ರಾಮನ ಕಥಾಸಾರ", "ಬಾಲರಾಮನ ಸತ್ಯಕಥೆ", "ಬಾಲರಾಮನ ಕೃತಿ", "ಬಾಲರಾಮನ ಚರಿತೆ", "ಸತ್ಯರಾಮನ ಕೃತಿ" ಎಂಬ ಮಾತುಗಳು ಮಹಲಿಂಗ ಸ್ವಾಮಿಯ ಕೃತಿಯ ಹೆಸರನ್ನು ಊಹಿಸಲು ಸಹಾಯಕವಾಗಬಲ್ಲವು. ಇವುಗಳಲ್ಲದೆ, ಪ್ರತಿಯೊಂದು ಸಂಧಿಯ ಕಡೆಯಲ್ಲಿಯೂ ಹಂಪೆಯ ವಿರೂಪಾಕ್ಷನನ್ನು ಸ್ತುತಿಸುವಾಗ "ತರಳರಾಮ" ಎಂಬ ಶಬ್ದವನ್ನು ಬಳಸಿರುತ್ತಾನೆ.[1] ಇಲ್ಲಿನ ಪ್ರಯೋಗಗಳಲ್ಲಿ "ಬಾಲರಾಮ" ಎಂಬ ಮಾತು ತುಂಬ ವಿಶಿಷ್ಟವಾಗಿದೆ. ಬಹುಶಃ ಈ ಕಾರಣಕ್ಕಾಗಿಯೇ ಪ್ರತಿಕಾರನು "ಬಾಲಕೊಮರಾಮನ ಸಾಂಗತ್ಯ"- ಎಂಬ ಅಪೂರ್ವವಾದ ಹೆಸರನ್ನು ಬಳಸಿರಬಹುದು. ಈ ಎಲ್ಲ ಸೂಚನೆಗಳನ್ನೂ ಗಮನಿಸಿ, ಮಹಲಿಂಗಸ್ವಾಮಿಯ ಕೃತಿಯನು "ಬಾಲರಾಮನ ಸಾಂಗತ್ಯ" ಎಂದು ಕರೆದರೆ ಅನುಚಿತವಾಗಲಾರದು. ಪ್ರಕೃತದಲ್ಲಿ ಈ ಹೆಸರಿನಿಂದಲೇ ಈ ಕೃತಿಯನ್ನು ಮುಂದೆ ನಿರ್ದೇಶಿಸಲಾಗಿದೆ.

## ಕವಿಗಳ ಕಾಲ ವಿಚಾರ

ನಂಜುಂಡನ ವಿಷಯವನ್ನು ಪ್ರಸ್ತಾಪಿಸುತ್ತ ಬಿ. ಎಲ್. ರೈಸ್ ಅವರು "ಕಂಠೀರವ ನರಸರಾಜ ಚರಿತ್ರೆ", "ಕಪೋತವಾಕ್ಯ" ಗಳನ್ನು ಬರೆದ ಕವಿಗಳೂ ಈತನೂ ಒಬ್ಬನೇ ಇರಬಹುದೆ ಎಂದು ಭಾವಿಸಿ

1. ಕೃತಿಯ ಪ್ರಾರಂಭದಲ್ಲಿ ಕಂದಪದ್ಯವೆಂಬ ಅಂಕಿತದಲ್ಲಿ ಒಂದು ಅಸಮರ್ಪಕವಾದ ರಚನೆಯಿದೆ. ಅದರಲ್ಲಿ "ರಾಮನಾಥನ ಪ್ರೇಮದ ಚರಿತೆಯ ಹಿತಮಾನವಿಲ್ಲದೆ ಪೇಳುವೆ" ಎಂಬ ಪಂಕ್ತಿಯೊಂದು ಇದೆ. ಈ ಪದ್ಯವು ಸಂದಿಗ್ಧವಾಗಿರುವುದರಿಂದ ಮೇಲೆ ಉದಾಹರಿಸಿಲ್ಲ.

ಈತನ ಕಾಲವನ್ನು ೧೬೫೦ ಎಂದು ಸೂಚಿಸಿರುತ್ತಾರೆ.[1] ಇಲ್ಲಿ ಕವಿಗಳ ಹೆಸರಿನ ಸಾಮ್ಯದಿಂದ ಈ ಕಲ್ಪನೆಗೆ ಅವಕಾಶವಾಗಿದೆ. "ಕಂಠೀರವ ನರಸರಾಜ ವಿಜಯ" ವನ್ನು ಬರೆದವನು ಗೋವಿಂದವೈದ್ಯನೆಂದೂ, ಅದನ್ನು ಆಸ್ಥಾನದಲ್ಲಿ ಹಾಡಿದ ಗಮಕಿ ಭಾರತಿನಂಜನೆಂದೂ ಈಗ ತಿಳಿದುಬಂದಿರುತ್ತದೆ.[2] ಗೋವಿಂದ ವೈದ್ಯನ ಕಾಲ ೧೬೪೮. "ಕಪೋತವಾಕ್ಯ" ವನ್ನು ಬರೆದ ನಂಜಯ್ಯನು ಬೇರೆಯೆಂದೂ, ಈತನ ಕಾಲ ೧೭೦೦ ಎಂದೂ ಕವಿಚರಿತೆಕಾರರು ಊಹಿಸಿರುತ್ತಾರೆ.[3] ಈತನು ಚಿತ್ರದುರ್ಗದವನೆಂದೂ, ಈ ಗ್ರಂಥದ ರಚನೆಯ ಕಾಲ ೧೮ ನೆಯ ಶತಮಾನದ ಪ್ರಥಮಪಾದ ಎಂದೂ ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಅಭಿಪ್ರಾಯಪಡುತ್ತಾರೆ.[4] ಆದ್ದರಿಂದ ನಂಜುಂಡನ ಕಾಲದ ಬಗ್ಗೆ ಬಿ.ಎಲ್. ರೈಸ್ ಅವರ ಈ ಅಭಿಪ್ರಾಯ ಸಮರ್ಪಕವಾಗಿಲ್ಲ. ಇನ್ನು ಗ್ರಂಥದ ವಿಷಯವನ್ನು ಪ್ರಸ್ತಾಪಿಸುತ್ತ, ಶ್ರೀಯುತರು ಇದು ವಿಜಯನಗರದ ಸಮೀಪದಲ್ಲಿರುವ ಹೊಸದುರ್ಗದ ಕಂಪಿಲರಾಯನ ಮಗ ಕುಮಾರರಾಮನ ಚರಿತೆಯೆಂದೂ, ಈತನು ಓರುಂಗಲ್ಲಿನ ಪ್ರತಾಪರುದ್ರನ ಕೈಕೆಳಗೆ ಸೈನ್ಯಾಧಿಕಾರಿಯಾಗಿದ್ದನೆಂದೂ ಸೂಚಿಸಿರುತ್ತಾರೆ.

ಶ್ರೀ. ಎಸ್.ಜಿ. ನರಸಿಂಹಾಚಾರ್ಯರು ನಂಜುಂಡನನ್ನು ಕುರಿತು "ಹದಿನೇಳನೆಯ ಶತಮಾನದೊಳು ನಂಜುಂಡಕವಿಯೆಂಬ ಗ್ರಂಥಕರ್ತನು "ಪರದಾರ ಸೋದರ ರಾಮನಾಥನ ಚರಿತ" ವನ್ನು ಬರೆದನು........ ಕುಮಾರರಾಮನೇ ಈ ಗ್ರಂಥಕ್ಕೆ ಕಥಾನಾಯಕ........ಈತನ ಆಶ್ರಯವನ್ನು ನಂಜುಂಡಕವಿಯು ಹೊಂದಿ ಅವನ ಯಶಸ್ಸನ್ನು ಈ ಗ್ರಂಥದಲ್ಲಿ ಕೊಂಡಾಡಿರುವನು........" ಎಂದು ಹೇಳಿರುತ್ತಾರೆ.[5] ಈ ಟಿಪ್ಪಣಿಯಲ್ಲಿ ನಂಜುಂಡನೂ ಕುಮಾರರಾಮನೂ ಸಮಕಾಲೀನರೆಂಬುದಕ್ಕೆ ಲೇಖಕರು ಯಾವ ಆಧಾರವನ್ನೂ ಸೂಚಿಸಿಲ್ಲ. ಶ್ರೀಯುತರು ಬಿ. ಎಲ್. ರೈಸ್ ಅವರು ಸೂಚಿಸಿರುವಂತೆಯೇ ಕುಮಾರರಾಮನು "ದಕ್ಷಿಣದೇಶದಲ್ಲಿ ಪ್ರಸಿದ್ಧವಾಗಿದ್ದ ಓರುಗಲ್ಲು ರಾಜಧಾನಿಯಲ್ಲಿ ಆಗ ಆಳುತ್ತಿದ್ದ ಪ್ರತಾಪರುದ್ರದೇವನ ಪಡೆಯಲ್ಲಿ ಸೈನ್ಯಾಧಿಕಾರಿ ಯಾಗಿದ್ದು ಕೊಂಡು ದೊರೆಯ ಪ್ರೀತಿಗೆ ಪಾತ್ರನಾಗಿ ರಾಜ್ಯವನ್ನು ನಾಲ್ಕು ಕಡೆಯಲ್ಲಿಯೂ ಹೆಚ್ಚಿಸುತ್ತಿದ್ದನು" ಎಂದು ಹೇಳಿರುತ್ತಾರೆ.[6]

ಇಲ್ಲಿನ ಹೇಳಿಕೆಗಳು ಪರಸ್ಪರ ವಿರುದ್ಧವಾಗಿವೆ. ಕುಮಾರರಾಮನೂ, ಪ್ರತಾಪರುದ್ರನೂ ಸಮಕಾಲೀನ ರೆಂಬ ಅಭಿಪ್ರಾಯವು ಪ್ರಕೃತ ಕಾವ್ಯಗಳಿಂದ ಮನವರಿಕೆಯಾಗುವುದಲ್ಲದೆ ಸಂಸ್ಕೃತದ 'ವಿದ್ಯಾರಣ್ಯ ಕಾಲ ಜ್ಞಾನ'[7] ತೆಲುಗಿನ ಶ್ರೀನಾಥನ 'ಭೀಮೇಶ್ವರ ಪುರಾಣ,'[8] 'ದ್ವಿಪಾದ ಬಾಲಭಾಗವತ'[9] ಮೊದಲಾದ ಇತರ ರಚನೆಗಳಿಂದಲೂ ತಿಳಿದುಬರುತ್ತದೆ. ಕಾಕತೀಯ ವಂಶಾವಳಿಯಲ್ಲಿ ಸುಪ್ರಸಿದ್ಧನೂ, ಕಡೆಯ ದೊರೆಯೂ ಆದ ಈ ಪ್ರತಾಪರುದ್ರನ ಕಾಲ ಕ್ರಿ.ಶ. ೧೨೯೬–೧೩೨೩.[10] ಆದ್ದರಿಂದ ಕುಮಾರರಾಮನನ್ನು ೧೭ ನೆಯ ಶತಮಾನಕ್ಕೆ ಸೇರಿದವನೆಂದು ಹೇಳಲು ಅವಕಾಶವಿಲ್ಲ.

ಇನ್ನು ನಂಜುಂಡನಾದರೋ ತನ್ನ ಕೃತಿಯ ವಸ್ತುವಿನ ವಿಚಾರವನ್ನು ಪ್ರಸ್ತಾಪಿಸುತ್ತ "ಈ ರಾಮನಾಥನ ಸಂದ ಕಥೆಯನುಸುರಿದೆನು (I, ೬೪)" ಎಂದು ಹೇಳಿರುವುದಲ್ಲದೆ ತನಗೆ ದೊರೆತ ಕಥಾಮೂಲವನ್ನೂ

---

1. ಕರ್ಣಾಟಕ ಭಾಷಾಭೂಷಣ, ಇಂಗ್ಲಿಷ್ ಮುನ್ನುಡಿ, ಪು. xxx.
2. ಕಂಠೀರವ ನರಸರಾಜ ವಿಜಯ, ಪು. ೪೯೮.
3. ಕಚ, ಸಂ. ii, ಪು. ೫೪೯.
4. ಕಪೋತವಾಕ್ಯ, ಪರಿಚಯ, ಪು. ೪.
5. ಪದ್ಯಸಾರ, ಭಾಗ ೧, ಪು. ೧೪, ಪ್ರ. ೧೯೦೩.
6. ಅದೇ, ಪು. ೧೪.
7. MAR, 1932, pp. 100–123.
8. Quoted by Dr. M. Rama Rao in his 'The Kakatiya's of Warangal,' p. 94.
9. FSVH, Vol. II, P.I.
10. The Kakatiyas of Warangal, P. 86.

ಬಹು ಸಂಗ್ರಹವಾಗಿ ತಿಳಿಸಿರುತ್ತಾನೆ (I, ೮೪-೮೭). ಈ ಮಾತುಗಳನ್ನು ಗಮನಿಸಿದರೆ ನಂಜುಂಡನ ಕಾಲಕ್ಕಾಗಲೇ ಕುಮಾರರಾಮನ ವೃತ್ತಾಂತವು ಸಾಕಾಡಷ್ಟು ಪ್ರಾಚೀನವಾಗಿತ್ತೆಂದೂ, ಅದನ್ನು ಅವನು ತನ್ನ ಕಾವ್ಯಕ್ಕೆ ಬಳಸಿಕೊಂಡಿದ್ದಾನೆಂದೂ ಸ್ಪವಿದಿತವಾಗುತ್ತದೆ. ಕಾವ್ಯದಲ್ಲಿ ಪ್ರಾಸಂಗಿಕವಾಗಿ ಕಂಡುಬರುವ ಕೆಲವು ಐತಿಹಾಸಿಕ ಅಸಾಂಗತ್ಯಗಳೂ ಕವಿಯೂ ಕಥಾನಾಯಕನೂ ಸಮಕಾಲೀನರಲ್ಲವೆನ್ನುವುದನ್ನು ದೃಢಪಡಿಸುತ್ತವೆ.

ಇದಲ್ಲದೆ, ಕ್ರಿ.ಶ. ಸು. ೧೫೫೦ರಲ್ಲಿದ್ದ ಪದ್ಮರಸನೆಂಬ ಮತ್ತೊಬ್ಬ ಸಾಂಗತ್ಯ ಕವಿ ತನ್ನ "ಶೃಂಗಾರಕಥೆ" ಯಲ್ಲಿ ಪೂರ್ವಕವಿಕೃತ ಗ್ರಂಥಗಳನ್ನು ಸ್ಮರಿಸುವಾಗ "ಮದನತಿಲಕ, ಮಲ್ಲಿಕಾರ್ಜುನವಿಜಯ, ಭರತೇಶ್ವರ ಚರಿತೆ, ಕುಮಾರರಾಮನ ಕಥೆ" ಗಳ ಹೆಸರುಗಳನ್ನು ಹೇಳಿರುವುದಾಗಿ ಕವಿಚರಿತೆಕಾರರು ತಿಳಿಸಿರುತ್ತಾರೆ.[1] ಇಲ್ಲಿ "ಭರತೇಶ್ವರ ಚರಿತೆ"ಯ ಪಂಕ್ತಿಯಲ್ಲಿ ನಿರ್ದೇಶಿಸಿರುವ "ಕುಮಾರರಾಮನ ಕಥೆ" ನಂಜುಂಡನದೇ ಇರಬೇಕು. ಹಾಗಿದ್ದಲ್ಲಿ ನಂಜುಂಡನು ೧೬ನೆಯ ಶತಮಾನದ ಅವಧಿಯೊಳಗಾಗಿ ಜೀವಿಸಿದ್ದಿರಬೇಕೆಂದು ವ್ಯಕ್ತವಾಗುತ್ತದೆ.

ಪ್ರತಾಪರುದ್ರನಿಗೂ ಕಂಪಿಲನಿಗೂ ಉದ್ದಕ್ಕೂ ವೈರವಿತ್ತೆಂನು ಪ್ರಕೃತ ಕನ್ನಡ ಮತ್ತು ತೆಲುಗಿನ ಕವಿಗಳ ಹೇಳಿಕೆಗಳಲ್ಲಿ ವ್ಯಕ್ತವಾಗುತ್ತದೆ.[2] ಆದ್ದರಿಂದ ಕುಮಾರರಾಮನು ಆ ರಾಜನ ಆಶ್ರಯದಲ್ಲಿ ಸೈನ್ಯಾಧಿಕಾರಿಯಾಗಿದ್ದನೆಂಬ ಅಭಿಪ್ರಾಯವೂ ಸಮಂಜಸವೆನ್ನಿಸುವುದಿಲ್ಲ.

ಒಟ್ಟಿನಲ್ಲಿ ಬಿ. ಎಲ್. ರೈಸ್ ಮತ್ತು ಶ್ರೀ. ಎಸ್. ಜಿ. ನರಸಿಂಹಾಚಾರ್ಯರು ಕವಿ ವಿಚಾರವಾಗಿ ಹೇಳಿರುವ ಯಾವ ಸಂಗತಿಯೂ ಒಪ್ಪಿಗೆಯಾಗುವಂತಿಲ್ಲ.

ಶ್ರೀ. ರಾ. ನರಸಿಂಹಾಚಾರ್ಯರು ನಂಜುಂಡನನ್ನು ಕುರಿತು ಹೀಗೆ ಹೇಳಿರುತ್ತಾರೆ:

"ಇವನ ಪಿತಾಮಹನು ಯದುಕುಲಾಮಾತ್ಯವಂಶೋದ್ಭೂತನಾದ ಪ್ರಭುಕುಲಾಗ್ರಗಣ್ಯ ವಿಜಯ ನೃಪಾಲ; ತಂದೆ 'ಅಂಡದ ಜಲ್ಲಿಯನಾನೆಯ ನಿಗಳಕೆ ಕಂಡರಿಸಿದ ಮಾವಣ್ಣದ ಬೊಂಬೆಯ ಕಂಡು ಮನದೊಳುಱೆ ಮಚ್ಚರಿಸುವ ಮಾಱಾಂತ ರಾವುತರ ಗಂಡನೆನಿಪ' ಮಾಧವ; ಹಿರಿಯಯ್ಯನು ತುರಗದಂಡಕೆ ಬಲು ಜಲ್ಲಿಯ ಕಟ್ಟಿದ ಬಿರುದುಳ್ಳ ರಾವುತ; ಕಿರಿಯ ತಂದೆ ವಿಜಯ: ಈ ವಿಜಯನು 'ಧರಣಿಯುಱೆಯೆ ಧುರದೊಳಗೆ, ರಾಯದಳವ ಕಾಣುತ ತನ್ನ ಪತಿ ನಂಜರಾಯನ ಮುಂದೆ ಕುದುರೆಯ ರಾಯರಾವುತರ ಮೇಲೇಱೆ ತಿವಿದು ಸುರರಾಯನಗರಿಗೈದಿದನು' ಎನ್ನುತ್ತಾನೆ. 'ಚೆಂಗಳನಾಡ ನಾಲ್ವತ್ತು ನಾಯಕಗಜಸಿಂಹವೆನಿಪ ಮಾಧವನ ಅಂಗೋದ್ಭವ ನಂಜುಂಡ, ಯದುಕುಲಾಮಾತ್ಯರೆಂದೆಂಬ ಕುಲಾಗತವಿದಿತ ಬಿರುದನಾಂತೆಸೆವ ಚದುರ ಮಾಧವನಾತ್ಮಜ ನಂಜುಂಡ, ಅಂಡದ ಜಲ್ಲಿಯಾನೆಯ ನಿಗಳಕ್ಕೆ ಮಾರ್ಕೊಂಡು ಮಲೆವ ರಾವುತರ ಹಿಂಡಿನ ಗಂಡ ಮಾಧವನಾತ್ಮಜ ನಂಜುಂಡ, ವಾಗ್ವೈಖರೀವಲ್ಲಭ ಕವಿತಾವನಿತಾವಶೀಕರಣಮಂತ್ರಸಿದ್ಧ ಪ್ರಭು ಕುಲಾಗ್ರಗಣ್ಯ ವಿಜಯನೃಪಾಲಪುತ್ರ ಮಾಧವಾತ್ಮಜ ನಂಜುಂಡ' ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇದರಿಂದ ಈತನು ಜಯನೃಪಕಾವ್ಯವೇ ಮೊದಲಾದ ಗ್ರಂಥಗಳನ್ನು ಬರೆದ ಮಂಗರಸನ (೧೫೦೮) ಸಹೋದರನ ಮಗನೆಂದು ವ್ಯಕ್ತವಾಗುತ್ತದೆ............ಇವನ ಚಿಕ್ಕಪ್ಪನಾದ ವಿಜಯನು ತನ್ನ ಪತಿ ನಂಜರಾಯನ ಸಮಕ್ಷದಲ್ಲಿ ಯುದ್ಧದಲ್ಲಿ ಮಡಿದಂತೆ ಹಿಂದೆ ಹೇಳಿದೆ. ಈ ನಂಜರಾಜನು ೧೫೦೭ ರಿಂದ ೧೫೪೩ ರವರೆಗೆ ಆಳಿದ ಚೆಂಗಾಳ್ವ ನಂಜರಾಜನಾಗಿರಬೇಕು. ಈ ಕಾರಣಗಳಿಂದ ಕವಿಯ ಕಾಲವು ಸುಮಾರು ೧೫೨೫ ಆಗಬಹುದು."[3]

---

1. ಕಚ. ಸಂ. ii, ಪು. ೩೧೫.
2. The Kakatiyas of Warangal, P. 86.
3. ಕಚ. ಸಂ. ii, ಪು. ೨೦೨-೨೦೩.

ನಂಜುಂಡನ ಕೃತಿಯನ್ನು ಪರಿಚಯಮಾಡಿಕೊಡುತ್ತ ಮೈಸೂರು ಪುರಾತತ್ವ ಇಲಾಖೆಯ ವರದಿಯ ಸಂಪಾದಕರು, ಮಂಗರಸನ ವಂಶಾವಳಿಗೆ ಸಂಬಂಧಿಸಿದ ಇತ್ತೀಚಿನ ಬರೆಹವೊಂದನ್ನು ಅವಲಂಬಿಸಿ, ನಂಜುಂಡನು ಮೈಸೂರಿನ ರಾಜಒಡೆಯರ (೧೫೭೮–೧೬೧೭) ಸೇನಾನಿಯಿಂದ ಯುದ್ಧದಲ್ಲಿ ಹತನಾದನೆಂದು ತಿಳಿದು ಬರುವುದರಿಂದ ಈತನು ತನ್ನ ಕೃತಿಯನ್ನು ೧೫೭೦ ರಲ್ಲಿ ರಚಿಸಿರಬಹುದೆಂದು ಹೇಳಿರುತ್ತಾರೆ.[1] ಇದೇ ಸಂದರ್ಭದಲ್ಲಿಯೇ ನಂಜುಂಡನ ಪದ್ಯವೊಂದರಲ್ಲಿ ಬರುವ (I, ೬೫) "ಹಿರಿಯಯ್ಯ" ಎಂಬ ಮಾತು ಆತನ ದೊಡ್ಡಪ್ಪನಾದ ಮಂಗರಸನನ್ನು ಕುರಿತುದಾಗಿರಬೇಕೆಂದೂ ಸೂಚಿಸಿರುತ್ತಾರೆ.[2]

ಕವಿಚರಿತೆಕಾರರೂ ಪುರಾತತ್ವ ಇಲಾಖೆಯ ವರದಿಕಾರರೂ ಮಂಗರಸನಿಗೂ ನಂಜುಂಡನಿಗೂ ಇರುವ ಬಾಂಧವ್ಯವನ್ನು ಕುರಿತು ಪ್ರಸ್ತಾಪಿಸಿರುವುದರಿಂದ ಈ ಬಗ್ಗೆ ನಮಗೆ ದೊರೆಯುವ ಕೆಲವು ವಿವರಗಳನ್ನು ಮೊದಲು ಇಲ್ಲಿ ಸಂಗ್ರಹಿಸಬಹುದು.

(i) ಮಂಗರಸನು ತನ್ನ ಕೃತಿಗಳಲ್ಲಿ ತನ್ನ ವಂಶಾವಳಿಯನ್ನು ಕುರಿತು ಹೀಗೆ ಹೇಳಿಕೊಂಡಿರುವನು :—

(a) "ಜಯನೃಪ ಕಾವ್ಯ" :— ತನ್ನ ತಂದೆಯಾದ ವಿಜಯೇಂದ್ರನು "ದ್ವಾರಾವತಿಯ ಪುರಾಧೀಶ್ವರ ಲಕ್ಷ್ಮೀರಮಣಾನ್ವಯ ಚಂಗಾಳ್ವ ಮಹೀನಾರೀಧವ ನಿಜಸಚಿವರುಚಿರಕುಲದುಗ್ಧಾಂಭೋನಿಧಿಗೆ ತಾರಾತರುಣೀವಲ್ಲಭ" ನೆಂದೂ, "ಹೊಯ್ಸಳ ದೇಶದ ಮಧ್ಯದ ಹೊಸವೃತ್ತಿಯ ನಾಡಾ ಅಲಘು ಪ್ರಿಯದಿಂ ಪರಿಪಾಲಿಪನುಜ್ವಲತೇಜ" ನೆಂದೂ, "ಧಾತುಪುರಾಧೀಶಂ ಲಲನಾಮಾಧವಸುತಸದೃಶಂ ಮಾಧವಸುತ "ನೆಂದೂ ಹೇಳಿರುವನು.

(ಸಂ. i, ಪ. ೧೩, ೧೪.)

(b) "ನೇಮಿಜಿನೇಶ ಸಂಗತಿ" :— "ಜನನುತ ಕಲ್ಲಹಳ್ಳಿಯ ನಾಡಿನ ಪ್ರಭು ವಿನಯವನಧಿಚಂದ್ರಮನು ಮನುನಿಭಚರಿತ ಮಾಧವಸುತ ಮಾಧವತನುಜ ಸದೃಶ ವಿಜಯೇಂದ್ರ"ನು ತನ್ನ ತಂದೆಯೆಂದು ಕೊಂಡಾಡಿರುವನು.

(ಪೀಠಿಕಾಸಂಧಿ, ಪ. ೪೯)

(c) "ಸಮ್ಯಕ್ತ್ವ ಕೌಮುದಿ" :— ತಾನು "ಕಲ್ಲಹಳ್ಳಿಯ ಮಹಾಪ್ರಭು ವಿಜಯ ಭೂವಧೂವಲ್ಲಭನ ತನುಜಾತ ಜಿನಪದಾಂಬುಜಭೃಂಗನೆಲ್ಲ ಕಲೆಯಲ್ಲಿ ಬಲ್ಲಿದನು" ಎಂದು ಹೇಳಿಕೊಂಡಿದ್ದಾನೆ.

(ಸಂ. i. ಪ. ೯)

ಈ ಹೇಳಿಕೆಗಳ ಆಧಾರದ ಮೇಲೆ, ಮಂಗರಸನ ಪಿತಾಮಹನು ಮಾಧವನೆಂದೂ, ತಂದೆ ಕಲ್ಲಹಳ್ಳಿಯ ಪ್ರಭುವಾದ ವಿಜಯೇಂದ್ರನೆಂದೂ, ಈ ಮನೆತನದವರು ಚಂಗಾಳ್ವ ಮಹಾರಾಜರ ಸಚಿವಕುಲಕ್ಕೆ ಸೇರಿದವರೆಂದೂ ಸ್ಪಷ್ಟವಾಗುತ್ತದೆ.

ನಂಜುಂಡನೂ ತನ್ನ ಮನೆತನದ ವಿಚಾರವನ್ನು ಈ ಕೆಳಗೆ ಕಂಡಂತೆ ಹೇಳಿಕೊಂಡಿರುತ್ತಾನೆ:—

ಅಂಡದ ಝುಲ್ಲಿಯಾನೆಯ ನಿಗಳಕೆ ಮಾರ್ಕೊಂಡು ಮಲೆವ ರಾವುತರ |
ಹಿಂಡಿನ ಗಂಡ ಮಾಧವನಾತ್ಮಜ ನಂಜುಂಡ ನಾನಿದನುಸುರಿದೆನು ||

ಚಂಗಳ ನಾಡ ನಾಲ್ವತ್ತು ನಾಯಕಗಜಸಿಂಗವೆನಿಪ ಮಾಧವನ |
ಅಂಗೋದ್ಭವ ನಂಜುಂಡ ನಾನಿದನು ಮನಂಗೊಳೆ ಪೇಳ್ದೆ ರಸಿಕರ ||

---

1. MAR, 1929, p. 37.
2. Ibid, p. 37, f. n.

ಯದುಕುಲಾಮಾತ್ಯರೆಂದೆಂಬ ಕುಲಾಗತವಿದಿತ ಬಿರುದನಾಂತೆಸೆವ |
ಚದುರ ಮಾಧವನಾತ್ಮಜ ನಂಜುಂಡ ನಾನೊದವಿ ಪೇಳಿದೆನೀ ಕೃತಿಯ ||

(i, ೬೮-೭೦)

ಈತನನ್ನು ಕಾವ್ಯ ಬರೆಯಲು ಪ್ರೇರಿಸಿದವರು,

ತುರಗ ದಂಡಕೆ ಬಲು ಝಲ್ಲಿಯ ಕಟ್ಟಿದ ಬಿರುದುಳ್ಳ ರಾವುತ ನಿಮ್ಮ |
ಹಿರಿಯಯ್ಯ ನಿಮ್ಮ ಕಿಱಿಯ ತಂದೆ ವಿಜಯನೀ ಧರಣಿಯಱಿಯೆ ಧುರದೊಳಗೆ ||
ರಾಯದಳವ ಕಾಣುತ ತನ್ನ ಪತಿ ನಂಜರಾಯನ ಮುಂದೆ ಕುದುರೆಯ |
ರಾಯರಾವುತರ ಮೇಲೇಱಿ ತಿವಿದು ಸುರರಾಯನಗರಿಗೆಯ್ದಿದನು ||

(i, ೬೫-೬೬)

ಎಂದು ಕವಿಯ ಹಿರಿಯರನ್ನು ಹೊಗಳಿ ಹುರಿದುಂಬಿಸುತ್ತಾರೆ.

ಆಶ್ವಾಸಗಳ ಅಂತ್ಯದಲ್ಲಿ ಒಮ್ಮೊಮ್ಮೆ ಬರುವ ಪದ್ಯವೊಂದು ಈ ರೀತಿಯಿದೆ :—

ಇದು ಯದುಕುಲಾಮಾತ್ಯ ವಂಶದೊಳಗುದಿಯಿಸಿದ
ಸದಮಳ ಯಶೋವಿರಾಜಿತ ವಿಜಯನೃಪತನುಜ
ವಿದಿತ ವಿತರಣ ವಿನಯ ವಿಕ್ರಮ ವಿಭಾಸಿಯೆಂದೆನಿಪ ಮಾಧವನಾಮನ |
ಉದರಾಬ್ಧಿಭವಚಂದ್ರ ನಂಜುಂಡ ........

ಗ್ರಂಥದ ಸಮಾಪ್ತಿವಾಕ್ಯದಲ್ಲಿ ಹೀಗಿದೆ :—

"............... ವಾಗ್ವೈಖರೀವಲ್ಲಭ ಕವಿತಾವನಿತಾವಶೀಕರಣವಶ್ಯಮಂತ್ರಪ್ರಸಿದ್ಧ ಪ್ರಭು ಕುಲಾಗ್ರಗಣ್ಯ ವಿಜಯನೃಪಾಲಪುತ್ರ ಮಾಧವಾತ್ಮಜ ನಂಜುಂಡ ..........."

ಈ ಹೇಳಿಕೆಗಳ ಮೂಲಕ, ನಂಜುಂಡನ ಪಿತಾಮಹನ ಹೆಸರು ವಿಜಯನೃಪಾಲನೆಂದೂ, ತಂದೆಯ ಹೆಸರು ಮಾಧವನೆಂದೂ, ಚಿಕ್ಕಪ್ಪನ ಹೆಸರು ವಿಜಯನೆಂದೂ, ಈತನ ಮನೆತನದವರೂ ಚಂಗಾಳ್ವರ ಸಚಿವ ಕುಲಕ್ಕೆ ಸೇರಿದವರೆಂದೂ ತಿಳಿದುಬರುತ್ತವೆ. ಈ ವಿವರಗಳನ್ನು ಶ್ರೀ. ರಾ. ನರಸಿಂಹಾಚಾರ್ಯರೂ ಗಮನಿಸಿರುವುದನ್ನು ಈಗಾಗಲೇ ಕಂಡಿರುತ್ತೇವೆ.

ಇಬ್ಬರು ಕವಿಗಳೂ ಒಂದೇ ಮನೆತನಕ್ಕೆ ಸೇರಿದವರೆಂದು ಈ ವಿವರಗಳಿಂದ ಸ್ಪಷ್ಟವಾಗುತ್ತದೆ. ಇಬ್ಬರೂ ವಿಜಯನೆಂಬಾತನನ್ನು "ಭೂವಧೂವಲ್ಲಭ"ನೆಂದೋ "ನೃಪಾಲ"ನೆಂದೋ ಕರೆದಿರುವುದರಿಂದ ಈ ಸ್ತುತಿ ಒಬ್ಬನನ್ನೇ ಕುರಿತುದಾಗಿರಬೇಕು. ವಾಸ್ತವೆಯಲ್ಲಿ ಮಂಗರಸನ ತಂದೆಯೂ, ನಂಜುಂಡನ ತಾತನೂ ಒಬ್ಬನೇ ಇರಬೇಕೆಂದು ವಿದಿತವಾಗುತ್ತದೆ. (ನಂಜುಂಡನು ಕಲ್ಲಹಳ್ಳಿಯ ಹೆಸರನ್ನು ಏಕೆ ಹೇಳಲ್ಲವೋ ತಿಳಿಯದು.)

(ii) ಮಂಗರಸನಿಗೂ ನಂಜುಂಡನಿಗೂ ಇರುವ ಬಾಂಧವ್ಯವನ್ನು ಕುರಿತು ಕಾವ್ಯಗಳಲ್ಲಿ ನೇರವಾಗಿ ಏನನ್ನೂ ಹೇಳದಿದ್ದರೂ, ಮಂಗರಸನಿಗೆ ಸಂಬಂಧಿಸಿದ ಉಲ್ಲೇಖವೊಂದರಲ್ಲಿ ಇದರ ಸೂಚನೆ ಕಂಡುಬರುತ್ತದೆ. ಮೈಸೂರು ಪುರಾತತ್ವ ಇಲಾಖೆಯ ೧೯೩೫ ನೆಯ ಇಸವಿಯ ವರದಿಯಲ್ಲಿ ಮಂಗರಸನ ಮನೆತನಕ್ಕೆ ಸಂಬಂಧಿಸಿದ ನಾಲ್ಕು ಲಿಖಿತಗಳನ್ನು ಪರಿಚಯಮಾಡಿಕೊಡಲಾಗಿದೆ (ಪು. ೧೪೮-೧೬೬). ಅವುಗಳಲ್ಲಿ ಮೊದಲನೆಯದನ್ನು ಶ್ರೀ. ಶಾಂತಿರಾಜಶಾಸ್ತ್ರಿಗಳು ಪ್ರಕಟಿಸಿರುವ "ನೇಮಿಜಿನೇಶ ಸಂಗತಿ"ಯ ಕವಿಪರಿಚಯದಲ್ಲಿಯೂ ಕೊಡಲಾಗಿದೆ (ಪು. xi-xii). ನಾಲ್ಕನೆಯ ಲಿಖಿತದಲ್ಲಿ ಮಂಗರಸನ ಪೂರ್ವಜರ ವಿವರಗಳನ್ನು ಹೇಳಲಾಗಿದೆ. ಇಲ್ಲಿನ ಸಂಗತಿಗಳು ತುಂಬ ತೊಡಕಾಗಿವೆ. ಇತ್ತೀಚಿನ ರಚನೆಯಾದ್ದರಿಂದ ಹೀಗಾಗಿ

ರಬಹುದು. ಮಂಗರಸನ ತಂದೆಯಾದ ವಿಜಯರಾಜ ಒಡೆಯರ್ ಎಂಬಾತನು ರಾಯರಾವುತರ ಮೇಲೆ ಹೋರಾಡಿ ಸತ್ತನೆಂದೂ ಮಂಗರಸನು ತನ್ನ ಮಗನಾದ ಜಯರಾಜೇಶ್ವರನನ್ನು ತನ್ನ ದಾಯಾದಿಯಾದ (uncle's son) ನಂಜುಂಡರಸನ ಪೋಷಣೆಗೆ ಒಪ್ಪಿಸಿ ತಾನು ಸಂನ್ಯಾಸಿಯಾದನೆಂದೂ ತಿಳಿದುಬರುತ್ತದೆ. ಅಲ್ಲದೆ, ನಂಜುಂಡರಸನು ರಾಜ್ಯವಾಳುತ್ತಿರುವಾಗ ಮೈಸೂರಿನ ರಾಜಒಡೆಯರ ಸೇನಾನಿಯಾದ ನಂದಿನಾಥಯ್ಯನು ದಂಡೆತ್ತಿ ಬಂದನೆಂದೂ, ಆ ಕಾಳಗದಲ್ಲಿ ನಂಜುಂಡರಸನು ಹತನಾದನೆಂದೂ ಹೇಳಿದೆ (ಪು. ೧೬).

ಈ ಮೇಲೆ ಹೇಳಿರುವ ಸಂಗತಿಗಳು ಕಾರಣಾಂತರಗಳಿಂದ ವ್ಯತ್ಯಸ್ತವಾಗಿರುವಂತೆ ತೋರುತ್ತದೆ. ಮಂಗರಸನ ಹೇಳಿಕೆಯಲ್ಲಿ ಎಲ್ಲಿಯೂ ತನ್ನ ತಂದೆಯಾದ ವಿಜಯೇಂದ್ರನು ರಾಯರಾವುತರ ಮೇಲೆ ಹೋರಾಡಿ ಸತ್ತನೆಂಬ ವೃತ್ತಾಂತವು ಬರುವುದಿಲ್ಲ. ನಂಜುಂಡನಾದರೋ ಈ ಪ್ರಸ್ತಾಪವನ್ನು ಮಾಡುತ್ತ ತನ್ನ ಚಿಕ್ಕಪ್ಪನಾದ ವಿಜಯನು ಹೀಗೆ ಸತ್ತದ್ದನ್ನು ಇತರರ ಮೂಲಕ ಹೇಳಿಸಿರುತ್ತಾನೆ. ಈ ವಿಜಯನು ರಾಜನಾಗಿದ್ದನೆಂದು ನಂಜುಂಡನು ಹೇಳಿಲ್ಲ. ಆದ್ದರಿಂದ, ಮಂಗರಸನ ತಂದೆಯೂ, ನಂಜುಂಡನ ತಾತನೂ ಆದ ವಿಜಯನೃಪಾಲನಿಗೂ, ನಂಜುಂಡನ ಚಿಕ್ಕಪ್ಪನಾದ ವಿಜಯನಿಗೂ ಇಲ್ಲಿ ವಿಷಯ ಪಲ್ಲಟವಾಗಿರುವಂತಿದೆ.

ಎರಡನೆಯದಾಗಿ, ರಾಜ ಒಡೆಯರು ೧೬೧೭ ರಲ್ಲಿ ಪಿರಿಯಾಪಟ್ಟಣದ ನಂಜುಂಡರಸಿನಿಂದ ನಾವತ್ತೂರನ್ನು ಸ್ವಾಧೀನಪಡಿಸಿಕೊಡರೆಂದು ಮೈಸೂರು ಚರಿತ್ರೆಯ ಮೂಲಕ ಗೊತ್ತಾಗುತ್ತದೆ.[1] ಈ ಸಂದರ್ಭದಲ್ಲಿ ಅವರಿಗೆ ತುಂಬ ನೆರವಾದ ದಳವಾಯಿ ಬೆಟ್ಟದರಸು. ಆತನಿಗೆ ಮುಂಚಿತವಾಗಿ ಇದ್ದ ಕರಿಕಾಲ ಮಲ್ಲರಾಜಯ್ಯನು ತನ್ನ ಮೊಮ್ಮಗನಾದ ನಂದಿನಾಥಯ್ಯನ ಕೈಯಲ್ಲಿ ತನ್ನ ರಾಜೀನಾಮೆಯನ್ನು ಕಳಿಸಿದನೆಂದ್ವ ಹೇಳಿದೆ.[2] ಬಹುಶಃ, ಈ ನಂದಿನಾಥಯ್ಯನು ರಾಜಒಡೆಯರ ಸೈನ್ಯದಲ್ಲಿ ಇದ್ದಿರಬಹುದು. ಇಲ್ಲಿ ಪಿರಿಯಾಪಟ್ಟಣದ ನಂಜುಂಡರಸು ಎಂಬುದಾಗಿ ಹೇಳಿರುವುದರಿಂದ, ಈತ ಚಂಗಾಳ್ವರ ಪಿರಿಯರಾಜನ ಅನಂತರ ಪಟ್ಟಕ್ಕೆ ಬಂದ ನಂಜುಂಡದೇವನೋ, ನಂಜರಾಜಯ್ಯದೇವನೋ ಆಗಿರಬೇಕು. ಕವಿ ನಂಜುಂಡನಿಗೂ ಈ ರಾಜರಿಗೂ ಹೆಸರಿನ ಹೋಲಿಕೆಯಿಂದ ಏನೋ ಭ್ರಮೆಯುಂಟಾಗಿ, ಈ ಲಿಖಿತದಲ್ಲಿ ಹೀಗೆ ನಿರೂಪಿತವಾಗಿರುವಂತಿದೆ. ನಂಜುಂಡನು ಒಡೆಯನಾಗಿದ್ದನೆಂಬುದಕ್ಕೆ ಬೇರೆ ಯಾವ ಆಧಾರವೂ ಇಲ್ಲ. ಇದಲ್ಲದೆ, ಈ ಮೊದಲೇ ನಿರ್ದೇಶಿಸಿರುವಂತೆ, ೧೫೫೫ ಕ್ಕೆ ಸೇರಿದ ಪದ್ಮರಸನು ತನ್ನ "ಶೃಂಗಾರಕಥೆ" ಯಲ್ಲಿ "ಭರತೇಶ್ವರ ಚರಿತೆ" ಯನ್ನೂ "ಕುಮಾರರಾಮನ ಕಥೆ" ಯನ್ನೂ ಸ್ಮರಿಸಿರುತ್ತಾನೆ. ೧೬ ನೆಯ ಶತಮಾನಕ್ಕೆ ಸೇರಿದ ಪ್ರಮುಖವಾದ ಈ ಸಾಂಗತ್ಯ ಕೃತಿಗಳನ್ನು ಮತ್ತೊಬ್ಬ ಸಾಂಗತ್ಯ ಕವಿ ಸ್ಮರಿಸುವುದು ಸೂಕ್ತವಾಗಿದೆ. ಈ ವೇಳೆಗೆ ನಂಜುಂಡನು ಪೂರ್ವಕವಿಗಳ ಪಂಕ್ತಿಗೇ ಸೇರಿರುವನಾದ್ದರಿಂದ, ಅವನ ಕಾಲ ೧೬೧೭ ರವರೆಗೆ ವ್ಯಾಪಿಸುವ ಸಂಭವವೇ ಉಂಟಾಗುವುದಿಲ್ಲ. ಮೇಲ್ಕಂಡ ಲಿಖಿತದ ಹೇಳಿಕೆಯನ್ನು ಅವಲಂಬಿಸಿ ಪುರಾತತ್ವ ಇಲಾಖೆಯ ವರದಿಕಾರರು ನಂಜುಂಡನ ಕೃತಿ ೧೫೭೦ ರಲ್ಲಿ ರಚಿತವಾಗಿರಬಹುದೆಂದು ಭಾವಿಸುತ್ತಾರೆ. ಅವರ ಆಧಾರವೇ ದುರ್ಬಲವಾಗಿರುವುದರಿಂದ ಈ ಅಭಿಪ್ರಾಯ ಮಾನ್ಯವಾಗುವಂತಿಲ್ಲ.

ನಂಜುಂಡನು ಅತ್ಯಂತ ಹೆಮ್ಮೆಯಿಂದ ಸ್ಮರಿಸಿರುವ ತನ್ನ ಚಿಕ್ಕಪ್ಪನಾದ ವಿಜಯನ ವೀರಮರಣದ ಸಂಗತಿಯನ್ನು ಕುರಿತು ಸ್ವಲ್ಪ ಪರಿಶೀಲಿಸಬಹುದು. ಶ್ರೀ. ರಾ. ನರಸಿಂಹಾಚಾರ್ಯರು ಊಹಿಸಿರುವಂತೆ, ಇಲ್ಲಿ ಹೇಳಿರುವ ನಂಜರಾಯನು ಚಂಗಾಳ್ವರ ನಂಜರಾಜನೇ ಇರಬೇಕು. ನಂಜರಾಯಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತವನ್ನು ಪ್ರಾರಂಭಿಸಿದ ಚಂಗಾಳ್ವರಲ್ಲಿ ಈತನೇ ಪ್ರಮುಖನು. ಈ ಅರಸು

---

1. History of Mysore, Vol. 1, p. 70: ಬಿ. ಎಲ್. ರೈಸ್ ಅವರು ಸೂಚಿಸಿರುವ ಚಂಗಾಳ್ವರ ವಂಶಾವಳಿಯಲ್ಲಿ ೧೬೧೭ ರಲ್ಲಿ ಕೃಷ್ಣರಾಜಯ್ಯದೇವ ಎಂಬಾತನು ಇದ್ದನೆಂದು ಹೇಳಿದೆ (EC, IV, p. II, Intro. p. 17).

2. ಅದೇ, ಪು. ೬೯/೭೦.

ಮನೆತನದವರು ಹೊಯ್ಸಳರ ಪತನಾನಂತರ ವಿಜಯನಗರದ ಆಡಳಿತಕ್ಕೆ ಒಳಗಾಗುತ್ತಾರೆ. ಈ ಮಧ್ಯೆ ಕೆಲವು ಕಾಲದವುಟ್ಟಿಗಾದರೂ ಇವರು ಸ್ವತಂತ್ರರಾಗಿದ್ದಿರಬಹುದು. ಇವರ ಉದಯವನ್ನು ಕುರಿತು ವಿಚಾರ ಮಾಡುತ್ತ ಮಾನ್ಯ ಬಿ. ಎಲ್. ರೈಸ್ ಅವರು—"........೧೬ನೆಯ ಶತಮಾನದ ಪ್ರಾರಂಭದಲ್ಲಿ ಅವರು ತಮ್ಮ ಹಳೆಯ ಭೂವಿಭಾಗಕ್ಕೆ ಮತ್ತೆ ಸ್ವತಂತ್ರಪ್ರಭುಗಳಾಗಿ ತೋರಿಬರುತ್ತಾರೆ" ಎಂದು ಹೇಳಿರುತ್ತಾರೆ.[1] ನಂಜರಾಜನು (೧೫೦೨–೧೫೩೩) ಅಧಿಕಾರಕ್ಕೆ ಬಂದ ಕೆಲವು ವರ್ಷಗಳಲ್ಲಿಯೇ, ಎಂದರೆ ೧೫೦೯ರಲ್ಲಿ ಕೃಷ್ಣದೇವರಾಯನು ಪಟ್ಟಕ್ಕೆ ಬಂದನು. ಆತನು ಆಡಳಿತವನ್ನು ವಹಿಸಿಕೊಂಡ ಕೂಡಲೇ ಉಮ್ಮತ್ತೂರಿನ ಮೇಲೆ ದಂಡೆತ್ತಿ ಬಂದಾಗ, ಹೊಯ್ಸಳನಾಡಿಗೂ ಬಂದಿದ್ದನೆಂದು ಚರಿತ್ರೆಯಲ್ಲಿ ವರ್ಣಿತ ವಾಗಿದೆ.[2] ಬಹುಶಃ, ಆ ಸಂದರ್ಭದಲ್ಲಿ, ಸ್ವತಂತ್ರನಾಗಿಯೇ ಇರಲು ಪ್ರಯತ್ನಿಸಿದ ಚಂಗಾಳ್ವ ನಂಜರಾಯನಿಗೂ, ಕೃಷ್ಣದೇವರಾಯನ ಸೈನ್ಯಕ್ಕೂ ಯುದ್ಧ ನಡೆದಿರಬಹುದು. ನಂಜುಂಡನು ಹೇಳುವ "ರಾಯದಳ"ವೂ, ಪತಿ ನಂಜರಾಯನ ಸಮಕ್ಷದಲ್ಲಿ ವಿಜಯನು ವೀರಮರಣವನ್ನು ಪಡೆದದ್ದೂ ಈ ಘಟನೆಗೆ ಸಂಬಂಧಿಸಿದ್ದಿರಬಹುದು.

ಮೈಸೂರು ಪುರಾತತ್ವ ಇಲಾಖೆಯ ವರದಿಕಾರರು, ನಂಜುಂಡನು ಮಂಗರಸನ ಹೆಸರನ್ನು ಸ್ಪಷ್ಟವಾಗಿ ಹೇಳದಿದ್ದರೂ, "ಹಿರಿಯಯ್ಯ" ಎಂಬ ಮಾತಿನಲ್ಲಿ ಆತನನ್ನೇ ಉದ್ದೇಶಿಸಿರಬಹುದೆಂದು ಭಾವಿಸುವರಷ್ಟೆ.[3] ಮಂಗರಸನು ತನ್ನನ್ನು "ಪ್ರಭುರಾಜ"ನೆಂದು ಕರೆದುಕೊಳ್ಳುವುದರಿಂದ (ಜಯನೃಪ ಕಾವ್ಯ–ಸಂಧ್ಯಂತ್ಯದ ಪದ್ಯಗಳು) ವಿಜಯೇಂದ್ರನ ಅನಂತರ ಈತನು ಕಲ್ಲಹಳ್ಳಿಯ ಪ್ರಭುವಾಗಿದ್ದಿರಬೇಕು. ಈತನು ನಂಜುಂಡನ ಸಮಕಾಲಿಕನೆಂಬ ಸೂಚನೆ ಮೇಲಿನ ಲಿಖಿತದ ಮೂಲಕ ತಿಳಿದುಬರುತ್ತದೆ. ಪ್ರಕೃತದಲ್ಲಿ, ಈ ಲಿಖಿತವು ಇತರ ವಿಷಯಗಳಿಗೆ ಎಷ್ಟೇ ವಿರುದ್ಧವಾಗಿದ್ದರೂ, ಮಂಗರಸನಿಗೂ ನಂಜುಂಡನಿಗೂ ಬಾಂಧವ್ಯವಿದ್ದಿತೆಂಬ ಒಂದು ಸೂಚನೆಯನ್ನು ಒಳಗೊಂಡಿರುವುದು ತುಂಬ ಉಪಯುಕ್ತವಾಗಿದೆ. ಕೃತಿಗಳಲ್ಲಿ ದೊರೆಯುವ ಆಂತರಿಕ ಆಧಾರಕ್ಕೆ ಇದು ನೆರವಾಗುವಂತಿದೆ. ನಂಜುಂಡನು ತನ್ನ ಕಾಲದಲ್ಲಿ ಅಧಿಕಾರದಲ್ಲಿದ್ದಿರಬಹುದಾದ ಮಂಗರಸ ನನ್ನು ಗೌರವ ಪೂರ್ವಕವಾಗಿ, ಹೆಸರನ್ನು ಹೇಳದೆ "ಹಿರಿಯಯ್ಯ" ಎಂದು ಸೂಚಿಸಿರಬಹುದು.[4]

ಈವರೆಗೆ ವಿಚಾರಮಾಡಿರುವ ಎಲ್ಲ ಅಂಶಗಳನ್ನೂ ಕ್ರೋಡೀಕರಿಸಿದರೆ ನಂಜುಂಡನ ಮನೆತನದ ಹಿರಿಮೆ ವ್ಯಕ್ತವಾಗುತ್ತದೆ. ಈತನು ಚಂಗಾಳ್ವರ ಸಚಿವ ಕುಲಕ್ಕೆ ಸೇರಿದವನು. ಪಿತಾಮಹನಾದ ವಿಜಯಭೂಪಾಲನು ಕಲ್ಲಹಳ್ಳಿಯ ಪ್ರಭುವಾಗಿದ್ದವನು. ತಂದೆಯಾದ ಮಾಧವನು "ಚಂಗಾಳ್ವನಾಡ ನಾಲ್ವತ್ತು ನಾಯಕ ಗಜಸಿಂಗ."[5] ದೊಡ್ಡಪ್ಪ, ಕವಿಯೂ ಪ್ರಭುವೂ ಆದ ಮಂಗರಸ; ಚಿಕ್ಕಪ್ಪ, ರಣವೀರನಾದ ವಿಜಯ. ಈ ವಂಶದಲ್ಲಿ ಶೌರ್ಯವೂ, ವಿದ್ಯೆಯೂ ಬೆರೆತು ಬಂದಿರುವುದನ್ನು ಕಾಣುತ್ತೇವೆ. ಇದರ ಫಲವಾಗಿಯೇ ನಂಜುಂಡನ ಬರೆಹದಲ್ಲಿಯೂ ಈ ಎರಡು ಗುಣಗಳೂ ಕೂಡಿಕೊಂಡು ಬಂದಿವೆ.

---

1. " At the beginning of the 16th century they again emerge as independent rulers of their old territory (EC, IV, Intro. p, 17) "
2. Mys. Gaz. Vol. II, part III, p. 1789.
3. MAR, 1929, p. 37, f. n.
4. ಮೊದಲನೆಯ ಲಿಖಿತದಲ್ಲಿ ಮಂಗರಸನ ಕೃತಿಗಳನ್ನು ಉದಾಹರಿಸುತ್ತ, ಆತನು "ರಾಮನ ಸಂಗೀತ" ಎಂಬ ಕೃತಿಯನ್ನೂ ಬರೆದಿದ್ದನೆಂದು ಹೇಳಲಾಗಿದೆ (MAR, 1925, p. 14). "ನೇಮಿಜಿನೇಶ ಸಂಗತಿ" ಯಲ್ಲಿ ಕೊಟ್ಟಿರುವ ಈ ಲಿಖಿತದ ಪ್ರತಿಯಲ್ಲಿಯೂ ಈ ಹೆಸರು ಉಕ್ತವಾಗಿದೆ (ಪು. xii). ಕವಿಚರಿತೆಕಾರರು ಮಂಗರಸನ ಕೃತಿಗಳನ್ನು ಕುರಿತು ಹೇಳುವಾಗ ಇದನ್ನು ಸೂಚಿಸಿರುವುದಿಲ್ಲ. ಈ ಹೆಸರು "ಕುಮಾರರಾಮನ ಸಾಂಗತ್ಯ" ವನ್ನೇ ಹೋಲುವುದರಿಂದ (ರಾಮನ ಸಾಂಗತ್ಯ ?) ತುಂಬ ಕುತೂಹಲಕಾರಿಯಾಗಿದೆ.
5. ಮಂಗರಸನ ತಾತನಿಗೂ ಇದೇ ಬಿರುದಿದ್ದಂತೆ ಶ್ರೀ. ಶಾಂತಿರಾಜಶಾಸ್ತ್ರಿಗಳು ಸೂಚಿಸಿರುತ್ತಾರೆ (ನೇಮಿಜಿನೇಶ ಸಂಗತಿ, ಕವಿಪರಿಚಯ. ಪು. xi). ಇದು ಕುಲಕ್ರಮಾಗತವಾದ ಬಿರುದಿದ್ದಿರಬಹುದು.

ಕವಿ ನಂಜುಂಡನ ವಂಶಾವಳಿಯನ್ನು ಈ ಕೆಳಗೆ ಕಂಡಂತೆ ನಿರೂಪಿಸಬಹುದು :—

- ಮಾಧವ I
  - ವಿಜಯ ನೃಪಾಲ I
    - ಹಿರಿಯಯ್ಯ (ಮಂಗರಸ)
      - ಜಯರಾಜೇಶ್ವರ
    - ಮಾಧವ II
      - ನಂಜುಂಡ
    - ವಿಜಯ II

ಆದ್ದರಿಂದ ಶ್ರೀ. ರಾ. ನರಸಿಂಹಾಚಾರ್ಯರು ಹೇಳಿರುವಂತೆ ನಂಜುಂಡನು "ಮಂಗರಸನ ಸಹೋದರನ ಮಗ"ನಿರಬೇಕೆಂಬ ಊಹೆ ತಪ್ಪಾಗದು. ಈತನು, ಕೃಷ್ಣದೇವರಾಯನು ಉಮ್ಮತ್ತೂರಿನ ಮೇಲೆ ದಂಡೆತ್ತಿ ಬಂದಂದೀಚೆಗೆ, ಎಂದರೆ, ೧೫೧೨ರ ತರುವಾಯ ತನ್ನ ಕೃತಿಯನ್ನು ರಚಿಸಿರಬಹುದೆಂದು ಹೇಳಬಹುದು.

ನಂಜುಂಡನ ಮತವೂ ಕುತೂಹಲಕಾರಿಯಾದುದೇ ಸರಿ. ಶ್ರೀ. ರಾ. ನರಸಿಂಹಾಚಾರ್ಯರು "ಮಂಗರಸನು ಶುದ್ಧ ಜೈನನಾಗಿದ್ದು ಅವನ ಸಹೋದರನ ಮಗನಾದ ಈತನು ಶೈವಮತದಲ್ಲಿ ಪಕ್ಷಪಾತವನ್ನು ತೋರ್ಪಡಿಸಿರುವುದನ್ನು ನೋಡಿದರೆ ಜೈನಮತವನ್ನು ಬಿಟ್ಟು ಶೈವಮತವನ್ನು ಅವಲಂಬಿಸಿರಬಹುದು ಎಂಬ ಊಹೆ ಹುಟ್ಟುತ್ತದೆ"[1] ಎಂದು ಹೇಳಿರುತ್ತಾರೆ. ಶ್ರೀಯುತರ ಈ ಅಭಿಪ್ರಾಯ ಅಸಂಭವವೇನೂ ಅಲ್ಲ. ಚಂಗಾಳ್ವರು ಮೊದಲು ಜೈನಮತೀಯರಾಗಿದ್ದು ಅನಂತರ ಶೈವರಾದರು ಎಂಬುದಾಗಿ ತಿಳಿದುಬರುತ್ತದೆ.[2] ಬೆಟ್ಟದಪುರದ ಮಲ್ಲಿಕಾರ್ಜುನದೇವರೇ ಇವರ ಇಷ್ಟದೇವತೆ. ಈ ರೀತಿಯಾಗಿ ತಮ್ಮ ಪ್ರಭುಗಳು ಮತಾಂತರ ಹೊಂದಿದಾಗ ನಂಜುಂಡನೋ ಆತನ ಮನೆತನದವರೋ ಶೈವಮತವನ್ನು ಸ್ವೀಕರಿಸಿರಬಹುದು. ಆದರೂ, ನಂಜುಂಡನ ಬರೆವಣಿಗೆಯಲ್ಲಿ ಆತನ ಜೈನಮತಾಭಿಮಾನವನ್ನು ಗುರುತಿಸಬಹುದು.

ನಂಜುಂಡನು ಸ್ತುತಿಸಿರುವ ಕನ್ನಡದ ಪೂರ್ವಕವಿಗಳಲ್ಲಿ ಹರಿಹರನನ್ನು ಬಿಟ್ಟರೆ ಉಳಿದವರೆಲ್ಲ ಜೈನರೇ ಆಗಿರುತ್ತಾರೆ. ಇದಲ್ಲದೆ, ಕಾವ್ಯದಲ್ಲಿ ಪ್ರಾಸಂಗಿಕವಾಗಿ "ಮಲೆಯಖೇಡದ ವಾದಿವಿದ್ಯಾನಂದಸ್ವಾಮಿ" ಎಂಬ ಜೈನಯತಿಯೊಬ್ಬನ ಹೆಸರನ್ನೂ ಎತ್ತಿರುತ್ತಾನೆ (xliv, ೭೮). ಕೃಷ್ಣದೇವರಾಯನ ಕಾಲದಲ್ಲಿ "ವಾದಿವಿದ್ಯಾನಂದ" ಎಂಬ ಒಬ್ಬ ಜೈನಯತಿ ಇದ್ದನೆಂದೂ, ಈತನು ಪರಮತವಾದಿಗಳನ್ನು ಜಯಿಸಿ ಜೈನಮತ ಸಿದ್ಧಾಂತವನ್ನು ಸ್ಥಾಪಿಸಿದನೆಂದೂ ಶಿವಮೊಗ್ಗ ಜಿಲ್ಲೆಯ ನಗರದ ಶಾಸನವೊಂದರ ಮೂಲಕ ವ್ಯಕ್ತವಾಗುತ್ತದೆ.[3] ಈತನೇ ಅಭಿನವ ವಾದಿವಿದ್ಯಾನಂದನಿರಬೇಕೆಂದು ಕವಿಚರಿತೆಕಾರರು ಅಭಿಪ್ರಾಯಪಡುತ್ತಾರೆ.[4] ಶ್ರೀ. ದೇಸಾಯಿ ಪಾಂಡುರಂಗರಾಯರು, ಮಾಳ್ಖೇಡದ ನೇಮಿನಾಥಜಿನಾಲಯದ ಕಂಬವೊಂದರ ಮೇಲೆ "ವಿದ್ಯಾನಂದಸ್ವಾಮಿ" ಎಂಬ ಜೈನಯತಿಯೊಬ್ಬನ ಸ್ತುತಿಯಿರುವುದನ್ನು ಸಂಶೋಧಿಸಿರುತ್ತಾರೆ. ಈ ಯತಿ ಪರಂಪರೆಗೆ "ರಾಯರಾಜಗುರು, ಮಂಡಲಾಚಾರ್ಯ ಮಹಾವಾದವಾದೀಶ್ವರ, ರಾಯವಾದಿ ಪಿತಾಮಹ, ಸಕಲ ವಿದ್ವಜ್ಜನ ಚಕ್ರವರ್ತಿ, ಸೈದ್ಧಾಂತಾಚಾರ್ಯ" ಎಂಬ ಪ್ರಶಸ್ತಿಗಳಿರುವುದಲ್ಲದೆ ಶ್ರೀಮತ್ ಪೂಜ್ಯಪಾದ

1. ಕಚ. ಸಂ. ii, ಪು. ೨೦೩.
2. ಕನ್ನಡನಾಡಿನ ಚರಿತ್ರೆ, ಭಾಗ ೧, ೧೯೫೩, ಪು. ೬೨.
3. EC, VIII, p. II, Nagar 46.
4. ಕಚ. ಸಂ. ii, ಪು. ೨೨೯.

ಸ್ವಾಮಿಗಳ ಪ್ರಿಯಶಿಷ್ಯನಾದ ಈತನಿಗೆ ಮಳೆಯಖೇಡದ ಗುರುಪರಂಪರೆಯ ಆದ್ಯಪ್ರವರ್ತಕನೆಂಬ ಪ್ರತೀತಿಯೂ ಇರುವುದಾಗಿ ಹೇಳುತ್ತಾರೆ. ಈ ಶಾಸನದ ಕಾಲ ಕ್ರಿ.ಶ. ೧೫೫೩ ಎಂದು ತಿಳಿಸಿರುತ್ತಾರೆ.[1] ಉಸ್ಮಾನಾಬಾದಿನಲ್ಲಿರುವ ತೇರ್ ಎಂಬಲ್ಲಿ ದೊರೆತಿರುವ ಮತ್ತೊಂದು ಶಾಸನವೂ ಈ ಯತಿಯನ್ನೇ ಕುರಿತುದಾಗಿರಬೇಕೆಂದು ಹೇಳಿರುತ್ತಾರೆ.[2] ಪ್ರಕೃತದಲ್ಲಿ, ಈ ಇಬ್ಬರು ಯತಿಗಳಲ್ಲಿ ನಂಜುಂಡನು ಯಾರನ್ನು ಸೂಚಿಸಿರಬಹುದು ಎಂದು ಸಂದೇಹವುಂಟಾಗುವುದು ಸಹಜ. ಆತನು "ಮಲೆಯಖೇಡದ ವಾದಿವಿದ್ಯಾನಂದಸ್ವಾಮಿ" ಎಂದು ವಿಶೇಷಣಪೂರ್ವಕವಾಗಿ ಹೇಳಿರುವುದರಿಂದಲೂ, ಜೈನರ ವಿದ್ಯಾಸ್ಥಾನಗಳಲ್ಲಿ ಮಳೆಯಖೇಡಕ್ಕೂ ಒಂದು ಸ್ಥಾನವಿದ್ದುದರಿಂದಲೂ, ಪ್ರಾಚೀನನೂ ಸುಪ್ರಸಿದ್ಧನೂ ಆಗಿದ್ದ ಮಾಳ್ಖೇಡದ ಜೈನಯತಿಯನ್ನೇ ಸ್ತುತಿಸಿದ್ದಿರಬಹುದು ಎಂದು ತೋರುತ್ತದೆ. ಮುಖ್ಯವಾಗಿ ಕವಿಯ ಜೈನಮತ ಪಕ್ಷಪಾತವು ಈ ರೀತಿಯಾಗಿ ತೋರಿಬರುವುದಲ್ಲದೆ ಸಂದರ್ಭೋಚಿತವಾಗಿ ಕಾವ್ಯದ ಇತರ ಎಡೆಗಳಲ್ಲಿಯೂ ಗೋಚರವಾಗುತ್ತದೆ. ಈ ವಿವರಗಳನ್ನು ಮುಂದೆ ತಿಳಿಸಲಾಗಿದೆ.[3]

ಶ್ರೀ. ಸಿ ಹಯವದನರಾಯರು, ಕವಿ ನಂಜುಂಡನೂ ಚಂಗಾಳ್ವ ನಂಜರಾಜನೂ ಒಬ್ಬನೇ ಎಂದು ಎಣಿಸಿರುತ್ತಾರೆ.[4] ನಂಜುಂಡನು ಚಂಗಾಳ್ವರ ಸಚಿವಕುಲಕ್ಕೆ ಸೇರಿದವನೇ ಹೊರತು, ಈ ಮೊದಲೇ ತಿಳಿಸಿದಂತೆ ಆತನು ಪ್ರಭುವಾಗಿದ್ದನೆಂಬುದಕ್ಕೆ ಯಾವ ಆಧಾರವೂ ಇಲ್ಲ. ಆದ್ದರಿಂದ ಶ್ರೀಯುತರ ಈ ಅಭಿಪ್ರಾಯವು ಸಮಂಜಸವಾಗಿಲ್ಲ. ಅಲ್ಲದೆ, ನಂಜುಂಡನು "ಉಭಯ ವಸ್ತುಕಕವಿತೆಯನೊರೆವೆನು ನೃಪಸಭೆ ತಲೆದೂಗುವಂದದಲಿ, ವಿಭುಗಳು ಪೇಳೆನಲೀ ಪದಕವಿತೆಯನಭಿಮಾನಿಸಿ ಪೇಳಿದೆನು" (I, ೭೩) ಎಂದು ಹೇಳಿಕೊಂಡಿರುವುದನ್ನು ನೋಡಿದರೆ ಈತನಿಗೆ ಯಾರೋ ರಾಜನ ಆಶ್ರಯವಿರಬೇಕು ಎಂದು ವೇದ್ಯವಾಗುತ್ತದೆ.

ನಂಜುಂಡನ ಕಾವ್ಯದಲ್ಲಿ ಕಂಡುಬರುವ ಒಂದೆರಡು ಸನ್ನಿವೇಶಗಳು ವಿಜಯನಗರದ ಇತಿಹಾಸಕ್ಕೆ ಸಂಬಂಧಪಟ್ಟಂತಿವೆ. ಮೊದಲನೆಯದಾಗಿ, ಕುಮಾರರಾಮನ ದಿವ್ಯಾಶ್ವವು ವನಾಯು ದೇಶದಲ್ಲಿ (ಎಂದರೆ, ಪರ್ಷಿಯಾ ದೇಶದಲ್ಲಿ) ಅವತರಿಸಿತೆಂದೂ, ಅದನ್ನು ಆತನು ಗೋವೆಯ ವರ್ತಕರ ಮೂಲಕ ಪಡೆದನೆಂದೂ ನಿರೂಪಿತವಾಗಿದೆ. ಈ ಕಥಾನಿರೂಪಣೆ ಉಳಿದಿಬ್ಬರ ಕವಿಗಳಿಗಿಂತ ತೀರ ಭಿನ್ನವಾಗಿರುವುದರಿಂದ ನಂಜುಂಡನು ಉದ್ದೇಶಪೂರ್ವಕವಾಗಿ ಹೀಗೆ ಮಾರ್ಪಡಿಸಿಕೊಂಡಿರುವಂತೆ ಕಾಣುತ್ತದೆ. ವಿಜಯನಗರದ ಅರಸನಾದ, ಸಾಳುವ ನರಸಿಂಹನೂ, ಕೃಷ್ಣದೇವರಾಯನೂ ಅರಬ್ಬೀದೇಶದ ಕುದುರೆಗಳನ್ನು ಕೊಂಡುಕೊಳ್ಳುತ್ತಿದ್ದರೆಂದೂ ಹದಿನಾರನೆಯ ಶತಮಾನದಿಂದೀಚೆಗೆ ಗೋವೆಯಲ್ಲಿ ಬಂದು ನೆಲಸಿದ ಪೋರ್ಚುಗೀಸರಿಗೆ ಇದು ಪ್ರಧಾನವಾದ ವ್ಯಾಪಾರಗಳಲ್ಲಿ ಒಂದಾಗಿ ಪರಿಣಮಿಸಿತೆಂದೂ ತಿಳಿದುಬರುತ್ತದೆ.[5] ಮೇಲಿನ ಕಥಾವ್ಯತ್ಯಾಸವು ಈ ವ್ಯವಹಾರವನ್ನೇ ಪ್ರತಿಬಿಂಬಿಸುವಂತಿದೆ.

ಎರಡನೆಯದಾಗಿ, ಕಂಪಿಲನಿಗೂ ಕರಿಪತಿ ಕಪಿಲೇಶ್ವರನಿಗೂ ಯುದ್ಧ ನಡೆಯಿತೆಂದು ನಂಜುಂಡನು ಚಿತ್ರಿಸಿರುವುದು ಐತಿಹಾಸಿಕ ದೃಷ್ಟಿಯಿಂದ ಸಮರ್ಪಕವಾಗಿಲ್ಲ. ಕಂಪಿಲನಿಗೆ ಸಮಕಾಲೀನನಾಗಿ ಕಳಿಂಗದೇಶದಲ್ಲಿ ಕಪಿಲೇಶ್ವರನೆಂಬ ಯಾವ ರಾಜನೂ ಕಂಡುಬರುವುದಿಲ್ಲ. ಅಲ್ಲಿನ ರಾಜವಂಶಾವಳಿಯಲ್ಲಿ ಕಪಿಲೇಂದ್ರದೇವನೆಂಬುವನು ೧೪೩೫ ರಿಂದ ೧೪೭೦ರವರೆಗೆ ಆಳಿದುದಾಗಿ ತಿಳಿದುಬರುತ್ತದೆ. ಈತನನ್ನು ಇಮ್ಮಡಿ

---

1. Jainism in South India, pp. 325-331.
2. Ibid, p. 329.
3. ಅಧ್ಯಾಯ ೩, ಕೃತಿಯ ವೈಶಿಷ್ಟ್ಯಗಳು.
4. Mys. Gaz. vol. II, p. III, p. 1916.
5. Economic life in the Vijayanagar Empire, by T.V. Mahalingam, pp. 111-112

ದೇವರಾಯನು ಸೋಲಿಸಿದ್ದನೆಂದೂ, ಹೀಗೆ ಅವಮಾನಿತನಾಗಿದ್ದ ಈತನು ಮಲ್ಲಿಕಾರ್ಜುನನ ಕಾಲದಲ್ಲಿ ಮತ್ತೆ ದಂಡೆತ್ತಿ ಬಂದು ವಿಜಯನಗರದವರನ್ನು ಸೋಲಿಸಿದನೆಂದೂ ವ್ಯಕ್ತವಾಗುತ್ತದೆ.[1] ಕಳಿಂಗದವರ ಈ ಕಿರುಕುಳ ಇಷ್ಟಕ್ಕೇ ನಿಲ್ಲಲಿಲ್ಲ. ಮುಂದೆ ಕೃಷ್ಣದೇವರಾಯನ ಕಾಲಕ್ಕೆ ಇವರು ಪ್ರಬಲರಾಗಲು ಆಗ ಮಹಾರಾಜನು ಕಳಿಂಗದೇಶದ ಮೇಲೆ ದಂಡೆತ್ತಿ ಹೋಗಿ ರಾಜನಾಗಿದ್ದ ಗಜಪತಿ ಪ್ರತಾಪರುದ್ರನನ್ನು ಸೋಲಿಸಿದ ವೃತ್ತಾಂತ ವಿಜಯನಗರದ ಇತಿಹಾಸದಲ್ಲಿ ಸುಪ್ರಸಿದ್ಧವಾದ ಸಂಗತಿಯಾಗಿದೆ.[2] ನಂಜುಂಡನು ಈ ಮಹತ್ವಪೂರ್ಣವಾದ ಘಟನೆಯನ್ನೇ ತನ್ನ ಮನಸ್ಸಿನಲ್ಲಿಟ್ಟುಕೊಂಡು, ಅದಕ್ಕೆ ಪ್ರಾಚೀನತೆಯನ್ನು ಕಲ್ಪಿಸುವ ಸಲುವಾಗಿ ಕರಿಪತಿ ಕಪಿಲೇಶ್ವರನ ಹೆಸರನ್ನು ಬಳಸಿದ್ದರೂ ಬಳಸಿರಬಹುದು. ಈ ಪ್ರಸಂಗದಲ್ಲಿ ಬರುವ ಷೋಡಶ ಪಾತ್ರೆಗಳಲ್ಲಿ ಶಿರಶ್ಚಂದ್ರಪಾತ್ರೆ, ಹಮ್ಮೀರಪಾತ್ರೆಗಳ ಹೆಸರುಗಳು ಈ ವೃತ್ತಾಂತವನ್ನು ವರ್ಣಿಸುವ ಇತರ ಉಲ್ಲೇಖಗಳಲ್ಲಿಯೂ ಕಂಡುಬರುತ್ತವೆ.[3] ಕೆಲವು ತೆಲುಗಿನ ಕವಿಗಳು ಈ ಸಂದರ್ಭವನ್ನು ತಮ್ಮ ಕಾವ್ಯಗಳಲ್ಲಿ ಹೊಗಳಿ ಮೆರೆಸಿರುವಂತೆಯೇ, ಕನ್ನಡದ ಕವಿ ಪರೋಕ್ಷವಾಗಿ ಇದನ್ನು ಇಲ್ಲಿ ಪ್ರಸ್ತಾಪಿಸಿರಬಹುದು.[4]

ಈ ಮೇಲ್ಕಂಡ ಅಂಶಗಳನ್ನೆಲ್ಲ ಗಮನಿಸಿದರೆ, ವಿಜಯನಗರದ ಕಾಲಕ್ಕೆ ಸೇರಿದ ಕೆಲವು ಘಟನೆಗಳಾದರೂ ನಂಜುಂಡನ ಮನಸ್ಸಿನ ಮೇಲೆ ಎಂಥ ಪ್ರಭಾವವನ್ನು ಬೀರಿವೆ ಎಂಬುದು ವೇದ್ಯವಾಗುತ್ತದೆ. ಆದ್ದರಿಂದ ಈತನಿಗೆ ವಿಜಯನಗರದ ಅರಸರಿಂದಾಗಲಿ, ಇಲ್ಲವೇ ಅವರ ಸಾಮಂತರಾದ ಚಂಗಾಳ್ವರಿಂದಾಗಲಿ ಕೃತಿರಚನೆಗೆ ಉತ್ತೇಜನ ದೊರತಿರಬಹುದು. ಶ್ರೀ. ಡಿ. ಎಲ್. ನರಸಿಂಹಾಚಾರ್ಯರು, ವಿಜಯನಗರದ ಕಾಲದ ಕನ್ನಡ ಸಾಹಿತ್ಯವನ್ನು ಅವಲೋಕಿಸುವಾಗ ನಂಜುಂಡನಿಗೊಂದು ವಿಶಿಷ್ಟವಾದ ಸ್ಥಾನವನ್ನು ಕಲ್ಪಿಸಿ ಕೊಟ್ಟಿರುವುದರ ಔಚಿತ್ಯವನ್ನೂ ಇಲ್ಲಿ ಪ್ರಾಸಂಗಿಕವಾಗಿ ನಾವು ನೆನೆಯಬಹುದು.[5]

ಗಂಗನ ಕಾಲ, ದೇಶ ಮತ್ತು ಮತಗಳ ವಿಚಾರವಾಗಿಯೂ ಸಾಕಾದಷ್ಟು ವಿವರ ತಿಳಿದುಬಂದಿಲ್ಲ. ಕವಿ ತನ್ನ ಇಷ್ಟದೇವತೆಗಳನ್ನು ಸ್ತುತಿಸುವಾಗ ಗರಳಪುರದ ನಂಜುಂಡನನ್ನೂ, ತಗಡೂರಿನ ವಿನಾಯಕನನ್ನೂ ಕೊಂಡಾಡಿರುವ ಪದ್ಯಗಳು ಅನೇಕ ಪ್ರತಿಗಳಲ್ಲಿ ಕಂಡುಬರುತ್ತವೆ. ಆದ್ದರಿಂದ, ಈತನು ಮೈಸೂರು ಜಿಲ್ಲೆಯಲ್ಲಿರುವ ನಂಜನಗೂಡು ಅಥವಾ ತಗಡೂರಿನ ಕಡೆಯವನಿರಬಹುದು. ಈತನ ಸ್ವಂತ ವಿಷಯ ಇದಕ್ಕಿಂತ ಹೆಚ್ಚಾಗಿ ಏನೂ ತಿಳಿದುಬರುವುದಿಲ್ಲ. ಈ ಮೇಲಿನ ಹೇಳಿಕೆಗಳನ್ನೇ ಅನುಸರಿಸಿ ಈತನನ್ನು ಶಿವಾರಾಧಕನೆಂದು ಭಾವಿಸಬಹುದು. ಈತನು ತನ್ನ ವಿದ್ಯಾಪರಿಣತಿಯ ಬಗ್ಗೆಯೂ ಏನನ್ನೂ ಹೇಳಿಕೊಂಡಿಲ್ಲ. ಆದರೆ, ಅನೇಕ ಪ್ರತಿಗಳಲ್ಲಿ "ಕನ್ನಡ ಕವಿಜಾಣ ರನ್ನದ ಪದಜಾತಿ ಮುನ್ನಿನ ಪಂಚಾಸ್ಯ ಚನ್ನಭುಜಂಗನ ಭೃತ್ಯ ಗಂಗಯ್ಯ ಸಂಪನ್ನ ಪೇಳದನೀ ಕೃತಿಯು" ಎಂಬ ಪದ್ಯವೊಂದು ಕಂಡುಬರುತ್ತದೆ. ಇದಕ್ಕೆ ಕೆಲವು ಪಾಠಾಂತರಗಳೂ ಉಂಟು. ಎಲ್ಲವನ್ನೂ ಪರಿಶೀಲಿಸಿ ನೋಡಿದರೆ ಈತನಿಗೆ "ಕನ್ನಡ ಕವಿಜಾಣ" ಎಂಬ ಜನಪ್ರಿಯವಾದ ಉಕ್ತಿಯೊಂದು ಪ್ರಚಾರದಲ್ಲಿತ್ತೆಂದು ತೋರುತ್ತದೆ. ಈತನು ಪಾಂಚಾಳರವನಿರಬೇಕೆಂದು ಗೊತ್ತಾಗುತ್ತದೆ.[6] "ಚನ್ನಭುಜಂಗನ ಭೃತ್ಯ" ಇಲ್ಲವೇ "ಭುಜಂಗೇಶ ಪುತ್ರ" ಎಂದು ಹೇಳಿಕೊಂಡಿರುತ್ತಾನೆ. ಈತನು "ಪೂರ್ವಕವಿಗಳಲ್ಲಿ ಭಾಗುರಿ, ಅಗ್ಗಳ, ಹಲಾಯುಧ, ರಾಘವ, ವಾಲ್ಮೀಕಿ ಮತ್ತು

---

1. The History of Orissa, by H. Mahtab, p. 84.
2. Mys. Gaz. Vol. II, part, III, pp. 1819–1822.
3. Ibid, pp. 1807, 1809.
4. ಈ ಐತಿಹಾಸಿಕ ಅಸಂಗತಗಳ ಮೂಲಕ ನಂಜುಂಡನು ಕುಮಾರರಾಮನ ಸಮಕಾಲೀನನಲ್ಲವೆಂಬುದು ಮತ್ತಷ್ಟು ಸ್ಪಷ್ಟವಾಗುತ್ತದೆ.
5. VSCV, P. 365.
6. "ಪದಜಾತಿಗೆ ಪಾಂಚಾಳನು ಗಂಗುಗ ವರದು ಪೇಳಿದನೀ ಕೃತಿಯು" ಕೆ. ೧೯೯, i, ೧೪; iii, ೧೧.

ನಾಗವರ್ಮ"ರನ್ನು ಸ್ಮರಿಸಿರುವುದಾಗಿ ಕವಿಚರಿತೆಕಾರರು ಹೇಳಿರುತ್ತಾರೆ.[1] ಮೈಸೂರಿನ ಪ್ರತಿಯಲ್ಲಿ "ಬಾಗುರಿ ಮಗಗಾಳೆಯ ಹಲಾಯುಧ ರಾಘವಾಂಕನು ವಾಲ್ಮೀಕಿಯು, ರಾಘವಾಂಕನು ಕವೀಶ್ವರ ನಿಕರಕ್ಕೆ ರಾಗದಿಂದಲಿ ಯರಗುವೆನು" (ಕೆ. ೧೯೯, I, ೧೩) ಎಂಬ ಪದ್ಯವೊಂದು ಕಂಡುಬರುತ್ತದೆ. ಮದರಾಸಿನಲ್ಲಿರುವ ಒಂದು ಪ್ರತಿಯಲ್ಲಿ "ಹರಿಹರ ಬಾಣ ಮಯೂರ ಮಲುಹಣದೇವ ವರರುಚಿ ಕಾಳಿದಾಸನಿಗೆ ಭರದಿಂದ ಲೆರಗಿ ಪೇಳುವೆನೀ ಕೃತಿಯನು ಕರುಣಿಸಿ ತಿದ್ದಿ ಬಲ್ಲವರು" (ಡಿ. ೯೧೧, I, ೧೪) ಎಂಬುದಾಗಿದೆ. ಅಲ್ಲಿನ ಮತ್ತೊಂದು ಪ್ರತಿಯಲ್ಲಿ "ಭಾಗುರಿ ಮಾಘನಗ್ಗಳೆಯ ಹಲಾಯುಧ ನಾಗವರ್ಮನು ವಾಲ್ಮೀಕಿ ರಾಘವಾಂಕನು ಮೊದಲಾದ ಕವೀಶರ್ಗೆ ಬೇಗದಿಂ ನಾನೆರಗುವೆನು" (ಡಿ. ೯೨೧, I, ೫) ಎಂದೂ, "ರಾಮನಾಥನ ಸಾಂಗತ್ಯವ ಕವಿಗಳು ಪ್ರೇಮದಿ ನೀನುಸುರೆನಲು ನಾ ಮುದದಿಂದ ಪೇಳಿದೆ ಕೃತಿಯನು ಭೂಮಿಜನರು ನೀವು ಕೇಳಿ" (ಡಿ, ೯೨೧, I, ೧೩) ಎಂದೂ ನಿರೂಪಿತವಾಗಿದೆ. ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಬಳಿಯಲ್ಲಿದ್ದ ಒಂದು ಪ್ರತಿಯಲ್ಲಿ "ಧರೆಯೊಳಗಿದ್ದಂತ ಕವಿಗಳೆಲ್ಲಕ್ಕೆ ಯೆರಗಿ ಪೇಳುವೆನು ಯೀ ಕೃತಿಯ" (ಗಂ. ೧, I, ೧೪) ಎಂಬುದಾಗಿ ಒಂದು ಪದ್ಯಾರ್ಥವು ಮಾತ್ರ ಇದೆ. ಹೀಗೆ ಬೇರೆ ಬೇರೆ ಕವಿಗಳ ಹೆಸರುಗಳನ್ನು ಹೇಳಿರುವ ಈ ಪದ್ಯಗಳು ಒಂದೇ ರೀತಿಯಾಗಿಲ್ಲದಿರುವುದರಿಂದ ಕವಿ ಯಾರನ್ನು ಹೇಳಿದ್ದನೋ ಯಾರನ್ನು ಬಿಟ್ಟಿದ್ದನೋ ಎನ್ನುವುದನ್ನು ಖಚಿತವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಕಾವ್ಯದ ರಚನೆಯನ್ನು ನೋಡಿದರೆ, ಈತನು, ಪ್ರೌಢಕವಿಗಳನ್ನು ಒಬ್ಬೊಬ್ಬರನ್ನಾಗಿ ಹೆಸರಿಟ್ಟು ಸ್ತುತಿಸಿದ್ದನೆಂಬುದಕ್ಕಿಂತಲೂ, ಸಾಂಪ್ರದಾಯಿಕವಾಗಿ ಒಟ್ಟಿಗೆ ಎಲ್ಲರನ್ನೂ ಒಂದೇ ಮಾತಿನಲ್ಲಿ ಸ್ಮರಿಸಿದ್ದಿರಬಹುದೆಂದು ತೋರುತ್ತದೆ. ಅಂತೂ, ಈ ಪೂರ್ವಕವಿಸ್ತುತಿಯ ಆಧಾರದ ಮೇಲೆ ಈತನ ಕಾಲವನ್ನು ನಿಷ್ಕರ್ಷಿಸಲು ಎಡೆಯಿಲ್ಲದಂತಾಗಿದೆ. ಕವಿಚರಿತೆಕಾರರು "ಇವನ ಕಾಲವು ಸು. ೧೬೫೦" ಆಗಿರಬಹುದು ಎನ್ನುತ್ತಾರೆ.[2] ಇದಕ್ಕೆ ಯಾವ ಆಧಾರವನ್ನೂ ಅವರು ಸೂಚಿಸಿಲ್ಲ. ಗಂಗನ ಪ್ರತಿಗಳು ಒಂದು ಇದ್ದಂತೆ ಇನ್ನೊಂದಿಲ್ಲ. ಆದ್ದರಿಂದ ಆಂತರಿಕವಾಗಿ ಭಾಷೆಯ ಸ್ವರೂಪವನ್ನು ಅವಲಂಬಿಸಿಯೂ ಕಾಲವನ್ನು ಹೇಳುವಂತಿಲ್ಲ. ಶ್ರೀ. ಎಂ. ಎಚ್. ರಾಮಶರ್ಮರು, ಗಂಗನ ಕೃತಿಯ ಕಥಾಸಾರನ್ನು ಬರೆಯುವಾಗ, ಪೀಠಿಕೆಯಲ್ಲಿ "ಈತನ ಕಾಲವನ್ನು ನಿಷ್ಕರ್ಷಿಸಲು ಯಾವ ಆಂತರಿಕ ಆಧಾರವೂ ಇಲ್ಲ" ಎಂದು ಅಭಿಪ್ರಾಯವನ್ನು ಸೂಚಿಸಿರುವುದು ಸಮಂಜಸವಾಗಿದೆ.[3]

ಗಂಗನ ಕೃತಿಯ ಕಾಲನಿರ್ಣಯಕ್ಕೆ ಬಾಹ್ಯ ಪ್ರಮಾಣವೂ ಸಹ ಸಾಲದು.[4] ಈತನ ಕೃತಿ ಕಾಲಕಾಲಕ್ಕೆ ಬೆಳೆದುಬಂದಿರಬೇಕೆಂದು ಹೇಳಲು ಅವಕಾಶವುಂಟು. ಅದರ ಮೂಲಸ್ವರೂಪವನ್ನು ಆಧುನಿಕ

---

1. ಕಚ. ಸಂ. ii, ಪು. ೪೨೩.
2. ಅವೇ, ಪು. ೪೨೩.
3. There is no internal evidence by which his date can be settled (QJMS, Supplement, Oct. 1929, p. 1.
4. ದೇವಚಂದ್ರನ "ರಾಜಾವಳಿ ಕಥೆ"ಯಲ್ಲಿ ನಂಜುಂಡನ ವಿಷಯವನ್ನು ಪ್ರಸ್ತಾಪಿಸುವ ಸಂದರ್ಭದಲ್ಲಿ ಆತನು ಗಣಿಕೆಯೊಬ್ಬಳು ಗಂಗನ ಕೃತಿಯನ್ನು ಹಾಡುತ್ತಿದ್ದುದನ್ನು ಕೇಳಿ ತನ್ನ ಗ್ರಂಥವನ್ನು ಬರೆದುದಾಗಿ ಹೇಳಿದೆ. ಇಂತೆಯೇ ನಂಜುಂಡನ ಸಂಬಂಧಿಯಾದ (ತಮ್ಮ ಎಂದಿದೆ?) ಮಂಗರಸನು ಈ ಕಥೆಯನ್ನು ಮೊದಲು ಬರೆಯತೊಡಗಿ, ತನ್ನ ಗುರುವಿನ ಆಕ್ಷೇಪಕ್ಕೆ ಗುರಿಯಾಗಿ ಅನಂತರ ಪ್ರಾಯಶ್ಚಿತ್ತದ ಸಲುವಾಗಿ ಇತರ ಕೃತಿಗಳನ್ನು ಬರೆದನೆಂದು ಸೂಚಿಸಿದೆ (ಓಲೈ. ಕೆ. ಎ. ೬೫, ಅಧಿಕಾರ ೧೧, ಪು. ೩೬೫). ಈ ಅಭಿಪ್ರಾಯಗಳನ್ನು ಸಮರ್ಥಿಸಲು ಸಾಕಾದಷ್ಟು ಆಧಾರಗಳಿಲ್ಲ. ಪಾಂಚಾಳಗಂಗನ ಕೃತಿಯನ್ನೂ ನಂಜುಂಡನ ಕೃತಿಯನ್ನೂ ಹೋಲಿಸಿ ನೋಡಿದರೆ ಕಥಾವಿವರಗಳಲ್ಲಿ ಎರಡೂ ಬೇರೆ ಬೇರೆ ಸಂಪ್ರದಾಯಕ್ಕೆ ಸೇರಿದುವೆಂಬುದಾಗಿ ಸ್ಪಷ್ಟವಾಗುತ್ತದೆ. ಕುಮಾರರಾಮನನ್ನು ಕುರಿತ ಮಂಗರಸನ ಇನ್ನೊಂದು ಕೃತಿ ದೊರೆಯುವತನಕ ದೇವಚಂದ್ರನ ಇನ್ನೊಂದು ಹೇಳಿಕೆಯನ್ನೂ ಒಪ್ಪುವುದು ಕಷ್ಟ. ಬಹುಶಃ ಈ

ಗ್ರಂಥಸಂಪಾದನ ನಿಯಮಕ್ಕೆ ಅನುಸಾರವಾಗಿ ನಿರ್ಧರಿಸಿದ್ದೇ ಆದರೆ, ಆಗ ಕಾಲನಿರ್ಣಯಕ್ಕೆ ಸ್ವಲ್ಪ ಸಹಾಯಕವಾದೀತು. ಸ್ಥೂಲವಾಗಿ ಪರಿಶೀಲಿಸಿ ನೋಡಿದಾಗ, ಗಂಗನ ಕೃತಿಯ ಸರಳತೆ, ಸಂಕ್ಷಿಪ್ತತೆ ಮತ್ತು ಕೆಲವು ಸಾಂಪ್ರದಾಯಿಕ ವಸ್ತುನಿರೂಪಣೆಗಳಿಂದ, ಈ ಕೃತಿ ಜನಪ್ರಿಯವಾದುದೆಂದೂ, ಅನೇಕ ವರ್ಷಗಳಿಂದ ಪ್ರಚಾರದಲ್ಲಿರಬಹುದೆಂದೂ, ಮನವರಿಕೆಯಾಗುತ್ತದೆ.

ಪ್ರಕೃತದಲ್ಲಿ ನನ್ನ ಬಳಿಯಲ್ಲಿರುವ ಒಂದು ಓಲೆಯ ಪ್ರತಿಯ ಕಾಲ ಕ್ರಿ.ಶ. ಸು. ೧೬೯೮ ಎಂಬುದಾಗಿ ತಿಳಿದುಬರುತ್ತದೆ. ಇದರಲ್ಲಿ ರತ್ನಾಜಿಯ ಪ್ರಸಂಗ ಮಾತ್ರ ಅಡಕವಾಗಿದೆ. ಈವರೆಗೆ ನಾನು ಪರಿಶೀಲಿಸಿರುವ ಗಂಗನ ಪ್ರತಿಗಳಲ್ಲೆಲ್ಲ ಇದೇ ಹಳೆಯದು. ಈ ವೇಳೆಗಾಗಲೇ ಗಂಗನ ಕೃತಿಯ ಸಂಕ್ಷಿಪ್ತ ಪಾಠ ಕಂಡು ಬರುವುದರಿಂದ ಇದರ ಮೂಲ, ಕವಿಚರಿತೆಕಾರರು ಊಹಿಸಿರುವಂತೆ ಸು. ೧೬೫೦ ರ ವೇಳೆಗೆ ರಚಿತವಾಗಿರುವುದೇನೂ ಅಸಂಭವವಲ್ಲ.

ಮಹಲಿಂಗಸ್ವಾಮಿ ವೀರಶೈವನೆಂದೂ, ಹಂಪೆಯ ಪುಣ್ಯಕ್ಷೇತ್ರವು ಅತ್ಯಂತ ಪವಿತ್ರಸ್ಥಳವೆಂಬ ಕಲ್ಪನೆ ಅವನಿಗೆ ಬಲವಾಗಿತ್ತೆಂದೂ ಅವನ ಹೇಳಿಕೆಗಳಲ್ಲಿಯೇ ವಿಶದವಾಗುತ್ತವೆ. ಬಹುಮಟ್ಟಿಗೆ, ಸಂಧಿಯ ಆದಿ ಮತ್ತು ಅಂತ್ಯಗಳಲ್ಲಿ ಹಂಪೆಯನ್ನೂ ವಿರೂಪಾಕ್ಷನನ್ನೂ ಬಾಯಿತುಂಬ ಹೊಗಳಿದ್ದಾನೆ. ("ಧರೆಗಧಿಕ ಹಂಪೆಯ ವರ ಪುಣ್ಯಕ್ಷೇತ್ರದಿ ವರವಿತ್ತ ವಿರುಪಾಕ್ಷಲಿಂಗ, ತನಳ ಚೆನ್ನಿಗರಾಮ ಮುರಿದು ಬಲ್ಲಾಳನ, ಗುತ್ತಿಗೆ ದಂಡಿಳಿಯೆ ಪಂಚಸಂಧಿ ||" (v, ೨೬೦) ; "ಕಾಶಿ ರಾಮೇಶ್ವರಕೆ ಈಶ ವೆಗ್ಗಳವಾದ ಕೈಲಾಸವೆನಿಸುವ ಹಂಪೆ ವಾಸದಿ ನೆಲಸಿರ್ಪ ಈಶ ವಿರುಪಾಕ್ಷ ಗೋಚರಿಸು ಮುಂದಣ ಕೃತಿಯ ||" (vii, ೪). ಇದೇ ಪದ್ಯಗಳು ಬಹುಮಟ್ಟಿಗೆ ಪುನರಾವೃತ್ತಿಯಾಗುತ್ತವೆ.) ತನ್ನನ್ನು ಕುರಿತು ಹೇಳಿಕೊಳ್ಳುವಾಗ "ರಾಮಕೃತಿಯ ಸಾರ ಯಾರು ಮಾಡಿದರೆಂದು ಆಡರೆ ಜನರು ಲೋಕದೊಳಗೆ, ರೂಢಿಯೊಳು ಕ[ವಿ]ರತ್ನ ಹಂಪೆಯ ಚರಪತಿ ಮಾಡಿದರ್ಮಹಲಿಂಗಸ್ವಾಮಿ, (i, ೧೬)" ಎಂದು ತಿಳಿಸಿರುತ್ತಾನೆ. ಆದ್ದರಿಂದ ಈತನು ಶಿವಭಕ್ತನೆಂದು ಸ್ವವಿದಿತವಾಗುತ್ತದೆ. ಇದಲ್ಲದೆ ಶಿವಗಂಗೆಯನ್ನು ಸ್ಮರಿಸುವುದರಿಂದ ಈತನು ಶಿವಗಂಗೆಯ ಮೇಲಣ ಗವಿಯ ಸಂಪ್ರದಾಯಕ್ಕೆ ಸೇರಿದವನಿರಬಹುದೆಂದು ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಸೂಚಿಸಿರುವರು.[1] ತನ್ನ ಕೃತಿಯ ಪ್ರಾರಂಭದಲ್ಲಿಯೇ ರೇವಣಾಚಾರ್ಯರನ್ನೂ ಉಲ್ಲೇಖಿಸಿರುತ್ತಾನೆ (i, ೧೭). ಪೂರ್ವಕವಿಗಳನ್ನು ಸ್ತುತಿಸುವ ಸಂದರ್ಭದಲ್ಲಿ ಕಾಳಿದಾಸ, ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಕವಿಲಿಂಗ ಮೊದಲಾದವರನ್ನು ಮಾತ್ರವೇ ಹೇಳಿರುವುದಲ್ಲದೆ ಹರಿಭಕ್ತರಾದ ಪುರಂದರದಾಸರನ್ನೂ ಕನಕದಾಸರನ್ನೂ ಸ್ಮರಿಸಿರುವುದು ಸೋಜಿಗವಾಗಿದೆ. "ತಾಳಪಾದ ಚೆನ್ನ" ಎಂಬ ಹೆಸರೊಂದು ಬರುತ್ತದೆ.[2] ಇದು ಯಾರನ್ನು ಕುರಿತುದೋ ಏನೋ ಹೇಳಬರು

---

ಕವಿಗಳಿಬ್ಬರಿಗೂ ಇರುವ ಬಾಂಧವ್ಯವನ್ನು ಕಂಡರೆ, ಈ ಸಂಗತಿ ಏನೋ ಭ್ರಮೆಯಿಂದ ಉಂಟಾಗಿರಬೇಕು ಎನ್ನಿಸುತ್ತದೆ. ಮಂಗರಸನಿಗೆ ಸಂಬಂಧಿಸಿದ ಮತ್ತೊಂದು ಲಿಖಿತದಲ್ಲಿಯೂ ಈ ವಿಷಯ ಉಕ್ತವಾಗಿರುವುದು ಕಂಡುಬರುತ್ತದೆ. (MAR, 1925, pp. 14–16 ; ನೇಮಿಜಿನೇಶ ಸಂಗತಿ, ಸಂ. ಶ್ರೀ. ಶಾಂತರಾಜಶಾಸ್ತ್ರಿ, ಪೀಠಿಕೆ, ಪು. xi–xii.)

ಈ ಉಲ್ಲೇಖನದ ಕಡೆಗೆ ನನ್ನ ಗಮನವನ್ನು ಸೆಳೆದ ವಿದ್ಯಾರ್ಥಿಮಿತ್ರರಾದ ಶ್ರೀ. ಎಂ. ಶಿವಣ್ಣ, ಎಂ.ಎ., ಅವರಿಗೆ ನನ್ನ ವಂದನೆಗಳು.

1. ಶರಣ ಸಾಹಿತ್ಯ, ಸಂ. vii, ಸಂ. ೭, ಪು. ೮೩.
2. ದೇವತಾ ಭಜನೆಯನು ಮಾಡಿದೆ ಬಲ್ಲಂತೆ ಕೊಂಡಾಡುವೆ ಕಲಿಯಾ ಸೊ....ಮವನು |
   ಕಾಳಿದಾಸನು ಕನಕ ತಾಳಪಾದ ಚೆನ್ನ ಮೇಲೆ ಪುರಂದರವಿಠಲ ||

   ಹರಕವಿಯ ಹಂಪೆಯ ಹರಿ ರಾಘವಾಂಕರ ಕೆರೆಯ ಪದ್ಮರಸ ಕವಿಲಿಂಗ |
   ಚರಣಾಭಿಧಾನಕ್ಕೆಯೆರಗಿ ವಂದನೆ ಮಾಡಿ ಕಡಲ ವಿಸ್ತರವ ವರ್ಣಿಸುವೆ || (i, ೮, ೯.)

ವಂತಿಲ್ಲ. ಇಷ್ಟದೇವತೆಗಳನ್ನು ಕೊಂಡಾಡುವ ಸಂದರ್ಭದಲ್ಲಿ ಪಾರ್ವತಿ, ಪರಮೇಶ್ವರ, ವಿಘ್ನೇರಾಜ, ತಗಡೂರು ಬೆನವ, ಶಾರದೆ, ಶರಭೇಂದ್ರ, ಕಲ್ಯಾಣದ ಬಸವರಾಜರನ್ನು ಹೇಳಿರುವನು (i, ೧–೭). ಇನ್ನೊಂದು ಸನ್ನಿವೇಶದಲ್ಲಿ ಅಲ್ಲಮನನ್ನೂ ಹೊಗಳಿರುವನು (iii, ೧).[1] ಸದ್ಯಕ್ಕೆ ಈ ಕೃತಿಯ ಒಂದೇ ಒಂದು ಪ್ರತಿ ಲಭಿಸಿರುವುದರಿಂದ ಇಲ್ಲಿನ ಹೇಳಿಕೆಗಳ ಆಧಾರದ ಮೇಲೆಯೇ ಕವಿಯ ಕಾಲವನ್ನು ಊಹಿಸಬೇಕಾಗಿದೆ. ಪೂರ್ವಕವಿ ಪರಂಪರೆಯಲ್ಲಿ ಕನಕದಾಸ ಮತ್ತು ಪುರಂದರದಾಸರೇ ಇತ್ತೀಚಿನವರಾದ್ದರಿಂದ, ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು, ಈತನು ಪುರಂದರದಾಸರಿಂದ ಈಚೆಗೆ, ಎಂದರೆ, ಸುಮಾರು ೧೬ ನೆಯ ಶತಮಾನದ ಅಂತ್ಯದಲ್ಲಿ ಈ ಕೃತಿಯನ್ನು ರಚಿಸಿರಬೇಕೆಂದು ಅಭಿಪ್ರಾಯಪಡುತ್ತಾರೆ.[2]

ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಸೂಚಿಸಿರುವಂತೆ ಮಹಲಿಂಗಸ್ವಾಮಿ, ಪುರಂದರದಾಸ ಮತ್ತು ಕನಕದಾಸರಗಿಂತ ಈಚಿನವನೆಂದು ಒಪ್ಪಬಹುದೇ ಹೊರತು, ಅವನು ೧೬ನೆಯ ಶತಮಾನದ ಅಂತ್ಯದಲ್ಲಿಯೇ ಇರಬೇಕೆಂಬ ನಿಯಮವೇನೂ ಇಲ್ಲ. ಆತನ ಕಾವ್ಯದ ಸರಣಿಯನ್ನು ನೋಡಿದರೆ, ಆತನು ಸ್ಪಷ್ಟವಾಗಿ ಹೇಳದೆ ಇರುವ ಇತರ ಕವಿಗಳ ಪ್ರಭಾವವೂ ಅವನ ಕೃತಿಯ ಮೇಲೆ ತಕ್ಕಮಟ್ಟಿಗೆ ಬಿದ್ದಿರುವಂತೆ ತೋರಿಬರುತ್ತದೆ.

ಇಲ್ಲಿನ ಕಥಾವಿವರ, ಕಥನಕ್ರಮಗಳನ್ನು ಗಮನಿಸಿದರೆ ಈತನ ಕೃತಿಯ ಮೇಲೆ ಪಾಂಚಾಳ ಗಂಗನ ರಚನೆಯ ಪ್ರಭಾವ ಸಾಕಾದಷ್ಟು ಗಾಢವಾಗಿಯೇ ಬಿದ್ದಿರುವುದು ವಿದಿತವಾಗುತ್ತದೆ. (ವಿವರಗಳನ್ನು ಮುಂದೆ ವಿಚಾರ ಮಾಡಲಾಗಿದೆ, ಅಧ್ಯಾಯ vi, ಮೂರು ಕೃತಿಗಳ ತುಲನೆ.) ಆದರೆ ಮಹಲಿಂಗಸ್ವಾಮಿಯಲ್ಲಿ ಕಥೆ ಬೆಳೆದಿರುವ ರೀತಿ (ಕುಮಾರರಾಮನ ಮಗನಾದ ಜಟ್ಟಂಗಿರಾಮನು ತನ್ನ ಗುರುವಿನ ಮೂಲಕ ತನ್ನ ತಂದೆಯ ವೃತ್ತಾಂತವನ್ನು ಕೇಳಿ ತಿಳಿದನೆಂಬ ಕಲ್ಪನೆ), ತನ್ನದೇ ಆದ ಅವತಾರಸೃಷ್ಟಿ, ಪ್ರಾಸಂಗಿಕವಾಗಿ ಬರುವ ಹಲವಾರು ಉಪಕಥೆಗಳು, ಉರ್ದುಮಿಶ್ರಿತವಾದ ಹಾಗೂ ಗ್ರಾಮ್ಯವೆನ್ನಬಹುದಾದ ಅನೇಕ ಭಾಷಾ ಪ್ರಯೋಗಗಳು ಇವೇ ಮೊದಲಾದ ಅಂಶಗಳನ್ನೂ ಗಮನಿಸಿದರೆ, ಈ ರಚನೆ ಪಾಂಚಾಳ ಗಂಗನ ಕೃತಿಗಿಂತಲೂ ಕನಿಷ್ಠ ಪಕ್ಷ ಒಂದು ಶತಮಾನವಾದರೂ ಈಚಿನದಾಗಿರಬೇಕೆಂದು ಹೇಳಬಹುದು. ಈ ಕವಿ ಪಾಂಚಾಳ ಗಂಗನನ್ನೂ ಸ್ಮರಿಸಿದ್ದರೆ ತುಂಬ ಉಪಕಾರವಾಗುತ್ತಿತ್ತು. ಆದರೂ ಈ ಹೆಸರು ಈತನಿಗೆ ಅಪರಿಚಿತವಾಗಿತ್ತು ಎನ್ನುವಂತಿಲ್ಲ. ಏಕೆಂದರೆ, ಕುಮಾರರಾಮನ ಪಕ್ಷವನ್ನು ವಹಿಸಿ ಹೋರಾಡಿದ ಅನೇಕ ವೀರರನ್ನು ಕುರಿತು ಹೇಳುವಾಗ ಎರಡು ಕಡೆಗಳಲ್ಲಿ (xvii, ೮೦ ; xix, ೨೦) "ಪಂ (ಪಾಂ ?)ಚಾನಗಂಗ" ಎಂಬ ಹೆಸರೊಂದನ್ನು ಬಳಸಿರುತ್ತಾನೆ.[3] ನಂಜುಂಡನಲ್ಲಾಗಲಿ, ಪಾಂಚಾಳ ಗಂಗನಲ್ಲಾಗಲಿ ಕಾಣದೆ, ಇಲ್ಲಿ ಮಾತ್ರವೇ ಉಕ್ತವಾಗಿ

---

1. ಮಾಯೆಯನ್ನು ಗೆದ್ದ ಅಲ್ಲಮನನ್ನು ಪ್ರಾಸಂಗಿಕವಾಗಿ ಬೇರೆ ಬೇರೆ ಎಡೆಗಳಲ್ಲಿಯೂ ಸ್ತುತಿಸಿರುತ್ತಾನೆ (xii, ೧೯೪; xv, ೧೧೨).

2. ಶರಣ ಸಾಹಿತ್ಯ, ಸಂ. vii, ಸಂ. ೭, ಪು. ೮೩.

3. ವೀರ ಸಂಗನು ಹೊಕ್ಕು ಪ್ರಾಣದಾಸೆಯ ತೊರೆದು
ಬಾಣಿ ಮುದ್ದನು ಹಂಪ ಸಹಿತ
ಬಾಣರ ಬಡಗಿಯ ಪಂಚಾನರಾ ಗಂಗೈಯಾ-
ನಾಗ ರಾಹುತನು ಲಿಂಗಣ್ಣ (xvii, ೮೦)

ಬಡಬಡ ಹಣ್ಣಿಗೆ ಕಡೆಯೆ ಬಾಳೆಹಣ್ಣಿನ ಸಿಪ್ಪೆ
ಕಡಿಯದಿರಲು ತಂತ್ರದೊಳಗೆ
ಸುಡುವೆನು ದಂಡನು ಶಕ್ತಿಯುಕ್ತಿಯ ಮಾಡಿ
ನಡೆಯಲು ಪಂಚಾನಾ ಗಂಗಾ (xix, ೨೦)

ರುವ ಈ ಹೆಸರನ್ನು ಕಂಡರೆ ಕುತೂಹಲವಾಗುವುದು ಸಹಜ. ಇದು ಪಾಂಚಾಳ ಗಂಗನನ್ನು ನೇರವಾಗಿ ಸ್ತುತಿಸುವಂತಿಲ್ಲದಿದ್ದರೂ, ಆತನ ಪೂರ್ವಜರನ್ನು ಸ್ಮರಿಸುವ ಒಂದು ಪ್ರಯತ್ನವಿದ್ದರೂ ಇರಬಹುದು.

ಎರಡನೆಯದಾಗಿ, ಮಹಲಿಂಗಸ್ವಾಮಿಯ ಕೃತಿಯ ಸಂವಿಧಾನವನ್ನು ನೋಡಿದರೆ, ಅದು ಕನ್ನಡ "ಜೈಮಿನಿಭಾರತ"ದ ನೆನಪನ್ನು ಉಂಟುಮಾಡುತ್ತದೆ. ಏಕೆಂದರೆ ಲಕ್ಷ್ಮೀಶನ ಕೃತಿಯಲ್ಲಿರುವಂತೆಯೇ ಇಲ್ಲಿಯೂ ದೃಷ್ಟಾಂತ ರೂಪದಲ್ಲಿ ಅನೇಕ ಉಪಕಥೆಗಳು ಬರುತ್ತವೆ. ಹಾಗಿದ್ದಲ್ಲಿ, ಈತನು ಪೂರ್ವಕವಿಗಳ ಪರಂಪರೆಯಲ್ಲಿ ಲಕ್ಷ್ಮೀಶನ ಹೆಸರನ್ನು ಏಕೆ ಹೇಳಿಲ್ಲವೆಂದು ಸಂದೇಹವುಂಟಾಗುವುದು ಸಹಜ. ಆದರೆ, ಪರೋಕ್ಷವಾಗಿ ಇದನ್ನು ಸೂಚಿಸಿರುವಂತೆ ಒಂದೆರಡು ಸಂದರ್ಭಗಳು ಬರುತ್ತವೆ. ಕುಮಾರರಾಮನ ಮಗನಾದ ಜಟ್ಟಂಗಿ ರಾಮನು ತನ್ನ ಗುರುವನ್ನು ಕುರಿತು " ಭಾರತ ಜೈಮು (ಮಿ?)ನಿಯ ಕಾಳಗ ಯಂಬರು ಪೇಳಬೇಕೆನಗೆ ಸದ್ಗುರುವೆ (i, ೩೪)" ಎಂದು ಕೇಳಿಕೊಳ್ಳಲು, ಅವರು "ತನುಜನೆ ಕೇಳ್ನಿಮ್ಮ ಜನಕ ಮಾಡಿದ ಕಾರ್ಯ ದಣಿಯಲಾಗುವುದು ಈ ಧರಣಿ, ಜೈಮು (ಮಿ?) ನಿಯು ರಾಮಣ್ಯ ಸಮರುಕ್ತಿ ಭಾರತಕೆ ಮಿಗಿಲಾಗಿ ಮಾಡಿ ಆಳಿದರು (i, ೩೫)" ಎಂದು ಹೇಳಿ ಕುಮಾರರಾಮನ ಕಥೆಯನ್ನು ವಿವರಿಸುವರು. ಮತ್ತೊಂದು ಎಡೆಯಲ್ಲಿ " ಜೈಮಿನಿ ಕಥೆಯೊಳಗೆ ಚಂಪ್ರಹಾಸಗೆ ಮುನಿದ ಮಂತ್ರಿಯ ತೆರನಾಯಿತೆನಗೆ (v, ೧೫೩) " ಎಂಬುದಾಗಿ ಬರುತ್ತದೆ. ತಪ್ಪುಮಾಡಿದವನು ಮಗನಾದರೂ ಸರಿಯೆ ಶಿಕ್ಷಾರ್ಹನೆಂದು ಕಂಪಿಲನು ಬೈಚಪ್ಪನಿಗೆ ಹೇಳುವ ಸಂದರ್ಭದಲ್ಲಿ ರಾಜನು ಸುಧನ್ವನ ಕಥೆಯನ್ನು ಉದಾಹರಿಸುತ್ತಾನೆ (xiii, ೧೮೭-೧೯೮). ಕಡೆಯಲ್ಲಿ, ಕುಮಾರರಾಮನ ಕುದುರೆಯಾದ ಬೊಲ್ಲನು ತನ್ನ ಒಡೆಯನ ಅನುಗ್ರಹದಿಂದ ಶಿಲೆಯಾಯಿತೆಂಬುದಾಗಿ ವಿಶಿಷ್ಟವಾದ ಕಥಾವ್ಯತ್ಯಾಸವೊಂದು ಕಂಡುಬರುತ್ತದೆ (xix, ೨೦೦). ಈ ಘಟನೆ ಧರ್ಮರಾಯನ ಯಜ್ಞಾಶ್ವವು ಸೌಭರಿ ಮುನಿಗಳ ಆಶ್ರಮದ ಬಳಿ ಶಿಲೆಯೊಂದರ ಮೇಲೆ ಕಾಲಿಟ್ಟಾಗ ಅಚಲವಾಗಿ ನಿಂತ ಪ್ರಸಂಗವನ್ನೇ ಹೋಲುತ್ತದೆ (ಜೈಮಿನಿಭಾರತ, x, ೧೨). ಪ್ರಕೃತದಲ್ಲಿ, ಕನ್ನಡಿಗರಲ್ಲಿ ಲಕ್ಷ್ಮೀಶನ ಭಾರತಕ್ಕೆ ಸಾಧಾರಣವಾಗಿ " ಜೈಮಿನಿ " ಎಂಬ ಹೆಸರು ಬಳಕೆಯಲ್ಲಿರುವುದನ್ನು ಜ್ಞಾಪಿಸಿಕೊಂಡರೆ ಮೇಲ್ಕಂಡ ಸಂದರ್ಭಗಳಲ್ಲಿ ಬರುವ " ಜೈಮಿನಿ " ಎಂಬ ಮಾತಿನಲ್ಲಿ ಮಹಲಿಂಗಸ್ವಾಮಿ ಲಕ್ಷ್ಮೀಶನ ಕೃತಿಯನ್ನೇ ಉದ್ದೇಶಿಸಿರಬಹುದೆಂದೂ, ಆ ಕೃತಿಯ ಕಥಾನಿರೂಪಣೆ ಈತನ ಮೇಲೆ ಪ್ರಭಾವ ಬೀರಿರಬಹುದೆಂದೂ ಕಾಣುತ್ತದೆ. ಈ ಕಾರಣಗಳಿಂದ ಈತನು ಲಕ್ಷ್ಮೀಶನಿಗಿಂತ ಈಚಿನವನೆಂದು ಹೇಳಬಹುದು. ಆದರೆ, ಲಕ್ಷ್ಮೀಶನ ಕಾಲವೇ ಇನ್ನೂ ಅನಿಶ್ಚಯವಾಗಿರುವುದರಿಂದ[1] ಮಹಲಿಂಗಸ್ವಾಮಿಯ ಕೃತಿಯನ್ನು ಕುರಿತು ಪ್ರಕೃತದಲ್ಲಿ, ಇದಕ್ಕಿಂತ ಹೆಚ್ಚಾಗಿ ಏನನ್ನೂ ಹೇಳುವಂತಿಲ್ಲ.

ಮಹಲಿಂಗಸ್ವಾಮಿ ಉದಾಹರಿಸಿರುವ ಕೆಲವು ಉಪಕಥೆಗಳು ಈತನ ಕೃತಿಯ ಕಾಲದ ಮೇಲೆ ಸ್ವಲ್ಪ ಮಟ್ಟಿಗೆ ಬೆಳಕನ್ನು ಬೀರಬಲ್ಲವು. ಇಲ್ಲಿ ಉಕ್ತವಾಗಿರುವ " ವರರುಚಿಯ ಕಥೆ ", ಸುಮಾರು ೧೭೨೫ರಲ್ಲಿ ರಚಿತ

---

1. ಟಿಪ್ಪಣಿ: ಈವರೆಗೆ ಲಕ್ಷ್ಮೀಶನ ಕಾಲವನ್ನು ವಿಚಾರಮಾಡಿರುವ ಶ್ರೀ. ಡಿ.ಎಲ್. ನರಸಿಂಹಾಚಾರ್ (ಕವಿ ಲಕ್ಷ್ಮೀಶ, ಪು. ೫೪), ಶ್ರೀ. ಮಂ. ಗೋವಿಂದ ಪೈ (ಪಂಜೆಯವರ ನೆನಪಿಗಾಗಿ, ಪು. ೧೮೯), ಡಾ॥ ರಂ.ಶ್ರೀ. ಮುಗಳಿ (ಕಸಾಚ, ೧೯೫೩, ಪು. ೨೪೦) ಅವರುಗಳು, ಈತನ ಕಾಲದ ಪರಮಾವಧಿಯನ್ನು ಆಗಿಂದಾಗ್ಗೆ ತಿಳಿಸಿದ್ದರೂ, ಕನಿಷ್ಠಾವಧಿಯನ್ನು ನಿರ್ಣಯಿಸಲಾಗದೆ, ಒಂದಲ್ಲ ಒಂದು ರೀತಿಯಲ್ಲಿ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ.

ಲಕ್ಷ್ಮೀಶನ ಕಾಲವನ್ನು ಕುರಿತು ಇತ್ತೀಚೆಗೆ ವಿಚಾರಮಾಡುತ್ತ ಶ್ರೀ. ದ.ರಾ. ಬೇಂದ್ರೆಯವರು "ಲಕ್ಷ್ಮೀಶನು ಕ್ರಿ.ಶ. ೧೫೨೦ ರಿಂದ ಕ್ರಿ.ಶ. ೧೫೮೫ರವರೆಗಿನವನಾಗಬಹುದು. ಲಕ್ಷ್ಮೀಶನ ಜೈಮಿನಿಯೊಳಗಿನ ಕೃಷ್ಣದಿಗ್ವಿಜಯವನ್ನೂ, ಮಾಹಾತ್ಮ್ಯೆಯನ್ನೂ ಲಕ್ಷಿಸಿದರೆ, ಲಕ್ಷ್ಮೀಶ ಕೃಷ್ಣದೇವರಾಯನ ಕಾಲದವನಾದರೂ ಆಗಬಹುದು " ಎಂದು ಸೂಚಿಸಿ, " ಇನ್ನೂ ಬಲವತ್ತರ ಪ್ರಮಾಣಗಳು ಸಿಕ್ಕುವವರೆಗೂ ಲಕ್ಷ್ಮೀಶನ ಕಾಲವು ಕೆಲಮಟ್ಟಿಗೆ ಅನಿಶ್ಚಿತವಾಗಿಯೇ ಉಳಿಯುವುದು " ಎಂಬುದಾಗಿ ಹೇಳಿರುತ್ತಾರೆ (ಶ್ರೀ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ, ೧೯೫೪, ಪು. ೧೧).

ಅಂತೂ ಈ ಕವಿಯ ಕಾಲವನ್ನು ಕುರಿತು ಪ್ರಕೃತದಲ್ಲಿ ಖಚಿತವಾಗಿ ಹೇಳುವುದಕ್ಕೆ ಸಾಧ್ಯವಾಗಿಲ್ಲ.

ವಾದ ಕವಿದೇವನ "ಬತ್ತೀಸ ಪುತ್ಥಳಿ ಕಥೆ"ಯಲ್ಲಿ ಬರುವ ಆ ಕಥೆಯ ಪಾಠವನ್ನೇ ಹೋಲುತ್ತದೆ.[1] ಅದೇ ಗ್ರಂಥದಲ್ಲಿಯೇ ಬರುವ "ಭರ್ತೃಹರಿಯ ನಿರ್ವೇಗದ ಕಥೆ"ಯೇ ಇಲ್ಲಿ "ಮಚ್ಛೇಂದ್ರನ ಕಥೆ"ಯಾಗಿ ಮಾರ್ಪಟ್ಟಿದೆ. ಇಲ್ಲಿ ಬರುವ "ಜಯಸೇನನ ಕಥೆ"ಗೂ, ೧೭೫೦ರಲ್ಲಿ ರಚಿತವಾದ ನರಸಿಂಹಕವಿಯ "ಮದನ ಮೋಹಿನಿ ಕಥೆ"ಗೂ ಸ್ವಲ್ಪಮಟ್ಟಿಗೆ ಸಾಮ್ಯ ಕಂಡುಬರುತ್ತದೆ[1]. ಇಂದಿಗೂ ಜನಪದ ಸಾಹಿತ್ಯದಲ್ಲಿ ಪ್ರಚಾರ ದಲ್ಲಿರುವ "ಡೊಂಬರ ಚೆನ್ನಿಯ ಕಥೆ"ಗೂ ಮಹಲಿಂಗಸ್ವಾಮಿಯಲ್ಲಿ ಎಡೆ ದೊರೆತಿದೆ. ಆದ್ದರಿಂದ, ಪೂರ್ವೋಕ್ತ ವಾದ ಕೃತಿಗಳು ರಚನೆಯಾದ ಅನಂತರವೋ, ಇಲ್ಲವೇ ಈ ಜನಪ್ರಿಯವಾದ ಕಥೆಗಳು ಹೆಚ್ಚು ಹೆಚ್ಚಾಗಿ ಪ್ರಚಾರಕ್ಕೆ ಬರುತ್ತಿದ್ದ ಕಾಲದಲ್ಲಿಯೋ ಮಹಲಿಂಗಸ್ವಾಮಿ ತನ್ನ ಕೃತಿರಚನೆಗೆ ತೊಡಗಿರಬಹುದು. ಎಂದರೆ, ಸುಮಾರು ೧೮ನೆಯ ಶತಮಾನದಿಂದೀಚೆಗೆ ಈ ಕಾವ್ಯವು ರಚಿತವಾಗಿರಬಹುದೆಂದು ಕಾಣುತ್ತದೆ.

ಈ ಸಾಂಗತ್ಯ ಗ್ರಂಥದಲ್ಲಿ ಪ್ರಾಸನಿಯಮವನ್ನು ಮೀರಿರುವುದು ಒಂದು ವಿಶೇಷ ಲಕ್ಷಣ. ಸಾಂಗತ್ಯದ ಚರಿತ್ರೆಯ ದೃಷ್ಟಿಯಿಂದ ಇದು ಗಮನಾರ್ಹವಾದ ಬದಲಾವಣೆ. ಕ್ರಿ.ಶ. ಸುಮಾರು ೧೭೦೦ರಲ್ಲಿ ರಚಿತವಾಗಿ ರುವ ಪದ್ಮನಾಭನ "ಜಿನದತ್ತರಾಯನ ಚರಿತ್ರೆ"ಯಲ್ಲಿ ಇಂಥ ನಿದರ್ಶನಗಳು ತೋರಿಬರುವುದಾಗಿ ಶ್ರೀ. ಡಿ. ಎಲ್. ನರಸಿಂಹಾಚಾರ್ಯರು ತಿಳಿಸಿರುತ್ತಾರೆ.[2] ಈ ಛಂದೋಭಂಗವು ಮಹಲಿಂಗಸ್ವಾಮಿಯಲ್ಲಿ ನಿಯತವಾಗಿಯೇ ಕಾಣುವುದರಿಂದ ಈ ಕೃತಿರಚನೆಯ ಕಾಲಕ್ಕಾಗಲೇ ಈ ಉಲ್ಲಂಘನೆಗೆ ಮಾನ್ಯತೆ ದೊರೆ ತಿದ್ದಿರಬಹುದು. ಎಂದರೆ, ಪ್ರಕೃತ ಗ್ರಂಥ ಸುಮಾರು ೧೮ನೆಯ ಶತಮಾನದಿಂದೀಚೆಗೆ ರಚಿತವಾಗಿರಬೇಕೆಂಬ ಊಹೆಗೆ ಈ ಆಂತರಿಕ ಕಾರಣ ಬೆಂಬಲವಾಗುತ್ತದೆ.

ಈಗ ದೊರೆತಿರುವ ಪ್ರತಿಯ ಕಾಲವೂ ಅನಿಶ್ಚಿತವಾಗಿದೆ. ಇದನ್ನು "ರುಧಿರೋದ್ಗಾರಿ ಸಂವತ್ಸರದ ಮಾರ್ಗಶಿರ ಬಹುಳ ೫ರಲ್ಲು" ಪ್ರಾರಂಭಿಸಿ, "ಶುಕ್ರವಾರ ಅಮೃತ ಘಳಿಗೆ ಮಧ್ಯಾಹ್ನ" ಮುಗಿಸಿದುದಾಗಿ ತಿಳಿದುಬರುತ್ತದೆ. ಈ ಹೇಳಿಕೆಯಲ್ಲಿ ಸಾಕಾದಷ್ಟು ವಿವರಗಳು ಇಲ್ಲದಿರುವುದರಿಂದ ಪ್ರತಿಯ ಕಾಲವನ್ನು ನಿಷ್ಕರ್ಷಿಸುವಂತಿಲ್ಲ. ಇಲ್ಲದಿದ್ದಲ್ಲಿ, ಕೃತಿ ಯಾವ ಗಡುವಿನೊಳಗಾಗಿ ನಿರ್ಮಾಣವಾಗಿರಬಹುದೆಂಬುದನ್ನು ನಿರ್ಧರಿಸಬಹುದಾಗಿತ್ತು.

ಕಡೆಯದಾಗಿ, ಗಂಗನ ಕೃತಿಗೆ ಸಿಕ್ಕಿರುವಷ್ಟು ಪ್ರಾಚುರ್ಯವೇ ಇದಕ್ಕೂ ಲಭಿಸಿದ್ದಲ್ಲಿ ಇದರ ಹಲವಾರು ಪ್ರತಿಗಳು ದೊರೆಯುತ್ತಿದ್ದುವೋ ಏನೋ! ಈಗಲಾದರೋ, ಜನಪ್ರಿಯವಾದ ಅನೇಕ ಸಂಗತಿಗಳಿಂದ ಕೂಡಿದ್ದರೂ ಇದರ ಒಂದೇ ಒಂದು ಪ್ರತಿ ಕಣ್ಣಿಗೆ ಬಿದ್ದಿರುತ್ತದೆ. ಈ ವಿರಳತೆಯನ್ನು ನೋಡಿದರೆ, ಮಹಲಿಂಗಸ್ವಾಮಿಯ ಕೃತಿ ಅಷ್ಟೇನೂ ಪರಿಚಿತವಾದ ರಚನೆಯಲ್ಲವೆಂದೂ, ಬಹುಶಃ ಇದಕ್ಕೆ ಅದರ ಅರ್ವಾಚೀನತೆಯೂ ಒಂದು ಕಾರಣವಿರಬಹುದೆಂದೂ ತೋರುತ್ತದೆ.

ಸದ್ಯದಲ್ಲಿ, ಮೇಲೆ ಹೇಳಿರುವ ಕೆಲವು ಆಂತರಿಕ ಆಧಾರಗಳನ್ನೇ ಅವಲಂಬಿಸಿ, ಮಹಲಿಂಗಸ್ವಾಮಿಯ ಕೃತಿ ಸುಮಾರು ೧೮ನೆಯ ಶತಮಾನದಿಂದೀಚೆಗೆ ರಚಿತವಾಗಿರಬಹುದೆಂದೂ, ಅದು ಗಂಗನಿಗಿಂತಲೂ ಇತ್ತೀಚಿನದಾಗಿರಬೇಕೆಂದೂ ಊಹಿಸಬಹುದಾಗಿದೆ.

ಈ ಪರಿಶೀಲನೆಯಿಂದ, ಕುಮಾರರಾಮನ ಕಥೆಯನ್ನು ಕುರಿತು ನಂಜುಂಡ, ಪಾಂಚಾಳ ಗಂಗ ಮತ್ತು ಹಂಪೆಯ ಚರಪತಿ ಮಹಲಿಂಗಸ್ವಾಮಿ ಎಂಬ ಮೂವರು ಕವಿಗಳು ಸುಮಾರು ನೂರು ನೂರು ವರ್ಷಗಳ ಅಂತರದಲ್ಲಿ ತಮ್ಮ ತಮ್ಮ ಕೃತಿಗಳನ್ನು ಬರೆದಿರಬಹುದೆಂದು ವಿದಿತವಾಗುತ್ತದೆ. ಇವುಗಳಲ್ಲಿ ಕಂಡುಬರುವ ಸಾಮ್ಯ ವೈಷಮ್ಯಗಳನ್ನೂ, ಪರಸ್ಪರ ಪ್ರಭಾವಗಳನ್ನೂ, ಆಯಾ ಕವಿಯ ವೈಶಿಷ್ಟ್ಯಗಳನ್ನೂ, ಮುಂದೆ ವಿವರವಾಗಿ ಸಮೀಕ್ಷಿಸಲಾಗಿದೆ.

---

1. ಈ ವಿವರಗಳನ್ನು ಮುಂದೆ ಕೊಡಲಾಗಿದೆ (ಅಧ್ಯಾಯ ೫, ಕೃತಿಯ ವೈಶಿಷ್ಟ್ಯಗಳು).
2. ಬಾಗಿನ, ಪು. ೨೯೩.

# ೩. ಕುಮಾರರಾಮ ಚರಿತ

## ಹಸ್ತಪ್ರತಿಗಳು

ಮದರಾಸಿನ ಪ್ರಾಚ್ಯಪುಸ್ತಕ ಭಂಡಾರದಲ್ಲಿ ನಂಜುಂಡನ ಕೃತಿಯ ಹತ್ತೊಂಬತ್ತು ಪ್ರತಿಗಳಿವೆ.[1] ಒಂದು ಮಾತ್ರ ಕಾಗದದ ಪ್ರತಿ; ಉಳಿದವುಗಳೆಲ್ಲ ಓಲೆಯ ಪ್ರತಿಗಳು. ಇವುಗಳಲ್ಲಿ ಒಂದು ಪ್ರತಿ ಮಾತ್ರ ಸಮಗ್ರವಾಗಿದೆ. (D. 892.) ಈ ಪ್ರತಿಯಲ್ಲಿ ೧೧ ಆಶ್ವಾಸಗಳೂ, ೪೭ ಸಂಧಿಗಳೂ ಇವೆ. (ಗ್ರಂಥದ ಸಮಾಪ್ತಿವಾಕ್ಯದಲ್ಲಿ "ದ್ವಾದಶಾಶ್ವಾಸಂ" ಎಂದು ಹೇಳಿರುತ್ತದೆ.) ಒಟ್ಟು ೫೫೨೬ ಪದ್ಯಗಳಿವೆ. ಶ್ರೀ. ರಾ. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯಲ್ಲಿ ಉದಾಹರಿಸಿರುವಂತೆ[2] ಈ ಪ್ರತಿಯಲ್ಲಿಯೂ ಗ್ರಂಥದ ಕಡೆಯಲ್ಲಿ ಕೆಲವು ಷಟ್ಪದಿಗಳಿವೆ. ಕವಿಯು ತನ್ನ ಕೃತಿಯನ್ನು ಮುಕ್ತಾಯಗೊಳಿಸುತ್ತ "ಕವಿತಾವಿಶಾರದ ನಂಜುಂಡ ವಿರಚಿತಮಪ್ಪ ಕುಮಾರರಾಮಚರಿತ ಮಹಾಪ್ರಬಂಧ" ಎಂಬುದಾಗಿಯೂ, "ಶೂರ ಶಿರೋಮಣಿ ಕರ್ಣಾಟದೇಶಾಧೀಶ್ವರ ಕುಮಾರರಾಮಚರಿತ ಮಹಾಪ್ರಬಂಧ" ಎಂಬುದಾಗಿಯೂ ಹೇಳಿರುತ್ತಾನೆ. ಗ್ರಂಥಾಂತ್ಯದ ಈ ಗದ್ಯಭಾಗವು ದೀರ್ಘವಾಗಿದೆ. ಈ ಪ್ರತಿಯ ಕಡೆಯಲ್ಲಿ "ದುಂದುಭಿ ಸಂವತ್ಸರದ ಜ್ಯೇಷ್ಠ ಶು. ೫ ಸುಧಿ (ವಾರ) ರಾಮನ ಸಾಂಗತ್ಯವನ್ನು ಕೆಲಸೂರ ದೇವಯ್ಯನು ಪ್ರತಿಸಮಾನವಾಗಿ ಬರೆದನು" ಎಂದಿದೆ.

ಉಳಿದ ಹದಿನೆಂಟು ಪ್ರತಿಗಳಲ್ಲಿ ಕೆಲವು ಸಹಜವಾಗಿಯೇ ಅಪೂರ್ಣ. ಒಂದೆರಡು ಪ್ರತಿಗಳಲ್ಲಿ (D. 900, D. 907) ರತ್ನಾಜಿಯ ಪ್ರಸಂಗದ ಕಥಾಭಾಗವು ಮಾತ್ರ ಕಂಡುಬರುತ್ತದೆ. ಇವುಗಳಲ್ಲಿ ಡಿ. ೯೦೦ ನೆಯ ಸಂಖ್ಯೆಯ ಪ್ರತಿಯಲ್ಲಿ ೧ ರಿಂದ ೮ ಸಂಧಿಗಳೂ, ಡಿ. ೯೦೭ ನೆಯ ಸಂಖ್ಯೆಯ ಪ್ರತಿಯಲ್ಲಿ ೧ ರಿಂದ ೧೨ ಸಂಧಿಗಳೂ ಇವೆ. ಇವುಗಳನ್ನು ಗಮನಿಸಿದರೆ ಜನಪ್ರಿಯವಾದ ರತ್ನಾಜಿಯ ಕಥಾಭಾಗವನ್ನು ಮಾತ್ರವೇ ಪ್ರತಿ ಮಾಡಿಟ್ಟುಕೊಳ್ಳುವುದು ಪದ್ಧತಿಯಲ್ಲಿತ್ತೆಂದು ತೋರುತ್ತದೆ. ಇತರ ಪ್ರತಿಗಳಲ್ಲಿ ಸಂಧಿಲೋಪಗಳೂ, ಸಂಧಿಕ್ರಮಗಳಲ್ಲಿ ಹೆಚ್ಚು ಕಡಮೆಗಳೂ ಕಂಡುಬರುತ್ತವೆ. ಡಿ. ೯೦೮ನೆಯ ಸಂಖ್ಯೆಯ ಪ್ರತಿಯ ಕಡೆಯಲ್ಲಿ "ಶ್ರೀ ಶಕಾಬ್ದ ೧೫೯೧ ನೆಯ ಸೌಮ್ಯ ಸಂವತ್ಸರದ ಫಾಲ್ಗುಣ ಶುದ್ಧ ೨ ಶುಕ್ರವಾರ" ಬರೆದುದಾಗಿ ಹೇಳಿದೆ. ಎಂದರೆ, ಈ ಪ್ರತಿಯ ಕಾಲ ಕ್ರಿ. ಶ. ೧೧–೨–೧೬೭೦ ಆಗುತ್ತದೆ.[3] (ಮದರಾಸಿನಲ್ಲಿರುವ ನಂಜುಂಡನ ಕೃತಿಯ ಪ್ರತಿಗಳ ಪೂರ್ಣ ವಿವರಗಳನ್ನು ಅಲ್ಲಿನ ಹಸ್ತಪ್ರತಿಗಳ ಪಟ್ಟಿಯಲ್ಲಿ ಕೊಡಲಾಗಿದೆ. DCKM, Vol. V, pp. 1217–1232.)

ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಐದು ಓಲೆಯ ಪ್ರತಿಗಳಿವೆ. ಇವುಗಳಲ್ಲಿ ಒಂದು ಪ್ರತಿ ಮಾತ್ರ ಸಮಗ್ರವಾಗಿದೆ. (ಕೆ. ೫೯೧; ಕೈಬರಹದ ಕನ್ನಡ ಗ್ರಂಥಗಳ ಅಕಾರಾದಿ ಸೂಚಿನೀ, ಪು. ೮.) ಇಲ್ಲಿನ ಪ್ರತಿಗಳನ್ನೂ, ಇತರ ಕೆಲವು ಪ್ರತಿಗಳನ್ನೂ ಅವಲಂಬಿಸಿ ಈ ಸಂಸ್ಥೆಯವರು ಈಗ ತಾನೇ "(ಪರದಾರಸೋದರ) ರಾಮನಾಥ ಚರಿತ" ಎಂಬುದಾಗಿ ಗ್ರಂಥದ ಪೂರ್ವಾರ್ಧವನ್ನು ಪ್ರಕಟಿಸಿರುತ್ತಾರೆ.[4] ಈ ಗ್ರಂಥದ "ಅರಿಕೆ" ಯಲ್ಲಿ ಒಟ್ಟು ಒಂಬತ್ತು ಓಲೆಯ ಪ್ರತಿಗಳ ಪರಿಚಯವನ್ನು ಮಾಡಿಕೊಡಲಾಗಿದೆ (ಅರಿಕೆ, ಪು. ii–iv).

ಶ್ರೀ. ಡಿ. ಎಲ್. ನರಸಿಂಹಾಚಾರ್, ಎಂ. ಎ., ಅವರ ಬಳಿಯಲ್ಲಿ ಉತ್ತಮವಾದ ಒಂದು ಓಲೆಯ ಪ್ರತಿಯಿದೆ. ಇದನ್ನು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದವರು "ಇ" ಪ್ರತಿ ಎಂಬುದಾಗಿ ನಿರ್ದೇಶಿಸಿರುತ್ತಾರೆ. ಸಮಗ್ರವೂ ಸ್ಫುಟವೂ ಆದ ಈ ಪ್ರತಿಯನ್ನು ಪ್ರಕೃತ ಪ್ರಬಂಧದಲ್ಲಿ ಸೂಕ್ತವರಿತು ಉಪಯೋಗಿಸಿಕೊಳ್ಳಲಾಗಿದೆ. ಮದರಾಸಿನ ಪ್ರತಿಯಲ್ಲಿರುವಂತೆಯೇ ಗ್ರಂಥಾಂತ್ಯದಲ್ಲಿ ಷಟ್ಪದಿಗಳೂ, ದೀರ್ಘವಾದ ಗದ್ಯಭಾಗವೂ ಇವೆ. ಈ ಪ್ರತಿಯನ್ನು "ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷಂಗಳು ೧೭೧೯ ಸಂದ ವರ್ತಮಾನವಾದ ಪೈಂಗಳನಾಮ ಸಂವತ್ಸರದ

---

1. ಇತ್ತೀಚೆಗೆ ಈ ಪ್ರತಿಗಳಲ್ಲಿ ಕೆಲವನ್ನು ಮೈಸೂರು ಮತ್ತು ಧಾರವಾಡಗಳಲ್ಲಿರುವ ಪ್ರಾಚ್ಯವಿದ್ಯಾ ಸಂಶೋಧನಾಲಯಗಳಿಗೆ ಕೊಡಲಾಯಿತೆಂದು ತಿಳಿದುಬರುತ್ತದೆ.

2. ಕಚ. ಸಂ. ii, ಪು. ೨೦೪.

3. ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದ ಸಂಪಾದಕರು ತಾವು ಬಳಸಿಕೊಂಡಿರುವ ನಂಜುಂಡನ ಪ್ರತಿಗಳಲ್ಲಿ "ಐ" ಎಂಬುದು "ತೀರ ಹಳೆಯದು" ಎಂದೂ, "ಚ" ಎಂಬುದರ ಕಾಲವು "ಬಹುಶಃ ೨೯–೫–೧೬೫೪" ಎಂದೂ ಸೂಚಿಸಿರುತ್ತಾರೆ. (ರಾಮನಾಥ ಚರಿತ, ಪೂರ್ವಾರ್ಧ ಅರಿಕೆ, ಪು. iii ಮತ್ತು iv.)

4. ಇತ್ತೀಚೆಗೆ ಉತ್ತರಾರ್ಧವೂ ಪ್ರಕಟವಾಗಿದೆ, ೧೯೬೪.

ಪುಷ್ಯ ಶುದ್ಧ ಸಪ್ತಮಿಯು ರವಿವಾರ (ಸೋಮವಾರ ?)" ಬರೆದು ಮುಗಿಸಿದುದಾಗಿ ತಿಳಿದುಬರುತ್ತದೆ. ಎಂದರೆ, ಈ ಪ್ರತಿಯ ಕಾಲ ಕ್ರಿ.ಶ. ೨೫–೧೨–೧೭೯೭ ಆಗುತ್ತದೆ.

ಶ್ರೀ. ಎಸ್. ಅನಂತರಂಗಾಚಾರ್, ಎಂ.ಎ., ಬಿ.ಟಿ., ಅವರ ಬಳಿಯಲ್ಲಿ ಒಂದು ಪ್ರತಿಯಿದೆ. ಶ್ರೀಯುತರು ಇದನ್ನು ಆಧಾರವಾಗಿಟ್ಟುಕೊಂಡು "ಕುಮಾರರಾಮನ ಸಾಂಗತ್ಯ ಸಂಗ್ರಹ" ಎಂಬ ಪುಸ್ತಕವನ್ನು ಸಿದ್ಧಪಡಿಸಿರುತ್ತಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಸರಸ್ವತೀ ಭಂಡಾರದಲ್ಲಿ ಒಂದು ಓಲೆಯ ಪ್ರತಿಯಿದೆ. ಅದರಲ್ಲಿ ೧೧ ಆಶ್ವಾಸಗಳೂ, ೪೭ ಸಂಧಿಗಳೂ, ೫೭೦೩ ಪದ್ಯಗಳೂ ಇವೆ. ಒಟ್ಟು ೨೦೪ ಓಲೆಗಳಿವೆ. ಪ್ರತಿಯೊಂದು ಓಲೆಯ ಉದ್ದ ೧೮.೭"; ಅಗಲ ೧.೭". ಪ್ರತಿಯೊಂದು ಓಲೆಯಲ್ಲಿಯೂ ಸರಾಸರಿ ೯ ಸಾಲುಗಳಿವೆ. ಪ್ರತಿ ತಕ್ಕಮಟ್ಟಿಗೆ ಶುದ್ಧವಾಗಿದೆ. ಶಕಟರೇಫವನ್ನು ಬಳಸಿದೆ. ಕೆಲವು ಓಲೆಗಳು ಲೋಪವಾಗಿರುವುದರಿಂದ ಹಲವು ಸಂಧಿಗಳು (ಸಂ. xxix, ಪ. ೮ ರಿಂದ ಸಂ. xxxv, ಪ. ೯೭ ರವರೆಗೆ) ಕೈತಪ್ಪಿವೆ. ಇದು ಹಲವೆಡೆಗಳಲ್ಲಿ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿರುವ "ಎ" ಹಾಗೂ "ಗ" ಪ್ರತಿಗಳನ್ನೂ, ಕೆಲವೆಡೆಗಳಲ್ಲಿ "ಅ" ಮತ್ತು "ಐ" ಪ್ರತಿಗಳನ್ನೂ ಹೋಲುತ್ತದೆ. ಪ್ರಕೃತ ಪ್ರಬಂಧಕ್ಕೆ ಈ ಪ್ರತಿಯನ್ನೇ ಆಧಾರವಾಗಿಟ್ಟುಕೊಳ್ಳಲಾಗಿದೆ. ಇಲ್ಲಿನ ಸಂಧಿ ಮತ್ತು ಪದ್ಯ ಸಂಖ್ಯೆಗಳು ಈ ಪ್ರತಿಗೆ ಅನುಸಾರವಾಗಿವೆ. ಲೋಪವಾಗಿರುವ ಸಂಧಿಗಳ ಕಥಾಭಾಗವನ್ನು ಮದರಾಸಿನ ಪ್ರಾಚ್ಯಪುಸ್ತಕಭಂಡಾರದಲ್ಲಿರುವ ಡಿ. ೮೯೨ ರ ಸಹಾಯದಿಂದಲೂ, ಶ್ರೀ. ಡಿ. ಎಲ್. ನರಸಿಂಹಾಚಾರ್ಯರ ಪ್ರತಿಯ ಸಹಾಯದಿಂದಲೂ ಸರಿಪಡಿಸಿಕೊಳ್ಳಲಾಗಿದೆ. ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದವರು ಪ್ರಕಟಿಸಿರುವ ಮುದ್ರಿತ ಪ್ರತಿಯನ್ನೂ ಸಮಯೋಚಿತವಾಗಿ ಬಳಸಿಕೊಳ್ಳಲಾಗಿದೆ. (ಇತರ ಪ್ರತಿಗಳಿಂದ ಸ್ವೀಕರಿಸಿರುವ ಪಾಠಗಳನ್ನು ಕಂಸದಲ್ಲಿ ಸೂಚಿಸಿದೆ.)[1]

## ಪ್ರತಿಗಳ ಪರಿಶೀಲನೆ

೧. ನಂಜುಂಡನ ಕೃತಿಯ ಪ್ರತಿಗಳನ್ನು ಹೋಲಿಸಿ ನೋಡಿದರೆ, ಕಥಾವಸ್ತುವಿನ ದೃಷ್ಟಿಯಿಂದ ಗಮನಾರ್ಹವಾದ ಯಾವ ಅಂತರವೂ ಕಂಡುಬರುವುದಿಲ್ಲ.

೨. ಪದ್ಯಗಳಲ್ಲಿ ಕಂಡುಬರುವ ಪಾಠಾಂತರಗಳೂ ಸಾಮಾನ್ಯ ರೀತಿಯವು. ಆದ್ದರಿಂದ, ಮೂಲ ಕೃತಿಯ ಸ್ವರೂಪಕ್ಕೆ ಹೆಚ್ಚು ಭಂಗವುಂಟಾಗಿಲ್ಲವೆಂದು ಭಾವಿಸಬಹುದು.

೩. ಇತರ ಪಾಠಭೇದಗಳು ಈ ರೀತಿ ಇವೆ:—

(i) ಸಂಧಿಯ ಪ್ರಾರಂಭದಲ್ಲಿ ಬರುವ ಸೂಚನಾ ಪದ್ಯಗಳು ಒಂದೇ ಪ್ರತಿಯಲ್ಲಿಯೇ ನಿಯತವಾಗಿ ಕಂಡುಬರುವುದಿಲ್ಲ. ಪರಸ್ಪರ ಪ್ರತಿಗಳಲ್ಲಿಯೂ ಸಮಾನವಾಗಿಲ್ಲ.

(ii) ಸಂಧಿಗಳ ಅಂತ್ಯದಲ್ಲಿ "ಇದು ಪರದಾರ ಸೋದರ ರಾಮನಾಥನ ಪದಕೃತಿಯೊಳಗೆ" ಎಂದು ಆರಂಭವಾಗಿ ಆಯಾ ಆಶ್ವಾಸದ ಮತ್ತು ಸಂಧಿಯ ಸಂಖ್ಯೆಗಳನ್ನು ಸೂಚಿಸುವ ಪದ್ಯವು ಎಲ್ಲ ಪ್ರತಿಗಳಲ್ಲಿಯೂ ಕಂಡುಬರುವುದಿಲ್ಲ. ಒಂದೇ ಪ್ರತಿಯಲ್ಲಿಯೂ ನಿಯತವಾಗಿಲ್ಲ.[2]

(iii) ಆಶ್ವಾಸಾಂತ್ಯದ ವಾರ್ಧಕಷಟ್ಪದಿಯೊಂದು ಕೆಲವು ಪ್ರತಿಗಳಲ್ಲಿ ಕಂಡುಬರುತ್ತದೆ.

(iv) ಗ್ರಂಥಾಂತ್ಯದ ಸಮಾಪ್ತಿ ವಾಕ್ಯವು ಒಮ್ಮೊಮ್ಮೆ ಸಂಗ್ರಹವಾಗಿರುವುದುಂಟು.

(v) ಗ್ರಂಥಾಂತ್ಯದಲ್ಲಿ ಬರುವ ಕೆಲವು ಷಟ್ಪದಿಗಳು ಒಮ್ಮೊಮ್ಮೆ ಲೋಪವಾಗಿರುವುದುಂಟು.

(vi) ಪದ್ಯಗಳ ಒಟ್ಟು ಸಂಖ್ಯೆ ಮತ್ತು ಆಶ್ವಾಸ ವಿಭಾಗ ಕ್ರಮಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳು ಕಂಡುಬರುವುದುಂಟು.

(vii) ಕೆಲವು ಪ್ರತಿಗಳಲ್ಲಿ ಆಯಾ ಸಂಧಿಯ ಹೆಸರನ್ನು ಸೂಚಿಸಿದೆ. ಇವು ಒಂದೇ ರೀತಿಯಾಗಿಲ್ಲ.

---

1. ತುಮಕೂರಿನ ಸಿದ್ಧಗಂಗಾ ಕ್ಷೇತ್ರದಲ್ಲಿ ೧೯೬೩ ರಲ್ಲಿ ನಡೆದ ೪೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಗ್ರಂಥ ಪ್ರದರ್ಶನದಲ್ಲಿ ಶ್ರೀ. ಮಧುಗಿರಿ ನಾರಾಯಣಾಚಾರ್ಯರವರ ಹಸ್ತಪ್ರತಿಗಳ ಸಂಗ್ರಹದಲ್ಲಿ ನಂಜುಂಡನ ಕೃತಿಯ ಪ್ರತಿಯೊಂದು ಇತ್ತೀಚೆಗೆ ನನ್ನ ಗಮನಕ್ಕೆ ಬಂದಿತು.

2. ಈ ಅಂಶವನ್ನು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದ ಸಂಪಾದಕರೂ ಸೂಚಿಸಿರುತ್ತಾರೆ (ರಾಮನಾಥ ಚರಿತ, ಪೂರ್ವಾರ್ಧ, ಅರಿಕೆ, ಪು. ii–iv).

# ಕಥಾಸಂಗ್ರಹ

## ಪೀಠಿಕೆ

ಸಮುದ್ರದಿಂದ ಆವೃತವಾದ ಭೂಮಂಡಲದ ಮಧ್ಯೆ ಕನಕಾಚಲವಿದೆ. ಮೇರುಪರ್ವತಕ್ಕೆ ದಕ್ಷಿಣದಲ್ಲಿ ಕರ್ನಾಟಕ ಮಹೀಮಂಡಲವು ಅತ್ಯಂತ ರಮಣೀಯವಾಗಿದೆ. ಕಾವೇರಿಯಿಂದ ಹಿಡಿದು ಗೋದಾವರಿಯವರಿಗೆ ವ್ಯಾಪಿಸಿರುವ ಈ ಕರ್ನಾಟಕವು ಎಲ್ಲ ರೀತಿಗಳಲ್ಲಿಯೂ ಅನುಪಮವೆನ್ನಿಸಿದೆ. ಈ ನಾಡಿನ ನಡುವೆ "ಭೂಸತಿಯುರ ಕುಂತಲ"ದಂತೆ ಕುಂತಳ ಜನಪದವು ಸ್ವರ್ಗಕ್ಕೂ ಮಿಗಿಲಾಗಿ ವಿರಾಜಿಸುತ್ತಿರುವುದು. ದೇವಾಲಯ, ಕೋಟೆ, ಆರಾಮ ಮೊದಲಾದ ಸಮಸ್ತಲಕ್ಷಣಗಳಿಂದಲೂ ಕೂಡಿರುವುದು. ಈ ನಾಡಿನಲ್ಲಿಯೇ ಕೈಲಾಸ, ಕೇದಾರ, ಗೋಕರ್ಣಗಳನ್ನೂ ಮೀರಿ ಮೆರೆಯುವ ಪಂಪಾಕ್ಷೇತ್ರವಿರುವುದು. ಇಲ್ಲಿಯೇ ತುಂಗಭದ್ರಾ ನದಿ ಹರಿಯುವುದು. ಈ ಪಂಪಾಕ್ಷೇತ್ರದಲ್ಲಿಯೇ ಸಮುದ್ರಸಮಾನವಾದ (ಪಂಪಾ)ಸರೋವರ ವಿರುವುದು. ನೀರಗಳು, ಕೋಟೆ, ವನ, ಮನೆಗಳು ಮೊದಲಾದುವುಗಳಿಂದ ಕೂಡಿ ಈ ಪಂಪಾಪುರಿ ವಿರಾಜಿಸುತ್ತಿರುವುದು. ಇದು ವಿರೂಪಾಕ್ಷನ ನೆಲೆಯೇ ಆಗಿರಬೇಕಾದರೆ ಹೆಚ್ಚು ಹೇಳುವುದೇನಿದೆ! ಈ ಕ್ಷೇತ್ರಕ್ಕೆ ದಕ್ಷಿಣ ದಿಗ್ಭಾಗದಲ್ಲಿ ಹೊಸಮಲೆಯೆಂಬ ದೊಡ್ಡ ಅರಣ್ಯಪ್ರದೇಶವಿರುವುದು. ಈ ಗಹನಾಂತರಾಳದಲ್ಲಿ ಮಹಾಗಿರಿದುರ್ಗ ವೊಂದುಂಟು. ಆ ಗಿರಿದುರ್ಗದೊಳಗಿರುವ ಪಟ್ಟಣವು ದೇವಲೋಕಕ್ಕೆ ಸಮಾನವಾಗಿದೆ. ಎಲ್ಲ ರೀತಿಗಳಲ್ಲೂ ಸಮೃದ್ಧವಾಗಿದೆ. ಈ "ಪಟ್ಟಣವೆಂತೆಂಬ ಪಾರಾವಾರದ ನಟ್ಟನಡುವೆ ಲಂಘಿಸಿದಾ ಕಟ್ಟಿದ ಪಳಯಿಗೆಗಳ ಪಡಗಿನ ಸಮುಕಟ್ಟೆನಂತೆಸೆದುದು" ಕಂಪಿಲನ ಅರಮನೆ! ಕರ್ನಾಟಪತಿಯೆಂಬ ಹೆಸರಿನಿಂದ ಕಂಪಿಲನು ಅರಿಭಯಂಕರನಾಗಿದ್ದನು. ಆತನ ಕೀರ್ತಿ ದಿಗ್ದಿಗಂತಗಳವರೆಗೂ ವ್ಯಾಪಿಸಿತ್ತು. ಬ್ರಹ್ಮಾಂಡವೇ ತುಂಬಿಹೋಗಿತ್ತು. ಕಂಪಿಲನಿಗೆ ಅನೇಕ ರಾಣಿಯರಿದ್ದರು. ಅವರಲ್ಲಿ ಹರಿಹರದೇವಿ ಎಂಬಾಕೆಯೇ ಪಟ್ಟದರಸಿ. "ಶಚಿಯೆಂಬಿಕೆಯಗೆ ಮಂತ್ರಿಯಾದಂತೆ ವಾಕ್ಪತಿ", ಬೈಚಪ್ಪನೆಂಬ "ಶುಚಿಶುದ್ಧಗುಣಿ" ಕಂಪಿಲನಿಗೆ ಮಂತ್ರಿಯಾಗಿದ್ದನು. ಅಣ್ಣ ಭೈರವದೇವನೆಂಬ ಯುವರಾಜನಿದ್ದನು. ಈ ಮಗನೊಂದಿಗೆ ಕೂಡಿ ಕಂಪಿಲನು ಸಮಸ್ತ ಭೂಮಂಡಲವನ್ನೇ ಆಳುತ್ತಿದ್ದನು. ಕಂಪಿಲನಿಗೆ ಬೇಕು ಬೇಕಾದಂತೆ ಅಳಿಯಂದಿರು, ಮಕ್ಕಳು, ಎಕ್ಕಟಿಗರು, ರಾವುತರು, ಸುಭಟರು, ಮುಂತಾದವರಿದ್ದರು. ಶೂದ್ರಕ ಮಹಾರಾಜನಂತೆ ವಿರಾಜಿಸುತ್ತಿದ್ದನು. ಈತನ ಪ್ರತಾಪವೋ ಹೇಳತೀರದು. ಲಾಳ, ಹಮ್ಮೀರ, ಗುರ್ಜರ, ವಂಗ, ಬರ್ಬರ, ಮಾಳವ, ಮಗಧದೇಶಗಳ ಮೇಲೆಲ್ಲ ಈತನು ದಾಳಿ ಮಾಡಿದ್ದ ಸುದ್ದಿ ಡಿಳ್ಳಿಯ ಸುರುತಾಳನತನಕ ಮುಟ್ಟಿತ್ತು. ತೆಲುಗಾಣ್ಯವೆಲ್ಲ ಕಂಪಿಲನಿಗೆ ತೇರಬೀದಿಯಾಗಿತ್ತು. ತಿವುಳನಾಡು ತಿಳಿದೆಡೆಯಾಡುವ ದಾರಿಯಾಗಿತ್ತು. ಹೊಯ್ಸಳ ದೇಶವಂತೂ ಹೊಲದ ಪೆರ್ಬಟ್ಟೆಯಾಗಿತ್ತು. ಹೀಗೆ ಕಂಪಿಲನು ಹೆಸರುವಾಸಿಯಾದ ರಾಜನಾಗಿ ಮೆರೆಯುತ್ತಿದ್ದನು.

ಇತ್ತ, ದೇವಲೋಕದಲ್ಲಿ ಒಂದು ಅಪೂರ್ವವಾದ ಘಟನೆ ನಡೆಯಿತು. ಒಂದು ದಿನ ಈಶ್ವರನು ಅತ್ಯಂತ ವೈಭವದಿಂದ ಕೈಲಾಸದಲ್ಲಿ ಓಲಗವನ್ನು ನೆರೆಯಿಸಿದನು. ಆತನ ಅರ್ಧಾಂಗಿಯಾದ ಪಾರ್ವತಿ ಈಶ್ವರನ ತೊಡೆಯಮೇಲೆ ತೊಡವಿನಂತೆ ಕುಳಿತಿದ್ದಳು. ಈ ವೇಳೆಗೆ ಗಣನಾಥನೊಬ್ಬನು ಬಂದು ಈಶ್ವರನಿಗೆ ಮಾತ್ರವೇ ನಮಿಸಿ ಹಿಂದಕ್ಕೆ ಸರಿದನು. ಇದನ್ನು ಕಂಡು ಪಾರ್ವತಿಗೆ ತುಂಬ ಕೋಪವುಂಟಾಯಿತು. ಪಾರ್ವತಿಯ ಉಗ್ರರೂಪವನ್ನು ಕಂಡ ಈಶ್ವರನು ಕಾರಣವೇನೆಂದು ಕೇಳಿದನು. ಆಗ ಪಾರ್ವತಿ "ಹರಿವಿರಿಂಚಿಗಳಾದಿಯಾದ ದೇವತೆಗಳು ಬಂದು ಶಿರವ ಬಾಗುವರೆನ್ನಡಿಗೆ ದುರುಳನಾರಿವನೆನಗೆಱಗದಿರ್ಪನಿವನಿರವ ಪೇಳಭವ ನೀನೆನಗೆ" ಎಂದು ಸೆಡೆತು ಕೇಳಿದಳು. ಆಗ ಈಶ್ವರನು ಆತನೇ ಮಹಾಪರಾಕ್ರಮಶಾಲಿಯಾದ ಅರ್ಜುನನೆಂದು ಉದಾಹರಣೆಗಳ ಸಮೇತ ಅವನ ವೃತ್ತಾಂತವನ್ನೆಲ್ಲ ವಿಶದಪಡಿಸಿ "ಇಂಥವನ ಮೇಲೆ ನೀನು ನಿಷ್ಕಾರಣವಾಗಿ ಕೋಪಮಾಡಿಕೊಳ್ಳುವುದು ಉಚಿತವಲ್ಲ" ಎಂದು ತಿಳಿಸಿದನು. ಪಾರ್ವತಿಗೆ ಮನಸ್ಸು ಸಮಾಧಾನವಾಗಲಿಲ್ಲ. ಆಕೆ " ಈ ವೀರಶುಚಿತೆಗಳುಳ್ಳರೆ ನನಗಾನತರಾದೊಡವರ ಘನತೆ ಕೆಡುವುದೆ

ನನ್ನಡಿಗಳಿಗೆಱಗದ ದನುಜಾಮರ ನರರುಂಟೆ" ಎಂಬುದಾಗಿ ಪ್ರಶ್ನಿಸಿ, ತನಗೆ ಮಣಿಯುವ ಶುಕ, ದಶಕಂಠ, ಸನಕಾದಿ ಋಷಿಗಳು ಮೊದಲಾದವರ ಉದಾಹರಣೆಗಳನ್ನು ಕೊಟ್ಟಳು. ಕೋಪಗೊಂಡಿದ್ದ ಪಾರ್ವತಿಗೆ ಈಶ್ವರನು, ಇಂದ್ರನು ರಾಕ್ಷಸಸಂಹಾರಕ್ಕಾಗಿ ಅರ್ಜುನನನ್ನು ಬರಮಾಡಿಕೊಂಡಿದ್ದನ್ನೂ, ಆಗ ಉರ್ವಶಿಯ ನಾಟ್ಯವನ್ನು ನಿಟ್ಟಿಸುತ್ತಿದ್ದ ಆತನು ಆಕೆಯಲ್ಲಿ ಅನುರಕ್ತನಾಗಿರಬೇಕೆಂದು ಊಹಿಸಿ, ಉರ್ವಶಿಯನ್ನು ಆತನ ಬಳಿಗೆ ಕಳುಹಲು, ಆತನು ಆಕೆಯನ್ನು ಮಾತೃಸಮಾನಳೆಂದು ತಿಳಿದು ಹಿಂತಿರುಗಿ ಕಳುಹಿಸಿದುದನ್ನೂ ಹೇಳಿ, "ಅಂದುಮೊದಲು ಪರವಧುಗಳ ವದನಾರವಿಂದವ ನೋಡನವರಿಗೆ ವಂದನೆಯನು ಮನದೊಳಲ್ಲದೆ ಕಾಯದಿಂದ ಮಾಡನು" ಎಂದು ಸ್ಪಷ್ಟಪಡಿಸಿದನು. ಆದರೂ ಪಾರ್ವತಿಗೆ ಒಪ್ಪಿಗೆಯಾಗಲಿಲ್ಲ. "ಆನು ಸಾಮಾನ್ಯಾಂಗನೆಯೆ ನಿನ್ನ ವನಿತೆಯಲ್ಲವೆ ಲೋಕಗಳ ಜನನಿಯಲ್ಲವೆ ನನ್ನಡಿಗಳಿಗೆಱಗದ ದನುಜಾಮರ ನರರುಂಟೆ" ಎಂದು ಪ್ರಶ್ನೆ ಹಾಕಿದಳು. ಆ ಆವೇಶವಾಣಿಯಿಂದಲೇ ಕೂಡಿ "ಸುರಪನಱಿಕೆಯಿಂದ ಬಂದೂರ್ವಶಿಯನು ಪರಿಹರಿಸಿದ ಗರ್ವದಿಂದ ಸುರನರೋರಗನತೆಯೆನಗೆಱಗದ ಪಾರ್ಥನಿರವ ನಿನಗೆ ತೋಱಿಸುವೆನು" ಎಂದು ದಿಟ್ಟತನದಿಂದ ನುಡಿದು, ಉರ್ವಶಿಯನ್ನು ಬರಮಾಡಿದಳು.

ಉರ್ವಶಿಗೂ ಅರ್ಜುನನಿಂದ ತಿರಸ್ಕೃತಳಾದಂದಿನಿಂದ ಮನಸ್ಸಿನಲ್ಲಿ ಕ್ರೋಧವಿದ್ದೇ ಇದ್ದಿತು. ಅಂದು ಆಕೆ ಅವನಿಗೆ ಶಾಪವಿತ್ತಿದ್ದರೂ, ಆ ಕೋಪ ಇನ್ನೂ ಆರಿರಲಿಲ್ಲ. ಪಾರ್ವತಿ "ಎಂತು ನೀನವನೆಡೆಗೆಯ್ದಿದೆಯವ ನಿನ್ನನೆಂತು ಮೇಲಿಕ್ಕಿ ಹಿಡಿಯದೆ ಅಂತರಂಗವ ಹಿಡಿದನು ಪೇಳದಱ ವೃತ್ತಾಂತವನು" ಎಂದು ಕೇಳುವುದೇ ತಡ, ಅರ್ಜುನನನ್ನು ನಾನಾ ರೀತಿಯಾಗಿ ಟೀಕಿಸಿದಳು. "ಮೊಱೆ ಧರ್ಮವಲ್ಲೆಂದು ಬಿಟ್ಟವನಲ್ಲಿಂದ್ರನಱಿಕೆಯಿಂ ಬಂದಳೆಂಬುದನು ಅಱಿದಂಜಿ ಬಿಟ್ಟನೀ ನರನೆನ್ನನೆನ್ನ ಕಾಲ್ಗೆಱಗದಮರ ನರರುಂಟೆ" ಎಂದು ತನ್ನ ಪ್ರತಿಷ್ಠೆಯನ್ನೇ ಮೆರೆಯಿಸಿ, ಅರ್ಜುನ ದ್ರೌಪದಿಯರ ಅಸಹಜ ದಾಂಪತ್ಯವನ್ನೂ, ದುರ್ಯೋಧನನಿಗಾಗಿ ಮೀಸಲಿದ್ದ ಸುಭದ್ರೆಯನ್ನು ಆತನು ಅಪಹರಿಸಿ ತಂದುದನ್ನೂ ಉದಾಹರಿಸಿದಳು. ಅಲ್ಲದೆ, "ನರಲೋಕದ ಮುಂದೆ ಹಾದರಾಂಗನೆಯರ ನೆರೆವ ಕೀಟಕ ನರನಿವನು ಸುರಕಾಂತೆಯೆನ್ನನಳ್ಕಿ ಪಿಡಿಯದಿರೆ ಪಿರಿಯನಾದನೆ ಪೇಳಗಜೆ," "ಗಾವಿಲ ಬಂದು ಪಟ್ಟಣದ ಪದಸ್ಥ ವೇಶ್ಯಾವನಿತೆಯರ ಕಂಡಂಜಿ ಭಾವಜ ಕೇಳಿಗೆ ಮೇಲಿಕ್ಕದಿರಲವನಾವ ಸತ್ಪುರುಷ ಕೇಳಗಜೆ," "ಒಡೆಯನ ಮುಂದೆ ಬಿದ್ದಿರ್ದೊಡವೆಯ ಕಳ್ಳಬಿಡುವವೊಲಿಂದ್ರ ಕಳುಪಿದ ಮಡದಿರನ್ನವನೆನ್ನನಿವನಂಜಿ ಬಿಟ್ಟು ನಿಮ್ಮಡಿಗೆಱಗದ ಗರ್ವವೇನೊ" ಎಂದು ಖಂಡಿಸಿ ಮಾತಾಡಿದಳು. ಕಡೆಗೆ "ಇಂದಿವನನು ನನ್ನನು ಕಳುಪಿದೆಯಾದೊಡಿಂದುವದನೆ ಭೂತಳಕೆ ತಂದೆಯ ರಾಣಿಗೆ ತಪ್ಪಿದ ಪಾತಕನೆಂದೆನಿಸುವೆನು ನಾನಿವನ" ಎಂದು ತನ್ನ ಶಪಥವನ್ನು ಮುಂದಿಟ್ಟಳು. ಉರ್ವಶಿಗೆ "ಸುರಲೋಕದೊಳಗಂದು ಕಂಡುದು ಮೊದಲಾಗಿ ನರನ ನೆರೆಯಬೇಕೆಂಬಾ ಪರಮ ಕಾತರವಿರಲಗಜೆಯ ಮುಂದೆ ತನ್ನಿರವ ಕಾಣಿಸಿಕೊಳ್ಳದೆ," ಹೀಗೆ ನುಡಿದಳು. ಪಾರ್ವತಿಗೂ ಇಂಥ ಚಲಗಾತಿಯೊಬ್ಬಳು ಬೇಕಾಗಿತ್ತು. ಆಕೆ "ಇಳೆಯೊಳಿವಳನು ಪುಟ್ಟಿಸುವೆನಿವಳ ಬೆಂಬಳಿವಿಡಿದೀ ಧನಂಜಯನ ತಳುವದೆ ಪುಟ್ಟಿಸು ಮರ್ತ್ಯಲೋಕದೊಳಿವನಳವನೀಕ್ಷಿಸಬೇಕಭವ" ಎಂದು ಈಶ್ವರನೊಂದಿಗೆ ಹೇಳಿದಳು. ಈಶ್ವರನಿಗೆ ನಗು ಬಂದಿತು. ಗಣನಾಥನಾಗಿದ್ದ ಅರ್ಜುನನನ್ನು ಕರೆದು ಭೂಲೋಕದಲ್ಲಿ ಜನಿಸಬೇಕೆಂದು ತಿಳಿಸಿದನು. ಆ ನುಡಿಯನ್ನು ಕೇಳಿದೊಡನೆಯೇ ಅರ್ಜುನ ಗಣನಾಥನು ಕಾರ್ಮುಗಿಲಿನ ದನಿಯನ್ನು ಕೇಳಿದ ರಾಜಹಂಸನಂತೆ ನಡುನಡುಗಿದನು. ಹೀನಾಯವಾದ ನರಜನ್ಮಕ್ಕೆ ಹೇಗೆತಾನೆ ಹೋಗಿ ಪಾಡುಪಡಲಿ ಎಂಬುದಾಗಿ ಮರುಗಿದನು. ಆಗ, ಈಶ್ವರನು ಆತನಿಂದ ಹತರಾಗಿದ್ದ ನಿವಾತಕವಚರೂ, ಸಂಶಪ್ತಕರೂ ಭೂಮಿಯಲ್ಲಿ ಮತ್ತೆ ತುರುಕರಾಗಿ ಹುಟ್ಟಿರುವರೆಂದೂ, ಅವರ ಸಂಹಾರಕ್ಕಾಗಿ ಅವನು ಹೋಗಲೇಬೇಕೆಂದೂ, ಆದಷ್ಟು ಬೇಗನೆ ಮರಳಿ ತನ್ನ ಬಳಿಗೆ ಕರೆಸಿಕೊಳ್ಳುವೆನೆಂದೂ ಹೇಳಿ ಒಪ್ಪಿಸಿದನು. ಪಾರ್ವತಿ ಉರ್ವಶಿಯನ್ನು ಕುರಿತು "ಕರ್ನಾಟ ಭೂರಮಣಗೆ ಕಂಪಿಲಗೆ ಸ್ತ್ರೀರತ್ನವೆಸರವನಿತೆಯಾಗು ಪೋಗು" ಎಂದು ಹೇಳಿ ಭೂಮಿಗೆ ಕಳುಹಿಸಿದಳು.

## ಕುಮಾರರಾಮನ ಜನನ ಮತ್ತು ಬೆಳವಣಿಗೆ

ಪಾರ್ವತಿಯ ಇಷ್ಟಾನುಸಾರ ಉರ್ವಶಿ "ಇನವಂಶದರಸುಮಗನೋರ್ವನ ನಂದನೆಯಾಗಿ" ಭೂಲೋಕದಲ್ಲಿ ಹುಟ್ಟಿದಳು. ಆಕೆ ಕಂಪಿಲನ ಮೋಹದ ಮಡದಿಯಾದಳು. ಆಕೆ ವನಿತಾರತ್ನಪ್ರಾಯಳಾದ್ದರಿಂದ ರತ್ನಾಜಿ ಎಂಬ ಹೆಸರನ್ನೆ ಪಡೆದಳು. ಆಕೆಯ ಸೌಂದರ್ಯ ಹೇಳತೀರದು. ಈ ಸ್ತ್ರೀಶಿರೋಮಣಿ ಮಹಾರಾಜನಾದ ಕಂಪಿಲನ ಮನಸ್ಸನ್ನು ಸೂರೆಗೊಂಡು "ತನುವೆರಡಾದೊಡೇನಸುವೊಂದೆಂಬಂತೆ" ಮೆರೆಯುತ್ತಿದ್ದಳು. ಇತ್ತ, ಪಟ್ಟದರಸಿಯಾದ ಹರಿಹರದೇವಿ, ಒಂದು ದಿನ ಉಪ್ಪರಿಗೆಯನ್ನೇರಿ ಕುಳಿತಿರಲು ಇತರ ರಾಜಕುಮಾರರು ನಾನಾ ಆಟ ಪಾಟಗಳಲ್ಲಿ ಮಗ್ನರಾಗಿರುವುದನ್ನು ಕಂಡು ತಾನೂ ಸಂತಾನವನ್ನು ಅಪೇಕ್ಷಿಸಿದಳು. ಅನಂತರ ಅರಮನೆಯ ಉದ್ಯಾನವನಕ್ಕೆ ಬರಲು, ಅಲ್ಲಿ ಹಕ್ಕಿಗಳು ತಮ್ಮ ತಮ್ಮ ಮರಿಗಳಿಗೆ ಗುಟುಕು ಕೊಡುತ್ತಿರುವುದನ್ನು ಕಂಡು ಆಕೆಯ ಅಪೇಕ್ಷೆ ಮತ್ತಷ್ಟು ಪ್ರಬಲವಾಯಿತು. ಆಗ ಕಣ್ಣೀರು ಮಿಡಿದಳು. ಇದನ್ನರಿತ ಸಖಿಯರು ಕಂಪಿಲನಿಗೆ ಮಹಾರಾಣಿಯ ಸಂಕಟವನ್ನು ನಿವೇದಿಸಿದರು. ಆಗ ರಾಜನು ರಾಣಿಗೆ ಸಮಾಧಾನವನ್ನು ಹೇಳಿ, "ಜಟಾಯು ರಾಮೇಶ್ವರನೆಡೆಗೆ" ತೆರಳಿ ಪುತ್ರವರವನ್ನು ಬೇಡಿ ಪಡೆಯುವುದಾಗಿ ಹೇಳಿದನು. ಅನಂತರ ಈಶ್ವರನ ದೇವಾಲಯಕ್ಕೆ ಹೊರಡಲು ಎಲ್ಲ ಏರ್ಪಾಡುಗಳೂ ನಡೆದುವು. ರಾಜ ಮತ್ತು ಆತನ ರಾಣಿಯರು ಅತ್ಯಂತ ವೈಭವದಿಂದ ಈಶ್ವರನ ಆಲಯಕ್ಕೆ ಹೊರಟರು. ಊರಿನ ಜನ ರಾಜನನ್ನು ಕಂಡು ಸಂತೋಷಪಟ್ಟರು. ಸ್ತ್ರೀಯರು ವ್ಯಾಮೋಹಗ್ರಸ್ತರಾದರು. ಮಹಾರಾಜನು ಈಶ್ವರನನ್ನು ಕಂಡು, ನಮಿಸಿ, ಪೂಜಿಸಿ, ಸ್ತುತಿಸಿ, ಅನುಗ್ರಹವನ್ನು ಬೇಡಿದನು. ದೇವದೇವನಾದ ಈಶ್ವರನು "ಆ ನೃಪನಿಷ್ಟವ ಸಲಿಸಬೇಕೆಂಬ ಕೃಪೆಯೊಳು ತಳುವದೆ ತನ್ನ ಮಸ್ತಕದ ಮೇಲಣ ಮಂಜುಳ ಕುಸುಮವನಿತ್ತನೊಸೆದು." ಮಹಾರಾಜನು ಅದನ್ನು ತನ್ನ ಕಾಂತೆಗಿತ್ತು ಸಂತೋಷದಿಂದ ತನ್ನ ಊರಿಗೆ ಹಿಂತಿರುಗಿ ಶುಭದಿನವನ್ನೇ ಹಾರೈಸುತ್ತ ಇದ್ದನು.

ಕೆಲವು ಕಾಲಾನಂತರ ಹರಿಹರದೇವಿ ಗರ್ಭ ಧರಿಸಿದಳು. ಆಕೆ ಕನಸಿನಲ್ಲಿ ಭಾನುಬಿಂಬವನ್ನೂ ಇಂದುಮಂಡಲವನ್ನೂ ಮದದಾನೆಯನ್ನೂ ಸಿಂಹವನ್ನೂ ಕಂಡಳು. ಕಂಪಿಲನು ಅದನ್ನು ಕೇಳಿ ಸಂತುಷ್ಟನಾಗಿ ತಮಗೆ ಅಸದೃಶನಾದ ಕುಮಾರನು ಜನಿಸುವನೆಂದು ಆಕೆಯೊಡನೆ ಹೇಳಿದನು. ಹರಿಹರದೇವಿಯ ಗರ್ಭದ ಒಂದೊಂದು ಚಿಹ್ನೆಯೂ, ಒಂದೊಂದು ಬಯಕೆಯೂ, ಆಕೆಗೆ ಹುಟ್ಟಲಿರುವ ಮಗುವಿನ ಭವಿಷ್ಯವನ್ನೇ ಸೂಚಿಸುವಂತಿದ್ದುವು. ಕಡೆಗೆ ಒಂದು ಶುಭದಿನದಲ್ಲಿ ಹರಿಹರದೇವಿ ತೇಜಸ್ವಿಯಾದ ಗಂಡುಮಗುವನ್ನು ಹೆತ್ತಳು. ಉರ್ವರೆ ರೋಹಣಾದ್ರಿಯನ್ನೂ, ಶರ್ವರಿ ಇಂದುವನ್ನೂ ಪಡೆಯುವಂತೆ ಹರಿಹರದೇವಿ "ಸರ್ವಲಕ್ಷಣಯುತ ಸುತನ ಪಡೆದಳು." ರಾಜಕುಮಾರನ ಜನನಕ್ಕೆ ತಕ್ಕಂತೆ ಸಡಗರ ಸಂಭ್ರಮಗಳು ತೋರಿಬಂದುವು. ಕಂಪಿಲನು "ಭೂಮಿವಿನುತ ಶುಭಲಕ್ಷಣದಿಂದಭಿರಾಮನಪ್ಪುದರಿಂದ ಸುತಗೆ ರಾಮನೆಂಬನ್ವರ್ಥನಾಮವನಿಟ್ಟ"ನು. ಬಾಲಕನು ದಿನದಿನಕ್ಕೂ ಅತಿಶಯವಾದ ರೀತಿಯಲ್ಲಿ ಬೆಳೆದನು. ಸಮಸ್ತರ ಮನಸ್ಸನ್ನೂ ಅಪಹರಿಸಿದನು. ಬಾಲ್ಯದಲ್ಲಿಯೇ ಆತನ ಭವಿಷ್ಯದ ಚಿಹ್ನೆಗಳು ವ್ಯಕ್ತವಾಗುತ್ತಿದ್ದುವು. ಮಹಾರಾಜನು ವಯೋಗುಣಕ್ಕನುಸಾರವಾಗಿ ಮಗನಿಗೆ ಸಮಸ್ತ ವಿದ್ಯೆಗಳನ್ನೂ ಕಲಿಸಿದನು. ರಾಮನು ಯುವಕನಾಗಲು ಎಲ್ಲರ ಮನಸ್ಸನ್ನೂ ಸೆಳೆದನು. ಮಹಾರಾಜನಿಗಂತೂ ಪರಾಕ್ರಮಿಯೂ, ತೇಜಸ್ವಿಯೂ ಆದ ಮಗನನ್ನು ಕಂಡು ತನ್ನ ಭಾಗ್ಯಕ್ಕೆ ಎಣೆಯೇ ಇಲ್ಲವೆನ್ನಿಸಿತು. ವೀರರುದ್ರನಿಂದಾಗಲಿ, ಬಲ್ಲಾಳನಿಂದಾಗಲಿ, ಸುರುತಾಳನಿಂದಾಗಲಿ ತನಗೆ ಇನ್ನು ಯಾವ ಭಯವೂ ಇಲ್ಲವೆಂದೂ "ನವಲಕ್ಕ ತೆಲುಗರ ಗಂಡ"ನೆಂಬ ತನ್ನ ಬಿರುದಿಗೂ ಧಕ್ಕೆ ತಟ್ಟದೆಂದೂ ಹಿಗ್ಗಿದನು. ಅನಂತರ ಕುವರನಿಗೆ ಮದುವೆಮಾಡಬೇಕೆಂದು ಬಗೆದನು. ತನ್ನ ಮಂತ್ರಿ ನಿಶ್ಚಯಿಸಿಕೊಂಡು ಬಂದ ಪಂಚಕನ್ಯೆಯರನ್ನು ಕೊಟ್ಟು ಶುಭಮುಹೂರ್ತದಲ್ಲಿ ರಾಮನ ವಿವಾಹವು ಸಾಗಿತು. ಅಕ್ಕ ಮಾರಮ್ಮ, ತಂಗಿ ಸಿಂಗಮ್ಮ, ತಾಯಿ ಹರಿಹರದೇವಿ ಮೊದಲಾಗಿ ಎಲ್ಲರೂ ಸಂತೋಷಗೊಂಡರು.

ಕಂಪಿಲನೃಪನಂತೂ "ಪಂಚಮುಹಾವಾದ್ಯದೊಳಗೆ" "ಪಂಚಕಲ್ಯಾಣವನೊಸೆದು ಪಂಚೇಷುನಿಭ ರೂಪಗೆ ಕುವರಗೆ ಸುಪ್ರಪಂಚದಿಂ ಮಾಡಿ ನಲಿದನು." ಅನಂತರ ಕಂಪಿಲನು ಮಗನಿಗೆ ಯುವರಾಜ ಪಟ್ಟವನ್ನು ಕಟ್ಟಿದನು. ಇತ್ತ ರಾಮನಿಗೆ ಯುವರಾಜ ಪದವಿಯನ್ನು ಕಟ್ಟಲು ಅತ್ತ ಶತ್ರುರಾಜರು ತಲ್ಲಣಿಸಿದರು. ಅವರಿಗೆ ನಾನಾ ಅಪಶಕುನಗಳು ಉಂಟಾದುವು. ಕಂಪಿಲನು "ಉದಧಿವೇಷ್ಟಿತ ಭೂಮಿ ಕೈಗೆ ಬಂದಂತತಿ ಮುದ ವನೆಯ್ದಿದನು."

ದಿನದಿನಕ್ಕೂ ರಾಮನ ಪ್ರಖ್ಯಾತಿ ಸುತ್ತಮುತ್ತಲೂ ವ್ಯಾಪಿಸತೊಡಗಿತು. ಅನೇಕ ವೀರರು ಅಶಕ್ತ ರಾದ ತಮ್ಮ ಒಡೆಯರನ್ನು ತೊರೆದು ರಾಮನ ಬಳಿ ಬಂದು ಸೇರಿದರು. ರಾಮನು ಶಿಷ್ಟರಕ್ಷಕನೂ ಹೌದು; ದುಷ್ಟಶಿಕ್ಷಕನೂ ಹೌದು. "ಇಳೆಯೊಳಗಣ ನೀರೆಲ್ಲ ಬಂದಂಬುಧಿಯೊಳಪುಗುವಂತೆ ಬೇಗದೊಳು ನೆಲದೊಳ ಗಣ ವೀರಭಟರೆಯ್ತಂದಾ ಕಲಿರಾಮನ ಪೊರ್ದಿದರು." ರಾಮನ ಬಳಿ ನೂರಿಪ್ಪತ್ತು ಕುದುರೆಗಳಿದ್ದುವು. ಅವು ಗಳಲ್ಲಿ ಮೂವತ್ತು ಜಾತ್ಯಶ್ವಗಳು ರಾಮನಿಗೇ ಮೀಸಲಾಗಿದ್ದುವು. ಅದರಲ್ಲಿಯೂ ಹವಳ ವರ್ಣದ ಒಂದು ಹಯವಂತೂ ಅನುಪಮವಾಗಿತ್ತು. ಅದು ರಾಮನಿಗೋಸ್ಕರವೇ ಭೂಮಿಯಲ್ಲಿ ಜನಿಸಿ ಬಂದಂತೆ ಇದ್ದಿತು. ಈ ದಿವ್ಯಾಶ್ವವು ರಾಮನಿಗೆ ಲಭಿಸಿದ ಕಥೆಯಂತೂ ತುಂಬ ಸೋಜಿಗವಾಗಿದೆ.

ರಾಮನು ಈಶ್ವರನ ಆಜ್ಞಾನುಸಾರವಾಗಿ ಭೂಮಿಯಲ್ಲಿ ಅವತರಿಸಿದನಷ್ಟೆ. ಆತನು ಭೂಲೋಕಕ್ಕೆ ಹೊರಡುವುದಕ್ಕೆ ಮುಂಚೆ ಈಶ್ವರನನ್ನು ಕುರಿತು, ಪ್ರಕೃತದಲ್ಲಿ ಶತ್ರುಸಂಹಾರ ಮಾಡಲು ತನಗೆ ತಕ್ಕ ಸಾಧನ ಗಳು ಎಲ್ಲಿವೆಯೆಂದು ಕೇಳಿದನು. ಆಗ ಈಶ್ವರನು "ಸುರರಾಜನ ದಿವ್ಯವಾಜಿ ಭೂತಳಕವತರಿಸಿ ನಿನಗೆ ದಾನವರ ಧುರಕೆ ಸಹಾಯವಾದಪುದು ನಿನಗೆ ಬಂದಿರದೆ ಸೇರುವ ಸಮಯದೊಳು" "ಮುರರಿಪುವಿನ ಶಾರ್ಙ್ಗ, ನಕುಲನ ಬಲ್ಲೆಹ, ವರಸಹದೇವನ ಖಡ್ಗ, ದೊರೆಕೊಂಬವು" ಎಂದು ಅಭಯವಿತ್ತಿದ್ದನು. ಅದೇ ಮೇರೆಗೆ ಇಂದ್ರನ ಕುದುರೆಯ ಒಂದು ಅಂಶವೇ ಹಯವಾಗಿ ವನಾಯುದೇಶದಲ್ಲಿ ಬಂದು ಜನಿಸಿತ್ತು. ಅದನ್ನು ಹಿಡಿಯಲು ಯಾರಿಂದಲೂ ಸಾಧ್ಯವಾಗಲಿಲ್ಲ. ಅದನ್ನು ಕೊಂಡುಕೊಳ್ಳುವ ಸಲುವಾಗಿ ನಾನಾ ಅರಸರು ಬಂದು ನೋಡಿ, ಅದರ ತುಂಟತನಕ್ಕೆ ಹೆದರಿ ಹಿಂತಿರುಗಿದ್ದರು. ಕುದುರೆಯ ವ್ಯಾಪಾರಿ ಅದರೊಂದಿಗೆ ನಾನಾ ದೇಶಗಳಲ್ಲಿ ತಿರುಗಿ ಗೋವೆಗೆ ಬಂದನು. ಈ ಸುದ್ದಿ ರಾಮನಿಗೆ ತಿಳಿಯಲು ಆ ಕುದುರೆಯನ್ನು ತಾನು ಕೊಂಡುಕೊಳ್ಳಬೇಕೆಂದು ತಂದೆಗೆ ತಿಳಿಸಿದನು. ಈ ವೇಳೆಗಾಗಲೆ ಅದನ್ನು ವೀರರುದ್ರನ ಸಹಣಿಗಳೂ, ವೀರ ಬಲ್ಲಾಳನ ಸಹಣಿಗಳೂ ಕಂಡು ನಿರಾಕರಿಸಿದ್ದರು. ಆ ಕುದುರೆಯೋ ಒಮ್ಮೊಮ್ಮೆ ರಾಮನನ್ನೇ ಧ್ಯಾನಿಸು ವಂತೆ ತೋರಿಬರುತ್ತಿತ್ತು. ಕಂಪಿಲನಿಗೆ ತುಂಟಕುದುರೆಯಿಂದ ಏನು ಪ್ರಯೋಜನವೆನ್ನಿಸಿ, ಅದು ತಮಗೆ ಯಾಕೆ ಎಂಬುದಾಗಿ ಉದಾಸೀನನಾದನು. ಆಗ ರಾಮನಾಥನು ತಂದೆಯೊಂದಿಗೆ ಏಕಾಂತದಲ್ಲಿ, ತನಗೆ ಕನ ಸಿನಲ್ಲಿ ಈಶ್ವರನ ಸಂದರ್ಶನವಾಗಿ, ಆ ಕುದುರೆಯನ್ನೂ ಅದರ ಜೊತೆಗೆ ಇದ್ದ ಇತರ ಆಯುಧಗಳನ್ನೂ ಪಡೆಯುವಂತೆ ಅಪ್ಪಣೆಯಾಗಿರುವುದಾಗಿ ವಿಜ್ಞಾಪಿಸಿದನು. ಕೂಡಲೆ ಕಂಪಿಲನ ಮನಸ್ಸು ಬದಲಾಯಿಸಿತು. ಮಂತ್ರಿಯನ್ನು ಕರೆದು, ಆ ಕುದುರೆಯನ್ನು ಗೋವೆಯಿಂದ ಕರೆತರುವಂತೆ ನೇಮಿಸಿದನು. ಅಂತೆಯೇ ಅವರು ಹೊರಟು ಬರಲು ದಿವ್ಯಾಶ್ವವು ಎಂದಿನಂತಲ್ಲದೆ ಬಹಳ ನಮ್ರವಾಗಿ ವರ್ತಿಸಿತು. ಕುದುರೆಯ ವ್ಯಾಪಾರಿ ಯಂತೂ "ನರೇಂದ್ರಪದವಿ ಕರತಲಕೆ ಬಂದಂತೆ ಪೆರ್ಚಿದನು." ಅನಂತರ ಆ ಹಯಸಮೇತನಾಗಿ ಹೊಸ ದುರ್ಗಕ್ಕೆ ಬಂದರು. ಕಂಪಿಲನು ಆ ವರ್ತಕನನ್ನು ನಾನಾ ಬಗೆಯಾಗಿ ಸತ್ಕರಿಸಿದನು. ರಾಮನನ್ನು ಕಂಡೊಡ ನೆಯೇ ಆ ಕುದುರೆ ತನ್ನ ತುಂಟತನವನ್ನೆಲ್ಲ ತೊರೆದು, ನೆಲವನ್ನು ಕೆರೆಯುತ್ತ, ಇಂದ್ರನನ್ನು ಕಂಡಷ್ಟೇ ಆನಂದವನ್ನು ಅನುಭವಿಸಿತು. ರಾಮನು ಅದರ ಬೆನ್ನುತಟ್ಟಿ ಮುದ್ದಾಡಲು ಅದು ಆತನಿಗೆ ವಶವಾಯಿತು. ಅನಂತರ ಅದನ್ನು ಹತ್ತಿ ಅದರ ಚಮತ್ಕಾರವನ್ನು ಕಂಪಿಲನಿಗೆ ಪ್ರದರ್ಶಿಸಿದನು. ಕಡೆಗೆ ಆ ಕುದುರೆಯ ಬೆಲೆ ಯೇನೆಂದು ವರ್ತಕನನ್ನು ಕೇಳಲು, ಆತನು ಮಹಾರಾಜನು ಈಗಾಗಲೆ ತನಗೆ ಮಾಡಿರುವ ಸನ್ಮಾನವೇ

ಸಾಕೆಂದು ತಲೆದೂಗಿದನು. ರಾಜನನ್ನೂ, ರಾಮನನ್ನೂ, ಮಂತ್ರಿಯನ್ನೂ ಪ್ರತ್ಯೇಕವಾಗಿ ಕರೆದು, ಆ ಕುದುರೆ ಹುಟ್ಟಿ ಬಂದ ಗುಟ್ಟನ್ನು ತಿಳಿಯಪಡಿಸಿದನು. ಆ ದಿವ್ಯಾಶ್ವವು ಸಿಂಗಾಡಿ, ಖಡ್ಗ ಮತ್ತು ಬಲ್ಲೆಯಗಳೊಂದಿಗೆ ಒಂದು ಹುತ್ತದಿಂದ ಹುಟ್ಟಿಬಂದಿತೆಂದು ಹೇಳಿದನು. ಅವುಗಳನ್ನೆಲ್ಲ ರಾಮುನಿಗೆ ಒಪ್ಪಿಸಿ ಆತನು ತನ್ನ ಊರಿಗೆ ತೆರಳಿದನು. ಮೊದಲೇ ಪರಾಕ್ರಮಿಯಾಗಿದ್ದ ರಾಮನಿಗೆ ಈ ಕುದುರೆ ಮತ್ತು ದಿವ್ಯಾಯುಧಗಳು ದೊರೆತ ಮೇಲೆ ಇನ್ನು ಹೇಳುವುದೇನಿದೆ! ಶತ್ರುರಾಜರಿಗೆ ಮೇಲಿಂದ ಮೇಲೆ ಅಪಶಕುನಗಳುಂಟಾಗಿ ತಲ್ಲಣಿಸ ಲಾರಂಭಿಸಿದರು.

## ಹುಳಿಯೇರು ಮತ್ತು ಬಲ್ಲಾಳನ ಕಾಳಗ

ಹೀಗಿರಬೇಕಾದರೆ, ಕಂಪಿಲನ ಕಡೆಯವರು ಬಲ್ಲಾಳನ ರಾಜ್ಯದ ಗಡಿಗೆ ಸೇರಿದ ಪಟ್ಟಣಗಳಲ್ಲಿ ಆಗಿಂದಾಗ್ಗೆ ಸೂರೆಮಾಡುತ್ತಲೇ ಇದ್ದರು. ಹುಳಿಯೇರು ಎಂಬ ಅಗ್ರಹಾರದಲ್ಲಿ ಒಳ್ಳೆಯ ಜಾಯಿಲಗಳವೆ ಯೆಂಬುದಾಗಿ ರಾಮನಿಗೆ ತಿಳಿದು ಬರಲು, ಆತನು ತನ್ನ ಸೇವಕರನ್ನು ಆ ಪುರದ ಅಧಿಕಾರಿಯ ಬಳಿಗೆ ಕಳು ಹಿಸಿದನು. ಆತನು ಬಲ್ಲಾಳನ ಅಧೀನನಾಗಿದ್ದುದರಿಂದ ರಾಮನ ಪ್ರಾರ್ಥನೆಯನ್ನು ನೆರವೇರಿಸಲು ಇಷ್ಟವಿಲ್ಲದೆ, ತನ್ನ ಒಡೆಯನಾದ ಬಲ್ಲಾಳನಿಗೂ, ಕಂಪಿಲನಿಗೂ ಎಲ್ಲಿಂದೆಲ್ಲಿಗೆ ಸಂಬಂಧವೆಂದು ತೆಗಳಿ ಮಾತನಾಡಿದನು. ಬಲ್ಲಾಳನು ಸುರುತಾಳನ ಸಲುವಾಗಿ ಅಕ್ಕಪಕ್ಕದವರೊಂದಿಗೆ ಸ್ನೇಹದಿಂದ ಇರುವನೆಂದೂ, ಇಲ್ಲದಿದ್ದಲ್ಲಿ "ಕಂಬಳಿ ಪೀಲಿಗಳನ್ನುಳ್ಳ ನಾಡಿನ ವಿಗಡ ಮನ್ನೆಯರ"ನ್ನು ಅವನು ಲಕ್ಷಿಸುತ್ತಿರಲಿಲ್ಲವೆಂದೂ ಆ ದೂತರ ಮುಂದೆ ನಾನಾ ತೆರನಾಗಿ ಹೀಯಾಳಿಸಿದನು. ಈ ರೀತಿ ರಾಮನ ಚಾರರನ್ನು ಕಡೆಗಂಡು ಅವರನ್ನು ಹಿಡಿದು ನೂಕಿಸಿದನು. ಅವರು ರಾಮನಲ್ಲಿಗೆ ಬಂದು ತಮಗಾದ ಅವಮಾನವನ್ನು ಚಾಚೂ ತಪ್ಪದೆ ವಿಜ್ಞಾಪಿಸಿದರು. ರಾಮನು ತುಂಬ ಕುಪಿತನಾದನು. ತಂದೆಗೆ ಈ ವೃತ್ತಾಂತವನ್ನು ತಿಳಿಸಿ, ಅನುಮತಿಯನ್ನು ಪಡೆದು, ಸೈನ್ಯ ಸಮೇತನಾಗಿ ಬಂದು ಹುಳಿಯೇರನ್ನು ಮುತ್ತಿದನು. ಉಭಯತ್ರರಿಗೂ ಬಿರುಸಾದ ಕಾಳಗ ನಡೆಯಿತು. ರಾಮನ ಮಂದಿ ಊರಿನೊಳಕ್ಕೆ ನುಗ್ಗಿ, ಬೆಂಕಿ ಹಚ್ಚಿ, ಅಸಾಧ್ಯವಾಗಿ ಲೂಟಿ ಮಾಡಿದರು. "ಊರು ಕಿಚ್ಚಿನ ಬೀಡಾಯ್ತು." ಕಡೆಗೆ ಆ ಊರಿನ ಅಧಿಕಾರಿ ರಾಮನ ಮಂದಿಯ ಕೈಗೆ ಸಿಕ್ಕಿಬಿದ್ದನು. ಆದರೆ ಅವನ ಮಕ್ಕಳಿಬ್ಬರೂ ರಾಜಬೀದಿಯಲ್ಲಿ ನಿಂತು ವೀರಾವೇಶದಿಂದ ಕಾದಾಡುತ್ತಿದ್ದರು. ರಾಮನು ಅವರ ಪರಾಕ್ರಮವನ್ನು ಕಂಡು ಮನದಣಿಯೆ ಕೊಂಡಾಡಿದನು. ಅನಂತರ ಧರ್ಮಗಹಳೆಯನ್ನು ಊದಿಸಿ, ಯುದ್ಧವನ್ನು ಮುಕ್ತಾಯ ಗೊಳಿಸಿ, ಊರಿಗೆ ಹಿಂತಿರುಗಿ ಕೈಸೆರೆ ತಂದಿದ್ದ ಅಧಿಕಾರಿಯನ್ನು ತಂದೆಗೆ ಒಪ್ಪಿಸಿದನು. ಯುದ್ಧವಿಜಯಿಯಾದ ರಾಮನು ಹರಿಹರದೇವಿ ಮತ್ತು ಬುಕ್ಕಾಂಬಿಕೆಯರ ಪಾದಗಳಿಗೆ ನಮಸ್ಕರಿಸಿ ತನ್ನ ನಿಲಯಕ್ಕೆ ಬಂದನು.

ಹುಳಿಯೇರಿನ ಪ್ರಕರಣವು ವೀರಬಲ್ಲಾಳನಿಗೆ ತಿಳಿಯುವುದೇ ತಡ, ಅವನ ಕಡೆಕಣ್ಣು ಕಿಡಿಸೂಸಿ, ಕುಡಿಮೀಸೆ ಕುಣಿದಾಡಿ, ಹುಬ್ಬು ಗಂಟಿಕ್ಕಿ, ಸುಯ್ಯೆಲರು ಸೂಸಿ, ಕೋಪ ಕಾವೇರಿತು. "ಅಂದಿನ ಕುರುಬಲ ಕಿಮ್ಮಿಡಿಯೆನಲು", ದಂಡನಾಯಕನನ್ನು ಕರೆಸಿ ಸೇನೆಯನ್ನು ಕೂಡಿಸಿದನು. ರಣರಂಗಕೇಳಿಲೋಲುಪನಾದ ಬಲ್ಲಾಳರಾಯನ ಆಜ್ಞಾನುಸಾರವಾಗಿ ಅವನ ಕಡೆ ಕೊಂಗು, ಕೊಡಗು, ಮಲಯಾಳ, ತಿಗುಳ ದೇಶಗಳಿಂದ ಕೂರಾಳುಗಳು ಬಂದು ಸೇರಿದರು. ಈ ಅಪಾರ ಸೈನ್ಯಸಮೇತನಾಗಿ ಬಲ್ಲಾಳನು ಕಂಪಿಲನ ಮೇಲೆ ದಂಡೆತ್ತಿ ನಡೆದನು. ಕಂಪಿಲನಿಗೆ ಈ ಸುದ್ದಿ ತಿಳಿದ ಒಡನೆಯೆ "ಕಿಡಿಕಿಡಿಯೋಗುತ ರಾಮನ ಮೊಗವನು ಕಡೆಗಣ್ಣಿನಿಂದ ನೋಡಿದನು." ಕಂಪಿಲನ ಕಡೆಯವರೂ ಯುದ್ಧಕ್ಕೆ ಸಿದ್ಧರಾದರು. ಸೈನ್ಯದಲ್ಲಿ ಸಕಲ ಏರ್ಪಾಡುಗಳೂ ಆದುವು. ತುರುಕ ರಾವುತರು, ಒಡ್ಡಿಯ ರಾವುತರು, ಕನ್ನಡ ರಾಯರಾವುತರು, ಲಾಳ ರಾವುತರು, ಆರಿಯ ರಾವುತರು, ಕೈಮೇಳದ ಕನ್ನೋಜಿಗಳು, ಗೌಳರಾವುತರು, ಗುರ್ಜರ ರಾವುತರು ಮೊದಲಾದವರು

ತಮ್ಮ ತಮ್ಮ ದೇಶಾಚಾರಕ್ಕೆ ತಕ್ಕಂತೆ ಉಡುಗೆತೊಡುಗೆಗಳನ್ನು ಧರಿಸಿಕೊಂಡು ಅನುವಾದರು. ಗಜಸೇನೆ ಅಲಂಕೃತವಾಯಿತು. ರಾಜನ ಅಂಗರಕ್ಷಣೆಗಾಗಿ ಅಕ್ಕಪಕ್ಕಗಳಲ್ಲಿ ತುಳುವರೂ ಪಾರುಕರೂ ಬಂದು ನಿಂತರು. ಯುದ್ಧಾಭಿಮುಖರಾಗಿದ್ದ ಯೋಧರನ್ನು ಕಂಡು ಅವರ ರಮಣಿಯರು ವಿರಹದಿಂದ ಪರಿತಪಿಸತೊಡಗಿದರು. ಪರಸ್ಪರ ಸಮಾಧಾನದ ಮಾತುಕತೆಗಳಾದುವು. ಹೆಸರುವಾಸಿಗಳೂ ಶೂರರೂ ಆಗಿದ್ದ ಕಾಳಾಂಜಿಯ ಕಂಪ, ಅಕ್ಕಶಾಲೆಯ ಚಿಕ್ಕ, ಕೊಳ್ಳಿಯ ನಾಗ, ದೇವಿಸೆಟ್ಟಿಯ ಲಿಂಗ, ಹಡಪದ ಬಲ್ಲುಗ, ಗಿಂಡಿಯ ಲಕ್ಕ, ಒಕ್ಕಲಿಗರ ನಾಗಣ, ಭಂಡಾರಿ ಸಾವಣ್ಣ, ಮಾಯಿದೇವ, ಸಾಯಿದೇವ, ತೆಲುಗ ಬಾವಣ್ಣ, ಮೊದಲಾದವರು ಬಂದು ತಮ್ಮ ತಮ್ಮ ಸ್ಥಾನಗಳಲ್ಲಿ ನಿಂತರು. ಹೀಗೆ ಕಂಪಿಲನು ಅಪಾರವಾದ ಸೇನೆಯನ್ನು ಸಜ್ಜುಗೊಳಿಸಿಕೊಂಡು ತನ್ನ ಮಗನಾದ ರಾಮನೊಂದಿಗೆ ಕೂಡಿ ಆನೆಗೊಂದಿಯಿಂದ ತೆರಳಿ, ಬಿಸಿಲಹಳ್ಳಿ ಕಣಿವೆಯನ್ನು ದಾಟಿಬಂದನು.

ಬೆಳಗಾಗುವುದನ್ನೇ ನಿರೀಕ್ಷಿಸುತ್ತಿದ್ದ ಉಭಯಪಕ್ಷಗಳವರೂ ಸೂರ್ಯೋದಯವಾಗುವುದೇ ತಡ, ತಮ್ಮ ತಮ್ಮ ಸೇನೆಯೊಂದಿಗೆ ಅಣಿಯಾದರು. ಕಂಪಿಲನ ಅಕ್ಕಪಕ್ಕಗಳಲ್ಲಿ ಭಾವ ಸಂಗಮದೇವ, ಅಣ್ಣಭೈರವ ಮೊದಲಾದವರು ಸೈನ್ಯಸಮೇತರಾಗಿ ನಿಂತರು. ಕಾಟಣ್ಣನು ತನ್ನ ಸೇನೆಯೊಂದಿಗೆ ಮುಂಭಾಗದಲ್ಲಿಯೇ ಬಂದು ನಿಂತನು. ವೀರರಾಮನು ತನ್ನ ಪಡೆಯನ್ನು ಅಣಿಗೊಳಿಸಿ, ತನ್ನ ದಿವ್ಯಾಶ್ವವನ್ನೇರಿ ಸಿದ್ಧನಾದನು. ಹೊಗಳುಭಟ್ಟರು ರಾಮನನ್ನು ನಾನಾ ಪರಿಯಾಗಿ ಕೊಂಡಾಡಿದರು. ಪ್ರತಿಪಕ್ಷದ ಬಲ್ಲಾಳನ ಪಡೆಯಲ್ಲಿಯೂ ಅಸಾಮಾನ್ಯರಾದ ಧೀರರು ರಣಸನ್ನದ್ಧರಾದರು. "ಬಲವಕ್ಕದೊಳು ಶೂದ್ರಕುಲಸಂಭೂತರ ಬಲದೊಡ್ಡು ಯಡವಕ್ಕದೊಳು ಸಲೆ ಮೆಱೆದುದು ಕಡುಗಲಿ ಕೋಟಿಗಾಱರ ಒಲುಪೌಜು." ದಳಪತಿಯಾದ ನರಸಿಂಗು ತೋರಿಬಂದನು. ಅಲ್ಲಿಯೇ ಪಕ್ಕದಲ್ಲಿ ಮಗ ಹೊಯ್ಸಳನ ಸೈನ್ಯವೂ ತೋರಿಬಂದಿತು. ಸೋಮದಂಡಾಧಿಪನೂ ತನ್ನ ಸೇನೆಯೊಂದಿಗೆ ಬಂದು ನಿಂತನು. "ಅತ್ತ ಕಾಟಣ್ಣ ಸಿತ್ತಲು ನರಸಿಂಗು ಕೈಯೆತ್ತಿ ಬೀಸಲು ಬಲವೆರಡು ಹೊತ್ತವು ಬೆಟ್ಟಗಳನು ಬಂದು ಬೆಟ್ಟಗಳೊತ್ತರಿಸುವ ತೆಱದಿಂದ." ಯುದ್ಧವೊದಲಾಗಲು, ಎರಡು ಕಡೆಗಳಲ್ಲಿಯೂ ವೀರಾಧಿವೀರರು ಬಹಳ ಪರಾಕ್ರಮದಿಂದ ಕಾದಾಡಿದರು. "ನೊರೆ ನೆತ್ತರೊಜೆಱೆಯಲು ಬಿಸಿನೆತ್ತರುಣ್ಮಲು ಧುರದೊಳೆಚ್ಚಾಡಿ ಬಿಲ್ಲವರು ಬರೆಯಿಸಿಕೊಂಡರು ಕಲೆಗಳ ಕಾಲನ ಕರಣಿಕರುಗಳ ಕೈಯಿಂದ." "ಉಡಿಯೊಳು ಕಟ್ಟಿದ ವಂಕುಡಿ ಕೈಯೊಳು ಪಿಡಿದ ಸಬಳ ಕಾಲ ತೊಡರು ಬಿಡದೆ ಮೆಱೆಯೆ ಗಡೆಯವರು ಪೊಕ್ಕಿಱಿದಾಡಿ ಮಡಿದರು ರಣಭೂಮಿಯೊಳು." "ವೀರರಸದ ಲಹರಿಯ ತೆಱದಿಂ ರಕ್ತಧಾರೆ ಸುರಿಯೆ ಮೈಯೊಳಗೆ ಕೂರಾಳುಗಳಱಿದಾಡಿ ಮಡಿದು ಸುರನಾರಿಯರೆಡೆಗೆಯ್ದಿದರು." ರಾವುತರೂ ಸಹ ಮೈಮರೆತು ಕಾದಾಡಿದರು. ಮಾವಟಿಗರು ತಮ್ಮ ತಮ್ಮ ಆನೆಗಳನ್ನು ತಿವಿದು, ಕೆರಳಿಸಿ, ಮುಂದೆ ನುಗ್ಗಿಸಿದರು. "ಗಿರಿಗಿರಿಗಳು ಬಂದು ತಾಗುವ ತೆಱದಿಂದ ಕರಿಕರಿಗಳು ತಾಗಿದುವು." ಎರಡು ದಳಗಳ ದಂಡನಾಯಕರೂ ತಮ್ಮ ತಮ್ಮ ಚತುರಂಗ ಸೈನ್ಯವು ಮೈಮರೆತು ಕಾದಾಡುತ್ತಿರುವುದನ್ನು ಕಂಡು ತಲೆದೂಗಿದರು.

ಬಲ್ಲಾಳನ ಸೇನಾಪತಿಯಾದ ನರಸಿಂಗು ಕೈಬೀಸಿ ಸನ್ನೆಮಾಡಲು ಅವರು ಕಾಟಣ್ಣನ ಪಡೆಯ ಮೇಲೆ ಬಿದ್ದರು. ಕೂಡಲೆ ವೀರಾಗ್ರಣಿಯಾದ ಕಾಟಣ್ಣನು ಮುನ್ನುಗ್ಗಿ ಬಂದನು. ಕಾಟಣ್ಣನ ಉಭಯ ಪಾರ್ಶ್ವಗಳಲ್ಲಿಯೂ ಶತ್ರುಪಕ್ಷದವರು ಬಂದು ಮುತ್ತಿದರು. ಅಸಹಾಯಶೂರನಾದ ಕಾಟಣ್ಣನು ಸರ್ವರನ್ನೂ ಬಡಿನಟ್ಟಿದನು. ಅವನ ಕಾದಾಟವನ್ನು ನೋಡಿದವರು ಬಾಯಿತುಂಬ ಕೊಂಡಾಡಿದರು. ಅಮರವಧೂಟಿಯರು ಆಶ್ಚರ್ಯಚಕಿತರಾದರು. ಎದುರಾಳಿಗಳ ಆರ್ಭಟ ಮೇರೆವಿಾರಲು ಕಂಪಿಲರಾಯನು ಕಾಟಣ್ಣನ ನೆರವಿಗಾಗಿ ಸಂಗಮದೇವನನ್ನು ಕಳುಹಿಸಿದನು. ಬಲ್ಲಾಳನು ತನ್ನ ಎಡವಂಕದವರ ಮುಖಗಳನ್ನು ನೋಡಲು ಅವರು ಕೂಡಲೇ ಮುನ್ನುಗ್ಗಿದರು. ವೀರಾಧಿವೀರರಾದ ಹಡಪದ ಬಲ್ಲುಗ, ದೇವಿಸೆಟ್ಟಿಯಲಿಂಗ, ಕೊಳ್ಳಿಯ ನಾಗ, ಅಕ್ಕಸಾಲೆಯ ಚಿಕ್ಕ, ಕಾಳಾಂಜಿಯ ಕಂಪ, ಮಾದಿಗ ಹಂಪ, ಹೊಲೆಯರ ಹುಳ್ಳ

ಮೊದಲಾದವರು ಶತ್ರುಗಳನ್ನು ಪ್ರತಿಭಟಿಸಿ ಹೋರಾಡುತ್ತಿದ್ದರು. ಆಗ ಮಗ ಹೊಯ್ಸಳನು ವೈರಿ ಮೋಹರದ ಮೇಲೆ ನುಗ್ಗಿದನು. ಇದನ್ನು ನೋಡಿದ ಬಲ್ಲಾಳನು ರಾಯದಳವನ್ನು ಹರಿಯಬಿಟ್ಟನು. ಆಗ ಕಂಪಿಲನ ಮಂದಿ ಸ್ವಲ್ಪಮಟ್ಟಿಗೆ ತರಹರಿಸಿ ತಮ್ಮ ರಾಜನ ಮರೆಹೊಕ್ಕಿತು. ಕೂಡಲೆ ಅಣ್ಣಭೈರವನು ಶತ್ರುಗಳನ್ನು ಎದುರಿಸಿದನು. ಬಲ್ಲಾಳನ ಪಡೆಯ ಕೈ ಮೇಲಾಗಲು ಸಂಗಮದೇವ, ಕಾಟಣ್ಣ, ಕೊಳ್ಳಿಯ ನಾಗ, ಸಂಗಬಲ್ಲುಗ, ಚಿಕ್ಕಕಂಪ, ಸಂಗಸಾವಣ, ಸಾಯಿದೇವ, ಮೊದಲಾದ ರಾವುತರು ಮಲೆತು ನಿಂತರು. ಕೆಚ್ಚಿನಿಂದ ಕಾದಾಡುತ್ತಿದ್ದ ಆ ರಣಶೂರರನ್ನು "ರಿಪುಕುಲಕುವಲಯಮಾರ್ತಂಡನಹಿತಗಿರಿವಜ್ರ ದಂಡನುದ್ದಂಡ ವಿಕ್ರಮನುರು ಕೀರ್ತಿಕರಂಡ"ನಾದ ಕುಮಾರರಾಮನು ಕಂಡನು. ಕಂಪಿಲನ ಮೇಲೆ ಹಾಯ್ದು ಬರುತ್ತಿದ್ದ ಬಲ್ಲಾಳನ ಸೈನ್ಯವನ್ನು ಕಂಡು, ಕುಮಾರರಾಮನು ತನ್ನ ಸೇನಾಸಮೂಹದಿಂದ ಕೂಡಿ ಮುಂದುವರಿದನು.

ಸಮರಭೇರಿ ವಾದ್ಯಸಂಭ್ರಮ ಸಮೇತನಾಗಿ ಕಲಿಕಾಲಪಾರ್ಥನಾದ ಕುಮಾರರಾಮನು "ಕುರುಪತಿ ಸೇನೆಯ ಸುರಪತಿನಂದನನಿರದೆ ಪೊಗುವ ತೆಱದಿಂದ", "ಕಾನನದಾನೆಯ ಕಡುಪನಿರದೆ ಪಂಚಾನನ ಪೊಗುವ ತೆಱದೊಳು" ಬಲ್ಲಾಳನ ಸೇನೆಯನ್ನು ಪ್ರವೇಶಿಸಿದನು. "ತೊಲಗಿ ತೊಲಗಿ ವೀರಭಟರು ಚೆನ್ನಿಗರಾಮ ಕಲಹಭೂಮಿಗೆ ಬಂದನು" ಎಂದು ಮೊಳಗುತ್ತಿವೆಯೋ ಎಂಬಂತೆ ಕಹಳೆಗಳು ಶಬ್ದಗೈದುವು. ಎಡಬಲಗಳಲ್ಲಿ ಬೇಡರ ಪಡೆ ಕೂಡಿ ಬರುತ್ತಿರುವುದನ್ನು ಕಂಡ ದಂಡಾಧಿಪ ನರಸಿಂಗು ರಾಮನ ಪಡೆಗೆ ಅಡ್ಡಲಾಗಿ ನಿಂತನು. ಎದುರಾಳಿಗಳು ಒಂದೇ ಸಮನೆ ರಾಮನನ್ನು ಮುತ್ತಿಕ್ಕಿ ಸರಳ ಮಳೆಗರೆದರು. ರಾಮನು ಕಿಂಚಿತ್ತೂ ಬೆದರಲಿಲ್ಲ. ಸುತ್ತಲೂ ಕತ್ತೆತ್ತಿ ನೋಡಿದನು. ಆತನ ದಿವ್ಯಾಶ್ವವೂ ಸಹ ಸರ್ವದಾ ಸಹಸ್ರ ಮುಖವಾಗಿತ್ತು. "ಸುತ್ತ ಕವಿದ ಕತ್ತಲೆಯ ದಿನನಾಯಕನೊತ್ತರಿಸುವ ತೆಱದಿಂದ ಮುತ್ತಿದ ಮೋಹರವನು ನಿಜಬಲಗೂಡಿ ತೊತ್ತಳದುಳಿದನಾ ರಾಮ." ನಿಮಿಷಮಾತ್ರದಲ್ಲಿ ಸರ್ವರನ್ನೂ ಸದೆಬಡಿದನು. ರಾಮನಾಥನ ದಿವ್ಯಾಶ್ವವೂ ಸಹ ಒಡೆಯನಿಗೆ ತಕ್ಕಂತೆಯೇ ಶತ್ರುಗಳ ಪಡೆಯನ್ನು ಕೊಂದು ಕೆಡವಿತು.

ಹಿಮ್ಮೆಟ್ಟಿ ಓಡುತ್ತಿದ್ದ ದಂಡನ್ನು ಕಂಡು, ಮಗ ಹೊಯ್ಸಳನು ರಾಮನಾಥನ ಉರುಬೆಯನ್ನು ನಿಲ್ಲಿಸುವ ವೀರರಿಲ್ಲವೆಂದೂ, ರಾಜಕಾರ್ಯ ಕೆಟ್ಟಿತೆಂದೂ ಭಾವಿಸಿ, ಸೈನ್ಯವನ್ನು ನಿಲ್ಲಿಸಿಕೊಂಡು, ರಾಮನಿಗೆ ಅಡ್ಡಲಾಗಿ ನಿಂತನು. "ಉಭಯಬಲ ಕೈಯಿಕ್ಕಿ ಕಲಸಿದಂತಾಯ್ತು ರಣದೊಳು." ಸೇನಾಪದ ಧೂಳಿ ನೇಸ ರನ್ನು ಕವಿಯಲು, ಭೂಮಂಡಲದಲ್ಲಿ ಕತ್ತಲೆ ಕವಿದಂತಾಗಲು, ಉಭಯಬಲಗಳ ಕಾದಾಟವನ್ನು ಕಂಡು ದೇವತೆಗಳು ಹೊಗಳಿದರು. ಶತ್ರುಗಳು ರಾಮನ ಪೆಟ್ಟನ್ನು ತಡೆಯಲಾರರೆ ಹೋದರು. ಹೆಸರಾಂತ ವೀರರು "ಶಿವಶಿವ ಗುಣಕೆ ಮಚ್ಚರವುಂಟೆ ಜಂಗುಳಿಕುವರರ ಗಂಡ ರಾಮುಗಗೆ ಅವನಿಯೊಳೆಣೆಯಿಲ್ಲವೆಂದು" ಕೊಂಡಾಡಿದರು. ಒಂದು ಗಳಿಗೆ ಮಾತ್ರದಲ್ಲಿ ಪಡೆಯೆಲ್ಲವೂ ದಿಕ್ಕಾಪಾಲಾಯಿತು. ಮಗ ಹೊಯ್ಸಳನು ಅವರ ನ್ನೆಲ್ಲ ಮೂದಲಿಸುತ್ತ, ಮತ್ತೆ ಒಟ್ಟುಗೂಡಿಸುತ್ತ "ಮುಗಿಲ ತಂಡ ಬಿಱುಗಾಳಿಗಿದಿರೆತ್ತುವಂತೆ" ರಾಮನ ಮೇಲೆ ಉರುಬಿ ಬಿದ್ದನು. ಮಗ ಯೊಯ್ಸಳನಿಗೂ ರಾಮನಿಗೂ ಬಲವಾದ ಕಾಳಗ ಸಾಗಿತು. ಮಗ ಹೊಯ್ಸಳನ ಪರಾಕ್ರಮವನ್ನು ಎರಡು ಕಡೆಗಳವರೂ ಹೊಗಳಿದರು. ಎಲ್ಲಕ್ಕಿಂತ ಮಿಗಿಲಾಗಿ "ಕಲಿಕಾಲ ಗಾಂಡೀವಿ ರಿಪುಮೋಹರದ ಗಂಡರ ಗಂಡ ಕಲಹಸರಸಿಜಮೇತಂಡ ಕಂಪಿಲನ ಕುಮಾರ"ನಾದ ರಾಮ ನಾಥನು ಮಗ ಹೊಯ್ಸಳನ ಕಲಿತನಕ್ಕೆ ತಾನೂ ತಲೆದೂಗಿದನು. ನಿಮಿಷ ನಿಮಿಷಕ್ಕೂ ರಾಮನ ಆಟೋಪ, ಆವೇಶಗಳು ಹೆಚ್ಚಾಗುತ್ತಿದ್ದುವೇ ವಿನಾ ಸ್ವಲ್ಪ ಮಾತ್ರವೂ ಕಡಮೆಯಾಗಲಿಲ್ಲ. ಮೊದಲೇ ತಿಳಿಸಿದಂತೆ "ರಾಮನ ವಾಜಿ ರಣರಂಗನಟನಾದುದು." ಕಡೆಗೆ ಸೈನಿಕರು ನಿರ್ವಾಹವಿಲ್ಲದೆ ಬಲ್ಲಾಳನನ್ನು ಮರೆಹೊಕ್ಕರು. "ಮೊಗದ ಗಾಯದೊಳೊಯ್ಯನೆ ದಳಪತಿ ಮೆಯ್ದೆಗೆದನು." ಬಲ್ಲಾಳನು "ರಾಮನಾಥನ ರಾವುತಿಕೆ ಯುದ್ದಂಡತೆಯನು" ಕಂಡು "ಆವ ನೋಂಪಿಯ ಮಾಡಿ ಪಡೆದನೊ ಕಂಪಿಲದೇವ ಕುಮಾರರಾಮನನು

ಪಾವನಿ ಪಾರ್ಥರು ಪಾಟಿಯಲ್ಲದೆ ಮಿಕ್ಕ ರಾವುತರೆಣೆಯೆ ರಾಮನಿಗೆ," "ಶಿವಶಿವ ಗುಣಕೆ ಮಚ್ಚರವುಂಟೆ ರಾಮನ ಬವರದ ಬಲುಗಯ್ತನವ ಹವಣಿಸಬಹುದೆ ಮಹಾದೇವ" ಎಂಬುದಾಗಿ ಹೊಗಳಿದನು. ಇತ್ತ, ಶತ್ರುಗಳನ್ನು ಸಂಹರಿಸಿ, ಬಂದು, ತಂದೆಯ ಕಾಲಿಗೆ ನಮಸ್ಕರಿಸಿದ ಕುಮಾರರಾಮನನ್ನು ಕಂಪಿಲನು ಬರ ಸೆಳೆದು ಅಪ್ಪಿಕೊಂಡು ಆನಂದಾಶ್ರುಗಳನ್ನು ಸುರಿಸಿದನು. ಸೂರ್ಯಾಸ್ತವಾಗಲು ಎರಡು ಪಡೆಗಳೂ ತಮ್ಮ ತಮ್ಮ ಬೀಡುಗಳಿಗೆ ತೆರಳಿದುವು. ಬಲ್ಲಾಳನು "ವರನಲ್ಲದೆ ರಾಮನಾಥನೀ ಕಾಲದ ನರನೆ" ಎಂದು ಕೊಂಡಾಡುತ್ತ ಚಿಂತಾಕ್ರಾಂತನಾದನು. ಆಗ ಮಂತ್ರಿಗಳು "ಸುರುತಾಳದಂಡುಂಟೊಳತೋಟಿ ಸಲ್ಲವು" ಎಂದು ತಮ್ಮ ತಮ್ಮ ಪ್ರಭುಗಳಿಗೆ ಸಲಹೆಮಾಡಿದರು. ಅನಂತರ ಸೋಮದಂಡಾಧಿಪ ಮತ್ತು ಬೈಚದಣಾಯಕರಿಬ್ಬರೂ ಕೂಡಿ ಕಂಪಿಲನಿಗೂ ಬಲ್ಲಾಳನಿಗೂ ಸಂಧಿಮಾಡಿಸಿದರು. ಇಬ್ಬರೂ ತಮ್ಮ ತಮ್ಮ ಊರುಗಳಿಗೆ ಹಿಂತಿರುಗಿದರು.

ಕಂಪಿಲನು ರಾಮನಿಗೆ ರಾಜ್ಯಭಾರದ ಹೊಣೆಯನ್ನು ಒಪ್ಪಿಸಿಕೊಟ್ಟನು. "ವಿನಯ ನಾಲಗೆಯ ನಾಂತುದೊ, ವಿತರಣಗುಣ ತನುವಿಡಿದುದೊ, ವೀರಧರ್ಮ ಮನುಜರೂಪಾಂತುದೊ" ಎಂದು ಜನಗಳು ರಾಮನನ್ನು ಸ್ತುತಿಸುತ್ತಿದ್ದರು. ಕೆಲವರು "ವಸುದೇವ ಕೃಷ್ಣನ, ದಶರಥ ರಾಮನ, ಬಿಸಿಗಣ್ಣ ಶಿಖಿವಾಹನನ" ಪಡೆದಂತೆ ಕಂಪಿಲನು ರಾಮನನ್ನು ಪಡೆದನೆಂದೂ "ಇಂಗೋಲ್ವಿಲ್ಲನನಿಂಡಿರೆ, ಭೀಷ್ಮನ ಗಂಗೆಯಂಜನೆ ಹನುಮನನು" ಪಡೆವಂತೆ ಹರಿಹರದೇವಿ ರಾಮನನ್ನು ಹೆತ್ತಳೆಂದೂ ಶ್ಲಾಘಿಸುತ್ತಿದ್ದರು. ಈ ರೀತಿ ಕುಮಾರ ಕಂದರ್ಪನಂತಿದ್ದ ಕುಮಾರರಾಮನು, ಎಲ್ಲರ ಮೆಚ್ಚುಗೆಗೂ ಪಾತ್ರನಾಗಿ, ಓರಣವಾಗಿ ರಾಜ್ಯವಾಳುತ್ತಿದ್ದನು. ರಾಮನ ಬಿರುದಾವಳಿಯಲ್ಲಿ "ನವಲಕ್ಕ ತೆಲುಗರ ಗಂಡ" ಎಂಬುದೂ ಒಂದಾಗಿತ್ತು. ಇದನ್ನು ಕೇಳಿ ವೀರ ರುದ್ರನು "ಕಡೆಯಕಾಲದ ರುದ್ರನಂತೆ" ಕಿಡಿಕಿಡಿಯಾದನು. ಒಡನೆಯೇ ತನ್ನ ತೆಲುಗಾಣೆಯದವರಿಗೆಲ್ಲ ರಾಯಸವನ್ನು ಬರೆದು ಕಳುಹಿಸಿದನು. ಅರಸು ಮಕ್ಕಳು, ಪದ್ಮನಾಯಕರು, ಮೊದಲಾದವರೊಂದಿಗೆ ಕೂಡಿ ಕಂಪಿಲನ ಮೇಲೆ ದಂಡೆತ್ತಿಬಂದನು.

## ವೀರರುದ್ರ ಮತ್ತು ಕಪಿಲೇಶ್ವರರೊಡನೆ ಕಾಳಗ

ಸೇವಕನೊಬ್ಬನು ಓಡಿ ಬಂದು, "ಬಡಗಣಿಂದಂಬುಧಿ ನಡದು ಬರ್ಪಂತಾ ಪಡೆ ಭರದಿಂ ಬಂದು ನಮ್ಮ ಪೊಡವಿಯೆಲ್ಲವ ಸೂಱೆಗೊಂಡರೆಂದು" ಬಿನ್ನವಿಸಿದನು. ಆ ನುಡಿಗಳನ್ನು ಕೇಳಿದ ಕಂಪಿಲನು "ನೀರದ ನಿನದವ ಕೇಳ್ದ ಸಾಮಜವೈರಿಯಂದದಲಿ" ಕನಲುತ್ತ ರಾಮನ ಮೊಗವನ್ನು ನೋಡಿದನು. ತನ್ನ ಓಲಗ ದಲ್ಲಿದ್ದ ಇತರ ಸಾಮಂತರ ಕಡೆಗೂ ತಿರುಗಿ ನೋಡುತ್ತ "ಬಿರಿದು ಪಾಡಿಗೆ ಬರ್ಪ ರುದ್ರನೊಡನೆ ನನಗಿರದೆ ಕಪ್ಪವ ತೆತ್ತು ಬಾಳ್ವ ನರಪತಿಗಳು ಬಂದರು ಕೂರಸಿಗೆ ಮುದ್ದ ಪರಮುಖದಿಂ ಕೊಡಿಪಂತೆ" ಎಂದು ಗಹ ಗಹಿಸಿ ನುಡಿಯುತ್ತ ಕುಪಿತನಾದನು. ಕಡೆಗೆ "ವಿಮಲ ವಿಕ್ರಮ ಕಂಪನೃಪತಿ" ಸಮರಭೇರಿಯನ್ನು ಪೊಯ್ಯಿಸಿ, ಗಿರಿದುರ್ಗದಿಂದ ಸುಮುಹೂರ್ತದಲ್ಲಿ ವೈಭವದಿಂದ ಇಳಿದುಬಂದನು. ಕುಮಾರರಾಮನು ಸಕಲಾ ಯುಧ ಸನ್ನದ್ಧನಾಗಿ ಸಮರಕ್ಕೆ ಸಿದ್ಧನಾದನು. ತಾಯಿಗೆ ನಮಸ್ಕರಿಸಿ, ನಾಲ್ಕು ಸತ್ತಿಗೆಗಳನ್ನು ಹಿಡಿಸಿಕೊಂಡು "ತಾರಕನಾಹನಕಾ ಪುರಹರನ ಕುಮಾರನೆಯ್ದುವಂದದಲಿ" ವೀರರುದ್ರನ ಮೇಲೆ ಕಾಳಗಕ್ಕೆ ನಡೆದನು.

ಅಪಾರ ಸೇನೆಯಿಂದ ಕೂಡಿದ ಕಂಪಿಲನು, ಕುಮಾರರಾಮನ ಸಮೇತ "ತೆಂಕಣಿಂದಂಬುಧಿ ಬಡಗ ಪರಿವವೊಲ್" ಉತ್ತರಾಭಿಮುಖವಾಗಿ ತೆರಳಿ, ವೀರರುದ್ರನ ಸೇನೆಗೆ ಒಂದು ಗಾವುದದ ದೂರದಲ್ಲಿ ಬೀಡು ಬಿಟ್ಟನು. ಕಂಪಿಲನ ಆಗಮನದ ವೃತ್ತಾಂತವು ವೀರರುದ್ರನಿಗೆ ವೇದ್ಯವಾಯಿತು. ಬಲ್ಲಾಳನನ್ನು ಗದ್ದ ಸೊಕ್ಕಿನಿಂದ ಕಂಪಿಲನು ತಮ್ಮನ್ನು ಎದುರಿಸಲು ಬಂದಿರುವನೆಂದು ವೀರರುದ್ರನು ಕೋಪದಿಂದ ಮಾತಾಡಿದನು.

ಅವನ ಪಾಳೆಯದಲ್ಲಿದ್ದ ರಾವುತ ಸಿಂಗಮನಾಯಕನು ತನ್ನ ಒಡೆಯನಿಗೆ ಕೈಮುಗಿದು "ರಾಯನೆ! ನನ್ನ ಬಿನ್ನಪವನ್ನು ಚಿತ್ತೈಸಬೇಕು. ನನ್ನನ್ನು ಬಾಯಿಬಡಕ ಎನ್ನದಿರಿ. ಯುದ್ಧದಲ್ಲಿ ಇತರರು ರಾಮನನ್ನು ಹಿಡಿದು ನಿಲ್ಲಿಸಿದ್ದೇ ಆದರೆ ನಾನು ಕಂಪಿಲನನ್ನು ಹಿಡಿದು ತರುತ್ತೇನೆ. ವೀಳೆಯವನ್ನು ದಯಪಾಲಿಸಬೇಕು" ಎಂದು ವಿನಂತಿ ಮಾಡಿಕೊಂಡನು. ಆಗ ಅರಸುಮಕ್ಕಳು ತಾವು ರಾಮನನ್ನು ಅಡ್ಡಗಟ್ಟಿ ನಿಲ್ಲಿಸುವುದಾಗಿ ಶಪಥಮಾಡಿದರು. ಕಾಕತೀಶ್ವರನಾದ ರುದ್ರನು ಸಂತೋಷಗೊಂಡು ಸಿಂಗಮನಾಯಕನನ್ನು ಸನ್ಮಾನಿಸಿದನು.

ಬೆಳಗಾಗಲು, ರುದ್ರದೇವನು ದೇವತಾರ್ಚನೆಯನ್ನು ಮಾಡಿ, ಶಸ್ತ್ರಾಧಿದೇವತೆಯನ್ನು ಬಲಗೊಂಡು, ಭೂಸುರರ ಆಶೀರ್ವಾದವನ್ನು ಸ್ವೀಕರಿಸಿ, ಉತ್ತಮ ಲಗ್ನದಲ್ಲಿ ಬಿಳಿಯ ಆನೆಯಮೇಲೆ ಬೆಳ್ಗೊಡೆಯ ತಣ್ಣೆಳಲಲ್ಲಿ ಹೊರಟು ಬಂದನು. ವಾದ್ಯಘೋಷವು ಭೂಭಾರಸಂಹಾರಸಮಯದ ಭೈರವಢಕ್ಕಾರಭಟೆಯಂತೆ ಇದ್ದಿತು. ಸಿಂಗಮನಾಯಕನು ತನ್ನ ಸೈನ್ಯವನ್ನು ಗೊತ್ತಾದ ಎಡೆಗಳಲ್ಲಿ ನಿಲ್ಲಿಸಿದನು. ರಾಜಪುತ್ರರ ಫೌಜು ನಿಯತವಾದ ಸ್ಥಳದಲ್ಲಿ ಸಜ್ಜಾಯಿತು. ರಡ್ಡಿಗಳ ಸೇನೆ ಬೊಬ್ಬಿಡುತ್ತ ಸಂಗ್ರಾಮಭೂಮಿಯಲ್ಲಿ ತೋರಿಬಂದಿತು. ಪದ್ಮನಾಯಕರ ಸೈನ್ಯವೂ ಅಣಿಯಾಯಿತು. ಈ ರೀತಿ ಸುರಗುರುವಿಗೂ ಲೆಕ್ಕಿಸಿ ಹೇಳಲು ಅಸಾಧ್ಯವೋ ಎಂಬಂತೆ ಒಬ್ಬೊಬ್ಬರ ಸೇನೆಯೂ ತಮ್ಮ ತಮ್ಮ ಎಡೆಗಳಲ್ಲಿ ಅಣಿಯಾಗಿ ನಿಲ್ಲಲು "ಕಳಶಜನಂದು ದುಶ್ಶಳೆಯ ಗಂಡನ ಕಾಯಲೆಳಸಿ ಕರ್ಣಾರಿಗೆಸಗಿದ ಬಲು ಫೌಜುಗಳಂತೆ" ಎಸೆದುವು.

ಕಂಪಿಲನು ಉತ್ತಮಾಶ್ವದ ಮೇಲೇರಿ ಸೇನಾಸಮೇತನಾಗಿ ಬಂದನು. ವೀರರುದ್ರನ ಸೇನಾ ಸಮೂಹವನ್ನು ಕಂಡು ಆತನ ಮೊಗ ಕುಂದಿತು. ಮನ ಕಂದಿತು. ಬಹು ಚಿಂತೆಯಾಯಿತು. ತಂದೆಯ ಆತಂಕ ಕುಮಾರರಾಮನಿಗೆ ಗೊತ್ತಾಯಿತು. ವಿನಯದಿಂದ ನಗುತ್ತ "ದೇವ! ನನ್ನ ಬಿನ್ನಪವನ್ನು ಚಿತ್ತೈಸು. ರುದ್ರದೇವನ ಬಲವನ್ನೆಲ್ಲ ಒಂದೇ ಜಾವದಲ್ಲಿ ಜವನಗರಿಗಟ್ಟುವೆನು. ಅಡವಿಯೆನಿತು ಕಿಡಿಯೆನಿತು? ಆನೆಯ ವಂಗಡವೆನಿತು ಆ ಸಿಂಗವೆನಿತು? ಕಡಲೆನಿತು ಆ ವಡಬಾನಲನೆನಿತು? ಗೋಗ್ರಹಣದಲ್ಲಿ ಕುರುಬಲವನ್ನು ಅರ್ಜುನನು ಕಲಕಿದಂತೆ ಅರೆಗಳಿಗೆಯಲ್ಲಿ ಇದನ್ನು ಕಲಕುವೆನು. ಏಕಾಂಗಿಯಾಗಿ ಭೀಮನು ಕೌರವನೃಪತಿಯ ಅಸಂಖ್ಯಾತ ಬಲವನ್ನು ಸಂಹರಿಸಿದಂತೆ ಜೋಕೆಗೆಡಿಸಿ ಕೊಂದು ತೋರುವೆನು. ಹದಿನಾಲ್ಕು ವರ್ಷದ ತರುಣನಾದ ರಾಮನು ಹದಿನಾಲ್ಕು ಕೋಟಿ ದಾನವರನ್ನು ಸದೆಬಡಿದಂತೆ ಈ ರುದ್ರನ ಬಲವನ್ನು ಸದೆಬಡಿಯುವೆನು. ನಿನಗೆ ಕದಲೇಕೆ? ಬಹಳ ಬಲವಿದೆಯೆಂದು ಭಯಪಡಬೇಡ. ವಿಹಗಕೋಟೆಗಳಿಗೊಂದೇ ಸಾಳ್ವ ಸಾಲದೆ? ಹದ್ದು ಕಾಗೆಗಳಿಗೆ ಈ ಬಲವನ್ನು ನಾನು ಬಿದ್ದಿಕ್ಕುವೆನು. ರುದ್ರನನ್ನು ಗೆದ್ದು ತೋರುವೆನು" ಎಂಬುದಾಗಿ ಹೇಳಿದನು. ಅಲ್ಲದೆ, ರಾಮನು "ಸುರುತಾಳನ ಸಲುವಾಗಿ ಬಲ್ಲಾಳನನ್ನು ಹಾಗೇ ಬಿಟ್ಟೆ. ಈ ಕಾಕತಿರುದ್ರನನ್ನು ಏಕಶಿಲಾಪುರಪರ್ಯಂತ ಅಟ್ಟದಿದ್ದರೆ ನಾನು ನಿನ್ನ ಮಗನಲ್ಲ" ಎಂದು ಶಪಥಮಾಡಿದನು. ಬಳಿಕ ಯುದ್ಧಸನ್ನದ್ಧನಾಗಿ ಕಾಕತಿ ರುದ್ರದೇವನ ಪಡೆಗಿದಿರಾಗಿ ನಡೆದನು. ಸಾಯಿದೇವನು ರಡ್ಡಿಗಳ ಮೋಹರಕ್ಕೆ ಎದುರಾಗಿಯೂ, ಕಾಟಣ್ಣನು ಪದ್ಮನಾಯಕರಿಗೆ ಎದುರಾಗಿಯೂ, ಭೈರವನು ಸಿಂಗಮನಿಗೆ ಎದುರಾಗಿಯೂ, ಸಂಗಮದೇವನು ಅರಸು ಮಕ್ಕಳಿಗೆ ಎದುರಾಗಿಯೂ ನಿಂತರು. ಇವುಗಳನ್ನೆಲ್ಲ ನೋಡುತ್ತಿದ್ದ ನಾರದ ಮತ್ತು ದೇವತೆಗಳು "ವೀರ ರಾಮನ ರಣಕೇಳಿಯ ವೀರಾವತಾರ"ವನ್ನು ಕೊಂಡಾಡಿದರು. ಇಷ್ಟೇ ಅಲ್ಲ; ತೆಲುಗ ಮನ್ನೆಯರೂ, ವೀರರುದ್ರನೂ ರಾಮನನ್ನು "ಫಲುಗುಣನಲ್ಲದಿವಗೆ ಪಾಸಟಿಯೆ" ಎಂದು ಮುಕ್ತಕಂಠದಿಂದ ಕೊಂಡಾಡಿದರು. ಆದರೆ, ವೀರರುದ್ರನ ಅಪಾರ ಸೇನೆಯ ಸಮ್ಮುಖದಲ್ಲಿ ರಾಮನ ಸ್ಥಿತಿ ಏನಾದೀತೋ ಏನೋ, ಅಭಿಮನ್ಯುವಿಗೆ ದ್ರೋಣಾಚಾರ್ಯರು ಚಕ್ರವ್ಯೂಹ ರಚಿಸಿದಂತಿದೆಯಲ್ಲಾ ಎಂಬುದಾಗಿ ದೇವತೆಗಳೂ ಇಂದ್ರನೂ ಚಿಂತಾಕುಲರಾದರು. ಈ ವೇಳೆಗೆ ತೆಲುಗು ವಂದಿಮಾಗಧರು ಬಂದು ರಾಮನ ಬಿರುದಾವಳಿಯನ್ನು ಚಾಚೂ ಬಿಡದೆ ಕೊಂಡಾಡಿ, ಪ್ರತಿಪಕ್ಷದ ಮುಖಂಡನಾದ ವೀರರುದ್ರನನ್ನೂ, ರಾಜಸುತರನ್ನೂ, ಸಿಂಗಮ, ಪದ್ಮ

ನಾಯಕರೇ ಮೊದಲಾದವರನ್ನೂ ತೋರಿಸಿ, ಸಿಂಗಮನ ಶಪಥವನ್ನೂ ತಿಳಿಸಿದರು. ರಾಮನನ್ನು ಅರ್ಜುನನ ಅವತಾರವೇ ಸರಿಯೆಂದು ಹೊಗಳಿ, ಆತನಿಂದ ಸನ್ಮಾನಿತರಾಗಿ ಹಿಂತಿರುಗಿದರು.

ಹಿಂತಿರುಗಿ ಬಂದ ಆ ವಂದಿಮಾಗಧರು ವೀರರುದ್ರನಿಗೆ ರಾಮನ ವೃತ್ತಾಂತವನ್ನೆಲ್ಲ ತಿಳಿಸಿದರು. ಅನಂತರ ಸಂಜ್ಞೆಮಾಡುವುದೇ ತಡ, ಕಾಕತಿರುದ್ರನ ಸೇನೆ ಭೈರವಾಡಂಬರದಿಂದ ಸಾಗಿ ಬಂದಿತು. ಸೇನಾಪದಧೂಳಿ "ಗಗನಮಂಡಲಪರಿಯಂತರ ಭೂತಳ ನೆಗೆದುದೆಂದೆನೆ" ಮುಸುಕಿ, ಸೂರ್ಯನು "ಕೊಳದೊಳಗೊಲಿವರುಣಾಬ್ಜದಂತೆ" ತೋರಿಬಂದನು. ಉಭಯಪಡೆಗಳ ಚೂಣಿಯ ಭಟರು "ಬಿಲ್ಲಿಂದ ಶರವೆಯ್ದುವ ತೆಱದಿಂದ" ಮುನ್ನುಗ್ಗಿ ಮಾರಾಂತರು. ಸಿಂಗಭೂಪನ ಆಜ್ಞಾನುಸಾರವಾಗಿ ಹರಿಗೆಯವರು, ಬಿಲ್ಲವರು, ಸಬಳಿಗರು, ವಾಹಕರು, ಜೋದರು ಮೊದಲಾದವರು ಎರಡು ಕಡೆಗಳಲ್ಲಿಯೂ ಕಾದಾಡ ತೊಡಗಿದರು. ಆಗ ಕುಮಾರರಾಮನು ಸಿಂಗಮನ ಶಪಥವನ್ನು ನೆನೆದು ಮೊದಲು ಕಂಪನೃಪತಿಗೆ ತಕ್ಕ ಮೈಗಾವಲನ್ನು ಏರ್ಪಡಿಸಬೇಕೆಂದು ಒಗೆದನು. ಅಣ್ಣ ಭೈರವನಿಗೆ ಆ ಹೊಣೆಯನ್ನು ವಹಿಸಿ, "ಸಿಂಗಮನ ಮುಸುಡುಗಾಣದ ಮುನ್ನ ಮುಂದಲೆವಿಡಿದು ನೀನೊಸೆದೊಪ್ಪಿಸಣ್ಣ ರಾಯನಿಗೆ" ಎಂದು ಹೇಳಿ ತನ್ನ ಕಾರ್ಯಕ್ಕೆ ಅನುವಾದನು. ಕುಮಾರರಾಮನು ತನ್ನ ದಿವ್ಯಾಶ್ವಕ್ಕೆ ಪಾದ ತೊಳೆದು, ಕಾಣಿಕೆಯಿಕ್ಕಿ, ನಮಿಸಿ, ಅದರ ಬೆನ್ನೇರಿ ತೆರಳಿದನು. ವೀರರುದ್ರನ ಮಂದಿ ಸಮುದ್ರದ ತರಂಗಗಳಂತೆ ಮೇಲಿಂದಮೇಲೆ ಬರಲು ಅದನ್ನು ಕಂಡ ರಾಮನು "ವಡಬಾಗ್ನಿ ಕಡಲ ಪೊಗುವ ತೆಱದಿಂ ಪಗೆವಡೆಯ ಪೊಕ್ಕನು." ಪದ್ಮ ನಾಯಕರ ಮೋಹರವನ್ನು ಪ್ರವೇಶಿಸಿ ಮೈಯಿಕ್ಕಿ ತಿವಿದನು. ರಡ್ಡಿಗಳ ಮೋಹರವನ್ನು ಒಕ್ಕಲಿಕ್ಕಿದನು. ವೀರರಾಮನು ಲೀಲಾಜಾಲವಾಗಿ ಶತ್ರುಗಳನ್ನು ಸಂಹರಿಸುತ್ತ "ಎಡಗಯ್ಯ ಬಲಗಯ್ಯ ಖಂಡೆಯದಿಂ ಕಡಿಕಡಿದೊಟ್ಟಿದನು ರಣದೊಳಗೆ." "ಕರಿಘಟೆಯನು ಕಲಕಿದ. ಹಯದೊಡ್ಡನು ಹರಹಿದ. ಕಾಲುಪಾಯಕರ ಹುರಿಯೊಡೆಯಿಸಿದನು." ಪ್ರತಿಪಕ್ಷದವರು ರಾಮನ ದಿವ್ಯಾಶ್ವವನ್ನು ಮುತ್ತಿ ನಾನಾ ಆಯುಧಗಳ ಸರಿಮಳೆಯನ್ನೇ ಕರೆದರು. ಆದರೆ ರಾಮನು ಸ್ವಲ್ಪವೂ ಜಗ್ಗದೆ "ಹರಿ ಕರಿಯವಂಗಡವ ಬೆನ್ನಟ್ಟಿ ಕೊಲ್ವಂತೆ" ಎಬ್ಬಟ್ಟಿ ಕೊಲ್ಲುತ್ತಿದ್ದನು. ಶತ್ರುಗಳು ಎದುರು ನಿಲ್ಲಲಾರದೆ ಓಡಿಹೋಗುತ್ತಿದ್ದುದಲ್ಲದೆ "ಅಲೆಯೆ ಜಂಝಾನಿಲ ತೊಟ್ಟು ಸಡಿಲಿದಾಲದೆಲೆಯುದಿರ್ವಂತೆ ಕುವರನ ಅಲಗಿನ ಹೊಯ್ಲಿನಿಂ ನೆಲಕೆ ಬಿರ್ದುದು." ಎಲ್ಲರೂ ಚಲ್ಲಾಪಿಲ್ಲಿಯಾದರು. ಸಮಸ್ತರನ್ನೂ ಸದೆಬಡಿಯುತ್ತಿದ್ದನು. ಪದ್ಮನಾಯಕರ ಸೇನೆ ಮುರಿದುದು. ಉರುಬಿ ಕವಿವ ರಡ್ಡಿಗಳ ಭಟರು ದೆಸೆದೆಸೆಗೋಡಿದರು. ಈ ದುಃಸ್ಥಿತಿಯನ್ನು ಕಂಡು ರಾಜಕುಮಾರರು ತಾವು ಮಾಡಿದ್ದ ಪಂಥಕ್ಕೆ ಅನುಸಾರವಾಗಿ ರಾಮನನ್ನು ಬಂದು ಮುತ್ತಿದರು. ಅವರೆಲ್ಲ ಬಂದು ಮೇಲೆ ಬೀಳುತ್ತಿರಲು "ಆಸಿಪಂಜರದ ನಡುವಣ ಯೋಗಿಯ ಪೊಚ್ಚ ಪೊಸಬಗೆಯಂತಾ ರಾಮ" ಎಲ್ಲರನ್ನೂ ಪ್ರತಿಭಟಿಸಿ ಮುನ್ನುಗ್ಗುತ್ತಿದ್ದನು. ದೇವತೆಗಳೂ ಬೆದರುತ್ತಿರಲು ರಾಮನು ನಿರ್ಭೀತಿಯಿಂದ ಎಲ್ಲರನ್ನೂ ಸದೆಬಡಿಯುತ್ತ ಹೋರಾಡುತ್ತಿದ್ದನು. "ಗಣನಾತೀತ ಗಜಂಗಳು ಸಿಂಹವ ಕೆಣಕುವಂತಾ ರಾಜಸುತರು ರಣದೊಳು ರಾಮನ ಮೇಲೆ ತಿವಿದು ಸುರಗಣಿಕೆಯರ" ಪಾಲಾಗುತ್ತಿದ್ದರು. ಗಗನಗಾಮಿ ಯಾಗಿದ್ದ ದಿವ್ಯಾಶ್ವವು ಸಂದರ್ಭಕ್ಕನುಸಾರವಾಗಿ ನೆಲದ ಮೇಲೆ ಪರಿದಾಡುತ್ತ, ತಾನೂ ಸಹ ಸಂಹಾರ ಕಾರ್ಯವನ್ನು ಮಾಡುತ್ತ "ಗರುಡನಂಬುಜನಾಭನ ಹೊತ್ತು ಗಗನದೊಳಿರದೊಲೆದಾಡುವಂದದಲಿ" ರಣರಂಗದಲ್ಲಿ ಸುಳಿದಾಡುತ್ತಿದ್ದಿತು. ಅರಸುಮಕ್ಕಳ ಜೊತೆಯಲ್ಲಿ ರಾಮನ ಕಾಳಗ ಸಾಗುತ್ತಿರಲು, ಸಿಂಗಮನು ಕಂಪನೃಪನನ್ನು ಹಿಡಿಯಲೆಂದು ಪಡೆಗೂಡಿ ತೆರಳಲು, ರಾಯನ ಮಂದಿ ಅಡ್ಡಗಟ್ಟಿದರು. ಸಾಯಿದೇವ, ಮಾಯಿದೇವ, ಲಾಯಿದೇವ, ಕಾಯಿದೇವ, ಸಾಲಿಚಂದ್ರ, ಧರ್ಮಚಂದ್ರ, ಹರಿಶ್ಚಂದ್ರ, ಶಾಲಿವಾಹನ, ಮೇಘಚಂದ್ರ, ಕಾಲಚಂದ್ರ, ಚಂದ್ರಸೇನ, ನರಸಿಂಗು ರಾಮಕುಮಾರ, ವಿಕ್ರಮಬಾಹು ಮುಂತಾದವರು ಕಂಪಿಲನನ್ನು ಹಿಂದಿಕ್ಕಿ ಸಿಂಗಮನನ್ನು ಪ್ರತಿಭಟಿಸಿದರು. ಇಂತೆಯೇ ಕಾಟಣ್ಣ,

ಸಂಗಮದೇವ, ಕೊಳ್ಳಿಯನಾಗ, ಬಲ್ಲುಗ ಮೊದಲಾದವರೂ ಹೋರಾಡುತ್ತಿದ್ದರು. ಈ ಅಪಾರವಾದ ವೈಗಾವಲವರನ್ನು ಜಯಿಸಲಸಾಧ್ಯವಾಗಲು ವೀರರುದ್ರನು ಮತ್ತೆ ಕೆಲವು ರಾವುತರನ್ನು ಕೊಟ್ಟು ಕಳುಹಿಸಿದನು. ಆದರೆ ಅವರು "ಮುಗಿಲ ಮೋಹರ ರವಿಬಿಂಬವ ಮುತ್ತುವಂತೆ" ತೀರ ವಿಫಲರಾದರು. ಅಣ್ಣ ಭೈರವ ಮುನ್ನುಗ್ಗಿ ಸಿಂಗಮನೃಪತಿಯ ಸೇನೆಯನ್ನು ತರಿದಿಕ್ಕಿದನು. ಸಿಂಗಮನು ಮನ್ನೆಯರನ್ನು ಮೊದಲಿಸಿ ಮುಂದೆ ಮುಂದೆ ಬರಲು ಅಸುವಾದನು. ದೂರದಿಂದಲೇ ಇದನ್ನು ಕಂಡ ರಾಮನು ಅರಸುಮಕ್ಕಳು ಅವಹೇಳನಮಾಡುತ್ತಿದ್ದರೂ ಗಣಿಸದೆ ನಿಮಿಷಮಾತ್ರದಲ್ಲಿ ಆತನ ಮನೋವೇಗಕ್ಕಿಂತಲೂ ತ್ವರಿತವಾಗಿ ಸುಳಿವ ಕುದುರೆಯ ಸಹಾಯದಿಂದ ತಂದೆಯ ಬಳಿಗೆ ಧಾವಿಸಿ ಬಂದನು. ಬಂದವನೇ ಸಿಂಗಮನಾಯಕನನ್ನು ಕೈಸೆರೆ ಹಿಡಿದು ಕಂಪಿಲನಿಗೆ ಒಪ್ಪಿಸಿಕೊಟ್ಟು, ಮತ್ತೆ ತನ್ನ ಎಡೆಗೆ ಹಿಂತಿರುಗಿ "ಭೀಮ ಕೌರವಬಲಕಿದಿರಾಗಿ ನಿಂದಂತೆ" ಅರಸುಮಕ್ಕಳನ್ನು ಎದುರಿಸಿ ನಿಂತನು. ಆನೆಯಮೇಲಿದ್ದ ರುದ್ರನ ಬಳಿಗೆ ಸಾರಿ "ಎಲೈ ಸೂರ್ಯಕುಲಜನಾದ ರುದ್ರನೇ! ನೀನು ಯುದ್ಧಮಾಡದೆ ವಿಪ್ರಕುಲದಲ್ಲಿ ಹುಟ್ಟಿದವರಂತೆ ಸುಮ್ಮನಿರುವುದು ಉಚಿತವೆ? ಆನೆಯಿಂದ ಇಳಿದು ಬಾ! ಕುದುರೆಯೇರಿ ಯುದ್ಧಕ್ಕೆ ಸಾರು. ಇಂತು ನಿನ್ನ ಕುಲವನ್ನು ನೀರಿನಲ್ಲಿ ಅದ್ದುವುದು ತಕ್ಕುದಲ್ಲ. ಕೆಡುವೊಡಲನು ನಚ್ಚಿ ಕೀರ್ತಿಶರೀರವ ಬಿಡುವರೆ ವೀರರಾದವರು?" ಎಂಬುದಾಗಿ ಪರಿಪರಿಯಾಗಿ ಹಂಗಿಸಿ ಕೆಣಕಿಸಿದನು. ಈ ವೇಳೆಗೆ ಸೇನಾಜಾಲವು ಬಂದು ಮೇಲೆ ಬೀಳಲು ರಾಮನು ತನ್ನ ಹಿರಿಯುಬ್ಬಣದಿಂದ ಅವರನ್ನೆಲ್ಲ ಸದೆಬಡಿದನು. ರಾಮನ ಆಘಾತಕ್ಕೆ ಸಿಕ್ಕಿದ ಸಮಸ್ತ ಸೇನೆಯೂ ಅಸ್ತವ್ಯಸ್ತವಾಗಿ ಬಿದ್ದಿತ್ತು. ಎಲ್ಲಿ ನೋಡಿದರೂ ಅವನ ಪ್ರತಾಪವೇ ಪ್ರತಾಪ. ವೀರರಾಮನ ಸಿಂಹನಾದ, ಕುದುರೆಯ ಹೇಷಾರವಗಳಿಂದ ರಿಪುಬಲದ ಕುದುರೆಗಳು ಪಲಾಯನಗೈಯುತ್ತಿದ್ದುವು. ಇಡೀ ಪಡೆಯೇ ರಾಮನ ಪೆಟ್ಟಿಗೆ ಬೆದರಿ ಹಿಂತಿರುಗುತ್ತಿದ್ದಿತು. ರಾಮನ ಮಂದಿ ಕರಿ ತುರಗಗಳನ್ನು ಸ್ವಾಧೀನಪಡಿಸಿಕೊಂಡರು. ಅನಂತರ ರಾಮನು ಧರ್ಮಗಹಳೆಯನ್ನು ಊದಿಸಿ ತನ್ನ ಭಟರೊಂದಿಗೆ ಬೀಡಿಗೆ ಮರಳಿದನು. ಸೆರೆಹಿಡಿದಿದ್ದ ಕುದುರೆ, ಕಾಲಾಳುಗಳೊಂದಿಗೆ ನಡೆದು ಬಂದು ಕಂಪಿಲನಿಗೆ ನಮಸ್ಕರಿಸಿದನು. ಆನಂದದಿಂದ ತಂದೆ ಮಗನನ್ನು ತೆಗೆದಪ್ಪಿಕೊಂಡು, ಆ ಕ್ಷಣದಲ್ಲಿ ಮಗನನ್ನು ಪಡೆದಂತೆ ಪುಳಕಿತನಾದನು. ಬಳಿಕ ಕಂಪಿಲನು ಓಲಗವನ್ನು ನೆರೆಯಿಸಿ, ಸೆರೆ ಸಿಕ್ಕಿದ್ದ ಸಿಂಗಮನೃಪತಿಯನ್ನು ಸ್ನೇಹದಿಂದಲೇ ಸತ್ಕರಿಸಿ, ಉಡುಗೊರೆ ಕೊಟ್ಟು, ಕೈಸೆರೆಯಾಗಿದ್ದ ಸೈನಿಕರ ಸಮೇತ ಆತನ ಊರಿಗೆ ಬೀಳ್ಕೊಟ್ಟನು. ವಿಜಯಿಯಾದ ಕಂಪಿಲನು ಪುರನಾರಿಯರ ಆರತಿಗಳಿಂದ ಸ್ವಾಗತ ಪಡೆಯುತ್ತ ತನ್ನ ಊರಿಗೆ ಬಂದನು. ಯುದ್ಧದಲ್ಲಿ ಭಾಗವಹಿಸಿದ್ದವರನ್ನೆಲ್ಲ ಸತ್ಕರಿಸಿ ಕಳುಹಿಸಿದನು. ರಾಮನು ಹರಿಹರದೇವಿಯ ಬಳಿ ಬಂದು ನಮಸ್ಕರಿಸಲು ಆಕೆ "ಹದಿನೆಂಟು ವರುಷದ ಮಗನನಾಕ್ಷಣದೊಳಗುದಯಿಸಿದಂತೆ" ಸಂತೋಷಗೊಂಡು ಹರ್ಷಬಾಷ್ಪಗಳನ್ನು ಸುರಿಸಿದಳು. ತಾಯಿಯ ಆಶೀರ್ವಾದವನ್ನು ಪಡೆದ ಮೇಲೆ ಆತನು ತನ್ನ ನಿಲಯಕ್ಕೆ ಬಂದನು.

ಕುಮಾರರಾಮನು ವೀರರುದ್ರನನ್ನು ಸೋಲಿಸಿದನೆಂಬ ಸುದ್ದಿಯನ್ನು ಕರಿಪತಿ ಕಪಿಲೇಶ್ವರನು ಕೇಳಿ, ತನ್ನ ಷೋಡಶಪಾತ್ರೆಯರೊಂದಿಗೆ ಪರ್ಯಾಲೋಚನೆ ಮಾಡಿದನು. ಆಗ, ಗಜಪತಿ ವಿದ್ಯಾಧರನೆಂಬ ಪಾತ್ರೆ ತಾನು ರಾಮನನ್ನು ಕಡಿದೊಟ್ಟುವೆನೆಂದೂ "ಕಲ್ಲಕಂಬವನಿಕ್ಕಡಿಯಾಗಿ ಪೊಯ್ವಗೆ" ಅವನು ತೃಣಮಾತ್ರನೆಂದೂ ರಣರಂಗದಲ್ಲಿ ರಾಮನನ್ನಲ್ಲದೆ ಇತರರನ್ನು ಕೆಣಕಿದ್ದೇ ಆದರೆ ತನ್ನ "ಕರುಳ ಬೆನ್ನೊಳಿಣಿಸಿ ತೆಗೆಯಿಸು" ಎಂದೂ ಬಿನ್ನವಿಸಿಕೊಂಡನು. ಅವನಂತೆಯೇ ಹರಿಶ್ಚಂದ್ರಪಾತ್ರೆ, ವಿಕ್ರಮಬಾಹುಪಾತ್ರೆ, ಶಿರಶ್ಚಂದ್ರಪಾತ್ರೆ ಮೊದಲಾದವರು ತಮ್ಮ ತಮ್ಮ ಪರಾಕ್ರಮವನ್ನು ಒತ್ತಿ ಹೇಳಿದರು. ಕಪಿಲೇಶ್ವರನು ಸಂತೋಷಗೊಂಡು ಯುದ್ಧ ಸನ್ನದ್ಧನಾಗಿ, ವೈಭವದಿಂದ ಅಪಾರಸೇನಾ ಸಮೇತನಾಗಿ ತೆರಳಿ, ಕೃಷ್ಣವೇಣಿಯನ್ನು ದಾಟಿ ಬೀಡು ಬಿಟ್ಟನು. ದೂತರು ಬಂದು ಈ ಸುದ್ದಿಯನ್ನು ಕಂಪಿಲನಿಗೆ ತಿಳಿಸಲು, ಕೂಡಲೆ ಕುಮಾರರಾಮನು

ತನ್ನ ಉಗ್ರಾಸಿಯನ್ನು ಹಿಡಿದು, ಕುದುರೆಯನ್ನೇರಿ, ಮೆಯ್ಗಾವಲ ಪಡೆಗೂಡಿ ಯುದ್ಧಕ್ಕೆ ಸಿದ್ಧನಾದನು. ಕಂಪಿಲನು ರಾಮನೊಂದಿಗೆ ಕೂಡಿ, ಪೆನುಗೊಂಡೆಯ ಹೊರವಳಯದಲ್ಲಿ ಬಂದಿಳಿದನು. ಅನಂತರ, ಮಾರನೆಯ ದಿನ ಎರಡು ಪಡೆಗಳಿಗೂ ಯುದ್ಧ ಘಟಿಸಿತು. ಕಾಟಣ್ಣನು ಶೃಂಗಾರಸಾವಂತಪಾತ್ರೆಯ ಪೌಜನ್ನೂ, ಸಂಗಮನು ವಿದ್ಯಾಧರಪಾತ್ರೆಯ ಪಡೆಯನ್ನೂ, ಅಣ್ಣಭೈರವನು ಪರಾಕ್ರಮಬಾಹುಪಾತ್ರೆಯ ಪೌಜನ್ನೂ, ರಾಮನಾಥನು ಗಜಪತಿಯ ಸೈನ್ಯವನ್ನೂ ತಾಗಿದರು. ಕುಮಾರರಾಮನಂತೂ ಕಾಳ್ಗಿಚ್ಚು ಕಾನನವನ್ನು ಹೊಗುವಂತೆಯೂ, ಗಿರಿಯ ಮೋಹರವನ್ನು ಗೀರ್ವಾಣೇಂದ್ರ ಹೊಗುವಂತೆಯೂ ಹೊಕ್ಕು, ಬಂದ ಬಂದವರನ್ನೆಲ್ಲ "ಕಳಿದ ಹೂವಿನ ತೊಡಂಬೆಯನಾ ಬಿಱುಗಾಳಿ ಸುಳಿದು ಕೆಡಪುವ ತೆಱದೊಳು" ಹೊಡೆದು ಕೆಡವುತ್ತಿದ್ದನು. ರಾಮನ ಈ ವೀರಾವೇಶವನ್ನೂ, ಸಾಹಸವನ್ನೂ "ಕರಿಪತಿ ಕಂಡು ಶಿರವನೊಲೆದು ಮೆಚ್ಚಿದನು." ಗಜಪತಿಯೆಂಬ ಹೆಸರಿಗೆ ತಕ್ಕಂತೆ ಅವನ ಗಜಸೇನೆ ಹಿಂಡು ಹಿಂಡಾಗಿ ಬಂದು ರಾಮನನ್ನು ಮುತ್ತಿದುವು. ಆದರೇನು! "ಸಿಂಗದ ಶಿಶುವನಾನೆಯ ಜಂಗುಳಿ ಬಂದು ಪಿಂಗದೆ ಬಳಸಿಕೊಂಬಂತೆ," "ಗಿರಿಗಳು ಬಂದು ಗೋತ್ರಾರಿಯ ಮುತ್ತುವಂತೆ," "ಕುಂತಣದೇಶದರಸಿನ ಸುಕುಮಾರ"ನನ್ನು ಮುತ್ತಿ ವಿಫಲವಾದುವು. ನಿಮಿಷಮಾತ್ರದಲ್ಲಿಯೇ ರಣರಂಗವು ನೋಡಲು ಬೀಭತ್ಸವಾಯಿತು. ಆನೆಗಳ ಸೊಂಡಿಲುಗಳ ರಾಶಿ ಸರ್ಪ ಸಮೂಹದಂತೆ ತೋರಿಬರುತ್ತಿತ್ತು. ಆನೆಗಳ ಸಮೂಹವಂತೂ "ವಜ್ರಿಯಿಂ ಕಡಿವಡೆದ ಕುಲಾದ್ರಿಗಳಂತೆ" ಇದ್ದುವು. ಈ ರೀತಿಯಾಗಿ ಯುದ್ಧವು ಭಯಂಕರವಾಗಲು ವಿದ್ಯಾಧರಪಾತ್ರೆ ರಾಮನನ್ನು ಎದುರಿಸಿದನು. ರಣರಂಗದಲ್ಲೆಲ್ಲ ತಾನೇ ತಾನಾಗಿ ಮೆರೆಯುತ್ತಿದ್ದ ರಾಮನನ್ನು "ಪರಿದಾಟ ಬೇಡಿತ್ತ ತಿರುಗು ಕುವರ ನನ್ನ ಕರದ ಖಂಡೆಯದ ಧಾರೆಯನು ಪರಿಕಿಸದೆಲ್ಲಿಗೆ ಪೋದಪೆ" "ಕರಿಗಳು ಪಶುಗಳವನು ಕಡಿದೊಟ್ಟಿದ ಧುರಗಲಿತನವನು ಬಿಟ್ಟು ಹರಣದಾಶೆಯನುಳಿದಿದಿರಾಗು" ಎಂದು ಮೂದಲಿಸಿ ಅಡ್ಡಗಟ್ಟಿದನು. ವೀರರಾಮನು ತನ್ನ ಹಿರಿಯುಬ್ಬಣವನ್ನು ಹೊರತೆಗೆದು, ಮುನ್ನುಗ್ಗಿ, ಒಂದೇ ಬಾರಿಗೆ ಆತನನ್ನು ಎರಡು ತುಂಡು ಮಾಡಿ ಕೆಡವಿದನು. ಅನಂತರ ಎದುರಾದ ಹರಿಶ್ಚಂದ್ರ ಪಾತ್ರೆ, ವಿಕ್ರಮಬಾಹು ಪಾತ್ರೆ, ಶೃಂಗಾರಸಾವಂತ ಪರಾಕ್ರಮ ಬಾಹು ಪಾತ್ರೆ, ಶಿರಶ್ಚಂದ್ರ ಪಾತ್ರೆ, ವೀರಹಮ್ಮಿರ ಪಾತ್ರೆ, ದಾಮೋದರ ಪಾತ್ರೆ ಮೊದಲಾದವರು ರಾಮನ ಖಡ್ಗದಿಂದಲೇ ಹತರಾದರು. ಹೀಗಾಗಿ ಕಪಿಲೇಶ್ವರನ ಸೇನೆ ನಿರ್ವಾಹವಿಲ್ಲದೆ "ಪಿಡಿದುದು ಬಂದ ದಾರಿಯನು." ಅನಂತರ ಕಂಪಿಲನು ವೀರಕುಮಾರನೊಂದಿಗೆ ಊರಿಗೆ ಹಿಂತಿರುಗಿದನು. ವಿಜಯಶಾಲಿಯಾದ ಮಗನನ್ನು ಕಂಡು ಹರಿಹರದೇವಿ ಆನಂದಸಾಗರದಲ್ಲಿ ಮುಳುಗಿದಳು.

## ಸುಲ್ತಾನನ ಆಗ್ರಹ

ಅತ್ಯಂತ ಪರಾಕ್ರಮಶಾಲಿಯಾದ ರಾಮನೊಂದಿಗೆ ಕಂಪಿಲನು ವೈಭವದಿಂದ ರಾಜ್ಯವಾಳುತ್ತಿದ್ದನು. ಯಾವ ರೀತಿಯಲ್ಲಿ ನೋಡಿದರೂ ಗುಣಶಾಲಿಯಾದ ಕಂಪಿಲನು ಅನುಪಮನಾಗಿದ್ದನು. ಕಂಪಿಲನ ರಾಜಧಾನಿಗೆ ಹನ್ನೆರಡು ಯೋಜನಗಳ ದೂರದಲ್ಲಿದ್ದ ಡಿಳ್ಳಿ ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧವಾಗಿತ್ತು. ಹಿಂದಿನ ಹಸ್ತಿನಪುರವೇ ಅಂದಿನ ಡಿಳ್ಳಿಯೆನಿಸಿತ್ತು. ಅದು ಕೋಟೆ ಕೊತ್ತಳಗಳಿಂದಲೂ ಸಕಲ ಐಶ್ವರ್ಯದಿಂದಲೂ ಕೂಡಿ ಅಸದೃಶವಾಗಿತ್ತು. ಇಂಥ ಊರಿಗೆ ಭಾನುಸನ್ನಿಭ ತೇಜನೂ ಅಮರಾಧೀಶ ಸಮಾನ ವಿಭವನೂ, ಉರುದಾನಿಯೂ ಭೂನುತ ವಿಕ್ರಮನೂ ಆದ ಅಲ್ಲಾವುದ್ದೀನನು ಒಡೆಯನಾಗಿದ್ದನು. ಆತನ ಸಾಹಸಾದಿಗಳಿಗೆ ಬೆದರಿ ದಿಗ್ದೇವತೆಗಳೂ ದಿಗಂತಗಳನ್ನು ಮರೆಹೊಕ್ಕರೋ ಎನ್ನುವಂತಿತ್ತು. ಸುರುತಾಳನ ರಾಜ್ಯಕ್ಕೆ ಒಂದು ಕಡೆ ಹಿಮಾಲಯಪರ್ವತವೂ, ಉಳಿದ ಮೂರೆಡೆಗಳಲ್ಲಿ ಮುನ್ನೀರೂ ಮೇರೆಯಾಗಿದ್ದುವು. ಅವನ ಸೈನ್ಯದ ಬಲವೂ ಸಹ ಇಂತೆಯೇ ಹೇಳಲಸದಳವಾಗಿತ್ತು. ಆತನಿಗೆ ಹದಿನಾರು ಸಾವಿರ ರಾಣಿಯರಿದ್ದರು. ಸುರುತಾಳನು ಅತ್ಯಂತ ರಸಿಕನೂ ಆಗಿದ್ದನು. ಇಂಥ ಸುರುತಾಳನಿಗೆ ತಕ್ಕಂತೆ ನೇಮಿಯೆಂಬುವನು ಸೇನಾನಿ

ಯಾಗಿದ್ದನು. ಅವನು ತೇಜಸ್ಸಿನಲ್ಲಿ ಭಾನುಸಮನೂ, ಪರಾಕ್ರಮದಲ್ಲಿ ಪಂಚಾನನೂ ಆಗಿದ್ದನು. ಈ ವೇಳೆಗಾಗಲೇ ದೇವಗಿರಿಯ ರಾಮದೇವರಾಯ, ಬಿಟ್ಟದೇವರಾಯರನ್ನು ಕೈಸೆರೆ ಹಿಡಿದು ಸುರುತಾಳನಿಗೆ ತಂದೊಪಿಸಿದ್ದನು. ರಾಮೇಶ್ವರಕ್ಕೆ ತೆರಳಿ ಮಧುರೆಯಲ್ಲಿ ಸುಲ್ತಾನನ ಠಾಣೆಯವನ್ನು ಇಟ್ಟದ್ದನು. ಏಳೆಂಟು ವರ್ಷಗಳ ಕಾಲ ಮುತ್ತಿಗೆ ಹಾಕಿ ರಣಹಮ್ಮೀರನನ್ನು ಸಂಹರಿಸಿದ್ದನು. ಚಪ್ಪನ್ನ ದೇಶಗಳ ರಾಯರ ಕೈಯ ಕಪ್ಪವನ್ನು ಪಡೆದು ರಾಜನಿಗೆ ಒಪ್ಪಿಸುವೆನೆಂದು ಮೆರೆಯುತ್ತಿದ್ದನು. ಆ ನೇಮಿಗೆ ಸಮಾನರೇ ಇರಲಿಲ್ಲ. ಸುಲ್ತಾನನಿಗೆ ತುಂಬ ಚೆಲುವೆಯಾದ ಮಗಳೊಬ್ಬಳಿದ್ದಳು. "ಮೊಗವೆಲ್ಲ ಕಣ್ಣು ಕಣ್ಣೆಲ್ಲ ಮೋಹನದೇಳ್ಗೆ ನಗೆಯೆಲ್ಲ ನನೆಗಣೆಯಾಟ, ಬಗೆಯೆಲ್ಲ ಬೇಟದ ಬಯಕೆ" ಎಂಬಂತೆ ಆ ರಾಯಕುವರಿ ಮಿಗಿಲೆನಿಸಿದ್ದಳು. ಅಪ್ಸರಸ್ತ್ರೀಯರಿಗೆ ಸರಿಸಮಾನವಾಗಿದ್ದ ಇಂಥ ಮಗಳಿಗೆ ತಕ್ಕ ವರನಾರೆಂದು ಸುಲ್ತಾನನು ಚಿಂತಾಕುಲನಾಗಿದ್ದನು. ಆ ಸಮಯಕ್ಕೆ ಸರಿಯಾಗಿ ಕುಮಾರರಾಮನ ಸಾಹಸ ಪರಾಕ್ರಮಗಳು ಡಿಳ್ಳಿಯವರೆಗೆ ಬಂದು ಮುಟ್ಟಿದುವು. ಇದನ್ನು ಕೇಳಿದ ಕೆಲವು ವಂದಿ ಮಾಗಧರು ಕಂಪಿಲನ ಬಳಿಗೆ ಸಾರಿದರು. ರಾಮನಾಥನ ಓಲಗಕ್ಕೂ ತೆರಳಿ "ಅಂಗರಾಜಾಂಭೋನಿಧಿವಡಬಾನಲ, ವಂಗನೃಪಾಲ ಮಾತಂಗ, ಸಿಂಗ ಕಳಿಂಗ ಭುಜಂಗ ವಿಹಂಗೇಶ, ತುಂಗವಿಕ್ರಮಗುಣ ಸಂಗ" ಎಂಬುದಾಗಿ ಆತನನ್ನು ಹೊಗಳಲು, ಆತನು ಅವರನ್ನು ಚಿಂತಾಮಣಿ, ಸುರಧೇನುಗಳಿಗೆ ಚಿಂತೆಯುಂಟಾಗುವಂತೆ ಧಾರಾಳವಾಗಿ ಸನ್ಮಾನಿಸಿ ಕಳುಹಿಸಿದನು. ಸಂತುಷ್ಟರಾದ ಹೊಗಳುಭಟ್ಟರು ತಮ್ಮ ಸುಲ್ತಾನನ ಮಗಳಿಗೆ ಆತನೇ ತಕ್ಕ ವರನೆಂದು ಭಾವಿಸಿ, ಆತನ ಭಾವಚಿತ್ರವೊಂದನ್ನು ಬರೆಯಿಸಿಕೊಂಡು ಹಿಂತಿರುಗಿದರು. ರಾಮನ ಭಾವಚಿತ್ರವನ್ನು ಅರಸುಕುವರಿಯ ಕೈಗೆ ತಂದುಕೊಡಲು, ಆಕೆ ತವಕದಿಂದ ಆತನಾರೆಂದು ಕೇಳಿದಳು. ವಂದಿಗಳು "ಕರ್ನಾಟಕ ದೇಶವನಾಳುವರಸಿನ ಕುಮಾರ, ಭೂಲೋಕಮದನಾವತಾರನಿವನು ಕೇಳು ಲೋಲಾಕ್ಷಿ ರಾಮನೆಂಬುವನು" ಎಂದು ಹೇಳಿದರು. ಆಗ ಆ ಕುಮಾರಿಗೆ "ಮುನ್ನಿನ ಜನ್ಮಾಂತರದಳ್ಕಱಿಂದ" ಮೈಮರೆಯುವಂತಾಯಿತು. ಹೀಗಾಗಲು ರಹಸ್ಯವಾದರೂ ಇಷ್ಟೆ. ದ್ವಾಪರಯುಗದ ದ್ರೌಪದಿಯೇ ಈಗ ಸುಲ್ತಾನನ ಮಗಳಾಗಿ ಹುಟ್ಟಿದ್ದಳು. ಅಂದು ಅರ್ಜುನನ ಮೇಲೆ ಉಂಟಾದ ಅತ್ಯಧಿಕ ವ್ಯಾಮೋಹವೇ ಇಂದು ಅರ್ಜುನಾಂಶ ಸಂಭೂತನಾದ ಕುಮಾರರಾಮನ ಮೇಲೆ ಈ ಹೊಸ ಜನ್ಮದಲ್ಲಿ ಅಮಿತವಾದ ಅನುರಾಗವನ್ನು ಉಂಟುಮಾಡಲು ಕಾರಣ. ಜನ್ಮಾಂತರದ ಪ್ರೇಮದ ಪರಿಣಾಮವಾಗಿ ಆಕೆ ಪರವಶಳಾದಳು. ಸಖಿಯರು ಒಡತಿಗೆ ಶಿಶಿರೋಪಚಾರವನ್ನು ಮಾಡಿ ಭಾವಚಿತ್ರವನ್ನು ತಂದು ಸುಲ್ತಾನನಿಗೆ ತೋರಿಸಿದರು. ಆತನೂ ಸಹ ಆ ಚಿತ್ರವು ಯಾರದೆಂದು ಕೇಳಲು "ಕುಂತಣ ದೇಶಾಧೀಶ್ವರ ಕಂಪಿಲನೆಂಬರಸಿನ ವರಸುತ ರಾಮನೆಂಬ ರೂಪು" ಎಂದು ತಿಳಿಸಿದರು. ಅನಂತರ ಭಟ್ಟರ ಮೂಲಕ ಇತರ ವಿಚಾರಗಳನ್ನೆಲ್ಲ ಕೇಳಿ ತಿಳಿದು, ಆತನನ್ನು ತಡೆಯದೆ ಕರೆಸುವೆನೆಂದು ಮಗಳಿಗೆ ಸಮಾಧಾನ ಹೇಳಿದನು ಬಳಿಕ, ರಾಯಭಾರಿಗಳನ್ನು ಬರಮಾಡಿಕೊಂಡು ಕಂಪಿಲನಲ್ಲಿಗೆ ಕಾಗದವನ್ನು ಬರೆದು ಕಳುಹಿಸಿದನು. ಕಂಪಿಲನ ಆಸ್ಥಾನದ ರಾಯಸದವನು ಅದನ್ನು "ಕಯ್ಗೆರೆಯನೋದುವವೊಲೋದಿದನು." ಸುಲ್ತಾನನು ಕಂಪಿಲನನ್ನು ಕುರಿತು ತಾವಿಬ್ಬರೂ ಅನ್ಯೋನ್ಯವಾಗಿರಬೇಕೆಂದೂ, ರಾಮನನ್ನು ತನ್ನ ಬಳಿಗೆ ಕಳುಹಿಸಿಕೊಡಬೇಕೆಂದೂ, ಇದಕ್ಕೆ ಪ್ರತಿಯಾಗಿ ತಾನು ಕಂಪಿಲನಿಗೆ ಬಿದಿರೆ, ಸಗರ (ಸಾಗರ?), ನಿಂಬಾಪುರ, ಜಂಬುಖಂಡಿ, ರಾಯಚೂರುಗಳನ್ನು ಕೊಡುವೆನೆಂದೂ, ಕುಮಾರನಿಗೆ ತನ್ನ ಭಾಗ್ಯವನ್ನೆಲ್ಲ ಕೊಡುವೆನೆಂದೂ, ಕಾಗದ ಬರೆಸಿದ್ದನು. ಈ ವಿಚಾರವನ್ನು ಕೇಳಿದ ಕಂಪಿಲನು, ಈ ನೆವವೊಡ್ಡಿ ಸುಲ್ತಾನನು ತನ್ನನ್ನು ಆಳಾಗಿಸಿಕೊಳ್ಳುವ ಉಪಾಯವಿದು ಎಂದು ಭಾವಿಸಿದನು. ರಾಯಭಾರಿಗಳೊಂದಿಗೆ ತನ್ನ ಮಗನು ತೀರ ಚಿಕ್ಕವನೆಂದೂ, ಆತನು ತನ್ನ ತಂದೆತಾಯಿಗಳನ್ನು ಬಿಟ್ಟಿರನೆಂದೂ ಸುಲ್ತಾನನ ಕೋರಿಕೆಯನ್ನು ನಿರಾಕರಿಸಿದನು. ಕಂಪಿಲನ ಮಾತುಗೇಳಿ ರಾಯಭಾರಿಗಳು "ಮಂದರೊಡನೆ ನುಡಿವಂತೆಮ್ಮೊಡನೆ ಬಾಯ್ಗೆ ಬಂದಂತೆ ನುಡಿವರೆ ರಾಯ," "ಕಿಱುಗೂಸಾದೊಡೆ ಬಲ್ಲಾಳದೇವನ ಮುಱಿಯಲಿಱಿವನೆ," "ಚಿಕ್ಕವನಾದೊಡೆ

ಕಾಕತಿರುದ್ರನ ಲೆಕ್ಕವಿಲ್ಲದ ಸೇನೆಯನು ಹೊಕ್ಕು ತಿವಿದು ಕಲಕುವನೆ" ಎಂದು ಆಕ್ಷೇಪಿಸಿ "ಮಱೆ ಬೇಡ ಕುವರನ ಕಳುಪಲ್ಲದೊಡೆ ನೀನುಱೆಸಂವರಿಸು ದುರ್ಗವನು" ಎಂದು ಎಚ್ಚರಿಕೆಯ ಮಾತುಗಳನ್ನು ಆಡಿದರು. ಕಂಪಿಲನು ಈ ಬೆದರಿಕೆಗಳಿಗೆ ಸಗ್ಗದೆ ರಾಯಭಾರಿಗಳನ್ನು ಕೊಟ್ಟು ಕಳುಹಿಸಿದನು.

ಕಂಪಿಲನ ನಿರಾಕರಣೆಯ ನುಡಿಗಳನ್ನು ಕೇಳಿ ಸುಲ್ತಾನನು ದುಗುಡ ತಾಳಿದನು. ಕಾಕತಿರುದ್ರನ ಸೇನೆಯ ಮೂಲಕ ಆತನ ಅಹಂಕಾರವನ್ನು ಅಡಗಿಸಬೇಕೆಂದು ನಿಶ್ಚಯಿಸಿದನು. ಕಂಪಿಲನನ್ನು ಕಟ್ಟಿ ತರಿಸುವೆನು ಎಂದುಕೊಂಡನು. ಅನಂತರ ಮಗಳ ವಿವಾಹದ ಸಲುವಾಗಿ ಒಂದು ಸ್ವಯಂವರವನ್ನು ಏರ್ಪಡಿಸಿದನು. ಸುಲ್ತಾನನ ಮಗಳನ್ನು ವರಿಸಲು ನಾನಾ ದೇಶದ ರಾಜಕುಮಾರರು ಬಂದರು. ಮನ್ಮಥನ ಮನಸ್ಸನ್ನು ಕೆಣಕುವಂತಿದ್ದ ಆ ರಾಜಕುಮಾರಿ ಬಂದವರಲ್ಲಿ ಯಾರನ್ನೂ ವರಿಸಲಿಚ್ಛಿಸದೆ, ತನ್ನ ಅಂತರಂಗದಲ್ಲಿ ಅಚ್ಚೊತ್ತಿದಂತಿದ್ದ ರಾಮನ ರೂಪಿಗೇ ಮನಸೋತಳು. ಸುಲ್ತಾನನಿಗೆ ಮಗಳ ಅಭೀಷ್ಟವು ವಿದಿತವಾಗಿ, ಮತ್ತೊಮ್ಮೆ "ಬೆಟ್ಟವ ಕಿತ್ತೀಡಾಡಿಸಿ ರಾಮನ ಕಟ್ಟಿ ತರಿಸಿ ನಿನಗಾನು ಕೊಟ್ಟಪೆ ನಿನಗೇಕೆ ಚಿಂತೆ" ಎಂಬುದಾಗಿ ಮಗಳನ್ನು ಸಂತೈಸಿದನು. ಅನಂತರ ನೇಮಿಖಾನನನ್ನು ಬರಮಾಡಿಕೊಂಡು, ತಾನು ಯೋಚಿಸಿದ್ದಂತೆ, ವೀರರುದ್ರನ ಮೇಲೆ ದಂಡೆತ್ತಿ ಹೋಗುವಂತೆ ಆಜ್ಞಾಪಿಸಿದನು. ರಾಜಾಜ್ಞೆಗೆ ಅನುಸಾರವಾಗಿ ನೇಮಿ ಬಂದು ವೀರರುದ್ರನ ಮೇಲೆ ಯುದ್ಧಮಾಡಿ, ಆತನನ್ನು ಕೈಸೆರೆ ಹಿಡಿದುಕೊಂಡು ಓರುಗಲ್ಲಿನಲ್ಲಿ ತನ್ನ ಠಾಣೆಯವನ್ನು ಇಡಿಸಿದನು. "ಕುಂಬಳಕಾಯನೊಡೆದು ಪುಟ್ಟಿದ ರಾಯ" ನಾದ ವೀರರುದ್ರನು ಸುಲ್ತಾನನ ಸೆರೆಯಾಳಾದನು. ಮಹಾಮಹಿಮರು ದುರ್ವಿಧಿಯ ದೆಸೆಯಿಂದ ನಾನಾ ಕಷ್ಟಗಳಿಗೆ ಗುರಿಯಾದಂತೆ, ವೀರಾಧಿವೀರನಾದ ರುದ್ರನು ಈ ದುಃಸ್ಥಿತಿಗೆ ಗುರಿಯಾಗಬೇಕಾಯಿತು. ಆದರೆ ಆತನು ಅವಮಾನವನ್ನು ಸಹಿಸಲಾರದೆ ("ಕುಳಿತನಾಸನವಿಧಿಯಿಂ") ಪ್ರಾಣತ್ಯಾಗ ಮಾಡಿ ಈಶ್ವರನ ಬಳಿ ಸೇರಿದನು.

## ಜಾದೂರನ ಪ್ರಸಂಗ

ಮುಂಗುಲಿದೇವನೆಂಬುವನು ಸುಲ್ತಾನನ ಸಾಮಂತನಾಗಿದ್ದನು. ಆತನು ಕಪ್ಪ ಕೊಡುವ ಕಾಲ ಸನ್ನಿಹಿತವಾಗಲು, ಮಂತ್ರಿಗಳ ಮಾತಿನ ಮೇರೆಗೆ ಸುಲ್ತಾನನಿಗೆ ನಾನಾ ಬಗೆಯಾದ ವಸ್ತು ವಾಹನಾದಿಗಳನ್ನು ಕೊಟ್ಟು ಕಳುಹಿಸಿದನು. ಅವುಗಳಲ್ಲಿ ರಾಯನು "ಖಾನರಭಂಗಿಸಲೆಂದಸುರೇಂದ್ರನ ಮಾನವ ಮುಱಿಯಲೆಂದು" ಇಪ್ಪತ್ತುನಾಲ್ಕು ಟಾಕಿನ ಘನವಾದ ಶಾರ್ಙ್ಗವೊಂದನ್ನು ಕಳುಹಿಸಿದನು. ರಾಯಭಾರಿಗಳು ಸುಲ್ತಾನನ ಒಳಿಗೆ ಸಾರಿದರು. ಸುರುತಾಳನು ಅತ್ಯಂತ ವೈಭವದಿಂದ ಓಲಗದಲ್ಲಿದ್ದನು. ನಾನಾ ಸಾಮಂತರೂ ಓಲಗದಲ್ಲಿ ಬಂದು ಕುಳಿತಿದ್ದರು. ಮುಂಗುಲಿದೇವನ ರಾಯಭಾರಿಗಳು ತಾವು ತಂದಿದ್ದ ಪಾವುಡಗಳೊಂದೊಂದನ್ನೂ ಒಪ್ಪಿಸಿಕೊಟ್ಟು ಕಡೆಗೆ ಇಪ್ಪತ್ತುನಾಲ್ಕು ಟಾಕಿನ ಸಿಂಗಾಡಿಯನ್ನು ಮುಂದಿಟ್ಟರು. ಅದನ್ನು ಕಂಡ ಸುರುತಾಳನು ಅದು ಅಸಾಮಾನ್ಯವಾದುದೇ ಸರಿಯೆಂದು ಬಗೆದನು. ಅಲ್ಲದೆ "ನಮ್ಮ ರಾಣುವೆಯ ಧನ್ವಿಗಳ ಭಂಗಿಸಲೆಂದುಮ್ಮಹದಿಂದ ಹಿಂದುವನು ನಮ್ಮಲ್ಲಿಗೀ ಬಿಲ್ಲನಟ್ಟಿದನೆಂದುಱೆ ದುಮ್ಮಾನವ ತಾಳಿದನು." ರಾಯಭಾರಿಗಳನ್ನು "ಈ ಬಿಲ್ಲನ್ನು ಹೆದೆಯೇರಿಸುವವರು ನಿಮ್ಮಲ್ಲಿ ಯಾರಾದರೂ ಇದ್ದಾರೆಯೆ" ಎಂದು ಕೇಳಲು, ಅವರು "ಅದನ್ನು ಹೆದೆಯೇರಿಸಿ ಏಳು ಕೊಪ್ಪರಿಗೆಗಳನ್ನು ಗುರಿಯಿಡುವ ಧೀರರು ಮುಂಗುಲಿದೇವನ ಬಳಿಯಲ್ಲಿದ್ದಾರೆ. ಇದೇ ಈ ಬಿಲ್ಲಿನ ಪರತ್ತು" ಎಂದು ಹೆಮ್ಮೆಯಿಂದ ಉತ್ತರವಿತ್ತರು. ಆಗ ಅಲ್ಲಾವುದ್ದೀನನು ನೇಮಿಯ ಮುಖ ನೋಡಲು, ಆತನು ಖಾನರ ಕಡೆ ದೃಷ್ಟಿ ಬೀರಿದನು. ರಾಯಭಾರಿಗಳ ಮಾತು ಕೇವಲ ಬಡಾಯಿಯೆಂದು ಅವರು ಟೀಕಿಸಿದರು. ರಾಯಭಾರಿಗಳು ಪಣ ತೊಟ್ಟರು. ಆಗ ಸುರುತಾಳನ ಸಭೆ "ಚಿತ್ರದ ಸಭೆಯಂತೆ ಮೌನಮುದ್ರಿತ ಮುಖವಾಯ್ತು." ಸುರುತಾಳನ ಸಿಟ್ಟು

ಹೊಗೆಯಾಡಲಾರಂಭಿಸಿತು. ಬಿಲುಗಾರರು ಪೇಚಿನಲ್ಲಿ ಸಿಕ್ಕಿಬಿದ್ದು ಎಲ್ಲವೂ "ಪಾವಿನ ಮುಡಿಗೆಯಂತಿರ್ದುದು." ಕಂಡಕಂಡವರೆಲ್ಲ ಅದು ನರಲೋಕದ ಶಾರ್ಙ್ಗವಲ್ಲವೆಂದೂ, "ದ್ರುಪದ ನಂದನೆಯ ವಿವಾಹದ ಮಂದಿರದೊಳು ಮಂಡಲಿಕರ ಮುಂದುಗೆಡಿಸಿದ ಗಾಂಡೀವ"ವೆಂದೂ, "ಕೃಷ್ಣನೊದವಿ ಪಿಡಿದ ಶಾರ್ಙ್ಗ"ವೆಂದೂ ಮಾತಾಡಿ ಕೊಳ್ಳುತ್ತಿದ್ದರು. ಆಗ ಬಾದುರನೆಂಬ ಖಾನನು ಮೇಲೆದ್ದನು. "ಗಾಂಡೀವಕಮರೇಂದ್ರನಂದನನಾ ವಿಪ್ರಮಂಡಳಿಯಿಂ ಬರ್ಪಂತೆ" ಆತನು ಆ ಕೋದಂಡದ ಬಳಿಗೆ ಬಂದನು. ಸುರುತಾಳನಿಗೆ ನಮಸ್ಕರಿಸಿ, ತಾನು ಆ ಧನುಸ್ಸನ್ನು ಹೆದೆಯೇರಿಸಿ ಏಳು ಕೊಪ್ಪರಿಗೆಗಳನ್ನು ಭೇದಿಸಬಲ್ಲೆನೆಂದು ತಿಳಿಸಿದನು. ಕೂಡಲೆ ಎಲ್ಲ ಏರ್ಪಾಡುಗಳೂ ಆದುವು. ಬಾದುರನು ದೇವರಿಗೆ ವಂದಿಸಿ, ತಿರುವನ್ನು ಸರಿಮಾಡಿಕೊಂಡು, ಸ್ವಲ್ಪವೂ ನಡುಗದೆ "ಎಡಗಾಲುಂಗುಟದಿಂದವನಿಯ ಬಲಿದೊತ್ತಿ ನೆಟ್ಟ ತಿರುವನು ತಲೆವಿಲ್ಲುಂಗೊಂಡು ಬೆರಲ್ಗಳಿಂ ತೆಗೆದನು ಬಿಲುಗಾಱರು ಬೆಱಗಾಗೆ." "ಅರುಣಜಲಧಾರೆ ಹೊಱಸೂಸೆ ಕೈಕಾಲು ಬೆರಲ್ಗಳಿಂ ಕೊಪ್ಪರಿಗೆಗಳ ಇಂದಾರ್ದೆಚ್ಚನು ಹೊಗೆಯ ಹೊಂಕಿಡಿಗಳಾವರಿಸಲಾಸ್ಥಾನ ಮಂಟಪವ." "ಕೊಪ್ಪರಿಗೆಗಳೇಳನೊಡೆಹಾಯ್ದಾ ಕಣೆಯಪ್ಪಲಿಳಾಕಾಂತೆಯಂ ಕಪ್ಪಾದುದು ಖಾನರ ಮೊಗ ಸುರುತಾಳನೊಪ್ಪಿದನವನ ಬಲ್ಮೆಯನು." ಇತರ ನೋಟಕರಿಗೆ ಆಚ್ಚರಿಯುಂಟಾಗಲು ಅಲ್ಲಿದ್ದ ಖಾನರಿಗೆ ಬಲು ಮಚ್ಚರವುಂಟಾಯಿತು. ಹಲವರು ಹಲವಾರು ಬಗೆಯಾಗಿ ಹೊಗಳುತ್ತಿದ್ದರು. ಕೆಲವರಂತೂ, ಅವನು ಸಂಶಪ್ತಕರಲ್ಲಿ ಒಬ್ಬನಾಗಿರಬೇಕೆಂದೂ "ತಿಱುಗುವ ಮಾನನಲ್ಲದೆ ಕೊಪ್ಪರಿಗೆಯನಾ ನರನೆಚ್ಚುದಿಲ್ಲ. ಬಾದುರನ ಪರಿಹೊಸತು" ಎಂದೂ ಅಂದಿನ ಪಾರ್ಥ, ಅಂದಿನ ಕರ್ಣ, ಅಂದಿನ ಸಾತ್ಯಕಿಯರಲ್ಲದೆ ಇಂದಿನ ಬಿಲ್ಲುಗಾರರಾರೂ ಇವನಿಗೆ ಸಮಪಲ್ಲವೆಂದೂ ಹೊಗಳಿದರು. ಸುರುತಾಳನು ಬಾದುರನನ್ನು ಸನ್ಮಾನಿಸಿ, ಅವನಿಗೆ ಮಲ್ಲುಕಪಡವಿಯನ್ನು ಕಟ್ಟಿದನು. ಇತರ ಖಾನರ ರಾಜ್ಯದಲ್ಲಿ ಅರ್ಧ ಅರ್ಧ ಭಾಗವನ್ನು ಒಪ್ಪಿಸಿಕೊಟ್ಟನು. ರಾಯಭಾರಿಗಳನ್ನು ಗೌರವಿಸಿ ಕಳುಹಿಸಿಕೊಟ್ಟನು.

ಇತ್ತ ಖಾನಮಲ್ಲುಕರೆಲ್ಲ ಒಂದು ಕಡೆ ಸೇರಿ ಬಾದುರನ ಮೇಲೆ ತಮ್ಮ ಅಸೂಯೆಯನ್ನು ಕಾರತೊಡಗಿದರು. ತಮಗೆ ಆದ ತೇಜೋವಧೆಗಾಗಿ ಅವರೆಲ್ಲರೂ ತುಂಬ ಕುಪಿತರಾಗಿದ್ದರು. ಬಾದುರನ ಸ್ಥಾನ ಮಿಗಿಲಾದಂತೆಲ್ಲ ತಮಗೆ ಉಳಿಗಾಲವಿಲ್ಲವೆಂಥು ಅವರು ಶಂಕಿಸಿದರು. ಆದ್ದರಿಂದ ಮುಂದೆ ಏನು ಮಾಡಬೇಕೆಂಬುದಾಗಿ ಮಧುರಖಾನನು ತಮ್ಮವರನ್ನು ಸಲಹೆ ಕೇಳಿದನು. ಆಗ ಜಲಹರಿಖಾನನೆಂಬುವನು "ಕಾಲುಕೆರೆದು ಜಗಳಮಾಡಿ ಬಾದುರನನ್ನು ಕೊಲ್ಲಬೇಕು" ಎಂದು ಸಲಹೆ ಮಾಡಿದನು. ಈ ಮಾತನ್ನು ಕೇಳಿ, ಅಬ್ಬರಖಾನ, ಕದಿರಖಾನ, ಜಂಬಾರಿಖಾನ, ಬಬ್ಬರಖಾನ, ಮಾಧವಖಾನ (?), ಮುಮ್ಮಾರಖಾನ, ಮಹಮ್ಮದಖಾನ, ಅಂಬುಧಿಖಾನ, ಸಾಳುವಖಾನ, ಕುದುಬಿದಿಖಾನ, ಕೈರವಖಾನ, ತುಂಬುರಖಾನ, ಸದಿರೆದೆಖಾನ, ಅಂಬರಖಾನ, ಗಂಗುಬಲ್ಲಾಳ (?) ಮೊದಲಾದವರು ಹಿಗ್ಗಿದರು. ಮಧುರಖಾನನಾದರೋ ಈ ಸಲಹೆಯನ್ನು ಒಪ್ಪದೆ, ಬೀದಿಯ ಜಗಳದಲ್ಲಿ ಬಾದುರನನ್ನು ಕೊಂದರೆ ಸುರುತಾಳನು ತಮ್ಮನ್ನು ಸುಮ್ಮನೆ ಬಿಡನೆಂದೂ ತಂತ್ರೋಪಾಯದಿಂದ ಈ ಕೆಲಸವನ್ನು ಸಾಧಿಸಬೇಕೆಂದೂ ಹೇಳಿ ಅದಕ್ಕಾಗಿ ಒಬ್ಬ ಚತುರನನ್ನು ಬಾದುರನಲ್ಲಿಗೆ ಕೊಟ್ಟು ಕಳುಹಿಸಿದರು.

ಖಾನರ ಕಡೆಯ ದೂತನು ಬಾದುರನನ್ನು ಏಕಾಂತದಲ್ಲಿ ಕಂಡು, ಆಪ್ತನಂತೆ ನಟಿಸಿ "ಸುರುತಾಳನು, ನಿನ್ನ ಪರಾಕ್ರಮವನ್ನು ಕಂಡು, ಮುಂದೆ ತನಗೆ ಗತಿಯೇನೆಂದು ತನ್ನ ಆಪ್ತರಲ್ಲಿ ಪರ್ಯಾಲೋಚಿಸಿ ನಿನ್ನನ್ನು ಹೇಗೆ ಕೊಲ್ಲುವುದೆಂದು ಚಿಂತಿಸುತ್ತಿದ್ದಾನೆ. ಅರಸುಗಳು ಎಂದಿಗೂ ನಂಬಲರ್ಹರಲ್ಲ. ಅವರು ಒಡಹುಟ್ಟಿದವರ ಕೊಲೆಗೆ ಒಡಂಬಡುವರು. ತಂದೆ ಸತ್ತರೆ ತಮಗೆ ರಾಜ್ಯಭಾರವಾಗುವುದೆಂದು ಚಿಂತಿಸುವರು. ಅಪಕೀರ್ತಿಗೆ ಅಂಜುವವರಲ್ಲ. ಅರಸರ ವಿನಯೋಕ್ತಿಗಳನ್ನೂ, ಅಂಗನೆಯರ ಪ್ರಿಯೋಕ್ತಿಗಳನ್ನೂ ಕೇಳುವವರು ಗಾಂಪರೇ ಸರಿ" ಎಂದು ಹೇಳಿದನು. ಬಾದುರನು ಈ ನುಡಿಗಳನ್ನು ಕೇಳಿ ಕಳವಳಗೊಂಡು

ತನ್ನ ಸಂಸಾರವನ್ನೂ ತನ್ನ ಸೇನೆಯನ್ನೂ ಕರೆದುಕೊಂಡು, ಹೇಳದೆ ಕೇಳದೆ ಡಿಳ್ಳಿಯಿಂದ ಹೊರಟನು. ತನ್ನ ಒಕ್ಕಲನ್ನು ಕರೆದುಕೊಂಡು ಬಾದುರನು ತೆರಳಿದ ಸುದ್ದಿ ನೇಮಿಗೆ ತಿಳಿದು ಬರಲು ಆತನು ಅದನ್ನು ಸುಲ್ತಾನನಿಗೆ ತಿಳಿಸಿದನು. ಸುಲ್ತಾನನು ಕುಪಿತನಾಗಿ ಬಾದುರನನ್ನು ಬೆನ್ನಟ್ಟಿ ಕರೆತರುವಂತೆ ನೇಮಿಗೆ ಆಜ್ಞಾಪಿಸಿದನು. ಲಕ್ಷ ಕುದುರೆಗಳ ದಂಡು ಬಾದುರನನ್ನು ಅಡ್ಡಗಟ್ಟಲು, ಆತನು ಅವರನ್ನು ಸದೆಬಡಿದು ಹಿಂದಕ್ಕಟ್ಟಿದನು. ಬಾದುರನು ಹೆದ್ದೊರೆಯನ್ನು ದಾಟಿ, ಕಂಪಿಲನಿಗೆ ತನ್ನ ಆಗಮನವನ್ನು ತಿಳಿಸಿದನು. ಬಾದುರನ ವೃತ್ತಾಂತವನ್ನು ಕೇಳಿ ಕಂಪಿಲನು ಆತನಿಗೆ ಆಶ್ರಯ ಕೊಡುವ ವಿಚಾರದಲ್ಲಿ ರಾಮನನ್ನೂ ತನ್ನ ಮಂತ್ರಿಯನ್ನೂ ಸಲಹೆ ಕೇಳಿದನು. ಮಂತ್ರಿಯಾದರೋ, ಸುರುತಾಳನು ಅತ್ಯಂತ ಪರಾಕ್ರಮಿಯೆಂದೂ' ಬಾದುರನಿಗೆ ನಾವು ಆಶ್ರಯವಿತ್ತಿದ್ದೇ ಆದರೆ ಅವನ ಅಗ್ರಹಕ್ಕೆ ಗುರಿಯಾಗಬೇಕಾಗುತ್ತದೆಯೆಂದೂ, ಭಯವನ್ನು ವ್ಯಕ್ತಪಡಿಸಿದನು. ಕುಮಾರರಾಮನು ನಗುನಗುತ್ತ, ಮಂತ್ರಿಯ ಕಡೆ ನೋಡಿ, "ನೀನು ಹೇಳಿದ ಮಾತು ರಾಜಕಾರ್ಯದ ಗಹನವೇ ಸರಿ" ಎಂದು ಉತ್ತರವಿತ್ತು, ಬಳಿಕ "ಆರ ಕರೆದುಕೊಂಡನೆಂದು ಕೆಡಸಿದನು ವೀರರುದ್ರನ ಸುರುತಾಳ, ಆರ ಹಿಂದಿಕ್ಕಿದನೆಂದು ಕೆಡಿಸಿದನಂದಾ ರಾಮದೇವರಾಯನನು, ಏನ ಮಾಡಿದನೆಂದು ದೋರಸಮುದ್ರದ ಮಾನವಪತಿಯ ಪಿಡಿದನು, ಏನ ಮಾಡಿದನೆಂದು ರಣಹಮ್ಮಿರನ ದಾನವಪತಿ ಕೆಡಿಸಿದನು" ಎಂದು ಉದಾಹರಣೆಗಳನ್ನು ಹೇಳಿ "ಬಡವನ ಬಲ್ಲಿದ ಕೊಲುತಿಹ ನಿಬ್ಬರದೊಳಗೆ" ಎಂದು ನಿರ್ಧರಿಸಿ, ಮರೆಹೊಕ್ಕವರನ್ನು ರಕ್ಷಿಸುವುದು ತಮ್ಮ ಧರ್ಮವೆಂದು ತಿಳಿಸಿದನು. ಕಂಪಿಲನು ರಾಮನ ಮಾತಿಗೆ ಸಮ್ಮತಿಸಿ, ಬಾದುರನನ್ನು ಕರೆತರುವಂತೆ ಬೈಚಪ್ಪನಿಗೆ ಆಜ್ಞಾಪಿಸಿದನು. ಬೈಚಪ್ಪನು ಬಾದುರನನ್ನು ಬರಮಾಡಿಕೊಂಡು ಅವನಿಗೆ ರಾಮನನ್ನು ಪರಿಚಯಮಾಡಿಕೊಟ್ಟನು. ಕಂಪಿಲನು ಬಾದುರನಿಗೆ ಅಭಯ ವಿತ್ತು ಸನ್ಮಾನಿಸಿದನು.

## ನೇಮಿಯ ಪ್ರಥಮ ದಂಡಯಾತ್ರೆ

ಬಾದುರನನ್ನು ಹಿಡಿಯಲಾರದೆ ಹಿಂತಿರುಗಿ ಬಂದ ದಂಡನ್ನು ಕಂಡು ನೇಮಿ ಖಿನ್ನನಾದನು. ಕಂಪಿಲನು ಬಾದುರನಿಗೆ ಆಶ್ರಯವಿತ್ತನೆಂಬ ಸುದ್ದಿ ಸುಲ್ತಾನನಿಗೆ ತಿಳಿಯಲು, ಆತನು ನೇಮಿಯನ್ನು ಕುರಿತು "ಕುಮ್ಮಟವನ್ನು ಮುತ್ತಿ ಕಂಪಿಲದೇವನ ಹಮ್ಮ ಮುಱಿದು ರಾಮನನ್ನು ಗಮ್ಮನೆ ಹಿಡಿತಂದೆನ್ನ ಗೊಪ್ಪಿಸು" ಎಂದು ಆಜ್ಞೆಮಾಡಿದನು. "ಕೊಲುವ ಹುಲಿಗೆ ಕೋಲುಗೊಂಡೆಗ್ಗನಂತೆ" ಕಂಪಿಲನು ಬಾದುರನಿಗೆ ಆಶ್ರಯವಿತ್ತನೆಂಬುದಾಗಿ ಹಂಗಿಸಿ ಮಾತನಾಡಿದನು. ಸುರುತಾಳನ ಅಪ್ಪಣೆಯ ಮೇರೆಗೆ ನೇಮಿ ಸಮಸ್ತ ಸೇನೆಯನ್ನೂ ಕೂಡಿಕೊಂಡು, ಮಾಳವ, ಮಗಧ, ನೇಪಾಳ, ಗುರ್ಜರ, ಗೌಳ, ಲಾಳದೇಶಗಳನ್ನು ಹಿಂದಿಕ್ಕಿ, ಖಾನರೊಡನೆ ಮಾತುಕತೆಯಾಡುತ್ತ ಬಿದಿರೆಗೆ ಬಂದು ಬೀಡುಬಿಟ್ಟನು. ಈ ಸುದ್ದಿ ಕಂಪಿಲನಿಗೆ ತಿಳಿದುಬಂದಿತು. ಕಂಪಿಲನು ಕುಮಾರರಾಮನಿಗೆ ತಿಳಿಸಲು, ಆತನು ತಾವೂ ಸಹ ಸೈನ್ಯವನ್ನು ಅಣಿಮಾಡಿ ಕೊಂಡು ಕುಮ್ಮಟಕ್ಕೆ ತೆರಳಿ ನೇಮಿಯನ್ನು ಎದುರಿಸಬೇಕೆಂಬುದಾಗಿ ನುಡಿದನು. ಆ ಮಾತಿಗೆ ಕಂಪಿಲ, ಬೈಚಪ್ಪ, ಬಾದುರ, ಸಂಗಮದೇವ ಮತ್ತು ಕಾಟಣ್ಣ ಎಲ್ಲರೂ ಸಮ್ಮತಿಸಿದರು. ಕಂಪಿಲನ ಸೈನಿಕರು ಯುದ್ಧಸನ್ನದ್ಧರಾಗಿ, ಬೈಚಪ್ಪನ ನೇತೃತ್ವದಲ್ಲಿ ಕುಮ್ಮಟದ ಮುಂಗಡೆಯಲ್ಲಿ ಬಂದು ಪಾಳೆಯವನ್ನು ಬಿಟ್ಟರು. ಬೈಚಪ್ಪನು ಸುತ್ತಮುತ್ತಲಿನ ಮನ್ನೆಯರಿಗೂ ಓಲೆ ಬರೆದು ಕಳುಹಿಸಿದನು. ಕೋಟೆ ಕೊತ್ತಳ ಗಳನ್ನು ಭದ್ರಪಡಿಸಿ, ಬಳಿಕ ಹೆದ್ದೊರೆಯ ತಡಿಗೆ ಬಂದು ಬೀಡುಬಿಟ್ಟನು. ಬೈಚಪ್ಪನು ಕಂಪಿಲನ "ತಂದೆಯೊ ಮಂತ್ರಿಯೊ" ಎಂಬಂತೆ ಸರ್ವದಾ ರಾಜನ ಹಿತೈಷಿಯಾಗಿದ್ದನು. ಅನಂತರ ಕಂಪಿಲನಿಗೆ ತನ್ನ ಸೇನೆ ಸಿದ್ಧವಾಗಿರುವುದನ್ನು ಹೇಳಿಕಳುಹಿಸಿದನು. ಇತ್ತ ಕಂಪಿಲನು ರಾಮನಿಗೆ ಸುದ್ದಿಯನ್ನಟ್ಟಿ ತಾನು ಕುಮ್ಮಟದ ಬೀಡಿಗೆ ಬಂದನು. ಕುಮಾರರಾಮನು ವೀರೋಚಿತವಾದ ಉಡುಗೆತೊಡುಗೆಗಳನ್ನು ಧರಿಸಿ, ತಾಯಿ

ಹರಿಹರದೇವಿಯ ಬಳಿಗೆ ಬಂದು ಆಶೀರ್ವಾದವನ್ನು ಬೇಡಿದನು. ಆಕೆಗಾದರೋ "ನಡೆ ಕಾಳೆಗಕೆನಬಾರದು ಮಗನಾತ್ಮನೊಡಬಡದಾಜಿ ಮಲ್ಲನನು ತಡೆವುದಕೊಪ್ಪದು ಮನವು." ಆದರೂ ಆ ಉಭಯಸಂಕಟದಿಂದಲೇ ಕೂಡಿ "ನಡೆ ಜಯಶೀಲ ನೀನಾಗೆಂದು ಗಲ್ಲವ ಹಿಡಿದು ಮುಂಡಾಡಿ" ಮಗನನ್ನು ಬೀಳ್ಕೊಟ್ಟಳು. ಬಾದುರ ಮತ್ತು ಕುಮಾರರಾಮರಿಬ್ಬರೂ ತಮ್ಮ ತಮ್ಮ ಸೇನಾಸಮೇತರಾಗಿ ಕುಮ್ಮಟದ ಬೀಡಿಗೆ ಬಂದಿಳಿದರು. ಬೈಚಪ್ಪನು ನೇಮಿ ಹೇಗೆ ಸುತ್ತಮುತ್ತಲಿನ ತೊರೆಗಲ್ಲು, ಬಾದಾವಿ, ಮುದಿಗಲ್ಲುಗಳನ್ನು ಸೂರೆಮಾಡಿ ಅಪಾರ ಸೇನಾ ಸಮೇತನಾಗಿ ಬಂದಿರುವನೆಂಬುದನ್ನು ಕಂಪಿಲನಿಗೆ ವಿವರಿಸಿದನು. ರಾಜನು ಓಲಗವನ್ನು ಕೂಡಿಸಿ, ತನ್ನ ಮನ್ನೆಯರೇ ಮೊದಲಾದವರ ಸಲಹೆಯನ್ನು ಕೇಳಿದನು. ಅವರಲ್ಲಿ ಒಬ್ಬೊಬ್ಬರೂ ಕೆಚ್ಚಿನಿಂದ ಮಾತಾಡಿದರು. ಕಡೆಗೆ ಮಂತ್ರಿಯನ್ನೂ ರಾಮನನ್ನೂ ಕಂಡು, ತಾವು ನೇಮಿಯನ್ನು ನೇರವಾಗಿ ಎದುರಿಸುವ ಬದಲು, ಕನ್ನಕಂಡಿಯ ಕಟ್ಟಿಕೊಂಡು ಬನ್ನಬಡಿಸುವುದೇ ಸೂಕ್ತವಲ್ಲವೆ ಎಂಬುದಾಗಿ ಪರ್ಯಾಲೋಚಿಸಿದನು. ಪ್ರಕೃತದಲ್ಲಿ ಬಂದಿರುವ ದಂಡು, ಕಾಕತಿರುದ್ರ, ಬಲ್ಲಾಳರ ಬಲದಂತೆ ಅಲ್ಲವೆಂದು ಅಭಿಪ್ರಾಯವಿತ್ತನು. ಆಗ ರಾಮನು ಆ ಸಲಹೆಗೆ ಅಷ್ಟಾಗಿ ಸಮ್ಮತಿಸದೆ, ಸೇನಾಸಂಖ್ಯೆಗಿಂತಲೂ ವೀರನ ಸಾಹಸವೇ ಮುಖ್ಯವೆಂದು ವಾದಿಸಿದನು. ಈ ಹೊತ್ತಿಗೆ ಕಾಟಣ್ಣನು, ರಾಮನ ಮುಂದೆ ಬೇರೆ ಯಾರ ಪರಾಕ್ರಮವೂ ಶೋಭಿಸದೆಂದೂ, ಆದ್ದರಿಂದ ಅಂದಿನ ಯುದ್ಧಕ್ಕೆ ತನಗೆ ವೀಳೆಯವನ್ನು ಕೊಡಬೇಕೆಂದೂ ವಿನಂತಿಮಾಡಿಕೊಂಡನು. "ಹನುಮನನಟ್ಟಿದ ದಶರಥನಂದನ ದನುಜಾಧೀಶ ರಾವಣನ ಮೊನೆಯ ಮುಱಿದು ಮತ್ತವನ ಕೊಂದುದಿಲ್ಲವೆ ಮನುಜೇಶ ಕಳುಪು ನೀನೆನ್ನ" ಎಂದು ಹೇಳಿದನು. ಕಾಟಣ್ಣನ ನುಡಿಗೆ ರಾಮನೂ ಒಪ್ಪಿ, ತಂದೆಗೆ ಹೇಳಿ, ಅಂದಿನ ಯುದ್ಧಕ್ಕೆ ಅವನನ್ನೇ ಮುಂದೆ ಬಿಟ್ಟನು. ಅನಂತರ ಕಾಟಣ್ಣನ ಬೆಂಗಾವಲಿಗಾಗಿ ಹಲವಾರು ವೀರರನ್ನು ನಿಯಾಮಿಸಿ ಕಳುಹಲು, ಆತನು ನಿರ್ಭೀತನಾಗಿ ನೇರವಾಗಿ ನೇಮಿಯ ಪಡೆಯ ಮೇಲೆ ನುಗ್ಗಿ ಬಂದನು. "ಕುಱಿಯ ಹಿಂಡನು ತೋಳ ಪೊಕ್ಕಂತೆ" ಎದುರಿಸಿದವರನ್ನೆಲ್ಲ ತುಂಡು ತುಂಡು ಮಾಡುತ್ತ, ಖಾನರನ್ನು ತಬ್ಬಿಬ್ಬುಗೊಳಿಸಿದನು. "ಕಂಪಿಲ ಸುತನ ರಾವುತಿಕೆಯುದ್ದಂಡತೆ"ಯನ್ನು ಕಂಡು ನೇಮಿಖಾನನು ನಿಬ್ಬೆರಗಾದನು. "ಅಡಗಿರ್ದ ಗಿಡುಗನ ಹಿಂಡು ಬೆಳ್ಳಕ್ಕಿಯ ಪಡೆಯ ತಾಗುವ ತೆಱದಿಂದ", "ಹುಲಿಯ ಜಂಗುಳಿ ಹುರಿಗಟ್ಟಿಕೊಂಡೇಣನ ಬಲವ ಹಿಡಿವ ತೆಱದಿಂದ" ಕಾಟಣ್ಣನು ಅಸದೃಶನಾಗಿ ಹೋರಾಡಿ, ಹಲವರನ್ನು ಸಂಹರಿಸಿ, ಕೆಲವರನ್ನು ಕೈಸೆರೆ ಹಿಡಿದು, ವೀರವಾದ್ಯಗಳ ಮೊಳಗಿನಲ್ಲಿ ಮರಳಿ ಕಂಪಿಲನ ಕಾಲಿಗೆರಗಿದನು. ನೇಮಿಯನ್ನು ಮೂದಲಿಸಿದ ಕಾಟಣ್ಣನ ವಿಕ್ರಮವನ್ನು ಕಂಡು ದೊರೆ ಮೆಚ್ಚಿದನು; ಮಂತ್ರಿ ಹೊಗಳಿದನು. ಕಾಟಣ್ಣನ ಈ ಸಾಹಸವನ್ನು ಸಮುದ್ರರಾಜನಿಗೆ ಹೇಳಲೆಂದು ಹೊರಟನೋ ಎಂಬಂತೆ ಅಂದು ಸೂರ್ಯನು ಅಸ್ತಗಿರಿಗೆ ಧಾವಿಸಿದನು. ಅಂದಿನ ರಾತಿಯೆಲ್ಲ ಉಭಯಬಲಗಳಲ್ಲಿಯೂ ಕಾಟಣ್ಣನ ಮಾತೇ ಮಾತು ! ನೇಮಿಗಾದರೋ ತನ್ನವರು "ಹಿಂದುವರಿಗೆ ಹಿಂದುಮುಂದಾದ ಕೊಱತೆ" ಯನ್ನು ಕಂಡು ಕೋಪ ಮಿತಿಮೀರಿತು. ಖಾನರನ್ನು ಹೀಯಾಳಿಸಿದನು. ಅವರು "ಮೋಸದೊಳಗೆ ಬಂದು ಹಿಂದುವರೆಮ್ಮನು ಘಾಸಿಮಾಡಿದರು ಮಱೆಯೊಳು ಏಸಱವನು ಕಂಪಿಲ ನಾಳೆ ಕೈ ಮೆಯ್ ಹೇಸಿ ಕೊಲ್ಲು ವೆವು ಹಿಂದುವರ", "ಕಾಳೆಗದೊಳು ಕಡಿದೊಟ್ಟಿ ರಾಮನ ಹಿಡಿಯಾಳ ಹಿಡಿವೆವು ಚಿತ್ತೈಸು", "ಬಲವನೆಲ್ಲವ ಮೂವಳಸಾಗಿ ಬಳಸಿಕೊಂಡಳವುಗೆಡಿಸಿ ಹಿಂದುವರ ಕಲಹದೊಳಗೆ ಕಂಗೆಡಿಸಿ ರಾಯನ (ರಾಮನ ?) ಬಾಳುದಲೆಯನೊಪ್ಪಿಸದೆ ಮಾಣ್ಬೆವೆ" ಎಂದು ಶಪಥ ಮಾಡಿದರು. ಆ ವೇಳೆಗೆ ಸೂರ್ಯೋದಯ ವಾಯಿತು. ನೇಮಿಯ ದಂಡು ಅತ್ಯಂತ ವೀರಾವೇಶದಿಂದ ಭಯಂಕರವಾದ ರಣವಾದ್ಯಗಳ ಆರ್ಭಟದಿಂದ ಕೂಡಿ "ತಳಮಳವೇಳೆ ಮುನ್ನೀರು ತಾರಗೆಗಳು ಕಳಕುಳವೆಯ್ದೆ, ಗಗನದ ಹೊಳೆ ತುಳುಕಾಡೆ" ಯುದ್ಧ ಸನ್ನದ್ಧವಾಯಿತು.

ಈಗ ರಾಮನ ಸರದಿ. ಕುಮಾರರಾಮನು ಅಳಿಯ ಮಲ್ಲರಸ, ಸಂಗಮದೇವ, ಕಾಟಣ್ಣ, ಬಾದುರಖಾನ,

ಭೈರವದೇವರನ್ನು ಒಂದೊಂದು ಬಲಕ್ಕೆ ನಾಯಕರನ್ನಾಗಿ ನೇಮಿಸಿ, ಇತರ ಯೋಧರಿಗೆ ತಕ್ಕ ರೀತಿಯಲ್ಲಿ ವ್ಯೂಹ ರಚಿಸಿ, ತನ್ನ ದಿವ್ಯಾಶ್ವವನ್ನು ಪೂಜಿಸಿ, ಮೇಲೇರಿ, ಕೃಷ್ಣರಾಯನ ವರಶಾರ್ಙ್ಗವನ್ನು ಹಿಡಿದನು. ಅನಂತರ "ಭೀಮನೇಕಾಂಗದೊಳಗೆ ಬಂದು ಕೌರವನಾ ಮೋಹರಕೆ ನಿಂದಂತೆ" ನೇಮಿಖಾನನ ಪಡೆಗೆ ಎದುರಾಗಿ ನಿಂತನು. "ಕಾಂತಾರದಂತಿಸಂತತಿಗೆ ಗಜಾಂತಕನಾಂತು ಮಸಗಿ ನಿಂದಂತೆ" ನಿಂತಿದ್ದ ಆ ರಾಮನು ಮಾರುತಿ, ಪಾರ್ಥ, ಕರ್ಣ, ಶ್ರೀರಾಮ, ಬಲರಾಮ, ಪರಶುರಾಮರನ್ನು ಹೋಲುವಂತಿದ್ದನು. ಆ ಧೀರನನ್ನು ಇಂದ್ರನೂ ಹೊಗಳಿದನು. ಕಂಪನೃಪತಿ ನೇಮಿಯ ಅಪಾರವಾದ ಸೇನೆಯನ್ನು ಕಂಡು, ತಲೆದೂಗಿ, ಮೂಗಿನ ಮೇಲೆ ಬೆರಳಿಟ್ಟನು. ಇದನ್ನರಿತ ಕುಮಾರರಾಮನು ತಂದೆಗೆ ಧೈರ್ಯ ಹೇಳಿ "ಈ ಸುರುತಾಳಬಲಾಂಬುನಿಧಿಯ ತುಳ್ಕಿ ಸೂಸುವೆನರೆಗಳಿಗೆಯೊಳು" ಎಂದು ಅಭಯವಿತ್ತನು. ಅನಂತರ ಮುನ್ನುಗ್ಗಲು ನೇಮಿಯ ಬಲ ನಾಲ್ಕೂ ಕಡೆಗಳಿಂದ ರಾಮನನ್ನು ಮುತ್ತಿತು. ಮಾಳವ, ಮಗಧ, ಪುಳಿಂದ, ಗುರ್ಜರ, ಹೂಣ, ಲಾಳ, ಹಮ್ಮೀರ ದೇಶಗಳ ಅರಸರು ರಾಮನ ಮೇಲೆ ಸಿಂಗಾಡಿಯಂಬುಗಳನ್ನು ಕರೆದರು. ಹಲವಾರು ಖಾನರು ನಾನಾ ರೀತಿಗಳಲ್ಲಿ ಬಂದು ರಾಮನನ್ನು ತಾಗಿದರು. "ಶರಧಿಯ ತೆರೆಮಾಲೆಗಳಂತೆ ಖಾನರ ತುರಗದ ಪವುಜೇಱುದುದು." ಆದರೆ, "ತೆರಳದೆ ತೆಕ್ಕದೆ ತೆಱಹುಗೊಡದೆ ರಾಮನಿರೆ ಮೆಚ್ಚಿದರು ದೇವತೆಗಳು." ಖಾನರು ಮೇಲಿಂದ ಮೇಲೆ ಆಯುಧಗಳ ಮಳೆಗರೆಯುತ್ತಿರಲು "ಅಂಬರದೊಳು ಸುರರು ಸುರಿದರು ಕಣ್ಬನಿಯ." ಒಂದು ದೆಸೆಯಲ್ಲಿ ಒಡ್ಡಿಯರೂ, ಒಂದು ದೆಸೆಯಲ್ಲಿ ಕನ್ನೋಜಿಗಳೂ, ಒಂದು ದೆಸೆಯಲ್ಲಿ ತುರುಕರೂ, ಒಂದು ದೆಸೆಯಲ್ಲಿ ಖಾನರೂ ಬಲಗೂಡಿ ಖೋಯೆಂದು ರಾಮನನ್ನು ಮುಸುಕಿದರು. "ಪ್ರಳಯ ಕಾಲದ ಮೇಘಜಾಲವಿಳೆಗೆ ಪೆರ್ಮಳೆಯನೊಸೆದು ಕಱೆವಂತೆ" ಅವನ ಮೇಲೆ ಕಣೆಗಳನ್ನು ಕರೆದರು. "ಅಂದು ಗೋಗ್ರಹಣದೊಳಗೆ ಕುರುಬಲಕಿಂದ್ರನಂದನ ಮಲೆತು ನಿಂದಂತೆ" ರಾಮನೊಬ್ಬನೇ ಸುರುತ್ರಾಣ ಬಲವನ್ನು ಎದುರಿಸಿ ನಿಲ್ಲಲು ಅಮರರು ಮೆಚ್ಚಿದರು. ಸ್ವಲ್ಪವಾದರೂ ಬೆದರದ ರಾಮನು "ಕುಲಗಿರಿಯಂತೆ ನಿಶ್ಚಲಿತ ನಾಗಿರ್ದನಾಜಿಯೊಳು." ರಾಮನು ಶತ್ರುಸೇನೆಯನ್ನು ಒಂದೇ ಸಮನಾಗಿ ಸದೆಬಡಿಯತೊಡಗಿದನು. ಖಾನ ಮಲ್ಲುಕರನ್ನು ಕೆಡವಿದನು. ಹೋರುವ ಕಾಲವರನ್ನು ಮಡುಹಿದನು. "ಹರಿಗೆ ಸಬಳ ಬಿಲ್ಲಾನೆ ಕುದುರೆಗಳ ವರ ವೀರಭಟರು ಮೋಹರಿಸಿ ಹರಿದೊಂದು ಲಗ್ಗೆಯೊಳಗೆ ತಾಗಿ ರಾಮನ ಶರಹತಿಯಿಂದ ಮಡಿದರು." ರಾಮನು ಸಿಕ್ಕಿದನೆಂದು ಭ್ರಮಿಸಿ ಮಲ್ಲುಕರು ಮುಂದೆ ಬರಲು, ರಾಮಾಸ್ತ್ರದಿಂದ ಹತರಾದರು. ರಣರಂಗದಲ್ಲಿ ಆನೆ ಕುದುರೆಗಳ ರಾಶಿಗಳೇ ಬಿದ್ದಿದ್ದುವು. ನೇಮಿಖಾನನು ಮತ್ತೆ ತನ್ನ ಅಕ್ಕಪಕ್ಕದಲ್ಲಿದ್ದ ಬಲವೆಲ್ಲವನ್ನೂ ರಾಮನ ಮೇಲೆ ಹರಿಯಬಿಟ್ಟನು. ರಾಮನಾದರೋ ಇನಿತೂ ಅಳುಕದೆ ತನ್ನ ಲೌಡಿಯಿಂದ ಬಡಿಯತೊಡಗಿದನು. ಅವನ ಏಟಿಗೆ ಸಿಕ್ಕಿ ಆನೆಗಳ ಕುಂಭಸ್ಥಳಗಳು ಒಡೆದು ಮುತ್ತುಗಳು ಹೊರಚೆಲ್ಲಿದುವು. ಕುಮಾರರಾಮನನ್ನು ಎದುರಿಸಲಾರದೆ, ನೇಮಿಯ ಬಲವು ಪಲಾಯನ ಮಾಡಲಾರಂಭಿಸಿತು. ಉಳಿದ ಪಡೆಗಳಲ್ಲಿ ಅಮಿತ ಸಂಖ್ಯೆಯವರು ಅಸ್ತವ್ಯಸ್ತರಾಗಿ ಬಿದ್ದಿದ್ದರು. ರಣರಂಗವು ಅತ್ಯಂತ ಬೀಭತ್ಸವಾಗಿತ್ತು. ಮರುಳುಗಳ ತಂಡ ಬೇಕಾದ ಹಾಗೆ ತಿಂದು ತೇಗಿ ರಾಮನನ್ನು ಹೊಗಳುತ್ತಿದ್ದುವು. ನೇಮಿಮಲ್ಲುಕನು ಓಡಿ ಹೋಗುತ್ತಿದ್ದ ಬಲವನ್ನು ಒಟ್ಟುಗೂಡಿಸಿಕೊಂಡು ಮತ್ತೆ ರಾಮನನ್ನು ಮುತ್ತಲು, ಆತನು "ಕದಳಿಕಾನನವನು ಮುಱಿವಂತೆ ಮದಕರಿ ಮಸಗಿ" ಆ ಪಡೆಯನ್ನು ಸಂಹರಿಸಿದನು. ರಾಮನಂತೆಯೇ ಆತನ ದಿವ್ಯಾಶ್ವವೂ ರಣದೇವತೆಯಂತೆ ಸುಳಿದಾಡಿ, ಸಂಹಾರಕಾರ್ಯದಲ್ಲಿ ತೊಡಗಿತ್ತು. "ಸಿಂಗದಂತಾನೆಗಳಿಗೆ ಪುಲಿಯಂತೆ ತುರಂಗಗಳಿಗೆ ಮೇಲ್ವಾಯ್ದು" ಹಿಂಗದೆ ಕಂಗೆಡಿಸುತ್ತಿತ್ತು. ಈ ರೀತಿಯಾಗಿ "ರಾಮನೆಂಬಾಭೀಳ ಮದೋನ್ಮದ ದಂತಿ", "ರಾಮನೆಂದೆಂಬೀ ವಾರಣವೈರಿ", "ರಾಮನೆಂದೆಂಬ ಪೆರ್ಬುಲಿ", "ರಾಮನೆಂದೆಂಬ ತರಣಿ" ಸಮರಾಂಗಣದಲ್ಲಿ ಸರ್ವರಿಗೂ ಪ್ರಳಯಕಾರಿಯಾಗಿತ್ತು. ಎಲ್ಲಿ ನೋಡಿದರೂ ಅಲ್ಲಿ ರಾಮನ ಬೊಬ್ಬೆ, ಅಬ್ಬರ! ಎಲ್ಲಿ ನೋಡಿದರೂ ಅಲ್ಲಿ ರಾಮುಗನ ಬಲ್ಲೆಯ ಲೌಡಿಗಳಿಂದ ಹತರಾಗಿ ಬಿದ್ದಿದ್ದ ಸುಭಟರು! ಈ ವೇಳೆಗೆ

ತನ್ನ ಸೇನಾಸಮೇತನಾಗಿ ಕಾಟಣ್ಣನೂ ರಾಮುನ ಬಳಿಗೆ ಸಾರಿ "ಮುಱಿದೋಡುವ ತುರುಕರ ಬಲವ ಬಿಡದೆ ಬೆಂಬತ್ತಿದನು." ಖಾನಖಾನರು, ಅಭಿಮಾನದ ಹಾನಿಯನ್ನೂ ಬಗೆಯದೆ, ನೇಮಿಖಾನನನ್ನು ಕೈಬಿಟ್ಟು ಪಲಾಯನ ಸೂತ್ರವನ್ನು ಹಿಡಿದಿದ್ದರು. ರಾಮನ ಸೈನಿಕರು ಸಾಧ್ಯವಾದಷ್ಟು ಶತ್ರುಸೇನೆಯನ್ನು ಲೂಟಿ ಮಾಡಿ ಕೈಸೆರೆ ಹಿಡಿದರು. "ರಾಮನಾಥನ ಬಲದ ಸುಮ್ಮಾನದ ಸುಗ್ಗಿ" ಯನ್ನು ಹೇಳಲಸದಳವಾಗಿತ್ತು. ನಾನಾ ವಸ್ತುವಾಹನಗಳು ರಾಮನ ವಶವಾದುವು. ವೀರರಾಮನು ನೇಮಿಯ ದಳವನ್ನೆಲ್ಲ "ಕೊಲ್ಲದ ಕೊಲೆಯ ಕೊಂದ." ಅನಂತರ ಜಯಭೇರಿಯ ನಿನಾದದಿಂದ ಕೂಡಿ ಹಿಂತಿರುಗಿ ಬಂದು ತಂದೆಯ ಪಾದ ಗಳಿಗೆ ನಮಸ್ಕರಿಸಿದನು. ಕಂಪಿಲನು ಆನಂದಾಶ್ರುಸಮೇತನಾಗಿ ಪುಳಕಗೊಂಡು, ಮಗನನ್ನು ಬಲವಾಗಿ ತೆಗೆದಪ್ಪಿಕೊಂಡನು. ಆತನಿಗೆ "ಸುರಪತಿಯ ಸಿರಿಯ ಕೈಸೆರೆವಿಡಿ" ದಷ್ಟು ಸಂತೋಷವಾಗಿತ್ತು. ಬಾದುರನು "ಸುರುತಾಳನ ದಂಡ ಮುಱಿಯಲಿಱಿವಡೀ ಧರಣಿಯೊಳಿಲ್ಲ ಕುವರಗೆ ಸುರನರೋರಗರೊಳಗೆಣೆಯಿಲ್ಲ" ಎಂದು ಕೊಂಡಾಡಿದನು. "ಸುರರೊಡನಿಂದ್ರ ಜಯಂತವೆರಸು ನಿಜಪುರವನೆಯ್ದುವವೊಲು" ಕಂಪಿಲನು ಕುಮಾರರಾಮನೊಂದಿಗೆ ಹೊಸದುರ್ಗವನ್ನು ಪ್ರವೇಶಿಸಿದನು. ರಾಮನು ತಂದೆಯನ್ನು ಬೀಳ್ಕೊಂಡು ತಾಯಿಯ ಬಳಿಗೆ ಬಂದು ನಮಸ್ಕರಿಸಿದನು. ಆಕೆಯ ಆನಂದಕ್ಕೆ ಪಾರವೇ ಇಲ್ಲ. "ಪುಳಕದ ಗುಡಿಗಟ್ಟಿ ದಳು ಮೈಯೊಳಗೆ, ಕಣ್ಣ ಬೆಳಗಿನ ದೀಪವೆತ್ತಿದಳು, ತಳುವದಾನಂದಾಶ್ರುಜಲವ ಪಿಡಿದಳು." ಅನಂತರ ರಾಮನು ತನ್ನ ರಾಣಿಯರ ಬಳಿ ಸಾರಿದನು. ಪರಾಜಿತನಾದ ನೇಮಿ ಖಿನ್ನನಾಗಿ ಸುರುತಾಳನನ್ನು ಕಂಡನು. ಸುರುತಾಳನು ಸಿಟ್ಟಿನಿಂದ "ಹಿಂದುವ ರಾಯನೊಬ್ಬನ ಕೈಯಿಂದೆಮ್ಮ ಮಂದಿ ಕುದುರೆಯನು ಕೊಲಿಸಿ ಬಂದೆಮ್ಮ ಕಾಣ್ಬುದು ಹಸನಾಯಿತು" ಎಂದು ಮೂದಲಿಸಿದನು. ನೇಮಿ ಸಂಕಟದಿಂದ "ಬಿಡ ಬಾರದು ಪೌಜು ಮಾಡಬಾರದು ಬಲುಗಡಿ ಕುಮ್ಮಟದುರ್ಗವಿಳಿಗೆ" ಎಂದು ವಿನಂತಿ ಮಾಡಿಕೊಂಡನು

## ಶೂಲದ ಹಬ್ಬ

ಹಣೆಗಣ್ಣಿನಿಂದ ಹರನೂ, ಕೌಸ್ತುಭದಿಂದ ವಿಷ್ಣುವೂ ವಿರಾಜಿಸುವಂತೆ ಅಸಹಾಯಶೂರ ಕುಮಾರ ರಾಮುಗನಿಂದ ಕಂಪಿಲನು ಕೀರ್ತಿಶಾಲಿಯಾದನು. ಹೀಗಿರಲು, ಮನಮೋಹಕವಾದ ವಸಂತಋತು ಆಗಮಿಸಿತು. ಮನ್ಮಥನ ದಿಗ್ವಿಜಯ ಮೊದಲಾಯಿತು. ಅದೇ ಕಾಲಕ್ಕೆ ಸರಿಯಾಗಿ ಶೂಲದ ಹಬ್ಬವೂ ಬಂದಿತು. ಪದ್ಧತಿಯ ಮೇರೆಗೆ ಕಂಪಿಲನು ಆ ಹಬ್ಬವನ್ನು ಆಚರಿಸತೊಡಗಿದನು. "ಸುರಲೋಕಕೆ ಪೋಪರಿಟ್ಟ ಸಿಚ್ಚಣಿಕೆ ಯಂತೆ" ದೇಶದೇಶಗಳ ದೊರೆಗಳು ತಮ್ಮ ತಮ್ಮ ಅಲಂಕೃತವಾದ ಶೂಲಗಳಸಮೇತ ಗಿರಿದುರ್ಗದಲ್ಲಿ ಬಂದು ಸೇರಿದರು. ಇವುಗಳಲ್ಲಿ ರಾಮನ ವೈಜಯಂತಿ ಅತ್ಯಂತ ಪ್ರಧಾನವಾಗಿ ಎದ್ದು ತೋರುತ್ತಿತ್ತು. ಆ ಶೂಲಗಳ ವೈಭವದಿಂದ ಆ ಊರು ದೇವಲೋಕದಂತೆ ಪ್ರಕಾಶಿಸುತ್ತಿತ್ತು. ಆ ಸಂದಣಿಯಲ್ಲಿ ಕೇರಿಕೇರಿಗಳಲ್ಲಿಯೂ ನಾರಿ ಯರು "ಆ ರತಿ ಬಹುರೂಪನಾಂತಳೆಂಬಂತಿರಲಾರತಿವಿಡಿದೆಡೆವಿಡದೆ" ಕಂಗೊಳಿಸುತ್ತಿದ್ದರು. ಆಗ ಒಳ ರಾಣಿವಾಸದ ಕಾವಲ ಸಂಗಿಯೆಂಬುವಳು ಆ ವಿಚಾರವನ್ನು ತನ್ನ ಒಡತಿಯಾದ ರತ್ನಾಜಿಗೆ ಹೇಳಿ, ಅವಳು ಅಲ್ಲಿಗೆ ಬಂದಿರುವ ರಾಜರನ್ನು ಬಂದು ನೋಡಬೇಕೆಂಬುದಾಗಿ ಪ್ರೇರಿಸಿದಳು. ಆಪ್ತ ದೂತಿಯ ಮಾತಿ ನಂತೆಯೇ ರತ್ನಾಜಿ ವಿವಿಧ ಆಭರಣಗಳಿಂದ ಅಲಂಕೃತಳಾಗಿ "ಉರಗ ವಿಲಾಸಿನಿ ಸುರಸುದತಿಯರೊಡನಿರದೆ ಚೆಲ್ವಿಗೆ ಪೋರಲೆಂದು ಭರದಿಂದಾಗಸಕೆಯ್ದುವಂತೆ" ಉಪ್ಪರಿಗೆಯನ್ನೇರಿ ಕುಳಿತಳು. ಕರುಮಾಡದಲ್ಲಿ ಕುಳಿತಿದ್ದ ಈ ಕಾಮಿನಿಯನ್ನು ಕಂಡು ಅಲ್ಲಿ ಅಡ್ಡಾಡುತ್ತಿದ್ದ ಕಾಮುಕರು ಕಂಗೆಟ್ಟರು. ಶೂಲದ ಹಬ್ಬವನ್ನು ನೋಡುವುದನ್ನು ಮರೆತು ಆಕೆಯನ್ನೇ ಸಿಟ್ಟಿಸುತ್ತಿದ್ದರು. ರತ್ನಾಜಿಯಾದರೋ ನೆಲನೀದಂತೆ ಅಲ್ಲಿ ನೆರೆದಿದ್ದ ಅರಸರನ್ನು ಕಂಡು ಅವರು ಯಾರು ಯಾರೆಂಬುದಾಗಿ ಸಂಗಿಯನ್ನು ಕೇಳಿದಳು. ಸಂಗಿ ಒಬ್ಬೊಬ್ಬರನ್ನಾಗಿ

ಪರಿಚಯಮಾಡಿಕೊಟ್ಟಳು. ಅಲ್ಲಿ ರಾಯದುರ್ಗದ ರಾಮದೇವ, ಉದಯಗಿರಿಯ ಸಂಗಮದೇವ, ಪೆನುಗೊಂಡೆಯ ಪಾಪರಾಜ, ಕೊಪಣದ ತಿಮ್ಮರಾಜನ ಮಗ, ಗಂಡಿಕೋಟೆಯ ಗಂಗರಾಜ, ಆದವಾನಿಯ ನರಹರಿ, ಗುತ್ತಿಯ ಕಾಚಯ್ಯ, ತೊರೆಗಲ್ಲ ಜಾಯಿಜಕ್ಕಿಯ ಬೊಮ್ಮ, ಅಣ್ಣ ಭೈರವದೇವ, ಕಾಟಣ್ಣ, ಅಳಿಯ ಭಾವ ಸಂಗಮ. ಕಂಪಿಲನ ಮೋಹದ ರಾವುತನಾದ ಮಾಯಿದೇವ, ಕಂಪಿಲನ ಮೈಗಾವಲ ಭಟನಾದ ಸಾಯಿದೇವ, ಡಿಳ್ಳಿಯ ಖಾನರ ಗಂಡನೆಂಬ ಬಿರಿದುಳ್ಳ ಕೊಳ್ಳಿಯನಾಗ, ಗಿಂಡಿಯ ಲಕ್ಕ, ಕಾಳಾಂಜಿಯ ಕಂಪ, ದೇವಿಶೆಟ್ಟಿಯ ಲಿಂಗ, ಝುಲ್ಲಿಪಿಲ್ಲಿಯ ನಾಗ, ಭಂಡಾರದ ಹರಿಹರ, ಭಂಡಾರದ ಬುಕ್ಕಣ್ಣ ಮೊದಲಾದವರು ಬಂದು ಸೇರಿದ್ದರು. ರತ್ನಾಜಿ ಇವರನ್ನೆಲ್ಲ ನೋಡಿ ತಿಳಿಯುವ ಸಮಯಕ್ಕೆ "ಅಲರ್ವಿಲ್ಲಿಲ್ಲದಂಗಜನಂತೆ, ಬಜ್ಜರದಲಗಿಲ್ಲದಮರೇಂದ್ರನಂತೆ ಕಲೆಯಿಲ್ಲದಿಂದುವಿನಂತೆ" ಅಲಘು ವಿಕ್ರಮನಾದ ರಾಮನಾಥನು ಅಲ್ಲಿಗೆ ಬಂದನು.

ಕುಮಾರರಾಮನನ್ನು ಕಂಡ ರತ್ನಾಜಿಗೆ "ಆರಿವನಿಂದ್ರನೊ ನಳನೊ ಜಯಂತನೊ ಮಾರನೊ ನಳಕೂಬರನೊ ವಾರಿಜನಾಭನೊ ರವಿಯೊ ಶಶಿಯೊ" ಎಂಬಂತಾಯಿತು. "ಶಿವಶಿವ ನರಜನ್ಮದೊಳಗಿಂತಪ್ಪರು ದ್ಭವಿಸಿದರುಂಟೆ ಲೋಕದೊಳು" ಎಂದು ಅಂದುಕೊಂಡಳು. ಸಾಲದ್ದಕ್ಕೆ ಮನ್ಮಥನು ಇದೇ ಸಮಯವನ್ನರಿತು ತನ್ನ ಉಪಟಳವನ್ನೂ ಮಾಡಿದನು. ರತ್ನಾಜಿಗೆ "ಅಱಿವಱಿತುದು, ಲಜ್ಜೆ ನೆಱೆ ತಗ್ಗಿದುದು, ಧೈರ್ಯ ಬಿಱು ತೋಡಿತು. ಅಂಗಭವಾಗ್ನಿ ಗಱಿಗಟ್ಟಿತು." ಒಡತಿಯ ಈ ಅವಸ್ಥೆಯನ್ನು ಕಂಡ ಸಂಗಿ "ಏಕಿದಾರಿಂದಾಯಿತು ನಿನಗೀ ಮದನಾತಿರೇಕ [ಮಾನಿನಿ] ನನ್ನೊಡನೆ ಏಕಾಂತದೊಳೊರೆ ನಿನಗಾನಲ್ಲದೆ ಬೇಕಾದವರು ಬೇಱುಂಟೆ" ಎಂದು ವಿಚಾರಿಸತೊಡಗಿದಳು. ಹೆಂಗಸರಿಗೆ ಹಾಗಾಗುವುದೇನೂ ಅಸಂಭವವಲ್ಲವೆಂದೂ "ಸೂಜಿಕಲ್ಲನು ಸೇರಿ ಕಂಡ ಕರ್ಬೊನ್ನು ತನ್ನೋಜೆ ತಪ್ಪದೆ ಸುಮ್ಮನಿಹುದೆ, ಸಂಪೂರ್ಣಚಂದ್ರನ ಕಂಡೊಸರದ ಸಸಿಗಲ್ಲುಂಟೆ ಲಲಿತಾಂಗಿ, ರವಿಯಕಾಣುತ ರಾಜೀವವರಳದದು ಹವಣಿಗಿಹುದೆ ಹರಿಣಾಕ್ಷಿ, ಕಣ್ಣುವಿಡಿದವನ ಕಂಡೊಡೆ ಬೆಂಕಿಯೊತ್ತಿನ ಬೆಣ್ಣೆಯಂತನರಂತರಂಗ" ಎಂಬುದಾಗಿಯೂ ಉತ್ತೇಜನಕರವಾದ ಮಾತುಗಳನ್ನೇ ಆಡಿದಳು. "ನಿನ್ನೆದೆಗೋಂಟೆಯ ಕೋಳುಗೊಂಡವನೆನ್ನೊಡನೆ(ಹೇಳು)"ಎಂಬುದಾಗಿಯೂ, ಆತನನ್ನು ಲೀಲಾಮಾತ್ರದಿಂದ ತಂದು ಆಕೆಯ ಅಡಿಗಳ ಮೇಲೆ ಕೆಡಹುವುದಾಗಿಯೂ ಭರವಸೆಯಿತ್ತಳು. ಅನಂತರ ರತ್ನಾಜಿ ಕುಮಾರರಾಮನನ್ನು ತೋರಿಸಿ "ಶೂಲದ ಹಬ್ಬದೊಳಿ[ಕೈ]ಂದ್ರಜಾಲಿಕನಿಂದ್ರಜಾಲದೊಳಗೆ ತೋಱಿಸಿದ ಮೇಲಣ ಲೋಕದ ಪುರುಷನೊ ಮರ್ತ್ಯನೊ ಪೇಳಿವನಾರು ಪೆಣ್ಮಣಿಯೆ" ಎಂಬುದಾಗಿ ಕೇಳಿ, ಆತನ ರೂಪು ರಮಣೀಯತೆಗಳನ್ನು ಬಗೆಬಗೆಯಾಗಿ ಬಣ್ಣಿಸಿದಳು. ಕುಮಾರರಾಮನ ಅವಯವಾದಿಗಳ ಅನುಪಮ ಸೌಂದರ್ಯವನ್ನು ಸವಿಸ್ತಾರವಾಗಿ ಚಿತ್ರಿಸಿದಳು. ಸಂಗಾಯಿಗೆ ಅವನು ಗೊತ್ತುಂಟೋ ಇಲ್ಲವೋ ಎಂದು ಶಂಕಿಸಿ, "ಕುಱಿತಾನು ಕೇಳಿದ ನೃಪರ ಪೆಸರನೆನಗಱುಪಿದೆ ಕೆಳದಿ ನೀನವನ ಕುಱುಹನಱಿಯೆ ಕೇಳಿಬಂದು ಪೇಳೆಂದವಳೆಱಗಿದಳವಳಡಿಗಳಿಗೆ." ಅನಂತರ ಸಂಗಾಯಿ ತನ್ನ ಒಡತಿಯನ್ನು ಎತ್ತಿ, ಬಿಗಿಯಪ್ಪಿಕೊಂಡು "ಎನ್ನಯ ಮುತ್ತೆ ಕೇಳೀ ನೃಪಸುತನ ವೃತ್ತಾಂತವನು" ಎಂದು ಅತ್ಯಂತ ಸಂತೋಷದಿಂದ ಬಿತ್ತರಿಸಿದಳು. "ಆತನೇ ಸುರುತಾಳನ ಖಾನರೆಲ್ಲರನ್ನೂ ಸದೆಬಡಿದವರ ಅಧಿನಾಯಕ. ನೇಮಿಖಾನನ ಸೊಕ್ಕುಮುರಿದವನು. ಸುರುತಾಳ, ಬಲ್ಲಾಳ, ನವಲಕ್ಕ ತೆಲುಗರನ್ನು ಯುದ್ಧದಲ್ಲಿ ಹಿಮ್ಮೆಟ್ಟಿಸಿದನು. 'ಚೆಲುವರ ಗಂಡ, ಗಂಡರ ಗಂಡ' ಎಂಬ ಬಿರುದುಳ್ಳ ವೀರಭಟನಾದ ಚೆನ್ನಿಗರಾಮ. ಹರಿಹರದೇವಿಯ ಮೋಹದ ಕಂದ. ಏಕಾಂಗ ವೀರ. ಪರಬಲ ವಿಕ್ರಮಭೀಮ. ಈತನಿಗೆ ಗತಯುಗದ ಪಾರ್ಥ, ಕರ್ಣರು ಮಾತ್ರವೇ ಸಾಟಿಯಾದವರು. ಈತನು ಮುರಹರನಲ್ಲ, ಮುಕ್ಕಣ್ಣನಲ್ಲ, ಇಂದ್ರನಲ್ಲ, ಅರಲಂಬನಲ್ಲ, ಕೃತಕದ ಪುರುಷನಲ್ಲ. ಅವನೀಶ್ವರ ಕಂಪರಾಯನ ಸುತ. ನಳನಲ್ಲ. ನಳಕೂಬರನಲ್ಲ, ನಾಕಿಗಳೊಳಗೊರ್ವನಲ್ಲ, ಕಂಪಿಲನ ಕುಲದೀಪಕ ರಾಮ. ವೀರರುದ್ರನ ಬಲವನ್ನು ಕೈಯಾರೆ ಕೊಂದು ಓಡಿಸಿದ ವೀರಾಗ್ರಣಿ ರಾಮ. ಬಲ್ಲಾಳ ಭೂಮೀಶ್ವರನ ಮಹಾ

ಬಲವೆಲ್ಲವನ್ನೂ ರಣರಂಗದಲ್ಲಿ ಕೊಲ್ಲದ ಕೋಲೆಯ ಕೊಂದವನು. ತುರುಕರ ಬಲವನ್ನು ಸಮರಾಂಗಣದಲ್ಲಿ ಸಂಹರಿಸಿ ರಾಯನ ಮೆಚ್ಚಿಸಿದ ಧುರಧೀರ ರಾಮು. ಸುರುತಾಳನ ಮಗಳು ಈತನನ್ನು ವರಿಸಬೇಕೆಂದು ಬಯಸಿ ಬೇರೆ ಯಾರನ್ನೂ ಒಲ್ಲದವಳಾಗಿದ್ದಾಳೆ" ಎಂಬುದಾಗಿ ಸಂಗಿ ಕುಮಾರರಾಮುನ ವೃತ್ತಾಂತವನ್ನೆಲ್ಲ ಒಡತಿಗೆ ಹೇಳಿದಳು. ರತ್ನಾಜಿಗೆ ಮದನತಾಪ ಮತ್ತಷ್ಟು ಮಿಗಿಲಾಯಿತು. "ಹಿಂದಣ ಜನ್ಮದ ಕಣ್ಬೇಟವೆರ್ದೆಯನೆಯಿ ತಂದಾ ವರಿಸಲವನನು ನಿಂದು ನಿಟ್ಟಿಸಿದಳು ನಿಖಿಲೇಂದ್ರಿಯಗಳನೊಂದಿಸಿದಳು ನೋಟದೊಳಗೆ." ಆಕೆಯ ತಾಪವನ್ನು ತಡೆಯಲಾರನೋ ಎಂಬಂತೆ ಸೂರ್ಯನು ಅಸ್ತಮಿಸಿದನು.

ಕುಮಾರರಾಮುನು ಶೂಲಗಳಿಗೆ ನಮ.ಸ್ಕರಿಸಿ, ಇತರ ರಾಜಕುಮಾರರೊಂದಿಗೆ ಅರಮನೆಗೆ ತೆರಳಿದನು. ಇತ್ತ ರತ್ನಾಜಿಗೆ ವಿರಹವೇದನೆ ಕ್ಷಣ ಕ್ಷಣಕ್ಕೂ ಹೆಚ್ಚಾಗಲಾರಂಭಿಸಿತು. ಸಂಗಿಯನ್ನು ಏಕಾಂತದಲ್ಲಿ ಕರೆದು, ರಾಮುನನ್ನು ಉದ್ದೇಶಿಸಿ, "ಮಾಱುವೋದೆನು ಕೇಳವನಕೂಡದೊಡಿರಲಾಱೆನು ಕೆಳದಿ ನಿನ್ನಾಣೆ" ಎಂಬುದಾಗಿ ತನ್ನ ಸಂಕಟವನ್ನು ನಿವೇದಿಸಿಕೊಂಡಳು. ಕಡೆಗೆ " ಈ ವಿರಹಾನಲವು ಇಂದು ನಾಳೆಯಲ್ಲಿ ತಗ್ಗುವುದೆಂದು ಎಣಿಸಬೇಡ. ಅವನನ್ನು ಸೇರುವವರೆಗೆ ಹೃದಯವನ್ನು ದಹಿಸದೆ ಬಿಡದು" ಎಂದು ಹೇಳಿ, ಮನಮೆಚ್ಚಿದ ಪ್ರಿಯನನ್ನು ಕೂಡಿ ಸುಖಿಸುವುದೇ ಸ್ತ್ರೀಧರ್ಮವೆಂದು ತನ್ನ ಸಂಕಟವನ್ನು ಸಮರ್ಥಿಸಿದಳು. ಪಾತಿವ್ರತ್ಯ ವೆಂಬುದು ಕೇವಲ ಅನಿವಾರ್ಯವಾದಾಗ ಮಾತ್ರ ವ್ಯಕ್ತವಾಗುವ ಗುಣವೆಂದೂ, ಶ್ರೀರಾಮನು ಸಕಲಗುಣ ಸಂಪನ್ನನಾಗಿದ್ದುದರಿಂದ ಸೀತೆಯ ಮನಸ್ಸು ಅಚಲವಾಗಿತ್ತೆಂದೂ, ಇಂತೆಯೇ ಪಂಚಪತಿಗಳಿಂದ ತನ್ನ ಕಾಮೋದ್ರೇಕವನ್ನು ಪರಿಹರಿಸಿಕೊಳ್ಳುತ್ತಿದ್ದ ಅಗ್ನಿಜೆಗೆ, ಉಳಿದವರು ಪುರುಷಾಧಮರೆನ್ನಿಸಿ ಪಾತಿವ್ರತ್ಯಕ್ಕೆ ಕಟ್ಟುಬಿದ್ದವಳೆಂದೂ, ಪಾರ್ವತಿಯನ್ನುಳಿದು, ಸರಸ್ವತಿ, ಮಹಾಲಕ್ಷ್ಮಿ, ಸುರಕಾಂತೆಯರನ್ನು ಪತಿವ್ರತೆಯ ರೆಂದು ಹೇಳಬಹುದೆ ಎಂದೂ ವಿತಂಡವಾದವನ್ನು ಹೂಡಿದಳು. "ನುಡಿದಿನ್ನು ಫಲವೇನು ರಾಮುನಿರ್ದೆಡೆಗೆನ್ನ ನಡೆನಡೆಯೆಂದಿಂದ್ರಿಯಗಳು ಪಿಡಿದೆಳೆವುತಿವೆ ಪೇಳಕ್ಕ ತಕ್ಕುದನು" ಎಂದು ಸಂಗಿಯ ಪಾದಗಳಿಗೆ ನಮ ಸ್ಕರಿಸಿದಳು. ಒಡತಿಯ ಸಂಕಟವನ್ನು ಕಂಡ ಸಂಗಿ ಆಕೆಯನ್ನು ಮೇಲೆತ್ತಿ, ಅಪ್ಪಿಕೊಂಡು, ಸಂತೈಸುತ್ತ "ನಿನ್ನೊಡಲ ಬಳಿಯ ನೆಳಲೆನಗೆ ಮಡದಿಯೇಕಿನಿತುಪಚಾರವಂಜದಿರು ನಿನ್ನಡಿ[ಗಳಿಗೆಱಗಿಪೆ]ನವನ" ಎಂದು ಭರವಸೆಯನ್ನು ನೀಡಿದಳು. ಕಂಚಿಯ ಕಾಮಾಕ್ಷಿಯನ್ನು ಬಲಗೊಂಡು, ಹೆಣ್ಣಿನ ಪುಣ್ಯದೇವತೆಯಾದ ಪಂಪಾದೇವಿಯ ಕೃಪೆಯನ್ನು ಪಡೆದು, ಮಣಿಮಂತ್ರವೆಂಬ ಔಷಧಿಯಿಂದ, ಕುಟಿಲದೇವತೆಗಳ ಸಹಾಯ ದಿಂದ ಆತನನ್ನು ವಶಪಡಿಸಿಕೊಂಡು ತಂದು ಆಕೆಯ ಕಾಲಿಗೆರಗಿಸುವುದಾಗಿ ದಿಟ್ಟತನದಿಂದ ಮಾತನಾಡಿದಳು. ಈ ಮಾತುಗಳನ್ನು ಕೇಳಿದ ರತ್ನಾಜಿಯ ಅಂತರಂಗ "ಅಗ್ನಿಯ ಮೇಲೆ ತುಪ್ಪದ ತುಂತುಱು ಬಿದ್ದಂತೆ, ಅಂಗಜಾಗ್ನಿ ಪೊಗೆವುತೋರಂತೆ ಪೆರ್ಚಿದುದು." ಬೀಸಣಿಗೆಯ ಗಾಳಿ ನಿಟ್ಟುಸಿರಿನ ಬೆಂಕಿಯಿಂದ ಕೇಸುರಿ ಯಾಯಿತು ; ಸೂಸುವ ಪನ್ನೀರು ಕಾದೆಸರಾಯಿತು. ಸಂಗಿ ಒಡತಿಗೆ ಶಿಶಿರೋಪಚಾರ[ಮಾಡಲು ಅರಮನೆಯ ಉಪವನಕ್ಕೆ ಕರೆದೊಯ್ದಳು. ಪಂಪಾಂಬಿಕೆಯನ್ನು ಕುರಿತು. ಒಡತಿಯ ವಿರಹಾಗ್ನಿಯನ್ನು ತವಿಸುವಂತೆ ಬಗೆಬಗೆಯಾಗಿ ಹರಕೆಗಳನ್ನು ಹೊತ್ತಳು. ಅನಂತರ, ಮಂತ್ರಾಕ್ಷರದಿಂದ ಮೆಲ್ಲಮೆಲ್ಲನೆ ವಿಷವಿಳಿಯುವಂತೆ, ರತ್ನಾಜಿಯ ವಿರಹೋದ್ವೇಗ ಕಡಮೆಯಾಗತೊಡಗಿತು. ಚೇತರಿಸಿಕೊಂಡ ರತ್ನಾಜಿ ರಾಮನ ಮುಖಪದ್ಮ ವನ್ನು ಕಾಣದೆ "ಇರುಳಿನ ಜಕ್ಕವಕ್ಕಿಯ ಪೆಂಡತಿಯಂತಳಲಿದಳು." ಎಷ್ಟಾದರೂ ಹಿಂದಿನ ಜನ್ಮದಲ್ಲಿ ಗಣಿಕೆಯಾಗಿದ್ದವಳಲ್ಲವೇ ? ಈ ಹುಟ್ಟಿನಲ್ಲಿಯೂ ಆ ಗುಣವು ತಲೆದೋರದೆ ಇದ್ದೀತೆ ? ಪುನಃ ಪುನಃ ಕಂಗೆಡಲಾರಂಭಿಸಿದಳು. ಆಗ ಸಂಗಿ ಮತ್ತೆ ಭರವಸೆಯಿತ್ತು, ಆಕೆ ತನ್ನ ತಾಪವನ್ನು ಪ್ರಕಟಪಡಿಸದೆ ಇರಬೇಕೆಂದು ಸಲಹೆಯಿತ್ತಳು. ಆಗ ರತ್ನಾಜಿ "ಅಕ್ಕಾಜಿ ! ನಿನ್ನಾಣೆ. ಸಂದೇಹವಿಲ್ಲದೆ ನನ್ನ ಬಯಕೆ ನಿನ್ನಿಂದ ನೆರವೇರುವುದು " ಎಂದು ಸಮಾಧಾನಮಾಡಿಕೊಂಡು ಉಪವನದಿಂದ ತನ್ನ ಸೆಜ್ಜೆವನೆಗೆ ಹಿಂತಿರುಗಿದಳು.

## ರತ್ನಾಜಿಯ ಅಳಿಪು

ಉರ್ವಶಿಯಾಗಿದ್ದಂದು ಅರ್ಜುನನನ್ನು ಒಡಗೂಡಲಾಗದೆ, ಆ ವಿರಹವೇ ಇಂದು ವೆಗ್ಗಳಿಸಿತೋ ಎಂಬಂತೆ ರತ್ನಾಜಿ ರಾಮನಿಗಾಗಿ ವಿಪರೀತವಾಗಿ ಹಂಬಲಿಸತೊಡಗಿದಳು. ಸಂಗಿಯನ್ನು ಕುರಿತು, ರಾಮನ ಬಳಿಗೆ ಹೋಗಿ, ಹೇಗಾದರೂ ಮಾಡಿ ಆತನು ಒಡಂಬಡುವಂತೆ ಮಾಡಬೇಕೆಂದು ವಿಜ್ಞಾಪಿಸಿಕೊಂಡಳು. ಜಾಣೆಯಾದ ಸಂಗಿ, ಹಾಗೆ ನಾವಾಗಿ ನಾವು ಆತುರಪಡುವುದು ಸೂಕ್ತವಲ್ಲವೆಂದೂ, ಆ ಮೂಲಕ ಪುರುಷರು ನಮಗೆ ಒಲಿಯುವುದಕ್ಕೆ ಬದಲಾಗಿ ನಾವೇ ಅವರ ಪರಿಹಾಸಕ್ಕೆ ಗುರಿಯಾಗಬೇಕಾಗುವುದೆಂದೂ ಬುದ್ಧಿವಾದ ವನ್ನು ಹೇಳಿದಳು. ಮಹಾರಾಣಿ ಬಹಳ ಎಚ್ಚರಿಕೆಯಿಂದರಬೇಕೆಂದೂ, ಹಾದರವೆಂಬುದು ಸದರವಲ್ಲವೆಂದೂ, ಸಾವಿಗೆ ಸಮಾನವೆಂದೂ ಹೇಳಿದಳು. "ಹಾದರ ಖಡ್ಗಧಾರೆಯ ಜೇನೆಯ್ಯನೊಲಿದು ಸೇವಿಸುವಂತೆ" ಎಂದು ವರ್ಣಿಸಿ, ಪಿಸುಣರು ಯಾವ ಯಾವ ರೀತಿಯಲ್ಲಿ ಕೇಡನ್ನು ಬಗೆಯುವರೆಂಬುದನ್ನು ವಿಶದಪಡಿಸಿದಳು. ದೂತಿಯ ಮಾತುಗಳಿಗೆ ತಲೆದೂಗಿ ರತ್ನಾಜಿ "ಜೀವ ನಿನ್ನದು ದೇಹ ನಿನ್ನದೆನಗೆ ಬಂದ ನೋವು ನಿನ್ನದು" ಎಂದು ಉತ್ತರವಿತ್ತು ಸಂಪೂರ್ಣವಾಗಿ ಆಕೆಯನ್ನು ನಂಬಿದಳು. ಸಂಗಿ ಒಡತಿಯ ಮಾತಿಗೆ ಮೆಚ್ಚಿ, ತನಗೆ ಎಲ್ಲ ಕುಟಿಲದೇವತೆಗಳೂ ಒಲಿದಿರುವರೆಂದೂ ಅವರ ಸಹಾಯದಿಂದ ರಾಮನನ್ನು ಖಂಡಿತವಾಗಿಯೂ ವಶ ಪಡಿಸಿಕೊಂಡು ಬರುವುದಾಗಿಯೂ ನುಡಿದಳು. ಅಲ್ಲದೆ ಹೆಣ್ಣಿಗೆ ಒಲಿಯದ ಋಷಿಗಳೇ ಇಲ್ಲದ ಮೇಲೆ ರಾಮನ ಮನವೊಲಿಸುವುದು ಅಸಾಧ್ಯವಲ್ಲವೆಂದು ತಿಳಿಸಿದಳು. ರತ್ನಾಜಿಯ ಸೌಂದರ್ಯವಾದರೂ ಅಸದೃಶ ವಾದುದೆಂದು ಕೊಂಡಾಡಿದಳು. ರತ್ನಾಜಿಯ ರೂಪು ಲಾವಣ್ಯಗಳನ್ನು ಕಂಡು ತನಗೆ ಉಂಟಾದ ವಿರಹಾಗ್ನಿ ಯನ್ನು ತಡೆಯಲಾರದೆ ವಿಷ್ಣು ಕ್ಷೀರಸಮುದ್ರವನ್ನು ಆಶ್ರಯಿಸಿರುವನಂತೆ! ಆಕೆಯನ್ನು ಕಂಡು ಈಶ್ವರನಿಗೆ ಮದನತಾಪವುಂಟಾಗಲು ಆತನು ತಲೆಯಲ್ಲಿ ಗಂಗೆಯನ್ನು ಧರಿಸಿಕೊಂಡಿರುವನಂತೆ! ಇದೇ ರೀತಿಯಾದ ಸಂಕಟಕ್ಕೆ ಒಳಗಾಗಿ ಬ್ರಹ್ಮನು ಅರಸಂಚೆಯನ್ನೇರಿ, ಕೆರೆ, ತೊರೆ, ಹಳ್ಳಗಳಲ್ಲಿ ಸಂಚರಿಸುತ್ತಿರುವನಂತೆ! ಮದನ ನಂತೂ ಆಕೆಯ ಹೃದಯದಲ್ಲಿಯೇ ಬಂದು ಬೀಡು ಬಿಟ್ಟಿದ್ದಾನಂತೆ! ಇದು ದೇವತೆಗಳ ಪಾಡಾದರೆ, ಲಕ್ಷ್ಮಿ, ಶಾರದೆ, ಗಿರಿಜೆ, ರತಿ ಮತ್ತು ಇತರ ಅಪ್ಸರಸ್ತ್ರೀಯರೂ ಕೂಡ ಹೀಗೆಯೇ ಒಂದೊಂದು ಬಗೆಯಾಗಿ ಬಾಧೆಗೆ ಒಳಗಾಗಿದ್ದಾರೆ. ರತ್ನಾಜಿಯನ್ನು ಕಂಡ ಸ್ತ್ರೀಯರಿಗೆ ತಾವು ಪುರುಷರಾಗಬಾರದಿತ್ತೆ ಎನ್ನಿಸಿತಂತೆ! ಪೂರ್ವದಲ್ಲಿ ಆ ಪಾಂಚಾಲಿಯೇ ಕರ್ಣನನ್ನು ಬಯಸಿದಳೆಂದ ಮೇಲೆ, ರತ್ನಾಜಿ ರಾಮನನ್ನು ಆಶಿಸುವುದು ಯಾವ ರೀತಿ ಯಲ್ಲೂ ನಿಂದಾರ್ಹವಲ್ಲ ಎಂದಳು. ಆ ಚೆಲುವನನ್ನು ತಪ್ಪದೆ ತಂದೊಪ್ಪಿಸುವುದಾಗಿ ಹೇಳಿ ಸಂತೈಸಿದಳು. ಒಡತಿಯ ಅಪೇಕ್ಷೆಯಂತೆ ಸಂಗಿ ಕಟ್ಟಕಡೆಗೆ "ಎಂದು ರಾಮನ ನಿನ್ನ ಮುಂದೆ ನಿಲಿಸುವೆನಾನಂದುತನಕ ರತ್ನಾಜಿ ಮಿಂದೊಡೆ ಮುಡಿಯ ಕಟ್ಟಿದೊಡುಟ್ಟ ಸೀರೆಯ ಕಂದ ಕಳೆದೊಡೆ ನಿನ್ನಾಣೆ" ಎಂದು ಶಪಥವನ್ನೂ ಮಾಡಿ ದಳು. ಬಳಿಕ, ರತ್ನಾಜಿ ರಾಮನನ್ನೇ ಚಿಂತಿಸುತ್ತ, ಮನಸ್ಸಿನಲ್ಲಿಯೇ ಭಾವರತಿಯನ್ನು ಅನುಭವಿಸಲಾರಂಭಿಸಿ ದಳು. ಹಾಗೆಯೇ ನಿದ್ದೆ ಹತ್ತಿತು. ಮನಸ್ಸಿನಲ್ಲಿದ್ದ ರಾಮನೇ ಕನಸಿನಲ್ಲಿಯೂ ಸುಳಿದನು. "ಮಲಯಾನಿಲ ನಂತೆ ಸೋಂಕಿ, ಪಾರಿವದಂತೆ ನಲಿದು, ಲಾವುಗೆವೆಣ್ಣಿನಂತೆ ಗಳರವದೋಜು" ಕನಸಿನಲ್ಲಿ ಕೂಡಿ ರಮಿಸಿದಳು. ಬೆಳಗಾಗಲು ಎಚ್ಚರವಾಯಿತು. ರಾಮನನ್ನು ಕಾಣದೆ ತಲ್ಲಣಿಸಿದಳು. ಮತ್ತೊಮ್ಮೆ ಕಣ್ಮುಚ್ಚಿ ರಾಮನನ್ನು ಕಾಣಲು ಪ್ರಯತ್ನಿಸಿ ವಿಫಲಳಾದಳು, ತಾನು ಕಂಡದ್ದು, ಕನಸೋ ನನಸೋ ಎಂದು ಸಂದೇಹಪಟ್ಟಳು. ಏಕೆಂದರೆ, "ಮನ ಮೂರ್ಛೆಯಿದೆ, ನೈಗಂಪನವಿದೆ, ರೋಮಾಂಚನವಿದೆ,..............ನಿಟ್ಟಿಸುವೊಡೆ ಕೂಟದಂತಿದೆ" ಎನ್ನಿಸಿತು. ಕೊಟಡಿಯಲ್ಲಿ ಏನಾದರೂ ಅಡಗಿಕೊಂಡಿರುವನೇನೋ ಎಂದು ಶಂಕಿಸಿ, ಹುಡುಕಾಡಿ, ರಾಮನನ್ನು ಕಾಣದೆ ಕಂಗೆಟ್ಟಳು. ಕಡೆಗೆ, ಕನಸಿನಲ್ಲಿ ಕಂಡ ರಾಮನನ್ನು ತನ್ನ ಆಪ್ತಸಖಿ ಕರೆತಾರದೆ ಇರಳೆಂದು ತನಗೆ ತಾನೇ ಸಮಾಧಾನ ಮಾಡಿಕೊಂಡಳು. ಮಹಾರಾಜನು ಬಂದು, ತನ್ನ ಅವಸ್ಥೆಯನ್ನು ಕಂಡು ಸಂದೇಹಪಡಬಹುದೆಂದು ಹಾಸಿಗೆ ಬಿಟ್ಟೆದ್ದಳು. ಸಂಗಿಯ ಎಚ್ಚರಿಕೆಯ ಮಾತುಗಳಂತೆ ತನ್ನ ವಿರಹವನ್ನು ಮುಚ್ಚಿಡಲು ತೊಡಗಿದಳು.

ಓಲಗದಲ್ಲಿ ಊಳಿಗದವರು ಮಹಾರಾಣಿಯ ಮನಸ್ಸನ್ನು ಸಂತೋಷಪಡಿಸಲು ಎಂದಿನಂತೆಯೇ ನಾನಾ ರೀತಿಗಳಲ್ಲಿ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು. ರತ್ನಾಜಿಯ ಮನಸ್ಸು ಸಂಪೂರ್ಣವಾಗಿ ಕಾಮಪರವಶವಾಗಿದ್ದುದರಿಂದ, ಅವಳಿಗೆ ಆ ವಿಲಾಸಸಾಧನಗಳಾವುವೂ ಸಮಾಧಾನವನ್ನು ನೀಡುತ್ತಿರಲಿಲ್ಲ. "ಚಿಂತೆಯೆ ಸಖಿ, ಚಿತ್ತದಾತುರನೇ ದೂತಿ, ಸಂತಾಪವೇ ಭೋಗವಸ್ತು, ಕಂತುಶರವೆ ತಲ್ಪವಾಗಿರಲಾ ನೃಪ ಕಾಂತೆಯಿರ್ದಳು ವಿರಹದಲಿ." ಆ ವೇಳೆಗೆ ಕಂಪಿಲನು ಬರಲು ಆತನೊಂದಿಗೆ ಸಿಂಹಾಸನದಲ್ಲಿ ಮಂಡಿಸಿದಳು. ರತ್ನಾಜಿ ಅತ್ಯಂತ ಚಾತುರ್ಯದಿಂದ ಗಂಡನೊಂದಿಗೆ ಒಂದೊಂದೇ ಮಾತುಗಳನ್ನಾಡುತ್ತಿದ್ದಳು. "ನೋಟ ಗಂಡನ ಮೇಲೆ ನೋಟದ ಸವಿ ಮನದಾಟವವನ ಮೇಲವಳ ಬೇಟ ಗಂಡನ ಕೂಡೆ ಬೇಟದ ಬೆದೆ ಬೇಱೆ ನಾಟಹುದೆದೆಯಾಣ್ಮನೊಡನೆ" ಎಂಬಂತೆ ವರ್ತಿಸುತ್ತಿದ್ದಳು. ರಾಯನ ಅಪೇಕ್ಷೆಯಂತೆ ವೈಯಾರದಿಂದ ವೀಣೆಯನ್ನು ಬಾರಿಸಿದಳು. ಅನಂತರ ಕಿನ್ನರಿ ಬಾರಿಸಿದಳು. ಬಳಿಕ ದಂಡಿಗೆವಿಡಿದು ಹಾಡಿದಳು. ಅಂತೂ ಈ ರೀತಿಯಾಗಿ ತನ್ನ ಅಂತರಂಗವನ್ನು ಸ್ವಲ್ಪವೂ ಪ್ರಕಟಪಡಿಸದೆ ಆಕೆ ಕಂಪಿಲನ ಮನಸ್ಸನ್ನು ಸಂತೋಷಪಡಿಸಿ, ಆನಂದವನ್ನು ನಟಿಸಿದಳು. ಕಂಪಿಲನು ಓಲಗದಿಂದ ಎದ್ದು ಅತ್ತ ತೆರಳಲು, ಇತ್ತ ರತ್ನಾಜಿಗೆ ವಿರಹವೇದನೆ ಮರುಕಳಿಸಿತು. ಆಕೆ ಅರಮನೆಯಲ್ಲಿ ಹಿತವನ್ನು ಪಡೆಯಲಾಗದೆ ಉಪವನಕ್ಕೆ ಬಂದಳು. ಅಲ್ಲಿಯೂ ಮನಸ್ಸು ಸ್ತಿಮಿತಕ್ಕೆ ಬರಲಿಲ್ಲ. ಆಗ ಆಕೆ "ಕಾವನ ಕಾಲಾಟವಿಲ್ಲದೆಡೆಗಳನು ಹೂವಿನಂಬಿಲ್ಲದೆಡೆಯನು ಭಾವವ ಸೂಱೆಗೊಂಡನ ಮಱೆವಾಟವನಾ ವಧು ಕಾಣದಂಜಿದಳು." "ಬಿಱುಬಿಸಿಲಿಂದುಱೆ ಬೇವೆಳಲತೆಯೆಡೆಗಱಿಸಿ ಬರ್ಪಂತೆ ನೀರ್ವೊನಲು" ಸಂಗಿ ರತ್ನಾಜಿಯ ಬಳಿಗೆ ಬಂದಳು. ಅಲ್ಲಿದ್ದ ಸೇವಕಿಯರನ್ನು ಒಬ್ಬೊಬ್ಬರಿಗೆ ಒಂದೊಂದು ನೆಪ ಹೇಳಿ ಕೊಟ್ಟು ಕಳುಹಿಸಿದಳು. ಒಡತಿಯನ್ನು ಕುರಿತು "ನಿನಗೆ ನೀತಿಮಾತುಗಳನ್ನು ಹೇಳುವುದೆಂದರೆ ಪರಿಮಳದ ಇಂಪನ್ನು ದುಂಬಿಗೆ ಹೇಳಿದಂತಾಗುವುದು" ಎಂದಳು. ಆಗ ರತ್ನಾಜಿ ತನ್ನ ಸಂಕಟವು ಸಹಿಸಲಸಾಧ್ಯವಾದುದು ಎಂಬುದಾಗಿ ಉತ್ತರವಿತ್ತಳು. ಸಂಗಿ ಪಂಪಾಂಬಿಕೆಯ ಮಾಹಾತ್ಮ್ಯೆಯನ್ನು ವಿವರಿಸಿ ಹೇಳಿದಳು. ಜೊತೆಗೆ ತನ್ನಂಥವಳ ಚಾತುರ್ಯವೂ ಇರಬೇಕಾದರೆ ಸ್ವಲ್ಪವೂ ಚಿಂತಿಸಬೇಕಾದುದಿಲ್ಲವೆಂದು ತಿಳಿಸಿದಳು. ರತ್ನಾಜಿ ಸಂಗಿಯನ್ನು "ರಾಮನನ್ನು ಯಾವ ರೀತಿ ಒಲಿಸಿಕೊಳ್ಳುತ್ತೀಯೆ?" ಎನ್ನಲು, ಆಗ ಆಕೆ ರಾಮನಿಗೆ ರತ್ನಾಜಿಯ ಮೇಲೆ ಮೋಹವುಂಟಾಗುವಂತೆ ಮಾಡುವ ತನ್ನ ಚಾತುರ್ಯವನ್ನೆಲ್ಲ ನಿರೂಪಿಸಿದಳು. ಹಾದರಕ್ಕಿಂತಲೂ ಹಿರಿದಾದುದು ಇಲ್ಲವೆಂದೂ, ಭೋಗವಸ್ತುಗಳು ತಾವಾಗಿಯೇ ಭೋಗಿಯನ್ನು ಹುಡುಕಿಕೊಂಡು ಬಂದಾಗ ಅವುಗಳನ್ನು ನಿರಾಕರಿಸುವುದು ತಕ್ಕುದಲ್ಲವೆಂದೂ, ದೇವಾನುದೇವತೆಗಳೂ ಹಾದರವನ್ನು ಬಿಟ್ಟವರಲ್ಲವೆಂದೂ, ಹಾಗೆ ಸುಖಪಡುವವನು ಜಾಣನೇ ಸರಿಯೆಂದೂ ಹೇಳಿ ರಾಮನನ್ನು ಒಲಿಸುವುದಾಗಿ ತಿಳಿಸಿದಳು. ಈ ಸವಿನುಡಿಗಳನ್ನಾಲಿಸಿ ರತ್ನಾಜಿಗೆ ತುಂಬ ಸಂತೋಷವಾಗಿ "ಬಂದನು ಮಾನವ ಮದನ ನನ್ನೆಡೆಗಿನ್ನು ಸಂದೇಹವಿರದು ನಿನ್ನಾಣೆ ಇಂದುವದನೆ ನಿನ್ನ ಮನಕೆ ಬಂದಂತೆ ಮಾಡು" ಎಂದು ಅವಳ ಪಾದಗಳಿಗೆ ನಮಸ್ಕರಿಸಿದಳು.

ಸಂಗಾಯಿ ಒಡತಿಯನ್ನು ಬೀಳ್ಕೊಂಡು ವನದೆಡೆಗೆ ಬಂದು, ಮಿಂದು, ಮಡಿಯುಟ್ಟು, ಕುಟಿಲದೇವತೆಗಳನ್ನು ಆರಾಧಿಸತೊಡಗಿದಳು. ಕೊಲ್ಲಾಪುರದ ದೇವಿ, ಕಂಚಿಯ ಕಾಮಾಕ್ಷಿ, ಚಂಡಿ, ಭೈರವಿ, ಚಾಮುಂಡಿ, ಮೊದಲಾದ ನಾನಾ ದೇವತೆಗಳನ್ನು ಬಗೆಬಗೆಯಾಗಿ ಪೂಜಿಸಿದಳು. ಅವಳ ಉಗ್ರ ತಪಸ್ಸನ್ನು ಕಂಡು ಆ ದೇವತೆಗಳು ಒಲಿದರು. ಆಕೆಯ ಇಷ್ಟಾರ್ಥವೇನೆಂದು ಕೇಳಲು, ಸಂಗಿ "ಹೇಳುವುದೇನು ಕುಮಾರರಾಮಗೆ ರತ್ನಿ ಬೇಳಾದಳಾ ರಾಮನವಳ ಮೇಲಿಕ್ಕುವಂತಾಗಬೇಕು" ಎಂದು ಕೇಳಿಕೊಂಡಳು. ಆ ಮಾತುಗಳನ್ನು ಆಲಿಸಿದ ದೇವತೆಗಳು "ಆ ಗುಣನಿಧಿಯನವಳ ಮೇಲಿಕ್ಕಿಪುದಾಗದೆಮಗೆ ನಾವವನ ಬೇಗದಿಂ ತಂದು ಕೊಟ್ಟಪೆವಾಕೆಯ ಶಯ್ಯಾಗೃಹಕೆ" ಎಂದು ಉತ್ತರವಿತ್ತರು. ಸಂಗಿ ಅಷ್ಟಕ್ಕೇ ಸಂತುಷ್ಟಳಾಗಿ, "ಮಲಗುವ ಮನೆಗೆ ಬಂದರೆ ಸಾಕವನನಾ ಲಲಿತಾಂಗಿಯ ಲಾವಣ್ಯ ತಲೆಕೆಳಗಾಗಿಸದಿರದು" ಎಂದುಕೊಂಡು, ತನ್ನ

ಒಡತಿಯ ಬಳಿಗೆ ಹಿಂತಿರುಗಿದಳು. ಒಡತಿಗೆ ದೇವತೆಗಳ ಅನುಗ್ರಹವನ್ನು ತಿಳಿಸಲು ಅದನ್ನು ಕೇಳಿ ರತ್ನಾಜಿ ಹಿಗ್ಗಿದಳು. ಆದರೆ ಅಲ್ಲಿಯವರೆಗೆ ತಾನು ಮನಸ್ಸನ್ನು ಹೇಗೆ ಬಿಗಿಹಿಡಿದಿಡುವುದೆಂದು ಪ್ರಶ್ನಿಸದೆ ಬಿಡಲಿಲ್ಲ. ಸಂಗಿ ನಿರ್ವಾಹವಿಲ್ಲದೆ ಚಿತ್ರಕಾರರಿಂದ ರಾಮನ ಭಾವಚಿತ್ರವನ್ನು ಬರೆಯಿಸಿ, ಒಡತಿಗೆ ತಂದೊಪ್ಪಿಸಿದಳು. ರತ್ನಾಜಿಯ ಪಾಲಿಗೆ ಅದು ನಿರ್ಜೀವವಾದ ಚಿತ್ರವೆನ್ನಿಸಲಿಲ್ಲ. ಅದನ್ನು ಪರಿಪರಿಯಾಗಿ ಮಾತಾಡಿಸಿ, ಮುದ್ದಿಡಲಾರಂಭಿಸಿದಳು. ಎಷ್ಟಾದರೂ "ಚೇತನಾಚೇತನವೆಂಬ ವಿವೇಕ ಕಾಮಾತುರಶೀಲರಿಗುಂಟೆ?" ಒಂದಲ್ಲ ಒಂದು ಬಗೆಯಿಂದ ತನ್ನ ಮನದ ಕಾಮೋದ್ರೇಕವನ್ನೆಲ್ಲ ಆ ಚಿತ್ರದ ಮುಂದೆ ತೋಡಿಕೊಂಡಳು. ವಿವಿಧ ರೀತಿಯಲ್ಲಿ ವಿಹ್ವಲಳಾದಳು. ಏಕಾಂತಸುಖವನ್ನು ಸವಿದು, ಸರಸ ಸಲ್ಲಾಪಗಳಲ್ಲಿ ತೊಡಗಿ, ತಾನೆಣಿಸಿದಂತೆ ಆ ಚಿತ್ರವು ವರ್ತಿಸದೆ ಹಾಗೆಯೇ ತಟಸ್ಥವಾಗಿರಲು ತುದಿಮೊದಲಿಲ್ಲದೆ ತಲ್ಲಣಿಸಿದಳು. ಆ ವೇಳೆಗೆ ಸಂಗಿ ಮತ್ತೆ ಅಲ್ಲಿಗೆ ಬಂದಳು. ಒಡತಿಗೆ ಭರವಸೆಯ ಮಾತುಗಳನ್ನು ಹೇಳಿ, "ರಾಮನು ಬಂದಾಗ ಆವನನ್ನು ಹೇಗೆ ಒಲಿಸಿಕೊಳ್ಳುತ್ತೀಯೆ?" ಎಂದು ಕೇಳಿದಳು. ಕಾಮಾತುರಳಾದ ರತ್ನಿ ದೀರ್ಘವಾಗಿಯೇ ಉತ್ತರವಿತ್ತಳು. ಒಲಿದುಬಂದ ಹೆಣ್ಣನ್ನು ಕಡೆಗಣಿಸುವುದು ಪುರುಷತನವಲ್ಲವೆಂದೂ, ವಾವೆ ವಯಸ್ಸುಗಳು ಮುಖ್ಯವಲ್ಲವೆಂದೂ, ವಾದಿಸುವುದಾಗಿ ತಿಳಿಸಿದಳು. ಅಲ್ಲದೆ, ಕಂಪಿಲದೇವನಿಗೆ ಹರಿಹರದೇವಿಯೊಬ್ಬಳೇ ಪಟ್ಟದರಸಿಯೆಂದೂ, ತನ್ನನ್ನು ರಾಮನಿಗೆಂದೇ ಹೇಳಿ, ಮೋಸಮಾಡಿ ತಾನೇ ಮದುವೆಮಾಡಿಕೊಂಡು ಸೆರೆಯಲ್ಲಿಟ್ಟಿರುವನೆಂದು ಹೇಳುವುದಾಗಿಯೂ ನುಡಿದಳು. ರಾಮನಿಗೆ ರಾಜ್ಯದಾಸೆ, ಮೋಹದಾಸೆಗಳನ್ನು ಉಂಟುಮಾಡುವುದಾಗಿ ಹೇಳಿದಳು. ಒಡತಿಯು ಒಂದೊಂದು ಮಾತನ್ನೂ ಕೇಳಿ ಬಾಯಿ ತುಂಬ ಶ್ಲಾಘಿಸಿ "ನುಡಿಸಿ ನೋಡಿದೆನಲ್ಲದೆ ರಾಮಗೇಕಿನಿತೊಡಬಡಿಕೆಯ ಮಾತು ನಿನ್ನ ಕಡೆಗಣ್ಣ ನೋಟದ ಬೆಳ್ಪಳಗಿನ ಕಟ್ಟಕಡೆ ಸಾಲದೆ ಕಮಲಾಕ್ಷಿ" ಎಂದು ಭರವಸೆಯ ಮಾತುಗಳನ್ನು ಆಡಿದಳು.

ರತ್ನಾಜಿಯ ವಿರಹಾಗ್ನಿ ಒಳಗೊಳಗೇ ದಹಿಸುತ್ತಿರಲು ಆಕೆ "ಚಿನ್ನದ ನೀರು ಪೊಱಗೆ ಪೊರೆದಿರ್ದ ಕರ್ಬೊನ್ನದ ಪುತ್ಥಳಿಯಂತೆ" ಕಂಡುಬಂದಳಂತೆ! "ವಾರಣ ನುಂಗಿದ ಬೆಳಗಾಯಂತಾ ವಾರಿಜ ನೇತ್ರೆಯೆದೆ ಯೊಳು ಸಾರವಡಗಿ ಕಾಮಾಗ್ನಿಯಿಂ ರಾಮನ ದೂರಿಸುತಿರ್ದಳು." ಒಲಿಯುವತನಕ ಹೆಂಗಸರಿಗೆ ಸಂಯಮ; ಒಲಿದಮೇಲೆ ಅವರು "ನೀರ ಮೇಲಣ ತೆಪ್ಪದಂತೆಳೆದ ಕಡೆಗೆ" ಬರುವರು. ಮ್ಲಾನವದನಳಾಗಿದ್ದ ಪ್ರಿಯ ಪತ್ನಿಯನ್ನು ಕಂಡು ಕಂಪಿಲನು ವ್ಯಾಕುಲಗ್ರಸ್ತನಾದನು. ಕಾರಣವೇನೆಂದು ಬಗೆಬಗೆಯಾಗಿ ವಿಚಾರಿಸಿದನು. ರತ್ನಾಜಿ ಹೃದಯದ ಕಾತರವನ್ನು ಮುಚ್ಚಿಟ್ಟು "ಐದಾಱು ದಿನ ಮೊದಲೆನ್ನಯ ಮೆಯ್ಗೆ ಅಸುವಿಲ್ಲೇ ಕೆಂದಱಿಯೆ" ಎಂದು ಬಿನ್ನಾಣದ ಮಾತುಗಳನ್ನು ಆಡಿದಳು. ಕಂಪಿಲನು ವೈದ್ಯರನ್ನು ಕರೆಸಿ ಕೇಳಲು, ಅವರು ಆಕೆಗೆ ಮನೋವೇದನೆಯಾಗಿದೆಯೆಂದು ಹೇಳಿದರು. ಮಹಾರಾಜನು ಪ್ರೀತಿಯಿಂದ ಆಕೆಯ ಚಿತ್ತವ್ಯಾಧಿಗೆ ಕಾರಣವೇನೆಂದು ಕೇಳಿದನು. ರತ್ನಾಜಿ ತಾನು ಪಟ್ಟದರಸಿಯಲ್ಲದ ಪ್ರಯುಕ್ತ ತನ್ನನ್ನು ಕಂಡರೆ ಯಾರಿಗೂ ಲಕ್ಷ್ಯವಿಲ್ಲವೆಂದು ತಿಳಿಸಿದಳು. ರಾಜನು "ಅದಕ್ಕಾಗಿ ಚಿಂತಿಸಬೇಡ, ಎಲ್ಲರೆದುರಿನಲ್ಲಿ ನಿನಗೇ ಪಟ್ಟಕಟ್ಟುವೆನು. ಅಲಂಕೃತಳಾಗು; ಇದೋ ಆಭರಣಗಳು" ಎಂದು ಸಮಾಧಾನ ಮಾಡಿ ತನ್ನ ಓಲಗಕ್ಕೆ ಹೊರಟನು.

## ಕಂದುಕ ಕ್ರೀಡೆ

ಕಂಪಿಲನ ಓಲಗವು ಬಹಳ ವೈಭವದಿಂದ ಕೂಡಿತ್ತು. ತುರುಕ, ಕನ್ನೋಜಿ, ಕನ್ನಡ, ಲಾಳದ ಬಂಟರುಗಳಿದ್ದರು. ವಂದಿಮಾಗಧರು ಆತನನ್ನು ಹೊಗಳುತ್ತಿದ್ದರು. ಕವಿಗಳು ಕೊಂಡಾಡತೊಡಗಿದರು. ಆ ವೇಳೆಗೆ ಬೇಟೆಯವನೊಬ್ಬನು ಬಂದು "ಮೃಗಗಳು ಬಂದು ತಳಿಯೊಳಗೆ ಬಿದ್ದಿವೆ. ಕೂಡಲೇ ಬೇಟೆಗೆ ಹೊರಡಬೇಕು" ಎಂದು ವಿನಂತಿಮಾಡಿಕೊಂಡನು. ಅನಂತರ ರಾಜನು ಶಬರನಾಯಕರನ್ನು ಬರಮಾಡಿ

ಕೊಂಡು ಬೇಟೆಗೆ ತೆರಳಲು ಉದ್ಯುಕ್ತನಾದನು. ಕಂಪಿಲನು ಆಜ್ಞೆಮಾಡುವುದೇ ತಡ, "ಕತ್ತಲೆ ಬಹು ರೂಪನಾಂತುದೊ, ನೀಲಾದ್ರಿ ಪೆತ್ತುದೊ, ಕಾರಮೇಘಗಳಾ ತತ್ತಿಗಳೊ" ಎಂಬಂತೆ ಶಬರರ ಸಮೂಹ ಬಂದು ಸೇರಿತು. ಅವರು ತಮ್ಮ ತಮ್ಮ ಆಯುಧಗಳು, ಪಳಗಿದ ಮೃಗಗಳೊಂದಿಗೆ ಸಿದ್ಧರಾದರು. ಕಂಪಿಲನು "ಬರಹೇಳು ಮಗ ರಾಮುನನು" ಎಂದು ಹೇಳಿಕಳುಹಿಸಿ, ಅತ್ಯಂತ ಸಂಭ್ರಮದಿಂದ ದುರ್ಗವಿಳಿದು ಬೇಟೆಗೆ ಹೊರಟನು.

ಇತ್ತ ಕುಮಾರರಾಮನು ತನ್ನ ತಂದೆಯ ಜೊತೆಯಲ್ಲಿ ಬೇಟೆಗೆ ಹೊರಡಬೇಕೆಂದು ಅಣಿಯಾಗುತ್ತಿರಲು, ಕುಟಿಲ ದೇವತೆಗಳು ಯಾವುದೋ ಸಂಚನ್ನು ಹೂಡಿ, ಅವನ ಮನಸ್ಸನ್ನು ಕದಲಿಸಿದರು. ಅವನು ಬೇಟೆಗೆ ತೆರಳದೆ, ತನ್ನ ಜೊತೆಗಾರರೊಂದಿಗೆ ಕೂಡಿ ತುಂಗಭದ್ರಾನದಿಗೆ ನೀರಾಟಕ್ಕಾಗಿ ಬಂದನು. ದೇವಲೋಕದ ಗಂಗೆಯಂತೆಯೂ, ಅಪಾರವಾದ ಸಾಗರದಂತೆಯೂ ಇದ್ದ ತುಂಗಭದ್ರೆಯಲ್ಲಿ ಸಾಯಂಕಾಲವಾಗುವತನಕ ಒಂದೇ ಸಮನೆ ಸಂಗಡಿಗರೊಂದಿಗೆ ಕ್ರೀಡಿಸಿದನು. ಚಂದ್ರೋದಯವಾಯಿತು. ಚಂದ್ರನು "ಕೆಂಗವಸಣಿಗೆ ಯನು ಉಗಿದಂಗಜನ ಕೈಯ ಚಕ್ರರತ್ನದ ಚೆಲ್ವಿನೊಗುವಿಗೆಯಂತಂಬರದೊಳು" ಕಂಡುಬಂದನು. ಅರಣ್ಯ ದಲ್ಲಿದ್ದ ಶಬರಿಯರು ತಮ್ಮ ತಮ್ಮ ನಲ್ಲರನ್ನು ಕಾಣುತ್ತ ಆನಂದಿಸಿದರು. ಸರಸ ಸಲ್ಲಾಪಗಳಿಂದ ಸುಖಿಸಿ ದರು. ಕಂಪಿಲನು ಬಳಲಿದ್ದರಿಂದ ನಿದ್ರಾದೇವಿಗೆ ವಶನಾದನು.

ಆ ಬೆಳುದಿಂಗಳಿನಲ್ಲಿ ಕುಮಾರರಾಮನಿಗೆ, ಹಗಲಿನ ಆಯಾಸವನ್ನು ಪರಿಹರಿಸುವ ಸಲುವಾಗಿಯೂ, ವಿನೋದಾರ್ಥವಾಗಿಯೂ ಪುರಪ್ರದಕ್ಷಿಣೆ ಮಾಡಿಕೊಂಡು ಬರಬೇಕು ಎನ್ನಿಸಿತು. ತನ್ನ ಗೆಳೆಯರೊಂದಿಗೆ ಹೊರಟನು. ಊರಿನ ಅಂಗಡಿಬೀದಿಯನ್ನೂ ಅಲ್ಲಿ ಹೂಮಾಲೆ ಕಟ್ಟುತ್ತಿದ್ದವರ ಸೌಂದರ್ಯವನ್ನೂ ವೀಕ್ಷಿ ಸುತ್ತ ಸೂಳೆಗೇರಿಗೆ ಬಂದನು. ಅಲ್ಲಿ ಕೇಳಬೇಕೆ! ಅಲ್ಲಿನ ವಿಚಿತ್ರ ವ್ಯಾಪಾರವನ್ನು ಕಂಡು, ನಿರ್ವಿಕಾರದಿಂದ ಆಲಿಸುತ್ತ, ಅರಮನೆಗೆ ಹಿಂತಿರುಗಿದನು. ತನ್ನ ಸೆಜ್ಜೆವನೆಯ ಮೃದುತಲ್ಪದಲ್ಲಿ ಪವಡಿಸಿದನು.

ಬೆಳಗಿನ ಜಾವದಲ್ಲಿ, ಚಂದ್ರಾಸ್ತಮಯವಾಗುತ್ತಿರಲು, ರಾಮನಿಗೆ ಒಂದು ಕನಸಾಯಿತು. ರೂಪವತಿ ಯಾದ ಹೆಣ್ಣೊಬ್ಬಳು ಬಂದು ಅವನನ್ನು ಪೀಡಿಸಿ, ಹಿಡಿದುಕೊಂಡಳು. ರಾಮನು ಆಕೆಯನ್ನು ನಿರಾಕರಿಸಿ ದನು. ಆಕೆಯ ಕೈಯಿಂದ ಹೇಗೋ ಪಾರಾಗಲು, ಆಕೆಯ ಪತಿಯ ಸೇವಕನೊಬ್ಬನು ಬಂದು ರಾಮನನ್ನು ಸೆರೆಯಲ್ಲಿಟ್ಟನು ಅನಂತರ ಇತರ ಕೆಲವರು ಬಂದು ರಾಮನನ್ನು ಬಿಡಿಸಿದರು. ಅವನಿಗೆ ರಾಜ್ಯಾಭಿಷೇಕ ವಾಯಿತು. ಆ ವಿಚಿತ್ರಸ್ವಪ್ನದಿಂದ ಎಚ್ಚತ್ತ ರಾಮನು ಅದನ್ನು ತನ್ನ ನಲ್ಲೆಗೆ ತಿಳಿಸಿದನು. ಆಕೆ ಅದರ ಫಲಾ ಫಲಗಳನ್ನು ಆಲೋಚಿಸಿ, ರಾಮನಿಗೆ ಯಾವ ಹೆಂಗಸಿನಿಂದಲೋ ಒಂದು ಕಂಟಕವು ಸಂಭವಿಸುವುದೆಂದೂ, ಅನಂತರ ಅದು ಪರಿಹಾರವಾಗಿ ಆತನು ರಾಜ್ಯಲಕ್ಷ್ಮಿಯ ಕೈ ಹಿಡಿಯುವನೆಂದೂ ಹೇಳಿದಳು. ಅಷ್ಟು ಹೊತ್ತಿಗೆ, ವಂದಿಮಾಗಧರು ಬಂದು ರಾಮನಿಗೆ ಪರಾಕು ಹೇಳಿದರು. ಕುಮಾರರಾಮನು ಎದ್ದು, ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು, ದೇವತಾರ್ಚನೆಯನ್ನು ಮಾಡಿ, ಸರ್ವಾಭರಣಗಳಿಂದ ಅಲಂಕೃತನಾಗಿ, ಸಿಂಹಾಸನವನ್ನೇರಿ ಕುಳಿತು, ಓಲಗವನ್ನು ನಡೆಸಲು ಆರಂಭಿಸಿದನು.

ಇತ್ತ, ಸಂಗಿ ಕುಟಿಲದೇವತೆಗಳು ರಾಮನನ್ನು ತನ್ನ ಒಡತಿಗೆ ತಂದೊಪ್ಪಿಸುವ ಕಾಲವು ಬಂದಿತೆಂದು ಊಹಿಸಿ, ರತ್ನಾಜಿಯನ್ನು ಅಲಂಕಾರಮಾಡಿಕೊಂಡು ಸಿದ್ಧವಾಗಿರುವಂತೆ ಸಲಹೆಯಿತ್ತಳು. ಸಖಿಯ ಮಾತಿ ನಂತೆಯೇ ಆಕೆ ವಿವಿಧ ಆಭರಣಗಳನ್ನು ಧರಿಸಿಕೊಂಡು, ಎಂಥವರ ಮನಸ್ಸನ್ನಾದರೂ ಕದಲಿಸುವ ಮದನನ ಆನೆಯಂತಿದ್ದಳು. ಆಕೆಯ ಅನುಪಮ ಸೌಂದರ್ಯವನ್ನು ಕಂಡೂ ಕಂಡು ಸಂಗಿ, ಇನ್ನು ರಾಮನು ಒಲಿಯದೆ ಇರನೆಂದು ಎಣಿಸಿ, ಅವನೇನು "ವ್ಯಾಸಸುತನೊ ವಾಯುಪುತ್ರನೊ ಯೋಗಾಭ್ಯಾಸಯುತನೊ ಪೇಳು" ಎಂಬುದಾಗಿ, ರತ್ನಾಜಿಗೆ ಸಂತಸವಾಗುವಂತೆ ಮಾತನಾಡಿದಳು.

ಓಲಗದಲ್ಲಿದ್ದ ಕುಮಾರರಾಮನಿಗೆ ಕುಟಿಲದೇವತೆಯರ ಪ್ರೇರಣೆಯಿಂದ ಚೆಂಡಾಟವಾಡಬೇಕು

ಎನ್ನಿಸಿತು. ಕೂಡಲೆ ತನ್ನ ಗೆಳೆಯರಿಗೆ ಹೇಳಲು, ಅವರು ಬೇರೆ ಬೇರೆ ಊರುಗಳಿಂದ ಅನೇಕ ರಾಜಕುಮಾರರು ಬಂದಿರುವ ಆ ವೇಳೆಯೇ ಆಟಕ್ಕೆ ತಕ್ಕುದೆಂದು ಸಮ್ಮತಿಸಿದರು. ಅಲ್ಲದೆ, ಹರಿಹರದೇವಿಯ ಬಳಿಯಲ್ಲಿ, ಮುಮ್ಮಡಿ ಸಿಂಗನ ಕಾಲದ ಮುತ್ತಿನ ಚೆಂಡು ಇರುವುದೆಂದೂ, ಅದನ್ನು ರಾಮನು ತರಬೇಕೆಂದೂ ಸಲಹೆ ಮಾಡಿದರು. ಅದೇ ಮೇರೆಗೆ, ಕುಮಾರರಾಮನು ತನ್ನ ತಾಯಿಯ ಬಳಿಗೆ ಬಂದನು. ಮಗನನ್ನು ಕಂಡು ಸಂತೋಷಗೊಂಡ ಅವಳು "ನಾಯಕನಾಗಿಳೆಗಾಚಂದ್ರತಾರಾಸ್ಥಾಯಿಯಾಗರಿಗಳ್ಗೆ ಜಯವ ಈಯದ ಲೋಭಿ ನೀನಾಗು" ಎಂದು ಹರಸಿದಳು. ಬಳಿಕ "ಸುರುತಾಳನ ದಂಡುಂಟೊ, ಬಲ್ಲಾಳನ ಬರವುಂಟೊ, ಓರುಗಲ್ಲವನ ಹರಿದಾಟವುಂಟೊ, ಕದನವುಂಟೊ ಕಪಿಲೇಶ್ವರನ" ಎಂದು ಕೇಳಿದಳು. ಕುಮಾರನು ಅವುಗಳು ಯಾವುವೂ ಇಲ್ಲವೆಂದು ಹೇಳಿ "ಹೊತ್ತು ಹೋಗದು ಚೆಂಡಾಟಕೆ ಮನವೆಳಸಿತ್ತು ಮುಮ್ಮಡಿಸಿಂಗನೃಪನ ಮುತ್ತಿನ ಚೆಂಡ ಬೇಡುವುದಕೆ ಬಂದೆ" ಎಂದು ತನ್ನ ಇಂಗಿತವನ್ನು ವ್ಯಕ್ತಪಡಿಸಿದನು. ಆ ಮಾತುಗಳನ್ನು ಆಲಿಸಿದ ಹರಿಹರದೇವಿಗೆ ಆತಂಕವುಂಟಾಯಿತು. ಮಗನಿಗೆ ಬಗೆಬಗೆಯಾಗಿ ಬುದ್ಧಿವಾದವನ್ನು ಹೇಳಲು ತೊಡಗಿದಳು. "ಶತ್ರುಗಳು ಸರ್ವದಾ ಎದುರು ನೋಡುತ್ತಿರುವರು. ಸೋತ ಒಬ್ಬೊಬ್ಬರೂ ಸಮಯ ಕಾಯುತ್ತಿರುವರು. ಬಾದುರನಿಗೆ ಆಶ್ರಯವಿತ್ತು ಸುರುತಾಳನ ಸಂಗಡ ವಿರಸ ಕಟ್ಟಿಕೊಂಡಿರುವೆ. ಇಂದಲ್ಲ ನಾಳೆ ಯುದ್ಧ ತಪ್ಪಿದ್ದಲ್ಲ. ರಾಜಕುಮಾರರು ಆಡಬಾರದಂಥ ಆಟವನ್ನು ಆಡಿ ಕೈ ಕಾಲುಗಳನ್ನು ಕಳೆದುಕೊಂಡರೆ, ಆಗದವರು ತುರುಕರನ್ನು ಎತ್ತಿ ಕಟ್ಟದೆ ಇರುತ್ತಾರೆಯೆ? ಹಿತೈಷಿಗಳ ಮಾತನ್ನು ಕೇಳದೆ ಧರ್ಮರಾಯ, ದುರ್ಯೋಧನ, ಶ್ರೀರಾಮ, ಮೊದಲಾದವರು ಅನುಭವಿಸಿದ ಪಾಡನ್ನು ಕೇಳಿಲ್ಲವೆ? ಆದ್ದರಿಂದ, ಚೆಂಡಾಟವು ಸರ್ವಥಾ ಕೂಡದು" ಎಂದು ಒತ್ತಿ ಒತ್ತಿ ಹೇಳಿದಳು. ತಾಯಿಯ ಮಾತುಗಳನ್ನೆಲ್ಲ ಕೇಳಿದ ರಾಮನು "ಅಮ್ಮ! ನಿನ್ನ ಮಾತುಗಳು ನನಗೆ ಮಂತ್ರಸಮಾನವೇ ಸರಿ. ಚೆಂಡನ್ನು ತರುವೆನೆಂದು ಹೇಳಿ, ರಾಜಕುಮಾರರನ್ನು ಹೊರಗೆ ನಿಲ್ಲಿಸಿ ಬಂದಿರುತ್ತೇನೆ. ನಾನು ಆಟವಾಡದೆ, ಉಳಿದವರು ಆಡುವುದನ್ನಾದರೂ ನೋಡಿ ಸಂತೋಷಪಡುತ್ತೇನೆ. ಆಗಬಹುದೆ?" ಎಂದು ವಿಜ್ಞಾಪಿಸಿಕೊಂಡನು. ಹರಿಹರದೇವಿಗೆ ಮತ್ತೊಂದು ಬಗೆಯಾದ ಶಂಕೆ ತಲೆದೋರಿ "ಅಭಿನವ ಮನಸಿಜ ನಿನ್ನ ತನುವಿನ ಲಾವಣ್ಯರಸದ ಪೊನಲೊಳೀ ನಗರದ ನಳಿನನೇತ್ರೆಯರ ಕಣ್ಮನವಾಳದಿರದಾಟ ಬೇಡ" ಎಂದಳು. ಹೆಂಗಸರ ಕುಟಿಲತನಗಳನ್ನೆಲ್ಲ ಬಣ್ಣಿಸಿದಳು. "ಹೆಣ್ಣಿನಿಂದ ಬಹುದು ನಿನಗೆ ಕಂಟಕ" ಎಂದು ಎಚ್ಚರಿಸಿದಳು. ಹಿಂದೆ ನಡೆದ ಅನೇಕ ಸಂದರ್ಭಗಳನ್ನು ಉದಾಹರಿಸಿದಳು. ಆಗಲೂ ರಾಮನು ನಗುನಗುತ್ತ "ಪರವನಿತೆಯರೆನಗನುಜಾಗ್ರಜೆಯರು ನಿನ್ನಾಣೆ" ಎಂದು ನುಡಿದು ತನ್ನ ಶಪಥವನ್ನು ಸಾರಿ ಹೇಳಿದನು. ಹರಿಹರದೇವಿ ನಿರ್ವಾಹವಿಲ್ಲದೆ ಮಗನ ಮಾತಿಗೆ ಕಟ್ಟುಬಿದ್ದು "ಸಿರಿಯನುಜಾತ ಚಂದ್ರನನಾತ್ಮಸುತಗೈಸರಲಗೆ ಸಲಹೆಂದು ತಂದು ಕರದೊಳೀವಂತೆ" ಮುತ್ತಿನ ಚೆಂಡನ್ನು ತಂದುಕೊಟ್ಟಳು. "ನಡೆ ಜಯಶೀಲ ನೀನಾಗು" ಎಂದು ಹರಸಿ ಕಳುಹಿಸಿಕೊಟ್ಟಳು.

ತಾಯಿಯಿಂದ ಚೆಂಡನ್ನು ಪಡೆದ ರಾಮನು, ಸ್ನೇಹಿತರ ಸಲಹೆಯ ಮೇರೆಗೆ, ರತ್ನಾಜಿಯ ಅರಮನೆಯ ಬಳಿ ಆಟವಾಡಲು ಬಂದನು. ಚೆಂಡಾಟವಾಡಲು ಹೋಗುತ್ತಿದ್ದ ಅವನ ಅಂದ ಚೆಂದಗಳನ್ನು ಕಂಡು ಊರಿನ ನಾರಿಯರೆಲ್ಲ ತಬ್ಬಿಬ್ಬಾದರು. ರಾಮನು, ಭಾವಸಂಗಮನು ಒಂದು ಪಕ್ಷಕ್ಕೆ ಮುಂದಾಳಾಗಿಯೂ, ತಾನು ಮತ್ತೊಂದು ಪಕ್ಷಕ್ಕೆ ಮುಂದಾಳಾಗಿಯೂ ಇರತಕ್ಕುದೆಂದು ನಿಶ್ಚಯಿಸಿದನು. ಭಾವಸಂಗಮನು ಆರಿಸಿಕೊಂಡು ಬಿಟ್ಟವರನ್ನು ತನ್ನ ಕಡೆಗೆ ಸೇರಿಸಿಕೊಂಡನು. ಎರಡು ತಂಡಗಳೂ ಅಣಿಯಾದಮೇಲೆ ಆಟ ಮೊದಲಾಯಿತು. ಊರಿನವರೆಲ್ಲ ನೆರೆದು ನೋಡುತ್ತಿದ್ದರು. ಆಟದ ಗದ್ದಲ ರತ್ನಾಜಿಗೂ ಕೇಳಿ ಬಂದಿತು. ಆಕೆ ಸಂಗಿಯನ್ನು ಕೇಳಲು ಅವಳು ರಾಮನು ತನ್ನ ಸ್ನೇಹಿತರೊಂದಿಗೆ ಚೆಂಡಾಟವಾಡುತ್ತಿರುವನೆಂದೂ, ರತ್ನಿಯ ಇಷ್ಟಾರ್ಥವು ಕೈಗೂಡುವ ಕಾಲ ಸಮೀಪಿಸಿತೆಂದೂ ಹುರಿದುಂಬಿಸಿ ಮಾತನಾಡಿದಳು. ಗಾಳಿ ಸುಳಿಯಲೂ ಎಡೆಯಿಲ್ಲದಂತೆ ರಾಮನು ತನ್ನವರನ್ನು ಹಂಚಿದ್ದನು. ಎರಡು ಕಡೆಗಳವರೂ ಮೈಮರೆತು

ಆಟವಾಡುತ್ತಿದ್ದರು. ಚೆಂಡನ್ನು ಹಿಡಿದು ನಿಂತಿದ್ದ ರಾಮನು ಒಮ್ಮೆ ಪುಂಡರೀಕಾಕ್ಷನಂತೆಯೂ, ಒಮ್ಮೆ ಹೂವಿನ ಚೆಂಡನ್ನು ಹಿಡಿದ ಮನ್ಮಥನಂತೆಯೂ ತೋರಿಬರುತ್ತಿದ್ದನು. ರಾಮನ ಹೊಡೆತವನ್ನು ತಡೆಯುವುದೇ ಕಷ್ಟವಾಗುತ್ತಿತ್ತು. ಭಾವ, ಭಾವಮೈದುನರ ಆಟ ಬಿರುಸಾಯಿತು. ಪರಸ್ಪರ ಪೈಪೋಟಿ ಮಿಗಿಲಾಯಿತು. ಕಡೆಗೆ ಸಂಗಮದೇವನು ತರಹರಿಸಲಾರದೆ ಬಳಲಿದನು. ಕುಮಾರರಾಮನು ಆವೇಶದಿಂದ ಬಲವಾಗಿ ಲಗ್ಗೆ ಹೊಡೆಯಲು ಆ ಚೆಂಡು ಆಕಾಶದ ಕಡೆಗೆ ಸಿಡಿದು, ಕುಟಿಲ ದೇವತೆಯರ ಚಾತುರ್ಯದಿಂದ ಮರಳಿ ಬಾರದೆ ಹಾಗೆಯೇ ಹೋಗಿ ರತ್ನಾಜಿಯ ಬಳಿಯಲ್ಲಿ ಬಿದ್ದಿತು. ತಾನಾಗಿ ಬಯಸಿಬಂದಂತೆ ಬಂದು ಬಿದ್ದಿದ್ದ ಚೆಂಡನ್ನು ನೋಡಿ, ಆಕೆಗೆ ಮದನ ತಾಪ ಮೇರೆ ಮೀರಿತು.

## ರತ್ನಾಜಿಯ ಪ್ರಕರಣ

ರಾಮನಿಗಾದರೋ ಚಿಕ್ಕಮ್ಮನ ಅರಮನೆಯಿಂದ ಚೆಂಡನ್ನು ತರುವುದು ಹೇಗೆಂದು ಚಿಂತೆ ಮೊದಲಾಯಿತು. ನೋಡಿದವರು ಏನನ್ನುತ್ತಾರೆಯೋ, ಚಿಕ್ಕಮ್ಮನು ಏನಂದುಕೊಳ್ಳುತ್ತಾಳೆಯೋ, ತಂದೆ ಕಂಪಿಲನು ಏನು ತಪ್ಪು ಬಗೆಯುತ್ತಾನೆಯೋ ಎಂಬುದಾಗಿ ಶಂಕಿಸಿದನು. ತಾಯಿ ಹರಿಹರದೇವಿಯ ಹಿತೋಕ್ತಿಗಳು ನೆನಪಾದುವು. ಕಡೆಗೆ ಕಾಟಣ್ಣನನ್ನು ಕರೆದು, ಚಿಕ್ಕಮ್ಮನನ್ನು ಕಂಡು ಚೆಂಡನ್ನು ತರಬೇಕೆಂದು ಕೋರಿದನು. ಕಾಟಣ್ಣನು ರತ್ನಾಜಿಯ ಬಳಿಗೆ ಬಂದನು. ಅವನನ್ನು ಕಂಡ ಆಕೆ ಏನೂ ತಿಳಿಯದವಳಂತೆ, ಬಂದ ಕಾರ್ಯವೇನೆಂಬುದಾಗಿ ಪ್ರಶ್ನಿಸಿದಳು. ಕಾಟಣ್ಣನು ತನ್ನ ಉದ್ದೇಶವನ್ನು ತಿಳಿಸಲು ಚತುರಳಾದ ರತ್ನಿ ತನ್ನ ದೂತಿಯರನ್ನು ಕರೆದು ಅರಮನೆಯ ಉಪವನದಲ್ಲಿ ಎಲ್ಲಾದರೂ ಚೆಂಡು ಬಿದ್ದಿದ್ದರೆ ಹುಡುಕಿ ತರುವಂತೆ ನೇಮಿಸಿದಳು. ಅವರು ಅಲೆದಾಡಿ ಬರಿಗೈಯಲ್ಲಿ ಬಂದರು. ಆ ಕೃತಕವನ್ನು ಅರಿತ ಕಾಟಣ್ಣನು "ಮಕ್ಕಳೊಡನೆ ಮಾಯಾವಿತನವಿದಮ್ಮ, ತಕ್ಕುದೆ ತಾತನರ್ಧಾಂಗಿ ಉಕ್ಕೆವವನು ಬಿಟ್ಟು ಚೆಂಡ ತರಿಸಿ ಕೊಟ್ಟು ದಿಕ್ಕನೆ ಕಳುಹೇಕೆ ತಡವು" ಎಂದು ಮುಚ್ಚುಮರೆಯಿಲ್ಲದೆ ಕೇಳಿಕೊಂಡನು. ರತ್ನಾಜಿಯಾದರೋ ಸಮಾಧಾನದಿಂದಲೇ "ಚೆಂಡೇನೋ ಉಂಟು. ಆದರೆ ಅದನ್ನು ಬೇಡಲು ರಾಮನೇ ಬರಬಾರದೇಕೆ? ನಾನು ಅವನನ್ನು ಚಿಕ್ಕಂದಿನಲ್ಲಿ ಕಂಡದ್ದು. ಇತ್ತೀಚಿಗೆ ದೊಡ್ಡವನಾದ ಮೇಲೆ ನೋಡಿಯೇ ಇಲ್ಲ. ಹರಿಹರದೇವಿ ಬೇರೆ, ನಾನು ಬೇರೆಯೆ? ಮಗನು ತಾಯಿಯ ಮನೆಗೆ ಬರಲು ಏಕೆ ಹಿಂತೆಗೆಯಬೇಕು? ಇದೂ ಅಲ್ಲದೆ, ತಮ್ಮನಾದವನು ಅಣ್ಣನನ್ನು ಹೀಗೆ ಕೆಲಸಕ್ಕೆ ಅಟ್ಟಬಹುದೆ? ನೋಡಿದವರು ಏನಂದಾರು?" ಎಂದು ಬಹು ಜಾಣತನದಿಂದ ಮಾತನಾಡಿದಳು. ಕಾಟಣ್ಣನಿಗೆ ಅವಳ ಮಾತುಗಳೆಲ್ಲವೂ ಸಹಜವೆನ್ನಿಸಿದುವು. ಆ ವೃತ್ತಾಂತವನ್ನು ರಾಮನಿಗೆ ತಿಳಿಸುವೆನೆಂಬುದಾಗಿ ಹೇಳಿ ಹಿಂತಿರುಗಿದನು.

ಕಾಟಣ್ಣನು ಬಂದು, ನಡೆದ ಸಂಗತಿಯನ್ನೆಲ್ಲ ರಾಮನಿಗೆ ತಿಳಿಸಿದನು. ಕುಮಾರರಾಮನಿಗೆ ಮನಸ್ಸು ಅಳುಕಿತು. ತಾನು ಅಣ್ಣನನ್ನು ಅಟ್ಟಿದ್ದು ಉಚಿತವಲ್ಲವೆಂದೂ ಭಾವಿಸಿದನು. ಅನಂತರ ತಾನೇ ಹೊರಟು ಬಂದನು. ರಾಮನು ಬರುತ್ತಾನೋ ಇಲ್ಲವೋ ಎಂದು ಪರಿತಪಿಸುತ್ತಿದ್ದ ರತ್ನಾಜಿಗೆ ಅವನ ಆಗಮನವನ್ನು ಕಂಡು ಹಿಡಿಸಲಾರದಷ್ಟು ಆನಂದವಾಯಿತು. ರಾಮನನ್ನು ಆದರದಿಂದ ಬರಮಾಡಿಕೊಂಡು, ಪರಿಪರಿಯಾಗಿ ಉಪಚರಿಸಿದಳು. ಅವಳ ಒಂದೊಂದು ಚರ್ಯೆಯೂ ರಾಮನಿಗೆ ಆಕೆಯೇ ತನ್ನನ್ನು ಹೆತ್ತ ತಾಯಿಯಾಗಿರಬೇಕು ಎನ್ನಿಸಿತು. ಗಣಪತಿಯೊಬ್ಬನೇ ದ್ವೈಮಾತುರನಲ್ಲ, ಆ ಭಾಗ್ಯವನ್ನು ತಾನೂ ಪಡೆದಿರುವೆನೆಂದು ಹಿಗ್ಗಿದನು. ರತ್ನಾಜಿಯ ಆದರ ಆತಿಥ್ಯಗಳಿಗೆ ಎಲ್ಲೆ ಇಲ್ಲದಂತಾಯಿತು. ಆಕೆಗೋ ನಿಮಿಷ ನಿಮಿಷಕ್ಕೂ ಕಾಮತಾಪ ವೆಗ್ಗಳಿಸುತ್ತಿತ್ತು. ಅದನ್ನು ವ್ಯಕ್ತಪಡಿಸುವುದು ಹೇಗೆಂದು ಅರಿಯಲಾರದೆ ಕಂಗೆಡುತ್ತಿದ್ದಳು. ತನ್ನ ಯಾತನೆ, ವೇದನೆಗಳು ರಾಮನಿಗೆ ತಿಳಿದರೆ, ಮುಂದೇನು ಗತಿ ಎಂಬ ಆತಂಕ ಹೇಳತೀರದು. ಕಡೆಗೆ, ರಾಮನು ರತ್ನಾಜಿಯನ್ನು ಕುರಿತು "ಚಿಕ್ಕಮ್ಮ! ನನಗಾಗಿ ಇಷ್ಟು ಉಪಚಾರವೇಕೆ? ಎಂದಿಗಾದರೂ

ತಾಯಿಯ ವಸ್ತುಗಳು ಮಕ್ಕಳಿಗೆ ತಾನೇ ಮೀಸಲು ! ಸದ್ಯಕ್ಕೆ ನನಗೆ ಚೆಂಡು ಬೇಕಾಗಿದೆ. 'ನಿಂದದೆ ಕಂತುಕ ಕೇಳಿ" ಎಂದನು. ಮಾತಾಡಲು ತವಕಿಸುತ್ತಿದ್ದ ರತ್ನಿ ತಕ್ಷಣವೇ "ಕಂತುಕ ಕೇಳಿ[ಗಿನ್ನೆಲ್ಲಿಗೆ] ಪೋದಪೆ ಕಂತು ಸನ್ನಿಭ ದಿವ್ಯಾಂಗ, ಕಂತುಕೇಳಿಯನೆಸಗೆನ್ನೊಡನೆ" ಎಂದು ಆಡಿಯೇಬಿಟ್ಟಳು. ಆ ವಕ್ರವಚನವನ್ನು ಕೇಳಿ ದೊಡನೆಯೇ ರಾಮನು ಕಿವಿಗಳನ್ನು ಮುಚ್ಚಿಕೊಂಡು, "ಶಿವಶಿವ ಪರಮಪಾತಕ ಬಂದುದು" ಎಂದು ಬಹಳ ಸಂಕಟಪಟ್ಟನು. ಎದ್ದು ಹೊರಟಿದ್ದ ಅವನನ್ನು ರತ್ನಿ ಅಡ್ಡಗಟ್ಟಿ ಹಿಡಿದುಕೊಂಡಳು. ರಕ್ಕಸಿಯಂತೆ ಅವನನ್ನು ಕೆಡವಿ ಮೇಲೆ ಬೀಳಲು ತೊಡಗಿದಳು. ತಾಯಿಯಾದವಳು ಹಾಗೆ ಮಾಡುವುದು ತಕ್ಕುದಲ್ಲವೆಂದೂ, "ಆಕೆಯೇ ತನ್ನನ್ನು ಹೆತ್ತವಳು, ಹರಿಹರದೇವಿ ಎತ್ತಿ ಸಲಹಿದವಳು" ಎಂದು ಲೋಕಕ್ಕೆ ಸಾರುವುದಾಗಿಯೂ ಅಪಕೀರ್ತಿಯು ನಾರಿ ಬಾಗಿಲನ್ನು ದಾಟುವುದಕ್ಕೆ ಮುಂಚೆ ಎಚ್ಚರವಾಗುವುದು ಲೇಸೆಂದೂ ಬೋಧಿಸಿದನು. ತಾನು ಪರದಾರಸೋದರತ್ವವನ್ನು ಎಂದಿಗೂ ಉಲ್ಲಂಘಿಸುವವನಲ್ಲವೆಂದೂ ಒತ್ತಿ ಒತ್ತಿ ಹೇಳಿದನು. ರತ್ನಾಜಿಗೆ ಆ ಮಾತುಗಳು ಯಾವುವೂ ಹಿಡಿಸಲಿಲ್ಲ. ಆಕೆ ಯಾವುದಕ್ಕೂ ಹೇಸಲಿಲ್ಲ. ಮತ್ತೆ ಮತ್ತೆ ಮೇಲೆ ಬಿದ್ದಳು. ಆಗ ಅವನು ಆಕ್ರೋಶದಿಂದ "ಪಾತಕಿ! ಹೋಗು" ಎಂದು ಕೈ ಕೊಸರಿಕೊಂಡು, ಶ್ರೀರಾಮನು ತಾಟಕಿಯನ್ನು ತಿರಸ್ಕರಿಸಿದಂತೆ, ರತ್ನಿಯನ್ನು ನೂಕಿ ಹೊರಟನು. ಅಲ್ಲಿಂದ ಬಂದು, ತನಗಾಗಿ ಎದುರು ನೋಡುತ್ತಿದ್ದವರನ್ನು ಮನೆಗಳಿಗೆ ಕೊಟ್ಟು ಕಳುಹಿಸಿದನು.

ರಾಮನ ಚಿತ್ತಸ್ಥೈರ್ಯವನ್ನು ಕಂಡು ಕುಟಿಲದೇವತೆಗಳು ಬೆರಗಾದರು. ರತ್ನಾಜಿಯಂತಹ ಹೆಣ್ಣು ತಾನಾಗಿ ಒಲಿದು ಬಂದರೂ ಸ್ವಲ್ಪವಾದರೂ ಚಂಚಲನಾಗದ ಅವನನ್ನು ಕಂಡು ಬಾಯಿತುಂಬ ಕೊಂಡಾಡಿ ದರು. ಈತನು ದೇವಾನುದೇವತೆಗಳಿಗೂ ಒಂದು ಕೈ ಮಿಗಿಲಾದನೆಂದು ಮೆಚ್ಚಿದರು. ಮೇಲೆದ್ದ ರತ್ನಿ ರಾಮನನ್ನು ಕಾಣದೆ, ಕಂಡಕಂಡ ಕಡೆಯಲ್ಲೆಲ್ಲ ಹುಡುಕತೊಡಗಿದಳು. ಉದ್ಯಾನವನಕ್ಕೆ ತೆರಳಿ ಗಿಡ, ಮರ, ತಳಿರು, ಲತೆಗಳನ್ನು ಅಂಗಲಾಚಿ ಬೇಡಿದಳು. ಗಿಳಿ, ಹಂಸೆ ಮೊದಲಾದ ಪಕ್ಷಿ ಸಮೂಹವನ್ನು ಪ್ರಾರ್ಥಿಸಿದಳು. ಎಷ್ಟಾದರೂ ಉರ್ವಶಿಯಾಗಿದ್ದವಳಲ್ಲವೆ ಅವಳು! ಅವಳ ವಿರಹೋದ್ರೇಕವೆಂದರೆ ಕೇಳಬೇಕೆ! ಸಾಲದ್ದಕ್ಕೆ ರಾಮನು ಅರ್ಜುನನ ಅಂಶ ಬೇರೆ! ಒಂದೇ ಬಗೆಯಾಗಿ ಉನ್ಮತ್ತಳಾಗಿದ್ದ ರತ್ನಾಜಿಯ ಬಳಿಗೆ ಸಂಗಿ ಬಂದಳು. ಒಡತಿಯ ಸ್ಥಿತಿಯನ್ನು ಕಂಡು, ನಡೆದ ಸಂಗತಿಯನ್ನೆಲ್ಲ ಕೇಳಿ ತಿಳಿದಳು. ಸಂಗಿ, ರಾಮನ ಮೇಲೆ ಅಪವಾದವನ್ನು ಹೊರಿಸಿ, ಅವನ ಹರಣಕ್ಕೆ ಕೇಡನ್ನು ಬಗೆಯುವಂತೆ ಸಲಹೆ ಮಾಡಿದಳು. ಕೈ ಜಾರಿ ಬಿದ್ದಿದ್ದ ಕೈದನ್ನು ಎತ್ತಿಕೊಟ್ಟಂತೆ ಆಯಿತು ರತ್ನಿಗೆ! ತನ್ನನ್ನು ತುಚ್ಛೀಕರಿಸಿ, ತಿರಸ್ಕರಿಸಿದ ರಾಮನನ್ನು ಕೊಲ್ಲಿಸದೆ ಬಿಡೆನೆಂದು ಹಟ ತೊಟ್ಟಳು. ತನ್ನ ಪ್ರಾಣ ಬಿಡುವುದಾಗಿ ಸಂಕಲ್ಪ ಮಾಡಿಕೊಂಡಳು. ಅನಂತರ, ತನ್ನ ಒಡವೆ ಆಭರಣಗಳನ್ನು ಕಿತ್ತು ಬಿಸುಟು, ತಲೆ ಕೆದರಿಕೊಂಡು, ಕೈ ಮೈ ಮೇಲೆಲ್ಲ ಕೃತಕವಾಗಿ ಗಾಯಗಳನ್ನು ನಿರ್ಮಿಸಿಕೊಂಡು, ತನ್ನ ಸಖಿಯರಿಂದ ಶುಶ್ರೂಷೆ ಮಾಡಿಸಿಕೊಳ್ಳಲಾರಂಭಿಸಿದಳು.

ರಾಮನು ಕಾಟಣ್ಣನನ್ನು ಕಂಡು ತನಗಾದ ವಿಚಿತ್ರ ಅನುಭವವನ್ನು ತಿಳಿಸಿದನು. ಚೆಂಡಾಟವು ತಮ್ಮ ಪಾಲಿಗೆ ಮೃತ್ಯುಪ್ರಾಯವಾಯಿತೆಂದೂ, ಚಿಕ್ಕಮ್ಮನ ಅಕಾರ್ಯದಿಂದ ಅಂತಕನ ರಾಜಧಾನಿಗೆ ತೆರಳ ಬೇಕಾಗುವುದೆಂದೂ, ತಮಗೆ ಬರಬಾರದ ಸಾವು ಸಂಭವಿಸಿತೆಂದೂ ಚಿಂತಾಕ್ರಾಂತನಾದನು. ವೀರಮರಣ ವನ್ನು ಬಯಸಿದ ತನಗೆ ದುರ್ಮರಣವು ಪ್ರಾಪ್ತವಾಗುವುದಲ್ಲ ಎಂಬುದಾಗಿ ವ್ಯಥೆಪಟ್ಟನು. ಕಾಟಣ್ಣನು ರತ್ನಿಯ ಮನೆಯಲ್ಲಿ ನಡೆದುದೆಲ್ಲವನ್ನೂ ವಿವರವಾಗಿ ಕೇಳಿ ತಿಳಿದು, ಅವನಲ್ಲಿ ಯಾವ ತಪ್ಪೂ ಇಲ್ಲವೆಂದೂ, ಅದಕ್ಕಾಗಿ ಸ್ವಲ್ಪವೂ ಹೆದರಬೇಕಾಗಿಲ್ಲವೆಂದೂ ಧೈರ್ಯ ಹೇಳಿದನು.

## ಕಂಪಿಲನ ಕಟ್ಟಪ್ಪಣೆ

ಬೇಟೆಗಾಗಿ ತೆರಳಿದ್ದ ಕಂಪಿಲನಿಗೆ, ಬೇಟೆ ಮುಗಿಯುವುದೇ ತಡ, ತನ್ನ ಅಚ್ಚುಮೆಚ್ಚಿನ ಕಿರಿಯ ರಾಣಿ

ಯಾವ ರತ್ನಿಯ ನೆನಪಾಯಿತು. ಕೂಡಲೆ ಅವಸರ ಅವಸರವಾಗಿ ಊರಿಗೆ ಹೊರಟು ಬಂದನು. ಅಲಂಕೃತ ರಾದ ಹೆಂಗಸರು ರಾಜನನ್ನು ಆರತಿ ಎತ್ತಿ ಆನಂದದಿಂದ ಬರಮಾಡಿಕೊಂಡರು. ಆ ನಾರಿಯರ ಮಧ್ಯೆ ತನ್ನ ಮೋಹದ ಮಡದಿಯಾದ ರತ್ನಿಯನ್ನು ಕಾಣದೆ, ಎಲ್ಲರನ್ನೂ ಒತ್ತರಿಸಿ, ಅವಳ ಅರಮನೆಗೆ ಬಂದನು. ಅಲ್ಲಿನ ಅಸ್ತವ್ಯಸ್ತವಾದ ಸ್ಥಿತಿಯನ್ನು ಕಂಡು ಕಂಪಿಲನು ಕಂಪಿಸಿದನು. ಮ್ಲಾನವದನಳಾಗಿದ್ದ ಮಡದಿಯನ್ನು ನೋಡಿ ಕಾರಣವೇನೆಂದು ವಿಧವಿಧವಾಗಿ ವಿಚಾರಿಸಿದನು. ಯಾರಿಂದ ಆಕೆಗೆ ನೋವಾಗಿದ್ದರೂ ಸರಿಯೆ, ಅವರನ್ನು ದಿಗ್ಬಲಿ ಕೊಡದೆ ಇರುವುದಿಲ್ಲವೆಂದು ಬಾಯಿಬಿಟ್ಟು ಹೇಳಿದನು. ರತ್ನಿಗೂ ಅದೇ ಬೇಕಾಗಿತ್ತು. "ರಾಜನೆ! ಹೇಳಬಾರದು, ಹೇಳದಿದ್ದರೆ ಅಪಕೀರ್ತಿ ತಪ್ಪಿದ್ದಲ್ಲ. ರಾಮನು ಊರಿನ ಪುಂಡರನ್ನೆಲ್ಲ ಕೂಡಿಸಿಕೊಂಡು ಚೆಂಡಾಟವಾಡತೊಡಗಿದನು. ಆ ಮುತ್ತಿನ ಚೆಂಡು ನನ್ನ ಮನೆಯಲ್ಲಿ ಬಂದು ಬಿದ್ದಿತು. ಅದನ್ನು ಕೇಳುವ ನೆಪದಲ್ಲಿ ನನ್ನ ಮನೆಗೆ ಬಂದು, ನನ್ನಲ್ಲಿ ಅನುರಕ್ತನಾಗಿ, ಬೇಡಬೇಡವೆಂದರೂ ಕೇಳದೆ, ಮಾನಭಂಗವನ್ನು ಮಾಡಿದನು. ನಾನು ಎಷ್ಟು ಹೇಳಿದರೂ ಅವನು ಲಕ್ಷಿಸಲಿಲ್ಲ. ನಿನಗೂ ಹೆದರದೆ, ತನ್ನ ಶೌರ್ಯ ಸಾಹಸ ಗಳನ್ನೇ ಮೆರೆದು, ಮಾಡಬಾರದ ಕೆಲಸವನ್ನು ಮಾಡಿದನು. ಎಷ್ಟಾದರೂ ಕಾಮುಕನಲ್ಲವೆ? ಅವನಿಗೆ ಭಯ ವಾಗಲಿ ನಾಚಿಕೆಯಾಗಲಿ ಉಂಟೆ? ಆತ್ಮರಕ್ಷಣೆಗಾಗಿ ನಾನು ಮಾಡಿದ ಯಾವ ಪ್ರಯತ್ನವೂ ಸಫಲವಾಗ ಲಿಲ್ಲ. ನಾನು ಆತನ ಕಾಮಪಿಪಾಸೆಗೆ ಗುರಿಯಾಗಬೇಕಾಯಿತು. ರಾವಣ, ಕೀಚಕರ ಪಂಗಡಕ್ಕೆ ಸೇರಿದ ಅವನಿಗೆ ರಾಮನೆನ್ನುವ ಹೆಸರಾದರೂ ಒಪ್ಪೀತೆ? ನಾನು ಇನ್ನೂ ಬದುಕಿರುವುದಾದರೂ ಹೇಗೆ? ಅವನಾಗಲಿ ನಾನಾಗಲಿ, ಯಾರಾದರೊಬ್ಬರು ಸಾಯಲೇಬೇಕು. ಹೆಂಡತಿಯ ಮೇಲೆ ಕೈಮಾಡಿದವನನ್ನು ಭೀಮಸೇನನು ಸುಮ್ಮನೆ ಬಿಟ್ಟನೆ?" ಎಂದು ಒಂದೇ ಸಮನೆ ಹುಸಿಯಮಾಲೆಯನ್ನು ಅನುಗೊಳಿಸಿದಳು. ಮುತ್ತಿನಚೆಂಡನ್ನು ಸಾಕ್ಷಿ ತೋರಿಸಿದಳು. ಕಂಪಿಲನು ಹೆಂಡತಿಯ ಮಾತುಗಳನ್ನೆಲ್ಲ ಸತ್ಯವೆಂದು ನಂಬಿದನು. ಅವನ ಕೋಪ ಮಿತಿಮೀರಿತು. ಹೆಂಡತಿಯನ್ನು ಸಮಾಧಾನಗೊಳಿಸಿ "ಪಡಿಮಾತೇನಾ ಪಾತಕ ತೊಂಡನ ಕೆಡಹಿ ಕೊರಲ ಕೊಯಿಸುವೆನು" ಎಂದು ಮಾತಿತ್ತನು. ಕೂಡಲೆ, ಮಂತ್ರಿ ಬೈಚಪ್ಪನಿಗೆ ಹೇಳಿ ಕಳುಹಿಸಿದನು.

ವೇಷ ಭೂಷಣಗಳಿಂದ ಕೂಡಿ ಬೈಚಪ್ಪನು ಕಂಪಿಲನ ಬಳಿಗೆ ಬಂದನು. ರಾಜನು ರಾಮನು ಮಾಡಿದ ಅಕಾರ್ಯವನ್ನೆಲ್ಲ ತಿಳಿಸಿದನು. ಬೈಚಪ್ಪನಿಗೆ ನಂಬಲಾಗಲಿಲ್ಲ. ರಾಮನಂಥವನು ಹಾಗೆ ಮಾಡಲಾರನೆಂದು ಅವನಿಗೆ ದೃಢವಾದ ನಂಬಿಕೆ. ರಾಜನಾದರೋ ರತ್ನಿಯ ಮಾತುಗಳನ್ನೇ ನೆಚ್ಚಿ, ರಾಮನನ್ನೂ, ಅವನ ಜೊತೆಯಲ್ಲಿ ಚೆಂಡಾಡಿದ ಇತರರನ್ನೂ ಕೂಡಲೇ ಸಂಹರಿಸಬೇಕೆಂದು ಆಜ್ಞೆಮಾಡಿದನು. ಬೈಚಪ್ಪನಿಗೆ ಏನು ಹೇಳಬೇಕೆಂದು ತೋರಲಿಲ್ಲ. ಮಂತ್ರಿ ಹಿಂತೆಗೆಯುತ್ತಿದ್ದುದನ್ನು ಕಂಡು ಕಂಪಿಲನು "ರಾಮನ ತಲೆಯನ್ನು ತರುವತನಕ ನಾನು ಇಲ್ಲಿಂದ ಏಳುವುದಿಲ್ಲ" ಎಂದು ಒತ್ತಾಯ ಮಾಡಿದನು. ರಾಜಾಜ್ಞೆಯನ್ನು ವಿಧಿಸಿ ತನ್ನ ಮುದ್ರಿಕೆಯನ್ನೂ ಕೊಟ್ಟನು. ಮಂತ್ರಿ "ರಾಜನೇ! ರಾಮನನ್ನು ಬಹಿರಂಗವಾಗಿ ಹಿಡಿದು ತರುವುದು ಸಾಧುವಲ್ಲ. ಅಲ್ಲದೆ, ಅದು ಅಸಾಧ್ಯವೂ ಹೌದು. ಆದ್ದರಿಂದ ಅವನನ್ನು ಉಪಾಯವಾಗಿ ವಧಿಸಬೇಕು" ಎಂದು ತಿಳಿಸಿದನು. ರಾಜನಿಗೆ ಆ ಸಲಹೆ ಒಪ್ಪಿಗೆಯಾಗಲಿಲ್ಲ. ಮಹಾಪರಾಧಿಯನ್ನು ಊರ ಜನರ ಸಮ್ಮುಖದಲ್ಲಿಯೇ ಬಲಿಗೊಡಬೇಕೆಂದು ಅವನ ವಾದ. ಅನಂತರ ಪ್ರಧಾನಿ ಮರುಮಾತಾಡದೆ ಅಂತೆಯೇ ಮಾಡುವೆನೆಂದು ಹೇಳಿ ಹೊರಟನು. ಬರುತ್ತ ದಾರಿಯಲ್ಲಿ ಅವನಿಗೆ ನಾನಾ ಆಲೋಚನೆಗಳು ಉಂಟಾದುವು. ರಾಮನಂಥವನು ಸತ್ತಮೇಲೆ ತಮಗೆ ಕೇಡು ತಪ್ಪದೆಂದೂ, ತನಗೆ ಏನು ಆದರೂ ಸರಿಯೆ, ಅವನನ್ನು ಚೆಂಡನ್ನು ಬಚ್ಚಿಡುವಂತೆ ಮರೆಯಾಗಿ ಇಟ್ಟದ್ದು ಸಕಾಲದಲ್ಲಿ ರಾಜನಿಗೆ ತಂದು ತೋರಿಸುವೆನೆಂದೂ ನಿಶ್ಚಯಿಸಿಕೊಂಡನು. ಕತ್ತಲು ಕಳೆಯಿತು. ಬೆಳಗಾಗುವುದೇ ತಡ, ರಾಮನ ಅರಮನೆಗೆ ಬಂದು "ಸುರುತಾಳನ ದಂಡು ಬಂದಿದೆ ರಾಮನನ್ನು ಕೂಡಲೇ ಕಾಣಬೇಕು. ನಾನು ಬಂದಿರುವುದನ್ನು ತಿಳಿಸು" ಎಂದು ಸೇವಕಿಯೊಬ್ಬಳ ಮೂಲಕ ಹೇಳಿ ಕಳುಹಿಸಿದನು. ಸೇವಕಿಯ ಮಾತುಗಳನ್ನು ಕೇಳಿ ರಾಮನಿಗೆ

ವಾಸ್ತವಿಕವಾದ ವಿಷಯವು ಗೋಚರವಾಯಿತು. ಬೈಚಪ್ಪನನ್ನು ಒಳಗೆ ಬರಮಾಡಿಕೊಂಡನು.

ಅನಿರೀಕ್ಷಿತವಾಗಿ ಬಂದ ಮಂತ್ರಿಯನ್ನು ಕಂಡು, ರಾಮನು "ಇದೇನು ದಂಡಯಾತ್ರೆಯ ಕಾಲವೂ ಅಲ್ಲ. ಬಹುಶಃ ರತ್ನಾಜಿಯ ಸಂಬಂಧದಲ್ಲಿಯೇ ಬಂದಿರಬೇಕು ಎನ್ನಿಸುತ್ತದೆ. ಹಿಂತೆಗೆಯದೆ ಹೇಳು" ಎಂದು ಕೇಳಿಕೊಂಡನು. ಬೈಚಪ್ಪನು ನಿರ್ವಾಹವಿಲ್ಲದೆ ರಾಮನಮೇಲೆ ಬಂದಿರುವ ಅಪವಾದವನ್ನು ವಿವರಿಸಿದನು. ಆ ಮಾತುಗಳನ್ನು ಕೇಳಿದೊಡನೆಯೇ ರಾಮನು "ಶಿವ ಶಿವ" ಎಂದು ಕಿವಿಗಳನ್ನು ಮುಚ್ಚಿಕೊಂಡನು. ಅನಂತರ ನಿಜವಾಗಿಯೂ ನಡೆದ ಸಂಗತಿಯನ್ನು ನಿರೂಪಿಸತೊಡಗಿದನು. "ಮುತ್ತಿನ ಚೆಂಡನ್ನು ಹೊಡೆಯುವುದೇ ತಡ, 'ಕಂತುಕದೊಡನಸು ಗಗನಕೆ ಪೋದುದೆಂಬಂತೆ' ಅದು ಚಿಕ್ಕಮ್ಮನ ಅರಮನೆಗೆ ಹೋಗಿ ಬಿದ್ದಿತು. ಅದನ್ನು ಹೇಗೆ ತರುವುದೆಂದು ಚಿಂತಿಸಿ ಕಡೆಗೆ ಕಾಟಣ್ಣನನ್ನು ಕಳುಹಿಸಿದೆ. ರತ್ನಾಜಿ ಕಾಟಣ್ಣನ ಕೈಗೆ ಚೆಂಡು ಕೊಡದೆ 'ತಮ್ಮನಾದವನು ಅಣ್ಣನನ್ನು ಎಲ್ಲಿಯಾದರೂ ಕೆಲಸಕ್ಕೆ ಕಳುಹಿಸಬಹುದೆ. ರಾಮನೇ ಬರಬಾರದಿತ್ತೆ? ಎಷ್ಟಾದರೂ ಅವನು ನನ್ನ ಮಗನಲ್ಲವೆ? ಎಂದು ಆಕ್ಷೇಪಿಸಿದಳು. ಕಡೆಗೆ ನಾನೇ ಹೋದೆ. ನನ್ನನ್ನು ಬಹುವಾಗಿ ಉಪಚರಿಸಿದಳು. ಅನಂತರ ಮದನವಿಕಾರದಿಂದ ಮಾತಾಡಲು ಮೊದಲುಮಾಡಿದಳು. ನನಗೆ ಕೇಳಲು ಆಗಲಿಲ್ಲ. ಆಕೆ ನನ್ನ ಮುಂದಲೆಯನ್ನು ಹಿಡಿದು ಬಲಾತ್ಕಾರವಾಗಿ ಒಲಿಸಿಕೊಳ್ಳಲು ತುಂಬ ಪ್ರಯತ್ನಿಸಿದಳು. ನಾನು ತಿರಸ್ಕರಿಸಿ ಹೊರಟುಬಂದೆ. ನನ್ನ ಈ ಕೃತ್ಯವೇ ವಿಪರೀತವಾಗಿ ಪರಿಣಮಿಸಿದೆ. ರಾಯನು ಆಜ್ಞೆ ಮಾಡಿದಂತೆ ನೀನು ನನ್ನ ತಲೆಯನ್ನು ಅಗತ್ಯವಾಗಿಯೂ ತೆಗೆಯಬಹುದು. ಇಗೋ ನನ್ನ ಕತ್ತಿಯನ್ನೇ ಕೊಡುತ್ತೇನೆ. ನಾನಂತೂ ಹುಟ್ಟಿದಂದಿನಿಂದ ಈವರೆಗೆ ಪರನಾರಿಯರನ್ನು ಕಣ್ಣೆತ್ತಿ ನೋಡಿದವನೂ ಅಲ್ಲ" ಎಂದು ವಿವರವಾಗಿ ಹೇಳಿದನು. ಬೈಚಪ್ಪನು "ರಾಮ! ನಿನ್ನ ಗುಣವನ್ನು ಬಲ್ಲ ನನಗೆ ನೀನು ಇಷ್ಟು ಹೇಳುವ ಅಗತ್ಯವಾದರೂ ಏನು? ರತ್ನಾಜಿ ಇದ್ದ ಸ್ಥಿತಿಯನ್ನು ಕಂಡ ಯಾರಿಗಾದರೂ ರಾಜನಿಗೆ ಪ್ರತಿ ಹೇಳುವುದು ಅಸಾಧ್ಯವಾಗಿತ್ತು. ಆಕೆಯ ಕಪಟವನ್ನು ತಿಳಿಯಲಾರದೆ ರಾಜನು ಆಕೆಯ ಮಾತನ್ನು ಪೂರ್ತಿಯಾಗಿ ನಂಬಿರುತ್ತಾನೆ. ಆದ್ದರಿಂದ ಏನೂ ಹೇಳದೆ ನಿನ್ನ ಬಳಿಗೆ ಬಂದೆ" ಎಂದನು. ಕುಮಾರರಾಮನು ಸಂತೋಷದಿಂದ "ಒಡವೆಯನ್ನು ನ್ಯಾಸವಾಗಿಟ್ಟವರು ಬಂದು ಕೇಳಿದಾಗ ಹಿಂತೆಗೆಯುವುದು ಹೇಗೆ ಗುಣವಲ್ಲವೋ ಹಾಗೆಯೇ ತಂದೆಗೆ ಸೇರಿದ ಈ ದೇಹವನ್ನು ಅವನ ಅಪ್ಪಣೆಯಂತೆ ಅರ್ಪಿಸದಿರುವುದು ಸಾಧುವಲ್ಲ. ನೀನು ಕೊಲ್ಲುವ ಆಯಾಸವನ್ನೂ ಪಡಬೇಕಾಗಿಲ್ಲ. ನಾನಾಗಿಯೇ ತಲೆಯನ್ನು ಕಡಿದು ಕೊಡುತ್ತೇನೆ. ಆದರೆ, ನಾನು ಬೇಡುವುದಾದರೂ ಇಷ್ಟೇ. ರತ್ನಾಜಿ ಹೊರಸಿರುವ ಈ ಅಪವಾದವನ್ನು ಹೋಗಲಾಡಿಸಿ, ಹೆಂಡತಿಯ ಕಪಟವನ್ನು ತಿಳಿಯದೆ ರಾಜನು ಮಗನನ್ನು ಕೊಲ್ಲಿಸಿದನೆಂಬುದಾಗಿ ಜನರು ಮಾತಾಡುವಂತೆ ಮಾಡು. ಪರವನಿತಾಸಹೋದರನೆಂಬ ಬಿರುದು ಉಳಿದರೆ ಸಾಕು" ಎಂದು ಮಂತ್ರಿಯಲ್ಲಿ ವಿನಂತಿ ಮಾಡಿಕೊಂಡನು. ರಾಜಕುಮಾರನ ಮಾತುಗಳನ್ನು ಕೇಳಿ ಬೈಚಪ್ಪನಿಗೆ ತುಂಬ ಸಂಕಟವಾಗಿ ಕಣ್ಣುಗಳಲ್ಲಿ ನೀರು ತುಂಬಿತು. ಅವನನ್ನು ವಾತ್ಸಲ್ಯದಿಂದ ಬಾಚಿ ತಬ್ಬಿಕೊಂಡು "ಅಯ್ಯಾ ರಾಮ! ರತ್ನಾಜಿಯ ಮಾತು ಸಟೆಯೆಂಬುದನ್ನು ನಾನು ಚೆನ್ನಾಗಿ ಬಲ್ಲೆ. ರಾಜನು ಹೇಳಿದ ಮಾತ್ರಕ್ಕೆ ನಾನು ಮುಂದಾಲೋಚನೆಯಿಲ್ಲದೆ ಮಾಡುತ್ತೇನೆಯೆ? ನಿಮ್ಮನ್ವಯಾಗತ ಮಂತ್ರಿಯಲ್ಲವೆ ನಾನು? ನಿನ್ನನ್ನು ನಾನು ಕಾಪಾಡಿಕೊಳ್ಳುತ್ತೇನೆ. ನೀನು ಅಳಿಯಲು, ಸುರುತಾಳನ ಬಲ ಬಂದು ಮುತ್ತಲು, ಅದನ್ನು ಹಿಂದಟ್ಟುವವರು ಬೇರೆ ಯಾರಿದ್ದಾರೆ? ನೀನು ಸಾಯಲು, ಆಂಧ್ರ, ಕರ್ನಾಟ, ದ್ರವಿಡ, ತುಳು, ಮಲಯಾಳ ದೇಶಗಳು ತುರುಕರ ವಶವಾಗಿ, ಎಲ್ಲವೂ ಮುಸಲ್ಮಾನರ ರಾಜ್ಯವಾಗುವುದು ಖಂಡಿತ. ನೇಮಿ ಹೊಸಮಲೆಯಲ್ಲಿ ಬೀಡು ಬಿಡದೆ ಇರುವುದಿಲ್ಲ. ಆಸೇತುಕೇದಾರದವರೆಗೆ ಮುಸಲ್ಮಾನರ ಪ್ರಾಬಲ್ಯವುಂಟಾಗಿ ಹಿಂದೂ ಧರ್ಮಕ್ಕೇ ಧಕ್ಕೆ ತಟ್ಟುವುದು. ಆ ಮಾತು ಹಾಗಿರಲಿ, ತೆಲುಗರು ನಮ್ಮ ಮೇಲೆ ದಂಡೆತ್ತಿ ಬಂದು ನಮ್ಮ ನಾಡನ್ನು ಧ್ವಂಸಮಾಡುವರು. ಆದ್ದ

ರಿಂದ ಈಗ ಕಾಲ ಕಳೆಯುವಂತಿಲ್ಲ. ನಿನ್ನ ಕೆಳೆಯರನ್ನು ಮೊದಲು ಬರಮಾಡು. ಜನ ಮೆಚ್ಚುವಂತೆ ಒಂದು ಕೆಲಸವನ್ನು ಮಾಡಬೇಕಾಗಿದೆ" ಎಂದು ಸಮಾಧಾನ ಹೇಳಿದನು. ಕುಮಾರರಾಮನು ಭಾವಸಂಗಮದೇವ, ಚಿಕ್ಕ, ಕೊಳ್ಳಿಯನಾಗ, ಕಾಟಣ್ಣ, ಕಾಳಾಂಜಿಯ ಕಂಪ, ಬಲ್ಲುಗ, ಸಾಯಿದೇವ, ಲಕ್ಕ ಮೊದಲಾದ ತನ್ನ ವೀರ ಬಂಟರನ್ನು ಕರೆಸಿದನು. ಬೈಚಪ್ಪನು, ಸುರಿತಾಳನ ಸಮಸ್ತ ಸೇನೆಯನ್ನೇ ಸಂಹರಿಸಬಲ್ಲ ಅಂಥ ವೀರಾಧಿವೀರರನ್ನು ಕೊಲ್ಲಲು ಹೇಳಿದ ಕಂಪಿಲನಿಗಾಗಿ ಮರುಗಿ, ಅವಿವೇಕಿ ನೃಪರಿಂದ ದುಃಖ ತಪ್ಪದೆ ಇರದೆಂದು ಮನಸ್ಸಿನಲ್ಲಿಯೇ ಅಂದುಕೊಂಡನು.

## ಬೈಚಪ್ಪನ ಚಾತುರ್ಯ

ಬೈಚಪ್ಪನು, ಸರ್ವೋಪಾಯಗಳಲ್ಲಿ ಯಾವುದರ ಸಹಾಯದಿಂದ ರಾಮನೇ ಮೊದಲಾದವರನ್ನು ಬಚ್ಚಿಡುವುದೆಂದು ಚಿಂತಿಸಿ, ಕಡೆಗೆ ಇಂದ್ರಜಾಲದಿಂದ ಮಾತ್ರವೇ ಆ ಕಾರ್ಯವು ಸಾಧ್ಯವೆಂದು ನಿಶ್ಚಯಿಸಿದನು. ಅನಂತರ, ಬೈಚಪ್ಪನು ಇಂದ್ರನನ್ನು ಕುರಿತು ಧ್ಯಾನಿಸಿದನು. ಕೂಡಲೆ "ಕುವರನ ಪೂರ್ವದ ಪುಣ್ಯವೆ ರೂಪುಗೊಂಡವನಿಗೆ ಬಂದುದೆಂದೆನಲು" ಇಂದ್ರನು ಭೂಮಿಗೆ ಅವತರಿಸಿದನು. ರಜತಾಚಲಕ್ಕೆ "ಬರಿಕೈ ಕಾಲ್ಮೊಗನಾಲ್ಗೊಂಬುಗಳು" ಮೂಡಿ ಬಂದುವೋ ಎಂಬಂತಿದ್ದ ಐರಾವತವನ್ನೇರಿ, ತನ್ನ ಪರಿವಾರದೊಂದಿಗೆ ಇಂದ್ರನು ಪ್ರತ್ಯಕ್ಷನಾದನು. ಬೈಚಪ್ಪನನ್ನು ಕುರಿತು ತನ್ನನ್ನು ಬರಮಾಡಿಕೊಂಡ ಉದ್ದೇಶವೇನೆಂದು ಕೇಳಿದನು. ಬೈಚಪ್ಪನು "ರಾಯನ ಮೋಹದ ವನಿತೆ ರತ್ನಾಜಿಯೆಂಬುವಳು ಜನಪನ ಹಿರಿಯರಸಿಯ ಮಗ ರಾಮನೆಂಬನಿಗೆ ಮೋಹಿಸಿ ಬಂದವನ ಪಿಡಿದಳು ಕಂಡು, ಪಿಡಿದರವನೊಲ್ಲದೆ ಕೆಡೆ ನೂಂಕಿ ಬರಲು ಮೇಲವಳು ಕಡುನೊಂದವನ ಮೇಲೆ ರಾಯನೊಡನೆ ಪಿಸುಣ್ನುಡಿದಳು, ರಾಯ ನಂಬಿದನು" ಎಂದು ಹೇಳಿದನು. ರಾಜನ ಆಜ್ಞೆಯನ್ನು ನಡೆಸಲಾರದೆ, ರಾಮನನ್ನು ಯಾವುದಾದರೊಂದು ಉಪಾಯದಿಂದ ರಕ್ಷಿಸಬೇಕೆಂದು ಬಯಸಿ, ಅವನನ್ನು ಬರಮಾಡಿಕೊಂಡನೆಂಬುದಾದಾಗಿ ಸ್ಪಷ್ಟಪಡಿಸಿದನು. ಆಗ ಇಂದ್ರನು, ರಾಮನು ಅರ್ಜುನನ ಅವತಾರವೆಂದೂ, ರತ್ನಾಜಿ ಉರ್ವಶಿಯ ಅವತಾರವೆಂದೂ, ಪಾರ್ವತಿಯ ಸಲುವಾಗಿ ಆಕೆ ಹಟತೊಟ್ಟು ಬಂದಿರುವಳೆಂದೂ ಅವರ ಜನ್ಮರಹಸ್ಯವನ್ನು ತಿಳಿಸಿ, "ವರಸುತನವನೆಮಗದಱಿಂ ಜಯಂತಗೆ ಸರಿಮಿಗಿಲವಗೆ ಬಂದುದನು ಪರಿಹರಿಸುವೆನು" ಎಂದು ಭರವಸೆಯನ್ನು ನೀಡಿದನು. ಬಳಿಕ, ತನ್ನ ಪಕ್ಕದಲ್ಲಿದ್ದ, ದೇವತೆಯೊಬ್ಬನನ್ನು ಕರೆದು, ಬೈಚಪ್ಪನ ಅಪೇಕ್ಷೆಯಂತೆ ನಡೆಯಬೇಕೆಂದು ಹೇಳಿ ಅಂತರ್ಧಾನನಾದನು. ಬೈಚಪ್ಪನು ರಾಮನ ಬಳಿಗೆ ಹಿಂತಿರುಗಿ, ಇಂದ್ರನು ಹೇಳಿದ ವೃತ್ತಾಂತವನ್ನೆಲ್ಲ ವಿಸ್ತರಿಸಿದನು. ಆ ಮಾತುಗಳನ್ನು ಕೇಳುತ್ತಿರಬೇಕಾದರೆ, ರಾಮನಿಗೆ ಪೂರ್ವಜನ್ಮದ ಸ್ಮರಣೆಯುಂಟಾಗಿ, ಹರ್ಷಬಾಷ್ಪಗಳನ್ನು ಸುರಿಸಿದನು. ಅನಂತರ ಈಶ್ವರನ ಸಾಲೋಕ್ಯವೆಂದಿಗೆ ದೊರೆಯುವುದೋ ಎಂದು ಮರುಗಿದನು. ಆಗ ಅಶರೀರವಾಣಿಯೊಂದು "ಬಿಡು [ಬಿಡು] ಚಿಂತೆ ನಿನಗೆ ರಾಮ ನೀ ಮುನ್ನ ಪಡೆದ ಸಾಲೋಕ್ಯಪದವನು ಕೊಡುವೆ ನಂಜದಿರು" ಎಂದು ಅಭಯವನ್ನು ನುಡಿಯಿತು. ಬೈಚಪ್ಪನು ಇಂದ್ರನ ಚರನನ್ನು ಕುರಿತು, ರಾಮನನ್ನೂ ಅವನ ಆಪ್ತರನ್ನೂ ಎಲ್ಲಿಯಾದರೂ ಅವತಿಡಬೇಕೆಂದೂ, ಅವರ ಪ್ರತಿರೂಪಗಳನ್ನು ರಾಜನಿಗೆ ತಾನು ತೋರಬೇಕೆಂದೂ ಹೇಳಿದನು. ಕೂಡಲೆ, ಆ ದೇವದೂತನು, ಒಂದು ರಮ್ಯದೇಶದಲ್ಲಿ ನೆಲದಡಿಯಲ್ಲಿ ರಾಮನಿಗಾಗಿ ಸುಸಜ್ಜಿತವಾದ ಒಂದು ಅರಮನೆಯನ್ನು ನಿರ್ಮಿಸಿದನು. ಬೈಚಪ್ಪನು ರಾಮನನ್ನೂ ಆತನ ಮಿತ್ರರನ್ನೂ ಅಲ್ಲಿ ಅಡಗಿರಬೇಕೆಂಬುದಾಗಿ ಕೇಳಿಕೊಂಡನು. ರಾಮನ ಮುಖ ಸ್ವಲ್ಪ ಸಪ್ಪೆಯಾಯಿತು. ಹಾಗೆ ತಲೆಮರೆಸಿಕೊಂಡಿರಬೇಕಾಯಿತಲ್ಲ ಎಂದು ಚಿಂತಿಸಿದನು. "ನಿರ್ದೋಷಿಯಾದ ನನಗೆ ಈ ಗತಿ ಸರಿಯೆ?" ಎಂದು ಮಂತ್ರಿಯನ್ನು ಕೇಳಿದನು. ಆಗ ಕಾರ್ಯಕುಶಲನಾದ ಬೈಚಪ್ಪನು "ಕಜ್ಜ

ಕೈಗೂಡುವನ್ನಬರ ನಾನಾಪರಿಯುಜ್ಜುಗದೊಳು ಬಲ್ಲವರು ಹಜ್ಜೆಯಿಡುವರಿದು ಸಜ್ಜನ ಪದ್ಧತಿ ಲಜ್ಜೆಯಿದೇತಕೆ ನಿನಗೆ?" ಎಂದು ಸಮಾಧಾನ ಹೇಳಿದನು. ಅದೇ ರಾಮನೇ ಅರ್ಜುನನಾಗಿದ್ದಾಗ ಬೃಹನ್ನಳೆಯಾಗಿದ್ದುದನ್ನೂ, ಇಂದ್ರಕೀಲಪರ್ವತದಲ್ಲಿ ತಪಸ್ವಿಯಾಗಿದ್ದುದನ್ನೂ ಉದಾಹರಿಸಿದನು. ಅಲ್ಲದೆ, ಶ್ರೀರಾಮನು ಅರಣ್ಯವಾಸವನ್ನೂ, ಹರಿಶ್ಚಂದ್ರನು ಹೆಂಡತಿ ಮಕ್ಕಳೊಂದಿಗೆ ತಲೆಮರೆಸಿಕೊಂಡಿದ್ದುದನ್ನೂ, ಶ್ರೀಕೃಷ್ಣನು ನಂದಗೋಪನ ಮನೆಯಲ್ಲಿ ಬೆಳೆದುದನ್ನೂ, ನಳಚಕ್ರವರ್ತಿ ಋತುಪರ್ಣನ ಮನೆಯಲ್ಲಿ ಸಹಣಿಯಾಗಿದ್ದುದನ್ನೂ ಹೇಳಿ, ರಾಮನನ್ನು ಒಡಂಬಡಿಸಿದನು. ಧರ್ಮರಾಯನು ತನ್ನ ತಮ್ಮಂದಿರೊಡನೆ ಅರಣ್ಯದಲ್ಲಿದ್ದಂತೆ, ರಾಮನು ತನ್ನ ಗೆಳೆಯರೊಂದಿಗೆ ನೆಲಮಾಳಿಗೆಯಲ್ಲಿ ಇರತೊಡಗಿದನು. ದೇವದೂತನು ಆ ರೀತಿ ರಾಮನಿಗೆ ಎಲ್ಲ ಏರ್ಪಾಡುಗಳನ್ನೂ ಮಾಡಿದ ಬಳಿಕ, ಬೈಚಪ್ಪನ ಬಳಿಗೆ ಬಂದು, ಅವರೆಲ್ಲರ ಪಡಿರೂಪಗಳನ್ನು ತೋರಿದನು.

ಬೈಚಪ್ಪನು ಆ ಪಡಿರೂಪುಗಳ ಹೆಡಗೈಯನ್ನು ಕಟ್ಟಿಸಿ, ತನ್ನ ಪಡೆಗೂಡಿ, ಊರಿನಲ್ಲಿ ಎಲ್ಲರೂ ನೋಡುವಂತೆ, ಅವರನ್ನು ವಧ್ಯಸ್ಥಾನಕ್ಕೆ ಕರೆದೊಯ್ದನು. ಪುರಜನರು ಆ ಹೃದಯವಿದ್ರಾವಕವಾದ ದೃಶ್ಯವನ್ನು ನೋಡಿ ಕಣ್ಣೀರಿಟ್ಟರು. ಸರ್ವರೂ ಕಂಪಿಲನು ಎಂಥ ಅನುಚಿತವಾದ ಕಾರ್ಯವನ್ನು ಮಾಡಿದನೆಂಬುದಾಗಿ ಮರುಗಿದರು. ಕೆಲವರಂತೂ, "ರಾಮನು ಸಾಯಲು ದುರ್ಗಕ್ಕೆ ಹಾನಿ ತಪ್ಪದು. ಕರ್ನಾಟಕವು ತುರುಕರ ವಶವಾಗುವುದು" ಎಂದು ಚಿಂತಿಸತೊಡಗಿದರು. ಹೆಂಡತಿಯ ಮಾತನ್ನು ಕೇಳಿ, ರಾಜನು ರಾಮನಂಥವನನ್ನು ಕೊಲ್ಲಿಸಿ, ಹಗೆಗಳಿಂದ ಪಾಡುಪಡದೆ ಇರನೆಂಬುದಾಗಿ ಹಲವರು ವ್ಯಥೆಪಟ್ಟರು. ಕಡೆಗೂ ಪಡಿರೂಪಗಳು ವಧ್ಯಸ್ಥಾನಕ್ಕೆ ಬಂದುವು. ರಾಮನ ಬಿಂಬವು ಈಶ್ವರನ ಧ್ಯಾನ ಮಾಡುತ್ತ ಕೊಲೆಗೆ ಅಣಿಯಾಯಿತು. ಕಟುಕರು ಹೇಗೆ ಕೊಲ್ಲುವುದೆಂದು ಹಿಂತೆಗೆಯುತ್ತಿರಲು, ಆ ಮೂರ್ತಿಯೇ ಭಟನೊಬ್ಬನ ಕತ್ತಿಯನ್ನು ಸೆಳೆದುಕೊಂಡು ತನ್ನ ತಲೆಯನ್ನು ತಾನೇ ಕಡಿದುಕೊಟ್ಟಿತು. ಅನಂತರ ಮಂತ್ರಿ ಆ ಗೆಳೆಯರ ತಲೆಗಳನ್ನು ಕಡಿಸಿದನು. ಆ ತಲೆಗಳೆಲ್ಲವೂ, ಹೆಂಡತಿಯ ಕುಟಿಲವನ್ನರಿಯದೆ ಆ ಕಾರ್ಯಕ್ಕೆ ತೊಡಗಿದ ಕಂಪಿಲನನ್ನು ಕಂಡು ನಗುವಂತೆ ಇದ್ದುವು. ಕಡೆಗೆ ಆ ತಲೆಗಳನ್ನು ತಟ್ಟೆಯಲ್ಲಿಟ್ಟುಕೊಂಡು ಬೈಚಪ್ಪನು ಕಂಪಿಲನಿಗೆ ತಂದು ತೋರಿಸಿದನು. ರಾಮನ ತಲೆಯಂತೂ, ಹರಿವಾಣದಲ್ಲಿಟ್ಟದ್ದ ಶಿಶುಪಾಲನ ತಲೆಯಂತೆಯೂ, ಅಗ್ನಿಕುಂಡಕ್ಕೆ ಸಿಡಿದ ದಕ್ಷನ ತಲೆಯಂತೆಯೂ, ಈಶ್ವರನ ಕೈಯಲ್ಲಿರುವ ಬ್ರಹ್ಮನ ತಲೆಯಂತೆಯೂ, ವೃದ್ಧಕ್ಷತ್ರನ ಕೈಯಲ್ಲಿದ್ದ ಸಿಂಧುರಾಜನ ತಲೆಯಂತೆಯೂ ಕಂಡುಬರುತ್ತಿತ್ತು. ರಾಮನ ತಲೆಯನ್ನು ಕಾಣುತ್ತಲೇ ಕಂಪಿಲನು ದುಃಖಿತನಾಗಿ ಪೀಠದಿಂದ ಕೆಳಕ್ಕೆ ಉರುಳಿಸಿದನು. ಬೈಚಪ್ಪನು ರಾಜನನ್ನು ಎತ್ತಿ ಕೂಡಿಸಿ, "ಇದೋ ದೇವಿಶೆಟ್ಟಿಲಿಂಗನ ತಲೆ, ಇದೋ ಸಾಯಿದೇವನ ತಲೆ, ಇದೋ ಹಡಪದ ಬಲ್ಲುಗನ ತಲೆ, ಇದೋ ಸಿಂಗನ ತಲೆ, ಇದೋ ಕೊಳ್ಳಿಯ ನಾಗನ ತಲೆ" ಎಂದು ಒಂದೊಂದಾಗಿ ತೋರಿಸಿದನು. ಕಂಪಿಲನ ಸಂಕಟ ತಡೆಯಲಸದಳವಾಯಿತು. "ಅಯ್ಯೋ! ನಾನು ಹೇಳಿದ್ದನ್ನು ಮುಂದಾಲೋಚನೆಯಿಲ್ಲದೆ ಮಾಡಬಹುದೆ ಮಂತ್ರಿ! ಬೇರೆ ಯಾರನ್ನಾದರೂ ಕೊಂದ ಶಾಸ್ತ್ರವನ್ನು ಮಾಡಿ, ಮಗನ ಪ್ರಾಣವನ್ನು ಉಳಿಸಬಾರದಾಗಿತ್ತೆ? ಮಗನನ್ನು ಎಲ್ಲಿಯಾದರೂ ಬಚ್ಚಿಟ್ಟದ್ದು, ಅನಂತರ ತಂದು ತೋರಿಸಿದ್ದರೆ ನಿನಗೆ ಅರ್ಧರಾಜ್ಯವನ್ನೇ ಕೊಡುತ್ತಿದ್ದೆನಲ್ಲ! ಕೋಪದಲ್ಲಿ ಆಡಿದ ಮಾತನ್ನು ನಿಜವೆಂದೇ ಗ್ರಹಿಸಬಹುದೆ?" ಎಂದು ಕಂಪಿಲನು ಹಲುಬತೊಡಗಿದನು. ಆಗ ಬೈಚಪ್ಪನು ರಾಜನಿಗೆ ಸಮಾಧಾನ ಹೇಳಿ, ಧೈರ್ಯಗೆಡಬೇಡವೆಂದೂ, ಹಾಗೆಲ್ಲ ಬಾಯಿಗೆ ಬಂದಂತೆ ಮಾತನಾಡಿದರೆ ಶತ್ರುರಾಜರು ಕಂಡು ನಗುವರೆಂದೂ, ಪ್ರಜೆಗಳೂ ಸಹ ರಾಜನು ಶುದ್ಧ ಕಪಟಸ್ವಭಾವದವನೆಂದು ಆಡಿಕೊಳ್ಳುವರೆಂದೂ ಬುದ್ಧಿವಾದವನ್ನು ಹೇಳಿದನು.

ರಾಮನ ಮರಣದ ವೃತ್ತಾಂತವು ಹರಿಹರದೇವಿಗೆ ತಿಳಿದು ಬಂದ ಕೂಡಲೇ ಆಕೆಗೆ ಶೂಲದಿಂದ ತಿವಿದಂತಾಯಿತು. ಆಕೆ ಕ್ಷಣಕಾಲ ನಿಶ್ಚೇಷ್ಟಿತಳಾದಳು. ರಾಮನಿಗೆ ಮರಣವಾದರೂ ಹೇಗೆ ಪ್ರಾಪ್ತವಾಯಿತೆಂದು

ಅವಳಿಗೆ ಅರ್ಥವಾಗಲಿಲ್ಲ. "ಸಂಗರಕೆಯ್ದುದುದಿಲ್ಲ ಮೈಯೊಳು ರೋಗಂಗಳಿಲ್ಲನ್ಯವಧುಗಳ ಸಂಗಕೆಳಸುವನಲ್ಲ" ಎಂದು ತರ್ಕಿಸಿದಳು. "ಕೊಂದರೊ ಪೆಂಡಿರು ಕೋಪದಿಂದುರುಗನೆಯ್ತಂದಗಿದುದೊ ಬಲುಭೂತ ಬಂದು ಹೊಯ್ದುದೊ ಮಗನಳಿದ ಕಥನವೇನು" ಎಂದು ಸಖಿಯರನ್ನು ಕೇಳಿದಳು. ಕಡೆಗೆ, ಅವರು ರತ್ನಾಜಿಯ ದೆಸೆಯಿಂದ ರಾಮನಿಗೆ ಸಾವು ಬಂದ ವೃತ್ತಾಂತವನ್ನು ತಿಳಿಸಿದರು. ಒಡನೆಯೇ ಹರಿಹರದೇವಿ "ಹರಹರ ಮಗ ರಾಮು ಪರನಾರಿಯ[ರ] ಕಂಡು ವರಿಸಬಲ್ಲನೆ ಮನದೊಳಗೆ ದುರುಳೆಯವಳು ನನ್ನ ಮೇಲಣ ಸವತಿಮಚ್ಚರದಿಂದೊರೆದು ಕೊಲಿಸಿದಳು" ಎಂದು ಉದ್ಗಾರ ತೆಗೆದು ರಾಜನನ್ನು ಟೀಕಿಸಿದಳು. "ಮಾನಿನಿಯರಿಗೆ ಮನವನಿತ್ತ ಮಾನವರೇನೇನ ಮಾಡರಿಳೆಯೊಳು" ಎಂದು ಆಕ್ಷೇಪಿಸಿದಳು. ಹೀಗೆ ರೋದಿಸುತ್ತಿರುವ ತಮ್ಮ ಅತ್ತೆಯ ಬಳಿಗೆ ಪ್ರಲಾಪಿಸುತ್ತ ರಾಮನ ಮಡದಿಯರೂ ಬಂದರು. ಒಂದೇ ಸಮನೆ ಗೋಳಿಡುತ್ತ, ರಾಯನಿಗೆ ಹೇಳಿ ರಾಮನ ತಲೆ ಕೊಡಿಸಿ, ತಮಗೆ ಸಹಗಮನಕ್ಕೆ ಸಿದ್ಧ ಮಾಡಿಸಬೇಕೆಂಬುದಾಗಿ ಬೇಡಿಕೊಂಡರು. ಸೊಸೆಯರ ಆ ಮಾತುಗಳನ್ನು ಕೇಳಿ ಹರಿಹರದೇವಿಯ ಸಂಕಟ ಮತ್ತಷ್ಟು ಮಿಗಿಲಾಯಿತು. ಅನಂತರ ಕೆಳದಿಯರ ಮೂಲಕ ಬೈಚಪ್ಪನನ್ನು ಬರಮಾಡಿಕೊಂಡು "ಕುಲಟೆಯ ಕುಹಕದ ನುಡಿಗೇಳಿ ಕಂಪಿಲ ಕೊಲಹೇಳಿದಡೆ ಮಗನನು ಕೊಲುವರೆ ಸಾಮಭೇದಾದಿಗಳಿಂದ ನೀನುಳುಹಿಕೊಳ್ಳದೆ ಬೈಚಪ್ಪಾ ಬಲು ಮಂತ್ರಿಯಲ್ಲವೆ ನೀನು" ಎಂದು ವಿಚಾರಿಸುತ್ತ ದೊಪ್ಪನೆ ನೆಲದ ಮೇಲೆ ಬಿದ್ದಳು. ಆ ಹೊತ್ತಿಗೆ ಸರಿಯಾಗಿ ಅಕ್ಕ ಮಾರಮ್ಮನೂ, ತಂಗಿ ಸಿಂಗಮ್ಮನೂ, ಶೋಕಾಂಬುಧಿಯಲ್ಲಿ ಮುಳುಗಿ, ರಾಮನನ್ನು ಮತ್ತೆ ಮತ್ತೆ ನೆನೆದು ಕಂಗೆಟ್ಟು ಕಣ್ಣೀರಿಡುತ್ತ ಬಂದರು. "ಹೊಸಮಲೆದುರ್ಗವ ಕೆಡಿಸದೆ, ಕಂಪಿಲನಸುವ ಕೊಳ್ಳದೆ, ಪೊಯ್ಸ ಭಟರ ಕುಸುರಿದಱಿಯದೆ ಕುಮ್ಮಟವ ಪಾಳಿಕ್ಕದೆ ಸಸಿನೆ ನೀನಿಂತು ಮಡಿವರೆ" ಎಂದ ಗೋಳಿಟ್ಟರು. "ಕಾಕತಿರುದ್ರ, ವೀರ ಬಲ್ಲಾಳ, ಕಪಿಲೇಶ್ವರ, ಸುರತಾಳರ ದಂಡಿಗೆ ಹೆದರದವನು, ಸಾಮಾನ್ಯ ಭಟರಿಗೆ ವಶನಾಗಿ, ಹೆಡಗೈ ಕಟ್ಟಿಸಿಕೊಂಡು ಸಾಯಬಹುದೆ?" ಎಂದು ಸಂಕಟಪಟ್ಟರು. "ತಂದೆಯೊಡನೆ ಕಾದುವು[ದಿ]ದುಚಿತವಲ್ಲವೆಂದಳಿದೆಯೊ, ವೀರರಾಮ ಹಂದೆತನದೊಳು ಮಡಿದೆಯೊ ಪೇಳಿದ ಱೊಂದುದವನೆಂದಳಲಿದಳು." ಅಕ್ಕ ಮಾರಮ್ಮನು "ತಮ್ಮ ಬಾ, ತರಳಾಯತೇಕ್ಷಣೆಯರ ಕಣ್ಣ ಕಮ್ಮಗಣೆಯ ಬಾರೆಂದು[ಸುಮ್ಮಾನ]ದಿಂದಾರ ಕರೆವೆನು" ಎಂಬುದಾಗಿಯೂ, ತಂಗಿ ಸಿಂಗಮ್ಮನು "ಅಣ್ಣ ರಾಮಯ್ಯ ಬಾ, ಹರಿಹರದೇವಿಯ ಚಿಣ್ಣ ರಾಮಯ್ಯ ಬಾರೆಂಮ ಬಣ್ಣಿಪೆನಾರನು" ಎಂಬುದಾಗಿಯೂ ಕಣ್ಣೀರಿಟ್ಟರು. ಆ ಹೆಣ್ಣುಮಕ್ಕಳಿಬ್ಬರೂ ಆ ರೀತಿಯಾಗಿ ಅಳುತ್ತ, ತಂದೆಯ ಬಳಿಗೆ ಬಂದು ಆತನ ಪಾದಗಳ ಮೇಲೆ ಬಿದ್ದರು. "ಕಗ್ಗಲಿಗೋಸ್ಕರ ಕಲ್ಪವೃಕ್ಷವನ್ನು ಕಡಿದೆಯಾ, ಹಸುವಿಗೋಸ್ಕರ ಕಾಮಧೇನುವನ್ನು ಕಡಿದೆಯಾ, ಸುರೆಗಾಗಿ ಸುಧೆಯನ್ನು ಚೆಲ್ಲಿದೆಯಾ, ಪಳೆಯ ನೀರಿಗಾಗಿ ಸಿದ್ಧರಸವನ್ನು ಚೆಲ್ಲಿದೆಯಾ" ಎಂದು ತಂದೆಯನ್ನು ಆಕ್ಷೇಪಿಸಿ ಪ್ರಲಾಪಿಸಿದರು. ಕಡೆಗೆ "ಸುರುತಾಳ ದಂಡೆತ್ತಿ ಬಹ ಪರಿಯಂತ ನೀನಿರು ದುರ್ಗದೊಳು ಬರಲೊಡನೆ ತರುಣಿಯೊಡನೆ ತಳರಡವಿಗೆ" ಎಂದು ಕಟುವಾಗಿ ನುಡಿದರು. ಅಂತಃಪುರದ ಗೋಳು ಎಲ್ಲೆಡೆಗೂ ವ್ಯಾಪಿಸಿತು. ದೇವತೆಗಳ ಕಣ್ಣೀರು ಭೂಮಿಯ ಮೇಲೆ ಹೊನಲಾಗಿ ಹರಿಯಿತು. ಹರಿಹರದೇವಿ ಬೈಚಪ್ಪನನ್ನು ಕರೆದು ಸೊಸೆಯರಿಗೆ ರಾಮನ ತಲೆಯನ್ನು ತರಿಸಿಕೊಟ್ಟು, ಅವರ ಸಹಗಮನಕ್ಕಾಗಿ ಎಲ್ಲ ಏರ್ಪಾಡುಗಳನ್ನೂ ಮಾಡಬೇಕೆಂದು ಹೇಳಿದಳು. ರಾಜನ ಅನುಮತಿ ಪಡೆದು, ರಾಮನಾಥನ ಶಿರವನ್ನು ತರಿಸಿಕೊಟ್ಟು, ಶ್ರೀಗಂಧದ ಕೊರಡುಗಳನ್ನು ಅಣಿಗೊಳಿಸಿ ಉರಿಗೊಂಡವನ್ನು ಮಾಡಿಸಿದನು. ಉಳಿದ ವೀರ ಭಟರ ಪತ್ನಿಯರಿಗೂ, ಅವರವರ ಪತಿಯ ರುಂಡವನ್ನು ತರಿಸಿಕೊಟ್ಟನು. ರಾಮನ ಪತ್ನಿಯರು ಚಿತೆಯೇರಲು ತಕ್ಕಂತೆ ಅಲಂಕೃತರಾದರು. ವೀರ ಮುದ್ರಿಕೆ, ನೂಪುರ, ಕಾಂಚಿದಾಮ, ಹಾರ, ಪದಕ, ಹತ್ತುಕಟ್ಟು, ತೋರಮೂಕುತಿ, ಬೊಟ್ಟು, ತುರುಬಿನಬಲೆವಣಿ, ಉಂಗುರ, ಕಡಗ, ಕಂಕಣ, ಬಾಹುಪೂರ, ಭುಜಕೀರ್ತಿ

ವಜ್ರದೋಲೆ, ಮುರುಡಿಯ ಸರಪಣಿ, ಮುಂಗಯ್ಯ ಮುರಿ, ಹಸ್ತಸರ, ಹೊನ್ನಬಳೆ, ತೋಳ ಬಂದಿ, ಮೊದಲಾದ ಆಭರಣಗಳನ್ನು ಧರಿಸಿಕೊಂಡರು. ಕೈಯಲ್ಲಿ ನಿಂಬೆಹಣ್ಣು ಮತ್ತು ಕನ್ನಡಿಗಳನ್ನು ಹಿಡಿದುಕೊಂಡು ಹರಿಹರದೇವಿಯ ಪಾದಗಳಿಗೆ ನಮಸ್ಕರಿಸಿದರು. "ಪುರುಡು ಬೇಡಕ್ಕತಂಗಿಯರೊಳು ಪುರುಷನೊಳೆರವು ಗಾಣಿಸಬೇಡ" ಎಂದು ಆಕೆ ಸೊಸೆಯರಿಗೆ ಬುದ್ಧಿವಾದ ಹೇಳಿ ಬೀಳ್ಕೊಟ್ಟಳು. ಆ ಮಾಸತಿಯರನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಕೊಂಡದ ಬಳಿ ನಿಲ್ಲಿಸಿ ತೆರೆಹಿಡಿದರು. ಆ ಹೆಂಗಸರು "ಪನಿನೀರ ಕುಪ್ಪಿಗೆ, ಕಪ್ಪುರ ದಂಡೆ, ಪೂವಿನ ಪೊಟ್ಟಣ, ಮೃಗಮದದಾ ತನಿಗಂಪಿನ ವೀಣೆ (?) ಸಾದಿನ ಭರಣಿ" ಮುಂತಾದ ಸುಗಂಧ ದ್ರವ್ಯಗಳನ್ನು ಉರಿಯಲ್ಲಿ ಹಾಕಿದರು. ಉಳಿದ ಸುಭಟರ ಮಾಸತಿಯರನ್ನೂ ಹಾಗೆಯೇ ನಿಲ್ಲಿಸಿದರು. ಅನಂತರ, ದೇವದೂತನು ಅವರೆಲ್ಲರನ್ನೂ ಅತ್ತ ಕಳುಹಿಸಿ, ಅವರಿಗೆ ಪ್ರತಿಯಾಗಿ ಮಾಯಾಲಲನೆಯರನ್ನು ತಂದು ನಿಲ್ಲಿಸಿದನು. ಆ ಕೃತಕದ ಮಾಸತಿಯರು ಪುರಜನರನ್ನು ಹರಸುತ್ತ ಉರಿಗೊಂಡದಲ್ಲಿ ಧುಮುಕಿದರು. ಊರಿನವರೆಲ್ಲ ಗೋಳಿಟ್ಟರು. ಇತ್ತ ದೇವದೂತನು ನಿಜವಾದ ಸತಿಯರನ್ನು ಕೈವಿಡಿದೆತ್ತಿ ಕೊಂಡುಯ್ದು ಅವರವರ ಚಿತ್ತವಲ್ಲಭರ ಬಳಿ ಬಿಟ್ಟನು. ಕೆಲಸವೆಲ್ಲ ಮುಗಿದ ಬಳಿಕ ಬೈಚಪ್ಪನು ಆ ಅಗ್ನಿಕುಂಡವನ್ನು ಮುಚ್ಚಿಸಿ, ಕಂಪಿಲನಿಗೆ ಎಲ್ಲ ವೃತ್ತಾಂತವನ್ನೂ ತಿಳಿಸಿದನು. ಕಂಪಿಲನು ಒಂದೇ ಸಮನೆ ಸಂಕಟಪಟ್ಟನು. ಬೈಚಪ್ಪನು ರಾಜನಿಗೆ ದೇಹದ ಅನಿತ್ಯತೆಯನ್ನೂ ಕರ್ಮ ಸಿದ್ಧಾಂತವನ್ನೂ ಬೋಧಿಸಿ ಸಮಾಧಾನ ಮಾಡಲು ಪ್ರಯತ್ನಿಸಿದನು. ಇತ್ತ ರಾಮನಾಥನು "ಹಿಂದಣಭವದೊಳಮರಲೋಕದೊಳಗೆ ಪುರಂದರ ಪುರದೊಳಿರ್ಪಂತೆ" ನೆಲಮಾಳಿಗೆಯಲ್ಲಿದ್ದನು. ದೇವದೂತನು ಆತನಿಗೆ ಸಮಸ್ತರೀತಿಯಾದ ಸಂತೋಷಕ್ಕೂ ಸಜ್ಜುಗೊಳಿಸಿದ್ದನು.

ರಾಮನ ಮರಣವಾರ್ತೆಯನ್ನು ಕೇಳಿ ರತ್ನಾಜಿಗೆ ಮತ್ತೊಂದು ತೆರನಾದ ದುಃಖ ಮೊದಲಾಯಿತು. ಆತನು ಜೀವಸಹಿತವಿದ್ದಿದ್ದರೆ ಒಂದಲ್ಲ ಒಂದುದಿನ ಒಲಿಸಬಹುದಾಗಿತ್ತೆಂದೂ, ಕಡೆಗೆ ಕಣ್ಣಿನಿಂದ ನೋಡಿ ಭಾವರತಿಯನ್ನಾದರೂ ಅನುಭವಿಸಬಹುದಾಗಿತ್ತೆಂದೂ, ತಾನಾದರೂ ಆತನನ್ನು ಅರ್ಥಮಾಡಿಕೊಳ್ಳದೆ ದುಡುಕಿ ಕಾಮಾಂಧಳಾಗಿ ವರ್ತಿಸಿದ್ದರಿಂದ ಅವನು ನಿರಾಕರಿಸಿರಬಹುದೆಂದೂ ಪರಿಪರಿಯಾಗಿ ಸಂಕಟಪಡುತ್ತ ಸಂಗಿಯೊಂದಿಗೆ ಹೇಳಿಕೊಂಡಳು. ಆಗ ಆ ಆಪ್ತದೂತಿ "ನೀರು ಹರಿದು ಹೋದಮೇಲೆ ಮತ್ತೆ ತಿದ್ದಲು ಸಾಧ್ಯವೆ? ವೃಥಾ ವ್ಯಥೆಯೇಕೆ?" ಎಂದು ಸಮಾಧಾನಮಾಡಿದಳು.

ಬೈಚಪ್ಪನು ಹರಿಹರದೇವಿಯ ದುಃಖವನ್ನು ಪರಿಹರಿಸಬೇಕೆಂದು ಭಾವಿಸಿ, ಅರಮನೆಗೆ ಬಂದು, ಕಟ್ಟೇಕಾಂತದಲ್ಲಿ ಕಂಡು, ರಾಮನು ಸತ್ತಿಲ್ಲವೆಂದೂ, ಆತನನ್ನು ಇಂದ್ರಜಾಲದಿಂದ ಒಂದೆಡೆ ಸುರಕ್ಷಿತವಾಗಿ ಇಟ್ಟಿರುವುದಾಗಿಯೂ ಹೇಳಿದನು. ಆ ಮಾತನ್ನು ಕೇಳಿ ಆಕೆ "ಹಾಗಾದರೆ ನನ್ನ ಸೊಸೆಯರು ಹುಸಿತಲೆಯನ್ನು ಹಿಡಿದು ಅಗ್ನಿ ಪ್ರವೇಶಮಾಡಿದರೆ? ನಾನು ಬೇರೆ ನಿನ್ನ ಮಾತನ್ನು ನಂಬಲಾರೆ. ನನಗೆ ಕೇವಲ ಸಮಾಧಾನ ಹೇಳುವ ಮಾತುಗಳು ಇವು" ಎಂದು ಖಂಡಿಸಿದಳು. ಆಗ ಮಂತ್ರಿ ನಿಜವಾದ ಸ್ಥಿತಿಯನ್ನು ತೋರಿಸುವುದಾಗಿ ಹೇಳಿ, ಮತ್ತೆ ದೇವದೂತನನ್ನು ಬರಮಾಡಿಕೊಂಡನು. ಆ ದೇವದೂತನು ಹರಿಹರದೇವಿಯ ಪಡಿರೂಪವನ್ನು ಅರಮನೆಯಲ್ಲಿಟ್ಟು, ಆಕೆಯನ್ನು ರಾಮನಿದ್ದ ನೆಲಮಾಳಿಗೆಯ ಬಳಿ ಕರೆದೊಯ್ದನು. ಹರಿಹರದೇವಿಯನ್ನು ಕಂಡೊಡನೆಯೇ, ರಾಮನೂ, ಆತನ ಹೆಂಡತಿಯರೂ ಬಂದು ನಮಸ್ಕರಿಸಿದರು. ಸಂತೋಷದಿಂದ ಅವರೆಲ್ಲರನ್ನೂ ಹರಸಿದಳು. ಮರುಕ್ಷಣದಲ್ಲಿ ದೇವದೂತನು ಹರಿಹರದೇವಿಯನ್ನು ಅರಮನೆಗೆ ಕರೆತಂದನು.

ರಾಮನ ಮರಣವಾರ್ತೆಯನ್ನು ಕೇಳಿದ ಸುರುತಾಳನ ಮಗಳು "ಸುರುಗಿಯೊಡಲನುರ್ಚಿದಂತೆ" ನೊಂದು ಪೂರ್ವಜನ್ಮದ ಸ್ಮರಣೆ ಬೇರೆ ಬಂದು ತುಂಬ ಸಂಕಟಪಟ್ಟಳು. ಅವನನ್ನೇ ಧ್ಯಾನಿಸುತ್ತ ನೆಪಮಾತ್ರಕ್ಕೆ ಬದುಕಿದ್ದಳು.

## ನೇಮಿಯ ದ್ವಿತೀಯ ದಂಡಯಾತ್ರೆ

ದೂತನೊಬ್ಬನು ಬಂದು ರಾಮನ ಮರಣವಾರ್ತೆಯನ್ನು ಸುರುತಾಳನಿಗೆ ತಿಳಿಸಿದನು. ರತ್ನಾಜಿಯ ಪ್ರಕರಣವನ್ನು ವಿಶದಪಡಿಸಿದನು. ಆ ಸಮಾಚಾರವನ್ನು ಕೇಳಿದ ಕೂಡಲೇ ಸುರುತಾಳನಿಗೆ ಅತ್ಯಂತ ಆನಂದ ವಾಗಿ, ನೇಮಿ ಮಲ್ಲುಕನನ್ನು ಕರೆದು, ಒಡನೆಯೇ ಕುಮ್ಮಟವನ್ನು ನಾಶಮಾಡಬೇಕೆಂಬುದಾಗಿ ಆಜ್ಞೆ ಮಾಡಿದನು. ಕರ್ಣಾರ್ಜುನರಿಗೆ ಸಮನಾದ ಭಟನು ಸತ್ತಿರುವನೆಂದೂ, ತಾನು ಕೃತಾರ್ಥನಾದೆನೆಂದೂ, ಕರ್ನಾಟಕವನ್ನು ಇರಿದು ಕುಮ್ಮಟವನ್ನು ನೆಲಸಮ ಮಾಡಬೇಕೆಂದೂ ಅಪ್ಪಣೆ ಮಾಡಿದನು. ನೇಮಿಯೂ ಸಹ ಸುರುತಾಳನಷ್ಟೇ ಸಂತೋಷಗೊಂಡು "ಮಡಿಯಲಿ ಮಡಿಯದಿರ್ದರೆ ಮಾಣಲಿ ರಾಮನೊಡನೆ ದಾಳಿಯ ನಿಕ್ಕಿ ನಾನು ಕೆಡಿಸಿ ಕುಮ್ಮಟವನು ಕಂಪಿಲದೇವನ ಹಿಡಿದುತಹೆನು ನಿನ್ನ ಬಳಿಗೆ" ಎಂದು ಶಪಥ ಮಾಡಲು ರಾಜನು ಅವನಿಗೆ ಸನ್ಮಾನವಿತ್ತನು. ನೇಮಿ ತನ್ನ ಸೈನ್ಯದೊಂದಿಗೆ ಕೂಡಿ, ದಾರಿಯ ಮನ್ನೆಯರನ್ನು ಕಾಣುತ್ತ ಮಾಳವ, ಮಗಧ, ನೇಪಾಳ, ಗುರ್ಜರ, ಪಾಂಚಾಲ ದೇಶಗಳನ್ನು ಹಾದು ಬಿದಿರೆಗೆ ಬಂದು ಬೀಡುಬಿಟ್ಟನು. ಗಡಿಯ ಕಾವಲು ನಾಯಕರು ಈ ವಿಷಯವನ್ನು ಕಂಪಿಲನಿಗೆ ತಿಳಿಸಲು, ಆತನು ಕೂಡಲೆ ಬೈಚಪ್ಪನನ್ನು ಬರಮಾಡಿಕೊಂಡು ಪರ್ಯಾಲೋಚಿಸಿದನು. "ಕುಮ್ಮಟದುರ್ಗಕ್ಕಿಂತಲೂ ಹೊಸಮಲೆಯಲ್ಲಿ ಶತ್ರುವನ್ನು ಎದುರಿಸಬಹುದಲ್ಲವೆ ?" ಎಂದನು. ಕುಮಾರರಾಮನ ಮರಣಕ್ಕಾಗಿ ಮತ್ತೆ ಮತ್ತೆ ಮರುಗಿದನು. ಬೈಚಪ್ಪನು ಹೊಸಮಲೆಗಿಂತಲೂ ಕುಮ್ಮಟದುರ್ಗದಿಂದಲೇ ಎದುರಿಸುವುದು ಸೂಕ್ತವೆಂದು ಉತ್ತರವಿತ್ತು, ಕೋಟೆಯ ವಿವಿಧ ಭಾಗಗಳನ್ನು ಭದ್ರಪಡಿಸಿದನು. ಆ ವೇಳೆಗಾಗಲೇ, ಅಂಗ,ಬಂಗಾಳ, ಕೊಂಕಣ, ಕೋಸಲ, ಕುರು ಜಾಂಗಣ, ಹೂಣ, ಕಮ್ಮಾರ, ಬಂಗನಾಯಕರು, ಬರ್ಬರ, ಕನ್ನೋಜಿ, ಖರ್ಪರ ದೇಶಗಳ ಅರಸರು ತಮ್ಮ ತಮ್ಮ ಸೇನೆಗಳೊಡನೆ ಬಂದು, ನೇಮಿ ಮಲ್ಲುಕನ ಕಡೆ ಸೇರುತ್ತಿದ್ದರು. ನೇಮಿ ಅಮಿತ ಬಲದೊಡನೆ ಹೆದ್ದೊರೆಯನ್ನು ದಾಟಿದನು. ಯುದ್ಧಸನ್ನದ್ಧನಾಗಿದ್ದ ಕಂಪಿಲನೂ, ತನ್ನವರೊಂದಿಗೆ ಹೇಗೆ ವರ್ತಿಸುವುದೆಂದು ಭಯಗ್ರಸ್ತನಾಗಿ ಯೋಚಿಸತೊಡಗಿದನು. ಬೈಚಪ್ಪನು ಮಾಡಿದ ಅಕಾರ್ಯಕ್ಕಾಗಿ ಪುನಃ ಪುನಃ ಪಶ್ಚಾತ್ತಾಪ ಪಟ್ಟನು. ಮಂತ್ರಿಪಟ್ಟವು ವಿಪ್ರರು ಇಲ್ಲವೇ ವೈಶ್ಯರಿಗೆ ಹೊರತು ಬೇರಾರಿಗೂ ಅರ್ಹವಲ್ಲವೆಂದು ಸಕಾರಣ ವಾಗಿ ವಾದಿಸಿದನು. ಸ್ವಾರ್ಥಪರರಾದ ಉಳಿದವರು ಆ ಪದವಿಗೆ ವಿಶ್ವಾಸಪಾತ್ರರಲ್ಲವೆಂದು ಅವನ ತರ್ಕ. ಅದ್ದರಿಂದ, ಬೈಚಪ್ಪನನ್ನು ಶೂದ್ರನೆಂದು ತೆಗಳಿ "ಮಿತ್ರರ ಕೊಲ್ಲೆನೆ ಹರಿಹರದೇವಿಯ ಪುತ್ರನ ಕೊಂದೆ" ಎಂಬು ದಾಗಿ ಹೀಯಾಳಿಸಿದನು. ಈ ರೀತಿ ಮಾತು ಸಾಗುತ್ತಿರಲು, ಅಣ್ಣ ಭೈರವದೇವನು ಎದ್ದು ನಿಂತು ಅತ್ಯಂತ ವಿನಯದಿಂದ, ರಾಮನಂಥವನನ್ನು ಕಳೆದುಕೊಂಡಿದ್ದಕ್ಕೆ ಚಿಂತಿಸಿ ಫಲವಿಲ್ಲವೆಂದೂ, "ಗರುಡನಾಮೋ ಚ್ಚರಣ [ದ] ಬಲದಿಂದುಗ್ರಗರಳವನಹಿತುಂಡಿಕನು ಹರಯಿಸುವಂತೆ" ತಮ್ಮನ ಹೆಸರನ್ನು ಉಚ್ಚರಿಸಿ, ತಾನು ಶತ್ರುವನ್ನು ಸಂಹಾರ ಮಾಡುವುದಾಗಿಯೂ ಕಂಪಿಲನಿಗೆ ಅಭಯವಿತ್ತನು. ಇತರ ಕುವರರೂ, ಅಳಿಯಂದಿರೂ, ಕಲಿಗಳೂ, ರಾಜರೂ, ಇರಬೇಕಾದರೆ ಹಾಗೆ ಪರಿತಪಿಸುವುದು ತಕ್ಕುದಲ್ಲವೆಂದನು. ಅಣ್ಣ ಭೈರವದೇವನ ಮಾತನ್ನು ಆಲಿಸಿದ ಇತರ ಮನ್ನೆಯರೂ ತಾವೂ ಶತ್ರುವನ್ನು ಅಣ್ಣೆಕಲ್ಲಾಡುವುದಾಗಿ ತಿಳಿಸಿದರು. ಕಂಪಿಲನು ಬಾದುರನ ಕಡೆ ತಿರುಗಿ ನೋಡಲು, ಆತನು "ಎಲೈ ದೊರೆಯೆ ! ನಿನ್ನ ಸೈನ್ಯದಲ್ಲಿ ಬೇಕಾದಷ್ಟು ಮಂದಿ ಧೀರರು ಇದ್ದಾರೆ. ನೇಮಿಖಾನನ ಬಲವನ್ನು ನಾನು ಚೆನ್ನಾಗಿ ಬಲ್ಲೆ. ಅಂದು ನಾನೊಬ್ಬನೇ ಅವನ ಬಲವನ್ನು ಹಿಂದಟ್ಟಿದ್ದೆನಷ್ಟೆ. ನಿನ್ನ ಮಗನಿಲ್ಲವೆಂದು ಚಿಂತಿಸಬೇಡ. ನಾನು ಶತ್ರುವನ್ನು ಬಡಿದೋಡಿಸುವೆನು" ಎಂದನು. ರಾಜನು ಬಾದುರನನ್ನು ಕೊಂಡಾಡಿದನು. ದೆಹಲಿಯ ವಜೀರರಲ್ಲಿ ಯಾರೂ ಸಾಧಿಸಲಾರದ ಮುಂಗುಲಿ ರಾಯನ ಬಿಲ್ಲನ್ನು ಹೆದೆಯೇರಿಸಿ ಏಳು ಕೊಪ್ಪರಿಗೆಗಳನ್ನು ಏಕಕಾಲದಲ್ಲಿ ಗುರಿಯಿಟ್ಟು ಛೇದಿಸಿದ ಆತನ ಸಾಹಸವನ್ನೇ ಸ್ಮರಿಸಿಕೊಂಡು, ಹೊಗಳಿ, ಬೇಕಾದ ಹಾಗೆ ಸನ್ಮಾನಿಸಿದನು. ಅನಂತರ ಬೈಚಪ್ಪನು ಮಹಾ ರಾಜನಿಗೆ ಪ್ರಿಯವಾಗುವಂತೆ ಕೆಲವು ಮಾತುಗಳನ್ನು ಹೇಳಿದನು.

ಮಂತ್ರಿ ತಾನೊಬ್ಬ ರಾವುತನನ್ನು ಕರೆಸುವುದಾಗಿಯೂ, ಆತನು ಅತ್ಯಂತ ಪರಾಕ್ರಮಿಯೆಂದೂ, ನೇಮಿಯ ಬಲವನ್ನು ಸಂಹರಿಸುವುದರಲ್ಲಿ ಸಂದೇಹವಿಲ್ಲವೆಂದೂ, ಆತನಿಗಾಗಿ ಹೇಳಿಕಳುಹಿಸಿರುವುದಾಗಿಯೂ ಕಂಪಿಲನಿಗೆ ತಿಳಿಸಿದನು. ಆ ಮಾತನ್ನು ಕೇಳುತ್ತಲೇ ಮಹಾರಾಜನಿಗೆ ಕಿವಿ ನೆಟ್ಟಗಾಯಿತು. ಆತನು ಯಾರೆಂದು ವಿವರ ಕೇಳಿದನು. ಬೈಚಪ್ಪನು "ಎಲೈ ರಾಜನೇ ಕೇಳು. ನಿಮ್ಮ ಪೂರ್ವದ ಅರಸನಾದ ರಾಮ ದೇವನಿಗೆ ನಾಲ್ಕುಜನ ಪುತ್ರರಿದ್ದರು. ಅವರು ಒಬ್ಬೊಬ್ಬರೂ ಮಹಾರಾಜನ ಯಡವಕ್ಕ, ಬಲವಕ್ಕ, ರಾಯ ಮೋಹರ, ಬೇಡಪಡೆಗಳ ನಾಯಕರಾಗಿದ್ದರು. ಬೇಡಪಡೆಯ ನಾಯಕನಾಗಿದ್ದ ರಾಜಕುಮಾರನು ಅತ್ಯಂತ ಸ್ಫುರದ್ರೂಪಿಯಾಗಿದ್ದನು. ಅವನು ಪುಳಿಂದಪುತ್ರಿಯೊಬ್ಬಳನ್ನು ಕಂಡು ಮನಸೋತನು. ಆಕೆಯ ತಂದೆ ಯನ್ನು ಕಂಡು ಅವಳನ್ನು ತನಗೆ ಕೊಡಬೇಕೆಂದು ಕೇಳಲು, ಆತ ರಾಜಕುಮಾರನು ತನ್ನ ಮನೆಗೆ ಬಂದು ಊಟಮಾಡಿದರೆ ಕೊಡುವೆನೆಂದೂ, ಹಾಗಲ್ಲದೆ ಬಲಾತ್ಕರಿಸಿದರೆ ಮಗಳನ್ನೇ ಕೊಲ್ಲುವುದಾಗಿಯೂ ಒಂದು ನಿರ್ಬಂಧವನ್ನು ವಿಧಿಸಿದನು. "ಕಡುಕಾಮಿಗೆಲ್ಲಿಯ ಕುಲಶೀಲ" ಎಂಬಂತೆ, ಆ ರಾಜಕುಮಾರನು ಆ ಶಬರನ ಮನೆಯಲ್ಲಿ ಉಂಡು, ಆ ಹೆಣ್ಣನ್ನು ಮದುವೆಮಾಡಿಕೊಂಡು ಬಂದನು. ಇದರಿಂದ ಇತರರು ಆ ರಾಜಕುಮಾರ ನನ್ನು ಬಹಿಷ್ಕರಿಸಿದರು. ಕೆಲವು ದಿನಗಳಲ್ಲಿಯೇ ದೇವಗಿರಿ ತುರುಕರಿಂದ ಹಾಳಾಯಿತು. ಬಹಿಷ್ಕೃತನಾದ ರಾಜಕುಮಾರನಾದರೋ ಚಿತ್ರಕೂಟಾದ್ರಿಗೆ ಬಂದು, ಅಲ್ಲಿಯ ದುರ್ಗಾಧಿಪತಿಯ ಆಶ್ರಯವನ್ನು ಪಡೆದನು. ಅಲ್ಲಿಯ ರಾಜನು ಅವನನ್ನು ಬರಮಾಡಿಕೊಂಡು, ಉಂಬಳಿಯಿತ್ತು ತುರುಕರನ್ನು ಹಿಂದಟ್ಟುವ ಸಲುವಾಗಿ ಗಡಿಕಾಯುವ ಕೆಲಸವಿತ್ತನು. ಆತನ ವಂಶದಲ್ಲಿ ಕಂಪನೆಂಬುವನು ಹುಟ್ಟಿದನು. ಕಂಪನಿಗೆ ರಾಮನೆಂಬ ಮಗ ನಾದನು. ಅವನು ಅತ್ಯಂತ ಚೆಲುವ. ಸುರುತಾಳನು ಬಂದು ಮುತ್ತಲು, ಆತನ ಬಲವನ್ನು ಹಿಮ್ಮೆಟ್ಟಿಸಿದ ಧೀರನೂ ಹೌದು. ಅವನ ಶೌರ್ಯಕ್ಕೆ ಮೆಚ್ಚಿ ಚಿತ್ರಕೂಟಾದ್ರಿಯ ಅರಸು ಅವನಿಗೆ ಬೇಕಾದ ಹಾಗೆ ಸನ್ಮಾನ ಮಾಡಿದನು. ಆ ಕುಮಾರನು ಪರನಾರಿ ಸಹೋದರನೆಂದು ಹೆಸರು ಪಡೆದಿದ್ದನು. ಒಂದು ಬಾರಿ ಎಲ್ಲ ಮಾಂಡಲಿಕರೂ ನೆರೆದಿರುವಂದು, ಚಿತ್ರಕೂಟಾದ್ರಿಯ ಅಧಿಪತಿಯ ಹೆಂಡತಿ ಆ ರಾಮನನ್ನು ಕಂಡು ಮೋಹಿಸಿ ದಳು. ಅವನನ್ನು ತನ್ನೆಡೆಗೆ ಬರಮಾಡಿಕೊಳ್ಳುವ ಸಲುವಾಗಿ, ಸುಸಂಗತೆ ಎಂಬ ತನ್ನ ದೂತಿಯನ್ನು ಕಳುಹಿಸಿ ದಳು. ರಾಣಿಯ ಇಂಗಿತವನ್ನು ಹೇಳುವುದೇ ತಡ, ಅವನು ಬಹಳ ಕುಪಿತನಾದನು. "ಒಡೆಯನ ಹೆಂಡತಿ ತಾಯಿಯ ಸಮಾನವಲ್ಲವೆ? ಅದು ಸಲ್ಲದು" ಎಂದು ದೂತಿಯನ್ನು ತೆಗಳಿ ಹಿಂದಟ್ಟಿದನು. ಆ ಮಾತು ಗಳನ್ನು ಕೇಳಿದ ಮಹಾರಾಣಿಗೆ ಆತನ ಮೇಲೆ ಮತ್ಸರವುಂಟಾಯಿತು. ಮಹಾರಾಜನನ್ನು ಕರೆದು, ಗಡಿಯ ಮನ್ನೆಯನಾದ ರಾಮನು ತನ್ನನ್ನು ಕಾಮಿಸಿರುವನೆಂದೂ, ತನಗೆ ನಾನಾ ಸುಗಂಧಪರಿಕರಗಳನ್ನು ಕಳುಹಿಸಿರು ವನೆಂದೂ, ದೂರು ಹೇಳಿದಳು. ಮಹಾರಾಜನಿಗೆ ಸಿಟ್ಟೇರಿತು. ಕೂಡಲೆ ಮಂತ್ರಿಯನ್ನು ಬರ ಮಾಡಿಕೊಂಡು ಅವನನ್ನು ಸಂಹರಿಸಬೇಕೆಂದು ಆಜ್ಞಾಪಿಸಿದನು. ಮಂತ್ರಿಗಾದರೋ, ಅಂಥ ಧೀರನನ್ನು ಕೊಂದರೆ, ಮುಂದೆ ತುರುಕರಿಂದ ತಮಗೆ ಕೇಡು ತಪ್ಪದೆಂದು ಯೋಚಿಸಿ, ಅವನನ್ನು ಬೇರೊಂ ದೆಡೆಗೆ ಕಳುಹಿಸಿಕೊಟ್ಟು, ಇನ್ನೊಬ್ಬನ ಮೂಲಕ, ಹೇಗೋ ರಾಜಾಜ್ಞೆಯನ್ನು ನೆರವೇರಿಸಿದನು. ಆ ಧೀರನು ಮಾಯಾಪುರಿಯಲ್ಲಿದ್ದುದನ್ನು ಕೇಳಿ, ನಾನು ಅವನನ್ನು ಕರೆತರಬೇಕೆಂದಿದ್ದೇನೆ. ಇನ್ನು ಮೂರುದಿನಗಳಿಗೆ ಅವನು ಬರುತ್ತಾನೆ. ನಿನಗೆ ಆತನನ್ನು ತೋರಿಸುತ್ತೇನೆ" ಎಂದು ದೀರ್ಘ ವೃತ್ತಾಂತವನ್ನೇ ಹೇಳಿದನು. ಕಂಪಿಲನಿಗೆ ತನ್ನ ಮಗನನ್ನು ಕಳೆದುಕೊಂಡ ಸಂಕಟವು ಮಿಗಿಲಾಗಿ, ಮಂತ್ರಿ ಯನ್ನು ಕುರಿತು "ನೀನೂ ಹಾಗೆಯೇ ರಾಮನನ್ನು ರಕ್ಷಿಸಬಾರದಿತ್ತೆ?" ಎಂದು ಯಾತನೆಪಟ್ಟನು. ಬೈಚಪ್ಪನು ತಾನು ರಾಮನನ್ನು ಕಂಡಿದ್ದನ್ನೂ, ಆತನ ಮೇಲಿನ ಅಪವಾದವನ್ನು ವಿವರಿಸಲು ಅವನು ನಿಜ ವೃತ್ತಾಂತವನ್ನು ತಿಳಿಸಿದ್ದನ್ನೂ ಹೇಳಿದನು. ಕಂಪಿಲನಿಗೆ ಮತ್ತಷ್ಟು ಯಾತನೆಯಾಯಿತು. "ತಪ್ಪಿಲ್ಲದ ವನನ್ನು ಕೊಲ್ಲಬಹುದೆ ಮಂತ್ರಿ" ಎಂದು ಬೈಚಪ್ಪನನ್ನು ಆಕ್ಷೇಪಿಸಿದನು. ಬೈಚಪ್ಪನು ರಾಜನಿಗೆ ತಾನು

ಹೇಳಿದ ಬುದ್ಧಿವಾದವನ್ನೂ, ಮಹಾರಾಜನ ಕಟ್ಟಪ್ಪಣೆಯನ್ನೂ ಜ್ಞಾಪಕಮಾಡಿಕೊಟ್ಟು, ಮತ್ತೆ ತನ್ನನ್ನೇ ಹೀಯಾಳಿಸುವುದು ತಕ್ಕುದಲ್ಲವೆಂದು ವಾದಿಸಿದನು. ಆ ನೆಪದಲ್ಲಿ ಮಹಾರಾಜನ ಚಿತ್ತಚಾಂಚಲ್ಯವನ್ನೂ ನಿರೂಪಿಸಿದನು. ಅನಂತರ ಕಂಪಿಲನು, ತಂದೆಯ ಕಾಲದಿಂದ ಬಂದ ಮಂತ್ರಿವರ್ಯನೊಂದಿಗೆ ಮುಂದಿನ ಕಾರ್ಯವನ್ನು ಕುರಿತು ಆಲೋಚಿಸಿದನು. ಮಂತ್ರಿ ಆ ಸಮಯದಲ್ಲಿ ಭೀತಿಗ್ರಸ್ತರಾಗುವುದು ಸಾಧುವಲ್ಲ ವೆಂದೂ ಹೇಳಿ, ಅಣ್ಣಭೈರವ, ಅಳಿಯಮಲ್ಲರಸ, ವೀರಬಾದುರರಿಗೆ ಸೈನ್ಯದ ಹೊಣೆಯನ್ನು ವಹಿಸಿದನು. ಎಲ್ಲರೂ ಯುದ್ಧಮಾಡಲು ಅನುವಾಗತೊಡಗಿದರು. ಬೈಚಪ್ಪನು ರಾಮನ ದಿವ್ಯಾಶ್ವವನ್ನು ತರಿಸಿದನು. ಕಂಪಿಲನು ಅದನ್ನು ಯಾಕೆ ತರಿಸಿದೆಯೆಂದು ಕೇಳಲು, ತಾನು ಕರೆಸಲಿರುವ ಹೊಸರಾಹುತನಿಗೆ ಅದು ಬೇಕಾಗುವುದೆಂದು ಸಮಾಧಾನ ಹೇಳಿದನು. ಅನಂತರ ಕತ್ತಲಾಯಿತು. ನೇಮಿಯೂ ತನ್ನ ಬೀಡನ್ನು ಸಾಕಾದಷ್ಟು ಸಜ್ಜುಗೊಳಿಸಿದನು. ಕುಮ್ಮಟದುರ್ಗವನ್ನೂ ಹವಣರಿತು ಭದ್ರಪಡಿದಸಿದರು. ಎರಡೂ ಪಡೆ ಗಳಲ್ಲಿ ದೀಪಗಳು ಆದಿಶೇಷನ ಹೆಡೆವಣಿಗಳಂತೆ ವಿರಾಜಿಸುತ್ತಿದ್ದುವು. ಬೈಚಪ್ಪನು ಅಂದಿನ ರಾತ್ರಿಯೇ ನೇಮಿಯ ಪಡೆಯಮೇಲೆ ಬಿದ್ದು ಕಗ್ಗೊಲೆಯನ್ನು ನಡೆಸುವಂತೆ ಶಕ್ತರಾದ ಯೋಧರನ್ನು ನೇಮಿಸಿದನು. ಇದ್ದಕ್ಕಿದ್ದಂತೆಯೇ ಕಂಪಿಲನ ಆಳುಗಳು ನೇಮಿಯ ಪಾಳೆಯಕ್ಕೆ ನುಗ್ಗಲು, ಅಲ್ಲಿನ ಮಂದಿ ತಬ್ಬಿಬ್ಬಾದರು. "ಗುಂಡುಗಲ್ಲು ನೀರೊಳು ಬಿದ್ದಂತೆ" ಅಸ್ತವ್ಯಸ್ತರಾದರು. ಉಭಯರಿಗೂ ಕಾಳಗವಾಯಿತು. ಹಲವರು ವೀರಾವೇಶದಿಂದ ಹೋರಾಡಿದರು. ಕೆಲವರು ಜೀವಗಳ್ಳರಂತೆ ತಪ್ಪಿಸಿಕೊಂಡರು. ಕಂಪಿಲನ ಮಂದಿ ಬೇಕಾದ ಹಾಗೆ ಸೂರೆಮಾಡಿ, ಅವುಗಳನ್ನು ತಮ್ಮ ಒಡೆಯನಿಗೆ ತಂದು ಒಪ್ಪಿಸಿದರು. ಮಹಾರಾಜನು ಅವರನ್ನು ಸನ್ಮಾನಿಸಿದನು.

ಕಂಪಿಲನು ಕುಮಾರರಾಮನನ್ನು ಕಳೆದುಕೊಂಡು ಹೇಗೆತಾನೆ ನೇಮಿಯನ್ನು ಎದುರಿಸುವನೋ ನೋಡಬೇಕೆಂದು ಬರುವಂತೆ ಸೂರ್ಯನು ಉದಿಸಿದನು. ನೇಮಿಯ ಪಾಳೆಯದಲ್ಲಿ ಮತ್ತೆ ಚೇತರಿಸಿಕೊಂಡು ಎಲ್ಲರೂ ಯುದ್ಧಕ್ಕೆ ಸಿದ್ಧರಾದರು. ಕುಮ್ಮಟದಲ್ಲಿಯೂ ಭೇರಿವಾದ್ಯಗಳು ಮೊಳಗಿದುವು. ಭೈರವದೇವ, ಬಾದುರಖಾನರ ಮೇಲ್ವಿಚಾರಣೆಯಲ್ಲಿ ಪಡೆಗಳು ಅಣಿಯಾದುವು. ವೀರಭಟರು ವೀರಾವೇಶದಿಂದ ಸಜ್ಜಾದರು. ನೇಮಿ ಕಂಪಿಲನ ಪೌಜನ್ನು ನೋಡಿ, ತನ್ನ ಕಡೆಯವರಿಗೆ ಕೋಟೆಯನ್ನು ಮುತ್ತುವಂತೆ ಆಜ್ಞಾಪಿಸಿದನು. ನೇಮಿಯ ದಂಡಿನವರು ಮೂರು ಕಡೆಯಿಂದಲೂ ಮುತ್ತಿಕೊಂಡು ಲಗ್ಗೆ ಹತ್ತತೊಡಗಿದರು. ಮೊದಲು ಹಿಂತಿರುಗಿ ಬಂದ ತನ್ನವರನ್ನು ನೇಮಿಮಲ್ಲುಕನು ಹುರಿದುಂಬಿಸಿ ತಾನೂ ಜೊತೆಗೂಡಿದನು. ಊರಿನ ಜನರು ಹಾಹಾಕಾರ ಮಾಡತೊಡಗಿದರು. ಬಾಣಗಳ ಸುರಿಮಳೆಯಾಯಿತು. ಕಂಪಿಲನು ತನ್ನ ವೈಗಾವಲ ಮಂದಿಯನ್ನು ಯುದ್ಧಕ್ಕೆ ಕಳುಹಲು, ಅವರು ಶತ್ರುಗಳ ಮೇಲೆ ಬಿದ್ದರು. ಏಕಪ್ರಕಾರವಾಗಿ ಕಾಳಗ ಸಾಗಿತು. "ಉರಿದೋಱಿ ಜೇನಹಳಿಯ ಬಿಟ್ಟಾ ನೊಳವಿರದೆ ತೆರಳುವ ತೆಱದೊಳು" ಸುರುತಾಳನ ಮಂದಿ ತಂಹರಿಸ ಲಾರದೆ ಹಿಂದೆ ಸರಿದರು. ಸಾಯಂಕಾಲವಾಯಿತು. ಕತ್ತಲೆ ಕವಿಯಲು ಅಂದಿನ ಕಾಳಗ ಕೊನೆಗಂಡಿತು. ಅಂದಿನ ಇರುಳು ಕಂಪಿಲನ ಓಲಗ ನೆರೆಯಿತು. ಮಹಾರಾಜನು ಬೈಚಪ್ಪನನ್ನು ಕರೆದು, ಆತನು ಹೇಳಿದ ರಾವುತನು ಇನ್ನೂ ಏಕೆ ಬರಲಿಲ್ಲವೆಂದೂ, ಸುರುತಾಳನ ಅಪಾರಸೇನೆಯನ್ನು ನೋಡಿ ಹಿಂದಕ್ಕೇನಾದರೂ ಸರಿದನೇ ಎಂದೂ ವಿಚಾರಿಸಿದನು. ಬೈಚಪ್ಪನು ಅವನಂತಹ ಧೀರನೇ ಇಲ್ಲವೆಂದೂ, ಅವನು ತುರುಕರ ದಂಡು ಬಂದೊಡನೆಯೇ ಹೊರಟುಬಂದು ತನ್ನ ಮಂದಿರದಲ್ಲಿ ಇರುವನೆಂದೂ, ಅವನು ರಣರಂಗವನ್ನು ಪ್ರವೇಶಿಸು ವುದೇ ತಡ, ಶತ್ರು ಸಂಹಾರವು ನಿಶ್ಚಯವೆಂದೂ ತಿಳಿಸಿದನು. ಕಂಪಿಲನು "ಹಾಗಾದರೆ ಇನ್ನೂ ತಡವೇಕೆ? ಅವನನ್ನು ಕರೆತಂದು ತೋರಿಸು" ಎಂದನು. ಮಂತ್ರಿ ಆತನು ಮೊದಲು ಶತ್ರುಸಮೂಹವನ್ನು ಸಂಹರಿಸಿ, ಅನಂತರ ರಾಜನನ್ನು ಬಂದು ಕಾಣುವುದಾಗಿ ಹೇಳಿರುವನೆಂದು ನುಡಿದನು. ರಾಜನು ಆ ವೀರಭಟನಿಗೆ ತಕ್ಕ ಉಡುಗೊರೆಗಳನ್ನು ಕಳುಹಿಸಿ, ಅಂದಿನ ಓಲಗವನ್ನು ಮುಗಿಸಿ ಬೀಡಿಗೆ ತೆರಳಿದನು.

## ಕುಮಾರರಾಮನ ಪುನರಾಗಮನ

ಬೈಚಪ್ಪನು ಪಾಳೆಯಕ್ಕೆ ಹಿಂತಿರುಗಿ, ದೇವದೂತನನ್ನು ನೆನೆಯಲು, ಕೂಡಲೇ ಬಂದನು. ಆ ದೂತನಿಗೆ ರಾಮನ ಬಳಿ ಹೋಗಿ, ಸ್ಥಿತಿಗತಿಗಳನ್ನೆಲ್ಲ ತಿಳಿಸಿ, ಕೂಡಲೇ ಅವನನ್ನು ಕರೆತರಬೇಕೆಂದು ನಿಯಾಮಿಸಿದನು. ಅದೇ ಮೇರೆಗೆ ದೇವದೂತನು ರಾಮನ ಬಳಿಗೆ ಬಂದು, ಎಲ್ಲವನ್ನೂ ತಿಳಿಸಿದನು. "ಕಾಲಾಗ್ನಿ ರುದ್ರ ಕೋಪಾಟೋಪನಿಂ[ದ] ಪಾತಾಳದಿಂದೇಳ್ವ ತೆಱದೊಳು" ರಾಮನು ಮೇಲೆದ್ದು ಬರದಿದ್ದರೆ ಕುಮ್ಮಟವು ಹಾಳಾಗುವುದೆಂದು ದೂತನು ಇಂದ್ರನಾಣೆಯಿಟ್ಟು ಹೇಳಿದನು. ರಾಮನು ದೂತನ ಮಾತಿಗೆ ಸಮ್ಮತಿಸಿ, ತನಗೆ ಯಾರಿಂದ ಸಾವು ಸಂಭವಿಸಬಹುದೆಂಬುದನ್ನು ಹೇಳಬೇಕೆಂಬುದಾಗಿ ಕೇಳಿದನು. ದೇವದೂತನು "ಹಿಂದಿನ ಗಾಂಧಾರಿ ಭೀಮಾರ್ಜುನರ ಮೇಲಿನ ಕೋಪದಿಂದ ಈಗ ಮಾತಂಗಿಯಾಗಿ ಜನಿಸಿ ಸುರುತಾಳನ ಪಡಿಯ ರತಿಯಾಗಿದ್ದಾಳೆ. ಆಕೆ ಮಾತಂಗ ಕುಲದಲ್ಲಿ ಹುಟ್ಟಿದವಳು. ಅವಳು ನಿನ್ನ ಶಿರವನ್ನು ಛೇದಿಸಲು, ನಿನಗೆ ಶಿವಲೋಕ ಪ್ರಾಪ್ತವಾಗುವುದು. ಆ ವಿರಾಜಮಾನವಾದ ತಲೆಯನ್ನು ಕಾಣುತ್ತಲೇ ಸುರುತಾಳನ ಮಗಳು ಪ್ರಾಣವನ್ನೇ ಬಿಡುವಳು. ಭೂಮಿಯಲ್ಲಿ ಕೆಲವು ಜನರು ನಿನ್ನನ್ನು ದೇವರೆಂದು ಕೊಂಡಾಡಿ ಪೂಜಿಸುವರು" ಎಂದು ತಿಳಿಸಿದನು. ಆ ಮಾತುಗಳನ್ನು ಕೇಳಿ ರಾಮನಿಗೆ "ಬಡವಗೆ ಕಡವರ ಕೈಸಾರ್ದಂತೆ" ಸಂತೋಷ ವಾಯಿತು. ಅನಂತರ ತನ್ನ ಮಿತ್ರರ ಸಮೇತ ನೆಲಮಾಳಿಗೆಯಿಂದ ಮೇಲೆದ್ದು ಮಂತ್ರಿಯ ಬಳಿಗೆ ಬಂದನು. ಮಂತ್ರಿ ಆನಂದದಿಂದ ಸ್ವಾಗತಿಸಿದನು. "ಪಲವು ಪಗಲು ಕಂಡುದಿಲ್ಲ ರಾಮನ ಮುಖನಳಿನವ ನೋಡ ಬೇಕೆಂದು ತಲೆದೋಱದನೊಯೆಂಬಂತುದಯಾದ್ರಿಯನೊಲಿದಡರಿದನಬ್ಜಸಖನು." ಬೈಚಪ್ಪನು ರಾಮನ ಕುದುರೆಯನ್ನು ತರಿಸಲು, ಅದು ತನ್ನ ಒಡೆಯನನ್ನು ಗುರುತಿಸಿ, ಲೀಲೆಯಿಂದ ನಲಿಯಿತು. ರಾಮನು ಅದಕ್ಕೆ ತಕ್ಕಂತೆ ಪೂಜೆ ಪುರಸ್ಕಾರಗಳನ್ನು ಮಾಡಿ ನಮಸ್ಕರಿಸಿದನು. ಅಪ್ಪಿ ಮುಂಡಾಡಿದನು. ಅದು "ಕುದುರೆಯೊ ಕುವರನ ಪೂರ್ವದ ಪುಣ್ಯದೊಂದುದಯವೊ ವಿಜಯಾಂಗನೆಯ ಗದಕಿನ ರೂಪೊ" ಎಂಬಂತೆ ನೋಡುವವರ ಕಣ್ಣಿಗೆ ಸಂತೋಷವನ್ನಿತ್ತಿತು. ಕಾಟಣ್ಣ ಮತ್ತು ಇತರರಿಗೂ ಅವರವರ ಕುದುರೆಗಳನ್ನು ತಂದುಕೊಟ್ಟರು. ಮಂತ್ರಿ "ಒಳ್ನುಡಿಯೆಂಬ ಸಾಣೆ[ಯೊಳ್ಮೆ] ಮಸೆದನವರ ಮನದಲಗ." ಅನಂತರ ರಾಮನು ಯಾವಯಾವ ಪಡೆಯನ್ನು ಎಲ್ಲೆಲ್ಲಿ ನಿಲ್ಲಿಸಬೇಕೆಂದು ಮಂತ್ರಿಗೆ ಹೇಳಿ, ತನಗೆ ಮತ್ತೊಬ್ಬ ಕಲಿಯನ್ನು ಕೊಡಿಸಬೇಕಾಗಿ ತಿಳಿಸಿ ದನು. ರಾಮನ ಅಭೀಷ್ಟದಂತೆಯೇ ಬೈಚಪ್ಪನು ರಾವುತರನ್ನೂ ವಾಹಕರನ್ನೂ ಸುಭಟಾವಳಿಯನ್ನೂ ಕರೆದು ಸತ್ಕರಿಸಿ, ಊರಿನ ಹೊರಗಡೆ ಫೌಜನ್ನು ನಿಲ್ಲಿಸಿದನು. ರಾಮನು ಕಾಟಣ್ಣ, ಭಾವಸಂಗಮರನ್ನು ಕೂಡಿ ಕೊಂಡು ರಣರಂಗಕ್ಕೆ ತೆರಳಿದನು. ರಾಮನನ್ನು ಕಂಡ ನೋಟಕರು, ಆತನು ರಾಮನಾಥನಿಗೆ ಸದೃಶನಾದ ವನೇ ಸರಿಯೆಂದೂ "ರಾಮ[ನಾಥ]ನ ಪೋಲುವೆಯಿದೆ ಶಿವಬಲ್ಲ" ಎಂದೂ ಮಾತಾಡಿಕೊಳ್ಳುತ್ತಿದ್ದರು.

ನೇಮಿಯ ಸೇನೆಯ ವಾದ್ಯಗಳು ದಿಗ್ಭಿತ್ತಿಗಳನ್ನು ಭೇದಿಸುವಂತೆ ಕೇಳಿ ಬಂದುವು. ನೇಮಿಖಾನನು ಅಪಾರವಾದ ಸೇನೆಯಿಂದ ಕೂಡಿ ಕುಮ್ಮಟದುರ್ಗದ ಕಡೆ ನಡೆದನು. ಆದರೆ ಸೈನ್ಯದಲ್ಲಿ ಕೆಲವು ಅಪಶಕುನಗಳು ತೋರಲಾರಂಭಿಸಿದುವು. ನೆಲ ನಡುಗಿತು ; ಕುದುರೆಗಳು ಕಣ್ಣೀರು ಸುರಿಸಿದುವು ; ಖಡ್ಗಗಳು ಒರೆಯಿಂದ ಕಳಚಿಬಿದ್ದುವು. ಆ ಉತ್ಪಾತಗಳನ್ನು ಕಂಡು ಸೈನಿಕರು ರಾಮನು ಸತ್ತಿರಲಾರನೆಂದೂ, ತಮ್ಮನ್ನು ಸಂಹರಿಸುವ ಸಲುವಾಗಿಯೇ ಆ ಸುಳ್ಳು ಸುದ್ದಿಯನ್ನು ಹುಟ್ಟಿಸಿರಬೇಕೆಂದೂ, ಶಂಕಿಸತೊಡಗಿದರು. ಅನಂತರ ಕಂಪಿಲನ ಸೇನೆ ದುರ್ಗವನ್ನು ಬಿಟ್ಟು ಬಯಲಿನಲ್ಲಿ ಬಂದು ಯುದ್ಧಸನ್ನದ್ಧವಾಗಿದ್ದುದನ್ನು ಕಂಡು, ನೇಮಿಖಾನನಿಗೆ ಮತ್ತೂ ಆಶ್ಚರ್ಯವಾಯಿತು. ನೇಮಿ ತನ್ನ ಮಂತ್ರಿಗಳೊಂದಿಗೆ ವಿಚಾರಿಸಲು, ಅವರು "ತಂದೆ ಮಗನನ್ನು ಕೊಲ್ಲಿಸಿದನೆಂಬ ಸುದ್ದಿ ನಮಗೇಕೋ ಒಪ್ಪಿಗೆಯಿಲ್ಲ. ಇಂದು ರಾಮನು ಕಣ್ಣಿಗೆ ಕಂಡುಬಂದಾನು. ಭೂಮಿ ನಡುಗುತ್ತಿದೆ, ರಕ್ತದ ಮಳೆ ಬೀಳುತ್ತಿದೆ, ಬಿರುಗಾಳಿಯೆದ್ದಿದೆ, ಧೂಮಕೇತು ಕಾಣಿಸುತ್ತಿದೆ, ನರಿಗಳ ಕೂಗಾಟವಿದೆ, ಹದ್ದುಗಳು ಬಂದು ಗುಂಪುಕೂಡಿವೆ, ಆಕಾಶದಲ್ಲಿ ಪರಿವೇಷ ಕಟ್ಟಿದೆ. ಆದ್ದರಿಂದ ಇಂದು

ರಾಮನು ಬಾರದೆ ಇರನು. ಕನ್ನಡಿಗರು ಮೋಸಗಾರರೆ ಸರಿ" ಎಂದು ಅಭಿಪ್ರಾಯವಿತ್ತರು. ಇದೇ ರೀತಿ ಒಬ್ಬೊಬ್ಬರೂ ಒಂದಲ್ಲ ಒಂದು ತೆರನಾಗಿ ರಾಮನನ್ನು ನೆನೆದು, ಕಣ್ಣಾರೆ ಕಂಡವರಂತೆ ಭ್ರಮಿಸಿ ದಿಕ್ಕುಗೆಟ್ಟರು. ಅನಂತರ ನೇಮಿಯ ದಂಡು ಮುಂದೆ ಸಾಗಿ ಶತ್ರುಗಳನ್ನು ಎದುರಿಸಿತು. ಅರ್ಜುನನನ್ನು ಸಂಶಪ್ತಕರು ಮುತ್ತಿಕೊಂಡಂತೆ ರಾಮನಾಥನನ್ನು ತುರುಕರು ಸುತ್ತಿಕೊಂಡರು. ನಾನಾ ದೇಶಗಳ ಅಧಿಪತಿಗಳು ರಾಮನನ್ನು ಬಳಸಿಕೊಂಡರು. ರಾಮನಾಥನಾದರೋ ಸ್ವಲ್ಪವೂ ಹೆದರದೆ ಬಲಸಹಿತ ಉರುಬಿಹೊಕ್ಕನು. ವೀರಾವೇಶದಿಂದ ಕಾದಾಡಿ, ಶತ್ರುಸೇನೆಯನ್ನು ಧ್ವಂಸ ಮಾಡಿದನು. ನಿಮಿಷಮಾತ್ರದಲ್ಲಿ ಎರಡು ಕಡೆಯ ಪಡೆಗಳಿಗೂ ಬಿರುಸುಗಾಳಗವಾಗಿ, ನೇಮಿ ತರಹರಿಸಲಾರದೆ, ತನ್ನ ಮೈಗಾವಲರೊಂದಿಗೆ ಬೆನ್ನು ತೋರಿ ತೆರಳಿದನು. "ಬಡಿ ಕೊಂಡ ನೆಲ್ಲಿಯ ಕಾಯಂತೆ" ಸಮಸ್ತ ಸೇನೆಯೂ ಚೆಲ್ಲಾಪಿಲ್ಲಿಯಾಯಿತು. ರಾಮನು ಮುನ್ನುಗ್ಗಿದಂತೆಲ್ಲ ಅವನ ಪರಿವಾರದವರು ಅವನನ್ನು ಹಿಂಬಾಲಿಸಿ ಶತ್ರುಗಳನ್ನು ಸದೆಬಡಿದರು. ರಣರಂಗವು ಅತ್ಯಂತ ಬೀಭತ್ಸವಾಯಿತು. ರಾಮಕುವರನ ಆ ಸಾಹಸವನ್ನು ಕಂಡ ಕಂಪಿಲನು ಹೊಸರಾವುತನನ್ನು ಬಾಯಿತುಂಬ ಕೊಂಡಾಡಿದನು. ಆತನಿಗೆ ತನ್ನ ಮಗನಾದ ಕುಮಾರರಾಮನಾಗಲಿ, ಕರ್ಣ ಪಾರ್ಥರಾಗಲಿ ಅಲ್ಲದೆ, ಬೇರೆ ಯಾರೂ ಸಮಾನರಿಲ್ಲವೆಂದು ಹೊಗಳಿ, ಆತನನ್ನು ಕರೆತಂದು ತೋರಿಸಬೇಕೆಂದು ಮಂತ್ರಿಗೆ ಹೇಳಿದನು. ಆಗ ಬೈಚಪ್ಪನು "ಮಹಾರಾಜ! ನಿಮ್ಮ ಮಗ ರಾಮನು ಸತ್ತಿಲ್ಲ. ನೀವು ಅವನನ್ನು ಕೊಲ್ಲಿಸೆಂದು ಹೇಳಲು ನಾನು ಇಂದ್ರಜಾಲದಿಂದ ಅವನನ್ನು ರಕ್ಷಿಸಿದೆ" ಎಂದನು. ಆ ಮಾತನ್ನು ಕೇಳಿದ ಕೂಡಲೆ ಕಂಪಿಲನು ಕ್ಷಣಮಾತ್ರ ಪರವಶನಾಗಿ, ಅನಂತರ ಅತ್ಯಂತ ಆನಂದಪಟ್ಟನು. ಮಗನ ವೃತ್ತಾಂತವನ್ನು ಪುನಃ ಕೇಳಿ ತಲೆದೂಗಿದನು. ಬೈಚಪ್ಪನು ಕಂಪಿಲನನ್ನು ರಣರಂಗದಿಂದ ಚಾವಡಿಗೆ ಕಳುಹಿಸಿ, ರಾಮನನ್ನು ಕರೆತಂದು, ಓಲಗದಲ್ಲಿ ಕಾಣಿಸಿದನು. ಕಂಪಿಲನಿಗಂತೂ "ಪೊಸತಾದತ್ತು ಪೊಡವಿ ಕಣ್ಗೆ ಮನುಜರು ಹಸನಾದರು ರಾಜ್ಯಪದವಿಯೆಸಕವೆಯ್ದಿದುದು." ಮತ್ತೆ ಮತ್ತೆ ಮಗನನ್ನು ಬಾಚಿ ತಬ್ಬಿಕೊಂಡನು. ಈಶ್ವರನನ್ನು ನೆನೆದನು. "ಇಂದ್ರಪದವಿ ಕೈಸಾರ್ದಂತೆ ಮನದೊಳು ನಲಿವುತ ಮಗ ರಾಮವೆರಸು" ಹೊಸಮಲೆದುರ್ಗಕ್ಕೆ ತೆರಳಿದನು. ಈ ಶುಭವಾರ್ತೆಯನ್ನು ಮುಂದಾಗಿಯೇ ಚರನೊಬ್ಬನು ಬಂದು ಹರಿಹರದೇವಿಗೆ ತಿಳಿಸಲು, ಆಕೆ ಹರುಷವೇ ಹೆಣ್ಣು ರೂಪಾಯಿತೋ ಎಂಬಂತೆ ಹಿಗ್ಗಿದಳು. ಆ ದೂತನಿಗೆ ಅಂಗಚಿತ್ತವನ್ನಿತ್ತಳು. ಊರಿಗೆ ಊರೇ ಅಲಂಕೃತವಾಯಿತು. ಅಮರಾವತಿಯಂತೆ ತೋರಿಬಂದಿತು. ರಾಮ ಸಮೇತನಾಗಿ ಕಂಪಿಲನು ಪಟ್ಟಣವನ್ನು ಪ್ರವೇಶಿಸಿದನು. ಅತ್ಯಂತ ವೈಭವದಿಂದ ರಾಮನನ್ನು ಸ್ವಾಗತಿಸಿದರು, ಅಂಗನೆಯರು ಆರತಿ ಅಕ್ಷತೆಗಳಿಂದ ಬರಮಾಡಿಕೊಂಡರು. ಎಲ್ಲರ ಆದರವನ್ನೂ ಕೈಕೊಂಡು ರಾಮನಾಥನು "ಪೊಲಬುದಪ್ಪಿದ ಸಿಂಹದ ಶಿಶು ಜನನಿಯ ಬಳಿಗೆ ಬಪ್ಪಂತೆ" ಪ್ರೀತಿಯಿಂದ ಹರಿಹರದೇವಿಯ ಬಳಿಗೆ ಬಂದನು. ಆಕೆ ಮತ್ತೆ ಮಗನನ್ನು ಬಸುರಿನಲ್ಲಿ ಅಡಗಿಸಿಕೊಳ್ಳುವಳೋ ಎಂಬಂತೆ ಬಲವಾಗಿ ಬಾಚಿ ತಬ್ಬಿಕೊಂಡಳು. ಆ ವೇಳೆಗೆ ರಾಮನ ಸತಿಯರೂ ಅಲ್ಲಿಗೆ ಬಂದು, ಅತ್ತೆ, ಅತ್ತಿಗೆಯರಿಗೆ ನಮಸ್ಕರಿಸಿ ಸರ್ವರ ಪ್ರೀತಿಗೆ ಪಾತ್ರರಾದರು. ಆ ಶುಭಸಮಾಚಾರವನ್ನು ಸಂಗಿ ರತ್ನಾಜಿಗೆ ತಿಳಿಸಲು ಆಕೆಗೆ "ಪಿಂತಣ ಜನ್ಮದಜೀವು ಮೈದೋಱಿತು." ತಾನು ಪಾರ್ವತಿಯ ಕಾರ್ಯಕ್ಕಾಗಿ ಬಂದು ವಿಫಲಳಾದುದನ್ನು ಮನಗಂಡು ಉಸಿರುಗಟ್ಟಿ ಆತ್ಮಹತ್ಯೆಮಾಡಿಕೊಂಡಳು. ರತ್ನಾಜಿಯ ಮರಣದ ವಾರ್ತೆಯನ್ನು ಕೇಳಿದ ಕಂಪಿಲನು ಬಹಳವಾಗಿ ಮರುಗಿದನು. ಆಕೆಯ ರೂಪಲಾವಣ್ಯಗಳನ್ನು ಕೊಂಡಾಡಿ, ತನ್ನ ಒಲವನ್ನು ವ್ಯಕ್ತಪಡಿಸಿ, ವಿರಹೋದ್ರೇಕದಿಂದ ಪರಿತಪಿಸಿದನು. ಬೈಚಪ್ಪನು ರತ್ನಾಜಿಯ ಜನ್ಮರಹಸ್ಯವನ್ನು, ತಾನು ಇಂದ್ರನಿಂದ ಕೇಳಿದ ಮೇರೆಗೆ ರಾಜನಿಗೆ ತಿಳಿಸಿ ಸಮಾಧಾನಮಾಡಿದನು. ಕಂಪಿಲನು ರತ್ನಾಜಿಯ ಶರೀರವನ್ನು ಶಾಸ್ತ್ರೋಕ್ತವಾಗಿ ಚಿತೆಯೇರಿಸಿದನು. ರತ್ನಾಜಿಯ ಮರಣದಿಂದ ಹರಿಹರದೇವಿಗೆ ಮೊಳೆನಗೆಯೂ, ಮಾರಮ್ಮನಿಗೆ ಎಳೆನಗೆಯೂ, ಸಿಂಗಮ್ಮನಿಗೆ ಬೆಳ್ನಗೆಯೂ ಉಂಟಾಯಿತು. ರಾಮನಾಥನಾದರೋ "ಏತಕಸುವ ನೀಗಾಡಿಕೊಂಡಳು [ಚಿಕ್ಕ] ಮಾತೆ ತನ್ನಿಂದ

ಲೋಕದೊಳು ಖ್ಯಾತಿಪಡೆದೆನು" ಎಂದು ಪಶ್ಚಾತ್ತಾಪಪಟ್ಟನು. ತಂದೆಯ ಸುಖಕ್ಕೆ ತನ್ನಿಂದ ಸಂಚಕಾರ ವಾಯಿತಲ್ಲ ಎಂಬುದಾಗಿ ವ್ಯಥೆಪಟ್ಟನು. ಕೈಲಾಸದಲ್ಲಿ ಪಾರ್ವತಿ ಪರಮೇಶ್ವರನೊಂದಿಗೆ ರಾಮನ ಶುಚಿತೆಯನ್ನು ಕುರಿತು ಮನವಾರೆ ಕೊಂಡಾಡಿದಳು. ಹಟ ತೊಟ್ಟದ್ದ ಉರ್ವಶಿ "ರಾಮನ ಕೀರ್ತಿತರುಣಿಯ ಪೊತ್ತಾಡಿಸುವ ವರಧಾತ್ರಿಯಾದಳು ಸೂಳೆತನವ ಬಿಸುಟು." ಪಂಪಾದೇವಿ ರಾಮನಿಗೆ ಸಾಲೋಕ್ಯಪದವಿಯನ್ನು ನೀಡ ಬೇಕೆಂದು ಈಶ್ವರನನ್ನು ಪ್ರಾರ್ಥಿಸಲು ಆತನು ಸಮ್ಮತಿಸಿದನು.

## ಮಾತಂಗಿಯ ಮುತ್ತಿಗೆ

ನೇಮಿಯ ಪರಾಜಯದ ವೃತ್ತಾಂತವನ್ನು ಹರಿಕಾರರು ಸುಲ್ತಾನನಿಗೆ ತಿಳಿಸಿದರು. ಅವನು ಓಲಗ ಕೂಡಿಸಿ, ಹರಿಕಾರರಿಂದ ವಿವರವನ್ನು ಕೇಳಿ ತಿಳಿದು "ಸತ್ತ ರಾಮನು ಬದುಕಿ ಬಂದದ್ದು ಹೇಗೆ ?" ಎಂದು ಪ್ರಶ್ನಿಸಿದನು. ಹರಿಕಾರರು, ರಾಮನು ಸತ್ತಿರಲಿಲ್ಲವೆಂದೂ, ಬೈಚಪ್ಪನು ಅವನನ್ನು ಬಚ್ಚಿಟ್ಟದ್ದು, ಸಕಾಲದಲ್ಲಿ ರಣರಂಗಕ್ಕೆ ಕರೆತಂದು ನಮ್ಮ ಕಡೆಯವರನ್ನೆಲ್ಲ ಧ್ವಂಸಮಾಡಿಸಿ, ಕಂಪಿಲನಿಗೆ ರಾಮನನ್ನು ಭೇಟಿಮಾಡಿಸಿದ ನೆಂದೂ ಹೇಳಿದರು. ಆ ಮಾತನ್ನು ಕೇಳಿ ಸುರುತಾಳನು ಬೈಚಪ್ಪನ ಸೇವೆಯನ್ನೂ ಬುದ್ಧಿಯನ್ನೂ ಮೆಚ್ಚಿ ತಲೆದೂಗಿದನು. ಬಳಿಕ, ಎರಡು ಬಾರಿ, ಕೇವಲ ಬಾಲಕನೊಬ್ಬನ ಕೈಯಿಂದ ಸೋತ ನೇಮಿಯನ್ನು ನೆನೆದು ತುಂಬ ಹೀಯಾಳಿಸತೊಡಗಿದನು. ಅವನೊಬ್ಬ ಜೀವಗಳ್ಳನೆಂದೂ ಉತ್ತರನಂತಹ ಬಡಾಯಿಕೋರನೆಂದೂ, ಪರಮವೈಷ್ಣವನಲ್ಲದೆ ತುರುಕನಲ್ಲವೆಂದೂ, ನಾಚಿಕೆಗೇಡಿಯೆಂದೂ ಬಾಯಿಗೆ ಬಂದಂತೆಲ್ಲ ಆಕ್ಷೇಪಿಸಲು ಮೊದಲು ಮಾಡಿದನು. ಆ ವೇಳೆಗೆ ಸಪ್ಪೆಮೋರೆಯನ್ನು ಹಾಕಿಕೊಂಡು ನೇಮಿಯೂ ಓಲಗಕ್ಕೆ ಬಂದನು. ಅಲ್ಲಾವುದ್ದೀನನಿಗೆ ನಮಸ್ಕರಿಸಿ ಕೈಜೋಡಿಸಿ ನಿಂತನು. ಸುರುತಾಳನು ಅವನನ್ನು ಕಣ್ಣೆತ್ತಿಯೂ ನೋಡಲಿಲ್ಲ. ಅವನಿಗೆ ನಖಶಿಖಾಂತವಾಗಿ ಕೋಪವೇರಿತ್ತು. ಇಡಿಯ ಆಸ್ಥಾನವೇ ಭೀತಿಯಿಂದ ಎವೆ ಮಿಡುಕದಂತಿತ್ತು. ಆಗ ಮಾತಂಗಿಯೆಂಬುವಳು ಸುಲ್ತಾನನನ್ನು ಕುರಿತು "ಹಿಡಿದು ತಂದೊಪ್ಪಿಸುವೆನು ರಾಮನಾಥನ ಕೋಟು ವೀಳೆಯವ, ಕುಮ್ಮಟವನು ಕೂಗಿಡಿಸುತ ರಾಮನ ಹಮ್ಮ ಮುರಿದು ಕಂಪಿಲನ ಸುಮ್ಮಾನವ ಸೂಜಿ ಗೊಂಬೆನು ಬಿಡು ರಾಯ ದುಮ್ಮಾನ [ವೇಕೆ]" ಎಂದು ಅಪ್ಪಣೆ ಬೇಡಿದಳು. ಸುರುತಾಳನು ಆಕೆಯನ್ನು ನೋಡಿ ನಗಲು, ಮತ್ತೆ "ದಳಪತಿಗಳಿಂದ ಆಗದ ಕಾರ್ಯ ನನ್ನಿಂದ ಆಗದು ಎಂದು ಭಾವಿಸಬೇಡ. ಚಾಮುಂಡಿ ಮಹಿಷಾಸುರನನ್ನು ಸಂಹರಿಸಲಿಲ್ಲವೆ? ಅದು ಕಥೆಯೆಂದು ಬಗೆಯದಿರು" ಎಂದು ಧೀರಳಾಗಿ ನುಡಿ ದಳು. ಸುರುತಾಳನು ಆವಳ ಮಾತಿಗೆ ಒಡಂಬಟ್ಟು ಆಕೆಗೆ ದಳಪತಿಯ ಪದವಿಯನ್ನು ಒಪ್ಪಿಸಿ, ತನ್ನ ಗಜವನ್ನೇ ಏರಲು ಕೊಟ್ಟು ಇತರ ವಜೀರರನ್ನೂ ಮಲ್ಲುಕರನ್ನೂ ಆಕೆಯ ಅಧೀನಕ್ಕೆ ಒಪ್ಪಿಸಿ, ಸಮಸ್ತ ಸೇನೆಯನ್ನೂ ವಹಿಸಿಕೊಟ್ಟನು. "ರಾಯನೊಲಿದೊಡೆ ತೃಣ [ಕುಲ] ಕುಲಗಿರಿಯಾಗದೇನಿಹುದೆ?" ಎಂಬಂತೆ ಮಾತಂಗಿ ಅಂದು ಪ್ರಧಾನ ಪದವಿಯನ್ನು ಪಡೆದಳು. ಸಕಲಾಭರಣಗಳಿಂದ ಅಲಂಕೃತಳಾಗಿ, ಸುರುತಾಳನಿಗೆ 'ಸಲಾಮು' ಮಾಡಿ, ಶುಭ ಮುಹೂರ್ತದಲ್ಲಿ ಮಾತಂಗಿ ತನ್ನ ಸೈನ್ಯಸಮೇತಳಾಗಿ ಹೊರಟಳು. ಆಕೆಯ ಸೈನ್ಯದಲ್ಲಿ ಶೂರರೂ, ಧೀರರೂ ಇದ್ದಂತೆಯೇ ಅನೇಕ ಸುಂದರಿಯರೂ ಇದ್ದರು. ಆ ಸ್ತ್ರೀಯರ ಮೂಲಕ ಎಷ್ಟೋ ಜನರನ್ನು ಬೆರಗುಗೊಳಿಸಿ, ವಶಪಡಿಸಿಕೊಳ್ಳುವುದೇ ಮುಖ್ಯೋದ್ದೇಶವಾಗಿತ್ತು. ಆ ಸಮಸ್ತ ಸೇನೆಯಿಂದ ಕೂಡಿದ ಆಕೆ ಗೋವರ್ಧನಾದ್ರಿಯನ್ನು ದಾಟಿ, ನೇಪಾಳದ ಭೂವರರನ್ನು ಕೂಡಿಕೊಂಡಳು. ಒಲಿದವರನ್ನು ಸೇರಿಸಿಕೊಳ್ಳುತ್ತ, ಒಲಿಯದವರನ್ನು ಧ್ವಂಸಮಾಡುತ್ತ, ದಾರಿಯುದ್ದಕ್ಕೂ ಮೆರೆಯುತ್ತ, ನಲ್ಲೂರಿಗೆ ಬಂದು ಪಾಳೆಯ ಬಿಟ್ಟಳು. ಅಲ್ಲಿಂದ ಮುಂದಕ್ಕೆ ಕಡಬ, ಕಲ್ಲಿಕೋಟೆ, ಚಂದ್ರಗಿರಿ, ಧಾರೆಯುಜ್ಜನಿ, ಧಾರಾಸಿಂಹ ಮೊದಲಾದ ನಗರಗಳನ್ನು ಹಾದು ಕರ್ನಾಟಕವನ್ನು ತಲಪಿದಳು. ಬಿದಿರೆಯಲ್ಲಿ ಬೀಡುಬಿಟ್ಟಳು. ಆಗ ಶೃಂಗಾರ

ಪ್ರಿಯರಾಗಿದ್ದ ಕನ್ನಡ ರಾಜರು ಬಂದು ಅವಳನ್ನು ಕಾಣಲು, ಆಕೆ ಅವರನ್ನೆಲ್ಲ ಉಪಚರಿಸಿ ಆನಂದಿಸಿದಳು.

ಮಾತಂಗಿ ಬಿದಿರೆಯಲ್ಲಿ ಬೀಡುಬಿಟ್ಟ ಸುದ್ದಿ ಚರರ ಮೂಲಕ ರಾಮನಿಗೆ ಗೊತ್ತಾಗಲು, ಅವನು ತಂದೆಗೆ ತಿಳಿಸಿದನು. ಕಂಪಿಲನು ಬೈಚಪ್ಪನನ್ನು ಬರಮಾಡಿಕೊಂಡು ಮುಂದೇನು ಮಾಡಬೇಕೆಂದು ಪರ್ಯಾಲೋಚಿಸಿದನು. ಬೈಚಪ್ಪನು ಸುರುತಾಳನ ಸೇನೆಯನ್ನು ಕುಮ್ಮಟದುರ್ಗದಿಂದ ಎದುರಿಸುವುದಕ್ಕಿಂತ, ಹೊಸದುರ್ಗದ ಬಳಿ ಎದುರಿಸುವುದು ಮೇಲೆಂಬುದಾಗಿ ಸಲಹೆಮಾಡಿದನು. ರಾಜನಿಗೆ ಅದು ಸೂಕ್ತವಾಗಿ ತೋರಲು, ಆ ಏರ್ಪಾಡಿಗೆ ಕುಮಾರರಾಮನನ್ನು ಒಪ್ಪಿಸಿಕೊಂಡು ಬರಬೇಕೆಂದು ಹೇಳಿದನು. ಬೈಚಪ್ಪನು ಕುಮ್ಮಟದುರ್ಗಕ್ಕೆ ಬಂದು, ರಾಮನನ್ನು ಕಂಡು, ಮಾತಂಗಿ ಅಪಾರವಾದ ಸೇನೆಯಿಂದ ಕೂಡಿ ಬರುತ್ತಿರುವಳೆಂದೂ, ಕುಮ್ಮಟದುರ್ಗದಿಂದಿಳಿದು ಹೊಸಮಲೆದುರ್ಗದಿಂದ ಅವಳನ್ನು ಎದುರಿಸಬೇಕೆಂದೂ ವಿಜ್ಞಾಪಿಸಿದನು. ಕುಮಾರರಾಮನಿಗೆ ಆ ಸಲಹೆ ಒಪ್ಪಿಗೆಯಾಗಲಿಲ್ಲ. ಹೊಸಮಲೆದುರ್ಗಕ್ಕಿಂತಲೂ ಕುಮ್ಮಟದುರ್ಗವೇ ಬಲವಾದುದೆಂದೂ ಹೆಂಗಸೊಬ್ಬಳಿಗಾಗಿ ಹೆದರಿ ಹಾಗೆ ಮಾಡುವುದು ಬಿರುದಂಕಮಲ್ಲನಾದ ತನ್ನಂಥವನಿಗೆ ಸಲ್ಲದೆಂದೂ, ಅಳಿವ ದೇಹಕ್ಕಿಂತ ಉಳಿವ ಕೀರ್ತಿಯ ಕಡೆಗೆ ಲಕ್ಷ್ಯವಿಡಬೇಕೆಂದೂ ಶೌರ್ಯೋದ್ರೇಕದಿಂದ ಮಾತುಗಳನ್ನಾಡಿ, ತನ್ನ ಯುದ್ಧಕ್ಕೆ ಬೇಕಾದ ಧನ, ಧಾನ್ಯ, ಸಾಮಗ್ರಿಗಳನ್ನು ಕೂಡಲೆ ಕಳುಹಿಸಿಕೊಡಬೇಕೆಂದೂ ಹೇಳಿದನು. ಅಲ್ಲದೆ, ಮಾತಂಗಿಯ ಸೇನೆಯನ್ನು ಹಿಂದಟ್ಟಿ, ತಂದೆ ತಾಯಿಗಳನ್ನು ಬಂದು ಕಾಣುವುದಾಗಿಯೂ, ಅವರು ಯಾವ ಆತಂಕವೂ ಪಡಬೇಕಾಗಿಲ್ಲವೆಂದೂ ಹೇಳಿ ಕಳುಹಿಸಿದನು. ಅದೇ ಮೇರೆಗೆ, ಬೈಚಪ್ಪನು ಎಲ್ಲವನ್ನೂ ಕಂಪಿಲನಿಗೆ ವರದಿಮಾಡಿ, ಕುಮಾರರಾಮನಿಗೆ ಬೇಕಾದ ಸಮಸ್ತ ಸೌಕರ್ಯಗಳಿಗೂ ಏರ್ಪಾಟು ಮಾಡಿದನು. ಗಿರಿದುರ್ಗವು ಸುಸಜ್ಜಿತವಾಯಿತು. ಮಾತಂಗಿ ಬಿದಿರೆಯಿಂದ ಬೀಡು ತೆಗೆದು, ಎಂಟು ದಿನಗಳ ಪ್ರಯಾಣ ಮಾಡಿ, ಕುಮ್ಮಟದ ಸಮೀಪಕ್ಕೆ ಬಂದಳು. ಆನೆಯ ಮೇಲೆ ಅತ್ಯಂತ ವೈಭವದಿಂದ ಸಾರಿದಳು. ಆಕೆಯ ಪಾಳೆಯ ಅತಿ ವಿಜೃಂಭಣೆಯಿಂದ ಮೆರೆಯುತ್ತಿತ್ತು. ಏಳು ಖಾನರ ನೇತೃತ್ವದಲ್ಲಿ ಏಳುದಿಕ್ಕುಗಳನ್ನೂ ಬಲಿಯುವಂತೆ ಆಜ್ಞಾಪಿಸಿದಳು. ತಾನು ಪೂರ್ವದ ಕಡೆಯಿಂದ ಮುತ್ತಿಗೆ ಹಾಕಲು ಸಿದ್ಧವಾದಳು. ಕುಮಾರರಾಮನೂ ಕಾಳಗಕ್ಕೆ ಅಣಿಯಾದನು. ಕಾಟಣ್ಣನನ್ನು ಕರೆದು, ಅವನು ದಂಡೆತ್ತಿ ಹೋಗುವಂತೆ ಸೂಚನೆಯಿತ್ತನು. ರಾಮನ ಆಜ್ಞೆಯ ಮೇರೆಗೆ ಕಾಟಣ್ಣನು ಮಾತಂಗಿಯ ದಂಡಿನ ಮೇಲೆ ಬಿದ್ದು, ಖಾನರೇ ಮೊದಲಾದವರನ್ನು ಸದೆಬಡಿಯಲು ಆರಂಭಿಸಿದನು. ಕಾಟಣ್ಣನು ಶತ್ರುಸೇನೆಯನ್ನು ಅಟ್ಟಿಸಿಕೊಂಡು ಬರಲು, ಗಿರಿಗಳಲ್ಲಿ ಅಡಗಿದ್ದ ರಾಮನ ಮಂದಿ ಮೇಲೆ ಬಿದ್ದು ಎಲ್ಲರನ್ನೂ ಸಂಹರಿಸಿದರು. ಅನಂತರ ಧರ್ಮಗಹಳೆಯ ಧ್ವನಿ ಕೇಳಿ ಬರಲು, ಕಾಟಣ್ಣನು ಸುರಕ್ಷಿತವಾಗಿ ತನ್ನ ಬೀಡಿಗೆ ಬಂದನು. ಹಡಗಿನ ಪರದನಂತೆ ಕಾಟಣ್ಣನು ಬೇಕಾದಷ್ಟು ಕುದುರೆ ಮೊದಲಾದುವುಗಳನ್ನು ಸೂರೆ ಮಾಡಿ ತಂದನು. ರಾಮನು ಅವುಗಳಲ್ಲಿ ಕೆಲವನ್ನು ತಂದೆಯಿದ್ದ ಹೊಸದುರ್ಗಕ್ಕೆ ಕಳುಹಿಸಿದನು.

ಇಷ್ಟಾದರೂ ಮಾತಂಗಿ ಮತ್ತೆ ಹತ್ತು ಒಡ್ಡುಗಳನ್ನು ಕೂಡಿಕೊಂಡು ಕುಮ್ಮಟದುರ್ಗವನ್ನು ಮುತ್ತಲು ಹವಣಿಸುತ್ತಿದ್ದಳು. ಇತ್ತ ಕಂಪಿಲನಿಗೆ ಕುಮಾರರಾಮನನ್ನು ನೋಡಬೇಕು ಎನ್ನಿಸಿತು. ಬೈಚಪ್ಪನಿಗೆ ಹೇಳಿ, ಕುಮ್ಮಟದುರ್ಗದಿಂದ ಅವನನ್ನು ಬರಮಾಡಿಕೊಂಡನು. ಕುಮಾರರಾಮನು, ತಂದೆ, ತಾಯಿ, ಸಹೋದರಿಯರೊಂದಿಗೆ ಊಟ ಮಾಡಿ ಮತ್ತೆ ಹೊರಡಲು ಅನುವಾದನು. ಕಂಪಿಲನು ಮಾದಿಗಿತ್ತಿಯ ಬಲವು ಅಪಾರವಾಗಿರುವುದೆಂದೂ, ಯುದ್ಧ ಮಾಡುವುದು ಸೂಕ್ತವೆ ಎಂಬುದಾಗಿ ಯೋಚಿಸಿನೋಡಬೇಕೆಂದೂ, ಸೂಚಿಸಿದನು. ಮಗನು ತಂದೆಗೆ ಧೈರ್ಯ ಹೇಳಿ, ತನಗೆ ಯುದ್ಧಕ್ಕೆ ಬೇಕಾಗುವ ದ್ರವ್ಯವನ್ನು ಕೊಡಬೇಕೆಂಬುದಾಗಿ ಹೇಳಿದನು. ಕಂಪಿಲನು ಮಗನಿಗೆ ತಕ್ಕ ಹಣಕಾಸುಗಳನ್ನಿತ್ತು ಕಳುಹಿಸಿದನು. ಅಂತೆಯೇ ತಾಯಿಯಿಂದಲೂ ಆಶೀರ್ವಾದವನ್ನು ಪಡೆದು ಹೊರಟನು. ಇತ್ತ ಮಾತಂಗಿಯಾದರೋ ಖಾನರನ್ನು ಓಲಗದಲ್ಲಿ ನೆರೆಯಿಸಿ, ಹಿಂದಿನ ದಿನದ ಯುದ್ಧದಲ್ಲಿ ಹೇಡಿಗಳಂತೆ ವರ್ತಿಸಿದ ಖಾನರನ್ನು ಹೀನಾಮಾನವಾಗಿ ಹೀಯಾಳಿಸಿದಳು.

ಅವರು, ಹಿಂದುಗಳು ತಮಗೆ ಮೋಸಮಾಡಿದರೆಂದೂ, ಮುಂದೆ ಹಿಂತೆಗೆಯದೆ ಹೋರಾಡುವೆವೆಂದೂ ಉತ್ತರವಿತ್ತರು. ಅಂದಿನ ರಾತ್ರಿ ಮಾತಂಗಿ ಸುಖನಿದ್ರೆಮಾಡಿ, ಬೆಳಗಾದ ಕೂಡಲೆ ತನ್ನ ಸೈನ್ಯವನ್ನು ತನಗೆ ಇಷ್ಟಬಂದಂತೆ ನಿಲ್ಲಿಸಿದಳು. ಆಕೆಯ ವ್ಯೂಹರಚನೆ ಅತ್ಯಂತ ಬಲವಾಗಿತ್ತು. ಅನಂತರ ರಾಮನ ಬಳಿಗೆ ಹೊಗಳುಭಟ್ಟರನ್ನು ಅಟ್ಟಿದಳು. ಅವರು ಕುಮಾರರಾಮನನ್ನು ಕಂಡು "ಮಾತಂಗಿ ಯುದ್ಧಕ್ಕೆ ಸಿದ್ಧ ವಾಗಿರುವಳು. ಅವಳು ತುಂಬ ಅಸಾಮಾನ್ಯಳು, ಅವಳನ್ನು ಹರಿ, ಹರ, ಬ್ರಹ್ಮಾದಿಗಳೂ ಜಯಿಸುವುದು ಕಷ್ಟ. ಆದ್ದರಿಂದ ಬಾದುರನನ್ನು ಒಪ್ಪಿಸಿಕೊಟ್ಟು, ಸುರುತಾಳನ ಮಗಳನ್ನು ಮದುವೆಯಾಗಿ ಬಾಳುವುದು ಲೇಸು. ಕಂಪಿಲನ ಕುಲವನಕ್ಕೆ ಚೈತ್ರನೋಪಾದಿಯಲ್ಲಿರುವ ನೀನು ಸಾಯುವುದು ಸೂಕ್ತವಲ್ಲ. ರತಿ ಗಿಂತಲೂ ಚೆಲುವೆಯಾಗಿರುವ ಸುರುತಾಳನ ಮಗಳನ್ನು ವರಿಸು" ಎಂದು ಸವಿನುಡಿಗಳನ್ನು ಆಡಿದರು. ರಾಮನಿಗೆ ಅವರ ಮಾತುಗಳನ್ನು ಕೇಳಿ ನಗು ಬಂದಿತು. ಅವರಿಗೆ ಉಡುಗೊರೆ ಕೊಟ್ಟು ಕಳುಹಿಸಿ, ತಾನು ಯುದ್ಧಕ್ಕೆ ಸಿದ್ಧನಾದನು. ಮಾತಂಗಿಯ ಸೈನ್ಯವನ್ನು ಒಂದು ಬಾರಿ ನೋಡಿ, ಅದರ ಮೇಲೆ ದಾಳಿ ಮಾಡ ಬೇಕೆಂದು ನಿಶ್ಚಯಿಸಿದನು. ಕೋಟೆಯ ಕಾವಲಿಗೆ ಕಾಟಣ್ಣನನ್ನು ನೇಮಿಸಿ, ಪರಿಮಿತ ಪರಿವಾರದಿಂದ ಕೂಡಿ ಸುರುತಾಳನ ಸೇನೆಗೆ ಎದುರಾಗಿ ನಿಂತನು. ತನ್ನ ಅಸಂಖ್ಯಾತ ಸೇನೆಗೆ ಎದುರಾಗಿ ನಿಂತಿದ್ದ ರಾಮನನ್ನು ಕಂಡು ಮಾತಂಗಿ ತಲೆದೂಗಿದಳು. ತನ್ನ ದಿವ್ಯಾಶ್ವವನ್ನೇರಿ ಕುಮಾರರಾಮನು ಅಹಿತ ಸೇನೆ ಯನ್ನು ಪ್ರವೇಶಿಸಿದನು. ರಾಮನ ವೀರಾವೇಶವನ್ನೂ, ಕಾದಾಟವನ್ನೂ ಕಂಡ ದೇವತೆಗಳು ಅವನನ್ನು ಶ್ರೀರಾಮಚಂದ್ರನಿಗೂ ಅರ್ಜುನನಿಗೂ ಕರ್ಣನಿಗೂ ಸಮಾನನೆಂದು ಶ್ಲಾಘಿಸಿದರು. ರಾಮನು ಏಕಪ್ರಕಾರ ವಾಗಿ ಹೋರಾಡುತ್ತ ಶತ್ರುಗಳನ್ನು ಸದೆಬಡಿದನು. ರಣರಂಗವು ಬಹು ಭಯಂಕರವಾಯಿತು. ಸಮಸ್ತ ಸೇನೆಯೂ ರಾಮನ ಏಟನ್ನು ಸಹಿಸಲಾರದೆ ತಲೆಮರಸಿಕೊಂಡಿತು. ಎಷ್ಟು ರೀತಿಯಲ್ಲಿ ಶತ್ರುಗಳು ಬಂದು ಮುತ್ತಿದರೂ ರಾಮನು "ಅರಗಟ್ಟಿಗೆಗಳ ನಡುವೆ ಸಿಲ್ಕಿದ ಮದವಾರಣದಂತೆ"ಯೂ, "ಬೆತ್ತದಡವಿಯ ಹಸರದೊಳಗೆ ಹೊಕ್ಕು ಹೊಡಕರಿಸುವ ಸಿಂಗಶಿಶುವನಂತೆ"ಯೂ, "ಜಳಧಿಯ ಸುಳಿಯ ಮಧ್ಯದ ಭೈತ್ರ ದಂತೆ"ಯೂ, "ಬಳಸಿ[ದ ಬಳ್ಳಿ] ಮಿಂಚಿನ ಮಧ್ಯದೊಳು ನಳನಳಿಸುವ ರವಿ [ಬಿಂಬದಂ]ತೆ"ಯೂ, "ಮಾನವಮಿಯೊಳು ಮೇಳಾಪಿಸಿದಸಿಪೂಜೆಯನಾಂತ ವೇತಾಳನಂತೆ"ಯೂ ತೋರಿಬರುತ್ತಿದ್ದನು. ಶತ್ರುಸೇನೆ ರಾಮನಿಂದ ತುಂಬ ಪಾಡುಪಟ್ಟಿತು. ಅವರ ಮುತ್ತಿಗೆಯೆಲ್ಲ "ಜಳಧಿಯ ತುಂತುರ್ವನಿಗಳು ವಡಬಾನಳನ ಮುತ್ತುವ ತೆಱದಿಂದ" ವ್ಯರ್ಥವಾಯಿತು. ಆವನ ಲೌಡಿಯಿಂದ ಕೆದರಿಬಿದ್ದಿದ್ದ ರಣದ ಹಸರವು "ರಣದೇವತೆ ಮೆಚ್ಚಿ ರಾಮಗೆ ಕಱೆದ ದಾಸಣದ ಪೂವಿನ ಮಳೆಯಂತೆ" ಇದ್ದಿತು. "ಕಡೆಯ ಕಾಲ ದೊಳಂತಕನುರು ದಂಡದಿಂ ಬಡಿವಂತೆ ಜೀವರಾಶಿಯನು" ರಾಮನು ಸುರುತಾಳನ ಬಲವನ್ನು ಬಡಿದು ಕೆಡವಿದನು.

## ಕುಮಾರರಾಮನ ಕಡೆಗಾಲ

ಕುಮಾರರಾಮನ ಆ ಅಸೀಮವಾದ ಪರಾಕ್ರಮವನ್ನು ಕಂಡು ಮಾತಂಗಿ ಆತನು ಶಿವ ಪುತ್ರನಾಗ ಬೇಕೆಂದು ಭಾವಿಸಿದಳು. ಆತನ ರೂಪು ರಮಣೀಯತೆಗಳನ್ನು ನೋಡಿ, ಆಕೆಯ ಮನಸ್ಸು ವ್ಯಾಮೋಹ ಪರ ವಶವಾಯಿತು. ಅಂಥ ಸುಂದರನನ್ನು ಹೇಗೆತಾನೆ ಸಂಹರಿಸುವುದೆಂದು ಚಿಂತಿಸಿ, ಸಂಧಿಮಾಡಿಕೊಳ್ಳಬೇಕೆಂದು ಬಯಸಿ, ತನ್ನ ವಂದಿಮಾಗಧರನ್ನು ಮತ್ತೊಮ್ಮೆ ಆತನ ಬಳಿಗೆ ಕಳುಹಿಸಿದಳು. ಆ ವಂದಿಗಳು ರಾಮನ ಬಳಿಗೆ ಬಂದು ಬಗೆಬಗೆಯಾಗಿ ಆತನನ್ನು ಸ್ತುತಿಸಿದರು. ಆತನನ್ನು ಕುರಿತು, ಖಾನರೇ ಮೊದಲಾದವರೆಲ್ಲ ಕಂಗೆಟ್ಟಿರುವ ರೆಂದೂ, ಮಾತಂಗಿ ರಾಮನನ್ನು ಮೆಚ್ಚಿರುವಳೆಂದೂ, ಸಂಧಿಮಾಡಿಕೊಳ್ಳಬೇಕೆಂದೂ ನುಡಿದರು. ಅನಂತರ,

ದೇವತೆಯರು, ಅಪ್ಸರೆಯರು, ಸ್ವರ್ಗಸುಖ ಮೊದಲಾದುವುಗಳೆಲ್ಲ ಬರಿಯ ಸುಳ್ಳೆಂದೂ, ಭೂಲೋಕದ ಸುಖಕ್ಕಿಂತ ಮಿಗಿಲಾದುದಿಲ್ಲವೆಂದೂ, ವಿಪ್ರರು ಸಲ್ಲದ ಆಶೆ ಆಕಾಂಕ್ಷೆಗಳನ್ನು ಉಂಟುಮಾಡಿ ಹಣವನ್ನು ಕಸಿದುಕೊಂಡು ಮರುಳುಮಾಡುವರೆಂದೂ ಉಪದೇಶಿಸಿದರು. ಅರ್ಜುನನು ದ್ರೌಪದಿಯನ್ನೂ, ಸುಭದ್ರೆಯನ್ನೂ ಸ್ವೀಕರಿಸಿ, ಉರ್ವಶಿಯನ್ನು ನಿರಾಕರಿಸಿದ್ದು, ದೇವತಾಸ್ತ್ರೀಯರ ಸುಖವೆಷ್ಟು ಅಲ್ಪವೆಂಬುದಕ್ಕೆ ನಿದರ್ಶನವೆಂದು ಹೇಳಿದರು. ಆ ನೆಪದಲ್ಲಿ ವಂದಿಮಾಗಧರು ಬೇಕಾದ ಹಾಗೆ ವಿಪ್ರನಿಂದೆಯನ್ನು ಮಾಡಿದರು. ಕಡೆಗೆ, ತಮ್ಮ ಮಾತನ್ನು ಒಪ್ಪಿಕೊಂಡು ಸುರುತಾಳನ ಮಗಳನ್ನು ಮದುವೆಯಾಗಿ ಇಹಲೋಕದಲ್ಲಿಯೇ ಸುಖವನ್ನು ಪಡೆಯಬೇಕೆಂದು ಬೋಧಿಸಿದರು. ರಾಮನಿಗೆ ಅವರ ಮಾತಿನ ಸರಣಿಯನ್ನು ಕೇಳಿ, ಅವರು ಯಾರೋ ಆರ್ಹತಮತದವರಿರಬೇಕು ಎಂದನು. ಬಂದಿದ್ದವರು ತಾವು ಅರ್ಹತಮತದವರೆಂದೂ, ಮಲಯಖೇಡದ ವಾದಿ ವಿದ್ಯಾನಂದಸ್ವಾಮಿಯ ಶಿಷ್ಯರೆಂದೂ, ಕರ್ನಾಟಕದೇಶದ ಮಹಾರಾಜರಿಂದ ಬರುವ ಭಿಕ್ಷೆಯೇ ತಮಗೆ ಜೀವನಾಧಾರವೆಂದೂ ತಿಳಿಸಿದರು. ರಣರಂಗದಲ್ಲಿದ್ದ ರಾಮನಿಗೆ ದಾನ ಮಾಡಲು ತನ್ನ ಬಳಿ ಏನೂ ಇರದಿದ್ದುದರಿಂದ ತಾನು ತೊಟ್ಟಿದ್ದ ಆಭರಣಗಳನ್ನೂ, ತನ್ನ ಕುದುರೆಗೆ ಹಾಕಿದ್ದ ಒಡವೆಗಳನ್ನೂ ಕಳಚಿಕೊಟ್ಟು ಅವರನ್ನು ಹಿಂದಕ್ಕೆ ಕಳುಹಿಸಿದನು. ಅವರು ಹಿಂತಿರುಗಿ ಬಂದು ನಡೆದ ವೃತ್ತಾಂತವನ್ನು ಮಾತಂಗಿಗೆ ತಿಳಿಸಿದರು. ಆಕೆ ಆನೆಯನ್ನೇರಿ ಕುಳಿತು, ಕೈಬೀಸಿ, ಕರೆಯಲು ಆಕೆಯ ಸೇನೆ ಮತ್ತೆ ಭಯಂಕರವಾಗಿ ತೋರಿಬಂದಿತು. ಆಕೆಯ ಸೇನೆಯನ್ನು ಕಂಡ ಭಾವಸಂಗಮನು ಅದನ್ನು ರಾಮನಿಗೆ ತೋರಿಸಲು, ಆತನು ಯುದ್ಧದ ರೌದ್ರತೆಯನ್ನು ಕುರಿತು ಭಾವನಿಗೆ ವೀರಾವೇಶದಿಂದ ವರ್ಣಿಸಿದನು. ಮಾತಂಗಿ ಮಧುರಖಾನನನ್ನು ಕರೆದು, ಕೋಟೆಯನ್ನು ಮುತ್ತುವಂತೆ ಆಜ್ಞಾಪಿಸಿ ತಾನು ಯುದ್ಧಕ್ಕೆ ತೆರಳಿದಳು. ಅನಂತರ ಎರಡು ಪಡೆಗಳಿಗೂ ಮತ್ತೆ ಯುದ್ಧವು ಮಸಗಿತು. ಅಷ್ಟು ದೊಡ್ಡಸೈನ್ಯವನ್ನು ರಾಮನು ಹೇಗೆ ತಾನೆ ಎದುರಿಸುವನೆಂದು ಇಂದ್ರನು ಶಚಿದೇವಿಯೊಂದಿಗೆ ನುಡಿದು ಆತಂಕಪಡುತ್ತಿದ್ದನು. ಇತ್ತ ರಾಮನು ಕಡಲಿನಂತೆ ಮಸಗಿ ಬಂದ ಪಡೆಯನ್ನು ನಿರ್ಭೀತನಾಗಿ ಎದುರಿಸತೊಡಗಿದನು. ಅಬ್ಬರಖಾನನು ಒತ್ತಿಕೊಂಡು ಬರುತ್ತಿದ್ದನು. ಆದರೆ ರಾಮನ ದಿವ್ಯಖಡ್ಗದೆದುರಿನಲ್ಲಿ ಅವರು ಯಾರೂ ನಿಲ್ಲಲಾಗಲಿಲ್ಲ. ಬಾಲನಕ್ಷತ್ರದ ಬಳ್ಳಿವೆಳಗಿನ ಆ ಬಾಳಿಗೆ ಕಂಡಕಂಡವರೆಲ್ಲ ಸಿಕ್ಕಿ ಹತರಾದರು. ಯಾವ ಸೇನಾವಿಭಾಗವೇ ಬರಲಿ ಅದು "ಬಿಱುಗಾಳಿಗೆ ತೆರಳ್ವಂತೆ ಮುಗಿಲೊಡ್ಡು ಮುಱಿದು" ಹಿಮ್ಮೆಟ್ಟುತ್ತಿತ್ತು. ಮಾವಟಿಗರನ್ನು ಕಳೆದುಕೊಂಡ ಆನೆಗಳೂ, ರಾವುತರಿಲ್ಲದ ಕುದುರೆಗಳೂ ದಿಕ್ಕಾಪಾಲಾದುವು. ಆದರೂ ಅಳಿದುಳಿದ ಸುರುತಾಳನ ಮಂದಿ ರಾಮನನ್ನು "ಮುಗಿಲ ಸಮೂಹ ರವಿಯ ಮುತ್ತುವಂತೆ" ಮುತ್ತಿ ಹತಾಶರಾಗುತ್ತಿದ್ದರು. ರಾಮನನ್ನು ಅವರು ಮೇಲಿಂದ ಮೇಲೆ ಕೆಣಕಲು, ಆತನು ದಿವ್ಯಖಡ್ಗವನ್ನು ಒರೆಯೊಳಗಿಟ್ಟು ದಿವ್ಯಭಲ್ಲೆಯವನ್ನು ಹೊರತೆಗೆದನು. ಅದರ ಏಟಿಗೆ ಶತ್ರುಸೇನೆ ಕುರಿದರಿಯಾಯಿತು. ರಣರಂಗವು ನೋಡುವುದಕ್ಕೆ ಅಂತಕನ ಜಯಶಾಲೆಯಂತೆಯೂ ನೀರ್ತೆಗೆದ ಬಲ್ಗಡಲಂತೆಯೂ ತೋರಿಬಂದಿತು. ಎಲ್ಲಿ ನೋಡಿದರೂ ಆನೆ ಕುದುರೆಗಳ ರಾಶಿ ರಾಶಿ; ಎತ್ತ ತಿರುಗಿದರೂ ಸತ್ತ ಯೋಧರ ಹೆಣಗಳ ಬಣಬೆ. ಚೆಲ್ಲಾಪಿಲ್ಲಿಯಾಗಿರುವ ಆಯುಧಗಳು, ಆಭರಣಗಳನ್ನು ಕಂಡರೆ ಅಂತಕನ ಶಸ್ತ್ರಶಾಲೆಯಂತಿತ್ತು. ಹೀಗಾಗಿ ರಣರಂಗವು ಬೀಭತ್ಸವಾಗಿತ್ತು. ರಾಮನ ದಿವ್ಯಾಶ್ವವೂ ಸಹ ತನ್ನ ಒಡೆಯನ ಮನಸ್ಸನ್ನೂ ಮೀರಿಸುವಂತೆ ರಣರಂಗದಲ್ಲಿ ಮಿಂಚಿನ ವೇಗದಲ್ಲಿ ಸಂಚರಿಸುತ್ತಿತ್ತು. ಭಲ್ಲೆಯವನ್ನು ಹಿಡಿದು ಹೋರಾಡುತ್ತಿದ್ದ ರಾಮನು ಸಾಕ್ಷಾತ್ ಕುಮಾರಸ್ವಾಮಿಯಂತಿದ್ದನು. ರಾಮನ ಆ ಅಮಿತ ಪರಾಕ್ರಮವನ್ನು ಕಂಡು ಮಾತಂಗಿ ಮತ್ತೊಮ್ಮೆ ವಿಸ್ಮಯದಿಂದ "ಗುಣಕೆ ಹುರುಡೆ ಶಿವಶಿವ ರಾಮನಂತಪ್ಪ ರಣದಾಕೆವಾಳರು ನಮ್ಮ ಗಣನಾತೀತ ಬಲದೊಳಿಲ್ಲ" ಎಂದು ಮೆಚ್ಚಿದಳು. ಆತನ ಕುದುರೆಯ ಕಾದಾಟವನ್ನೂ ರಾಮನ ಪರಾಕ್ರಮವನ್ನೂ ಮೀರಿಸುವರಾರು ಎಂಬುದಾಗಿ ಚಿಂತಾಕ್ರಾಂತಳಾದಳು.

ದುರ್ಗವನ್ನು ಮೂವಳಸಾಗಿ ಮುತ್ತಲೆಂದು ಮಾತಂಗಿ ಕಳುಹಿಸಿದ ಮಧುರಖಾನನು ಬಹುಮಟ್ಟಿಗೆ ತನ್ನ ಕಾರ್ಯದಲ್ಲಿ ಜಯಶೀಲನಾಗಿದ್ದನು. ಆತನ ಪಡೆ ಲಗ್ಗೆಯೇರಲು ತೊಡಗಿತ್ತು. ಕೋಟೆಯನ್ನು ಧೂಳೀಪಟಮಾಡಲು ಆರಂಭಿಸಿದ್ದರು. ಕೋಟೆಯ ತೆನೆಯ ಮೇಲೆ ವೀರಾವೇಶದಿಂದ ಹೋರಾಡುತ್ತಿದ್ದರು. ಆ ವೇಳೆಗೆ ದುರ್ಗದ ಕಾವಲ ಮಂದಿಯೂ ತಮ್ಮ ರಕ್ಷಣಾಕಾರ್ಯದಲ್ಲಿ ನಿರತರಾಗಿದ್ದರು. ಅಂತೂ ಶತ್ರುಗಳು ಒತ್ತಿ ಬರುತ್ತಿರಲು ಊರಿನ ಜನರು ಕಂಗೆಟ್ಟರು. ಕೋಟೆಯ ರಕ್ಷಣೆಯನ್ನು ಹೊತ್ತಿದ್ದ ಕಾಟಣ್ಣನು ಲಿಂಗ ಮೊದಲಾದ ಉದ್ದಂಡ ಭಟರನ್ನು ಕೂಡಿಕೊಂಡು, ದುರ್ಗದಿಂದ ಹೊರಹೊರಟು ಎದುರಿಸಿ ಹೋರಾಡತೊಡಗಿದರು. ಮಧುರಖಾನನು ನಿಮಿಷ ನಿಮಿಷಕ್ಕೂ ಪ್ರಬಲನಾಗುತ್ತಿದ್ದನು. ದೇವಿಶೆಟ್ಟಿಯ ಲಿಂಗ, ಬಲ್ಲುಗ, ಕೊಳ್ಳಿಯ ನಾಗ, ಕಾಳಾಂಜಿಯ ಕಂಪ, ಗಿಂಡಿಯ ಲಕ್ಕ, ತುರುಕ ರಾವುತರು, ಕನ್ನೋಜಿಗಳು, ಆರೆಯ ರಾವುತರು, ಅಳಿಯಂದಿರು, ಕುಮಾರರು, ಒಡ್ಡಿಯ ರಾವುತರು, ತೌಳ, ಗೌಳರು, ತಿವುಳ, ತೆಲುಗರು, ರಾಮನ ಮೋಹಡೆಕ್ಕಟಿಗರು, ಅಕ್ಕಸಾಲೆಯ ಚಿಕ್ಕ, ಹರಿಗೆಯ ಸಿಂಗ, ಮೊದಲಾದವರೆಲ್ಲ ಸತ್ತು ಬಿದ್ದರು. ರಣಭೂಮಿ "ಅಂತಕನುಂಡು ಕಕ್ಕಿದಂತಾಯಿತು." ಹೊಲೆಯರ ಹುಳ್ಳ, ಮಾದಿಗ ಹಂಪರೂ ಮಡಿದರು. ಕಾಟಣ್ಣನು ಮತ್ತೆ ದುರ್ಗಕ್ಕೆ ಸಾರಿದನು. ರಾಮನ ಪಕ್ಷವು ಈ ರೀತಿ ಶತ್ರುಗಳ ವಶವಾಗುತ್ತ ಬರುತ್ತಿತ್ತು. ಆ ದುಃಸ್ಥಿತಿಯನ್ನು ಕಂಡ ಊರಿನ ಪತಿವ್ರತೆಯರು ಚಿತೆಯೇರಲು ಅಣಿಯಾಗುತ್ತಿದ್ದರು. "ಚಿಟ್ಟೆ ಮಂಡೆಯ ಕಟ್ಟದಿದಿರೊಳು ಬಿದ್ದಿರ್ದ ತೊಟ್ಟಿಲ ಮಕ್ಕಳ ಮೊಗವ ನಿಟ್ಟಿಸದತ್ತಿತ್ತ ಪರಿದಾಡಿದರು ಕೈಯ ನೆಟ್ಟೆಯೊತ್ತುತ ಕಾಮಿನಿಯರು" ಪ್ರಾಣತ್ಯಾಗಮಾಡುತ್ತಿದ್ದರು. ಕೆಲವರಾದರೋ ಕೋಲ್ಗೊಂಡ ಪುಲ್ಲೆಗಳಂತೆ ದಿಕ್ಕುಗೆಟ್ಟರು. ಕೋಟೆ ತಮಗೆ ವಶವಾಗುತ್ತಿರುವ ವೃತ್ತಾಂತವನ್ನು ಬಂದು ಹೇಳಿದ ಚರರಿಗೆ ಮಾತಂಗಿ ಅಂಗಚಿತ್ರವನ್ನಿತ್ತು, ಇನ್ನೂ ಹೆಚ್ಚು ಮಂದಿ ಖಾನರನ್ನು ಕೊಟ್ಟು ಕಳುಹಿಸಿದಳು. ಊರಿನ ಕಡೆಯಿಂದ ಹೊಗೆಯೇರುತ್ತಿರುವುದನ್ನು ಕಂಡ ಕುಮಾರರಾಮನು ತನಗೆ ಪುರಹರನೊಲ್ಮೆ ತಪ್ಪಿತೆಂದು ನಿರ್ಧರಿಸಿದನು. ಊರನ್ನು ಉಳಿಸಬೇಕೆಂಬ ಅಪೇಕ್ಷೆಯಿಂದ ಅತ್ತ ಹೊರಡಲು ಅನುವಾದನು. ಆದರೆ, ಶತ್ರುಗಳು ಅವನನ್ನು ಹೋಗದಂತೆ ಅಡ್ಡ ಹಾಕಿದರು. ಹಲವರು ಮೂದಲಿಸಿದರು. ರಾಮನು ಅವರನ್ನೆಲ್ಲ ಸಂಹರಿಸುತ್ತ, ಕಡ್ಡಿಗೂ ಕಡೆಯಾಗಿ ಕಾಣುತ್ತ, ಊರಿನ ಕಡೆಗೆ ಬಂದನು. ಆತನ ದಿವ್ಯಾಶ್ವವು ತನಗೆ ಉಂಟಾದ ಗಾಯಗಳಾವುವನ್ನೂ ಗಣಿಸದೆ, ಮದಗಜದೋಪಾದಿಯಲ್ಲಿ ಆತನನ್ನು ಕರೆತಂದಿತು. ಅಕ್ಕಪಕ್ಕದ ರಾವುತರು ಎಷ್ಟು ಪ್ರಯತ್ನಿಸಿದರೂ ರಾಮನನ್ನು ತಡೆಯಲಾಗಲಿಲ್ಲ. "ಪಡಗುನಡೆಯೆ ಪಟವೆತ್ತೆ ಜಲಧಿ ನೀರೊಡೆದು ದಾರಿಯ ಕೊಡುವಂತೆ" ರಾಮನ ಕುದುರೆ ಸಾರುವುದೇ ತಡ, ಪಡೆ ದಾರಿಬಿಟ್ಟು ಸರಿಯುತ್ತಿತ್ತು. ರಾಜಬೀದಿಯಲ್ಲಿ ಠೀವಿಯಿಂದ ನಡೆಯುವಂತೆ ರಾಯಕುವರನು ಸಾಗಿ ಬರುತ್ತಿದ್ದನು. ರಾಮನನ್ನು ಅಡ್ಡಗಟ್ಟಲಾರದ ಐವತ್ತಾರು ದೇಶಗಳ ರಾಯರೂ ನಿಟ್ಟುಸಿರುಬಿಟ್ಟು ಓಡಿದರು. ಅಂಗ, ಕಳಿಂಗ, ಮಗಧ, ಮಾಳವ, ಗೌಳ, ವಂಗಪತಿಗಳು ಅಪಮಾನಿತರಾದರು. ರಾಮನನ್ನು ಕಂಡ ಕಾಟಣ್ಣನು ಮನದ ಉಮ್ಮಳವನ್ನು ಬಿಸುಟು, ತಮ್ಮನನ್ನು ಕುದುರೆಯಿಂದ ಕೆಳಗಿಳಿಸಿಕೊಂಡನು. ಕೂಡಲೇ ಆ ದಿವ್ಯಾಶ್ವವು ಪ್ರಾಣವನ್ನು ತೊರೆಯಿತು. ಆಗ ರಾಮನು ದೇವದೂತನು ತನಗೆ ಹೇಳಿದುದನ್ನು ನೆನೆದನು. ಆ ಕುದುರೆಯನ್ನು ತಕ್ಕ ರೀತಿಯಲ್ಲಿ ಪೂಜಿಸಿ, ಅದನ್ನು ನೆಲಮಾಳಿಗೆಗೆ ಕಳುಹಿಸಿದನು. ಊರಿನಲ್ಲಿ, ಅಗ್ನಿಪ್ರವೇಶಮಾಡಲು ಸಿದ್ಧರಾಗಿದ್ದ ಮಾಸತಿಯರನ್ನು ಕಂಡನು. ಆಗ "ಚಿಂತೆ ಸಂತೋಷಗಳೆರಡಕ್ಕೆ ಕುವರ ತನ್ನಂತರಂಗವ ಮಾಱುಗೊಟ್ಟು ತಾಂ ತಡೆಯದೆ ಬಂದಲಂಕರಿಸಿದನು ಗಜಾಂತಕವಿಷ್ಟರಾಗ್ರವನು." ರಾಮನ ಸತಿಯರು ಅವನ ಪಾದಪದ್ಮಗಳನ್ನು ಪೂಜಿಸಿದರು. ಬಳಿಕ, ಆತನು ದೇವಾಗಾರಕ್ಕೆ ಬಂದು ಲಿಂಗವನ್ನು ಕಂಡು ತನ್ನ ಅಂತ್ಯಕಾಲವು ಸಮೀಪಿಸುತ್ತಿರುವುದನ್ನು ಸಂತೋಷದಿಂದ ಸಾರಿ ಹೇಳಿದನು. ಆ ಮಾಸತಿಯರು "ನಳನಳಿಸುವ ಕೆಂದಾವರೆಯಿಡಿದಿರ್ದ ಕೊಳದೊಳು ಜಲಕೇಳಿಯಲಿ ಎಳಸಿ ಬೀಳ್ವಂತೆ" ಕಳಕಳಿಪ ಅಗ್ನಿಕುಂಡದಲ್ಲಿ ಬಿದ್ದರು. ರಾಮನು ಕಾಟಣ್ಣ, ಬಾದುರಖಾನರಿಗೆ ಬೇಕಾದಷ್ಟು

ಬಾಣಗಳನ್ನು ಕಳುಹಿಸಿ, ತಾನು ತನ್ನ ಹರಿಶಾರ್ಙ್ಗವನ್ನು ತೆಗೆದುಕೊಂಡನು. ದುರ್ಗಕ್ಕೆ ಪ್ರವೇಶಿಸಿದ್ದ ತುರುಕರನ್ನು ಹಿಮ್ಮೆಟ್ಟಿಸಲು, ತನ್ನ ಅಕ್ಕ ಪಕ್ಕಗಳಲ್ಲಿ ಕಾಟಣ್ಣ, ಬಾದುರನನ್ನೂ, ಮಧ್ಯದಲ್ಲಿ ಸಂಗಮದೇವನನ್ನೂ ನಿಲ್ಲಿಸಿಕೊಂಡು ಬಾಣಗಳ ಮಳೆಯನ್ನು ಕರೆಯಲಾರಂಭಿಸಿದನು. ಬಲವಾದ ಕಾಳಗವಾಯಿತು. ರಾಮನ ಬಾಣಗಳ ಬಿರುಮಳೆಯನ್ನು ಖಾನರು ತರಹರಿಸಲಾರದೆ ತತ್ತರಿಸಿದರು. ಒಂದು ಬತ್ತಳಿಕೆಯಿಂದ ಇನ್ನೊಂದು ಬತ್ತಳಿಕೆಗೆ ಬಾಣಗಳನ್ನು ತುಂಬುವಂತೆ ರಾಮನು ಅಹಿತರ ಮೈಯಲ್ಲಿ ಅಂಬುಗಳನ್ನು ನಾಟಿದನು. ಖಾನರ ತಂಡವೂ ಮೈಮರೆತು ರಾಮನ ಮೇಲೆ ಬಾಣಗಳನ್ನು ಬಿಡುತ್ತಿರಲು ದೇವತೆಗಳು ದುಃಖಿಸಿದರು. ಆ ಅನಂತವಾದ ಯುದ್ಧವನ್ನು ಕಂಡು, ಮಾತಂಗಿ ಮತ್ತಷ್ಟು ಸಿಂಗಾಡಿಯ ಬಿಲುಗಾರರನ್ನು ಹುರಿದುಂಬಿಸಿ ಕಳುಹಿಸಿದಳು. ಅವರ ಸಿಂಗಾಡಿವಿಲ್ಲುಗಳ ಶರಜಾಲವು " ಸಿಡಿಲ ಬಳಗವೊ ಶಿವನ ಪಣೆಗಣ್ಣ ಕೆಂಗಿಡಿಯ ಜಂಗುಳಿಯೊ ವಾಡಬನ ಕುಡಿನಾಲಗೆಗಳ ಕೂಟವೊ " ಎಂಬಂತೆ ತೋರುತ್ತಿತ್ತು. ಅವರು " ಹಲಗೆ ಹಕ್ಕರಿಕೆ ಕೊಪ್ಪರಿಕೆ ಬದ್ದರ ಬಂಡಿ ತಳಿ ಬೆತ್ತವರಿಗೆ ಮಱೆಯೊಳು," " ಕೈಯು ಹರಣವೆರಸು ನಿಂದು ಕಲಿ ರಾಮನ ಕೆಣಕಿದರು." ಕಲ್ಗಳ ಮರೆಯಲ್ಲಿ ನಿಂತು ರಾಮನ ಮೇಲೆ ಸರಳಮಳೆಯನ್ನು ಕರೆದರು. ಆ ಖಾನ ಮಲ್ಲುಕರು ಬಿಟ್ಟ ಅಂಬುಗಳು ಜೋಡಿನ ಮೇಲೆ, ಸೀಸಕದ ಮೇಲೆ ನಾಟಲು ಗಾಡಿಕಾತಿ ಮಾತಂಗಿ ನಲವೇರಿದಳು. ರಾಮನ ವಜ್ರಾಂಗಿ ಹರಿದು, ಮೈಯಲ್ಲಿ ರಕ್ತ ಹರಿಯಲಾರಂಭಿಸಲು, ಕ್ಷಣಕಾಲ, ಅವನು ಮೂರ್ಛೆಹೋದನು. ಅದನ್ನು ಕಂಡ ಅಮರರು ಸಂಕಟಪಟ್ಟರು. ಕೂಡಲೆ ಅಲ್ಲಿದ್ದ ಲಲನೆಯರು ರಾಮನನ್ನು ಉಪಚರಿಸಲು ಅವನು ಎಚ್ಚತ್ತು ನೊಂದ ಹುಲಿಯಂತೆ ಹುರಿಯೇರಿದನು. ಮತ್ತೆ ಸಂಹಾರಕಾರ್ಯ ಮೊದಲಾಯಿತು. ಸಂಗಮದೇವ, ಕಾಟಣ್ಣ, ವೀರಬಾದುರರು ಕಂಠಗತಪ್ರಾಣರಾದರು. ರಾಮನ ಪಾದಗಳ ಮೇಲೆ ಬಿದ್ದು, ರಾಮನನ್ನು ಉಳುಹಿಕೊಳ್ಳಲು ಸಾಧ್ಯವಾಗದಲ್ಲಾ ಎಂದು ಮರುಗಿದರು. ತಮಗೆ ಎಂದೆಂದಿಗೂ ಆತನ ಸೇವೆಯೇ ಲಭಿಸಲೆಂದು ಕೋರಿದರು. ಬಾದುರನನ್ನು ಕಂಡ ರಾಮನು " ಧರೆ, ದುರ್ಗ, ದೇಶ, ಕೋಶವು, ತಂದೆ ತಾಯ್ಗಳು ವರಮಿತ್ರರಗ್ರಜಾನುಜರು ಇರಲಿ ಹೋಗಲಿ ನಂಬಿ ಬಂದ ನಿನ್ನನು ಖಾನ ಪರಿರಕ್ಷಣೆಗೆಯ್ದುದಿಲ್ಲ" ಎಂದು ವ್ಯಥೆಪಟ್ಟನು. ಬಾದುರನು ರಾಮನ ಪಾದದ ಮೇಲೆ ಬಿದ್ದು ಕಣ್ಣು ಮುಚ್ಚಿದನು. ಸಂಗಮದೇವ ಕಾಟಣ್ಣರು, ರಾಮನನ್ನು ಬೀಳ್ಕೊಟ್ಟು ಅಸು ನೀಗಿದರು.

ರಾಮನ ಪಕ್ಷವು ಕ್ಷಯವಾಗುತ್ತಿರುವುದನ್ನು ಕಂಡು, ಮಾತಂಗಿಯ ಉತ್ಸಾಹ ಹೆಚ್ಚುತ್ತಿತ್ತು. ಆಕೆ ಕೋಪಗೊಂಡು ಮೇಲಿಂದ ಮೇಲೆ ರಾಮನನ್ನು ಮುತ್ತಲು ಸೇನೆಯನ್ನು ಅಟ್ಟುತ್ತಿದ್ದಳು. ಮೂವಳಸಾಗಿ ಬಂದು ಮುತ್ತಿ, ಹತ್ತೂ ಕಡೆಗಳಿಂದ ಏರಿ ಬರುತ್ತಿರುವ ಖಾನರನ್ನು ಕಂಡು ರಾಮನು ನಸು ನಕ್ಕನು. ತನ್ನ ಶಕ್ತಿ ಮಿಾರಿ ಶತ್ರುಗಳನ್ನು ಏಕಾಂಗಿಯಾಗಿಯೇ ಸಂಹರಿಸುತ್ತಿದ್ದನು. ರಾಮನ ವೀರಾವೇಶವನ್ನು ಕಂಡ ಮಾತಂಗಿ ತಾನೂ ಆಯುಧವನ್ನು ಹಿಡಿದು ನುಗ್ಗಿದಳು. " ತೋಳೊಂದಕೆ ಹನ್ನೆರಡು ಸಾವಿರ ಹೊನ್ನ ಜಾಳವ ಕೊಂಬ ರಾವುತರ ಜೋಳದ ಕೆಯ್ಯ ಕಾಯಿಸುವೆ"ಎಂದು ಮೂದಲಿಸುತ್ತ ಸಾಗುತ್ತಿದ್ದಳು. ಸೇನಾವನಧಿಯನ್ನು ಉಬ್ಬೇಳಿಸುತ್ತ ಬಂದು, ಮೂವಳಸಾಗಿ ಸುತ್ತಿ, ಆನೆಯ ಮೇಲೆ ನಿಂತು ಚಾಮರವನ್ನು ಬೀಸಿದಳು. ಸೇನೆ ತಂಡತಂಡವಾಗಿ ಬಂದು ರಾಮನನ್ನು ಮುತ್ತಿತು. " ಸಿಂಗದ ಶಿಶುವ [ನಾನಾ]ಕಾನನದ ಮಾತಂಗಘಟಾನೀಕ ಬಂದು ಪಿಂಗದೆ ಮುತ್ತುವಂತೆ "ಯೂ, " ಶರಭಶಾಬಕವ ಕೇಸರಿವಿಂಡು ಕಲಕುವ ಪರಿಯಂತೆ "ಯೂ, ರಾಮನನ್ನು ಕವಿದರು. ಆದರೂ ರಾಮನಿಂದ ಅನೇಕರು ಗಾಯಗೊಂಡರು. ಅಗ್ನಿಯನ್ನು ಮುತ್ತಿದ ಪತಂಗಗಳಂತೆ ಸತ್ತು ಬೀಳುತ್ತಿದ್ದರು. ಕಡೆಗೆ ರಾಮನೂ ಶಕ್ತಿಗುಂದಲಾರಂಭಿಸಿದನು. " ಎಡೆವಿಡದಂಗೋಪಾಂಗದೊಳಗೆ ಘಾಯವಿಡಿದುವು ಮೆಯಿಗೆ ಬಳಲ್ಕೆ ಅಡರ್ದುದು ಮೆಲ್ಲ ಮೆಲ್ಲನೆ ಕಾಲ್ಗಳು ತಡಬಡಿಸಿದವಲ್ಲಿ ಕುವರಗೆ." ಇದನ್ನು ಕಂಡ ಮಾತಂಗಿ, ಉತ್ಸಾಹಿತಳಾಗಿ " ಹರಿಯಬಿಟ್ಟಳು ನಿಜಸೇನಾನಾಯಕರನು ನಲವಿಂದ." ರಾಮನಾದರೋ ಮೆಲ್ಲ ಮೆಲ್ಲನೆ ನಡೆತಂದು ಒಂದು ಶಿಲೆಯನ್ನು ನೆಮ್ಮಿ ನಿಂತನು.

"ಹೆಚ್ಚಿದ ಹೇರಡವಿಯನೆಲ್ಲವ ಕಾಳ್ಗಿಚ್ಚು ಸುಟ್ಟೊಂದು ಬಲ್ಮರನ ಕೆಚ್ಚನಾಶ್ರಯಿಸಿ ನಿಂದಂತೆ"ಯೂ, "ಕರಿವಿಂಡನೋಡಿಸಿ ಹರಿಶಿಶು ಬಂದೊಂದುರು ಗಂಡಶೈಲತಳದೊಳು ಇರದೆ ಮಂಡಿಸಿದಂತೆ"ಯೂ, "ಕೊಳುಗುಳದೊಳು ಕಾದಿ ರವಿಸೂನು ರಥ ಕಳಕುಳವಾಗಲಾತ್ಮಯೋಗದೊಳು ಬಳಸಂದು ನಿಂದ ತೆಱ" ದಂತೆಯೂ, "ಮಗನ ಮಗನೊಳು ಮಹಾಕಾಳಗವನುಱೆ ನೆಗಳಿ ಮೆಯ್ಯೊಳಗೆ ಕೀಲಿಸಿದ ಅಗಣಿತ ಶರ ಮಧ್ಯದೊಳಿಗಿರ್ದ ಭೀಷ್ಮನ ಬಗೆ"ಯಂತೆಯೂ, "ಭೂಮಿಯೊಳುಳ್ಳರಸುಗಳ ಕೊಂದುರು ವಿಂಧ್ಯಾಮಹೀ ಧರದ ತಟದೊಳು ಆನೋದ ಮಿಗೆ ನಿಂದ ಜಮದಗ್ನಿರಾಮ" ನಂತೆಯೂ ಕುಮಾರರಾಮನು ಆ ಶಿಲೆಯನ್ನು ಒರಗಿಕೊಂಡು ಧ್ಯಾನಯೋಗದಲ್ಲಿದ್ದನು. "ಹೂಡಿದ ಮಂಡಿ, ಹಿಡಿದ ಬಿಲ್ಲು, ತಿರುಸರಲೂಡಿ ಕಿವಿಯೊಳಿರ್ದ ಬಲದ ಗಾಡಿವಡೆದ ಹಸ್ತವೆಸೆಯೆ" ಕುಮಾರರಾಮನು ಚಂದ್ರಚೂಡಚಿಂತೆಯೊಳಿರ್ದನು, ಇಂದ್ರಿಯ ಗಳನ್ನು ಒಟ್ಟುಗೂಡಿಸಿ, ಹೃದಯಾಂಬುಜ ಮಧ್ಯದೊಳಗೆ ಮದನಾರಿಯನ್ನು ನೆಲೆಗೊಳಿಸಿ ಸಮಾಧಿ ಸ್ಥಿತಿಯಲ್ಲಿ ದ್ದನು. ಈಶ್ವರಧ್ಯಾನಮಗ್ನನಾಗಿದ್ದ ಆತನ ಬಳಿಗೆ ಈಶ್ವರನು ನಂದಿಕೇಶ್ವರನ ಮೂಲಕ ಪುಷ್ಪಕವಿಮಾನವನ್ನು ಕಳುಹಿಸಿದನು. ಆ ದಿವ್ಯಪುಷ್ಪಕವು ತೇಜಃಪುಂಜದಿಂದ ಕೂಡಿ, ಅತ್ಯಂತ ವೈಭವದಿಂದ ರಾಮನ ಬಳಿಗೆ ಸಾರಿತು. ರಾಮನ ಆತ್ಮವು ನೆತ್ತಿಯಿಂದ ಭೇದಿಸಿಕೊಂಡು ಆ ಪುಷ್ಪಕವನ್ನು ಅಡರಿತು. ಕೂಡಲೆ ಪುಷ್ಪವೃಷ್ಟಿ ಯಾಯಿತು. ರಾಮನು ಸೂಕ್ಷ್ಮಶರೀರನಾಗಿ ಶಿವಲೋಕದತ್ತ ತೆರಳಿದನು. ಶರಧಿಮಧ್ಯದ ನಾವೆಯಂತೆ ಆ ಪುಷ್ಪಕವು "ತರಣಿಮಂಡಲವನುಚ್ಚಳಿಸಿ, ಗಂಗೆಯ ದಾಂಟಿ, ವರತಾರಾಲೋಕವನು ಪರಿದೇಱೆ" ಹೊರ ಟಿತು. ನಂದಿಕೇಶ್ವರನು ಆ ನವ್ಯ ಪ್ರಮಥನನ್ನು ದಿವಿಜನಗದ ಬಳಿಗೆ ಕರೆತಂದನು. ಅಲ್ಲಿದ್ದ ಸಸ್ಯ ಸಂಪತ್ತನ್ನೂ, ಗರುಡ, ಗಂಧರ್ವ, ಕಿನ್ನರ, ಕಿಂಪುರುಷ, ತುಂಬುರ, ಯಕ್ಷ, ರಾಕ್ಷಸ, ಅಮರರು, ಅಬಲೆಯರನ್ನೂ ರಾಮನು ನೋಡಿದನು. ಅನಂತರ ಲವಣಾಂಬುಧಿಯನ್ನು ದಾಟಿದ್ದಾಯಿತು. ಮುಂದಕ್ಕೆ ಪುರಂದರ ಪುರದ ಉಪವನದ ಸಮೀಪಕ್ಕೆ ಬಂದನು. ಇಂದ್ರನು ಪರಿವಾರ ಸಮೇತನಾಗಿ ರಾಮನನ್ನು ಸಂದರ್ಶಿಸಿದನು. ಅಲ್ಲಿದ್ದ ನಳ, ನಹುಷಾದಿ ರಾಯರಿಗೆ ನಮಸ್ಕರಿಸಿ, "ಕನ್ಯಾಪುತ್ರ, ಕಾರ್ಮುಕಗುರು, ಭೀಷ್ಮಾಭಿಮನ್ಯು ಸಾತ್ಯಕಿ" ಮೊದ ಲಾದವರಿಗೆ ವಂದಿಸಿ, ರಾಮನು ಬ್ರಹ್ಮೋತ್ತರಲೋಕವನ್ನು ತಲಪಿದನು. ಅಚ್ಯುತಕಲ್ಪವಿಮಾನ ಭೂಮಿ ಯನ್ನು ಕಂಡನು. ಅಹಮಿಂದ್ರಲೋಕವನ್ನು ಕಳೆದು ಮಹಾತಪಸ್ವಿಗಳಿಗೂ ಅಸಾಧ್ಯವೆನಿಸುವ ದೇವತೆ ಗಳಿದ್ದೆಡೆಗೆ ಬಂದನು. ಕಟ್ಟಕಡೆಗೆ ಹರಲೋಕದ ಸಂದರ್ಶನವಾಯಿತು.

ಕುಮಾರರಾಮನು ಕೈಲಾಸದ ವೈಭವವನ್ನು ನೋಡಿದನು. "ಈರೇಳು ಲೋಕವೆಂದೆಂಬ ಹರ್ಮ್ಯದ ಮೇಲೆ ಸೇರಿದ ಮುಕ್ತಾಫಲದ ಭಾರಿಯ ಕಳಶವೆಂಬಂತೆ" ರಜತಾದ್ರಿ ತೋರಿಬರುತ್ತಿತ್ತು. "ಬೆಳುದಿಂಗಳ ತೊಳೆದಿಂಗಡಲೊಳು ಕೈದಳ್ತು ಸೋಂಕದಜನೊಂದುಗೂಡಿ ತಿಳಿದಿಂದ್ರನಾನೆಗೊಂಬಿಂದೊಪ್ಪವಿಟ್ಟಂತೆ" ಇದ್ದಿತು. ಅದನ್ನು ನೋಡಿ ರಾಮನಿಗೆ ದಿವ್ಯಾನಂದವುಂಟಾಗಿ, ಪರವಶತೆಯಿಂದ ಮಲಗಿದನು. ಆತನಿಗೆ ಸಂಪೂರ್ಣ ವಾಗಿ ಈಶ್ವರನ ದಿವ್ಯಜ್ಞಾನವುಂಟಾಯಿತು. ಆತನನ್ನು ನಂದಿಕೇಶ್ವರನು ಎಚ್ಚರಿಸಿ, ಅತ್ತ ಈಶ್ವರನ ಬಳಿಗೆ ಹೋಗಿ ಸಭೆಗೆ ಬಿಜಯಮಾಡಿಸಬೇಕೆಂದು ಬೇಡಿದನು. ಹರಿ, ವಿಧಿಗಳು ನೆಲವನ್ನು ಉಗ್ಘಡಿಸುತ್ತ ಬರಲು ಈಶ್ವರನು ಓಲಗಕ್ಕೆ ಬಂದನು. ಕುಸುಮದೊಡನೆ ಕಂಪು, ಬಿಸಜದೊಡನೆ ಲಕ್ಷ್ಮಿ ಬೆರೆತಿರುವಂತೆ ಆತನೊಂದಿಗೆ ಪಾರ್ವತಿಯೂ ಆಗಮಿಸಿದಳು. ಅನಂತರ, ಒಬ್ಬೊಬ್ಬರಾಗಿ ಸಭೆಗೆ ಬರಲಾರಂಭಿಸಿದರು. ದೇವತಾಸ್ತ್ರೀಯರು, ಹೆಸರುವಾಸಿಯಾದ ಋಷಿವರೇಣ್ಯರು, ದಿಕ್ಪಾಲಕರು, ದೇವದೂತರು, ಮಹಾಪರಾಕ್ರಮಶಾಲಿಗಳಾದ ಗಣಂ ಗಳು, ಮುಮುಕ್ಷುಗಳು, ಶಚೀದೇವಿ, ಶಾರದೆ, ಮಹಾಲಕ್ಷ್ಮಿ, ರೋಹಿಣಿ ಮೊದಲಾದವರು ಬಂದು ಕೂಡಿದರು. ಬಳಿಕ ಸಿದ್ಧಾಂತಿಗಳು ಅಲ್ಲಿಗೆ ಬಂದು, ವೇದಾಂತ, ಸ್ಯಾದ್ವಾದ, ಅರ್ಹತಮತ, ಶೂನ್ಯವಾದ ಮೊದಲಾದ ಇತರ ಮತಗಳ ಸಿದ್ಧಾಂತವನ್ನು ಖಂಡಿಸಿ, ಈಶ್ವರನ ಶ್ರೇಷ್ಠತ್ವವನ್ನು ವಾದಿಸಿ ಸಾಧಿಸಿದರು. ನಂದಿಕೇಶ್ವರನು ಅಂಥ ಅನುರೂಪವಾದ ಸಭೆಗೆ ರಾಮನನ್ನು ಕರೆತಂದನು. ಗಂಗಾ ಯಮುನಾ ಸಂಗಮದಂತೆ ಪ್ರಕಾಶಮಾನ

ವಾಗಿದ್ದ ಆ ಸಭೆಯಲ್ಲಿ ರಾಮನು ಪಾರ್ವತಿಪರಮೇಶ್ವರರನ್ನು ಕಂಡು ಕೃತಾರ್ಥನಾದನು. “ಪಸಿದಗೆ ಪಾಲ್ಗಡಲ್ ಬಿಸಿಲೊಳು ಬೆಂದಗೆ ಬಿಸಜಾಕರ ರೋಗಿಗಮೃತ ಒಸೆದೆಯ್ತಂದಂತೆ” ಕುಮಾರನಿಗೆ ಆನಂದವಾಯಿತು. ಕುಮಾರರಾಮನು ಈಶ್ವರನ ಮಹಿಮೆಯನ್ನು ನಾನಾ ಪರಿಯಾಗಿ ಕೊಂಡಾಡಿದನು. ಆ ಭಕ್ತನ ಮಹಿಮಾತಿಶಯಗಳಿಗೆ ಮನಮೆಚ್ಚಿ, ಈಶ್ವರನು ಮೈದಡವಿ, ತನ್ನ ಪಾದಾರವಿಂದದ ಬಳಿಯಲ್ಲಿ ಕೈವಿಡಿದು ಕೂಡಿಸಿಕೊಂಡನು. ಆ ಹೊತ್ತಿಗೆ ಸರಿಯಾಗಿ ಕುಮಾರನನ್ನು ಭೂಲೋಕದಲ್ಲಿ ಸಂರಕ್ಷಿಸಿದ ಇಂದ್ರನ ದೂತನು ಆಸ್ಥಾನಕ್ಕೆ ಬಂದು ರಾಮನ ಬಗ್ಗೆ ರಣರಂಗದಲ್ಲಿ ಏನೇನಾಯಿತೆಂದು ವರದಿ ಒಪ್ಪಿಸಿದನು.

ಕುಮಾರರಾಮನು ಸೂಕ್ಷ್ಮಶರೀರಿಯಾಗಿ ತೆರಳಿದ ಬಳಿಕ, ಆತನ ತೇಜೋಮಯವಾದ ಶರೀರವನ್ನು ಕಂಡು ಖಾನ, ಮಲ್ಲುಕರು ಅವನ ಪ್ರತಾಪವನ್ನು ಸ್ಮರಿಸಿ ಸ್ತುತಿಸಿದರು. ಮಾತಂಗಿ ಅವನ ಪಂದಲೆಯನ್ನು ಕಡಿದು ಸುರುತಾಳನ ಬಳಿಗೆ ಅಟ್ಟಿದಳು. ಅದರ ಕಾಂತಿ ಸ್ವಲ್ಪ ಮಾತ್ರವೂ ಕಡಮೆಯಾಗಿರಲಿಲ್ಲ. ರಾಮನು ಪುಷ್ಪಕವಿಮಾನವನ್ನು ಏರಿ ಹೊರಟನೆಂಬ ಸುದ್ದಿಯನ್ನು ಕೇಳಿದ ಸುರುತಾಳನು, ಆ ತಲೆಯನ್ನು ನೋಡಿ ಕಂಬನಿಗರೆದು ಹೊಗಳಿದನು. ಕುಮಾರರಾಮನ ತಲೆಯನ್ನು ತಂದಿರುವ ವೃತ್ತಾಂತವನ್ನು ಕೇಳಿದ ಸುರುತಾಳನ ಮಗಳು, ಒಡನೆಯೇ ಅಲ್ಲಿಗೆ ಬಂದು, ಅತೀವ ವಿರಹಾವಸ್ಥೆಯನ್ನು ಅನುಭವಿಸಿ ಯಾತನೆಯನ್ನು ತಡೆಯಲಾರದೆ ಪ್ರಾಣವನ್ನು ತೊರೆದಳು. ಸುಲ್ತಾನನ ದುಃಖ ದ್ವಿಗುಣವಾಯಿತು. ತನ್ನ ಮಗಳ ಸಾವಿಗೆ ತಾನೇ ಕಾರಣನಾದೆನಲ್ಲಾ ಎಂಬುದಾಗಿ ಮರುಗಿದನು. ಆಕೆಯನ್ನು ಗೋರಿಯಲ್ಲಿಟ್ಟನು. ಅಲ್ಲಿದ್ದ ಪಂಡಿತರು ರಾಮನ ತಲೆಯ ಕಾಂತಿಯನ್ನು ಕಂಡು, ಅದರಿಂದ ನಗರಕ್ಕೆ ಕೇಡಾಗುವುದೆಂದು ಸೂಚಿಸಿದರು. ಸುರುತಾಳನು ಅದನ್ನು ಕೂಡಲೆ ಕುಮ್ಮಟಕ್ಕೆ ಕಳುಹಿಸಿದನು. ಅಲ್ಲಿ ಅದು ಲಿಂಗಾಕೃತಿಯಾಯಿತು.

ಈ ವಿವರವನ್ನು ಆಲಿಸಿದ ಪರಮೇಶ್ವರನು ರಾಮನ ಮಹಿಮೆಯನ್ನು ಕೊಂಡಾಡಿದನು. ಆತನ ಶುಚಿತ್ವವನ್ನು ಪರಿಸರಿಯಾಗಿ ವರ್ಣಿಸಿದನು. ಎರಡು ಜನ್ಮಗಳಲ್ಲಿ ತಾನಾಗಿಯೇ ಒಲಿಸಲು ಬಂದ ಸಾಕ್ಷಾತ್ ಊರ್ವಶಿಯನ್ನೇ ನಿರಾಕರಿಸಿದ ಆತನ ಚಿತ್ತಸ್ಥೈರ್ಯವು ಅಸದೃಶವೇ ಸರಿಯೆಂದನು. ಈಶ್ವರನು ರಾಮನಿಗೆ ಗಣಪದವಿಯನ್ನಿತ್ತು, ಮಹಾಪ್ರಮಥರ ಪಂಕ್ತಿಯಲ್ಲಿ ಕೂಡಿಸಿದನು.

## ಕೃತಿಯ ವೈಶಿಷ್ಟ್ಯಗಳು

ಕವಿನಂಜುಂಡನು ತನ್ನ ಕೃತಿಯನ್ನು ಅತ್ಯಂತ ಪ್ರೌಢವಾಗಿ ರಚಿಸಿದ್ದಾನೆ. ಮೊದಲನೆಯ ಸಂಧಿಯಲ್ಲಿಯೇ ಆದಿಕವಿ ಪಂಪ, ನೇಮಿಚಂದ್ರ, ಜನ್ನ, ಗುಣನಂದಿ, ಗಜಗ, ಗುಣವರ್ಮ, ನಾಗಚಂದ್ರ, ಸುಜನೋತ್ತಂಸ, ಅಸಗ, ರತ್ನ, ಶಾಂತಿವರ್ಮ, ಹರಿಹರ, ಮಧುರ ಮೊದಲಾದ ಕನ್ನಡ ಕವಿಗಳಿಗೂ, ಬಾಣ, ಕಾಳಿದಾಸ, ಮೊದಲಾದ ಸಂಸ್ಕೃತ ಕವಿಗಳಿಗೂ ನಮಸ್ಕರಿಸಿದ್ದಾನೆ. ಕೋವಿದರು ತನ್ನ ಕವಿತಾಚಾತುರ್ಯವನ್ನು ಒಲಿದು ನಾನಾ ಬಗೆಯಾಗಿ ಕೊಂಡಾಡಿ ಕಾವ್ಯವನ್ನು ಹೇಳೆನ್ನಲು "ಹಿಂದುಗಳೆಯಲಮ್ಮದೆ ರಾಮನಾಥನ ಸಂದ ಕಥೆಯನುಸುರಿದೆನು" ಎಂದು ಹೇಳಿಕೊಂಡಿದ್ದಾನೆ. "ರಸದಿಂದ ಪುಟ್ಟಿಸಿ ಭಾವದಿಂ ಬಲಿಯಿಸಿ ಪೊಸಬಗೆವೆತ್ತಲಂಕೃತಿಯ ಎಸಕದಿಂ ಬಳೆಯಿಸಿ ಕೃತಿಯೆನಿಸುವೆನಿದ ರಸಿಕರು ಮೆಚ್ಚುವಂದದಲಿ" ಎಂಬ ಧ್ಯೇಯವನ್ನು ಇಟ್ಟುಕೊಂಡಿದ್ದಾನೆ. ಇದಕ್ಕನುಗುಣವಾಗಿ ಈತನ ಕಾವ್ಯದಲ್ಲಿ ಪ್ರಾಚೀನ ಕವಿಗಳ ಸಂಪ್ರದಾಯವೂ ಪ್ರಭಾವವೂ ವಿದಿತವಾಗುತ್ತವೆ. ಗ್ರಂಥಾಂತ್ಯದಲ್ಲಿರುವ ಗದ್ಯಭಾಗದಲ್ಲಿ ಕವಿ "ಇದು ಸಮಸ್ತ ಸುರಾಸುರವಮೌಲಿಮಾಲಾಕೀಲಿತನೂತ್ನರತ್ನಪ್ರಭಾಪುಂಜರಂಜಿತ ಚಂದ್ರಚೂಡಚರಣಾರವಿಂದಮ[ಧು] ಧೂಳೀ ಮಧುಕರಾಯಮಾನ ಮಾಧವಾತ್ಮಜ ಕವಿತಾವಿಶಾರದ ನಂಜುಂಡ ವಿರಚಿತಮಪ್ಪ ಕುಮಾರರಾಮ ಚರಿತ ಮಹಾಪ್ರಬಂಧ" ಎಂದು ಹೇಳಿಕೊಂಡಿದ್ದಾನೆ. ಈ ವಾಕ್ಯದಲ್ಲಿರುವ "ಕವಿತಾವಿಶಾರದ" ಎಂಬ ಪ್ರಶಸ್ತಿಯೂ, "ಮಹಾಪ್ರಬಂಧ" ಎಂಬ ಮಾತೂ ಬಹಳ ಗಮನಾರ್ಹವಾದುವು. ಇವು ಈ ಕಾವ್ಯದ ಗುರಿಯನ್ನು ಕುರಿತು ಹೇಳುತ್ತವೆ.

"ಕುಮಾರರಾಮ ಚರಿತ"ವನ್ನು ವರ್ಣನಾಪ್ರಧಾನವಾದ ಕಾವ್ಯವೆಂಬುದಾಗಿ ಹೇಳಬಹುದು. ವಿದ್ವಜ್ಜನಪ್ರಿಯನಾಗುವಂತೆ ಕಾವ್ಯವನ್ನು ರಚಿಸಬೇಕೆಂದು ಕವಿ ನಿಶ್ಚಯಿಸಿರುವುದರಿಂದ, ಇದು ಸಾಂಪ್ರದಾಯಿಕವಾದ ವರ್ಣನೆಗಳ ಜಾಡನ್ನು ಹಿಡಿದಿದೆ. ಪ್ರಾರಂಭದಲ್ಲಿಯೇ ಸಮುದ್ರಪರಿವೃತವಾದ ಭೂಮಂಡಲದ ವರ್ಣನೆಯಿದೆ. ಕಥೆ ಸಾವಧಾನವಾಗಿ, ಪ್ರತಿಯೊಂದು ಅಂಶವನ್ನೂ ವಿಸ್ತಾರವಾಗಿ ನಿರೂಪಿಸುತ್ತ ಸಾಗುತ್ತದೆ. ಪುರವರ್ಣನೆ, ಸೂಳೆಗೇರಿಯ ವರ್ಣನೆ, ವಿರಹಾದಿದಶಾವಸ್ಥೆಗಳ ವರ್ಣನೆ, ಯುದ್ಧವರ್ಣನೆ, ಕೈಲಾಸ ವರ್ಣನೆ ಮೊದಲಾದುವು ಕವಿಯ ಪ್ರೌಢಶೈಲಿಗೆ ಸಾಕ್ಷಿಯಾಗಿವೆ.

ನಂಜುಂಡನ ಕೃತಿಯಲ್ಲಿ ಜೈನ, ಬೌದ್ಧ, ವೈದಿಕಮತಗಳ ಪ್ರಸ್ತಾಪವು ಪ್ರಾಸಂಗಿಕವಾಗಿ ಬರುತ್ತದೆ. ಈತನು ಆರಿಸಿಕೊಂಡಿರುವ ಕಥಾನಾಯಕ ಶಿವಭಕ್ತ. ಕವಿಯೂ ಸಹ ಈಶ್ವರ ಮತ್ತು ಪಂಪಾಂಬಿಕೆಯರ ಆರಾಧಕ. ಆದರೂ, ಪೂರ್ವಕವಿಗಳ ಸ್ಮರಣೆಯನ್ನು ಮಾಡುವಲ್ಲಿ, ಕವಿ ಹಂಪೆಯ ಹರಿಹರನನ್ನು ಮಾತ್ರವಲ್ಲದೆ, ಪಂಪಾದಿ ಜೈನಕವಿಗಳನ್ನು ಸ್ತುತಿಸಿರುವುದು ಗಮನಾರ್ಹವಾಗಿದೆ. ಇಷ್ಟೇ ಅಲ್ಲದೆ, ಜೈನಕಾವ್ಯಗಳಲ್ಲಿ ಬರುವ ಪೂರ್ವಜನ್ಮಸ್ಮರಣೆ, ಜನ್ಮಾಂತರ ವೈರ, ಯಕ್ಷಿಣಿದೇವತೆಯ ಸ್ತುತಿ, ಲೋಕಾಕಾರಕಲ್ಪನೆ ಮೊದಲಾದುವು ಇಲ್ಲಿಯೂ ವಿದಿತವಾಗುತ್ತವೆ.

### (I) ಪೂರ್ವಜನ್ಮಸ್ಮರಣೆ :—

(i) ಸುರುತಾಳನ ಮಗಳು ಕುಮಾರರಾಮನ ಭಾವಚಿತ್ರವನ್ನು ಕಂಡೊಡನೆಯೇ, ಪರವಶಳಾಗಿ ತಾನು ಪೂರ್ವಜನ್ಮದಲ್ಲಿ ದ್ರೌಪದಿಯಾಗಿದ್ದುದನ್ನು ಸ್ಮರಿಸುವಳು.

(xvii, ೪೭–೫೦)[1]

---

1. ಮುನ್ನಿನ ಜನ್ಮಾಂತರದಳ್ಕಱಿಂದಾ ಕನ್ನೆಯಾ ಚಿತ್ರವ ಕಂಡು ।
ತನ್ನ ತಾ ಮೈಮಱೆದಳು ಮೋಹನ ಮೂರ್ಛೆಯಿಂ ನುಡಿಗೆಟ್ಟಳೇನೆಂಬೆ ॥
ಬರೆ ಪ[ಟ] [ಪೂರ್ವಜನ್ಮದ] ಪುರುಷನ ಕಂಡ ತರುಣಿಗೆ ದ್ರುಪದನಂದನೆಗೆ ।
ಸ್ಮರಪರಿತಾಪ ವೆಗ್ಗಳಿಸಿತು ಜನ್ಮಾಂತರದನುಬಂಧ ಸದರವೆ ॥ (xvii, ೪೯–೫೦)

(ii) ಕುಮಾರರಾಮುನನ್ನು ಕಂಡ ರತ್ನಾಜಿಗೆ ಮದನತಾಪವುಂಟಾಗಿ ತನ್ನ ಹಿಂದಿನ ಜನ್ಮದ ಮೋಹ ಬಂದು ಆವರಿಸುವುದು.[1] (xxii, ೮೮–೯೪)

(iii) ಕುಮಾರರಾಮುನನ್ನು ಬಚ್ಚಿಡಬೇಕೆಂದು ಯೋಚಿಸಿ ಬೈಚಪ್ಪನು ಇಂದ್ರನನ್ನು ಬರಮಾಡಿಕೊಂಡನಷ್ಟೆ. ಆಗ ಆತನು ಮಂತ್ರಿಗೆ ರಾಮುನ ಜನ್ಮರಹಸ್ಯವನ್ನು ತಿಳಿಸುವನು. ಅದನ್ನು ಮಂತ್ರಿ ರಾಮುನಿಗೆ ತಿಳಿಸಲು ಆಗ ಅವನಿಗೆ ತನ್ನ ಪೂರ್ವಜನ್ಮದ ನೆನಪಾಗಿ ಬಹಳ ಯಾತನೆಪಡುವನು. ಆ ವೇಳೆಗೆ ಅಶರೀರವಾಣಿ ಅವನಿಗೆ ಆಶ್ವಾಸನೆಯನ್ನು ನೀಡುವುದು.[2] (xxxvi, ೩೬–೪೧)

(iv) ರತ್ನಾಜಿಯ ದುರಾಗ್ರಹದ ದೆಸೆಯಿಂದ ಕುಮಾರರಾಮುನ ಶಿರಚ್ಛೇದನವಾಯಿತೆಂಬ ಸುದ್ದಿಯನ್ನು ಕೇಳಿದಕೂಡಲೆ ಸುರುತಾಳನ ಮಗಳಿಗೆ ಮತ್ತೆ ತನ್ನ ಪೂರ್ವಜನ್ಮದ ನೆನಪಾಗುವುದು.[3] (xxxvii, ೩೧)

(v) ಬೈಚಪ್ಪನ ಜಾಣತನದಿಂದ ಕುಮಾರರಾಮುನು ಬದುಕಿಕೊಂಡು, ನೇಮಿಯನ್ನು ಹಿಂದಟ್ಟಿ, ವಿಜಯಶಾಲಿಯಾಗಿ ಬಂದನೆಂಬ ವೃತ್ತಾಂತವು ರತ್ನಾಜಿಗೆ ತಿಳಿಯಲು, ಒಡನೆಯೇ ಆಕೆಗೆ ತನ್ನ ಜನ್ಮಕಾರಣದ ನೆನಪಾಗುತ್ತದೆ. ಕಾರ್ಯವಿಫಲಳಾದ ಆಕೆ ಉಸಿರುಕಟ್ಟಿ ಸಾಯುತ್ತಾಳೆ.[4] (xl, ೬೫–೯೭)

## (2) ಜನ್ಮಾಂತರ ವೈರ :—

ಪೂರ್ವಜನ್ಮದಲ್ಲಿ ಗಾಂಧಾರಿಯಾಗಿದ್ದವಳು ಭೀಮ ಮತ್ತು ಅರ್ಜುನರ ಮೇಲಿದ್ದ ತನ್ನ ಕೋಪವನ್ನು ತೀರಿಸಿಕೊಳ್ಳಲು ಪ್ರಕೃತದಲ್ಲಿ ಮಾತಂಗಿಯಾಗಿ ಜನ್ಮವೆತ್ತಿ ಬಂದಿರುವಳೆಂದೂ, ಆಕೆಯಿಂದಲೇ ಕುಮಾರರಾಮುನಿಗೆ ಮರಣಸಂಭವಿಸುವುದೆಂದೂ ದೇವದೂತನು ಹೇಳುತ್ತಾನೆ. (xxxix, ೪೪–೪೫)[5]

## (3) ಯಕ್ಷಿಣಿದೇವತೆಯ ಸ್ತುತಿ :—

ಬೈಚಪ್ಪನು ಕುಮಾರರಾಮುನ ಸಂರಕ್ಷಣಾರ್ಥವಾಗಿ ಇಂದ್ರನನ್ನು ಕುರಿತು ಆರಾಧಿಸುವ ಸನ್ನಿವೇಶವು ತುಂಬ ಗಮನಾರ್ಹವಾದುದು (ಆ. ix, ಸಂ. ೪). ಈ ಸಂದರ್ಭದಲ್ಲಿ ಆತನು

---

1. ಹಿಂದಣ ಜನ್ಮದ ಕಣ್ಬೇಟವೆದೆಯನೆಯ್ತಂದಾವರಿಸಲವನನು ।
ನಿಂದು ನಿಟ್ಟಿಸಿದಳು ನಿಖಿಳೇಂದ್ರಿಯಗಳನೊಂದಿಸಿದಳು ನೋಟದೊಳಗೆ ॥ (xxii, ೯೩)
2. ಬಳಿಕೊಯ್ಯನೊಯ್ಯನೆ ಜಾತಿಸ್ಮರತೆ ಬಂದು ನೆಲಸಲಂತಃಕರಣದೊಳು ।
ತಿಳಿದನು ತನ್ನ ರತ್ನಾಜಿಯಿರವನಂದು ತಳೆದನಾನಂದಾಶ್ರುವನು ॥ (xxxvi, ೩೮)
3. ಸುರುತಾಳನ ಸುತೆ ಕೇಳಿಯಾ ಸುದ್ದಿಯ ಸುರಗಿಯೊಡಲನುರ್ಚಿದಂತೆ ।
ಪೊರಳ್ದಳು ಪೂರ್ವಜನ್ಮದ ಮೋಹ ಬಂದಾವರಿಸಲಂತಃಕರಣವನು ॥ (xxxvii, ೩೧)
4. ಅಱಿದಳಿಂತಾಗ ರಾಮುನ ವಾರ್ತೆಯ ರತ್ನಿಯಱಿವ ಕೆಳದಿ ಸಂಗಿಯಿಂದ ।
ತೋಱಿದಳಸುವಿನಾಸೆಯ ಪಿಂತಣಜನ್ಮದಱಿವು ಮೈದೋಱಿತವಳಿಗೆ ॥ (xl, ೯೫)
5. ಕುರುರಾಯ ಜನನಿ ಭೀಮನ ನಿನ್ನ ಮೇಲಣೊಂದುರು ಕೋಪೋದ್ರೇಕದಿಂದ ।
ಮರಣವನ್ನೈದಿ ನಾನಾ ಯೋನಿಮುಖದೊಳು ತಿರುಗಿ ಬಂದವಳು ಮತ್ತೀಗ ॥ (xxxix, ೪೪)

"ಜ್ವಾಲಾಮಾಲಿನಿ ಕಲ್ಪ" ದಲ್ಲಿ ಹೇಳಿರುವಂತೆ ಮಂತ್ರಗಳನ್ನು ಉಚ್ಚರಿಸಿದನೆಂದೂ, ಇಂದ್ರನು ಪ್ರತ್ಯಕ್ಷನಾಗಿ, ತನ್ನ ದೇವತೆಯೊಬ್ಬನನ್ನು ಕರೆದು, ಬೈಚಪ್ಪನ ಇಷ್ಟಾರ್ಥವನ್ನು ನೆರವೇರಿಸುವಂತೆ ನೇಮಿಸಿದನೆಂದೂ ಹೇಳಿದೆ. ಬೈಚಪ್ಪನು ಆ ದೇವದೂತನ ಸಹಾಯದಿಂದ ಇಂದ್ರಜಾಲದ ಮೂಲಕ ಕುಮಾರರಾಮ ಮತ್ತು ಇತರರನ್ನು ನೆಲಮಾಳಿಗೆಯಲ್ಲಿ ಬಚ್ಚಿಟ್ಟು, ಅವರ ಪಡಿರೂಪುಗಳನ್ನು ಸೃಷ್ಟಿಸಿ, ಕುಮಾರರಾಮನೂ ಆತನ ಜೊತೆಯವರೂ ಸತ್ತರೆಂಬ ವರ್ತಮಾನವನ್ನು ಕಂಪಿಲನಿಗೆ ತಿಳಿಸುತ್ತಾನೆ. ಮೇಲೆ ಹೇಳಿರುವ ಜ್ವಾಲಾಮಾಲಿನಿ ಜೈನರು ಆರಾಧಿಸುವ ಸುಪ್ರಸಿದ್ಧ ಯಕ್ಷಿಣಿದೇವತೆಯರಲ್ಲಿ ಒಬ್ಬಳು. ಈಕೆ ತಾಂತ್ರಿಕ ವಿದ್ಯೆಯ ಅಧಿದೇವತೆಯೆಂದೂ ಹೇಳುವುದುಂಟು.[1]

**(4) ವಿಪ್ರನಿಂದೆ :—**

ಮಾತಂಗಿ ಕುಮಾರರಾಮುನನ್ನು ಮನವೊಲಿಸಿಕೊಳ್ಳಬೇಕೆಂದು, ಆತನ ಬಳಿಗೆ ಕೆಲವು ವಂದಿ ಮಾಗಧರನ್ನು ಕಳುಹಿಸುವಳು. ಅವರು ರಾಮುನನ್ನು ಕುರಿತು ಸುರಲೋಕ, ದೇವತೆಗಳು, ಋಷಿಗಳು ಮೊದಲಾದುವುಗಳನ್ನು ಖಂಡಿಸಿ, ಕಡೆಗೆ ಈ ಕೆಳಗೆ ಹೇಳಿರುವಂತೆ ವಿಪ್ರರನ್ನು ವಿಡಂಬನೆ ಮಾಡುವರು.

....ಪುಸಿಯನೊರೆದೊರೆದಜ್ಞರಿಗೆ ವಿಭ್ರಾಂತಿಯ ಪುಟ್ಟಿಸಿ ಮನಕೆ |
ಮುಂತಿರ್ದ ಧನವ ತೆಗೆದುಕೊಂಬ ವಿಪ್ರಕೃತಾಂತರ ನುಡಿಯ ನಂಬದಿರು || (xliv, ೬೧)

ಧುರದೊಳಳಿದರಿಗೆ ದುರ್ಗತಿಯಲ್ಲದೆ ಇರವುಂಟೆ ಸುರಲೋಕದೊಳಗೆ |
ವರವಿಪ್ರ [ಲಂಭಕ] ವಿಪ್ರರ ನುಡಿಗೇಳಿ ಮರುಳಾಗದಿರು ರಾಯಕುವರ || (ಅದೇ, ೬೨)

ನಿಮಗೆ ಬುದ್ಧಿಯ ಪೇಳ್ವ ವಿಪ್ರರು ತಾವೇಕೆ ಸಮರದೊಳಳಿದು ದಿವಿಜರ |
ಪ್ರಮದೆಯರನು ಬಯಸರು ಧನದಾಸೆಯಿಂ ಭ್ರಮೆಗೊಳಿಸುವರು ಲೋಕವನು || (ಅದೇ, ೬೩)

ವಸುವ ಕೊಂಬರು ಕೆಲರಸುವ ಕೊಂಬರು ಕೆಲರಸುವಸುಗಳನಪಹರಿಪ |
ಅಸುರರು ಚೋರರೀ ವಿಪ್ರರಲ್ಲದೆ ಬೇಱೆ ವಸುಧೆಯೊಳುಂಟೆ ನಿರ್ದಯರು || (ಅದೇ, ೬೪)

ರಣಮುಖದೊಳಗಳಿದೊಡೆ ನಾಕಲೋಕದ ಗಣಿಕೆಯರೊಳು ಕೂಟವೆಂದು |
ಹಣದಾಸೆಯಿಂ ಮನುಜರ ಹರಣವ ಕೊಂಬ ಬಣಗರ ಮಾತುಗೇಳದಿರು || (ಅದೇ, ೭೧)

ಈ ನಿಂದಾವಾಕ್ಯಗಳನ್ನು ಕೇಳಿದ ರಾಮುನು ಅವರನ್ನು ಕುರಿತು,

ವೈದಿಕವನು ಧಿಕ್ಕರಿಸುತಿದೆ ನಿಮ್ಮನುವಾದ ನೀವರ್ಹತಮತದ |
ವಾದಿಗಳಾಗಬೇಕಲ್ಲದೊಡೀ ಪ್ರೌಢ ವಾದ ಮಿಕ್ಕರಿಗೆ ಘಟಿಪುದೆ || (ಅದೇ, ೭೭)

---

1. Another instance that illustrate the prevalence of the Yakshi cult in Karnataka is Jvalamalini or Jvalini, the Yakshini of the Chandraprabha Thirthankara. But her Yakshi nature was so effectively eclipsed by her mystical significance from an early date, that she impresses upon our minds more as a Tantric goddess of occult surroundings than a prominent member of the Jaina hierarchy of divinities (Jainism in South India, by P. B. Desai, P. 172).

ಎಂದು ಕೇಳುವನು. ಆಗ ಅವರು,

....ಅಹುದರ್ಹತಮತದವರಾವು ವಂದಿಗಳ್ವಾದಿಗಳಲ್ಲ |
ಸಂದ **ಮಲೆಯಖೇಡದ ವಾದಿವಿದ್ಯಾನಂದಸ್ವಾಮಿಯ ಶಿಷ್ಯರುಗಳು** || (ಅದೇ, ೭೮)

ಎಂದು ಉತ್ತರವೀಯುವರು. ರಾಮನು ಅವರನ್ನು ಸನ್ಮಾನಿಸಿ ಕಳುಹಿಸುವನು.

**(5) ಲೋಕಾಕಾರ ಕಲ್ಪನೆ:—**

ಕುಮಾರರಾಮನು ಪುಷ್ಪಕವಿಮಾನದಲ್ಲಿ ಕುಳಿತು ಕೈಲಾಸಕ್ಕೆ ತೆರಳುವಾಗ ನಂದೀಶ್ವರನು ಆತನನ್ನು ದೇವನಗ, ಇಂದ್ರನ ಅಮರಾವತಿ, ಬ್ರಹ್ಮಲೋಕಗಳ ಮಾರ್ಗವಾಗಿ ಅಚ್ಯುತಕಲ್ಪಕ್ಕೂ ಕರೆತರುವನು.

ಕಲ್ಪಕಲ್ಪಗಳನುಚ್ಚಳಿಸಿ ಪುಷ್ಪಕ ಸಂಕಲ್ಪ ಸಿದ್ಧನ ಮಿಗೆ ತಳೆದು |
ಬಲ್ಪಿ[ನಿ]ಂದೆ [ಯ್ತ]ಂದು ಪೊಕ್ಕುದಂದಚ್ಯುತಕಲ್ಪ ವಿಮಾನ ಭೂಮಿಯನು || (xlvi, ೯೭)

**(6) ವಸುದೇವನ ಕಥೆ:—**

ಮುತ್ತಿನ ಚೆಂಡನ್ನು ಕೇಳಲು ಬಂದ ಕುಮಾರರಾಮನಿಗೆ ಹರಿಹರದೇವಿ ಬಗೆಬಗೆಯಾಗಿ ಬುದ್ಧಿವಾದವನ್ನು ಹೇಳುವಳಷ್ಟೆ. ಆಗ, ಆಕೆ, ಹಿಂದೆ ವಸುದೇವನೆಂಬ ರಾಜಕುಮಾರನ ಸೌಂದರ್ಯವನ್ನು ಕಂಡು ಊರಿನ ಹೆಂಗಸರೆಲ್ಲ ಮರುಳಾಗಲು, ಅದನ್ನರಿತ ಅವನ ಅಣ್ಣ ಸಮುದ್ರವಿಜಯನು ತಮ್ಮನನ್ನು ಉಪವನದಲ್ಲಿ ನಿರ್ಬಂಧದಲ್ಲಿಡಲು, ತಲೆತಪ್ಪಿಸಿಕೊಂಡು ಹೋದನೆಂದೂ, ಅಂತೆಯೇ ಚೆಂಡಾಟವಾಡುವ ರಾಮನನ್ನು ಕಂಡು ಸ್ತ್ರೀಯರು ಕೇಡುಬಗೆಯ ಬಹುದಾದ್ದರಿಂದ ಅದು ಸಲ್ಲದೆಂದೂ ಹಿತೋಕ್ತಿಗಳನ್ನು ನುಡಿಯುವಳು (xxx, ೬೨–೭೦). ಈ ಕಥೆ ಜೈನರಲ್ಲಿ ಸುಪ್ರಸಿದ್ಧವಾಗಿರುವ "ನೇಮಿನಾಥ"ನ ವೃತ್ತಾಂತಕ್ಕೆ ಸೇರಿದ್ದು. ಇದನ್ನು ಕನ್ನಡದಲ್ಲಿ ಕರ್ಣಪಾರ್ಯನು ತನ್ನ "ನೇಮಿನಾಥಪುರಾಣ"ದಲ್ಲಿಯೂ (iii, ೧೨೫–೧೫೭) ನೇಮಿಚಂದ್ರನು ತನ್ನ "ಅರ್ಧನೇಮಿಪುರಾಣ"ದಲ್ಲಿಯೂ (iv, ೧೩೧–v, ೧೮ ಗ.), ಮಂಗರಸನು ತನ್ನ "ನೇಮಿಜಿನೇಶ ಸಂಗತಿ"ಯಲ್ಲಿಯೂ (viii, ೨–೯೭) ಬಹುಸ್ವಾರಸ್ಯ ವಾಗಿ ಚಿತ್ರಿಸಿರುತ್ತಾರೆ. ಈ ಪ್ರಸಂಗವನ್ನು ನಂಜುಂಡನು ಸಮಯೋಚಿತವಾಗಿ ಬಳಸಿಕೊಂಡಿದ್ದಾನೆ.

ಈ ಮೇಲಿನ ಸಂದರ್ಭಗಳನ್ನು ನೋಡಿದರೆ, ಕವಿಗೆ ಜೈನಧರ್ಮದ ಸಂಪ್ರದಾಯಗಳಲ್ಲಿ ಇರುವ ಅಭಿಮಾನವೂ, ಪಕ್ಷಪಾತವೂ ಸ್ಪಷ್ಟವಾಗುತ್ತವೆ.

ಕೈಲಾಸವನ್ನು ವರ್ಣಿಸುವಾಗ ಅಲ್ಲಿನ ಸಭೆಯಲ್ಲಿ ನಾನಾ ಮತೀಯರು ಇದ್ದರೂ, ಅವರನ್ನು ಶೈವ ಸಿದ್ಧಾಂತವಾದಿಗಳು ಹೇಗೆ ಗೆದ್ದರು ಎಂಬ ಚಿತ್ರವೂ ಇಷ್ಟೇ ಗಮನಾರ್ಹವಾಗಿದೆ.

ವೇದ ವೇದಾಂತ ಸಿದ್ಧಾಂತ [ಬೌದ್ಧ] ಸ್ಯಾದ್ವಾದ ವೈಶೇಷಿಕ ನ್ಯಾಯ |
[ಅದ್ವೈತ ಶಾಸ್ತ್ರಲೋಕಾಯತ ಸಮಯಾನುವಾದವೆಸೆದವಲ್ಲಲ್ಲಿ ||] (xlvii, ೪೪)

ಆದಿ ವಕ್ತಾರನಿದಿರೊಳು ನಮ್ಮ ನಾವಾದೆವೆಂದಱಿಯದೊದಱುವ |
ವೇದಗಳನು ಖಂಡಿಸಿದುದು ಸಿದ್ಧಾಂತಾನುವಾದ ಶಿವಾಸ್ಥಾನದೊಳು || (ಅದೇ, ೪೫)

ಸರ್ವಂಖಲ್ವಿದಂ ಬ್ರಹ್ಮ ಎಂದೆಂಬೀ ಗರ್ವದ ವೇದಾಂತವನು |
ಸರ್ವೇಶ್ವರನೀಶನೆಂಬುಕ್ತಿಯಿಂ ಗೆಲ್ದು ನಿರ್ವಹಿಸಿದುದು ಸಿದ್ಧಾಂತ || (ಅದೇ, ೪೬)

ಬುದ್ಧಿಯಿಂ ಜೀವಜಾಲಕೆ ಶೂನ್ಯತ್ವಮನುದ್ಧರಿಸುವ ಬುದ್ಧಮತವ |
ಶುದ್ಧ ಚಿನ್ಮಯ ನಿತ್ಯ ಪರಶಿವನಿಂ ಗೆಲ್ದು ಸಿದ್ಧಾಂತ ನಿಗ್ರಹಿಸಿದುದು || (ಅದೇ, ೪೭)

ನವನಯ ಸಪ್ತಭಂಗಿ ಪ್ರಮಾಣಗಳಿಂದ ವಿವಿಧ ಪದಾರ್ಥಗತಿಯನು |
ವಿವರಿಸುವರ್ಹತಮತವ ಕೆಣಕಿದುದು ಶಿವನ ಮುಂದಾ ಸಿದ್ಧಾಂತ || (ಅದೇ, ೪೮)

ಸ್ಯಾದ್ವಾದವದು ಬಲು ಜಗಳ ಮಿಕ್ಕವರಂತಾ (ತು ?)ಪಾದ್ಯ ಮತವದಲ್ಲವೆಂದು |
ವಿದ್ಯಾಸಿಧಿ ನಿಲಿಸಿದನು ಸಿದ್ಧಾಂತವಾದೋದ್ಯೋಗಭಿಮಾನವನು || (ಅದೇ, ೪೯)

ಈ ರೀತಿಯಾದ ಉಭಯಮತ ಪಕ್ಷಪಾತ ಒಬ್ಬ ಕವಿಯಲ್ಲಿಯೇ ಕಂಡುಬರುವುದು ವಿರಳವೂ ಸೋಜಿಗವೂ ಆದದ್ದು.

# ೪. ಚೆನ್ನರಾಮನ ಸಾಂಗತ್ಯ

## ಹಸ್ತಪ್ರತಿಗಳು

ಮದರಾಸಿನ ಪ್ರಾಚ್ಯಪುಸ್ತಕ ಭಂಡಾರದಲ್ಲಿ ಪಾಂಚಾಳಗಂಗನ "ಚೆನ್ನರಾಮನ ಸಾಂಗತ್ಯ"ದ ಹದಿಮೂರು ಪ್ರತಿಗಳಿವೆ. ಇವುಗಳಲ್ಲಿ ಹತ್ತು ಓಲೆಯ ಪ್ರತಿಗಳು; ಉಳಿದ ಮೂರು ಕಾಗದದ ಪ್ರತಿಗಳು. ಈ ಪ್ರತಿಗಳನ್ನು ವಿಂಗಡಿಸುವಾಗ ಅಲ್ಲಿನ ಸಂಪಾದಕರು ಒಂಬತ್ತು ಪ್ರತಿಗಳನ್ನು (D. 911-D. 919) ಪಾಂಚಾಳಗಂಗನದೆಂದೂ, ಉಳಿದ ನಾಲ್ಕು ಪ್ರತಿಗಳ (D. 920-D. 923) ಕರ್ತೃ ಅನಿಶ್ಚಿತವೆಂದೂ ಸೂಚಿಸಿರುತ್ತಾರೆ. ಗಂಗನ ಪ್ರತಿಗಳಲ್ಲಿ ಕಂಡುಬರುವ ಭಿನ್ನಪಾಠಗಳೇ ಈ ಭ್ರಮೆಗೆ ಕಾರಣ ಈ ಪ್ರತಿಗಳಲ್ಲಿ ಎರಡು ಮಾತ್ರ ಸಮಗ್ರವಾಗಿವೆ (D. 911-D. 912). ಉಳಿದ ಕೆಲವು ಪ್ರತಿಗಳಲ್ಲಿ ರತ್ನಾಜಿಯ ಪ್ರಸಂಗದಿಂದ ಪ್ರಾರಂಭವಾಗಿ ಮಾತಂಗಿಯ ಪ್ರಕರಣದೊಂದಿಗೆ ಕಥೆ ಮುಕ್ತಾಯವಾಗುತ್ತದೆ. ಸಮಗ್ರ ಪ್ರತಿಗಳಲ್ಲಿ, ಡಿ. ೯೧೧ನೆಯದನ್ನು "ವಿಶ್ವಾವಸುನಾಮ ಸಂವತ್ಸರದ ಶ್ರಾವಣ ಭಾದ್ರಪದ (?) ಬ ೩ ಸೋಮವಾರ"ದಂದು ಪ್ರಾರಂಭಿಸಿ "ವಿಶ್ವಾವಸುನಾಮ ಸಂವತ್ಸರದ ಆಶ್ವಯುಜ ಬ ೩ ಗುರುವಾರ" ಮುಗಿಸಿದಂತೆ ಹೇಳಿದೆ.[1]

ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಎಂಟು ಓಲೆಯ ಪ್ರತಿಗಳಿವೆ ಇವುಗಳನ್ನು ಹಸ್ತಪ್ರತಿಗಳ ಪಟ್ಟಿಯಲ್ಲಿ "ಕುಮಟರಾಮನ ಸಾಂಗತ್ಯ (ಕಥೆ)" ಎಂಬುದಾಗಿ ನಿರ್ದೇಶಿಸಲಾಗಿದೆ.[2] (ಕೈಬರಹದ ಕನ್ನಡ ಗ್ರಂಥಗಳ ಅಕಾರಾದಿ ಸೂಚಿನೀ, ಪುಟ ೮.) ಈ ಪ್ರತಿಗಳಲ್ಲಿ ಒಂದು ಮಾತ್ರ ಸಮಗ್ರವಾಗಿದೆ (ಕೆ. ೧೯೯). ಕೆ. ೧೯೯ನೆಯ ಸಂಖ್ಯೆಯ ಈ ಪ್ರತಿಯೇ ಉತ್ತಮವಾದುದೆಂದು ತಿಳಿದುಬರುತ್ತದೆ. ಇದರಲ್ಲಿ ೧೮೬ ಓಲೆಗಳಿವೆ. ಪ್ರತಿಯೊಂದು ಓಲೆಯೂ ೯" ಉದ್ದವೂ, ೧.೮" ಅಗಲವೂ ಇದೆ. ಒಂದೊಂದು ತಾಳೆಯಲ್ಲಿಯೂ ೯ ಇಲ್ಲವೇ ೧೧ ಪಂಕ್ತಿಗಳಿವೆ. ಅಕ್ಷರಗಳು ಚೆನ್ನಾಗಿವೆ. ೭ ಅಧ್ಯಾಯಗಳೂ ೨೬೭೦ ಪದ್ಯಗಳೂ ಇವೆ. (ಪ್ರತಿಯಲ್ಲಿ ೩೦೮೨ ಎಂದು ಸೂಚಿತವಾಗಿದೆ.) ಇದನ್ನು "ಶಾಲಿವಾಹನ ಶಕಾಬ್ದ ೧೭೬೧ನೇ ಸಂದ ವರ್ತಮಾನವಾದ ವಿಖಾ(ಕಾ ?)ರಿ ನಾಮಸಂವತ್ಸರದ ಪುಷ್ಯ ಬ ೧೨ ಶುಕ್ರವಾರ"ದಂದು ಬರೆದು ಮುಗಿಸಿದಂತೆ ಹೇಳಿದೆ. ಆದ್ದರಿಂದ ಈ ಪ್ರತಿಯ ಕಾಲ ೩೧–೧-೧೮೪೦ಕ್ಕೆ ಸರಿಹೋಗುತ್ತದೆ. ಈ ಪ್ರತಿಯನ್ನು ಈ ಪ್ರಬಂಧದಲ್ಲಿ ಸಮಯೋಚಿತವಾಗಿ ಬಳಸಿಕೊಳ್ಳಲಾಗಿದೆ. ಇದನ್ನು "ಗಂ. ೪" ಎಂದು ಕರೆಯಲಾಗಿದೆ. ಈ ಪ್ರತಿಯನ್ನೇ ಅವಲಂಬಿಸಿ ಶ್ರೀ. ಎಂ.ಎಚ್. ರಾಮಶರ್ಮರು ಗಂಗನ ಕೃತಿಯ ಕಥೆಯನ್ನು ಇಂಗ್ಲಿಷಿನಲ್ಲಿ ಬರೆದಿರುತ್ತಾರೆ.[3]

ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ನಾಲ್ಕು ಪ್ರತಿಗಳಿವೆ. ಇವುಗಳಲ್ಲಿ ಎರಡು (ನಂ. ೯೫, ನಂ. ೬೪೭) ಓಲೆಯ ಪ್ರತಿಗಳು; ಉಳಿದ ಎರಡು (ನಂ. ೬೨೮, ನಂ. ೬೩೭) ಕಾಗದದ ಪ್ರತಿಗಳು. ಇಲ್ಲಿನ ಹಸ್ತಪ್ರತಿಗಳ ಮುದ್ರಿತ ಪಟ್ಟಿಯಲ್ಲಿ ೯೫ ನೆಯ ಸಂಖ್ಯೆಯ ಪ್ರತಿಯನ್ನು ಮಾತ್ರ ಸೂಚಿಸಲಾಗಿದೆ. ಸಂಪಾದಕರು ಇದನ್ನು "ಕುಮಟರಾಮನ ಕಥೆ ಅಥವಾ ಕಂಪಿಲರಾಯನ ಸಾಂಗತ್ಯ" ಎಂದು ಕರೆದಿರುತ್ತಾರೆ.[4] ಹಸ್ತಪ್ರತಿಗಳಲ್ಲಿ "ಕಂಪಿಲರಾಯನ ಸಾಂಗತ್ಯ" ಇಲ್ಲವೇ "ಕಂಪಿಲರಾಯನ ಕಥೆ" ಎಂಬ ಹೆಸರು ಕಂಡುಬರುತ್ತದೆ. ಇಲ್ಲಿನ ಪ್ರತಿಗಳಲ್ಲೆಲ್ಲ ೬೩೭ ನೆಯ ಸಂಖ್ಯೆಯ ಪ್ರತಿ ತುಂಬ ಗಮನಾರ್ಹವಾದುದು. ಇದರಲ್ಲಿ ಮೊದಲನೆಯ ಎಂಟು ಸಂಧಿಗಳು ಸಮಗ್ರವಾಗಿವೆ. ಅನಂತರ, ೧೧ನೆಯ ಸಂಧಿಯ ಮಧ್ಯದಿಂದ ಮೊದಲಾಗಿ ಕಥೆ ಮುಕ್ತಾಯಗೊಳ್ಳುತ್ತದೆ. ಕಡೆಯಲ್ಲಿ "ಅಂತು ಸಂಧಿ ೧೧ಕ್ಕಂ ಪದನು ೧೯೧೩೭ಕ್ಕಂ ಮಂಗಳ ಮಹಾಶ್ರೀಶ್ರೀಶ್ರೀ" ಎಂದು ಇರುತ್ತದೆ. ೯೫ನೆಯ ಸಂಖ್ಯೆಯ ಪ್ರತಿಯಲ್ಲಿ ಕಥೆ ಕಂಪಿಲನು ಬೇಟೆಗೆ ಹೋದುದರಿಂದ ಮೊದಲಾಗುತ್ತದೆ. ರತ್ನಾಜಿಯ ಪ್ರಸಂಗ ನಿರೂಪಿತವಾಗಿದೆ. ಒಟ್ಟು ಐದು ಸಂಧಿಗಳಿವೆ. ಕಡೆಯಲ್ಲಿ "ಅಂತು ಸಂಧಿ ೫ಕ್ಕಂ ಪದನು ೧೫೨೭ಕ್ಕಂ ಮಂಗಳ ಮಹಾಶ್ರೀಶ್ರೀಶ್ರೀ"

---

1. ಇತರ ವಿವರಗಳಿಗೆ DCKM., Vol. V, pp. 1232-1251 ನೋಡಿ.

2. ಇತ್ತೀಚೆಗೆ ಪ್ರಕಟವಾಗಿರುವ "ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ"ಯಲ್ಲಿ ಇವುಗಳನ್ನೂ "ರಾಮನಾಥ ಚರಿತೆ" ಎಂಬ ವಿಭಾಗದಲ್ಲಿಯೇ ಸೇರಿಸಿದೆ (ತೃತೀಯ ಸಂಪುಟ, ಪುಟ ೪೧೫–೪೨೦, ೧೯೬೩).

3. Supplement to QJMS., Vol. XX, Oct. 1929. ಶ್ರೀಯುತರ ಲೇಖನದಲ್ಲಿ ಪ್ರತಿಯ ಸಂಖ್ಯೆ ೧೯೧ ಎಂದು ತಪ್ಪುಬಿದ್ದಿರುವಂತಿದೆ.

4. A Descriptive Catalogue of Mss. Vol. III, P. 48.

ಎಂದು ಕಂಡುಬರುತ್ತದೆ. ಈ ಪ್ರತಿಯನ್ನು ಪರಿಚಯಮಾಡಿಕೊಡುವಾಗ ಸಂಪಾದಕರು ಕವಿಯ ಹೆಸರಿರುವ ಪದ್ಯವನ್ನು ಸೂಚಿಸದೆ ಬಿಟ್ಟಿರುತ್ತಾರೆ. ಕವಿಯ ಹೆಸರು ಮೊದಲನೆಯ ಸಂಧಿಯಲ್ಲಿ ಕಂಡುಬರದೆ, ಎರಡನೆಯ ಸಂಧಿಯಲ್ಲಿ "ಕನ್ನಡ ಕವಿಜಾಣ ರನ್ನದ ಪದಜಾತಿ ಇನ್ನು ಮುನ್ನಿನ ಪಂಚಾಸ್ಯ ಚೆನ್ನಭುಜಂಗನ ಭೃತ್ಯ ಗಂಗಯ್ಯ ಸಂಪನ್ನ ಹೇಳಿದನೀ ಕೃತಿಯ (ಪ. ೬)" ಎಂಬ ಪದ್ಯದಲ್ಲಿ ಉಕ್ತವಾಗಿದೆ. ಪ್ರತಿಯ ಪ್ರಾರಂಭದಲ್ಲಿ "ಗಂಗಾಕೃತಿ ಪುಸ್ತಕ ಬರೆವುದಕ್ಕೆ ಶುಭಮಸ್ತು" ಎಂಬ ಪ್ರತಿಕಾರನ ವಾಕ್ಯವೂ ಕಂಡುಬರುತ್ತದೆ. ಉಳಿದ ಎರಡು ಪ್ರತಿಗಳೂ ಚೆಂಡಾಟ, ನೀರಾಟಗಳಿಂದ ಮೊದಲಾಗುತ್ತವೆ. ೬೪೭ನೆಯ ಸಂಖ್ಯೆಯ ಪ್ರತಿಯಲ್ಲಿ ಓಲೆಗಳು ಅಸ್ತವ್ಯಸ್ತವಾಗಿವೆ. ಈ ಪ್ರತಿ ಅಷ್ಟು ಸಮರ್ಪಕವಾಗಿಲ್ಲ. ೬೨೮ನೆಯ ಸಂಖ್ಯೆಯ ಪ್ರತಿಯಲ್ಲಿ ಐದು ಸಂಧಿಗಳಿವೆ. ಪ್ರತಿ ಕಡೆಯಲ್ಲಿ ಅಪೂರ್ಣವಾಗಿ ನಿಲ್ಲುತ್ತದೆ.

ಚಿತ್ರದುರ್ಗದ ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಬಳಿಯಲ್ಲಿ ಗಂಗನ ಕೃತಿಯ ನಾಲ್ಕು ಪ್ರತಿಗಳು ಕಂಡುಬಂದುವು. ಇವುಗಳಲ್ಲಿ ಒಂದು ಮಾತ್ರ ಓಲೆಯ ಪ್ರತಿ. ಉಳಿದ ಮೂರು ಕಾಗದದ ಪ್ರತಿಗಳಲ್ಲಿ, ಒಂದನ್ನು "ಕುಮಾರರಾಮನ ಸಾಂಗತ್ಯ" ಎಂದೂ, ಇನ್ನೊಂದನ್ನು "ನಾಗಸಂಗಯ್ಯನೆಂಬ ಕವಿಯಿಂದ ರಚಿತವಾದ ಕುಮಾರರಾಮನ ಸಾಂಗತ್ಯ" ಎಂದೂ, ಮತ್ತೊಂದನ್ನು "ಭುಜಂಗೇಶ ಪುತ್ರ ಗಂಗೈಯನ ಕುಮಾರರಾಮನ ಕಥೆ" ಎಂದೂ ಕರೆಯಲಾಗಿದೆ. ಈ ಪ್ರತಿಗಳನ್ನು ಈ ಪ್ರಬಂಧವನ್ನು ಬರೆಯುವುದರಲ್ಲಿ ಬಳಸಿಕೊಂಡಿರುವುದರಿಂದ ಇವುಗಳ ಸಂಕೇತಗಳನ್ನೂ ಇತರ ವಿವರಗಳನ್ನೂ ಇಲ್ಲಿಯೇ ಮಾಡಿಕೊಡಲಾಗುವುದು.

ಕಾಗದದ ಪ್ರತಿಗಳಲ್ಲಿ ಗಂಗನದೆಂಬುದಾಗಿ ಖಚಿತವಾಗಿ ಸೂಚಿಸಿರುವ "ಕುಮಾರರಾಮನ ಸಾಂಗತ್ಯ" ಎಂಬ ಪ್ರತಿಯೇ ಅತ್ಯಂತ ಚಿಕ್ಕದೂ ಸಮಗ್ರವೂ ಆದುದು. ಇದರಲ್ಲಿ ಒಟ್ಟು ಎಂಟು ಸಂಧಿಗಳಿವೆ. ಪ್ರತಿಯ ಕಡೆಯಲ್ಲಿ "ಅಂತು ಸಂಧಿ ಲಕ್ಕಂ ಪದನು ೧೮೮೫ಕ್ಕಂ ಮಂಗಳಮಹಾ ಶ್ರೀಶ್ರೀಶ್ರೀ........" ಎಂದು ಕಂಡುಬರುತ್ತದೆ. ಇದಲ್ಲದೆ ಗ್ರಂಥವನ್ನು ಮುಗಿಸುವುದಕ್ಕೆ ಮುಂಚೆ "ಸರ್ಪಶಯನ ಸನ್ಮತಿಯಿತ್ತನದರಿಂದ ತಪ್ಪ ತಾ ಬರದವನಲ್ಲ, ಒಪ್ಪದಿ ಮೊದಲ ಪ್ರತಿಯ ನೋಡಿ ಬರೆದೆನು ತಪ್ಪನು ತಿದ್ದಿ ಸಜ್ಜನರು (viii, ೨೪೯)" ಎಂದು ಪ್ರತಿಕಾರನು ಹೇಳಿರುತ್ತಾನೆ. "ಮೊದಲ ಪ್ರತಿಯ ನೋಡಿ ಬರೆದೆನು" ಎಂದು ಹೇಳಬೇಕಾದರೆ ಈ ಪ್ರತಿಕಾರನ ಕಾಲಕ್ಕೇ ಭಿನ್ನ ಭಿನ್ನ ಪಾಠಗಳು ಪ್ರಾರಂಭವಾಗಿದ್ದುವೆಂದು ತೋರುತ್ತದೆ. ಅಂತೂ ತನ್ನ ಪ್ರತಿ ವಿಶ್ವಸನೀಯವೆಂದು ಹೇಳುವ ಪ್ರಯತ್ನ ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಕೆಲವು ಪುಟಗಳು ಲೋಪವಾಗಿದ್ದರೂ, ಪ್ರತಿಯ ಆದಿ ಮತ್ತು ಅಂತ್ಯಭಾಗಗಳು ಸಮರ್ಪಕವಾಗಿದ್ದು ಬಹುಮಟ್ಟಿಗೆ ಪೂರ್ಣವಾಗಿದೆ. ಇದನ್ನು ಇಲ್ಲಿ "ಗಂ. ೧" ಎಂದು ಕರೆಯಲಾಗಿದೆ. ನಾಗಸಂಗಯ್ಯ ರಚಿತವೆಂದು ಸೂಚಿಸಿರುವ ಪ್ರತಿಯಲ್ಲಿ ೨೫ ಸಂಧಿಗಳು ಸಮಗ್ರವಾಗಿವೆ. ಈ ವೇಳೆಗಾಗಲೇ ಪದ್ಯಗಳ ಸಂಖ್ಯೆಯನ್ನು ೨೫೭೩ ಎಂದು ಸೂಚಿಸಲಾಗಿದೆ. ಕಾಟಣ್ಣನ ಮರಣದ ಪ್ರಸಂಗ ಪೂರ್ಣವಾಗುತ್ತದೆ. ೨೬ನೆಯ ಸಂಧಿಯ ಮಂಗಳಪದ್ಯವು ಮಾತ್ರ ಉಲ್ಲೇಖಿತವಾಗಿ ಪ್ರತಿ ಇಲ್ಲಿಗೇ ನಿಲ್ಲುತ್ತದೆ. ಇದನ್ನು "ಗಂ. ೨" ಎಂದು ಕರೆಯಲಾಗಿದೆ. "ಭುಜಂಗೇಶ ಪುತ್ರ ಗಂಗೈಯನ ಕುಮಾರರಾಮನ ಕಥೆ" ಎಂಬ ಪ್ರತಿಯಲ್ಲಿ ಒಟ್ಟು ೩೭ ಸಂಧಿಗಳೂ, ೫೩೧೭ ಪದ್ಯಗಳೂ ಇವೆ. ಈ ಪ್ರತಿ ಪಾದುಕೆಯ ಪ್ರಸಂಗದಿಂದ (vi, ೩೮) ಮೊದಲಾಗುತ್ತದೆ. ಮೊದಲನೆಯ ೧೯ ಪುಟಗಳೂ, ಅಲ್ಲಲ್ಲಿಯೇ ಕೆಲವು ಪುಟಗಳೂ ಲೋಪವಾಗಿವೆ. ಕಥೆಯೂ ಸಹ ಕುಮಾರರಾಮನ ಮರಣದೊಂದಿಗೆ ಕೊನೆಗೊಳ್ಳದೆ ಅವನೂ, ಚಿತೆಯೇರಿದ ಬಾಬಮ್ಮನೂ ಪುನಃ ಭೂಲೋಕಕ್ಕೆ ಬಂದು, ಮದುವೆಯಾಗಿ, ಪುತ್ರನನ್ನು ಪಡೆದು ಮತ್ತೆ ಕೈಲಾಸಕ್ಕೆ ಹಿಂತಿರುಗಿದರೆಂಬ ವೃತ್ತಾಂತದೊಂದಿಗೆ ಅಂತ್ಯವಾಗುತ್ತದೆ. ಈ ಕಥಾಭಾಗ ೩೫, ೩೬ ಮತ್ತು ೩೭ನೆಯ ಸಂಧಿಗಳಲ್ಲಿ ಒಟ್ಟು ೩೨೪ ಪದ್ಯಗಳಷ್ಟು ವಿಸ್ತಾರವಾಗಿ ಬೆಳೆದಿದೆ. ಇದಲ್ಲದೆ, ಇದೇ ಪ್ರತಿಯಲ್ಲಿ ನಂಜುಂಡನ ಕೃತಿಯ xxii ರಿಂದ xxvii ರವರೆಗಿನ ಸಂಧಿಗಳಿಂದ ಅನೇಕ ಪದ್ಯಭಾಗಗಳನ್ನು ಆರಿಸಿಕೊಂಡು ಸೇರಿಸಿರುವುದೂ ಕಂಡುಬರುತ್ತದೆ. ಈ ಪ್ರತಿಯನ್ನು "ಪ್ರಮೋದೂತ ಸಂ||ರದ ಜ್ಯೇಷ್ಠ ಬ. ೯ ಸೋಮವಾರ"ದಂದು ಮುಗಿಸಿದುದಾಗಿ ಹೇಳಿದೆ. ಪದ್ಯಗಳು ಬಹುಮಟ್ಟಿಗೆ ಶುದ್ಧವಾಗಿ ಪ್ರಾಸಬದ್ಧವಾಗಿದೆ. ಇದನ್ನು ಇಲ್ಲಿ "ಗಂ. ೩" ಎಂದು ನಿರ್ದೇಶಿಸಲಾಗಿದೆ.

ಶ್ರೀಯುತರ ಬಳಿಯಲ್ಲಿದ್ದ ಓಲೆಯ ಪ್ರತಿ ರತ್ನಾಜಿಯ ಪ್ರಸಂಗವನ್ನು ಮಾತ್ರ ಒಳಗೊಂಡಿರುತ್ತದೆ. ಇದರಲ್ಲಿ ೧೪೬ ಓಲೆಗಳಿವೆ. ಒಂದೊಂದು ಓಲೆಯೂ ಸು. ೧೧" ಉದ್ದವೂ, ಸು. ೧" ಅಗಲವೂ ಇದೆ. ಒಟ್ಟು ನಾಲ್ಕು ಸಂಧಿಗಳಿವೆ. ಚೆಂಡಾಟದ ಸಂದರ್ಭದಲ್ಲಿ ಅರ್ಧದಿಂದ ಮೊದಲಾಗಿ, ಅಪೂರ್ಣವಾಗಿ ನಿಲ್ಲುತ್ತದೆ. ಈ ಪ್ರತಿಯನ್ನು "ಗಂ. ೭" ಎಂದು ಕರೆಯಲಾಗಿದೆ.

ಸಂಡೂರಿನ ಬಳಿ ಕೋಡಾಲು ಎಂಬ ಗ್ರಾಮದಲ್ಲಿ ದೊರೆತ ಒಂದು ಕಾಗದದ ಪ್ರತಿಯನ್ನು ನನ್ನ ವಿದ್ಯಾರ್ಥಿಗಳಾಗಿದ್ದ ಶ್ರೀ. ಎಸ್. ನಾಗರಾಜ ಅವರು ನನಗೆ ದೊರಕಿಸಿಕೊಟ್ಟರು. ಇದು ಒಂದನೆಯ ಸಂಧಿಯ ಅಂತ್ಯದಿಂದ ಮೊದಲಾಗಿ ೧೫ನೆಯ ಸಂಧಿಯ ಮಧ್ಯದಲ್ಲಿ ನಿಲ್ಲುತ್ತದೆ. ಅಲ್ಲಲ್ಲಿ ಕೆಲವು ಪುಟಗಳು ಲೋಪವಾಗಿವೆ. ಇಲ್ಲಿ ಕವಿಯ ಹೆಸರನ್ನು ಸೂಚಿಸುವ ಪದ್ಯವು ಲಭಿಸದೆ ಹೋದರೂ ಇತರ ಪ್ರತಿಗಳ ಸಹಾಯದಿಂದ ಇದನ್ನು ಗಂಗನ ಪ್ರತಿಯೆಂದು

ಗುರುತಿಸಬಹುದಾಗಿದೆ.[1] ಇದರ ಪ್ರಾರಂಭದ ಕಥಾಭಾಗ ಮದರಾಸಿನ ಡಿ. ೯೧೧ನೆಯ ಸಂಖ್ಯೆಯ ಕಥಾಭಾಗದೊಂದಿಗೆ ಸರಿಹೋಲುತ್ತದೆ. ಗಂಗನ ಪ್ರತಿಗಳಲ್ಲಿ ಇದು ಒಂದು ವಿಶಿಷ್ಟವಾದ ಪ್ರಭೇದಕ್ಕೆ ಸೇರಿದುದರಿಂದ ಇದು ತುಂಬ ಗಮನಾರ್ಹವಾದುದು. ಈ ಪ್ರತಿಯನ್ನು ಮುಂದೆ "ಗಂ. ೫" ಎಂದು ಸೂಚಿಸಲಾಗಿದೆ.

ರತ್ನಾಜಿಯ ಪ್ರಸಂಗವನ್ನು ಮಾತ್ರವೇ ಒಳಗೊಂಡ ಮತ್ತೊಂದು ಓಲೆಯ ಪ್ರತಿ ನನ್ನ ಬಳಿಯಲ್ಲಿದೆ. ಇದನ್ನು ನನಗೆ ಯಾರು ತಂದುಕೊಟ್ಟರೋ ನೆನಪಿಲ್ಲ. ಇದರಲ್ಲಿ ಒಟ್ಟು ೪ ಸಂಧಿಗಳೂ, ೧೧೨೦ ಪದ್ಯಗಳೂ ಇವೆ. ಪ್ರತಿಯೊಂದು ಓಲೆಯೂ ೧೦.೭" ಉದ್ದವೂ, ೨" ಅಗಲವೂ ಇದೆ. ಎಂಟು ಪಂಕ್ತಿಗಳಿವೆ. ಅಕ್ಷರಗಳು ಸುಮಾರಾಗಿವೆ. ಇದರ ಪದ್ಯಗಳು ಬಹುಮಟ್ಟಿಗೆ ಮೇಲೆ ಹೇಳಿರುವ "ಗಂ. ೭"ನೆಯ ಪ್ರತಿಯ ಪದ್ಯಗಳನ್ನು ಹೋಲುತ್ತವೆ. ಇದನ್ನು "ಬಹುಧಾನ್ಯ ಸಂವತ್ಸರದ ಕಾರ್ತಿಕ ಶುದ್ಧ ೨ ಗುರುವಾರ"ದಂದು ಪ್ರಾರಂಭಿಸಿ "ಬಹುಧಾನ್ಯ ಸಂವತ್ಸರದ ಕಾರ್ತಿಕ ಶುದ್ಧ ೧೦ [ವಾರ ?]"ರಂದು ಮುಗಿಸಿದುದಾಗಿ ಹೇಳಿದೆ. ಶಕವರ್ಷವನ್ನು ಹೇಳದೆ ಇರುವುದರಿಂದ ಈ ಪ್ರತಿಯ ಕಾಲ ಸುಮಾರು ೨೪–೧೧–೧೬೯೮ ಎನ್ನಬಹುದು.[2] ಇದನ್ನು "ಗಂ. ೬" ಎಂದು ವ್ಯವಹರಿಸಲಾಗುತ್ತದೆ.

## ಪ್ರತಿಗಳ ಪರಿಶೀಲನೆ

ಪಾಂಚಾಳಗಂಗ ರಚಿತವಾದ "ಚೆನ್ನರಾಮನ ಸಾಂಗತ್ಯ" ತುಂಬ ಕುತೂಹಲಕಾರಿಯಾದುದು. ಇದರ ಒಂದುಪ್ರತಿ ಇನ್ನೊಂದರಂತಿಲ್ಲ. ಸಂಧಿಗಳ ಸಂಖ್ಯೆ, ಪದ್ಯಗಳ ಸಂಖ್ಯೆ, ಕಥೆಯಲ್ಲಿನ ಘಟನೆಗಳೇ ಮೊದಲಾದುವುಗಳಲ್ಲಿ ನಾನಾ ಬಗೆಯಾಗಿ ಅಂತರಗಳು ಕಂಡುಬರುತ್ತವೆ. ಈ ಅಸಂಖ್ಯಾತವಾದ ಭಿನ್ನಪಾಠಗಳು ಒಮ್ಮೊಮ್ಮೆ ಈ ರಚನೆಗಳು ಭಿನ್ನ ಕರ್ತೃಕಗಳೋ ಎಂಬ ಭ್ರಮೆಯನ್ನು ಉಂಟುಮಾಡಿರುವ ವಿಚಾರವನ್ನು ಈ ಮೊದಲೇ ನೋಡಿದ್ದೇವೆ. ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರಂತೆಯೇ ಮದರಾಸಿನ ಪ್ರಾಚ್ಯ ಪುಸ್ತಕ ಭಂಡಾರದ ಸಂಪಾದಕರೂ ಈ ತೊಡಕಿಗೆ ಗುರಿಯಾಗಿರುತ್ತಾರೆ. ಗಂಗನ ನಾಲ್ಕು ಪ್ರತಿಗಳಲ್ಲಿ ವಿದಿತವಾಗುವ ಕೆಲವು ಕಥಾವ್ಯತ್ಯಾಸಗಳನ್ನೂ, ಅದಕ್ಕೆ ಸಂಬಂಧಿಸಿದ ಹೊಸ ಹೊಸ ಪದ್ಯಗಳನ್ನೂ ಕಂಡು, ಗಂಗಯ್ಯನ ಅಂಕಿತವಿದ್ದರೂ ಅವುಗಳನ್ನು ಗಂಗನ ರಚನೆಯೆಂದು ಹೇಳುವಂತಿಲ್ಲವೆಂದು ನಿರೂಪಿಸಿರುತ್ತಾರೆ.[3] ಈ ಸಮಸ್ಯೆಯನ್ನು ಪರಿಶೀಲಿಸುವ ಸಲುವಾಗಿ ಮದರಾಸು, ಮೈಸೂರು ಮತ್ತು ಧಾರವಾಡಗಳಲ್ಲಿ ನನಗೆ ದೊರೆತ ಪ್ರತಿಗಳನ್ನೆಲ್ಲ ವಿವರವಾಗಿ ನೋಡಿರುತ್ತೇನೆ. ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಬಳಿಯಲ್ಲಿದ್ದ ಪ್ರತಿಗಳನ್ನೂ, ನನ್ನ ಬಳಿಯಲ್ಲಿರುವ ಪ್ರತಿಗಳನ್ನೂ ಸಮೀಕ್ಷಿಸಿ, ಎಲ್ಲ ದೃಷ್ಟಿಗಳಿಂದಲೂ ಉತ್ತಮವೂ ವಿಶಿಷ್ಟವೂ ಆದ ಏಳು ಪ್ರತಿಗಳನ್ನು ಮಾತ್ರ ಇಲ್ಲಿ ಆರಿಸಿಕೊಂಡಿರುತ್ತೇನೆ. ಇವುಗಳು ಬೇರೆ ಬೇರೆ

---

1. ಗಂಗಾವತಿಯ ಶ್ರೀ. ನವಲಿ ವೇದವ್ಯಾಸರಾವ್ ಅವರು ೨೧–೧೦–೧೯೬೨ ರಲ್ಲಿ ವಿಶ್ವಾಸಪೂರ್ವಕವಾಗಿ ತಂದುಕೊಟ್ಟ ಕುಮಾರರಾಮನ ಸಾಂಗತ್ಯದ ಒಂದು ಪ್ರತಿ ಪ್ರಕೃತ 'ಗಂಗ ೫'ನ್ನು ಬಹುಮಟ್ಟಿಗೆ ಹೋಲುತ್ತದೆ. ಇದರಲ್ಲಿ ಪಾಂಚಾಳಗಂಗನ ಕವಿ ವಿಚಾರದ ಪದ್ಯ ಸ್ಪಷ್ಟವಾಗಿದೆ. ಕಡೆಕಡೆಯ ಪುಟಗಳು ಲೋಪವಾಗಿವೆ. ಸಂಧಿ ಸಂಖ್ಯೆ ಮತ್ತು ಪದ್ಯಕ್ರಮಗಳಲ್ಲಿ ಅಂತರವಿದೆ.

2. ೯–೧೦–೧೪೫೮ ಸೋಮವಾರ
   ೫–೧೧–೧೫೧೮ ಶುಕ್ರವಾರ
   ೧–೧೧–೧೫೭೮ ಶನಿವಾರ
   ೨೭–೧೧–೧೬೩೮ ಮಂಗಳವಾರ
   ೨೪–೧೧–೧೬೯೮ ಗುರುವಾರ
   ೩–೧೧–೧೭೫೮ ಶುಕ್ರವಾರ
   ೩೧–೧೦–೧೮೧೮ ಶನಿವಾರ
   ೨೭–೧೦–೧೮೭೮ ಭಾನುವಾರ

3. DCKM, Vol. V, D. 920—D. 923, PP.1241-1251.

ಪ್ರಭೇದಗಳಿಗೆ ಸೇರಿದ ಪ್ರತಿನಿಧಿಗಳಂತಿವೆ ಎನ್ನಬಹುದು. ಇವುಗಳಲ್ಲಿ ತೋರಿಬರುವ ಸಾಮ್ಯಗಳನ್ನೂ ವೈಷಮ್ಯಗಳನ್ನೂ ಮುಂದೆ ವಿಚಾರ ಮಾಡಲಾಗಿದೆ.

## ಸಾಮಾನ್ಯ ಲಕ್ಷಣಗಳು

1. ಸಾಧಾರಣವಾಗಿ ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿಯೂ ದೇವತಾಸ್ತುತಿಯಿದೆ. ಆದರೆ ಈ ಪದ್ಯಗಳು ಒಂದೇ ರೀತಿಯಾಗಿಲ್ಲ. ಒಮ್ಮೊಮ್ಮೆ ಈಶ್ವರನ ಸ್ತುತಿಯೂ, ಒಮ್ಮೊಮ್ಮೆ ವಿಷ್ಣುವಿನ ಸ್ತುತಿಯೂ, ಒಮ್ಮೊಮ್ಮೆ ಜಟ್ಟಂಗಿ ರಾಮನ ಸ್ತುತಿಯೂ ಕಂಡುಬರುತ್ತದೆ.[1] ತಗಡೂರಿನ ವಿಘ್ನೇಶನನ್ನೂ, ಒಮ್ಮೊಮ್ಮೆ ನಂಜನಗೂಡಿನ ನಂಜುಂಡನನ್ನೂ ಹೊಗಳಿರುವುದು ಗಮನಾರ್ಹವಾದುದು. ಈ ಪದ್ಯಗಳ ಜೊತೆಯಲ್ಲಿಯೇ "ನರಕೃತಿಯನು ಕೇಳಿ ಫಲವಿಲ್ಲವೆನುತಲಿ ಬರಿದೆ ಸಂದೇಹಿಸಬೇಡ, ಪರನಾರಿಯ ಸಹೋದರ ರಾಮನಾಥನ ಪರಿ ಕೇಳಲು ಮುಕ್ತಿಯಹುದು" ಎಂಬ ಪದ್ಯವೊಂದು ಆಗಿಂದಾಗ್ಗೆ ಬರುವುದುಂಟು. "ರಾಮನ ನೆನೆ ಕಂಡ್ಯ ಮನವೆ ಜಟ್ಟಂಗಿಯ ರಾಮನ ನೆನೆ ಕಂಡ್ಯ ತನುವೆ ರಾಮರಾಮ ಎಂಬೊ ನಾಮವ ನೆನೆದರೆ ಕಾಮಿತಫಲವೀವ ರಾಮ" ಎಂಬ ಪದ್ಯವೂ, ವಿನಾಯಕನನ್ನು ಕುರಿತು "ಕಾಯವೆ ಮೂರು ಕಾಲಾರು ಮಸ್ತಕ ನವ ಬಾಯಿ ಒಂಬತ್ತು ಬಾಲೆರಡು ಕೈಗಳು ನಾಲ್ಕು ಕಂಗಳ ರವೆ ಹದಿನೆಂಟು ಮೈಯಿಕ್ಕಿ ನಾನೆರಗುವೆನು" ಎಂಬ ಪ್ರಹೇಳಿಕೆಯೂ ಅನೇಕ ಪ್ರತಿಗಳಲ್ಲಿ ಕಂಡುಬರುತ್ತವೆ. ನಂಜುಂಡನ ಕೃತಿಯಲ್ಲಿರುವ "ಶ್ರೀ ಗಿರಿಜಾಸ್ಯಾಂಬುಜ ದಿನನಾಯಕ ಭೋಗಿಭೂಷಣ ಭಾಳನೇತ್ರ ಭಾಗೀರಥಿಧರ ಭವರೋಗವೈದ್ಯ ನೀನಾಗು ಶಂಕರ ಶರಣೆಮಗೆ" ಎಂಬ ಪದ್ಯವೂ ಹಲಕೆಲವು ಪಾಠಾಂತರಗಳೊಂದಿಗೆ ವಿದಿತವಾಗುತ್ತವೆ.

2. "ಗಂ. ೧", ಮತ್ತು "ಗಂ. ೫" ರಲ್ಲಿ ಕಥಾಸೂಚನೆಯನ್ನು ಒಳಗೊಂಡ ಒಂದು ಪದ್ಯ ಪ್ರಾರಂಭದಲ್ಲಿಯೇ ಬರುತ್ತದೆ. "ಗಂ. ೩"ರಲ್ಲಿ ಪ್ರತ್ಯೇಕವಾದ ಒಂದು ಪದ್ಯಾರ್ಧವೇ ಬರುತ್ತದೆ. ಇದು ನಂಜುಂಡನ ಕೃತಿಯ ಒಂದು ಲಕ್ಷಣವನ್ನು ಹೋಲುತ್ತದೆ.

3. "ಗಂ. ೧", "ಗಂ. ೨", ಮತ್ತು "ಗಂ. ೩"ರಲ್ಲಿ ಸಂಧಿಗಳ ಕಡೆಯಲ್ಲಿ, "ಇದು ಪರದಾರ ಸೋದರ (ನಾರಿ ಸಹೋದರ) ರಾಮನಾಥನ ಪದಕೃತಿಯೊಳಗೊಂದು ಕಥೆಯು........"ಎಂದು ಮೊದಲಾಗುವ ಪದ್ಯವು ಬರುತ್ತದೆ. ಪದ್ಯದ ಉತ್ತರಾರ್ಧದಲ್ಲಿ ಸಂಧಿಯ ಸಂಖ್ಯೆಯನ್ನೋ, ಕಥಾಭಾಗದ ಸಂಗ್ರಹವನ್ನೋ, ಇಲ್ಲವೆ ಮುಂದಿನ ಕಥಾ ಭಾಗದ ಸೂಚನೆಯನ್ನೋ ಅಡಕವಾಗಿ ಹೇಳಿರುವುದುಂಟು. "ಗಂ. ೫"ರಲ್ಲಿ ಸಂಧಿಸಂಖ್ಯೆ ಮತ್ತು ಪದ್ಯ ಸಂಖ್ಯೆಗಳನ್ನು ಮಾತ್ರವೇ ಹೇಳಿರುತ್ತದೆ. "ಗಂ. ೪" ಮತ್ತು ಇತರ ಅನೇಕ ಪ್ರತಿಗಳಲ್ಲಿ ಇದೇ ಸಾಧಾರಣ. ಪ್ರಕೃತ ಪದ್ಯವು ನಂಜುಂಡನ ಕೆಲವು ಪ್ರತಿಗಳಲ್ಲಿಯೂ ಕಂಡುಬರುತ್ತದೆ. ಆದ್ದರಿಂದ ಇದು ಸಹಜವಾಗಿ ಯಾವ ಕೃತಿಗೆ ಸೇರಿದ್ದು ಎಂಬ ಸಂದೇಹವೂ ಉಂಟಾಗುತ್ತದೆ.

ಸ್ಥೂಲವಾಗಿ ಈ ಕೆಲವು ಅಂಶಗಳು ಗಂಗನ ಪ್ರತಿಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ.

## ಅಂತರಗಳು

ಗಂಗನ ಪ್ರತಿಗಳಲ್ಲಿ ಆಂತರಿಕ ವ್ಯತ್ಯಾಸಗಳು ಹೇರಳವಾಗಿವೆ. ನಂಜುಂಡನ ಪ್ರತಿಗಳಲ್ಲಿ ಕಂಡು ಬಂದಂತೆಯೇ ಇಲ್ಲಿಯೂ ಸಮಗ್ರ ಕಥಾವಸ್ತುವನ್ನು ಒಳಗೊಂಡ ಪ್ರತಿಗಳೂ, ರತ್ನಾಜಿಯ ಕಥಾಭಾಗವನ್ನು ಮಾತ್ರವೇ ಒಳಗೊಂಡಿರುವ ಪ್ರತಿಗಳೂ ಕಂಡುಬರುತ್ತವೆ. ಸಂಕ್ಷಿಪ್ತ ಮತ್ತು ಪ್ರಕ್ಷಿಪ್ತಪಾಠಗಳೆರಡೂ ವಿದಿತ

1. ಈ ಬೇರೆ ಬೇರೆ ದೇವತಾಸ್ತುತಿಗಳು ಆಯಾ ಪ್ರತಿಕಾರರ ಇಷ್ಟದೇವತೆಗಳನ್ನು ಕುರಿತುದಾಗಿರಬಹುದು.

ವಾಗುತ್ತವೆ. ಪ್ರಕೃತದಲ್ಲಿ, ಈ ಪ್ರಬಂಧಕ್ಕೆ ಆಧಾರವಾಗಿ ಇಟ್ಟುಕೊಂಡಿರುವ ಪ್ರತಿಗಳಲ್ಲಿ ಈ ಕೆಳಗೆ ಕಂಡ ವ್ಯತ್ಯಾಸಗಳು ತೋರಿಬರುತ್ತವೆ.

1. ಸಂಧಿಗಳೂ ಪದ್ಯಸಂಖ್ಯೆಗಳೂ ಒಂದೇ ತೆರನಾಗಿಲ್ಲ :—

| | | | |
|---|---|---|---|
| ಗಂಗ ೧ | ೮ ಸಂಧಿಗಳು | ೧೮೮೫ ಪದ್ಯಗಳು | ಸಮಗ್ರ |
| ಗಂಗ ೨ | ೨೫ ,, | ೨೫೭೩ ,, | ಅಸಮಗ್ರ |
| ಗಂಗ ೩ | ೩೭ ,, | ೫೩೧೭ ,, | ಅಸಮಗ್ರ |
| ಗಂಗ ೪ | ೭ ,, | ೨೬೭೦ ,, | ಸಮಗ್ರ |
| ಗಂಗ ೫ | ೧೫ ,, | ೨೨೦೫ ,, | ಅಸಮಗ್ರ |
| ಗಂಗ ೬ | ೪ ,, | ೧೧೨೦ ,, | ಸಂಕ್ಷಿಪ್ತ |
| ಗಂಗ ೭ | ೪ ,, | ೧೦೯೦ ,, | ಸಂಕ್ಷಿಪ್ತ |

ಈ ಪಟ್ಟಿಯನ್ನು ನೋಡಿದರೆ, ಗಂಗನ ಪ್ರತಿಗಳು ಹೇಗೆ ಒಂದು ಹಿಡಿತಕ್ಕೆ ಸಿಗುವುದಿಲ್ಲವೆಂಬುದು ವ್ಯಕ್ತವಾಗುತ್ತದೆ. ಇದರಿಂದ ಗಂಗನ ಕೃತಿಯು ಸ್ವರೂಪಕ್ಕೇ ಭಂಗವುಂಟಾಗಿದೆ. ಈ ಮೇಲಿನ ಪ್ರತಿಗಳನ್ನೂ, ಬೇರೆ ಬೇರೆ ಕಡೆಗಳಲ್ಲಿ ದೊರೆಯುವ ಇತರ ಪ್ರತಿಗಳನ್ನೂ ಹೋಲಿಸಿ ನೋಡಿದರೆ ಈ ರಚನೆ ಸುಮಾರು ೩೦೦೦ ಪದ್ಯಗಳ ಒಳಗೇ ಇದ್ದಿರಬೇಕು ಎನ್ನಿಸುತ್ತದೆ. ಸಂಧಿವಿಭಾಗಗಳೂ ಸಹ ಸುಮಾರು ೧೫ನ್ನು ಮೀರಿರಲಾರದು. ಒಟ್ಟಿನಲ್ಲಿ ಗಂಗನ ಕೃತಿ ಸಹಜವಾಗಿಯೇ ಚಿಕ್ಕದೆಂದು ಊಹಿಸಬಹುದು.

2. ಬೇರೆ ಬೇರೆ ಪ್ರತಿಗಳಲ್ಲಿ ಕಂಡುಬರುವ ಸಮಾನಪದ್ಯಗಳಲ್ಲಿ ಅನೇಕ ಪಾಠಾಂತರಗಳು ಕಂಡುಬರುತ್ತವೆ. ಕೆಲವನ್ನು ಇಲ್ಲಿ ಉದಾಹರಿಸಬಹುದು :–

(i) ಅಪ್ಪಯಿಲ್ಲದ ಹಿಂದೆ ಚಿಕ್ಕಮ್ಮನೊಬ್ಬಳೆ
ತಪ್ಪುವುದೊ ತಾಗುವುದೊ
ತಪ್ಪುವ ಕಡೆಗೋಲದಂತೆ ರತ್ನಿಯ ಮನ
ತಪ್ಪದೆಂದನು ಕಾಟಣ್ಣ (ಗಂ. ೧, v, ೩೫)

ಅಪ್ಪನಿಲ್ಲದೆ ಹಿಂದೆ ಚಿಕ್ಕಮ್ಮನೊಬ್ಬಳೆ
ತಪ್ಪುವುದೊ ತಾಕುವುದೊ
ತೆಪ್ಪವ ಒಡೆದಂತೆ ಇತ್ತ ಬಹುದೊ ಮಾತು
ತಪ್ಪು ಬಹುದೊ ಚೆನ್ನರಾಮ (ಗಂ. ೩, xxviii, ೧೯)

ಅಪ್ಪಿಲ್ಲದರಮನೆ ಚಿಕ್ಕಮ್ಮನೊಬ್ಬಳೆ
ತಪ್ಪುತಾಕುಗಳು ಬರುವುವೊ
ತೆಪ್ಪವನೊಡೆದಂತೆ ಎತ್ತಬಹುದು ಮಾತು
ತಪ್ಪುವುದೆಯಂದ ಕಾಟಣ್ಣ (ಗಂ. ೫, x, ೧೭)

(ii) ದೊರೆ ಕಾಟನೊಡನೆ ರತ್ನಮ್ಮನಿಂತೆಂದಳು
ಅರಗಿಳಿ ಮಾತಾಡುವಂತೆ
ಸರಸಿಜಮುಖಿಯು ಕಾಣುತ ಬಾಯಿದೆರೆವಂತೆ
ತರುಣಿ ನೋಡಿದಳು ಕೋಕಿಲಂತೆ (ಗಂ. ೧, v, ೪೬)

ದೊರೆ ಕಾಟನೊಡನೆ ರತ್ನಾಜಿ ನುಡಿದಳಾಗ
ಅರಗಿಳಿ ಮಾತಾಡುವಂತೆ
ಸರಸಿಜವನು ಕಂಡು ರವಿ ಬಾಯಿದೆರೆವಂತೆ
ವರ ಕೋಗಿಲ ಧ್ವನಿಯಂತೆ (ಗಂ. ೪, xxviii, ೪೦)

ದೊರೆ ಕಾಟನೊಡನೆ ರತ್ನಾಜಿ ನುಡಿದಳಾಗ
ಅರಗಿಳಿ ಮಾತಾಡುವಂತೆ
ಸರಸಿಜ ರವಿಯ ಕಾಣುತ ಬಾಯಿದೆರೆವಂತೆ
ವರ ಕೋಗಿಲೆಯ ಧ್ವನಿಯಂತೆ (ಗಂ. ೫, x, ೭೮)

(iii) ಮಾತೃಮನೆಗೆ ಬಂದು ಮಗ ಚೆಂಡ ಬೇಡೊರೆ
ಯಾತಕ್ಕೆ ನಿನ್ನ ಕಳುಹಿದನೊ
ನೀತವೆಯಿದು ರಾ [ಮ] ನಾಥಗೆ ರತ್ನಿಯು
ಪ್ರೀತಿಯಿಂದಲಿ ಆಡಿದಳು (ಗಂ. ೧, v, ೬೫)

ತಾಯಿ ಮನಿಗೆ ಬಂದು ಮಗ ಚೆಂಡು ಬೇಡುವರೆ
ನ್ಯಾಯವೇತಕೆ ಬರಹೇಳೊ
ವಾಯುವೇಗದಿ ತಿರುಗಿದನಾಗ ಬೊಲ್ಲುಗ
ರಾಯ ರಾಮಗೆ ಹೇಳಿದನು (ಗಂ. ೪, xxviii, ೫೯)

ತಾಯಿ ಮನಿಗೆ ಬಂದು ಮಗ ಚೆಂಡು ಬೇಡಲು
ನ್ಯಾಯವೇತಕೆ ಬರಹೇಳೊ
ವಾಯುವೇಗದಲಾಗ ತಿರಿಗಿದ ಬೊಲ್ಲುಗನು
ಆಯತದಿಂದುಸುರಿದನು (ಗಂ. ೫, x, ೫೨)

(iv) ನಸು ಮಾಸಿದ ಚಿಂದಿ ಹಚ್ಚಡ ರಾಮಯ್ಯ
ಕಸಿದು ಸುತ್ತಿದ ದುಗುಡದಲಿ
ಕಸಿದು ಥೈದೊಡಿಗೆಯ ಪೆಂಡೆಯ ಪದಕವ
ಸಸಿನೆಯಿತ್ತನು ಕಾಟನೊಡನೆ (ಗಂ. ೧, v, ೬೮)

ಎಳೆ ಮಾಸಿದ ಹಚ್ಚಡ ಚಿಂದಿಯನು ರಾಮ
ಥಳಲನೆ ತೆಗೆದು ಸುತ್ತಿದನು
ಗೆಲವಿಲ್ಲದೆ ಕಾಲ ಕಡೆಯ ಪೆಂಡೆಯವ
ತಾನೊಲಿದು ಕೊಟ್ಟನು ಕಾಟಣ್ಣಗೆ (ಗಂ. ೪, xxviii, ೬೧)

ಮಡಿ ಮಾಸಿದ ಹಚ್ಚಡ ಕಡೆ ಹರಕು ಚಿಂದಿಯು
ನುಡಿ ಸಂಣ ರಾಮ ದುಗುಡದಲಿ

ಕಡೆಯ ಪೆಂಡೆಯ ಕಾಲರುಳಿಯ ಪದಕವನಾಗ
ಮಡುಗ ಕೊಟ್ಟನು ಕಾಟನೆಡೆಗೆ (ಗಂ. ೫, x, ೫೪)

ಈ ಮೇಲಿನ ಪದ್ಯಗಳಲ್ಲಿ ಅಕ್ಷರಪಲ್ಲಟ, ಪದಪಲ್ಲಟ, ಪಾದಪಲ್ಲಟ ಮತ್ತು ಪ್ರಾಸಪಲ್ಲಟಗಳೂ ಕಂಡು ಬರುವುದನ್ನು ಗಮನಿಸಬಹುದು. ಕಡೆಯ ಎರಡು ಲಕ್ಷಣಗಳಂತೂ ಕೃತಿಯ ಸ್ವರೂಪವನ್ನು ಮಾರ್ಪಡಿಸಲು ಹೇಗೆ ಕಾರಣವಾಗುತ್ತವೆ ಎನ್ನುವುದನ್ನು ಊಹಿಸಬಹುದು.

3. ಪ್ರತಿಕಾರರು ಒಮ್ಮೊಮ್ಮೆ ಪಂಕ್ತಿಗಳನ್ನು ಕೈಬಿಡುವುದರಿಂದ ಮಿಶ್ರಪ್ರಾಸವುಳ್ಳ ಪದ್ಯಗಳು ಉಳಿದು ಕೊಳ್ಳುತ್ತವೆ. ಇಂಥ ನಿದರ್ಶನಗಳು "ಗಂ. ೨" ರಲ್ಲಿ ಆಗಿಂದಾಗ್ಗೆ ಕಂಡುಬರುತ್ತವೆ.

ಚೆಂಡು ಬೇಕಾದರೆ ರಾಮನ ಬರಹೇಳೊ
ಚೆಂಡು ಕೊಡುವೆನೆಂದಳವಳು
ಎಂದ ಮಾತನು ಕೇಳಿ ಮೆಲ್ಲನೆ ಕಾಟಣ್ಣ
ಬಂದು ರಾಮುಗೆ ಹೇಳಿದನು (ಗಂ. ೨, xvii, ೩೫)

ಮೇಲಿನ ಪದ್ಯದ ಮೂಲ :-

ಚೆಂಡು ನಿನಗೆ ಕೊಡೆನೆಂದು ನುಡಿದಳು
ಗಂಡುಗಲಿಯು ಕಾಟನೊಡನೆ
ಚೆಂಡು ಬೇಕಾದರೆ ರಾಮನ ಬರಹೇಳೊ
ಚೆಂಡು ಕೊಡುವೆನೆಂದಳವಳು (ಗಂ. ೩, xxviii, ೫೪)

ಎಂದ ಮಾತನು ಕೇಳಿ ಮೆಲ್ಲನೆ ಕಾಟಣ್ಣ
ಬಂದು ಹೇಳಿದನು ರಾಮುನೊಡನೆ
ತಂದೆಯ ಕಾಲದ ಹಳೆಯ (ಬ?)ನೆ ಬೊಲ್ಲುಗ
ಒಂದು ಬಾರಿಗೆ ಚೆಂಡ ಬೇಡೊ (ಗಂ. ೩, xxviii, ೫೫)

4. ಬೇರೆ ಬೇರೆ ಪ್ರತಿಗಳಲ್ಲಿ ಕಂಡುಬರುವ ಕಥಾವ್ಯತ್ಯಾಸಗಳು[1] :—

**(1) "ಗಂ. ೧" ನೆಯ ಪ್ರತಿ :-**

(i) ಮೊದಲನೆಯ ಸಂಧಿಯಲ್ಲಿ ದೇವತಾಸ್ತುತಿ, ಕವಿಪ್ರಶಸ್ತಿಗಳನ್ನು ಹೇಳಿದ ಬಳಿಕ ಸಂಕ್ಷಿಪ್ತವಾಗಿ ಕಥಾಗರ್ಭವನ್ನು ಸೂಚಿಸಲಾಗಿದೆ (ಪ. ೧೫-೨೨). ಹೆಚ್ಚು ಪೀಠಿಕೆಯಿಲ್ಲದೆ ಕಥೆ ಮುಂದುವರಿಯುತ್ತದೆ. ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿಯೂ ಈಶ್ವರ ಇಲ್ಲವೇ ವಿಷ್ಣುಪರವಾದ ಒಂದು ಪ್ರಹೇಳಿಕೆಯಿದೆ.

(ii) ಮುಮ್ಮಡಿಸಿಂಗ ಮತ್ತು ಕಂಪಿಲರಾಯನ ಪರಿಚಯವನ್ನು ಮಾಡಿಕೊಟ್ಟ ತರುವಾಯ, ಕಂಪಿಲರಾಯನ ಹೆಂಡತಿಯಾದ ಹಂಪಾಜಿ ಎಂಬಾಕೆಗೆ ಕಾಟಣ್ಣನೆಂಬ ಮಗನೂ

---

1. ಇಲ್ಲಿ ಬಳಸಿರುವ ಹಸ್ತಪ್ರತಿಗಳ ಪಾಠ ಪರಿಷ್ಕೃತವಾಗಿಲ್ಲದಿರುವುದರಿಂದ ಇಲ್ಲಿ ಉದಾಹರಿಸಿರುವ ಪದ್ಯಗಳಲ್ಲಿ ಪಾಠಕ್ಲೇಶ ಮತ್ತು ಛಂದೋದೋಷಗಳುಂಟು. ಮುಖ್ಯವಾಗಿ ಕಥಾಭಾಗಕ್ಕೆ ಮಾತ್ರ ಗಮನಕೊಡಲಾಗಿದೆ.

ಪಟ್ಟದ ರಾಣಿಯಾದ ಹರಿಹರದೇವಿಗೆ, ಜಟ್ಟಂಗಿ ರಾಮೇಶನ ದಯೆಯಿಂದ ಕುಮಾರರಾಮನೆಂಬ ಮಗನೂ ಇದ್ದರೆಂದು ತಿಳಿದುಬರುತ್ತದೆ.[1] (i, ೩೮–೫೬)

(iii) ಮೊದಲನೆಯ ಸಂಧಿಯಲ್ಲಿಯೇ ಬಲ್ಲಾಳನ ಮುತ್ತಿಗೆ (ಪ. ೧೧೨–೧೩೩), ಹುಳಿಯಾರಿನ ಮುತ್ತಿಗೆ (ಪ. ೧೪೪–೧೬೩), ಬಾದೂರನ ಪ್ರಕರಣ (ಪ. ೧೬೯–೧೭೩), ನೇಮಿಯ ಮೊದಲನೆಯ ಮುತ್ತಿಗೆ (ಪ. ೧೭೯–೨೧೨) ಮುಂತಾದ ಅನೇಕ ಘಟನೆಗಳು ಅತ್ಯಂತ ಸಂಕ್ಷಿಪ್ತವಾಗಿ ನಿರೂಪಿತವಾಗಿವೆ.

(iv) ಗುಂಡುಬ್ರಹ್ಮಯ್ಯನ ವೃತ್ತಾಂತದಲ್ಲಿ ಬದಲಾವಣೆಯಿಲ್ಲದಿದ್ದರೂ, ಇಲ್ಲಿ ಚಿತ್ರಿತವಾಗಿರುವ ಶೂಲದಹಬ್ಬದ ವಿವರಗಳು ಬೇರೆ ಯಾವ ಪ್ರತಿಯಲ್ಲಿಯೂ ಇಲ್ಲ (iii, ೧–೧೦೪).

(v) ರಾಮನನ್ನು "ಮುನ್ನಿನ ಪಾಂಡವ ಶೌರ್ಯದ ಪಂಥದಿ ಬಣ್ಣಿಸುವೆನು ಧರೆಯೊಳಗೆ" (i, ೧೩) ಎಂದು ಮಾತ್ರ ಹೇಳಿದ್ದಾನೆ.

ಪ್ರಾರಂಭದ ಸಂಕ್ಷಿಪ್ತ ನಿರೂಪಣೆಯೊಂದನ್ನು ಬಿಟ್ಟರೆ, ಉಳಿದ ಎಲ್ಲ ದೃಷ್ಟಿಗಳಿಂದಲೂ ಈ ಪ್ರತಿ ಸಮರ್ಪಕವಾದುದೆಂದು ಹೇಳಬಹುದು. ಈ ಪ್ರತಿಯನ್ನು ಪೂರ್ಣವಾಗಿ ಹೋಲುವ ಇನ್ನೊಂದು ಪ್ರತಿ ಈವರೆಗೆ ನನ್ನ ಗಮನಕ್ಕೆ ಬಂದಿಲ್ಲ.

## (2) "ಗಂ. ೨" ನೆಯ ಪ್ರತಿ:–

(i) ಈ ಕೃತಿಯ ಪ್ರಾರಂಭಭಾಗವೇ ತುಂಬ ವಿಶಿಷ್ಟವಾದುದು. ಕುಮಾರರಾಮನ ತಾತನಾದ ಪೂವಾಲಿಕುಲದ ಮುಮ್ಮಡಿ ಸಿಂಗನು ಒಬ್ಬ ಶಬರನಾಯಕನೆಂದೂ, ಆತನಿಗೆ ಮಂಚಕ್ಕನ ಹೊಟ್ಟೆಯಲ್ಲಿ ಕಂಪಿಲನೆಂಬಾತನು ಜನಿಸಿದನೆಂದೂ ಮೊದಲಾಗುತ್ತದೆ. (i, ೧೩–೧೮)

(ii) ಕಂಪಿಲನಿಗೆ ಮೊದಲು ಆತನ ಸೋದರತ್ತೆಯ ಮಗಳನ್ನೇ ಕೊಟ್ಟು ಮದುವೆಯಾಯಿತು. ಈ ದಂಪತಿಗಳು ಜಟ್ಟಂಗಿ ರಾಮನ ಗಿರಿಗೆ ಬಂದಿದ್ದಾಗ, ದೇವರ ಅನುಗ್ರಹದಿಂದ ಕಾಟಣ್ಣನೆಂಬ ಮಗನಾದನು.[2] (i, ೧೯–೨೪)

---

1. ದೇವ ಜಟಂಗಿ ರಾಮೇಶನ ಕೃಪೆಯಿಂದ ಭಾವೆ ಹಂಪಾಜಿಯುದರದಿ ।
ಶೀವಿಯೊಳಗೆ ಗಂಡುಶಿಶುವಾಗೆ ಕಂಪಿಲರಾಯ ಸಂತಸದಿ ಹಿಗ್ಗಿದನು ॥
ದಾನ ಧರ್ಮದಲಿ ಭೂಸುರರ ದಣಿಸಿದನು ಆನಂದವಾಳುತೋತ್ಸವದಿ ।
ಮಾನಿನಿಯರು ಸಂತಸದಿ ಯೇರಿಲಮಾಡಿ ನಾಮವಿಟ್ಟರು ಕಾಟನೆಂದು ॥
ಪಟ್ಟದರಾಣಿ ಹರಿಹರದೇವಿ ಹರುಷದಿ ಖಟ್ವಾಂಗಧರನ ರಾಣಿಯನು ।
ಅಷ್ಟೈಶ್ವರ್ಯದಿ ಭಜನೆಯ ಮಾಡಲು ಕೊಟ್ಟಳು ಮೆಚ್ಚಿದೊರಗಳ ॥
ದೇವ ಜಟಂಗಿ ರಾಮೇಶನ ಕರುಣದಿ ಭಾವುಕಿ ಹರಿಹರದೇವಿ ।
ಶೀವಿಯೊಳಾಗೆ ಗರ್ಭವು ನೆಲೆಗೊಂಡುದು ದೇವಿಯಿರ್ದಳು ಬಯಕೆಯಲಿ ॥
ನವಮಾಸ ತುಂಬಿಯೆ ನರಳುವಳ್ದೇವಿಯು ಭವರೋಗ ಹರನ ಧ್ಯಾನದಲಿ ।
ಕುವರನ ಪಡೆದಳು ಕುಮುದಗಂಧಿನಿಯಾಗ ದ್ಯುಮಣಿ ಪ್ರಕಾಶವುಳ್ಳವನ ॥
ಹನ್ನೆರಡ್ದಿವಸಕ್ಕೆ ಪುಣ್ಯವರ್ಚನೆಯಿಂದ ಚನ್ನಾಗಿ ಯೇರಿಲ ಮಾಡಿ ।
ಉನ್ನಂತ ದಾನಧರ್ಮವ ಮಾಡಿ ಪೆಸರಿಡೆ ಚೆನ್ನಿಗರಾಮನೆಂದೆನುತ ॥ (i, ೪೫–೪೮, ೫೦, ೫೫)
2. ಇಂತಪ್ಪ ಪುತ್ರನುದಿಸಲು ಕಂಪಿಲನೆಂಬ ಕಾಂತೆ ಪೆಸರನಿಟ್ಟಳಾಗ ।
ಸಂತೋಷದಲ್ಲಿ ಬಾಳುತಲಿರೆ ಸಿಂಗನು ಕಂತುಹರನ ಕರುಣದಿಂದ ॥

(iii) ಕಂಪಿಲನು, ಕಾರಣಾಂತರದಿಂದ ದೇಶಭ್ರಷ್ಟನಾಗಿ ಬಂದ ಆರೇಯ ಚಾರಾಮ ರಾಯನ ಮಗಳಾದ ಹರಿಯಾಲದೇವಿಯನ್ನೂ ಮದುವೆಯಾಗುವನು.[1] (ii, ೧೩–೧೮)

(iv) ಕುಮಾರರಾಮನಿಗೂ ರತ್ನಾಜಿಗೂ ಸಂಬಂಧಿಸಿದ ಜನ್ಮ ವೃತ್ತಾಂತದ ಪೀಠಿಕಾ ಪ್ರಕರಣ ಸಂಕ್ಷಿಪ್ತವಾಗಿ ನಿರೂಪಿತವಾಗಿದೆ. ರತ್ನಾಜಿ ರಂಭೆಯ ಅವತಾರವೆಂದೂ, ರಾಮನು ಅರ್ಜುನನ ಅವತಾರವೆಂದೂ ಹೇಳಲಾಗಿದೆ.[2] (ii, ೧೯–೨೭)

---

ದಿನಕೊಂದು ಚೆಂದದಿ ಬೆಳೆದು ದೊಡ್ಡವನಾಗಿ ಮನೆಯೊಳು ತಾನಿರುತಿಹನು ।
ವಿನಯದಿ ಸೋದರತ್ತೆಯ ಮಗಳನೆ ತಂದು ಜನಕ ಮದುವೆಯ ಮಾಡಿದನು ॥

ಜಟಂಗಿರಾಮನ ಗಿರಿಗಾಗಿ ಬಂದರು ಕೋಟಾಳು ಕಂಪಳ ಸಹಿತ ।
ಕೋಟೇಶ್ವರ ಪಾದವ ಕಂಡು ಪಡೆದನು ಕಾಟಣ್ಣನೆಂಬಂತ ಮಗನ ॥ (i, ೧೮–೧೯, ೨೪)

1. ಇತ್ತ ಪುರವನಾಳುತಲಿರೆ ಕಂಪಿಲ ಅತ್ತ ಗುಜ್ಜಾರಿಯನಾಳ್ವ ।
ಉತ್ತುಮ ಆರೇಯರಾಯ ರಾಜ್ಯವ ಕೆಟ್ಟು ಮತ್ತೆ ಗೂಳೆಯವೆದ್ದುಬರಲು ॥

ವರುಣನ ನದಿಯೆಂಬ ಕೃಷ್ಣಾನದಿಯ ದಾಂಟಿ ತೊರೆಗಲ್ಲು ಬಾದಾಮಿ ಅ(ಕ ?)ಳಿದು ।
ಸಾರಿದ ಕುಮ್ಮಟ ತುಂಗಭದ್ರೆಯ ದಾಂಟಿ ಧೀರ ಕಂಪಿಲನಿದ್ದೆಡೆಗೆ ॥

ಧಾರುಣಿಯನು ಆಳ್ವ ಕಂಪಿಲರಾಯಗೆ ಕುಮಾರಿಯೋರ್ವಳನು ಕಾಣಿಕೆಯ ।
ವಾರಣದಲಿ ಇತ್ತು ಕಂಡ[ನ]ರಸನು (ನು?) ಭೂ ಚಾರಮನೆಂಬ ಆರೆಯನ ॥

ಕಾಣಿಕೆಯನು ಇತ್ತು ಆರೇಯ ಚಾರಮಾಂಕಗೆ ನಾಣ್ಯ ಬಂಗಾರ ವಸ್ತ್ರಗಳು ।
ಊನ್ಯವಿಲ್ಲದೆ ಇತ್ತು ತಿರುಗಿಸಿ ಹಿಂದಕ್ಕೆ ಪಡುವಣರಾಜ್ಯ ಕಂಪಿಲನು ॥

ಪಡುವಣ ರಾಜ್ಯವನಿತ್ತವನಿಗೆ ಭೂಪ ತಡೆದನು ಆರೇಯ ದೊರೆಯ ।
ಸಡಗರದಿಂದಲಿ ಕಂಪಿಲರಾಯನು ನಡೆವಳಿಗುಂಟಾಗಿಯಿಹನು ॥

ಬಂದ ಆರೇಯ ರಾಯನಿಂದ ಬಲ್ಲಿದನಾಗಿ ನಿಂದನು ಅರಸು ಕಂಪಿಲನು ।
ಚಂದ್ರವದನೆ ಹರಿಯಲದೇವಿಯು ಬಲು ಚೆಂದದಿಂದ ಆರಯ್ಯುತಿರಲು ॥ (ii, ೧೩-೧೮)

2. ಸತಿಪುರುಷರು ಈ ಪರಿಯೊಳು ಇರುತಿರೆ ಅತಿಶಯ ಕೈಲಾಸದೊಳಗೆ ।
ಪೃಥ್ವಿಗೀಶ್ವರನ ಓಲಗ ನೆರೆದಿರೆ ಗಣತತಿ ಉಮಾದೇವಿಯರೊಲಿದು ॥

ಓಲಗಗೊಟ್ಟು ಈಶ್ವರ ಕುಳಿತಿರೆ ಉಮೆ ಬಾಲೆ ಜಾಹ್ನವಿ ಗಣತತಿಯು ।
ಲೀಲೆಯಿಂದ ಬಂದಷ್ಟಾವಧಾನದಿಂದಾಲಿಸಿ ಗಣಸ್ತೋಮವೆರಸಿ ॥

ತೆತ್ತೀಸಕೋಟಿ ದೇವರ್ಕಳೆಲ್ಲರು ಕೂಡಿ ಅತ್ತಲಗಜೆಯೊಳು ನೆರೆದು ।
ಮೃತ್ಯುಂಜಯನ ಓಲಗಕೆ ಬಂದರು ಸಮಸ್ತ ಗಣರು ತಿಂಥಿಣಿಯು ॥

ಎಂಟು ದಿಕ್ಕುಗಳ ನೋಡುತ ಉಮೆಯಾಟದಿ ಗಂಟಿಕ್ಕಿ ಮೊಗವ ನೋಡಿದಳು ।
ಉಂಟು ದ್ವಾಪರರಾಯೊಳ್ಳೈವರು (?) ಕೃಷ್ಣ ನಂಟನರ್ಜುನ ಉಮೆದೇವಿ ॥

ದೇವಶಾಖೆಯು ಹರಿ ಬ್ರಹ್ಮ ವಾಸವರೆದ್ದು ಭಾವಿತ ನಮಿತರು ಸಹಿತ ।
ದೇವಿಯ ಕಾಣಲೊಡನೆ ಎದ್ದು ಕೈಮುಗಿದು ದಾನವ ಪರಬ್ರಹ್ಮರೊಡನೆ ॥

ಇವಗಿಷ್ಟು ಗರ್ವಿಕೆ ಯಾಕೆ ಮಾನವನೆಂದು ಭವನೀಶನರ್ಧಾಂಗಿ ನುಡಿಯೆ ।
ದಿವಿಜಾರಿಗಿಂದ ವೆಗ್ಗಳ ಕಾಣೆ ಪಾರ್ವತಿ ಅವನರ್ಜುನ ಪರಸತಿಗೆ ॥

ಧರೆಯೊಳಗಿವನ ಕುರುಹ ನೋಡಬೇಕೆಂದು ಪರನಾರಿಯರ ಬಿರುದುಗಳ ।
ಪರೀಕ್ಷಿಸಿ ನೋಡಿದಲ್ಲದೆ ಬಿಡೆನೆಂದು ವರರಂಭೆಯನು ತಾನಟ್ಟಿದಳು ॥

ಆದರೆ ಕೇಳು ಗೌರಿ ಎನ್ನಮಾತಿದನರಿದು ಈ ಧರೆಯೊಳಗೆ ಈತನನ ।
ಸಾಧಿಸಿ ವೆಗ್ಗಳವಾದರೆ ನಿನ್ನ ರಂಭೆಗೆ ಮೇದಿನಿಯೊಳು ಸರಿಯುಂಟೆ ॥

(v) ಜಟ್ಟಂಗಿರಾಮೇಶನ ದಯದಿಂದ ಹರಿಯಾಲದೇವಿಗೆ ಕುಮಾರರಾಮನೂ,[1] ದಾದಿಯೊಬ್ಬಳ ಹೊಟ್ಟೆಯಲ್ಲಿ ಖಳರಾಮನೂ (ಕಳ್ಳರಾಮ ?) ಹುಟ್ಟುತ್ತಾರೆ (ii, ೪೨–೪೩.).

(vi) ದೇವಲೋಕದ ರಂಭೆ, ಸಾಲ್ಗುಂದಿ ಮುಕ್ಕುಂದಿಯ (ವೀಳು) ಚಂದನಗಂಧಿ ಯಲ್ಲಮ್ಮನ ಹೊಟ್ಟೆಯಲ್ಲಿ ದೇವಿರೆಡ್ಡಿಯ ಮಗಳಾಗಿ ಹುಟ್ಟುವಳು. ಈಕೆಯೇ ರತ್ನಾಜಿ.[2] ಬೇಟೆಗಾಗಿ ಬಂದಿದ್ದ ಕಂಪಿಲನು ಈಕೆಯನ್ನು ಕಂಡು ಮೋಹಿಸಿ ಮದುವೆಯಾಗುವನು. (iii, ೧–೧೯)

(vii) ಮಗಳಾದ ಬಾಬಮ್ಮನ ಸಲುವಾಗಿ ಸುಲ್ತಾನನು ಕಪ್ಪವನ್ನು ಕೇಳುವ ನೆಪದಲ್ಲಿ ಕಂಪಿಲನ ಬಳಿಗೆ ಪಾದುಕೆಗಳನ್ನು ಕಳುಹಿಸಲು ಕುಮಾರರಾಮನು ಬಂದವರನ್ನು ಅಪಮಾನ ಗೊಳಿಸಿ ಹಿಂದಟ್ಟುತ್ತಾನೆ. (v, ೪೯–೯೨)

(viii) ಕಂಪಿಲನು ಜಗದಪ್ಪರಾಯನ ಸಾಮಂತನಾಗಿದ್ದನೆಂದೂ, ಆತನು ಕಪ್ಪವನ್ನು ಕೇಳಲು ಬಂದು, ಕುಮಾರರಾಮನಿಂದ ಭಂಗಿತನಾಗಿ ಕಡೆಗೆ ತನ್ನ ಮಗಳಾದ ರಾಮುಲದೇವಿ ಯನ್ನು ಕೊಟ್ಟು ಮದುವೆಮಾಡಿದನೆಂದೂ ವರ್ಣಿತವಾಗಿದೆ. (vi, ೧೦–೮೯)

(ix) ಗುಂಡುಬ್ರಹ್ಮಯ್ಯನ ವೃತ್ತಾಂತ, ಓರುಗಲ್ಲಿಗೆ ಹೋಗಿ ಬೊಲ್ಲನನ್ನು ತರುವುದು, ಹುಳಿಯಾರು ಮಾರಭೂಪಾಲನನ್ನು ಸೋಲಿಸುವುದು ಇವೇ ಮೊದಲಾದ ಸನ್ನಿವೇಶಗಳು ಬರುತ್ತವೆ. (vii, viii)

(x) ಬಾದೂರನು ಮಾಡಬಾರದ ತಪ್ಪನ್ನು ಮಾಡಿ ಕಂಪಿಲನನ್ನು ಮರೆಹೊಗುವುದು, ನೇಮಿ ದಂಡೆತ್ತಿ ಬಂದು ಸೋತು, ಬಲ್ಲಾಳನನ್ನು ಎತ್ತಿಕಟ್ಟುವುದು ಮುಂತಾದ ಘಟನಾವಳಿ ಗಳು ಕ್ರಮವಾಗಿ ಬರುತ್ತವೆ. (x,xi,xii)

(xi) ಶೂಲದ ಹಬ್ಬದ ಪ್ರಸಂಗ ಕಂಡುಬರದಿದ್ದರೂ ಅದರ ಹೆಸರು ಮುಂದೆ ಮಾರಮ್ಮ ಮತ್ತು ಸಿಂಗಮ್ಮ ಅವರ ಪ್ರಲಾಪದಲ್ಲಿ ಕೇಳಬರುತ್ತದೆ. (xix, ೮೬–೯೦)

(xii) ನೇಮಿಯ ಎರಡನೆಯ ಮುತ್ತಿಗೆ, ರತ್ನಾಜಿಯ ಹಗರಣ, ಮಾತಂಗಿಯ ಪ್ರಸಂಗ ಗಳು ಯಾವ ಮಾರ್ಪಾಡೂ ಇಲ್ಲದೆ ಬರುತ್ತವೆ (xx–xxv).

ಈ ಪ್ರತಿಯ ಕಥಾಮುಖವೇ ತುಂಬ ವಿಶಿಷ್ಟವಾದುದು. ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಬಳಿಯಲ್ಲಿದ್ದ ಈ ಪ್ರತಿಯಲ್ಲಿ, ಕವಿಯ ವಿಚಾರವಾಗಿ "ಆಧಾರವಿಡಿದು ಪೇಳಿದ ನಾಗಸಂಗಯ್ಯ ಈ ಧರೆಯ ವಿದ್ವಾಂಸರೊಳಗೆ"[3] ಎಂಬ ವಾಕ್ಯವೊಂದನ್ನು ಬಿಟ್ಟು ಬೇರೇನೂ ತಿಳಿದುಬರುವುದಿಲ್ಲ. ಆದರೆ, ಪ್ರಕೃತದಲ್ಲಿ ಈ ಪ್ರತಿಯನ್ನೂ ಗಂಗ ೩ನೆಯ ಪ್ರತಿಯನ್ನೂ

---

ಶಂಭುವರ್ಧಾಂಗಿ ವಾದಿಗಳ ಸುತ್ತ ಧರೆಯೊಳು(?)ರಂಭೆ ಅರ್ಜುನ ಸಹವಾಗಿ ।
ಬೆಂಬಳಿಯಿಂದಲಿರ್ವರು ಧಾರುಣಿಗೆ ಕಳುಹೆ ಸಂಭ್ರಮ ಕೈಲಾಸವಿಳಿದು ॥ (ii, ೧೯–೨೬)

1. ಕೊಟ್ಟೆನು ಸುತನ ಹರಿಯಾಲದೇವಿ ಕೇಳಿನ್ನು ಪಟ್ಟಾಭಿಷೇಕರನೆನಿಸಿ ।
ಕೊಟ್ಟದ ರಾಮನ ನೆನೆಸಲರ್ಜುನ ಬಂದು ಪುಟ್ಟುವ ನಿನ್ನ ಗರ್ಭದೊಳು ॥ (ii, ೩೮)

2. ಬಂದಳು ರಂಭೆ ರತ್ನಾಜಿ ಪೆಸರ ತಾಳ್ದು ನಿಂದು ಸಾಲ್ಗುಂದಿ ಮುಕ್ಕುಂದಿಯುಲಿ ।
ಚಂದನಗಂಧಿ ಯಲ್ಲಮ್ಮನ ಗರ್ಭದಿ ಚಂದ್ರವದನೆ ಜನಿಸಿದಳು ॥ (iii, ೪)

3. ಆಧಾರವಿಡಿದು ಪೇಳಿದ ನಾಗಸಂಗಯ್ಯ ಈ ಧರೆ ವಿದ್ವಾಂಸರೊಳಗೆ ।
ಸಾಧಿಸಿ ಅವರ ಸೇವಕನಾಗಿ ಪೇಳ್ವೆನು ಯಾದವ ಸಖ ಪಾರ್ಥನ ಕಥೆಯಾ ॥ (i, ೧೨)

ಪರಸ್ಪರ ಹೋಲಿಸಿ ನೋಡಿದಾಗ ಇದೂ ಸಹ ಗಂಗನ ಕೃತಿಯೆಂದೇ ಸ್ಪಷ್ಟವಾಗುತ್ತದೆ. ಮದರಾಸಿನಲ್ಲಿರುವ ಡಿ. ೯೨೦ ನೆಯ ಸಂಖ್ಯೆಯ ಪ್ರತಿ ಇದನ್ನೇ ಹೋಲುತ್ತದೆ. ಅದರಲ್ಲಿ ಮೂರೇ ಮೂರು ಸಂಧಿಗಳಿದ್ದು, ಒಂದನೆಯ ಸಂಧಿಯ ೧೬ ನೆಯ ಪದ್ಯದಿಂದ ಆರಂಭ ವಾಗುವುದರಿಂದ, ಅಲ್ಲಿಯೂ ಕವಿಯ ವಿಷಯ ತಿಳಿಯುವುದಿಲ್ಲ. ಈ ಪ್ರತಿಯ ಉಳಿದ ವಿವರಗಳ ಆಧಾರದ ಮೇಲೆ ಅದೂ ಸಹ ಗಂಗನದೆಂದು ಹೇಳಲು ಅಡ್ಡಿಯಿಲ್ಲ. ಮೇಲೆ ಹೇಳಿದ ಪದ್ಯವಾಗಲಿ, ಪದ್ಯದ ಛಾಯೆಯಾಗಲಿ ಗಂಗನ ಇತರ ಪ್ರತಿಗಳಲ್ಲಿ ಎಲ್ಲಿಯೂ ಕಂಡುಬರದಿರುವುದರಿಂದ ಇದು ಪ್ರಕ್ಷಿಪ್ತವಿರಬೇಕು; ಅಥವಾ ಇದರ ಮೂಲಪಾಠವು "ಆಧಾರವಿಡಿದು ಪೇಳಿದನಾಗ ಗಂಗಯ್ಯ" ಎಂದು ಇದ್ದರೂ ಇರಬಹುದು.[1]

**(3) "ಗಂ. ೩" ನೆಯ ಪ್ರತಿ :–**

(i) ಈ ತ್ರುಟಿತ ಪ್ರತಿ ಸುಲ್ತಾನನ ಪಾದುಕೆಯ ಪ್ರಸಂಗದಿಂದಲೇ ಮೊದಲಾಗುತ್ತದೆ. ಅದಕ್ಕೆ ಹೊಂದಿಕೊಂಡಂತೆ ಇತರ ಕಥಾಭಾಗವೆಲ್ಲವೂ "ಗಂ. ೨" ರಲ್ಲಿ ನಿರೂಪಿತವಾಗಿರುವಂತೆಯೇ ಮುಂದುವರಿಯುತ್ತದೆ. ಎಲ್ಲ ಸಂಗತಿಗಳೂ ವಿಸ್ತಾರವಾಗಿರುವುದೇ ಈ ಪ್ರತಿಯ ಮುಖ್ಯ ಲಕ್ಷಣ. (vi, ೩೯–೯೭)

(ii) ಗುತ್ತಿಯ ಜಗತಾಪಿಯ (ಜಗದಪ್ಪ) ಸೋಲು, ಓರುಗಲ್ಲಿನ ಕಾಳಗ, ಗುಂಡು ಬ್ರಹ್ಮಯ್ಯನ ವೃತ್ತಾಂತ, ಬೊಲ್ಲನ ಸಂಪಾದನೆ, ಹುಳಿಯಾರು ಮಾರಭೂಪಾಲನ ಗರ್ವಭಂಗ, ಬಾದೂರನ ಪಲಾಯನ, ನೇಮಿಯ ಮೊದಲನೆಯ ಯುದ್ಧ, ಬಲ್ಲಾಳನ ಕದನ, ಶೂಲದ ಹಬ್ಬ ಇವೇ ಮೊದಲಾದ ಪೂರ್ವಾರ್ಧದ ಘಟನೆಗಳೆಲ್ಲ ಕ್ರಮವಾಗಿ ಬರುವುದಲ್ಲದೆ ವಿವರವಾಗಿ ಚಿತ್ರಿಸಲಾಗಿದೆ. (vii–xvii)

(iii) ಸುಲ್ತಾನನ ಮಗಳಾದ ಬಾಬಮ್ಮ ದ್ರೌಪದಿಯ ಅವತಾರವೆಂದೂ, ಮಾತಂಗಿ ಗಾಂಧಾರಿಯ ಅವತಾರವೆಂದೂ ನಿರೂಪಿತವಾಗಿದೆ.[2] (xxxiv, ೬, ೧೬–೧೭)

(iv) ಕುಮಾರರಾಮನ ರುಂಡದ ಹಾವಳಿಯನ್ನು ತಡೆಯಲಾರದೆ ಸುಲ್ತಾನನು ಕಂಪಿಲನಿಗೆ ಹೇಳಿ ಕಳುಹಿಸಲು ಅದನ್ನು ತರಲು ರೂಪಿದೇವಯ್ಯನೆಂಬ ಭಟನು ಹೋಗಿ ಬರುವ ವಿವರವಿದೆ. (xxxiv, ೩೧೭–೩೪೧)

(v) ರಾಮನ ಮರಣವಾರ್ತೆಯನ್ನು ಕೇಳಿ ಸುಲ್ತಾನನ ಮಗಳು ಚಿತಾಪ್ರವೇಶ ಮಾಡುವಳು (xxxiv, ೩೪೧–೩೪೨).[3] ಆಕೆಯ ಪರಿಶುದ್ಧವಾದ ಪ್ರೇಮಕ್ಕೆ ತಲೆದೂಗಿ

---

1. 'ಗ'ಕಾರವನ್ನು ಭ್ರಾಂತಿಯಿಂದ 'ಸ'ಕಾರವನ್ನಾಗಿ ಓದಿ ಬರೆದಿರುವ ಲಿಪಿಕಾರರ ಸ್ಖಾಲಿತ್ಯಗಳು ಉಂಟು (ಡಿ. ಎಲ್. ನರಸಿಂಹಾಚಾರ್: ಕನ್ನಡ ಗ್ರಂಥ ಸಂಪಾದನೆ, ಪು. ೬೪).

2. ಹಿಂದಣ ದ್ವಾಪರಯುಗದಲ್ಲಿ ದ್ರುಪದನ ನಂದನೆಯಾಗಿ ದ್ರೌಪದಿಯು ।
   ಬಂದೀಗ ಕಲಿಯುಗದಲ್ಲಿ ಸುರಿತಾಳನ ಮಂದಿರದಲಿ ಜನಿಸಿದಳು ॥ (xxxiv, ೬)

   ಹಿಂದಣ ಧೃತರಾಷ್ಟ್ರನ ರಾಣಿ ಗಾಂಧಾರಿ ಬಂದು ಪುಟ್ಟಿದೊ ಡಿಳ್ಳಿಯೊಳಗೆ ।
   ಅಂದಿನ ಪಾಂಡವರಾಯನಣ್ಣನ ಸತಿ ಚಂಡದಿ ಡಿಳ್ಳಿ ಮಾದಿಗರ ॥

   ನಂದನೆಯೆಂಬಾಕೆಯ ಬಸುರಲಿ ಬಂದು ನಿಂದು ಮಾತಂಗಿಯೆನಿಸಿ ।
   ಹಿಂದಣ ಹಗೆಯ ತೀರಿಸಿಕೊಂಡು ನಾ ಪೋಪೆನೆಂದು ಕೋಪದಲಿ ಪುಟ್ಟಿದಳು ॥ (xxxiv, ೧೬–೧೭)

3. ಅತ್ತಲಾ ರೂಪಿದೇವಯ್ಯಾಗೆ ತಲೆಯನು ಕೊಡಲು ಇತ್ತ ಬಾಬಮ್ಮ ಯೋಚಿಸುತ।
   ಮುತ್ತಿನಾಭರಣಗಳಿಟ್ಟು ಶೃಂಗಾರವಾಗಿ ಚಿತ್ತಜ ವೈರಿ ಧ್ಯಾನದೊಳು ॥

ಪಾರ್ವತಿ ಪರಮೇಶ್ವರರು ರಾಮನಿಗೂ ಬಾಬಮ್ಮನಿಗೂ ಮತ್ತೆ ಜೀವವನ್ನು ದಯಪಾಲಿಸು ವರು. ಈ ನೂತನ ವಧೂವರರು ಭೂಲೋಕಕ್ಕೆ ಬಂದು, ಹಲವು ಕಾಲ ಸುಖವಾಗಿ ಬಾಳಿ ಶಿಂಗಣ್ಣನೆಂಬ ಕುಮಾರನನ್ನು ಪಡೆಯುವರು. ಅವನಿಗೆ ಪಟ್ಟಕಟ್ಟಿ ಇಬ್ಬರೂ ಕೈಲಾಸಕ್ಕೆ ತೆರಳುವರು (xxxvi, xxxvii). ಈ ಕಥಾಭಾಗವನ್ನು ಈ ಪ್ರತಿಯಲ್ಲಿ ಅತ್ಯಂತ ಅದ್ಭುತವಾಗಿ ಚಿತ್ರಿಸಲಾಗಿದೆ. ಈ ಕಥಾಂಶ ಬೇರೆ ಯಾವ ಪ್ರತಿಯಲ್ಲಿಯೂ ಕಂಡುಬರುವುದಿಲ್ಲ.

ಈ ಪ್ರತಿಯಲ್ಲಿ ಗಂಗನ ಮುಖ್ಯ ಕಥಾಭಾಗದೊಂದಿಗೆ ಅನೇಕ ಅಸಂಬದ್ಧ ಪ್ರಕರಣಗಳು ಬಂದು ಸೇರಿಕೊಂಡಿವೆ. ಈ ಪ್ರತಿಕಾರನಿಗೆ ನಂಜುಂಡನ ಕೃತಿಯ ಪರಿಚಯವೂ ಇದ್ದಿ ತೆಂದು ತೋರುತ್ತದೆ. ಗಂಗನ ನಿರೂಪಣೆಗೆ ಸೇರದ ಸವಿನುಡಿಯ ಸಂಧಿ, ಮೆಲ್ನುಡಿಯ ಸಂಧಿ, ರತ್ನಿಯ ಸ್ವಪ್ನದರ್ಶನ ಸಂಧಿ ಮುಂತಾದ ನಂಜುಂಡನ ಕೃತಿಯ ಕಥಾಭಾಗಗಳನ್ನು (ಒಟ್ಟು ೫೬೭ ಪದ್ಯಗಳಿವೆ) ತಂದು ಗಿಡಿದಿದ್ದಾನೆ.[1] ಕುಮಾರರಾಮನ ಮರಣೋತ್ತರ ಕಥಾ ಭಾಗಕ್ಕೆ ಏನು ಆಧಾರವೂ ತಿಳಿದುಬರುವುದಿಲ್ಲ. ಅಂತೂ ಗಂಗನ ಕೃತಿ ಕಾಲಕಾಲಕ್ಕೆ ಹೇಗೆ ಬೆಳೆದು ಪೆಡಂಭೂತವಾಗಿ ಪರಿಣಮಿಸಿತು ಎನ್ನುವುದಕ್ಕೆ ಈ ಪ್ರತಿ ಒಳ್ಳೆಯ ನಿದರ್ಶನ.

**(4) "ಗಂ. ೪" ನೆಯ ಪ್ರತಿ:–**

(i) ಈ ಪ್ರತಿ ಸುಲ್ತಾನನ ಪಾದುಕೆಯ ಪ್ರಸಂಗದಿಂದಲೇ ಮೊದಲಾಗುತ್ತದೆ(i, ೨೦–೨೯). [ಈ ಕಪ್ಪ ಕೇಳುವ ಘಟನೆ ೭ನೆಯ ಸಂಧಿಯಲ್ಲಿ ಕುಮಾರರಾಮನ ಪಟ್ಟಾಭಿಷೇಕದ ಅನಂತರ ಮತ್ತೊಮ್ಮೆ ಬರುತ್ತದೆ (ಪ. ೨೫–೩೦).]

(ii) ಕಾಟಣ್ಣ, ಕುಮಾರರಾಮರನ್ನು ಕುರಿತು ಹರಿಯಮ್ಮ "ಸ್ವಾಮಿ ಜಟಾಂಗಿಯ ಕರುಣ ನೀವಿಬ್ಬರು" (i, ೧೫೭) ಎನ್ನುವಳು. ಇದಲ್ಲದೆ, ಬೇರೆಬೇರೆ ಸಂದರ್ಭಗಳಲ್ಲಿ ಕಾಟಣ್ಣ ನನ್ನು "ತಂದೆಗೆ ತಲೆಮಗ ಹಿರಿಯಾತ ಕಾಟಣ್ಣ" (i, ೧೩೨) ಎಂಬುದಾಗಿಯೂ, ಕುಮಾರ ರಾಮನನ್ನು "ಮುಕ್ಕಣ್ಣ ಶಿವನ ಜಟಾಂಗಿ ರಾಮೇಶನ ಅಕ್ಕರ ಪಿಂಡ ರಾಮುಗನು" (i, ೨೮೨), "ರಾಮಜಟಾಂಗಿ ದೇವರ ಪಿಂಡ ರಾಮುಗ" (iii, ೧೫) ಎಂಬುದಾಗಿಯೂ ನಿರ್ದೇಶಿಸಲಾಗಿದೆ.

(iii) ಕುಮಾರರಾಮನನ್ನು ಕುರಿತು "ಇವನೇ ಅರ್ಜುನರಾಯನಹುದು (i, ೨೫೫") "ಹಿಂದುಳುಗಾಂತ್ರ ಜನ್ಮಕೆ ರಾಮ ಅರ್ಜುನ (ii, ೬೫)" ಎಂಬುದಾಗಿ ಹೇಳಿದೆ.

(iv) ರತ್ನಾಜಿ ಕುಮಾರರಾಮನನ್ನು ಕಂಡಾಗ "ಚಿಕ್ಕಮ್ಮನಲ್ಲವೊ ನಿನಗೆ ನಾ ಸೋದರತ್ತೆಯ ಮಗಳು (iv, ೨೨೧)" ಎಂದು ತನ್ನ ಪರಿಚಯವನ್ನು ಹೇಳಿಕೊಳ್ಳುವಳು.

(v) ಕುಮಾರರಾಮನು ಹುಳಿಯಾರು ಮಾರಭೂಪಾಲನ ಮೇಲೆ ದಂಡೆತ್ತಿ ಹೋದ ಸಂದರ್ಭವನ್ನೂ ಬಾದೂರನು ಕುಮಾರರಾಮನನ್ನು ಮರೆಹೊಕ್ಕ ಸಂದರ್ಭವನ್ನೂ, ನಿರೂಪಿಸದೆ ಇದ್ದರೂ, ಈ ಎರಡು ಘಟನೆಗಳ ಸೂಚನೆಯೂ ಪ್ರಾಸಂಗಿಕವಾಗಿ ಕಂಡುಬರುತ್ತದೆ. (ಬಾದೂರ ಖಾನನೇ ಮೊದಲಾದವರು ಚೆಂಡಾಟಕ್ಕೆ ಬಂದು ಸೇರುವುದು iii, ೩೯–೪೧; ಬಾದೂರಖಾನನ

---

ಚನ್ನಿಗರಾಮನು ಜನ್ಮಜನ್ಮದೊಳೆನಗೆ ನನ್ನಿಯಿಂ ಪತಿಯಾಗಲೆಂದು ।
ಪನ್ನಗಧರನ ವರವ ಬೇಡಿ ಬಾಬಮ್ಮ ಚೆನ್ನೆ ಸಹಗಮನ ಮಾಡಿದಳು ॥ (xxxiv, ೩೪೧–೩೪೨)

1. ಪ್ರಕೃತ ಭಾಗಕ್ಕೆ ಸಂಬಂಧಿಸಿದಂತೆ ೮೮ನೆಯ ಪುಟದಲ್ಲಿ ಸೂಚಿಸಿರುವ xxii ಎಂಬ ಸಂಧಿಸಂಖ್ಯೆಯನ್ನು ಎಂಬುxxi ದಾಗಿ ಓದಿಕೊಳ್ಳಬೇಕಾಗಿ ವಿನಂತಿ.

ಯುದ್ಧ, vi, ೪೭-೬೬ ; ಹುಳಿಯಾರಿನಿಂದ ತಂದ ಗಿಳಿ ರಾಮನನ್ನು ಎಚ್ಚರಿಸುವುದು, iv, ೧೫೦-೧೬೫.)

(vi) ರತ್ನಾಜಿಯೇ ಮಾತಂಗಿಯಾಗಿ ಹುಟ್ಟಿದಳೆಂದೂ ಅವಳ ದೂತಿಯಾಗಿದ್ದ ಸಂಗಾಯಿಯೇ ಭಟ್ಟರ ಮಲ್ಲನಾಗಿ ಹುಟ್ಟಿದಳೆಂದೂ ಹೇಳಿದೆ (vi, ೧೯೦-೧೯೬). ರಾಮನ ಮರಣಕಾಲದಲ್ಲಿ ಈ ಭಟ್ಟರ ಮಲ್ಲನು ತನ್ನ ಪೂರ್ವವೃತ್ತಾಂತವನ್ನೂ ಚಲದ ಲಲನೆಯಾದ ರತ್ನಾಜಿ ಮಾತಂಗಿಯಾಗಿ ಹುಟ್ಟಿ ಬಂದಿರುವುದನ್ನೂ ತಿಳಿಸುವ ಸಂಗತಿಯೂ, ಕುಮಾರ ರಾಮನು ತನ್ನ ತಲೆಯನ್ನು ತಾನೇ ಕತ್ತರಿಸಿಕೊಡುವುದೂ ತುಂಬ ಸೋಜಿಗವಾಗಿವೆ (vii, ೪೦೫-೪೦೮).[1]

(vii) ಕುಮಾರರಾಮನ ರುಂಡವನ್ನು ಹರಿಹರ ಮತ್ತು ಬುಕ್ಕ ಎಂಬುವರು ಕಾಶಿಗೆ ತೆಗೆದುಕೊಂಡು ಹೋದರೆಂದೂ ಅಲ್ಲಿ ಅದು ಲಿಂಗವಾಗಿ ಪರಿಣಮಿಸಿತೆಂದೂ ಹೇಳಿದೆ.[2] (vii, ೪೪೯)

(viii) ಇವುಗಳಲ್ಲದೆ ಅನೇಕ ಸಣ್ಣ ಪುಟ್ಟ ಸಂಗತಿಗಳಲ್ಲಿಯೂ ವ್ಯತ್ಯಾಸಗಳುಂಟು. ಕಂಪಿಲನಿಗೆ ಬೈಚಪ್ಪನಂತೆಯೇ ಮಾವ ಮಲ್ಲಿಕರಾಜ, ಭಾವ ಭೈರವ, ಎಂಬುವರು ಮಂತ್ರಿಗಳಾಗಿದ್ದರು. ವೀರ ರುದ್ರನ ಆಸ್ಥಾನದಲ್ಲಿ ಮಾಧವರಾಯ, ಭೋಜರಾಯ, ಎಂಬ ಸಚಿವರೂ ಆತನ ಸೈನ್ಯದಲ್ಲಿ ಬಾಬನಾಯಕನೆಂಬ ಮಲ್ಲನೂ ಇದ್ದರೆಂದು ತಿಳಿದುಬರುತ್ತದೆ.[3]

ಈ ಪ್ರತಿ ಅನೇಕ ಘಟನೆಗಳನ್ನು ಸಂಕ್ಷಿಪ್ತವಾಗಿ ಸೂಚಿಸಿ ಮುಂದೆಸಾಗುತ್ತದೆ. ಈ ಅವಸರದಲ್ಲಿ ಒಂದೆರಡು ಮುಖ್ಯ ಘಟನೆಗಳು ತಪ್ಪಿ ಹೋಗಿರುವುದನ್ನು ಮೇಲೆ ಸೂಚಿಸಲಾಗಿದೆ. ಮುಖ್ಯವಾಗಿ ರತ್ನಾಜಿಯ ಪ್ರಕರಣದ ಕಥಾಭಾಗಕ್ಕೆ ಹೆಚ್ಚು ಮನ್ನಣೆಯೂ ಮಾತಂಗಿಯ ಹಟಸಾಧನೆಗೆ ಹೆಚ್ಚು ಮಹತ್ವವೂ ದೊರೆತಿವೆ.

## (5) "ಗಂ. ೫" ನೆಯ ಪ್ರತಿ:-

(i) ಈ ಪ್ರತಿ ಕುಮಾರರಾಮನ ತಾತನಾದ ಮುಮ್ಮಡಿ ಸಿಂಗನ ಸಂಗತಿಯಿಂದ ಮೊದಲಾಗುತ್ತದೆ. ಡಿಳ್ಳಿಯ ಸುಲ್ತಾನನು ದಂಡೆತ್ತಿ ಬಂದು, ದೇವಗಿರಿಯ ರಾಮದೇವರಾಯನನ್ನು

---

1. ಬಂದು ಭಟ್ಟರಮಲ್ಲನಂದಡ್ಡಬಿದ್ದನು ಮೂರು (?) ರಾಯರ ಗಂಡನೆಂದು ।
ಹಿಂದಳ ಸಂಗಿಯು ನಾನೆಂದು ನುಡಿದನು ಕಂದ ರಾಮಯ್ಯನ ಮುಂದೆ ॥
ಅಂದಿನ ರತ್ನಿಯು ಮಾತಂಗಿಯಿವಳೀಗ ಸಂದೇಹ ಬೇಡ ರಾಮಯ್ಯ ।
ಮುಂದಳ ಮಾತುಂಟು ಕೀರ್ತಿಯಿಂದಲಿ ಶಿರವ ತಂದೆವುಳುಹಿಕೊಂಡನರಿಯಾ ॥
ಪಂಥದಿಂದಲಿ ಮಾತಂಗಿ ಕೊಂದಳು ನಿನ್ನ ಕಂತುಸನ್ನಿಭ ಚನ್ನರಾಮ ।
ಖ್ಯಾತಿಯಿಂದಲಿ ನಿನ್ನ ಶಿರವ ಕೊಯ್ವೆನು ಈಗ ಭೀತಿಯ ಬಿಡು ಎನ್ನ ನೋಡು ॥
ನುಡಿದ ಮಾತು ಕೇಳಿ ಕಡುಗೊಳ್ಳಿ ರಾಮಯ್ಯ ಉಡಿಯ ಚೂರಿಯನು ತೆಕ್ಕೊಂಡು ।
ಕಡು ಬೇಗದಿಂ ತನ್ನ ಶಿರವರಿದಿತ್ತನು ದೃಢವ ನಾನೇನ ಬಣ್ಣಿಸುವೆ ॥ (vii, ೪೦೫_೪೦೮)

2. ಹರಿಹರ ಬುಕ್ಕನ ಕರಸಿದ ಬೇಗದಿ ಗರುವ ರಾಮಯ್ಯನ ತಲೆಯ ।
ಪರಿದು ಕಾಶಿಯ ಕ್ಷೇತ್ರಕೆ ಕೊಂಡು ಹೋಗೆಂದು ದೊರೆಯು ನೇಮಿಸಿ (ಸೆ?) ಬಂದರವರು (vii, ೪೪೯)

3. ಈ ಹಸ್ತಪ್ರತಿಯ ಕಥಾವಿವರಗಳನ್ನು ಶ್ರೀ. ಎಂ. ಎಚ್. ರಾಮಶರ್ಮ ಅವರ ಲೇಖನದಲ್ಲಿ ನೋಡಬಹುದು. (The exploits of king Kampila and Kumara Ramanatha, QJMS, Vol. xx, No. 2, Supplement, Oct. 1929.)

ಸೋಲಿಸಲು, ಆತನ ಆಶ್ರಯದಲ್ಲಿದ್ದ ಮುಮ್ಮಡಿಸಿಂಗನು ಮಲ್ಲಿಪಲ್ಲಿ ದೇಶಕ್ಕೆ ಬಂದು, ಅಲ್ಲಿ ನೆಲಸಿ, ಕಾಲಕ್ರಮೇಣ ಪ್ರಬಲನಾಗಿ ರಾಜನಾದನೆಂದು ವರ್ಣಿತವಾಗಿದೆ. (ii, ೭–೩೧)

(ii) ಕಾಟಣ್ಣನು ಕಂಪಿಲ ಮತ್ತು ಹರಿಯಮ್ಮನ ಸಾಕುಮಗನೆಂದು ತಿಳಿದು ಬರುತ್ತದೆ.[1] (ii, ೩೬–೪೪).

(iii) ಕಂಪಿಲನು ಹೊಸಮಲೆ ದುರ್ಗವನ್ನು ಕಟ್ಟಿಸಿದ ವಿವರವಿದೆ. (ii, ೪೩–೫೧)

(iv) ಜಟ್ಟಂಗಿ ರಾಮನಾಥನ ಅಂಕಿತದಲ್ಲಿ ಕುಮಾರರಾಮನಿಗೆ ನಾಮಕರಣವಾಗುತ್ತದೆ.[2] (iii, ೧೭–೨೨)

(v) ಕಂಪಿಲನು ಹೊಸಮಲೆಯಲ್ಲಿ ಸುಪ್ರತಿಷ್ಠಿತನಾದ ಮೇಲೆ, ಮಂತ್ರಿಯಾದ ಬೈಚಪ್ಪನೇ ನೆರೆಹೊರೆಯ ರಾಜ್ಯಗಳ ಮೇಲೆ, ದಂಡೆತ್ತಿ ಹೋಗಿ ಗೆದ್ದು ಬರುತ್ತಾನೆ. (iii, ೭೬–೯೨)

(vi) ರಾಮನು ಗುತ್ತಿಯ ಜಗತಾಪಿಯನ್ನು ಗೆಲ್ಲುತ್ತಾನೆ. (iv, ೧–೮೨)

(vii) ಹುಳಿಯಾರು ಮಾರಭೂಪಾಲನ ಘಟನೆ ಬರದಿದ್ದರೂ, ಅಲ್ಲಿಂದ ತಂದ ಗಿಳಿ ರತ್ನಾಜಿಯ ಮನೆ ಪ್ರವೇಶಿಸುವ ರಾಮನನ್ನು ಎಚ್ಚರಿಸುವ ಸಂಗತಿ ಸೂಚಿತವಾಗಿದೆ. (x, ೬೨–೭೦)

(viii) ಬಾದೂರನ ಪಲಾಯನದ ಘಟನೆ ನಿರೂಪಿತವಾಗದಿದ್ದರೂ, ಆತನು ಬಂದು ರಾಮನಲ್ಲಿ ನೆಲಸಿದ್ದರಿಂದಲೇ ನೇಮಿ ದಂಡೆತ್ತಿ ಬಂದನೆಂಬುದು ಸ್ಪಷ್ಟವಾಗಿದೆ. (xiii, ೧೧೫)

(ix) ಕ್ರುದ್ಧಳಾದ ರತ್ನಾಜಿ ಆತ್ಮಹತ್ಯ ಮಾಡಿಕೊಳ್ಳುವುದಕ್ಕೆ ಮುಂಚೆ, ಕಂಪಿಲನನ್ನು ನಿಂದಿಸಿ, ತಾನು ಮತ್ತೆ ಹುಟ್ಟಿ ಬಂದು ರಾಮನ ಮೇಲೆ ಸೇಡು ತೀರಿಸಿಕೊಳ್ಳುವುದಾಗಿ ಶಪಥ ಮಾಡುವಳು.[3] (xiv, ೧೬೩–೧೮೨)

(x) ರೂಪಿದೇವಯ್ಯನ ಪ್ರಸಂಗದೊಂದಿಗೆ (xv, ೨೨೫–೨೪೩) ಪ್ರತಿ ತ್ರುಟಿತವಾಗಿ ಅಪೂರ್ಣವಾಗಿದೆ.

---

1. ಕಂದನ ನನುಗೆ ಕೊಡೆಂದಾಳು ಹರಿಯಮ್ಮ ತಂದೆತಾಯನೊಡಂಬಡಿಸಿ |
ಒಂದೊಂದು ಪರಿಯ ದ್ರವ್ಯವನಿತ್ತು ತಕ್ಕೊಂಡು ಇಂದುಮುಖಿಯು ಕಳುಹಿದಳು ||
ಚೆಲುವ ಕಾಟನ ಹರಿಯಮ್ಮ ಸಾಕುದ ಕೇಳಿ ಸುಲಲಿತ ಕಂಪಿಲಿ ಬಂದು |
ಒಲಿದು ಆತನ ವಿವರ ಕೇಳಿ ಆ ಕ್ಷಣ ನಲಿಸಿದುದ ಸಾಗಿಸಿದನು (?) || (ii, ೪೧, ೪೪)

2. ಇನ ಬರೆ ತಮದ ತಿಂಥಿಣಿ ಹರಿವಂದದಿ ಮನಸಿಜ ಸಮ ರಾಮನಾಥ |
ಜನಿಸಲು ಭೂಮಿರಾಯರ ಹೃದಯವು ಎಲ್ಲ ತನತನಗೊಡೆದು ಜರ್ಝರಿಸೆ ||
ಮನಸಿಜ ಸಮರೂಪ ರಾಮನುದಯವಾಗೆ ಜನಕ ಕಂಪಿಲರಾಯ ಕೇಳಿ |
ಕನಕ ಭೂದಾನ ಗೋದಾಗ ಕನ್ಯಾದಾನ ಸಾನುರಾಗದಿಂದೊಲಿದಿತ್ತ ||
ಇರಲು ನಾಮಕರಣವನು ಮಾಡಿದರಾಗ ನಾರಿಯರೆಲ್ಲ ಜೋಯೆನುತ |
ಕಾರುಣ್ಯನಿಧಿ ಜಟಂಗಿಯ ರಾಮನಾಥನ ಧೀರನ ತುಂಬಿ ತೊಟ್ಟಿಲವ || (iii, ೧೭, ೧೮,೨೨)

3. ಲಲನೆ ಕೇಳೆಲೆ ಸಂಗಿ ಸಲೆ ಸತ್ತು ಹುಟ್ಟನಾ (ದ ?) ಚಲದಂಕ ರಾಮನ ನಾನು |
ಕೊಲಿಸದೆ ಬಿಟ್ಟನಾದರೆ ಕೇಳೆಲೆ ಸಂಗಿ ಮೊಲೆಯಲ್ಲ ಇವು ಎಕ್ಕೆಕಾಯಿ || (xiv, ೧೮೦)

ಈ ಪ್ರತಿಯ ಕಥಾಮುಖ ತುಂಬ ಗಮನಾರ್ಹವಾದುದು. ಕುಮಾರರಾಮನನ್ನು ಕುರಿತ ಅನೇಕ ಕೈಫಿಯತ್ತುಗಳು ಗಂಗನ ಈ ಪ್ರತಿಯನ್ನು ಹೋಲುತ್ತವೆ. ಮದರಾಸಿನ ಪ್ರಾಚ್ಯ ಪುಸ್ತಕಭಂಡಾರದಲ್ಲಿರುವ ಡಿ. ೯೧೧, ಡಿ. ೯೧೨ ನೆಯ ಸಂಖ್ಯೆಯ ಪ್ರತಿಗಳು ಬಹುಮಟ್ಟಿಗೆ ಇದನ್ನೇ ಹೋಲುತ್ತವೆ. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿರುವ ೬೩೭ ನೆಯ ಸಂಖ್ಯೆಯ ಪ್ರತಿಯೂ ಸಹ ಇಲ್ಲಿನ ಕಥಾಮುಖ ಮತ್ತು ಇತರ ವಿವರಗಳನ್ನು ಹೋಲುತ್ತದೆ. ಆದ್ದರಿಂದ ಈ ಪ್ರತಿಯ ಪಾಠ ಸಾಕಾದಷ್ಟು ಪ್ರಚಾರದಲ್ಲಿತ್ತೆಂದು ಊಹಿಸಬಹುದು.

**(6) ಮತ್ತು (7) "ಗಂ. ೬" ಮತ್ತು "ಗಂ. ೭" ನೆಯ ಪ್ರತಿಗಳು :—**

ಈ ಎರಡು ಪ್ರತಿಗಳೂ ರತ್ನಾಜಿಯ ಪ್ರಸಂಗವನ್ನು ಮಾತ್ರ ಕುರಿತುದಾಗಿವೆ. ಇವು ಬಹುಮಟ್ಟಿಗೆ ಪರಸ್ಪರ ಹೋಲುತ್ತವೆ.

## ವರ್ಗೀಕರಣ

ಮೇಲೆ ನಿರೂಪಿಸಿರುವ ಕಥಾವ್ಯತ್ಯಾಸಗಳನ್ನೂ, ಇತರ ಪಾಠಭೇದಗಳನ್ನೂ ಗಮನಿಸಿದರೆ ಗಂಗನ ಕೃತಿ ಒಂದಲ್ಲ ಒಂದು ಬಗೆಯಾಗಿ ಕಾಲಕಾಲಕ್ಕೆ ಬದಲಾಯಿಸುತ್ತ ಬೆಳೆದಿದೆಯೆನ್ನುವುದು ಸ್ಪಷ್ಟವಾಗುತ್ತದೆ. ಪ್ರಕೃತದಲ್ಲಿ, ಅದರ ಮೂಲಸ್ವರೂಪ ಹೇಗಿರಬಹುದು ಎಂದು ನಿಶ್ಚಯಿಸಬೇಕಾದರೆ ಆಧುನಿಕ ಗ್ರಂಥ ಸಂಪಾದನೆಯ ಶಾಸ್ತ್ರಕ್ಕೆ ಅನುಸಾರವಾಗಿ ಎಲ್ಲ ಪ್ರತಿಗಳಲ್ಲಿಯೂ ಕಂಡುಬರುವ ಪದ್ಯಗಳನ್ನೂ ಅವುಗಳ ಪಾಠಾಂತರಗಳನ್ನೂ ಗಮನಿಸಿ ಪುನರ್ರಚಿಸಬೇಕು. ಆದರೆ ಈ ಕಾರ್ಯ ಪ್ರಕೃತ ಪ್ರಬಂಧದ ಪರಿಮಿತಿಗೆ ಮೀರಿದುದಾಗಿರುವುದರಿಂದ, ಇಲ್ಲಿ ವಿದಿತವಾಗುವ ಕಥಾವ್ಯತ್ಯಾಸಗಳನ್ನು ಮಾತ್ರವೇ ಆಧಾರವಾಗಿಟ್ಟುಕೊಂಡು ಈ ಪ್ರತಿಗಳನ್ನು ವರ್ಗೀಕರಿಸಲೂ, ಮುಖ್ಯ ಕಥಾಭಾಗವನ್ನು ಮಾತ್ರ ಸ್ಥೂಲವಾಗಿ ಪುನರ್ರಚಿಸಲೂ ಪ್ರಯತ್ನಿಸಲಾಗಿದೆ.[1] ಗಂಗನಲ್ಲಿ ಕಂಡುಬರುವ ಈ ಕಥಾಂತರಗಳನ್ನು ಸೂಚಿಸುವ ಒಂದು ಪಟ್ಟಿಯನ್ನು ಅನುಬಂಧದಲ್ಲಿ ಕೊಟ್ಟಿದೆ.[2]

ಬೇರೆ ಬೇರೆ ಪ್ರತಿಗಳಲ್ಲಿ ಕಂಡುಬರುವ ಕಥೆಯ ಮಾರ್ಪಾಡುಗಳನ್ನು ಮುಖ್ಯವಾಗಿ ಮೂರು ಗುಂಪುಗಳಾಗಿ ವಿಂಗಡಿಸಬಹುದು:–

**(1) ಘಟನೆಗಳ ಸ್ಥಳಪಲ್ಲಟ :—**

ಕುಮಾರರಾಮನ ಕಥೆಯ ಪೂರ್ವಾರ್ಧದಲ್ಲಿ ಬರುವ ಹುಳಿಯಾರು ಮಾರಭೂಪಾಲನ ಯುದ್ಧ, ಬಲ್ಲಾಳನ ಕಾಳಗ, ನೇಮಿಯ ಮೊದಲನೆಯ ಯುದ್ಧ ಮುಂತಾದ ಸಂಗತಿಗಳು ಒಂದೇ ಕ್ರಮವಾಗಿಲ್ಲ. "ಗಂ. ೧" ರಲ್ಲಿ ಇವು ಮೊದಲನೆಯ ಸಂಧಿಯಲ್ಲಿಯೇ ಬರುತ್ತವೆ.

---

1. ಈ ಸಂದರ್ಭದಲ್ಲಿ, ಎಫ್. ಎಜರ್ಟನ್ ಅವರ "The Pancatantra Reconstructed" ಮತ್ತು "Vikrama's Adventures", ಡಾ॥ ಎಂ. ಬಿ. ಎಮೆನು ಅವರ Jambhaladatta's Version of the Vetalapancavinsati", ಶ್ರೀಯುತರುಗಳಾದ ಎಸ್. ಎಂ. ಕತ್ರೆ, ಎಂ.ಎ., ಪಿಎಚ್.ಡಿ., ಪಿ. ಕೆ. ಗೋಡೆ, ಎಂ.ಎ., ಅವರ "Introduction to Indian Textual Criticism" ಎಂಬ ಗ್ರಂಥಗಳಿಂದ ಉಪಯುಕ್ತವಾದ ಸೂಚನೆಗಳನ್ನು ಸ್ವೀಕರಿಸಲಾಗಿದೆ.
2. ಅನುಬಂಧ ೨.

ಬಲ್ಲಾಳನ ಯುದ್ಧದ ಅನಂತರ ಹುಳಿಯಾರಿನ ಪ್ರಸಂಗವೂ, ಅನಂತರ ಬಾದೂರಖಾನನ ಪ್ರಕರಣವನ್ನು ಅನುಸರಿಸಿ ನೇಮಿಯ ಮೊದಲನೆಯ ಕಾಳಗವೂ ಬರುತ್ತದೆ. "ಗಂ. ೨" ಮತ್ತು "ಗಂ. ೩"ರಲ್ಲಿ ನೇಮಿಯ ಸೋಲಾಗಲು ಅವನು ಬಲ್ಲಾಳನನ್ನು ಎತ್ತಿಕಟ್ಟಿದನೆಂದೂ ಹೇಳಿದೆ. ಹುಳಿಯಾರು ಮಾರಭೂಪಾಲನ ಪ್ರಸಂಗ ಬೊಲ್ಲನ ಸಂಗತಿಯಾದ ಬಳಿಕ ಚಿತ್ರಿತವಾಗಿದೆ. "ಗಂ. ೫" ರಲ್ಲಿ ಬಲ್ಲಾಳನ ಪರಾಜಯದ ವಿಷಯ ಮೂರನೆಯ ಸಂಧಿಯಲ್ಲಿಯೇ ಸೂಚಿತವಾಗಿದೆ.

## (2) ಕಥಾಸಂಕ್ಷೇಪ :—

ಒಟ್ಟು ಕೃತಿಯಲ್ಲಿಯೇ ರತ್ನಾಜಿಯ ಪ್ರಕರಣವನ್ನು ಮಾತ್ರವೇ ಉಳಿಸಿಕೊಂಡು ಸಿದ್ಧಪಡಿಸಿರುವ ಉದಾಹರಣೆಯನ್ನು "ಗಂ. ೬" ಮತ್ತು "ಗಂ. ೭" ರಲ್ಲಿ ಕಾಣಬಹುದು. ಇದಲ್ಲದೆ, ಇತರ ಪ್ರತಿಗಳಲ್ಲಿ ಕೆಲವು ಸನ್ನಿವೇಶಗಳನ್ನು ಸೂಚಿಸಿ ಮುಂದೆ ಸಾಗಿರುವುದುಂಟು. "ಗಂ. ೧" ರಲ್ಲಿ ಪ್ರಾರಂಭದ ಸಂಧಿ ಇದಕ್ಕೆ ನಿದರ್ಶನ. "ಗಂ. ೨" ರಲ್ಲಿ ಶೂಲದ ಹಬ್ಬವನ್ನು ಬೇರೊಂದು ಸಂದರ್ಭದ ಮೂಲಕ ಊಹಿಸಿಕೊಳ್ಳಬೇಕೇ ಹೊರತು ಅದರ ವಿವರಗಳಿಲ್ಲ. "ಗಂ. ೪" ರಲ್ಲಿಯೂ ಈ ಹಬ್ಬದ ವಿವರಣೆಗಳಿಲ್ಲ. "ಗಂ. ೧" ರಲ್ಲಿ ಜಗತಾಪಿಯ ಪ್ರಕರಣ ಹೀಗೆಯೇ ಪ್ರಾರಂಭದಲ್ಲಿ ಉಕ್ತವಾಗದೆ, ಹರಿಯಾಲದೇವಿಯ ಹಿತೋಕ್ತಿಗಳಲ್ಲಿ ಉಲ್ಲೇಖಿಸಲಾಗಿದೆ. "ಗಂ. ೫" ರಲ್ಲಿ ಬಾದೂರನ ಪಲಾಯನದ ವಿವರವೇ ಕಂಡುಬರುವುದಿಲ್ಲ. ಆದರೆ, ಈ ಸಂಗತಿಗಳು ಮುಖ್ಯ ಕಥಾಸೂತ್ರಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧಿಸಿರುವುದರಿಂದ ಇತರ ವಿವರಗಳು ತಪ್ಪಿದರೂ ಪರೋಕ್ಷವಾಗಿ ಇವುಗಳ ಸೂಚನೆಗಳು ಕಂಡುಬರುತ್ತವೆ.

## (3) ಹೊಸ ಸನ್ನಿವೇಶಗಳ ಕಲ್ಪನೆ :-

ಈ ವಿಭಾಗಕ್ಕೆ ಸಂಬಂಧಿಸಿದಂತೆ ಹಲವಾರು ಘಟನೆಗಳು ವಿದಿತವಾಗುತ್ತವೆ. "ಗಂ. ೧" ರಲ್ಲಿ ಚಿತ್ರಿತವಾಗಿರುವ ಶೂಲದ ಹಬ್ಬದ ವಿವರಗಳು ಬೇರೆಲ್ಲಿಯೂ ಕಂಡುಬರುವುದಿಲ್ಲ. "ಗಂ.೨", "ಗಂ.೩" ಮತ್ತು "ಗಂ.೪" ರಲ್ಲಿ ಸುಲ್ತಾನನ ಪಾದುಕೆಯ ಪ್ರಸಂಗ ವಿಶಿಷ್ಟವಾದ ನಿರೂಪಣೆ. "ಗಂ. ೨" ರಲ್ಲಿ ಕಂಡುಬರುವ ರತ್ನಿ ಮತ್ತು ಕುಮಾರರಾಮನ ಜನ್ಮ ನಿಮಿತ್ತದ ದೇವಲೋಕದ ಪೀಠಿಕೆ (ಮದರಾಸಿನ ಡಿ. ೯೨೦ ನೆಯ ಸಂಖ್ಯೆಯ ಪ್ರತಿಯನ್ನು ಬಿಟ್ಟು) ಬೇರೆಲ್ಲಿಯೂ ಕಂಡುಬಂದಿಲ್ಲ. ವಂಶಾವಳಿಯ ವಿವರಗಳನ್ನು ಬೆಳೆಸುವುದರಲ್ಲಿ "ಗಂ. ೨"ರದು ಒಂದು ತೆರನಾದರೆ "ಗಂ. ೫" ರದು ಒಂದು ಬಗೆ. ರತ್ನಿಯೇ ಮಾತಂಗಿಯೆಂಬುದಾಗಿ "ಗಂ. ೪" ರಲ್ಲಿ ಸ್ಪಷ್ಟಪಡಿಸಿರುವಂತೆಯೇ "ಗಂ. ೫" ರಲ್ಲಿ ಆಕೆ ಕುಮಾರರಾಮನ ಮೇಲೆ ಛಲ ತೀರಿಸಿಕೊಳ್ಳಲು ಪುನಃ ಜನ್ಮವೆತ್ತಿ ಬರುವುದಾಗಿ ಶಪಥ ಮಾಡುತ್ತಾಳೆ. ರೂಪಿದೇವಯ್ಯನೆಂಬುವನು ಡಿಳ್ಳಿಯಿಂದ ಕುಮಾರರಾಮನ ರುಂಡವನ್ನು ತರುವ ಪ್ರಕರಣ "ಗಂ. ೧"ರಲ್ಲಿ ಕಾಣುವುದಿಲ್ಲ. "ಗಂ. ೫"ರಲ್ಲಿ ಬರುವ ಈ ಘಟನೆ "ಗಂ. ೩" ರಲ್ಲಿ ಮತ್ತಷ್ಟು ವಿವರವಾಗಿ ಬರುವುದಲ್ಲದೆ, ರಾಮನು ಈಶ್ವರಾನುಗ್ರಹದಿಂದ ಮತ್ತೆ ಭೂಲೋಕಕ್ಕೆ ಬಂದು, ಬಾಬಮ್ಮನನ್ನು ಮದುವೆಯಾಗಿ, ಶಿಂಗಣ್ಣನೆಂಬ ಮಗನನ್ನು ಪಡೆದು, ಅವನಿಗೆ ಪಟ್ಟ ಕಟ್ಟಿ ಮತ್ತೆ ಕೈಲಾಸಕ್ಕೆ ತೆರಳಿದನೆನ್ನುವವರೆಗೆ ಕಥೆ ಬೆಳೆದಿರುತ್ತದೆ.

ಈ ಮೇಲ್ಕಂಡ ಕಥಾವ್ಯತ್ಯಾಸಗಳ ಆಧಾರದ ಮೇಲೆ ಗಂಗನ ಪ್ರತಿಗಳನ್ನು ಸ್ಥೂಲವಾಗಿ ಕೆಳಗೆ ಕಂಡಂತೆ ಮೂರು ವಿಭಾಗಗಳಾಗಿ ವರ್ಗೀಕರಿಸಬಹುದು:–

(i) **"ಗಂ. ೧"** :– ಈ ಪ್ರತಿಯನ್ನು ಹೋಲುವ ಬೇರೊಂದು ಪ್ರತಿ ಈವರೆಗೆ ನನ್ನ ಗಮನಕ್ಕೆ ಬಂದಿಲ್ಲ. ಆದ್ದರಿಂದ ಇದನ್ನು ಪ್ರತ್ಯೇಕವಾಗಿ ಇಟ್ಟುಕೊಳ್ಳಬೇಕಾಗುತ್ತದೆ.

(ii) **"ಗಂ. ೨" "ಗಂ. ೩"** ಮತ್ತು **"ಗಂ. ೪"** :– ಈ ಮೂರು ಪ್ರತಿಗಳಲ್ಲಿಯೂ ಪಾದುಕೆಯ ಪ್ರಸಂಗ ಸಮಾನವಾಗಿ ಕಂಡುಬರುತ್ತದೆ. ಅಲ್ಲದೆ "ಗಂ. ೨" ಮತ್ತು "ಗಂ. ೩" ರಲ್ಲಿ ಅನೇಕ ಪದ್ಯಸಾಮ್ಯಗಳೂ ವಿದಿತವಾಗುತ್ತವೆ.[1] "ಗಂ. ೨" ರ ಪ್ರಾರಂಭದಲ್ಲಿ ಬರುವ ವಂಶಾವಳಿಯ ವಿವರ ಮದರಾಸಿನ ಒಂದು ಪ್ರತಿಯಲ್ಲಿಯೂ (ಡಿ. ೯೨೦) ಕಂಡು ಬರುವುದರಿಂದ ಈ ನಿರೂಪಣೆಯೇ ಪ್ರತ್ಯೇಕವಾದ ಒಂದು ಪ್ರಭೇದಕ್ಕೆ ಸೇರಿದುದೆಂದು ಊಹಿಸ ಬಹುದು. [ಪ್ರಕೃತ ಕೃತಿ ಗಾತ್ರದಲ್ಲಿ ಚಿಕ್ಕದಾಗಿರುವುದರಿಂದ "ಸಂಪ್ರದಾಯ" (Recension) ಎಂಬ ಮಾತಿಗೆ ಬದಲಾಗಿ "ಪ್ರಭೇದ" ಎಂಬ ಮಾತನ್ನು ಇಲ್ಲಿ ಬಳಸಿದೆ.] ಪರಸ್ಪರ ಸಂಬಂಧ ವಿರುವ ಈ ಮೂರು ಪ್ರತಿಗಳನ್ನು ಒಂದು ಗುಂಪಿಗೆ ಸೇರಿಸಬಹುದು.

(iii) **"ಗಂ. ೫"**:– ಈ ಪ್ರತಿಯ ಪ್ರಾರಂಭದ ಕಥಾಭಾಗ ವಿಶಿಷ್ಟವಾಗಿದೆ. ಉಳಿದ ಅನೇಕ ಘಟನೆಗಳು ಇತರ ಪ್ರತಿಗಳಲ್ಲಿರುವಂತೆ ಇಲ್ಲ. ಅಲ್ಲದೆ, ಈ ಪ್ರತಿಯನ್ನು ಹೋಲುವ ಪ್ರತಿಗಳು ಮದರಾಸಿನಲ್ಲಿಯೂ, ಧಾರವಾಡದಲ್ಲಿಯೂ ಇರುವುದರಿಂದ ಇದನ್ನು ಪ್ರತ್ಯೇಕವಾದ ಮತ್ತೊಂದು ಪ್ರಭೇದಕ್ಕೆ ಸೇರಿದ್ದೆಂದು ಗ್ರಹಿಸಬಹುದು.

(iii) **"ಗಂ. ೬"** ಮತ್ತು **"ಗಂ. ೭"**:– ಇವುಗಳು ಪರಸ್ಪರ ಹೋಲುವಂತಿದ್ದು, ಗಂಗನ ಕೃತಿಯ ಜನಪ್ರಿಯವಾದ ಭಾಗದ ಪ್ರತೀಕಗಳಂತಿವೆ.

ಈ ಪ್ರಭೇದಗಳನ್ನು ಹೀಗೆ ಸೂಚಿಸಬಹುದು :–




1. ಅನುಬಂಧ ೧ನ್ನು ನೋಡಿ.

* ಈ ಪ್ರತಿಯಲ್ಲಿ ಘಟನೆಯ ಸಾದೃಶ್ಯವನ್ನು ಮಾತ್ರ ಗಮನಿಸಿದೆ. ಉಳಿದ ಪ್ರತಿಗಳಲ್ಲಿ ಪದ್ಯಸಾದೃಶ್ಯವನ್ನೂ ಸಹ ನೋಡಿದೆ.

**ಗಂಗನ ಎಲ್ಲ ಪ್ರತಿಗಳಲ್ಲಿಯೂ ಕಂಡುಬರುವ ಕಥಾಂಶಗಳು :**

1. ಕುಮಾರರಾಮನು ಜಟ್ಟಂಗಿ ರಾಮನ ಅನುಗ್ರಹದಿಂದ ಹುಟ್ಟಿದವನು.[1] (ಪ್ರಾಸಂಗಿಕವಾಗಿ ಅರ್ಜುನಾಂಶನೆಂಬ ವಿಚಾರ ಬರುತ್ತದೆ.) ಈತನ ತಾತ ಮುಮ್ಮಡಿಸಿಂಗ; ತಂದೆ ಕಂಪಿಲರಾಯ; ತಾಯಿ ಹರಿಯಾಲದೇವಿ (ಹರಿಯಮ್ಮ). ಕಾಟಣ್ಣ, ಮಾರಮ್ಮ ಮತ್ತು ಸಿಂಗಮ್ಮ ಮೊದಲಾದವರು ಈತನ ಬಂಧುಗಳು.

2. ಕುಮಾರರಾಮನು ಚಿಕ್ಕಂದಿನಲ್ಲಿಯೇ ಗುತ್ತಿಯ ಜಗತಾಪಿ ಮತ್ತು ಹುಳಿಯಾರು ಮಾರಭೂಪಾಲರನ್ನು ಗೆದ್ದ ಧೀರ.

3. ವೀರರುದ್ರನ ಬಳಿಯಲ್ಲಿದ್ದ ಬೊಲ್ಲನೆಂಬ ಕುದುರೆಯನ್ನು, ಗುಂಡುಬ್ರಹ್ಮಯ್ಯನ ಕೃಪೆಯಿಂದಲೂ, ದೇವಿಶೆಟ್ಟಿ ಲಿಂಗನ ಸ್ನೇಹದಿಂದಲೂ ಸಂಪಾದಿಸಿಕೊಂಡು ಬರುತ್ತಾನೆ.

4. ವೀರಬಲ್ಲಾಳನಿಗೂ ಕುಮಾರರಾಮನಿಗೂ ಒಂದಲ್ಲ ಒಂದು ಕಾರಣದಿಂದ ಯುದ್ಧ ನಡೆಯುತ್ತದೆ.

5. ಕಂಪಿಲನು ಬಾದೂರನಿಗೆ ಆಶ್ರಯವಿತ್ತುದೇ ಸುಲ್ತಾನನ ಪಕ್ಷದವರಿಗೂ ಕುಮಾರ ರಾಮನಿಗೂ ಮೇಲಿಂದ ಮೇಲೆ ಯುದ್ಧಗಳಾಗಲು ಮುಖ್ಯ ಕಾರಣ. ಈ ಸಂದರ್ಭದಲ್ಲಿ ತೆಲುಗರ ದ್ರೋಹದಿಂದ ಕುಮಾರರಾಮನಿಗೆ ವಿಪತ್ತು ಸಂಭವಿಸುತ್ತದೆ.

6. ಮಲತಾಯಿಯಾದ ರತ್ನಾಜಿಯ ದೆಸೆಯಿಂದ ಕುಮಾರರಾಮನು ಅಪವಾದಕ್ಕೆ ಗುರಿಯಾಗಿ, ಅಜ್ಞಾತವಾಸವನ್ನು ಅನುಭವಿಸಬೇಕಾಗುತ್ತದೆ. ಬೈಚಪ್ಪನ ಬುದ್ಧಿವಂತಿಕೆಯಿಂದ ಅಪಖ್ಯಾತಿಯನ್ನು ಪರಿಹರಿಸಿಕೊಂಡು ವೀರಮರಣವನ್ನು ಪಡೆಯುತ್ತಾನೆ.

7. ಕುಮಾರರಾಮನನ್ನು ಕೈ ಹಿಡಿಯಬೇಕೆಂದು ಹಂಬಲಿಸಿದ ಬಾಬಮ್ಮ ಕಡೆಗೂ ಹತಾಶಳಾಗುತ್ತಾಳೆ.

8. ಕುಮಾರರಾಮನಿಗೆ ಮಾತಂಗಿಯ ಪ್ರಸಂಗದಲ್ಲಿ ಮರಣ ಸಂಭವಿಸುತ್ತದೆ.

9. ಜಟ್ಟಂಗಿ ರಾಮನ ವರಪ್ರಸಾದದಿಂದ ಹುಟ್ಟಿದ ಈತನು ಸತ್ತ ಬಳಿಕ ಲಿಂಗಾಕೃತಿ ಯಾಗುತ್ತಾನೆ.

ಪ್ರಕೃತದಲ್ಲಿ ಗಂಗನ ಕೃತಿಯ ವಸ್ತುವನ್ನು ಪುನರ್ರಚಿಸಲು ಈ ಸಮಾನಾಂಶಗಳು ತುಂಬ ನೆರವಾಗುತ್ತವೆ. ಈ ಕಥೆಗೆ ಸಂಬಂಧಿಸಿದ ಈ ಮುಖ್ಯಾಂಶಗಳು ಹಾಗೆಯೇ ಉಳಿದು ಬಂದಿರುತ್ತವೆ. ಈ ಪ್ರಮುಖ ವಾದ ಘಟನೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಮುಂದೆ ಕಥಾಸಂಗ್ರಹವನ್ನು ಮಾಡಲಾಗಿದೆ.[2]

ವಿಶೇಷ ಸಂದರ್ಭಗಳಾದ ವಂಶಾವಳಿಯ ವಿವರ ಮತ್ತು ಪಾದುಕೆಯ ಪ್ರಸಂಗಗಳನ್ನು ಪೂರ್ತಿಯಾಗಿ ಕೈಬಿಟ್ಟಿಲ್ಲ. ರಾಮದೇವರಾಯನಿಗೆ ಸಂಬಂಧಿಸಿದ ಕಥಾನಿರೂಪಣೆ ಅನೇಕ ಪ್ರತಿಗಳಲ್ಲಿಯೂ ಕೈಫಿಯತ್ತು ಗಳಲ್ಲಿಯೂ ಕಂಡುಬರುವುದರಿಂದ ಅದನ್ನು ಉಳಿಸಿಕೊಳ್ಳಲಾಗಿದೆ. ಸುಲ್ತಾನನ ಪಾದುಕೆಯ ಪ್ರಸಂಗವನ್ನು ಕಾವ್ಯದಲ್ಲಿ ಹೇಗೆ ಹೊಂದಿಸಲು ಪ್ರಯತ್ನಿಸಿದ್ದಾರೆ ಎನ್ನುವುದನ್ನು ತೋರಿಸುವ ಸಲುವಾಗಿ ಅದನ್ನು ಸಂಗ್ರಹ ವಾಗಿ ಕಂಸದಲ್ಲಿ ಸೂಚಿಸಲಾಗಿದೆ.

---

1. "ಸುಮನ (ಸೋಮನ ?) ಸೂಡಿದ ಪರಮ ಕಪರ್ದಿಯ ಹೇಮಾವತಿಯ ವಲ್ಲಭನ ರಾಮಜಟಂಗಿಯ ದೇವರ ವರಪುತ್ರ ರಾಮನ ಕಥೆಯ ಪೇಳುವೆನು" (ಧಾ.ಪ್ರ., ಸಂ. ೬೩೭, viii, ೧೦.)

2. ಪಾಂಚಾಳಗಂಗನ ಕೃತಿಯ ಪಾಠ ಅನಿಶ್ಚಯವಾಗಿರುವುದರಿಂದ ಕಥಾಸಂಗ್ರಹದಲ್ಲಿ ಪದ್ಯಭಾಗಗಳನ್ನು ಉದಾಹರಿಸದೆ ಕೇವಲ ಕಥಾವಸ್ತುವನ್ನು ಕೊಡಲಾಗಿದೆ.

# ಕಥಾಸಂಗ್ರಹ

## ಪೀಠಿಕೆ

ಮುಮ್ಮಡಿ ಸಿಂಗನು ದಾಯಾದಿಗಳ ಹಿಂಸೆಯನ್ನು ತಡೆಯಲಾರದೆ, ದೇವಗಿರಿಯ ರಾಮದೇವರಾಯನ ಆಶ್ರಯದಲ್ಲಿ ಬಂದು ನೆಲಸಿದನು. ಆ ಕಾಲದಲ್ಲಿ ರಾಮದೇವರಾಯನು ದಕ್ಷಿಣದಲ್ಲಿ ಅತ್ಯಂತ ಪರಾಕ್ರಮಶಾಲಿಯಾದ ಮಹಾರಾಜನೆನಿಸಿದ್ದನು. ಆತನನ್ನು ಗೆಲ್ಲಬೇಕೆಂದು ಡಿಳ್ಳಿಯ ಸುಲ್ತಾನನಿಗೆ ಆಸೆಯಾಯಿತು. ಅದೇ ಮೇರೆಗೆ ಆತನು ದಂಡೆತ್ತಿ ಬಂದು ರಾಮದೇವರಾಯನನ್ನೂ ಇತರ ಒಂಬತ್ತು ಮಂದಿಯನ್ನೂ ಕೈಸೆರೆ ಹಿಡಿದನು. ಅಷ್ಟೇ ಅಲ್ಲದೆ, ಮುಂದಕ್ಕೂ ಹೊರಟು ರಾಮೇಶ್ವರದವರೆಗೂ ದಂಡಯಾತ್ರೆ ನಡೆಸಿ, ಅಲ್ಲಿ ತನ್ನ ಕತ್ತಿಯನ್ನು ತೊಳೆದುಕೊಂಡು, ಮಧುರೆಯನ್ನು ನಿರ್ಮಿಸಿ, ಡಿಳ್ಳಿಗೆ ಹಿಂತಿರುಗಿದನು. ಈ ಕಾರಣದಿಂದ ಮುಮ್ಮಡಿ ಸಿಂಗನಿಗೆ ನೆಲೆ ತಪ್ಪಿದಂತಾಗಿ, ತನ್ನ ತಮ್ಮಂದಿರೊಡನೆ ಮಲ್ಲಿಪಲ್ಲಿ ದೇಶಕ್ಕೆ ಬಂದು ರಾಮದುರ್ಗದ ರಾಯನನ್ನು (ಆಹವಮಲ್ಲ ಎಂಬುದಾಗಿ ಮದರಾಸಿನ ಪ್ರತಿಯಲ್ಲಿದೆ, ಡಿ. ೯೧೧) ಆಶ್ರಯಿಸಿದನು. ಕೆಲವು ಕಾಲದ ಮೇಲೆ ಅಲ್ಲಿನ ಮಹಾರಾಜನು ಕಾಲವಾಗಲು, ಆತನ ಸೋದರಳಿಯ ಮಲ್ಲನೆಂಬುವನು ಸಿಂಹಾಸನವನ್ನೇರಿದನು. ಮುಮ್ಮಡಿ ಸಿಂಗನು ಆತನನ್ನು ಸಂಹರಿಸಿ ತಾನೇ ಗದ್ದುಗೆಯನ್ನು ಏರಿದನು. ಶೆಟ್ಟಿಯ ಮಗನಾದ ಬೈಚಪ್ಪನನ್ನು ತನ್ನ ಮಂತ್ರಿಯನ್ನಾಗಿ ಮಾಡಿಕೊಂಡನು. ಮುಮ್ಮಡಿ ಸಿಂಗನಿಗೆ ಕಂಪಿಲನೆಂಬ ಮಗನಾದನು. ಕಾಲಾನಂತರದಲ್ಲಿ ಪಟ್ಟಕ್ಕೆ ಬಂದ ಕಂಪಿಲನಿಗೆ ಹರಿಯಮ್ಮ ಮತ್ತು ರತ್ನಾಜಿ ಎಂಬುವರನ್ನು ಕೊಟ್ಟು ಮದುವೆಯಾಯಿತು. ಪಟ್ಟಮಹಿಷಿ ಹರಿಯಮ್ಮನಿಗೆ ಅನೇಕ ದಿನಗಳವರೆಗೆ ಮಕ್ಕಳಾಗಲಿಲ್ಲ. ಆಗ ಆಕೆ ಬಡ ದಂಪತಿಗಳೊಬ್ಬರ ಮಗುವೊಂದನ್ನು ಕಾಟನೆಂದು ಹೆಸರಿಟ್ಟು ಸಲಹುತ್ತಿದ್ದಳು. ಇಷ್ಟಾದರೂ ಆಕೆಗೆ ಮಕ್ಕಳನ್ನು ಪಡೆಯಬೇಕೆಂಬ ಆಸೆ ತಪ್ಪಲಿಲ್ಲ. ಜಟ್ಟಂಗಿ ರಾಮೇಶನ ವರಪ್ರಸಾದದಿಂದ ಆಕೆಗೆ ಒಂದು ಗಂಡುಮಗುವಾಯಿತು. ಈತನೇ ಹೆಸರುವಾಸಿಯಾದ ಕುಮಾರರಾಮ.

## ಕುಮಾರರಾಮನ ಬೆಳವಣಿಗೆ

ಕಂಪಿಲನು ತನ್ನ ಮಕ್ಕಳೊಂದಿಗೆ ಸಂತೋಷದಿಂದ ರಾಜ್ಯಭಾರಮಾಡುತ್ತಿದ್ದನು. ಕುಮಾರರಾಮನ ಜನನದಿಂದ ಎಲ್ಲರಿಗೂ ಮಹದಾನಂದವಾಗಿತ್ತು. ಮಹಾರಾಜನು ಆತನಿಗೆ ರಾಜೋಚಿತವಾದ ಮಲ್ಲವಿದ್ಯೆ, ಶಸ್ತ್ರಾಭ್ಯಾಸಗಳನ್ನು ಮಾಡಿಸಿದನು. ಅವನಿಗೆ ಎಪ್ಪತ್ತೇಳು ಮಂದಿ ಒಡನಾಡಿಗಳನ್ನು ಹೊಂದಿಸಿಕೊಟ್ಟನು. ಒಂದು ಬಾರಿ ರಾಮನನ್ನೂ ಕೂಡಿಕೊಂಡು ಕಂಪಿಲನು ಬೇಟೆಯಾಡುತ್ತಿರಲು, ಒಂದು ಸ್ಥಳದಲ್ಲಿ ಮೊಲಗಳು ಬೇಟೆನಾಯಿಗಳ ಮೇಲೆ ತಿರುಗಿ ಬಿದ್ದುದನ್ನು ಕಂಡು ರಾಜನು ಬೆರಗಾದನು. ಆ ಸ್ಥಳವು ತುಂಬ ಪ್ರಶಸ್ತವಾದುದೆಂದು ಸಚಿವರೇ ಮೊದಲಾದವರು ಸಲಹೆಮಾಡಲು, ಕಂಪಿಲನು ಅಲ್ಲಿಯೇ ಹೊಸಮಲೆ ಎಂಬ ದುರ್ಗವನ್ನು ಸ್ಥಾಪಿಸಿ, ಅದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಬೈಚಪ್ಪನ ಬೆಂಬಲದಿಂದ ದಿನದಿನಕ್ಕೂ ಕಂಪಿಲನ ಕೀರ್ತಿ ಮಿಗಿಲಾಯಿತು (ಗಂಗ ೫, ಸಂ. i ರಿಂದ iii). ತೊರೆಗಲ್ಲು, ಬಾದಾವಿ, ಮುದುಗಲ್ಲು, ಹಾನುಗಲ್ಲು, ಆದವಾನಿ, ನಿಡುಗಲ್ಲು, ಚಂದ್ರಗುತ್ತಿಯವರೆಲ್ಲರೂ ಕಂಪಿಲನ ಆಶ್ರಿತರಾದರು. ಈ ಮಧ್ಯೆ ಗುತ್ತಿಯ ಜಗತಾಪಿ ಕಂಪಿಲನನ್ನು ಕಪ್ಪ ಕೇಳಲು ಬರಲು ರಾಮನಿಂದ ಅವಮಾನಿತನಾದನು. ಉಭಯರಿಗೂ ಬಲವಾದ ಕಾಳಗವೇ ನಡೆದು, ಜಗತಾಪಿಗೆ ಅಪಜಯವಾಯಿತು. ಜಗತಾಪಿ ರಾಮನ ಪ್ರತಾಪವನ್ನು ಕಂಡು ಮೆಚ್ಚಿ ತನ್ನ ಮಗಳಾದ ರಾಮಲದೇವಿಯನ್ನು ಆತನಿಗೆ ಕೊಟ್ಟು ಮದುವೆಮಾಡಿ ಕಂಪಿಲನ ಸ್ನೇಹವನ್ನು ಸಂಪಾದಿಸಿದನು.

## ಪಾದುಕೆಯ ಪ್ರಸಂಗ

[ಈ ಮಧ್ಯೆ ಕುಮಾರರಾಮನ ಸಾಹಸ ಪರಾಕ್ರಮಗಳು ಡಿಳ್ಳಿಯ ಸುಲ್ತಾನನವರೆಗೆ ಮುಟ್ಟಿತು, ಅವನ ಮಗಳಾದ ಬಾಬಮ್ಮನಿಗಂತೂ ಆತನ ರೂಪು, ಲಾವಣ್ಯ, ಶಕ್ತಿ ಸಾಮರ್ಥ್ಯಗಳನ್ನು ಕೇಳಿದಾಗಿನಿಂದ ಆತನನ್ನೇ ಮದುವೆಯಾಗಬೇಕೆಂಬ ಹಂಬಲವುಂಟಾಯಿತು. ಸುಲ್ತಾನನು ತನ್ನ ವಜೀರರನ್ನು ಬರಮಾಡಿಕೊಂಡು ರಾಮನ ವೃತ್ತಾಂತವನ್ನು ತಿಳಿದು ಬರಲು ಅಪ್ಪಣೆ ಮಾಡಿದನು.

ವಜೀರರು ಸುಲ್ತಾನನ ಪಾದುಕೆಗಳನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡು, ದಾರಿಯುದ್ದಕ್ಕೂ ಕಪ್ಪ ಕಾಣಿಕೆಗಳನ್ನು ತೆಗೆದುಕೊಳ್ಳುತ್ತಾ, ಗುತ್ತಿಯ ಜಗತಾಪಿಯನ್ನೂ ಶರಣಾಗತನನ್ನಾಗಿ ಮಾಡಿಕೊಂಡು ಕಂಪಿಲನಲ್ಲಿಗೆ ಬಂದರು. ಅವರು, ಕಂಪಿಲನಿಗೆ ಒಂದು ಬಳ್ಳದ ಹೊನ್ನನ್ನು ಕೊಡಬೇಕೆಂದೂ, ಪಾದುಕೆಗಳಿಗೆ ಸನ್ಮಾನ ಮಾಡಬೇಕೆಂದೂ, ಹಾಗಿಲ್ಲದಿದ್ದಲ್ಲಿ ಕುಮಾರರಾಮನನ್ನು ಡಿಳ್ಳಿಗೆ ಕಳುಹಿಸಿಕೊಡಬೇಕೆಂದೂ ಷರತ್ತುಗಳನ್ನು ಹಾಕಿದರು. ಇವುಗಳನ್ನೆಲ್ಲ ಕೇಳಿದ ಕುಮಾರರಾಮನು ಕೋಪಗೊಂಡು ಆ ಪಾದುಕೆಗಳನ್ನು ನೋಡುವ ನೆವದಿಂದ, ಅವುಗಳನ್ನು ಮೆಟ್ಟಿ ಸುಲ್ತಾನನ ಕಡೆಯವರನ್ನು ಅವಮಾನಗೊಳಿಸಿ ಹಿಂದಟ್ಟಿದನು. ಈ ಸುದ್ದಿಯನ್ನು ಕೇಳಿದ ಸುಲ್ತಾನನು ತುಂಬ ಅಸಮಾಧಾನಗೊಂಡನು (ಗಂಗ ೨ ; ಗಂಗ ೩ ; ಗಂಗ ೪).]

## ಬೊಲ್ಲನ ಸಂಪಾದನೆ

ಜಗತಾಪಿ ಅಳಿಯನಿಗೆ ಬಳುವಳಿಯಾಗಿ ಕೊಟ್ಟ ಕುದುರೆಗಳನ್ನೆಲ್ಲ ರಾಮನೊಬ್ಬನೇ ತೆಗೆದುಕೊಳ್ಳಲು, ಅವನ ಸಹೋದರರು ಕಂಪಿಲನಲ್ಲಿ ದೂರು ಹೇಳಿದರು. ರಾಜನು ರಾಮನನ್ನು ಬರಮಾಡಿಕೊಂಡು, ಆ ರೀತಿ ಅವನು ಮಾಡಿದ್ದು ತಪ್ಪೆಂದೂ, ಅವನು ನಿಜವಾಗಿಯೂ ಸಮರ್ಥನಾಗಿದ್ದರೆ ಓರುಗಲ್ಲಿನ ರುದ್ರನ ಮಗನಾದ ಯಪ್ಪತ್ತಿರಾಜನಲ್ಲಿರುವ ಬೊಲ್ಲ ಎಂಬ ಕುದುರೆಯನ್ನು ತರಬೇಕೆಂದೂ ಹೇಳಿದನು. ತಂದೆಯಾಡಿದ ಆ ಮಾತುಗಳು ರಾಮನನ್ನು ಕೆರಳಿಸಿದುವು. ಅವನು ಹಾಗೆಯೇ ಮಾಡುವೆನೆಂದು ಹಟ ತೊಟ್ಟು, ತನ್ನ ತಾಯಿಯ ಆಶೀರ್ವಾದವನ್ನು ಪಡೆದು, ತನ್ನ ಹೆಂಡತಿಯರಿಗೆಲ್ಲ ಹೇಳಿ, ತನ್ನ ಎಪ್ಪತ್ತೇಳು ಮನ್ನೆಯರನ್ನು ಕೂಡಿಕೊಂಡು ಹೊರಟನು. ನಾನಾ ಊರುಗಳನ್ನು ಹಾದು ಓರುಗಲ್ಲಿನ ಸಮೀಪದಲ್ಲಿದ್ದ ಗುಂಡುಬ್ರಹ್ಮಯ್ಯನ ದೇವಾಲಯಕ್ಕೆ ಬಂದು ಬೀಡುಬಿಟ್ಟನು. ಕನಸಿನಲ್ಲಿ ದೇವರ ಅನುಗ್ರಹವೂ ಆಯಿತು. ತಾನು ಕೈಕೊಂಡಿರುವ ಕಾರ್ಯವು ಸಫಲವಾದರೆ ಶೂಲದ ಹಬ್ಬವನ್ನು ಮಾಡುವುದಾಗಿ ಹರಕೆ ಹೊತ್ತಿಕೊಂಡನು. ತಾನು ತನ್ನ ತಂದೆಯೊಂದಿಗೆ ಕಲಹ ಕಟ್ಟಿಕೊಂಡು ಬಂದಿರುವೆನೆಂದೂ, ರುದ್ರನನ್ನು ಕಾಣಬೇಕೆಂದೂ, ಚಾರರ ಮೂಲಕ ಹೇಳಿ ಕಳುಹಿಸಿದನು. ಓರುಗಲ್ಲಿನ ರುದ್ರನು ಆ ಮಾತನ್ನು ಕೇಳಿ ತುಂಬ ಸಂತೋಷಗೊಂಡು ದೇವಿಶೆಟ್ಟಿ ಲಿಂಗನಿಗೆ ರಾಮನನ್ನು ಕರೆತರುವಂತೆ ಹೇಳಿದನು. ದೇವಿಶೆಟ್ಟಿ ಲಿಂಗನು ಬಂದು ರಾಮನನ್ನು ಕಾಣಲು, ಅವನನ್ನು ತನ್ನ ಸ್ನೇಹಿತನನ್ನಾಗಿ ಮಾಡಿಕೊಂಡು, ತಾನು ಬಂದಿರುವ ಉದ್ದೇಶವನ್ನು ತಿಳಿಸಿದನು. ದೇವಿಶೆಟ್ಟಿಲಿಂಗನು ರಾಮನಿಗೆ ತನ್ನ ಕೈಯಲ್ಲಾದಷ್ಟು ಸಹಾಯಮಾಡುವುದಾಗಿ ಮಾತುಕೊಟ್ಟನು. ಮಾರನೆಯ ದಿನ ರಾಮನು ರುದ್ರನ ಓಲಗಕ್ಕೆ ಅತ್ಯಂತ ವೈಭವದಿಂದ ಬಂದನು. ಹಿಂತಿರುಗುವಾಗ ರಾಮನು ತನ್ನ ಬಿರುದಾವಳಿಯನ್ನು ಹೊಗಳಿಸಿಕೊಂಡನು. ರುದ್ರನಿಗೆ ಅದನ್ನು ಸಹಿಸಲು ಅಸಾಧ್ಯವಾಯಿತು, ಕೂಡಲೆ, ರಾಮನು ತನ್ನ ಬಿರುದಾವಳಿಯನ್ನು ಬಿಟ್ಟುಕೊಟ್ಟರೆ ಮಾತ್ರವೇ ತನ್ನಲ್ಲಿ ಆಶ್ರಯ ದೊರೆಯುವುದೆಂದೂ, ಇಲ್ಲದಿದ್ದಲ್ಲಿ ಸಾಧ್ಯವಿಲ್ಲವೆಂದೂ, ಲಿಂಗನ ಮೂಲಕವೇ ಹೇಳಿ ಕಳುಹಿಸಿದನು. ರಾಮನು ತನ್ನಿಂದ ಅದು ಸಾಧ್ಯವಿಲ್ಲವೆಂದೂ, ಬೇಕಾದರೆ ತಾನು ಯುದ್ಧ ಮಾಡುವುದಕ್ಕೂ ಸಿದ್ಧನಾಗಿರುವುದಾಗಿಯೂ ಉತ್ತರವಿತ್ತನು. ಆ ಉತ್ತರವನ್ನು ಕೇಳಿದ ಒಡನೆಯೇ ರುದ್ರನಿಗೆ ಕೋಪವುಂಟಾಯಿತು. ಕಡೆಗೆ ಬಲವಾದ ಕಾಳಗವೇ ಸಂಭವಿಸಿತು

ಲಿಂಗನು ರಾಮುನ ಪಕ್ಷವನ್ನೇ ವಹಿಸಿದನು. ಯುದ್ಧದಲ್ಲಿ ರಾಮನ ಕೈಯೇ ಮೇಲಾಯಿತು. ಯಪ್ಪತ್ತಿ ರಾಜನು ತನ್ನ ಅಮೂಲ್ಯವಾದ ಬೊಲ್ಲನನ್ನು ಏರಿ, ತಂದೆಯ ಅಪ್ಪಣೆಯನ್ನು ಪಡೆದು ರಾಮನನ್ನು ಎದುರಿಸಿದನು. ಇಬ್ಬರಿಗೂ ಬಿರುಸಾದ ಕಾಳಗವು ಸಾಗಿ, ಕಡೆಗೆ ಯಪ್ಪತ್ತಿರಾಜನು ರಾಮನ ಕೈಸೆರೆಯಾದನು. ಬೊಲ್ಲನು ರಾಮನ ಸ್ವಾಧೀನವಾಯಿತು. ಲಿಂಗನ ಸಲಹೆಯ ಮೇರೆಗೆ ಯುವರಾಜನನ್ನು ಬಿಟ್ಟುಕೊಟ್ಟು ಮಧ್ಯೇ ಮಧ್ಯೇ ಅಡ್ಡಗಟ್ಟಿದವರನ್ನೆಲ್ಲ ನಿವಾರಿಸಿಕೊಂಡು ಕುಮಾರರಾಮನು ಗುಂಡುಬ್ರಹ್ಮಯ್ಯನದೇವಾಲಯಕ್ಕೆ ಬಂದನು. ದೇವರನ್ನು ಪೂಜಿಸಿ, ದೇವಿಶೆಟ್ಟಿ ಲಿಂಗನನ್ನೂ ಕರೆದುಕೊಂಡು ಬೊಲ್ಲನೊಂದಿಗೆ ಊರಿಗೆ ಹಿಂತಿರುಗಿದನು. ಕಂಪಿಲನಿಗೆ ಮಗನ ಪರಾಕ್ರಮವನ್ನು ಕೇಳಿ ತುಂಬ ಸಂತೋಷವಾಯಿತು. ಅವನನ್ನು ಹೃತ್ಪೂರ್ವಕವಾಗಿ ಬರಮಾಡಿಕೊಂಡು, ಆತನ ಮನ್ನೆಯರಿಗೆಲ್ಲ ರಾಮನ ಇಷ್ಟಾನುಸಾರವಾಗಿ ಸನ್ಮಾನ ಮಾಡಿ ಆನಂದಿಸಿದನು.



## ಹುಳಿಯೊರು ಮಾರಭೂಪಾಲನ ಗರ್ವಭಂಗ

ಕುಮಾರರಾಮನು ಗುತ್ತಿಯ ಜಗತಾಪಿಯನ್ನು ಸೋಲಿಸಿ, ಆತನ ಮಗಳಾದ ರಾಮಲದೇವಿಯನ್ನು ಮದುವೆಯಾದ ಸಂಗತಿಯನ್ನೂ, ಓರುಗಲ್ಲಿಗೆ ಹೋಗಿ ಯುದ್ಧಮಾಡಿ ಬೊಲ್ಲನನ್ನು ಸಂಪಾದಿಸಿಕೊಂಡ ವೃತ್ತಾಂತವನ್ನೂ, ಹುಳಿಯಾರಿನ ಮಾರಭೂಪಾಲನು ಕೇಳಿ ಕರುಬಿದನು. ತನ್ನ ಮಂತ್ರಿಗಳನ್ನು ಬರಮಾಡಿಕೊಂಡು ರಾಮನ ಈ ಗರ್ವವನ್ನು ಮುರಿಯಬೇಕೆಂದು ಪರ್ಯಾಲೋಚಿಸಿದನು. ಈ ಸುದ್ದಿ ಕುಮಾರರಾಮನ ಕಿವಿಗೆ ಬಿದ್ದಿತು. ಅವನು ಸುಮ್ಮನಿರಲಾರದೆ, ತಂದೆಯ ಅನುಮತಿಯನ್ನು ಪಡೆದು ತಾನಾಗಿಯೇ ಹುಳಿಯಾರಿನತ್ತ ಹೊರಟುಬಂದನು. ಕಣಜದಹಳ್ಳಿಯನ್ನು ಹಾದು, ಬೂದಿಹಾಳಿನಲ್ಲಿ ಬೀಡುಬಿಟ್ಟು ಅನಂತರ ಹುಳಿಯಾರಿನ ಕೋಟೆಗೆ ಮುತ್ತಿಗೆ ಹಾಕಿದನು. ಮಾರಭೂಪಾಲನು ತನ್ನ ವೀರಾಧಿ ವೀರರನ್ನೆಲ್ಲ ಬರಮಾಡಿಕೊಂಡು ತಮಗೆ ಒದಗಿ ಬಂದಿರುವ ಆತಂಕವನ್ನು ತಿಳಿಸಿದನು. ಆ ಶೂರರು ಒಬ್ಬರಿಗಿಂತ ಒಬ್ಬರು ವೀರಾಲಾಪದಿಂದ ಯುದ್ಧಕ್ಕೆ ಸಿದ್ಧರಾದರು. ಎರಡು ತಂಡದವರಿಗೂ ಬಿರುಸಾದ ಕಾಳಗ ನಡೆಯಿತು. ರಾಮನ ಸೈನಿಕರು ಶತ್ರುಗಳನ್ನು ಸಂಹರಿಸುತ್ತ ಮುನ್ನುಗ್ಗಿ ಬರುತ್ತಿರಲು ಮಾರಭೂಪಾಲನ ಉತ್ಸಾಹ ಕುಗ್ಗಿತು. ತನ್ನ ಕಡೆಯ ಅಸಮವೀರರಾದ ಮುನ್ನೂರು ಮಂದಿಯನ್ನು ಜೊತೆಮಾಡಿ ಕಳುಹಿಸಿದನು. ಏನೂ ಉಪಯೋಗವಾಗಲಿಲ್ಲ. ಕುಮಾರರಾಮನ ಪಕ್ಷದವರು ಜೀರುಮುತ್ತಿಗೆ ಹಾಕಿ, ನಾನಾ ಕಡೆಗಳಿಂದ ಮೇಲೇರಿ ಬರಲು ಮಾರಭೂಪಾಲನ ಸೇನೆ ತತ್ತರಿಸಿತು. ಕಂಗೆಟ್ಟ ಮಾರಭೂಪಾಲನು ಮಂತ್ರಿ ಕಲ್ಲರಸನನ್ನು ಕರೆಸಿ ಕೇಳಲು, ಆಗ ಅವನು "ಜೀಯ, ನಮ್ಮ ವೀರ ಭಟರೆಲ್ಲರೂ ಹತರಾದರು. ಕುಮಾರರಾಮನು ಕಾರಣಿಕ ಪುರುಷನೇ ಸರಿ. ಓರುಗಲ್ಲಿನ ರುದ್ರನನ್ನು ಗೆದ್ದ ಧೀರನಿವನು! ಗುತ್ತಿಯ ಜಗತಾಪಿಯನ್ನು ಜಯಿಸಿದ ಅಪ್ರತಿಮ ಮಲ್ಲನಿವನು! ಡಿಳ್ಳಿಯ ಸುರುತಾಳನ ಪಾದುಕೆಗಳನ್ನು ಮೆಟ್ಟಿ ಹಿಂದಟ್ಟಿದ ಪ್ರತಾಪಶಾಲಿ! ಇವನ ಸಂಗಡ ಹೋರಾಟ ಸಲ್ಲದು. ಸದ್ಯಕ್ಕೆ ಕಪ್ಪ ಸಲ್ಲಿಸಿ, ಸಂಧಿ ಮಾಡಿಕೊಳ್ಳುವುದೇ ಸೂಕ್ತವಾದುದು" ಎಂದು ವಿಜ್ಞಾಪಿಸಿಕೊಂಡನು. ಮಾರಭೂಪಾಲನು ಮಂತ್ರಿಯ ಮಾತಿಗೆ ಸಮ್ಮತಿಸಿ, ಕುಮಾರರಾಮನನ್ನು ಬರಮಾಡಿಕೊಂಡು, ಬಿಂದಿಗೆ ಹೊನ್ನನ್ನೂ, ಗಿಳಿಯನ್ನೂ ಕಾಣಿಕೆ ಕೊಟ್ಟು, ಐದು ಊರುಗಳನ್ನೂ ಒಪ್ಪಿಸಿ, ಗೌರವದಿಂದ ಬೀಳ್ಕೊಟ್ಟನು. ಕುಮಾರರಾಮನ ಈ ವಿಜಯವನ್ನು ಕೇಳಿ ಕಂಪಿಲನಿಗೆ ಅಪರಿಮಿತ ಆನಂದವಾಯಿತು. ತನ್ನ ಮನ್ನೆಯರಿಗೆಲ್ಲ ಹೇಳಿ ಕಳುಹಿಸಿ, ಎಲ್ಲರೂ ಒಟ್ಟುಗೂಡಿ, ಕುಮಾರರಾಮನನ್ನು ಎದುರುಗೊಂಡು ಅವನು ತಂದಿದ್ದ ಕಪ್ಪ ಕಾಣಿಕೆಗಳನ್ನು ಕಂಡು ಹಿಗ್ಗಿದನು. ಕುಮಾರರಾಮನ ಈ ಸಾಹಸ ಪರಂಪರೆ ಸುತ್ತಮುತ್ತಲಿದ್ದ ಇತರ ಅರಸರಿಗೆ ಅಸೂಯೆಯನ್ನು ಉಂಟುಮಾಡಿದವು. ಹೊಯ್ಸಳ ಬಲ್ಲಾಳನಂತೂ ಸಮಯ ಕಾಯುತ್ತಲೇ ಇದ್ದನು.

## ಬಾದೂರನ ಪ್ರಸಂಗ

ಈ ವೇಳೆಗೆ ಡಿಳ್ಳಿಯಲ್ಲಿ ಬಾದೂರಖಾನನು ಮಾಡಬಾರದ ತಪ್ಪನ್ನು ಮಾಡಿ, ತಲೆ ತಪ್ಪಿಸಿಕೊಂಡು, ದಕ್ಷಿಣಾಪಥಕ್ಕೆ ಓಡಿಬಂದನು. ಸುಲ್ತಾನನಿಗೆ ಹೆದರಿ ಯಾರೂ ಅವನಿಗೆ ಆಶ್ರಯ ಕೊಡಲಿಲ್ಲ. ಕಡೆಗೆ, ಕಂಪಿಲನು ಕುಮಾರರಾಮನ ಸಲಹೆಯ ಮೇರೆಗೆ ಆಶ್ರಯವನ್ನಿತ್ತನು. ಈ ಸುದ್ದಿಯನ್ನು ತಿಳಿದು ಸುಲ್ತಾನನಿಗೆ ತುಂಬ ಸಿಟ್ಟಾಯಿತು. ಸಾಲದ್ದಕ್ಕೆ, ಈ ಮೊದಲೇ ತನ್ನವರಿಗಾಗಿದ್ದ ಅಪಮಾನದಿಂದ ಅವನ ಕೋಪ ಕುದಿಯುತ್ತಿತ್ತು. ಆದ್ದರಿಂದ ತನ್ನ ಸೇನಾಧಿಪತಿಯಾದ ನೇಮಿಯನ್ನು ಬರಮಾಡಿಕೊಂಡು ಕುಮ್ಮಟದ ಮೇಲೆ ದಂಡೆತ್ತಿ ಹೋಗುವಂತೆ ಆಜ್ಞಾಪಿಸಿದನು.

## ನೇಮಿಯ ಪ್ರಥಮ ದಂಡಯಾತ್ರೆ

ಬಹಳ ದಿನಗಳಿಂದಲೂ ಸುಲ್ತಾನನ ದಂಡಯಾತ್ರೆಯನ್ನು ನಿರೀಕ್ಷಿಸುತ್ತಿದ್ದ ರಾಮನಿಗೆ ಆ ಕಾಲವೂ ಹತ್ತಿರವಾಯಿತು. ಈ ಮೊದಲೇ ಕೋಟೆ ಮೊದಲಾದುವುಗಳನ್ನು ಭದ್ರಪಡಿಸಿದ್ದನು. ನೇಮಿಯ ಕಡೆಯವರು ಉದ್ದಕ್ಕೂ ಲೂಟಿ ಮಾಡುತ್ತ ಕುಮ್ಮಟವನ್ನು ಸಮೀಪಿಸಿದರು. ಉಭಯ ಪಕ್ಷದವರಿಗೂ ಯುದ್ಧ ಸಾಗಿತು. ಕುಮಾರರಾಮನು ಬೊಲ್ಲನನ್ನು ಏರಿ ವೀರಾವೇಶದಿಂದ ಹೋರಾಡಿದನು. ಅದನ್ನು ಕಂಡು ನೇಮಿಯೇ ಮೊದಲಾದವರು ತಲೆದೂಗಿದರು. ಅದೇ ದಿನ ರಾತ್ರಿ ಬಾದೂರನ ನೇತೃತ್ವದಲ್ಲಿಯೇ ರಾಮನ ಕಡೆಯವರು ನೇಮಿಯ ಪಾಳೆಯದಲ್ಲಿ ಕಗ್ಗೊಲೆಯನ್ನು ಮಾಡಿದರು. ನೇಮಿಯ ದಂಡು ಕಂಗೆಟ್ಟಿತು. ಹಗಲಾದ ಒಡನೆಯೇ ನೇಮಿ ಬಾದೂರನನ್ನು ಒಪ್ಪಿಸಿಕೊಡಬೇಕೆಂದು ಹೇಳಿ ಕಳುಹಿಸಲು, ರಾಮನು ನಿರಾಕರಿಸಿದನು. ಮತ್ತೆ ರಾಮನಿಗೂ ನೇಮಿಗೂ ಬಲವಾದ ಕಾಳಗವಾಗಿ ನೇಮಿಯ ಕಡೆಯವರಿಗೆ ಸೋಲಾಯಿತು. ರಾಮನು ಶತ್ರುಗಳನ್ನು ಹೆದ್ದೊರೆಯತನಕ ಅಟ್ಟಿ ವಿಜಯಶಾಲಿಯಾದನು. ನೇಮಿಗೆ ಆದ ಅಸಮಾಧಾನ ಅಷ್ಟಿಷ್ಟಲ್ಲ. ಕುಮಾರರಾಮನ ಮೇಲೆ ಬಲ್ಲಾಳ, ಮುಂಗುಲಿರಾಯ ಮುಂತಾದವರನ್ನು ಎತ್ತಿಕಟ್ಟಿ ಡಿಳ್ಳಿಗೆ ಹಿಂತಿರುಗಿದನು. ನೇಮಿಗಾದ ಸೋಲಿನ ಸುದ್ದಿಯನ್ನು ಕೇಳಿದೊಡನೆಯೇ ಸುಲ್ತಾನನಿಗೆ ಸಹಿಸಲಾರದಷ್ಟು ಕೋಪವುಂಟಾಗಿ, ಸೇನಾಧಿಪತಿಯನ್ನು ಮೂದಲಿಸಿದನು.

## ಬಲ್ಲಾಳನ ಕಾಳಗ

ಪರಾಜಿತನಾದ ನೇಮಿ, ಬಲ್ಲಾಳನಿಗೆ ಕಾಗದ ಬರೆದು, ಕುಮಾರರಾಮನ ಸೊಕ್ಕನ್ನು ಮುರಿಯಬೇಕೆಂದು ತಿಳಿಸಿದ್ದನು. ಸಮಯವನ್ನೇ ಕಾಯುತ್ತಿದ್ದ ಬಲ್ಲಾಳನಿಗೆ ಈ ಸಲಹೆ ತುಂಬ ಪ್ರಿಯವಾಯಿತು. ಓರುಗಲ್ಲಿನ ರುದ್ರ ಮತ್ತು ಮುಂಗುಲಿರಾಯನಿಗೆ ಪತ್ರ ಬರೆದು, ಅವರೆಲ್ಲರ ನೆರವನ್ನೂ ಪಡೆದು ಕುಮಾರರಾಮನ ಮೇಲೆ ದಂಡೆತ್ತಿ ಹೋಗಬೇಕೆಂದು ನಿಶ್ಚಯಿಸಿದನು. ಮಂತ್ರಿ ನರಸಿಂಗು ಎಲ್ಲೆಡೆಗಳಿಗೂ ಭಟರುಗಳನ್ನು ಕೊಟ್ಟು ಕಳುಹಿಸಿ, ಪ್ರತ್ಯುತ್ತರಗಳನ್ನು ತರಿಸಿಕೊಂಡು ಬಲ್ಲಾಳನಿಗೆ ವರದಿ ಮಾಡಿದನು. ಓರುಗಲ್ಲಿನ ಅರಸು ರುದ್ರರಸು ಎಂಬಾತನ ನೇತೃತ್ವದಲ್ಲಿ ಸೇನೆಯನ್ನು ಕಳುಹಿಸಿಕೊಟ್ಟನು. ಮುಂಗುಲಿರಾಯನ ಮಗನಾದ ಸಿಂಗರಾಜನೇ ತನ್ನ ಪಡೆಯನ್ನೂ ಕೂಡಿಬಂದನು. ಬಲ್ಲಾಳನ ಸೈನ್ಯದಲ್ಲಂತೂ ಸುತ್ತಮುತ್ತಲಿನ ಅನೇಕ ಸಾಮಂತರು ಬಂದು ಸಮರ ಸನ್ನದ್ಧರಾದರು. ಎಲ್ಲರೂ ಕೂಡಿ ಹಾನುಗಲ್ಲಿಗೆ ಬಂದು ಬೀಡುಬಿಟ್ಟರು. ಅಲ್ಲಿ ಅವರವರಲ್ಲಿಯೇ ಕುಮಾರರಾಮನನ್ನು ಹೇಗೆ ಪ್ರತಿಭಟಿಸುವುದೆಂದು ಚರ್ಚೆ ನಡೆಯಿತು. ಆತನನ್ನು ಪ್ರತ್ಯಕ್ಷವಾಗಿ ಕುಮ್ಮಟದ ಬಳಿ ಎದುರಿಸಿ ಅವಮಾನಿತನಾದ ನೇಮಿಯ ಸಂಗತಿಯನ್ನು ನೆನೆದು, ಹಾಗೆ ಮಾಡದೆ ಆತನಿಗೆ ಸೇರಿದ ಯಾವುದಾದರೊಂದು ಗಡಿದುರ್ಗಕ್ಕೆ ಮುತ್ತಿಗೆ ಹಾಕಬೇಕೆಂದೂ, ಆಗ ಅತನು ಅಲ್ಲಿಗೆ

ಬರಲು ತಮ್ಮ ಕೆಲಸ ಸುಲಭವಾಗುವುದೆಂದೂ ಬಗೆದರು. ಅದೇ ಮೇರೆಗೆ, ಕಾಟನಾಯ್ಕನ ಮೇಲ್ವಿಚಾರಣೆಯಲ್ಲಿದ್ದ ಒಂದು ಗಡಿದುರ್ಗವನ್ನು ಹಿಡಿದರು.

ಅಪಾರವಾದ ಶತ್ರುಸೇನೆ ಬಂದು ಕಾಟನಾಯ್ಕನ ಗಡಿದುರ್ಗವನ್ನು ಮುತ್ತಿದ ಸಮಾಚಾರ ನಿಮಿಷಮಾತ್ರದಲ್ಲಿ ರಾಮನಿಗೆ ತಿಳಿಯಿತು. ಆಗತಾನೆ ನೇಮಿಯನ್ನು ಸೋಲಿಸಿ, ಸಂತೋಷ ಸಮಾರಂಭದಲ್ಲಿ ತನ್ನ ಮನ್ನೆಯರನ್ನೆಲ್ಲ ಮನ್ನಿಸಿ ಸಂತೃಪ್ತನಾಗಿದ್ದ ಕುಮಾರರಾಮನಿಗೆ ಈ ಯುದ್ಧದ ಕರೆ ಅಪ್ರಿಯವೆನ್ನಿಸಲಿಲ್ಲ. ತಕ್ಷಣವೇ ಯುದ್ಧಕ್ಕೆ ಹೊರಟು ನಿಂತನು. ರಾಮಲದೇವಿಯೊಂದಿಗೆ ಕೂಡಲೇ ಹಾನುಗಲ್ಲಿನ ಕಡೆ ಹೋಗಬೇಕೆಂದು 'ತಿಳಿಸಿದನು. ವೀರೋಚಿತವಾದ ಉಡುಗೆ ತೊಡುಗೆಗಳಿಂದ ಅಲಂಕೃತನಾಗುವ ವೇಳೆಗೆ ತಾಯಿ ಹರಿಯಮ್ಮನೂ, ತಂದೆ ಕಂಪಿಲನೂ ಬಂದು, ಸುದ್ದಿ ತಿಳಿದು, ಕುಮಾರನನ್ನು ಆಶೀರ್ವದಿಸಿದರು. ರಾಮನ ಕಡೆ, ಬೈಚಪ್ಪ, ಮಂಚಣ್ಣ, ಚಾರಾಮರಾಯನ ಮಕ್ಕಳು, ಹಂಪರಾಜ, ಕಂಪರಾಜ, ಕಾಟಣ್ಣ, ಕಳ್ಳಭಂಟರಾಮ, ಬಾದೂರಖಾನ, ಗುಜ್ಜಲೋಬ ಮೊದಲಾದ ಹೆಸರುವಾಸಿಯಾದ ನಾಯಕರೆಲ್ಲರೂ ಅಣಿಯಾಗಿ ನಿಂತರು. ಕುಮಾರರಾಮನು ತಮ್ಮ ಕುಲದೇವತೆಯಾದ ಜಟ್ಟಂಗಿ ರಾಮನನ್ನು ಸ್ಮರಿಸಿ ವೀರೋತ್ಸಾಹದಿಂದ ಶತ್ರುಗಳನ್ನು ಎದುರಿಸಲು ತೆರಳಿದನು.

ಬಲ್ಲಾಳನ ಪಕ್ಷದವರು ನಿರೀಕ್ಷಿಸಿದ್ದಂತೆಯೇ, ಕುಮಾರರಾಮನು ಹೊರಟುಬಂದು ಗಡಿದುರ್ಗದ ಮುತ್ತಿಗೆಯನ್ನು ಬಿಡಿಸಿಕೊಳ್ಳಲು ಅನುವಾದನು. ಆತನ ಸೇನಾನಾಯಕರು ನಾನಾ ಕಡೆಗಳಿಂದ ಶತ್ರುಗಳನ್ನು ಎದುರಿಸಿದರು. ಬೊಲ್ಲನ ಮೇಲೇರಿ ಬಂದ ಕುಮಾರರಾಮನನ್ನು ಹಿಡಿಯಲು ಹಾದು ಬಂದ ಬಲ್ಲಾಳನ ಮುಂಚೂಣಿ ದಂಡನ್ನು ಕಾಟಣ್ಣ ಅಡ್ಡಗಟ್ಟಿದನು. ಸೈನ್ಯದಲ್ಲಿ ಅಲ್ಲೋಲ ಕಲ್ಲೋಲವಾಗಲು ಮುಂಗುಲಿರಾಯನ ಮಗನಾದ ಸಿಂಗರಾಯನು ಮುನ್ನುಗ್ಗಿ ಬಂದನು. ಕುಮಾರರಾಮನು ಕೂಡಲೇ ಕೈಸೆರೆಯಾಗುವನೆಂದು ಬಲ್ಲಾಳನು ರುದ್ರರಸನಿಗೆ ಹೇಳಿ ಹಿಗ್ಗುತ್ತಿದ್ದನು. ಆದರೆ ಅದು ಅಷ್ಟು ಸುಲಭವಾಗಿರಲಿಲ್ಲ. ಚಾರಾಮರಾಯನ ಮಕ್ಕಳ ಕೈ ಮೇಲಾಗಿತ್ತು. ಕಾಟನಾಯ್ಕನ ಹಾವಳಿಯೂ ಹಿರಿದಾಗಿತ್ತು. ನಿಮಿಷಮಾತ್ರದಲ್ಲಿ ಕುಮಾರರಾಮನ ಪಕ್ಷದವರು ಪರಬಲದವರ ತಲೆಗಳನ್ನು ಚೆಂಡಾಡುತ್ತಿದ್ದರು. ಶತ್ರು ಪಕ್ಷದವರ ಗ್ರಹಚಾರಕ್ಕೆ ತಕ್ಕಂತೆ ರಣರಂಗ ಕೇಸರಿಯಾದ ಕುಮಾರರಾಮನು ತನ್ನ ಬೊಲ್ಲನನ್ನು ಮಿಾಟಿ, ಮೇಲೆ ಬಿದ್ದನು. ಅವನ ಕೈಯಿಂದ ತಪ್ಪಿಸಿಕೊಳ್ಳುವುದೇ ಅಸಾಧ್ಯವಾಯಿತು. ಯೋಧರು ಹುಳುಗಳಂತೆ ಸತ್ತು ರಾಶಿರಾಶಿಯಾಗಿ ಬಿದ್ದರು. ಬಾದೂರಖಾನನಿಗೂ ಶತ್ರುಪಕ್ಷದ ಮಿಸಿಮಿಲಿಖಾನನಿಗೂ ನಡೆದ ಹೋರಾಟದಲ್ಲಿ ಬಾದೂರನಿಗೆ ಗಾಯವಾದುದನ್ನು ಕಂಡು, ಕುಮಾರರಾಮನು ಅತ್ತ ಸಾಗಿಬಂದು ಶತ್ರುವನ್ನು ಪ್ರತಿಭಟಿಸಿದನು. ವೈಮರೆತು ನಡೆದ ಈ ಕಾಳಗದಲ್ಲಿ ಮಿಸಿಮಿಲಿಖಾನನು ಹತನಾದನು. ಓರುಗಲ್ಲಿನ ರುದ್ರರಸನು ಈ ಸುದ್ದಿಯನ್ನು ಕೇಳಿದ ಕೂಡಲೇ ಕಂಗೆಟ್ಟನು. ಆತನಿಗೂ ಚಾರಾಮರಾಯನ ಮಕ್ಕಳಿಗೂ ಯುದ್ಧ ಘಟಿಸಲು, ಕಾಟಣ್ಣನು ನುಗ್ಗಿಬಂದು ರುದ್ರರಸಿನ ಮೇಲೆ ಬಿದ್ದನು. ಆ ಏಟನ್ನು ತಾಳಲಾರದೆ ರುದ್ರರಸನು ಹಿಮ್ಮೆಟ್ಟಿದನು. ಸಿಂಗರಾಯನೂ ಆತನನ್ನೇ ಹಿಂಬಾಲಿಸಿದನು. ಈ ರೀತಿಯಾಗಿ ಮೂಡಣ ದೊರೆಗಳೆಲ್ಲರೂ ದಿಕ್ಕಾಪಾಲಾಗಿ ಚೆದರಲು ಬಲ್ಲಾಳನಿಗೆ ಮುಂದೆ ಏನು ಮಾಡಬೇಕೆಂದು ತೋರಲಿಲ್ಲ. ಕುಮಾರರಾಮನ ಕಡುಗಲಿಗಳಾದರೋ ಮೇಲಿಂದ ಮೇಲೆ ಒತ್ತಿ ಬರುತ್ತಲೇ ಇದ್ದರು. ಭಯಂಕರವಾದ ಆ ಯುದ್ಧವನ್ನು ಕಂಡು ಬಲ್ಲಾಳನು ಅಸಹಾಯಕನಾಗಿ ರಾಮನನ್ನು ಎದುರಿಸಲಾರದೆ ತನ್ನ ಬೀಡಿಗೆ ಹಿಂತಿರುಗುವುದೇ ಲೇಸೆಂದು ಬಗೆದು ಹೊರಡಲನುವಾದನು. ಜಯಶಾಲಿಗಳಾದ ಬಾದೂರಖಾನ, ಕಾಟಣ್ಣ, ಅರಸು ಮಕ್ಕಳು, ಇವರೇ ಮೊದಲಾದವರು ಕುಮಾರರಾಮನ ಬಳಿಗೆ ಬಂದು ನಿಂತರು. ಈ ವೇಳೆಗೆ ಸಂಜೆಯಾಗಲು ಅಂದಿನ ಸಮರ ಸಮಾಪ್ತವಾಯಿತು.

ಸೋತು ಸಪ್ಪೆಯಾಗಿದ್ದ ಬಲ್ಲಾಳನು ಮಂತ್ರಿ ನರಸಿಂಗುವನ್ನು ಕರೆಸಿ ಮುಂದಿನ ಕ್ರಮವೇನೆಂದು

ಪರ್ಯಾಲೋಚಿಸಿದನು. ಪರಿಸ್ಥಿತಿಯನ್ನು ಚೆನ್ನಾಗಿ ಬಲ್ಲ ನರಸಿಂಗು ತನ್ನ ಸ್ವಾಮಿಯನ್ನು ಕುರಿತು "ಜೀಯ, ಇಂದು ರಾಮನೊಂದಿಗೆ ಸಂಧಿ ಮಾಡಿಕೊಳ್ಳುವುದೇ ಮೇಲು. ಮುಂದೆ ಸಮಯ ನೋಡಿಕೊಂಡು ರಾಜ ಕಾರ್ಯವನ್ನು ಸಾಧಿಸಬಹುದು" ಎಂದು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿದನು. ಬಲ್ಲಾಳನು ಸಚಿವನ ಸಲಹೆಗೆ ಸಮ್ಮತಿಸಿದನು. ಈ ಸಮಾಚಾರ ಕುಮಾರರಾಮನಿಗೆ ತಿಳಿಯಲು ಅವನು ಗುಜ್ಜಲೋಬನನ್ನು ಕರೆದು ತನಗೆ ಸಲ್ಲಬೇಕಾದ ಕಪ್ಪ ಕಾಣಿಕೆಗಳ ವಿವರವನ್ನು ಬಲ್ಲಾಳನಿಗೆ ಹೇಳಿ ಕಳುಹಿಸಿದನು. ಅದೇ ಮೇರೆಗೆ ಬಲ್ಲಾಳನು ಬಿಂದಿಗೆ ಹೊನ್ನು, ವರ್ಣದ ಉಡುಗೊರೆ, ತೇಜಿಯೇ ಮೊದಲಾದವುಗಳನ್ನು ಒಪ್ಪಿಸಿಕೊಟ್ಟು ತನ್ನ ಊರಿನ ಕಡೆಗೆ ಪಯಣ ಬೆಳಸಿದನು. ಈ ವಿಜಯದಿಂದ ಕುಮಾರರಾಮನು ಹಿಗ್ಗಿ, ತನ್ನವರೊಂದಿಗೆ ಕೂಡಿ ಹಂಪೆಗೆ ತೆರಳಿ ವಿರೂಪಾಕ್ಷನ ದರ್ಶನ ಮಾಡಿಕೊಂಡು, ಪ್ರಸಾದವನ್ನು ಸ್ವೀಕರಿಸಿ, ಕುಮ್ಮಟಕ್ಕೆ ಬಂದನು. ಅಲ್ಲಿ ಆತನ ತಂದೆ, ತಾಯಿ, ಆಪ್ತೇಷ್ಟರು, ಪ್ರಜೆಗಳು ಮುಂತಾದವರೆಲ್ಲ ಅತ್ಯಂತ ಸಂತೋಷದಿಂದ ಬರಮಾಡಿಕೊಂಡು ಸತ್ಕರಿಸಿದರು. ರಾಮನು ತನ್ನ ಮನ್ನೆಯರಿಗೆಲ್ಲ ಉಡುಗೊರೆಗಳನ್ನಿತ್ತು ಕೊಟ್ಟು ಕಳುಹಿಸಿದನು.

## ಶೂಲದ ಹಬ್ಬ

ಈ ರೀತಿ ಕಂಪಿಲನ ರಾಜ್ಯದಲ್ಲಿ ಗಂಡುಗಲಿಯಾದ ಕುಮಾರನ ದೆಸೆಯಿಂದ ಸುಖ ಸಂತೋಷಗಳು ನೆಲಸಿದ್ದವು. ಆಗ ಕುಮಾರರಾಮನಿಗೆ ತಾನು ಗುಂಡುಬ್ರಹ್ಮಯ್ಯನಿಗೆ ಹೊತ್ತಿದ್ದ ಹರಕೆಯ ನೆನಪಾಯಿತು. ಶೂಲದ ಹಬ್ಬವನ್ನು ಏರ್ಪಡಿಸಬೇಕೆಂದು ತಂದೆಗೆ ವಿನಂತಿ ಮಾಡಿಕೊಂಡನು. ಕಂಪಿಲನು ಎಲ್ಲ ವ್ಯವಸ್ಥೆಗಳನ್ನೂ ಮಾಡಿಸಿದನು. ಬೇರೆ ಬೇರೆ ಪ್ರದೇಶಗಳಿಗೆ ಸೇರಿದ ಮನ್ನೆಯರು, ಅತ್ಯಂತ ವೈಭವದಿಂದ ಅಲಂಕೃತವಾದ ತಮ್ಮ ತಮ್ಮ ಶೂಲಗಳೊಂದಿಗೆ ಬಂದು ಸೇರಿದರು. ರಾಜನೂ ಇತರರೂ ಗುಂಡುಬ್ರಹ್ಮಯ್ಯನ ಶೂಲಕ್ಕೆ ಪೂಜೆ ಮಾಡಿದರು. ಇವೆಲ್ಲವನ್ನೂ ಉಪ್ಪರಿಗೆಯಿಂದ ನೋಡುತ್ತಿದ್ದ ರತ್ನಾಜಿ ರಾಮನನ್ನು ಕಂಡು ಆತನ ರೂಪು ರಮಣೀಯತೆಗಳಿಗೆ ಮಾರುವೋಗಿ, ಆತನಲ್ಲಿ ಅನುರಕ್ತಳಾದಳು. ಆಕೆಯ ದೂತಿಯಾದ ಸಂಗಿ ಎಷ್ಟು ಸಮಾಧಾನ ಮಾಡಿದರೂ ಪ್ರಯೋಜನವಾಗಲಿಲ್ಲ. ರತ್ನಾಜಿ ತನ್ನ ಇಷ್ಟಾರ್ಥವು ನೆರವೇರುವಂತೆ ನಾನಾ ದೇವತೆಗಳಿಗೆ ಹರಕೆ ಹೊತ್ತಳು. ಅಂತೂ ಶೂಲದ ಹಬ್ಬವು ಕುಮಾರರಾಮನಿಗೆ ಬೇರೊಂದು ರೀತಿಯಲ್ಲಿ ಶೂಲವಾಗಿಯೇ ಪರಿಣಮಿಸಿತು.

## ಚೆಂಡಾಟದ ಹಗರಣ

ಶಬರರ ಕೋರಿಕೆಯ ಮೇರೆಗೆ ಕಂಪಿಲನು ಬೇಟೆಗೆ ಹೋಗಬೇಕಾಗಿ ಬಂದಿತು. ಆ ಸುದ್ದಿಯನ್ನು ಕೇಳಿ ರತ್ನಾಜಿ ವಿರಹವನ್ನು ನಟಿಸಲು, ರಾಜನು ಅವಳಿಗೆ ಸಮಾಧಾನವನ್ನು ಹೇಳಿ ತೆರಳಿದನು. ಕುಮಾರರಾಮನಿಗೂ ಆಹ್ವಾನ ಹೋಯಿತು. ಆತನು ಹೊರಡುವ ವೇಳೆಗೆ ಹಲ ಕೆಲವು ಅಪಶಕುನಗಳಾಗಲು, ಆತನು ಊರಿನಲ್ಲಿಯೇ ಉಳಿದನು. ಆ ವಿರಾಮ ಕಾಲವನ್ನು ವಿನೋದವಾಗಿ ಕಳೆಯಬೇಕೆಂದು ಬಯಸಿ, ರಾಮನು ಕಾಟಣ್ಣ ಮತ್ತು ಇತರ ಮನ್ನೆಯರೊಂದಿಗೆ ಕೂಡಿ ತುಂಗಭದ್ರಾ ನದಿಯಲ್ಲಿ ನೀರಾಟವಾಡಲು ತೊಡಗಿದನು. ಅನಂತರ, ಹರಿಯಮ್ಮನ ಬಳಿ, ಮುಮ್ಮಡಿ ಸಿಂಗನ ಕಾಲದ ಚೆಂಡಿರುವುದಾಗಿ ತಿಳಿದುಬಂದಿತು. ಅದನ್ನು ಆಡಲು ಇಚ್ಛಿಸಿ, ತಾಯಿಯ ಬಳಿಗೆ ಬಂದನು. ಮಗನ ಮಾತನ್ನು ಕೇಳಿದ ಕೂಡಲೆ ಹರಿಯಮ್ಮನಿಗೆ ಭಯವಾಯಿತು. ಅದು ಅತ್ಯಂತ ವಿಪತ್ಕಾರಕವಾದುದೆಂದೂ, ಅದರಿಂದ ಈಗಾಗಲೇ ಅನೇಕರು ಕಷ್ಟಕ್ಕೆ ಗುರಿಯಾಗಿರುವರೆಂದೂ ವಿಧವಿಧವಾಗಿ ಹೇಳಿದಳು. ರಾಮನು ತಾಯಿಯ ಯಾವ ಮಾತಿಗೂ ಒಡಂಬಡದೆ,

ಕಣ್ಣೀರು ಸುರಿಸಿದನು. ವೀರಾಗ್ರಣಿಯಾದ ಮಗನ ದುಃಖವನ್ನು ಕಂಡು ಸಹಿಸಲಾರದೆ, ಹರಿಯಮ್ಮನು ನಿರ್ವಾಹವಿಲ್ಲದೆ ಮುತ್ತಿನ ಚೆಂಡನ್ನು ತೆಗೆದುಕೊಟ್ಟಳು. ರಾಮನು ಅದನ್ನು ತೆಗೆದುಕೊಂಡು ಬಂದು, ಒಂದು ಗುಂಪಿಗೆ ಕಾಟಣ್ಣನೂ ಇನ್ನೊಂದು ಗುಂಪಿಗೆ ತಾನೂ ಮುಖಂಡರಾಗಿರುವಂತೆ ವ್ಯವಸ್ಥೆ ಮಾಡಿ, ರತ್ನಾಜಿಯ ಅರಮನೆಯ ಉಪ್ಪರಿಗೆಯ ಸಮೀಪದ ಬಯಲಿನಲ್ಲಿಯೇ ಆಟವನ್ನು ಆರಂಭಿಸಿದನು. ಅತ್ಯಂತ ರಭಸದಿಂದ ಆಟವಾಡುತ್ತಿದ್ದ ಅವರ ಕೂಗು ಕೇಕೆಗಳು ರತ್ನಾಜಿಗೆ ಕೇಳಿಸಿದುವು. ಆಕೆ ಸಂಗಿಯನ್ನು ವಿಚಾರಿಸಲು, ಆಕೆ ಕುಮಾರರಾಮನೂ, ಆತನ ಸಂಗಡಿಗರೂ ಲಗ್ಗೆಯಾಟವನ್ನು ಆಡುತ್ತಿರುವರೆಂದು ತಿಳಿಸಿದಳು. ಶೂಲದ ಹಬ್ಬದಲ್ಲಿ ರಾಮನನ್ನು ಕಂಡಾಗಿನಿಂದ ಒಳಗೊಳಗೇ ಕುದಿಯುತ್ತಿದ್ದ ರತ್ನಾಜಿಗೆ, ಆ ಮುತ್ತಿನ ಚೆಂಡು ಹೇಗಾದರೂ ಹಾರಿ ತನ್ನ ಬಳಿಗೆ ಬರಬಾರದೆ ಎನ್ನಿಸಿತು. ಅದನ್ನು ಬೇಡಲು ಬಂದ ರಾಮನನ್ನು ಉಪಾಯದಿಂದ ಒಲಿಸಿಕೊಳ್ಳಬಹುದೆಂದು ಭಾವಿಸಿದಳು. ಹಲವಾರು ದೇವತೆಗಳಿಗೆ ಹರಕೆ ಹೊತ್ತಳು. ಚೆಂಡಾಟವಾದರೋ ಬಹಳ ಹುರುಪಿನಿಂದ ಸಾಗಿತು. ಇದ್ದಕ್ಕಿದ್ದಂತೆಯೇ ಚೆಂಡು ಪುಟ ನೆಗೆದು ರತ್ನಾಜಿಯ ಅರಮನೆಯೊಳಗೆ ಬಂದು ಬಿದ್ದಿತು. ತಕ್ಷಣವೇ ಎಲ್ಲರೂ ಭಯಭ್ರಾಂತರಾದರು. ರಾಮನಿಗಂತೂ ಬಹು ದೊಡ್ಡ ಸಮಸ್ಯೆಯಾಯಿತು. ತನ್ನ ತಾಯಿ ಹೇಳಿದ ಬುದ್ಧಿವಾದದ ಮಾತುಗಳೆಲ್ಲ ನೆನಪಾದುವು. ರತ್ನಾಜಿಯ ಸಂತೋಷವಂತೂ ಹೇಳತೀರದು. ಸಂಗಿಯ ಮೂಲಕ ಆ ಚೆಂಡನ್ನು ತರಿಸಿಕೊಂಡು ತನ್ನ ಶಯ್ಯಾಗೃಹದಲ್ಲಿ ಬಚ್ಚಿಟ್ಟಳು. ರಾಮನು ದಿಕ್ಕುಗಾಣದೆ ಕಾಟಣ್ಣನನ್ನು ಕರೆದು ಚಿಕ್ಕಮ್ಮನನ್ನು ಕಂಡು, ಚೆಂಡನ್ನು ಬೇಡಿ ತರುವಂತೆ ಕಳುಹಿಸಿದನು. ಕಾಟಣ್ಣನು ರತ್ನಾಜಿಯ ಮನೆಗೆ ಬಂದು, ಸಂಗಿಯನ್ನು ಕಂಡು, ಚೆಂಡನ್ನು ಕೊಡಬೇಕೆಂಬುದಾಗಿ ಹೇಳಿ ಕಳುಹಿಸಿದನು. ರತ್ನಾಜಿ ಮುನಿದವಳಂತೆ ನಟಿಸಿ ಕಾಟನನ್ನು ಮೂದಲಿಸಿದಳು. ಚೆಂಡು ಬೇಕಾದರೆ ರಾಮನೇ ಬರಲೆಂದು ಸೆಡೆತು ಸಿಟ್ಟಾದಳು. ಕಾಟಣ್ಣನ ನಯದ ಮಾತುಗಳೆಲ್ಲ ವಿಫಲವಾದುವು. ಆತನು ನಿರಾಶನಾಗಿ ಹಿಂತಿರುಗಿ, ನಡೆದ ವೃತ್ತಾಂತವನ್ನೆಲ್ಲ ರಾಮನಿಗೆ ವರದಿ ಮಾಡಿದನು. ಕುಮಾರರಾಮನು ಎರಡನೆಯ ಬಾರಿ ಹಡಪದ ಬೊಲ್ಲುಗನನ್ನು ಕಳುಹಿಸಿದನು. ಅವನೂ ಹತಾಶನಾಗಿ ಹಿಂತಿರುಗಿದನು. ಕಡೆಗೆ ರಾಮನೇ ತನ್ನ ಅಲಂಕಾರ ಮೊದಲಾದುವನ್ನೆಲ್ಲ ತೆಗೆದಿಟ್ಟು ಹೊರಟು ಬಂದನು. ಆತನು ರತ್ನಾಜಿಯ ಅರಮನೆಯನ್ನು ಪ್ರವೇಶಿಸುತ್ತಿದ್ದಾಗಲೇ ಹುಳಿಯಾರಿನಿಂದ ತಾನೇ ಬಳುವಳಿಯಾಗಿ ತಂದಿದ್ದ ಗಿಣಿ ಆತನಿಗೆ ಎಚ್ಚರಿಕೆಯನ್ನಿತ್ತಿತು. ಸಂಗಿ ರಾಮನ ಆಗಮನದ ವೃತ್ತಾಂತವನ್ನು ರತ್ನಾಜಿಗೆ ತಿಳಿಸಿದಳು. ಆಕೆ ಹಿಗ್ಗಿ, ರಾಮನನ್ನು ಅತ್ಯಾದರದಿಂದ ಬರಮಾಡಿಕೊಂಡಳು. ರಾಮನು ಮಾತೃಭಕ್ತಿಯಿಂದ ಕೂಡಿ, ಚೆಂಡನ್ನು ಬೇಡಿದನು. ಕುಟಿಲ ರತ್ನಾಜಿಯಾದರೋ ಉಪಚಾರೋಕ್ತಿಗಳನ್ನು ಆಡಿ, ಮುತ್ತಿನ ಚೆಂಡು ತನ್ನ ಮಂಚದ ಮೇಲೆ ಇದೆಯೆಂದೂ, ಆತನೇ ಹೋಗಿ ತೆಗೆದುಕೊಳ್ಳಬಹುದೆಂದೂ ತಿಳಿಸಿದಳು. ರಾಮನು ತೆಗೆದುಕೊಂಡು ಬರಲು ಶಯ್ಯಾಗೃಹವನ್ನು ಪ್ರವೇಶಿಸಿದನು. ಕೂಡಲೇ ರತ್ನಾಜಿ ಹಿಂದಿನಿಂದ ಹೋಗಿ, ಆತನನ್ನು ಆಲಿಂಗಿಸಲು ಯತ್ನಿಸಿ, ತನ್ನ ವಿರಹ ಯಾತನೆಯನ್ನೆಲ್ಲ ನಿವೇದಿಸಿಕೊಳ್ಳಲು ಮೊದಲು ಮಾಡಿದಳು. ರಾಮನಿಗೆ ಕೋಪ ಕೆರಳಿ, ಆಕೆಯನ್ನು ನಿಂದಿಸಿ ಪಕ್ಕಕ್ಕೆ ದೂಡಿ, ಹೊರಟು ಬಂದನು. ರತ್ನಾಜಿಗೆ ರಾಮನ ಮೇಲೆ ಕ್ರೋಧವುಂಟಾಯಿತು. ನಾರಿಯಾಗಿದ್ದವಳು ಮಾರಿಯಾದಳು. ರಾಮನ ಗರ್ವವನ್ನು ತಕ್ಕ ರೀತಿಯಲ್ಲಿಯೇ ಬಿಡಿಸುವೆನೆಂದೂ, ಅವನ ತಲೆಯನ್ನು ಕಡಿಸದೆ ಬಿಡುವುದಿಲ್ಲವೆಂದೂ ಶಪಥ ಮಾಡಿದಳು. ಚಿಕ್ಕಮ್ಮನ ವರ್ತನೆಯಿಂದ ಜುಗುಪ್ಸೆಗೊಂಡಿದ್ದ ರಾಮನು ಅಂದಿನ ಆಟವನ್ನು ಅಷ್ಟಕ್ಕೇ ನಿಲ್ಲಿಸಿ, ಖಿನ್ನನಾಗಿ ತನ್ನ ಅರಮನೆಗೆ ಹಿಂತಿರುಗಿದನು.

## ಕುಮಾರರಾಮನ ಅಜ್ಞಾತವಾಸ

ಕಂಪಿಲನು ಬೇಟೆಯನ್ನು ಮುಗಿಸಿಕೊಂಡು ಸಕಲ ವೈಭವದಿಂದ ಊರಿಗೆ ಹಿಂತಿರುಗಿದನು.

ಹರಿಯಮ್ಮನೇ ಮೊದಲಾದವರು ಅತ್ಯಂತ ಸಂಭ್ರಮ ಸಂತೋಷಗಳಿಂದ ಆತನನ್ನು ಆರತಿ ಅಕ್ಷತೆಗಳ ಸಮೇತ ಬರಮಾಡಿಕೊಂಡರು. ಆ ಜನಸಮುದಾಯದಲ್ಲಿ ತನ್ನ ಅಚ್ಚುಮೆಚ್ಚಿನ ಮಡದಿಯಾದ ರತ್ನಾಜಿ ಕಾಣದಿರಲು ಕಂಪಿಲನಿಗೆ ತುಂಬ ವ್ಯಾಕುಲವಾಯಿತು. ಸಂಗಿಯ ಮೂಲಕ ವಿಚಾರಮಾಡಿ ಕೂಡಲೇ ರತ್ನಾಜಿಯ ಅರಮನೆಗೆ ಹೊರಟುಬಂದನು. ಅಲ್ಲಿ ಅಸ್ತವ್ಯಸ್ತಳಾಗಿ ಬಿದ್ದಿದ್ದ ಸುಂದರಿಯನ್ನು ಕಂಡು ರಾಜನು ತಬ್ಬಿಬ್ಬಾದನು. ಆಕೆಯನ್ನು ಕಾರಣವೇನೆಂದು ಕೇಳಿದನು. ಆಕೆ, ರಾಮನು ತನ್ನ ಅರಮನೆಗೆ ಚೆಂಡಿನ ನೆವದಿಂದ ನುಗ್ಗಿಬಂದು, ಎಷ್ಟು ಹೇಳಿದರೂ ಕೇಳದೆ, ತನಗೆ ಅವಮಾನ ಮಾಡಿರುವನೆಂದೂ, ತಂದೆಗೂ ಮಗನಿಗೂ ತಾನೊಬ್ಬಳೇ ಮಡದಿಯಾಗಿ ಬಾಳಲಾರೆನೆಂದೂ, ತನ್ನ ಬದುಕು ನಗೆಗೇಡಾಯಿತೆಂದೂ ತಿಳಿಸಿ ರೋದಿಸಿದಳು. ಕಂಪಿಲನು ಅವಳ ಮಾತುಗಳನ್ನೆಲ್ಲ ಸತ್ಯವೆಂದು ನಂಬಿ, ಕೂಡಲೆ ಬೈಚಪ್ಪನನ್ನು ಕರೆಸಿದನು. ಮಂತ್ರಿಯೊಂದಿಗೆ ಆ ವಿಚಾರವನ್ನೆಲ್ಲ ವಿವರಿಸಿ, ಅಂಥ ನೀಚಕಾರ್ಯವನ್ನು ಎಸಗಿದ ಕುಮಾರರಾಮನ ತಲೆಯನ್ನು ಕೂಡಲೇ ಕತ್ತರಿಸಿ ತರಬೇಕೆಂದು ಕಠೋರವಾದ ಆಜ್ಞೆಯನ್ನು ವಿಧಿಸಿದನು. ಬೈಚಪ್ಪನಿಗೆ ಏನು ಹೇಳಬೇಕೋ ತೋಚಲಿಲ್ಲ. ಪರನಾರಿ ಸಹೋದರನಾದ ರಾಮನು ಎಂದೆಂದಿಗೂ ಹಾಗೆ ಮಾಡಿರಲಾರನೆಂದು ಅವನಿಗೆ ದೃಢವಾದ ನಂಬಿಕೆ. ಆದರೂ ಕುಪಿತನಾಗಿದ್ದ ಕಂಪಿಲನ ಮುಂದೆ ಏನೂ ಹೇಳಲಾರದೆ ಹೋದನು. ಕೂಡಲೆ ಅಲ್ಲಿಂದ ತೆರಳಿ ಕುಮಾರರಾಮನಿದ್ದಲ್ಲಿಗೆ ಬಂದನು. ರಾಜಾಜ್ಞೆಯನ್ನು ತಿಳಿಸಿದನು. ನಿರಪರಾಧಿಯಾದ ರಾಮನು ನಿಜವಾದ ವೃತ್ತಾಂತವನ್ನೆಲ್ಲ ತಿಳಿಸಿ, ತಂದೆಯ ಅಪ್ಪಣೆಯನ್ನು ಮೀರಬಾರದೆಂದು ಬಗೆದು ಸಾಯಲು ಸಿದ್ಧನಾದನು. ಕುಶಲನಾದ ಬೈಚಪ್ಪನಾದರೋ ರಾಮನ ತಲೆಯನ್ನು ಕಡಿಯಲು ಒಡಂಬಡಲಿಲ್ಲ. ರಾಮ, ಕಾಟಣ್ಣ, ಮತ್ತು ಇತರ ಕೆಲವು ವೀರಾಧಿವೀರರನ್ನು ಜಟ್ಟಂಗಿರಾಮೇಶ್ವರನ ಗುಡಿಯಲ್ಲಿದ್ದ ನೆಲಮಾಳಿಗೆಯೊಂದರಲ್ಲಿ ಬಚ್ಚಿಟ್ಟು, ಕಳ್ಳರಾಮನ ತಲೆಯನ್ನು ಬೇಡಿ, ಕಡಿದು ರಾಜನಿಗೆ ತಂದು ಒಪ್ಪಿಸಿದನು. ರಾಮನ ಮತ್ತು ಆತನ ಗೆಳೆಯರ ಸಂಹಾರದ ಸುದ್ದಿಯನ್ನು ಕೇಳಿ ಎಲ್ಲರೂ ಮರುಗಿದರು. ಹರಿಯಾಲದೇವಿಯ ದುಃಖ ಹೇಳತೀರದು. ರಾಮನ ಮಡದಿಯರೆಲ್ಲ ಬಂದು ಮಾವನನ್ನು ಚಿತೆ ಬೇಡಿದರು. ರಾಮನ ಅಕ್ಕ ತಂಗಿಯರಂತೂ ಕಣ್ಣೀರಿನ ಕೋಡಿಯನ್ನೇ ಹರಿಸಿದರು. ರತ್ನಾಜಿಯಾದರೋ ಕಡಿದು ತಂದ ತಲೆಯನ್ನು ಕಂಡು ತನ್ನ ಶಪಥವನ್ನು ನೆನೆದು ಮನದಲ್ಲಿಯೇ ಹಿಗ್ಗಿದಳು. ಆದರೂ, ಆ ರುಂಡದಲ್ಲಿ ರಾಮನು ಮಗುವಾಗಿದ್ದಾಗ ತಾನು ಮಾಡಿದ್ದ ಒಂದು ರೇಖೆಯ ಗುರುತು ಕಾಣದೆ ಹೋಗಲು, ಅದು ರಾಮನ ತಲೆ ಹೌದೋ ಅಲ್ಲವೋ ಎಂದು ಶಂಕಿಸಿದಳು. ಆದರೆ, ಕಂಪಿಲ ಮೊದಲ್ಗೊಂಡು ಎಲ್ಲರೂ ದುಃಖಗ್ರಸ್ತರಾಗಿರಲು ಆಕೆ ಮಾತೆತ್ತದೆ ಸುಮ್ಮನಾದಳು.

ಕಂಪಿಲನು ರಾಮನ ಮಡದಿಯರ ಕೋರಿಕೆಯನ್ನು ಎಂತು ನೆರವೇರಿಸಬೇಕೆಂದು ತೋಚದೆ ಬೈಚಪ್ಪನನ್ನೇ ಸಲಹೆ ಕೇಳಿದನು. ಬೈಚಪ್ಪನು ಆ ಹೆಣ್ಣುಮಕ್ಕಳನ್ನು ಕರೆದು ಸಮಾಧಾನ ಹೇಳಿ, ಕಪಟ ಸಹಗಮನವನ್ನು ಏರ್ಪಡಿಸಿ, ಜನರಿಗೆ ಮರುಳುಮಾಡಿ ಕುಮಾರರಾಮನಿದ್ದ ನೆಲಮಾಳಿಗೆಗೆ ಅವರನ್ನು ಕರೆದು ತಂದನು.

## ನೇಮಿಯ ದ್ವಿತೀಯ ದಂಡಯಾತ್ರೆ

ಕುಮಾರರಾಮನ ಮರಣದ ವೃತ್ತಾಂತ ಬಹುಬೇಗನೆ ದೂರದ ಡಿಳ್ಳಿಗೂ ಮುಟ್ಟಿತು. ನೇಮಿಯ ಸೋಲಿನಿಂದ ಅಪಮಾನಿತನಾಗಿದ್ದ ಸುಲ್ತಾನನು ಮತ್ತೆ ಕುಮ್ಮಟದುರ್ಗವನ್ನು ವಶಮಾಡಿಕೊಳ್ಳಬೇಕೆಂದು ಯೋಚಿಸಿದನು. ನೇಮಿಯನ್ನು ಕರೆಸಿ ಎರಡನೆಯ ಬಾರಿ ದಂಡೆತ್ತಿ ಹೋಗುವಂತೆ ಹೇಳಿದನು. ನೇಮಿಯಾದರೋ ರಾಮನು ಸತ್ತಿರುವನೆಂದು ನಂಬಲಾರದೆ ಹೋದನು. ಸುಲ್ತಾನನು ಅವನನ್ನು ಹಂಗಿಸಿ, ಕಿಡಿಕಿಡಿಯಾಗಲು, ಗೂಢಚಾರರನ್ನು ಮೊದಲು ಕೊಟ್ಟು ಕಳುಹಿಸಿದನು. ಅವರು ದೇಶ ಸಂಚಾರಮಾಡಿ

ಕೊಂಡು ಬಂದು, ರಾಮನು ಸತ್ತಿರುವನೆಂದು ತಿಳಿಸಿದರು. ನೇಮಿ ಖಾನರುಗಳನ್ನೆಲ್ಲ ಕೂಡಿಕೊಂಡು ಕುಮ್ಮಟದ ಕಡೆ ದಂಡೆತ್ತಿ ಬಂದನು. ಆ ತುರುಕರ ದಾಳಿಯನ್ನು ಸಹಿಸಲಾರದೆ ಪ್ರಜೆಗಳು ಗೂಳೆಯ ತೆಗೆದರು. ನೇಮಿಯ ಕಡೆಯವರು ಶಿಬಿರದಲ್ಲಿ ಟಗರು ಮತ್ತು ಹುಂಜಗಳ ಕಾಳಗಗಳನ್ನು ಏರ್ಪಡಿಸಿ ಶಕುನ ನೋಡಿದರು. ನೇಮಿಯ ಕಡೆಯವರಿಗೇ ಅಪಶಕುನ ಸೂಚಿತವಾಯಿತು. ಆದರೂ ಸುಲ್ತಾನನಿಗೆ ಹೆದರಿ ಮುಂದೆ ಮುಂದೆ ಸಾಗಿ ಬಂದರು. ಬಾದೂರನನ್ನು ಒಪ್ಪಿಸುವಂತೆ ಕಂಪಿಲನಿಗೆ ಹೇಳಿಕಳುಹಿಸಿದರು. ಕಂಪಿಲನು ನಿರಾಕರಿಸಲು ಎರಡು ಕಡೆಯವರಿಗೂ ಯುದ್ಧ ಮೊದಲಾಯಿತು. ಬೈಚಪ್ಪನ ಮಾತಿನ ಮೇರೆಗೆ ಬಾದೂರನು ನೇಮಿಯ ಪಾಳಯ ದಲ್ಲಿ ಇರುಳು ಕಗ್ಗೊಲೆ ನಡೆಸಿದನು. ಆದರೂ, ಕಡೆಕಡೆಗೆ ನೇಮಿಯ ಕೈ ಮೇಲಾಯಿತು. ಕಂಪಿಲನು ದಿಕ್ಕು ಗಾಣದೆ ಬೈಚಪ್ಪನನ್ನು ಕೇಳಲು, ಅವನು ಕೈಯಾರೆ ರಾಮನನ್ನು ಕೊಲ್ಲಿಸಿದ್ದಕ್ಕಾಗಿ ರಾಜನನ್ನು ಮೂದಲಿಸಿ ದನು. ಶತ್ರುಪಕ್ಷದವರು ನುಗ್ಗಿ ನುಗ್ಗಿ ಮುಂದೆ ಬರಲಾರಂಭಿಸಿದರು. ಭಯಭ್ರಾಂತನಾಗಿದ್ದ ಕಂಪಿಲನಿಗೆ ಬೈಚಪ್ಪನು ಧೈರ್ಯ ಹೇಳಬೇಕಾಯಿತು. ತಾನು ರಾಮನಂತಹ ಮತ್ತೊಬ್ಬ ಹೊಸ ರಾವುತನನ್ನು ಕರೆತರುವು ದಾಗಿಯೂ, ಆತನಿಂದ ತಮಗೆ ಜಯ ಸಿದ್ಧವೆಂದೂ ಹೇಳಿ, ಕೂಡಲೆ ಜಟ್ಟಂಗಿರಾಮೇಶ್ವರನ ಗುಡಿಯ ಬಳಿಗೆ ಬಂದನು.

## ಕುಮಾರರಾಮನ ಪುನರಾಗಮನ

ನೆಲಮಾಳಿಗೆಯಲ್ಲಿದ್ದ ರಾಮನು ತನ್ನ ಒಡನಾಡಿಗಳೊಂದಿಗೆ ಪಗಡೆಯಾಟವಾಡುತ್ತಿದ್ದನು. ಬೈಚಪ್ಪನ ಆಗಮನವನ್ನು ಕಂಡು ಎಲ್ಲ ವಿಚಾರವನ್ನೂ ಕೇಳಿ ತಿಳಿದನು. ಮಂತ್ರಿಯ ಮಾತಿಗೆ ಮನ್ನಣೆಯಿತ್ತು, ಮನ್ನೆಯರೊಂದಿಗೆ ಕೂಡಿ ರಣರಂಗವನ್ನು ಪ್ರವೇಶಿಸಿದನು. ಸುಮಾರು ಆರು ತಿಂಗಳಿಂದ ತನ್ನ ಒಡೆಯನನ್ನು ಕಾಣದೆ ಕಂಗೆಟ್ಟಿದ್ದ ಬೊಲ್ಲನಿಗೆ ರಾಮನನ್ನು ಕಂಡ ಕೂಡಲೆ ಜೀವ ಬಂದಂತಾಯಿತು. ನಿಮಿಷ ಮಾತ್ರ ದಲ್ಲಿಯೇ ನೇಮಿಯ ಪಡೆಯಲ್ಲಿ ಅಸಂಖ್ಯಾತವಾದ ಜನರು ಹತರಾದರು. ಕೆಲವರಿಗಂತೂ ಹೊಸ ರಾಹುತನು ರಾಮನೇ ಇರಬೇಕೆಂದು ಶಂಕೆಯುಂಟಾಯಿತು. ಈ ಅದ್ಭುತ ಸಾಹಸ ಕಾರ್ಯವನ್ನು ದೂರದಿಂದ ವೀಕ್ಷಿಸು ತ್ತಿದ್ದ ಕಂಪಿಲನಿಗೆ ಮಹದಾನಂದವಾಯಿತು. ರಾಮನು ಶತ್ರುಗಳನ್ನು ಹೆದ್ದೊರೆಯತನಕ ಅಟ್ಟಿ ಬಂದನು. ಎಲ್ಲವೂ ಆದ ಬಳಿಕ, ಕಂಪಿಲನು ಹೊಸ ರಾಹುತನನ್ನು ಕರೆಯಬೇಕೆಂದು ಬೈಚಪ್ಪನನ್ನು ಕೇಳಿಕೊಂಡನು. ಆತನನ್ನು ಬರಮಾಡಿಕೊಂಡು, ತಲೆಯ ಟೌಳಿಯನ್ನು ತೆಗೆಯುವುದೇ ತಡ, ಆತನು ಕುಮಾರರಾಮನೇ ಆಗಿದ್ದುದನ್ನು ಕಂಡು ಕಂಪಿಲನು ಆಶ್ಚರ್ಯಚಕಿತನಾದನು. ಅಲ್ಲಿಯೇ ನಿಂತಿದ್ದ ಬೈಚಪ್ಪನು ತಾನು ಮಾಡಿದ ಉಪಾಯವನ್ನು ನಿವೇದಿಸಿಕೊಂಡು, ಅರಸನ ದುಡುಕುಬುದ್ಧಿಗಾಗಿ ಹಾಗೆ ಮಾಡ ಬೇಕಾಯಿತೆಂದು ವಿಜ್ಞಾಪಿಸಿದನು. ಕಂಪಿಲನಿಗೆ ಹೋದ ಕಣ್ಣು ಬಂದಂತಾಯಿತು. ತನ್ನನ್ನು ತಾನೇ ಹಳಿದು ಕೊಂಡನು. ರಾಮನು ತಂದೆಗೆ ಸಮಾಧಾನ ಹೇಳಿದನು. ಆ ವೇಳೆಗೆ ಹರಿಯಾಲದೇವಿ, ಮಾರಮ್ಮ, ಸಿಂಗಮ್ಮ ಮೊದಲಾದವರು ಸಂತೋಷಭರಿತರಾಗಿ ಓಡಿ ಬಂದರು. ರಾಮನ ಪತ್ನಿಯರೂ ಸಹ ಅಲ್ಲಿಗೆ ಬಂದರು. ಈ ವೃತ್ತಾಂತವನ್ನೆಲ್ಲ ಕೇಳಿದ ರತ್ನಾಜಿಗೆ ತಾನು ಇನ್ನು ಬದುಕಿರುವುದು ಅಸಹನೀಯವಾಯಿತು. ಕೂಡಲೆ ರಾಮನನ್ನೂ ಕಂಪಿಲನನ್ನೂ ನಿಂದಿಸಿ, ಕುಪಿತಳಾಗಿ, ಆತ್ಮಹತ್ಯೆ ಮಾಡಿಕೊಂಡಳು. ಈ ವಿಷವೃತ್ತ ದಲ್ಲಿ ಸಿಕ್ಕಿಬಿದ್ದಿದ್ದ ಸಂಗಿಯೂ ದಿಕ್ಕುಗಾಣದೆ ತಾನೂ ಒಡತಿಯನ್ನು ಹಿಂಬಾಲಿಸಿದಳು.

## ಮಾತಂಗಿಯ ಮುತ್ತಿಗೆ ಮತ್ತು ಕುಮಾರರಾಮನ ಮರಣ

ಇದ್ದಕ್ಕಿದ್ದಂತೆಯೇ ರಣರಂಗದಲ್ಲಿ ಕಂಡುಬಂದ ಕುಮಾರರಾಮನಿಂದ ನೇಮಿಯ ಪಡೆಗೆ ಮತ್ತೆ ಸೋಲಾಯಿತೆಂಬ ಸುದ್ದಿಯನ್ನು ಕೇಳಿ ಸುಲ್ತಾನನು ದಿಕ್ಕುಗಾಣದೆ ಹೋದನು. ಈ ವೇಳೆಗೆ ನೇಮಿಯೂ

ಬಂದು ನಡೆದ ವೃತ್ತಾಂತವನ್ನೆಲ್ಲ ವಿವರಿಸಿದನು. ಮುಂದೆ ಏನು ಮಾಡಬೇಕೆಂದು ಸುಲ್ತಾನನು ಯೋಚಿಸುತ್ತಿರಲು ಆತನಲ್ಲಿಯೇ ಕೆಲಸಕ್ಕಿದ್ದ ಮಾದಿಗಿತ್ತಿ ಮಾತಂಗಿಯೆಂಬುವಳು ತಾನು ರಾಮನನ್ನು ಗೆದ್ದು ಬರುವುದಾಗಿ ಮುಂದೆ ಬಂದಳು. ಮೊದಮೊದಲು ಯಾರೂ ಆಕೆಯ ಮಾತಿಗೆ ಬೆಲೆ ಕೊಡಲಿಲ್ಲ. ನೇಮಿಯಂತೂ ಬೇರೆ ಯಾರ ಮೇಲಾದರೂ ದಂಡೆತ್ತಿ ಹೋಗಲು ತಾನು ಸಿದ್ಧವೆಂದೂ, ರಾಮನ ಸಹವಾಸವು ಮಾತ್ರ ಇನ್ನು ಸಾಕೆಂದೂ ಹೇಳಿದನು. ಸುಲ್ತಾನನು ಅದಕ್ಕೆ ಒಪ್ಪಲಿಲ್ಲ. ಒಂದು ಕಡೆ ತನ್ನ ಮಗಳಾದ ಚಾಬಮ್ಮನ ವಿರಹಯಾತನೆಯನ್ನು ನೋಡಲಾರ; ಇನ್ನೊಂದು ಕಡೆ ಮೇಲಿಂದ ಮೇಲೆ ತನಗಾದ ಅವಮಾನವನ್ನು ಸಹಿಸಲಾರ. ಮಾತಂಗಿಯ ಮಾತಿಗೆ ಸಮ್ಮತಿಸಿ, ನೇಮಿ ಮೊದಲಾದವರನ್ನು ಮತ್ತೆ ಕೂಡಿಸಿ, ಪುನಃ ಸೈನ್ಯವನ್ನು ಕೊಟ್ಟುಕಳುಹಿಸಿದನು. ತುರುಕರ ದಂಡು ಮತ್ತೆ ಕುಮ್ಮಟದ ಸುತ್ತಲೂ ಬೀಡು ಬಿಟ್ಟಿತು. ರಾಮನಾಥನು ತನ್ನ ತಂದೆ ತಾಯಿ ಮೊದಲಾದವರನ್ನು ಹೊಸದುರ್ಗದಲ್ಲಿ ಸುರಕ್ಷಿತವಾಗಿಟ್ಟು, ಕಾಟಣ್ಣ ಮೊದಲಾದ ಇತರ ವೀರರೊಂದಿಗೆ ಕೂಡಿ ಶತ್ರುಗಳನ್ನು ವೀರಾವೇಶದಿಂದ ಎದುರಿಸಿದನು. ಮಾತಂಗಿ ಆನೆ ಏರಿ ಬಂದಳು. ಎರಡೂ ಪಡೆಗಳಲ್ಲಿ ಹೋರಾಟ ಮಸಗಿತು. ರಾಮನ ಕೈ ಮೇಲಾಯಿತು. ತುರುಕರು ಹತಾಶರಾಗಿ ಹಿಂತಿರುಗಲು ಅನುವಾಗುತ್ತಿದ್ದರು. ಆ ಸಂದರ್ಭವನ್ನೇ ಕಾಯುತ್ತಿದ್ದ ರಾಮನ ಪಕ್ಷದಲ್ಲಿದ್ದ ಕೆಲವು ತೆಲುಗರು ಮಾತಂಗಿಗೆ ತಾವು ಸಹಾಯಮಾಡುವುದಾಗಿ ಕಾಗದ ಬರೆದು ಕಳುಹಿಸಿದರು. ಅವರ ಆಹ್ವಾನದ ಮೇರೆಗೆ ಮಾತಂಗಿ ಮಹಾಕಾಳಿಯಂತೆ ಹಿಂತಿರುಗಿ ಬಂದಳು. ಕುಮಾರರಾಮನು ಮಾತಂಗಿಗೆ ಎದುರಾಗಿಯೇ ನಿಂತನು. ನಿಮಿಷ ನಿಮಿಷಕ್ಕೂ ಯುದ್ಧವು ಭಯಂಕರವಾಯಿತು. ಕುಮಾರರಾಮನಾದರೋ ಎಷ್ಟಾದರೂ ತನ್ನ ಶತ್ರು ಹೆಂಗಸೆಂದೂ, ಆಕೆಯ ಮೇಲೆ ಕೈಮಾಡುವುದು ತನಗೆ ತಕ್ಕುದಲ್ಲವೆಂದೂ ಬಗೆದು ಸ್ವಲ್ಪ ಹಿಂಜರಿದನು. ಮಾತಂಗಿ ಆ ಸದವಕಾಶವನ್ನೇ ಉಪಯೋಗಿಸಿಕೊಂಡು ಕುಮಾರರಾಮನ ಮೇಲೆ ಒಂದೇ ಸಮನೆ ಬಾಣಪ್ರಯೋಗ ಮಾಡಿದಳು. ರಾಮನಾದರೋ ಕಡೆಯತನಕ ಹೋರಾಡಿ ಗೂಗೆಯಕಲ್ಲಿನ ಬಳಿಗೆ ಬಂದನು. ಕಾಟಣ್ಣನನ್ನು ಕರೆದು ತನ್ನ ತಂದೆ ತಾಯಿಗಳ ಬಳಿಗೆ ಹೋಗಬೇಕೆಂದೂ, ತಮ್ಮ ಹೆಂಗಸರು ಶತ್ರುಗಳ ಪಾಲಾಗದಂತೆ ಸಹಗಮನವನ್ನು ಮಾಡುವಂತೆ ತಿಳಿಸಬೇಕೆಂದೂ ಕೋರಿದನು. ಕಾಟಣ್ಣನು ಆ ಸ್ಥಿತಿಯಲ್ಲಿ ಕುಮಾರರಾಮನನ್ನು ಬಿಟ್ಟಿರಲಾರದೆ ಚಿಂತಿಸತೊಡಗಿದನು. ವಿಧಿಯಿಲ್ಲದೆ, ರಾಮನ ಮಾತಿಗೆ ಕಟ್ಟುಬಿದ್ದು ಹೊಸದುರ್ಗಕ್ಕೆ ಓಡಿ ಬಂದು, ರಾಮನ ಸ್ಥಿತಿಯನ್ನು ತಿಳಿಸಿ, ರಾಮನ ಮಡದಿಯರಿಗೂ, ತನ್ನ ಮಡದಿಗೂ ಕಿಚ್ಚು ತೋರಿ, ರಾಮನ ಬಳಿಗೆ ಹಿಂತಿರುಗಿ, ಅವನ ಸಮ್ಮುಖದಲ್ಲಿಯೇ ಪ್ರಾಣಬಿಟ್ಟನು. ರಾಮನ ಆಪ್ತನಾದ ದೇವಿಶೆಟ್ಟಿಯ ಲಿಂಗ, ಮಾದಿಗ ಹಂಪ, ಮೊದಲಾದವರು ಒಬ್ಬೊಬ್ಬರಾಗಿ ಪ್ರಾಣ ಬಿಟ್ಟರು. ರಾಮನ ತಲೆಯನ್ನು ಕತ್ತರಿಸಿಕೊಂಡು ಮಾತಂಗಿ ಶೀಘ್ರವಾಗಿ ಸುಲ್ತಾನನ ಬಳಿಗೆ ಕಳುಹಿಸಿದಳು. ಅದನ್ನು ಕಂಡೊಡನೆಯೇ ಚಾಬಮ್ಮನು ಅತ್ಯಂತ ದುಃಖಿತಳಾಗಿ ತನಗೆ ಆ ತಲೆಯೊಂದಿಗೆ ಚಿತೆಯೇರಲು ಅಪ್ಪಣೆ ಕೊಡಬೇಕೆಂದು ತಂದೆಯನ್ನು ಕೇಳಿಕೊಂಡಳು. ಸುಲ್ತಾನನು ಬಹಳ ಕಷ್ಟಪಟ್ಟು ಆಕೆಗೆ ಸಮಾಧಾನ ಹೇಳಬೇಕಾಯಿತು. ಆ ತಲೆಯನ್ನು ಡಿಳ್ಳಿಯಲ್ಲಿದ್ದ ಒಂದು ಸುರಹೊನ್ನೆಯ ಮರಕ್ಕೆ ಕಟ್ಟಿಸಿದನು. ಅನಂತರ ಊರಿನಲ್ಲಿ ನಾನಾ ಬಗೆಯಾಗಿ ಭಯೋತ್ಪಾದನೆಗಳಾದುವು. ಆಗ ಹಿತೈಷಿಗಳ ಸಲಹೆಯ ಮೇರೆಗೆ ಸುಲ್ತಾನನು ಆ ತಲೆಯನ್ನು ಯಾರಾದರೂ ಬಂದು ತೆಗೆದುಕೊಂಡು ಹೋಗಬೇಕೆಂಬುದಾಗಿ ಕಂಪಿಲನಿಗೆ ಹೇಳಿ ಕಳುಹಿಸಿದನು. ಕುಮ್ಮಟದಿಂದ ರೂಪಿದೇವಯ್ಯ ಎಂಬಾತನು ಬಂದು, ಕುಮಾರರಾಮನನ್ನು ಬಿರುದಾವಳಿಯಿಂದ ಸ್ತುತಿಸಿ ಊರಿಗೆ ತಂದನು. ಅನಂತರ ಆ ರುಂಡವನ್ನು ಕಾಶಿಗೆ ಕಳುಹಿಸಲು ಅಲ್ಲಿ ಅದು ಲಿಂಗಾಕೃತಿಯನ್ನು ತಾಳಿತು.

## ಕೃತಿಯ ವೈಶಿಷ್ಟ್ಯಗಳು

ಪಾಂಚಾಳ ಗಂಗನ ಕೃತಿ ಉಳಿದೆರಡು ಕೃತಿಗಳಿಗಿಂತಲೂ ಚಿಕ್ಕದು.

ಇದರ ಶೈಲಿ ನಂಜುಂಡನ ಕೃತಿಯ ಶೈಲಿಗಿಂತ ಸರಳವಾದುದು.

ಮೂಲಕೃತಿಯ ಸ್ವರೂಪವೇ ಮಾರ್ಪಡುವವುಟ್ಟಿಗೆ ಭಿನ್ನ ಭಿನ್ನ ಪ್ರಭೇದಗಳನ್ನುಳ್ಳದ್ದು. ರತ್ನಾಜಿಯ ಪ್ರಕರಣವನ್ನು ಬಿಟ್ಟರೆ, ಉಳಿದ ಕಥಾವಿವರಗಳಾಗಲಿ, ಪದ್ಯಭಾಗಗಳಾಗಲಿ ಏಕರೀತಿಯಾಗಿಲ್ಲ. (ಈ ಅಸಂಖ್ಯಾತವಾದ ಪಾಠಭೇದಗಳನ್ನು ನೋಡಿದರೆ, ಇದನ್ನು ಕಂಠಪಾಠಮಾಡಿ ಹೇಳುವ ಸಂಪ್ರದಾಯ ವಿತ್ತೆಂದು ತೋರುತ್ತದೆ. ಇಂದಿಗೂ ಗೊಂದಲಿಗರು ಕುಮಾರರಾಮನ ಕಥೆಯನ್ನು ರಾತ್ರಿಯೆಲ್ಲ ಹಾಡುತ್ತಾರೆಂದು ತಿಳಿದುಬರುತ್ತದೆ.)[1]

ಕುಮಾರರಾಮನಿಗೆ ಸಂಬಂಧಿಸಿದ ಜನಜನಿತವಾದ ಕಥೆಗಳು, ಜನಪದಸಾಹಿತ್ಯ ಮತ್ತು ಕೈಫಿಯತ್ತುಗಳು ಬಹುಮಟ್ಟಿಗೆ ಗಂಗನ ಸರಣಿಯನ್ನೇ ಹೋಲುತ್ತವೆ.[2] ಆದ್ದರಿಂದ ಗಂಗನ ಕೃತಿಯ ಪಾಠ ಹೆಚ್ಚು ಜನಪ್ರಿಯವಾಗಿತ್ತೆಂದು ಭಾವಿಸಬಹುದು.

ಕೆಲವು ಪ್ರತಿಗಳಲ್ಲಿ ಕುಮಾರರಾಮನ ವಂಶೀಯರ ಚರಿತ್ರೆಯನ್ನು ಒಂದಲ್ಲ ಒಂದು ಬಗೆಯಾಗಿ ಜೋಡಿಸಿ ಹೇಳಿರುವುದನ್ನು ನೋಡಿದರೆ, ಈ ಮೂಲಕ ಬೇಡರ ಮನೆತನವೊಂದರ ಮಹಿಮೆಯನ್ನು ಸಾರಿ ಹೇಳಲು ಪ್ರಯತ್ನ ಮಾಡಿರುವಂತಿದೆ.

ಗುಂಡುಬ್ರಹ್ಮಯ್ಯನ ವೃತ್ತಾಂತ, ಕೇಡಿನ ಪರಿಹಾರಾರ್ಥವಾಗಿ ಮುತ್ತಿನ ಚೆಂಡಿಗೆ ಪೂಜೆ, ಬಲಿಗಳನ್ನು ನೆರವೇರಿಸುವುದು, ಟಗರು ಹುಂಜಗಳ ಕಾಳಗವನ್ನು ಏರ್ಪಡಿಸಿ ಶಕುನ ನೋಡುವುದು ಇವೇ ಮೊದಲಾದ ಸಂಗತಿಗಳು, ಈ ಕೃತಿಯಲ್ಲಿ ಜನಪ್ರಿಯವಾದ ಸಾಂಪ್ರದಾಯಿಕ ಶ್ರದ್ಧೆ, ದೈವಭಕ್ತಿಗಳು ಹೇಗೆ ಹಾಸು ಹೊಕ್ಕಾಗಿ ಹೆಣೆದುಕೊಂಡಿವೆಯೆಂಬುದನ್ನು ವ್ಯಕ್ತಪಡಿಸುತ್ತವೆ.

ಗಂಗನ ಗಮನ ಏಕಪ್ರಕಾರವಾಗಿ ಘಟನೆಗಳ ಕಡೆಗೇ ಹರಿದಿದೆ. ಉಳಿದೆರಡು ಕೃತಿಗಳೊಂದಿಗೆ ಹೋಲಿಸಿ ನೋಡಿದರೆ ಈತನಲ್ಲಿ ವರ್ಣನಾವಿಭಾಗ ಕಡಮೆಯೆಂದೇ ಹೇಳಬಹುದು. ಆದ್ದರಿಂದ ಇದನ್ನು ಘಟನಾಪ್ರಧಾನವಾದ ಕೃತಿ ಎಂದು ಭಾವಿಸಬಹುದು.

---

1. ಸಂಡೂರಿನ ನಿವಾಸಿಯಾದ ವ್ಯಾಸನಾಯಕರ ಕಂಚಯ್ಯ ಎಂಬ ವೃದ್ಧನೊಬ್ಬನು (ಸುಮಾರು ೯೦ ವರ್ಷ), ಪಾಂಚಾಳಗಂಗನ ಕಾವ್ಯದ ಕೆಲವು ಭಾಗಗಳನ್ನು ಹೇಳುವುದನ್ನು ನಾನು ಇತ್ತೀಚೆಗೆ ಕೇಳಿರುತ್ತೇನೆ. ಆತ ರಾಮನ ಕಥೆಯನ್ನು ಪೂರ್ತಿ ಹೇಳಲು ಮೂರು ದಿನಗಳಾಗುತ್ತವೆ ಎಂದು ಹೇಳಿದ. ಈ ಭೇಟಿ ನಡೆದ ತಾರೀಖು ೨೨–೪–೧೯೬೧.
2. ಈ ವಿವರಗಳನ್ನು ಮುಂದೆ ಪ್ರತಿಪಾದಿಸಿದೆ. (ಅಧ್ಯಾಯ ೭, ೮ ಮತ್ತು ೯.)

# ೫. ಬಾಲರಾಮನ ಸಾಂಗತ್ಯ

## ಹಸ್ತಪ್ರತಿ

ಹಂಪೆಯ ಚರಪತಿ ಮಹಲಿಂಗಸ್ವಾಮಿಯಿಂದ ರಚಿತವಾದ "ಬಾಲರಾಮನ ಸಾಂಗತ್ಯ"ದ ಈ ಹಸ್ತಪ್ರತಿಯನ್ನು ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಬಳಿಯಲ್ಲಿ ನೋಡುವ ಸದವಕಾಶವು ನನಗೆ ಲಭಿಸಿತು. ಈವರೆಗೆ ಇದರ ಒಂದೇ ಒಂದು ಪ್ರತಿ ದೊರೆತಿರುವುದು. ಇದನ್ನು "ರುಧಿರೋದ್ಗಾರಿ ಸಂ॥ ಮಾರ್ಗಶಿರ ಬಹುಳ ೫ ಲ್ಲು ಚೀಲಾನಹಳ್ಳಿ ಮಡುಳಸಿದ್ದಪ್ಪನ ಮೊಮ್ಮಗ ಮರಿದೇವರು....ಕಾಟನೆರೆ ದೊಡ್ಡತಿಮ್ಮಣ್ಣಗೆ" ಬರೆದುಕೊಟ್ಟಂತೆ ತಿಳಿದುಬರುತ್ತದೆ. "ಶುಕ್ರವಾರ ಅಮೃತಘಳಿಗೆ ಮಧ್ಯಾಹ್ನಕ್ಕೆ ಮುಗಿ[ದುದು]" ಎಂದು ಮಾತ್ರ ಹೇಳಿದೆ.[1] ಇಲ್ಲಿ ಸಾಕಾದಷ್ಟು ವಿವರಗಳನ್ನು ಹೇಳಿಲ್ಲದಿರುವುದರಿಂದ ಪ್ರತಿಯ ಕಾಲವನ್ನು ತಿಳಿಯಲು ಸಾಧ್ಯವಿಲ್ಲ.

ಇದು ಕಾಗದದ ಪ್ರತಿ. ಪ್ರತಿಯೊಂದು ಹಾಳೆಯೂ ೮.೫" ಉದ್ದವೂ, ೬.೫" ಅಗಲವೂ ಇದೆ. ೨೨೩ ಹಾಳೆಗಳಿವೆ. (ಪುಟಗಳ ಸಂಖ್ಯೆಯನ್ನು ಒಂದೇ ಕಡೆ ಬರೆದಿದೆ. ಹಾಗೆ ಬರೆಯುವಾಗ ೯೩ ಮತ್ತು ೯೪ನೆಯ ಪುಟಗಳನ್ನು ಹೇಳದೆ ಬಿಟ್ಟಿರುವುದರಿಂದ ಒಟ್ಟು ಪುಟ ಸಂಖ್ಯೆ ೨೨೫ ಎಂದು ಇದೆ.) ಪುಟಗಳ ಎರಡು ಕಡೆಗಳಲ್ಲಿಯೂ ಬರಹವಿದೆ. ಪಂಕ್ತಿಗಳ ಸಂಖ್ಯೆಗಳು ನಿಯತವಾಗಿಲ್ಲ. ಅಕ್ಷರಗಳು ಸುಮಾರಾಗಿವೆ. ಈ ಕೃತಿಯಲ್ಲಿ ಹತ್ತೊಂಬತ್ತು ಸಂಧಿಗಳೂ, ೪೨೮೩ ಪದ್ಯಗಳೂ ಇವೆ. ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿಯೂ ಹರಭಕ್ತಿಪರವಾದ ದೇವತಾಸ್ತುತಿಯೂ, ಪ್ರಹೇಳಿಕಾರೂಪವಾದ ಪದ್ಯಗಳೂ ಇವೆ. ಹಂಪೆಯನ್ನು ಕುರಿತ ಪದ್ಯವೊಂದು ಸಂಧಿಯ ಆದಿ ಅಥವಾ ಅಂತ್ಯದಲ್ಲಿ ಬರುತ್ತದೆ. ಪಾಂಚಾಳಗಂಗನಂತೆಯೇ ಈತನೂ ತಗಡೂರಿನ ವಿನಾಯಕನನ್ನು ಸ್ತುತಿಸಿರುತ್ತಾನೆ. ಪ್ರಕೃತದಲ್ಲಿ ಈ ಅಪೂರ್ವವಾದ ಕೃತಿಯಿಂದ ಸಾಧ್ಯವಾದಷ್ಟುಮಟ್ಟಿಗೆ ಪದ್ಯಭಾಗಗಳನ್ನು ಉದಾಹರಿಸಿ ಕಥಾಸಂಗ್ರಹವನ್ನು ಮಾಡಲಾಗಿದೆ. ವಿಶೇಷವೆಂದು ಕಂಡೆಡೆಗಳಲ್ಲಿ ಪ್ರತಿಯಲ್ಲಿನ ಗ್ರಾಮ್ಯರೂಪಗಳನ್ನು ತಿದ್ದುವುದಕ್ಕೆ ಹೋಗಿಲ್ಲ.

---

1. ೧೩ನೆಯ ಪುಟದಲ್ಲಿ ಪ್ರಕೃತ ವಾಕ್ಯವನ್ನು ಉದ್ಧರಿಸುವಲ್ಲಿ "ಮಧ್ಯಾಹ್ನ ಮುಹೂರ್ತ ಮಂಗಳವು" ಎಂದಿರುವುದನ್ನು "ಮಧ್ಯಾಹ್ನಕ್ಕೆ ಮುಗಿ[ದುದು]" ಎಂದು ಓದಿಕೊಳ್ಳಬೇಕಾಗಿ ವಿನಂತಿ.

# ಕಥಾಸಂಗ್ರಹ

## ಪೀಠಿಕೆ

ಹವಿನ್ನಾಡ ದೇಶದಲ್ಲಿ ಕುಮ್ಮಟದುರ್ಗವೆಂಬುದು ಅತ್ಯಂತ ವೈಭವದಿಂದ ಮೆರೆಯುತ್ತಿತ್ತು. ಆ ಊರಿನ ಅಧಿದೇವತೆಯೇ ಜಟ್ಟಂಗಿರಾಮೇಶ್ವರ. ಕುಮಾರರಾಮನ ಮಗನಾದ ಜಟ್ಟಂಗಿರಾಯನೇ ಆ ಪುರದ ಅರಸು. ಒಂದು ದಿನ ಮಹಾರಾಜನು ಒಡ್ಡೋಲಗದಲ್ಲಿರಲು ಆತನ ಗುರುವಾದ ಪ್ರಭುದೇವರು ಆಗಮಿಸಿದರು. ಮಹಾರಾಜನು ಅವರನ್ನು ತಕ್ಕ ರೀತಿಯಲ್ಲಿ ಸತ್ಕರಿಸಿ "ಭಾರತ ಜೈಮುನಿಯ ಕಾಳಗ ಎಂಬರು ಪೇಳಬೇಕೆನಗೆ ಸದ್ಗುರುವೆ, ಆದಿಯೊಳ್ನಡದಂತ ಕಾರ್ಯಪ್ರಸಂಗವ ಪೇಳಬೇಕು" ಎಂದು ಕೇಳಿಕೊಂಡನು. ಗುರುಗಳು "ತನುಜನೆ ಕೇಳ್ನಿಮ್ಮ ಜನಕ ಮಾಡಿದ ಕಾರ್ಯ ದಣಿಯಲಾಗುವುದು ಈ ಧರಣಿ, ಜೈಮುನಿಯು ರಾಮಣ್ಯ ಸಮರುಕ್ತಿ ಭಾರತಕೆ ಮಿಗಿಲಾಗಿ ಮಾಡಿ ಅಳಿದಿಹರು" ಎಂದು ಉತ್ತರವಿತ್ತರು. ರಾಜನು ಆ ವೃತ್ತಾಂತವನ್ನೇ ಹೇಳಬೇಕೆಂದು ವಿಜ್ಞಾಪಿಸಿಕೊಳ್ಳಲು ಗುರುಗಳು ಕುಮಾರರಾಮನ ಕಥೆಯನ್ನು ಹೇಳಲು ಮೊದಲು ಮಾಡಿದರು.

ವೀರಕಸ್ತೂರಿನಾಯಕ, ಮುಮ್ಮಡಿಸಿಂಗ ಎನ್ನುವವರು ಆಳಿದ ತರುವಾಯ ಕಂಪಿಲನು ಅರಸಾದನು. ಕಂಪಿಲನಿಗೆ ಹರಿಯಮ್ಮ ಮತ್ತು ಕಮಲಾಜಿ ಎಂಬ ಇಬ್ಬರು ರಾಣಿಯರಿದ್ದರು. ಮಹಾರಾಜನಿಗೆ ಬಹಳ ಕಾಲದವರೆಗೆ ಸಂತತಿಯಿರಲಿಲ್ಲ. ಆತನ ವೈಭವವೇನೋ ಮಿಗಿಲಾಗಿದ್ದಿತು. ಮಹಾರಾಜನು ತನ್ನ ರಾಣಿಯರೊಂದಿಗೆ ಕೂಡಿ ಲಿಂಗದ ಗುಡಿಗೆ ಹೊರಟನು. ಅಲ್ಲಿಯೇ ತಂಗಿದ್ದು ಮಾರನೆಯ ದಿನ ಪೂಜಾದಿ ಕಾರ್ಯಗಳನ್ನು ಮುಗಿಸಿಕೊಂಡು ಊರಿಗೆ ಹಿಂತಿರುಗುತ್ತಿದ್ದನು. ನಡುದಾರಿಯಲ್ಲಿ ಆಯಾಸಪರಿಹಾರಾರ್ಥವಾಗಿ ಒಂದು ವನದಲ್ಲಿ ಬೀಡುಬಿಟ್ಟನು. ಆ ವೇಳೆಗೆ ಗೊಲ್ಲರು ಮೂಲಾನಕ್ಷತ್ರದಲ್ಲಿ ಹುಟ್ಟಿದ್ದ ಗಂಡುಮಗುವೊಂದನ್ನು, ತಮಗೆ ಕೆಡುಕಾದೀತೆಂದು ಬಗೆದು, ಅಲ್ಲಿದ್ದ ಬಿಲ್ಲಕಾಟಮಲಿಂಗನ ದೇವಾಲಯದಲ್ಲಿ ಇಟ್ಟು ಹೊರಟಿದ್ದರು. ಕಂಪಿಲನಿಗೆ ಕುಡಿಯಲು ನೀರನ್ನು ತರಲು ಹೊರಟಿದ್ದ ರಾಜಭಟರಿಗೆ ಗುಡಿಯಲ್ಲಿದ್ದ ಆ ಹಸುಗೂಸಿನ ದರ್ಶನವಾಯಿತು. ಅವರು ಆ ಮಗುವನ್ನು ತಂದು ರಾಜನಿಗೆ ಒಪ್ಪಿಸಿದರು. ರಾಜನಿಗೆ ಅತ್ಯಂತ ಆನಂದವಾಗಿ ಅದನ್ನು ಹರಿಯಮ್ಮನಿಗೆ ಒಪ್ಪಿಸಿ ಸಲಹೆಂದು ಹೇಳಿದನು. ಕಂಡು ಕಾಣದ ಕೂಸನ್ನು ಹೇಗೆ ಸಲಹುವುದೆಂದು ಹರಿಯಮ್ಮನು ಹಿಂತೆಗೆದಳು. ಅನಂತರ ರಾಜನು ಆಕೆಗೆ ಸಮಾಧಾನ ಹೇಳಿ, ಆ ಮಗುವಿನ ಜನನ ವೃತ್ತಾಂತವನ್ನು ಶೋಧಿಸಿ, ಜೋಯಿಸರ ಸಲಹೆಯನ್ನು ಪಡೆದು, ಅದಕ್ಕೆ ಕಾಟನೆಂದು ಹೆಸರಿಟ್ಟು ಸಾಕತೊಡಗಿದನು.

ಹೀಗೆ ದಿನಗಳು ಕಳೆಯಲು, ಆ ಊರಿಗೆ ಡೊಂಬರ ಗುಂಪೊಂದು ಬಂದಿತು. ಆ ಗುಂಪಿನಲ್ಲಿ ರತ್ನಾಜಿ ಎಂಬಾಕೆ ಅತ್ಯಂತ ಸುಂದರಿಯಾಗಿಯೂ, ಆಟ ಕಟ್ಟುವುದರಲ್ಲಿ ನಿಪುಣೆಯಾಗಿಯೂ ಇದ್ದಳು. ಅವರು ರಾಜನ ಸಮ್ಮುಖದಲ್ಲಿ ಒಂದು ಆಟವನ್ನು ಹೂಡಿದರು. ಮಹಾರಾಜನು ರತ್ನಾಜಿಯನ್ನು ಕಂಡಕೂಡಲೆ ಬೆರಗಾಗಿ ಮೋಹಪರವಶನಾದನು. ಆಕೆಯ ಆಟವನ್ನು ನೋಡಿದ ಮೇಲಂತೂ ಮತ್ತೂ ಮರುಳಾದನು. ರಾಜನು ಆಕೆಯನ್ನು ವರಿಸಿ ತನ್ನ ಅರಮನೆಯಲ್ಲಿಯೇ ಇಟ್ಟುಕೊಳ್ಳಬೇಕೆಂದು ಅಪೇಕ್ಷಿಸಿದನು. ಮಂತ್ರಿಯಾದ ಬೈಚಪ್ಪನು ಆಕ್ಷೇಪಿಸಲು, ಮಹಾರಾಜನು ತನ್ನ ಪರವಾಗಿ ಅನೇಕ ನಿದರ್ಶನಗಳನ್ನು ಕೊಟ್ಟು ಕಡೆಗೆ ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಂಡನು.[1] ಜನಗಳು ಅದನ್ನು ಕಂಡು ತಮ್ಮತಮ್ಮಲ್ಲಿಯೇ ಆಡಿಕೊಳ್ಳಲು ಆರಂಭಿಸಿದರು. ಪುನಃ ಕಂಪಿಲನು ತನ್ನವರೊಂದಿಗೆ ಕೂಡಿ ರಾಮೇಶ್ವರನ ದೇವಾಲಯಕ್ಕೆ ತೆರಳಿದನು. ಪೂಜೆ ಪುರಸ್ಕಾರಗಳನ್ನು

---

1. ಮುಂದೆ ನೋಡಿ: ಉಪಕಥೆ ೧.

ಮುಗಿಸಿಕೊಂಡು ತನ್ನ ತಂದೆಯ ಕಾಲದ ವನವನ್ನು ನೋಡಿಕೊಂಡು ಬರಲು ಹೊರಟನು. ಅಲ್ಲಿನ ಪ್ರಕೃತಿ ಸೌಂದರ್ಯವನ್ನು ನೋಡುತ್ತಿರಬೇಕಾದರೆ ಹರಿಯಮ್ಮ ಅಲ್ಲಿದ್ದ ಪಕ್ಷಿಗಳು ತಮ್ಮ ಮರಿಗಳಿಗೆ ಗುಟುಕು ಕೊಡುತ್ತಿರುವುದನ್ನು ಕಂಡು, ಮಕ್ಕಳಿಲ್ಲದ ತನ್ನ ಸ್ಥಿತಿಯನ್ನು ನೆನೆದು ತುಂಬ ನೊಂದುಕೊಂಡಳು. ಮಹಾರಾಜನು ಹೆಂಡತಿಯನ್ನು ಸಂತೈಸಿ, ಆಕೆಯನ್ನೂ ಕರೆದುಕೊಂಡು ದೇವಾಲಯಕ್ಕೆ ಬಂದನು. ದಂಪತಿಗಳು ಈಶ್ವರನನ್ನು ಭಕ್ತಿಭಾವದಿಂದ ಪ್ರಾರ್ಥಿಸಿದರು. ದೇವರು ಕೊರಳಿನ ಪುಷ್ಪವನ್ನು ಅನುಗ್ರಹಿಸಿದನು. ರಾಜನಿಗೆ ಅಷ್ಟಕ್ಕೇ ತೃಪ್ತಿಯಾಗದೆ, ಅದ್ವಿತೀಯನಾದ ಮಗನನ್ನು ಕರುಣಿಸಬೇಕೆಂದು ಪ್ರಾರ್ಥಿಸಿದನು. ಈಶ್ವರನು "ಕಾಲಭೈರವನಂತಾ ಕುಮಾರನಾಗಲಿಯೆಂದು ತ್ರಿಶೂಲದ ಪ್ರ[ಸಾ]ದವಿಡಲು" ರಾಜನು ಸಂತುಷ್ಟನಾಗಿ "ಕದಳಿಯ ಫಲದಲ್ಲಿ ಹುದುಗಿ ಪ್ರ[ಸಾ]ದವ ಮಡದಿ ಹರಿಯಮ್ಮಗೆ" ಕೊಟ್ಟನು. ಈ ರೀತಿ ಕುಮಾರ ರಾಮನ ಜನನಕ್ಕೆ ಕಾರಣವಾಯಿತೆಂದು ಗುರುಗಳು ಜಟ್ಟಂಗಿರಾಯನಿಗೆ ತಿಳಿಸಿದರು. ಆ ವೇಳೆಗೆ ಕತ್ತಲಾಗಲು ಅಂದಿಗೆ ಅಷ್ಟಕ್ಕೇ ಕಥೆಯನ್ನು ನಿಲ್ಲಿಸಿದರು.

## ಕುಮಾರರಾಮನ ಜನನ, ಬಾಲ್ಯ ಮತ್ತು ಬೆಳವಣಿಗೆ

ಮಾರನೆಯ ದಿನ ಎಂದಿನಂತೆಯೇ ಜಟ್ಟಂಗಿರಾಯನ ಓಲಗವು ಸೇರಿತು. ಗುರುಗಳು ದಯಮಾಡಿಸಿ ಕಥೆಯನ್ನು ಮುಂದುವರಿಸಿದರು. ಈಶ್ವರನಿಂದ ಪ್ರಸಾದವನ್ನು ಪಡೆದ ಕಂಪಿಲನು ತನ್ನ ರಾಜಧಾನಿಗೆ ಹಿಂತಿರುಗಿದನು. ಎಲ್ಲರನ್ನೂ ಅವರವರ ಮನೆಗಳಿಗೆ ಕಳುಹಿಸಿ ತಾನು ನಿದ್ರೆ ಮಾಡಲು ಹೋದನು. ಕನಸಿನಲ್ಲಿ ಈಶ್ವರನು ಕಂಡುಬರಲು, ಅವನ ಹಾವನ್ನು ಕಂಡು ಗಡಗಡನೆ ನಡುಗಿದನು. ಆಗ ದೇವರು ಅವನಿಗೆ ಧೈರ್ಯ ಹೇಳಿ, "ಹೆದರಬೇಡವೊ ಮಗನೆ ಹೃದಯದೊಳೊರ್ವನು ಚದುರ ಪ್ರತಾಪ ಜನಿಸುವನು, ಇದಿರಿಲ್ಲ ಅವನಿಗೆ ಭುವನ ನವಖಂಡಗಳು, ವಿಧಿವಾಸ ಸ್ವಲ್ಪ ಕಿಂಚಿತವು. ಚಪ್ಪನ್ನರಾಯರೊಳ್ ಕಪ್ಪವ ತೆಗೆವನು. ಸತ್ಯದೊಳು ಹರಿಶ್ಚಂದ್ರ ನೆಲಸುವನು. ಪರಸ್ತ್ರೀಯ ಒಪ್ಪಕೆ ಸಿಲುಕನು. ಒಂದು ಕಂಟಕವುಂಟು. ತಪ್ಪದಾಳ್ವನು ಮೂವತ್ತೊರುಷ" ಎಂದು ತಿಳಿಸಿದನು. ಮಹಾರಾಜನು ಆ ಕನಸನ್ನು ತನ್ನ ಹೆಂಡತಿಯರಿಗೆ ವಿಶದಪಡಿಸಿದನು. ಪತಿದೇವನು ಪಟ್ಟ ಭಯವನ್ನು ಕೇಳಿ ಅವರಿಗೆ ನಗು ಬಂದಿತು. ಸ್ವಲ್ಪ ಕಾಲದೊಳಗಾಗಿಯೇ ಹರಿಯಮ್ಮ ಗರ್ಭಿಣಿಯಾದಳು. ಕಂಪಿಲನು ನಾನಾ ಧರ್ಮಕಾರ್ಯಗಳನ್ನು ನೆರವೇರಿಸಿದನು. ಹರಿಯಮ್ಮ ಹಡೆಯುವ ಕಾಲವು ಹತ್ತಿರ ಹತ್ತಿರವಾದಂತೆಲ್ಲ ದೇವಾನುದೇವತೆಗಳೂ, ಖೇಚರರೇ ಮೊದಲಾದವರೂ ಆ ಶುಭಮುಹೂರ್ತವನ್ನೇ ಎದುರು ನೋಡುತ್ತಿದ್ದರು. ಕಡೆಗೆ "ಶ್ರಾವಣ ಮಾಸದೊಳ್ ಸ್ಥಿತಿ (ಸಿತ?) ಪಂಚ ಗುರುವಾರ ಜಾವ ಎರಡನೆ ಏಳು ಗಳಿಗೆ ಪವುರ್ನೋಮಿ ಚಂದ್ರನು ಪೂರ್ವದೊಳಿಪ್ಪಂತೆ" ಬಾಲಕನ ಜನನವಾಯಿತು. ಸ್ಫುರದ್ರೂಪ ಮತ್ತು ಅಮಿತ ಕಾಂತಿಯಿಂದ ಕೂಡಿ ಆ ಮಗು ನೋಡಲು ಅತ್ಯಂತ ಮನೋಹರವಾಗಿತ್ತು. ದಾಸಿಯೊಬ್ಬಳು ಕೂಡಲೇ ರಾಜನ ಬಳಿಗೆ ಓಡಿಬಂದು "ಧೃತರಾಷ್ಟ್ರ ಕೌರವರ ಹತಮಾಡಿ ಕೊಂದಾತ ಪ್ರತಿಭೀಮ ಬಂದು ಜನಿಸಿದ, ರತಿದೇವಿಪತಿ ಭೂಪ ಹತನಾದನೆನಬೇಡ ಸುತನಾದ ಬಂದಿಲ್ಲಿ ನಿಮಗೆ" ಎಂದು ತಿಳಿಸಿದಳು. ಆ ಶುಭಸಮಾಚಾರವನ್ನು ಕೇಳಿ ಮಹಾರಾಜನು ಆಕೆಗೆ "ಬಾಯೊಳು ಹೊನ್ನ ತುಂಬಿಸಿದ." ಮಹಾರಾಜನು ಓಲಗವನ್ನು ಕೂಡಿಸಿ ಅತ್ಯಂತ ಸಂಭ್ರಮದಲ್ಲಿರಲು ಆತನ ಗುರುವಾದ ಯೋಗೀಂದ್ರ ಸಾರಂಗ ಮುನಿಗಳು ಅಲ್ಲಿಗೆ ಬಂದರು. ಮಹಾರಾಜನು ಸಂತುಷ್ಟನಾಗಿ ಆ ಹಸುಗೂಸನ್ನು ಆಶೀರ್ವದಿಸಬೇಕೆಂದು ಅವರಿಗೆ ತೋರಿಸಿದನು. ಮಹಾರಾಜನ ವಂಶಾಭಿವೃದ್ಧಿಯಾದುದನ್ನು ಕಂಡು, ಮುನಿಗಳು ಹಿಗ್ಗಿ, ಮಗುವನ್ನು "ಧರ್ಮಜನನುಜನ ರೀತಿಗೆ ಸಮನೆನ್ನಬಹುದು" ಎಂದೂ, "ಹ(ಕಿ?)ರಿಯ ಜನನಿಯಿಂದ ಮರಣ ತಪ್ಪದು ರಾಯ, ಮರಣವನು ತಿಳಿದಿರೊ ಮಂತ್ರಿ" ಎಂದೂ ಎಚ್ಚರಿಸಿ, ಮಗುವಿಗೆ "ರಾಮಕುಮಾರಯ್ಯ" ಎಂದು ಹೆಸರಿಟ್ಟು ಹಿಂತಿರುಗಿದರು.

ಇತ್ತ ನಾರದರು ಹೊಸಮಲೆಯ ಅರಣ್ಯದಲ್ಲಿ ತಪೋಮಗ್ನರಾಗಿದ್ದ ಋಷಿಗಳ ಬಳಿಗೆ ಬಂದರು. ನಾರದರ ಅನಿರೀಕ್ಷಿತವಾದ ಆಗಮನವನ್ನು ಕಂಡು ಋಷಿಗಳು ಅವರು ಬಂದ ಕಾರಣವೇನೆಂದು ಬೆಸಗೊಂಡರು. ನಾರದರು ಅವರು ನೆಲಸಿರುವ ಅರಣ್ಯವು ಸದ್ಯದಲ್ಲಿಯೇ ರಣರಂಗವಾಗುವುದೆಂದು ತಿಳಿಸಿದರು. ಋಷಿಗಳು ಹಾಗಾಗಲು ಕಾರಣವೇನೆಂದು ಮೇಲಿಂದ ಮೇಲೆ ಕೇಳಿದರು. ನಾರದರು ಕುಮಾರರಾಮನ ಜನನದ ವೃತ್ತಾಂತವನ್ನೂ ರೇಣುಕೆಯ ಪ್ರಸಂಗವನ್ನೂ ಸವಿಸ್ತಾರವಾಗಿ ವಿವರಿಸಿ, ಅಂದಿನ ಜಮದಗ್ನಿಯೇ ಮತ್ತೆ ಕಂಪಿಲನಾಗಿಯೂ, ಪರಶುರಾಮನೇ ಕುಮಾರರಾಮನಾಗಿಯೂ, ರೇಣುಕೆಯೇ ರತ್ನಾಜಿಯಾಗಿಯೂ, ಕಾರ್ತವೀರ್ಯಾರ್ಜುನನೇ ಸುರುತಾಳನಾಗಿಯೂ ಜನಿಸಿರುವರೆಂದೂ, ಅವರ ದೆಸೆಯಿಂದ ಘೋರವಾದ ಕಾಳಗವಾಗುವುದೆಂದೂ ಸೂಚಿಸಿದರು.[1] ಅನಂತರ ಆ ಮುನಿಗಳು ಆ ಎಡೆಯನ್ನು ಬಿಟ್ಟು ಹೊರಡಲು ಸಿದ್ಧರಾದರು. ಆ ಮುನಿಗಳಲ್ಲಿ ಒಬ್ಬನು ಹೆಣ್ಣಿನ ಕೋಪವನ್ನು ಚಿತ್ರಿಸುವ ಸಲುವಾಗಿ ಹಿಂದೆ ವಿಜಯೇಂದ್ರನ ಮಗಳು ತನ್ನ ಗಂಡನಾದ ಪಾಲೇಂದ್ರನನ್ನು ಸಂಹರಿಸಿದ ಕಥೆಯನ್ನು ಹೇಳಿದನು.[2] ಈ ರೀತಿ ಜಟ್ಟಂಗಿ ರಾಯನಿಗೆ ಆತನ ಗುರುಗಳು ಆತನ ತಂದೆಯ ಜನನ ಮತ್ತು ಮಹಿಮೆಯ ವೃತ್ತಾಂತವನ್ನು ತಿಳಿಸಿದರು.

ಗುರುಗಳು ರಾಮನ ಬಾಲಲೀಲೆಯನ್ನೆಲ್ಲ ವರ್ಣಿಸಿದರು. ಅವನ ಚೆಲುವನ್ನು ಕಂಡು ರತ್ನಾಜಿ ಮದನತಾಪವನ್ನು ತಾಳಲಾರದೆ ಅವನನ್ನು ಬಿಗಿದಪ್ಪಿಕೊಂಡು ಮೋಹದಿಂದ ಗಲ್ಲವನ್ನು ಕಡಿದಳು. ಬಾಲಕನಿಗೆ ತಕ್ಕ ವಯಸ್ಸಾಗಲು ಹರಿಯಮ್ಮ ರಾಮನಿಗೂ ಕಾಟನಿಗೂ ಸೂಕ್ತ ವಿದ್ಯಾಭ್ಯಾಸವನ್ನು ಮಾಡಿಸಬೇಕೆಂದು ಬಯಸಿದಳು. ಅಂತೆಯೇ ಅವರಿಗೆ ಓದು, ಬರಹ, ಅಂಗಸಾಧನೆ, ಶಸ್ತ್ರಾಭ್ಯಾಸ ಮೊದಲಾದುವುಗಳನ್ನು ಕಲಿಸಲು ಏರ್ಪಾಡಾಯಿತು. ರಾಮನು ತನ್ನ ಅಣ್ಣನಾದ ಕಾಟನೊಡನೆ ತಾವೂ ತಮ್ಮ ಹಿರಿಯರಂತೆ ಸಾಹಸ ಕಾರ್ಯಗಳನ್ನು ಮಾಡಿ, ಕೀರ್ತಿಯನ್ನು ಸಂಪಾದಿಸಬೇಕೆಂದೂ, ದೇಹವು ಸ್ಥಿರ ವಲ್ಲವೆಂದೂ ಪದೇ ಪದೇ ಹೇಳುತ್ತಿದ್ದನು. ರಾಮನು ಮೂರುರಾಯರ ಗಂಡ, ಮುಂಗುಲಿರಾಯನ ಮಿಂಡ, ತುಳುವರಾಯರ ಮಿಂಡ, ಓರ್ಗಲ್ಲ ಗಣಪತಿರಾಯನ ಮಿಂಡ, ಮುಂತಾದ ಬಿರುದಾವಳಿಗಳಿಂದ ಮೆರೆಯ ಲಾರಂಭಿಸಿದನು. ಅಲ್ಲದೆ "ಹರ ಶಂಭು ಜಾಟಂಗಿರಾಮಗೆತ್ತಿದ ಕರವ ನರರಿಗೆ ಎತ್ತುವನಲ್ಲ" ಎಂದು ಶಪಥವನ್ನು ಮಾಡಿದನು. ತಮ್ಮನ ಯುದ್ಧಾಭಿಲಾಷೆಯನ್ನು ಕಂಡು ಕಾಟನು "ಕಾಳಗ ಎಂಬೋದು ಕರ್ಮದ ಫಲ ತಮ್ಮ ಮಾಡುವರು ಧರ್ಮಗ್ಲಾನಿಗಳು" ಎಂದು ಹೇಳಿದನು. ಅದಕ್ಕೆ ರಾಮನು, ಆ ಮಾತನ್ನು ಒಪ್ಪದೆ, "ಕೇಳಯ್ಯ ಅಣ್ಣಾಜಿ, ಇವಕ್ಕೆ ದೃಷ್ಟವ ಕೊಡುವೆ ಮೂಲಕರ್ತನು ಶಿವನೊಳಗೆ" ಎಂದು ಅನೇಕ ಉದಾಹರಣೆಗಳನ್ನು ಹೇಳಿದನು. ಹುಡುಗರಿಬ್ಬರೂ ಅಲಂಕೃತರಾಗಿ, ಬಿರುದಾವಳಿಯನ್ನು ಹೊಗಳಿಸಿಕೊಳ್ಳುತ್ತ ಕಂಪಿಲನಲ್ಲಿಗೆ ಬಂದರು. ತಂದೆಯನ್ನು ಕಂಡು "ರಾಜರೊಳು ರಾಜನೆ, ರಾಜ ಮಾರ್ತಂಡನೆ, ತೇಜತ್ವದೊಳು ಕರ್ಣಭೂಪ, ದೇವೇಂದ್ರ ಸಮಗಾತ್ರ, ದೇಶ ಮಧ್ಯದಿ ನಿಮ್ಮ ಹಿರಿದ ರಾಯರ ಪೇಳೆಮಗೆ....ಕೈಯ ಮುಗಿಯದೆ ಕಾಣಿಕೆಯ ಈಯದ ದೊರೆಗಳನು ಎಮ್ಮಯ್ಯನೆ ಪೇಳು" ಎಂದು ವಿನಂತಿ ಮಾಡಿಕೊಂಡರು. ಮಕ್ಕಳ ಮಾತನ್ನು ಕೇಳಿ ಕಂಪಿಲನಿಗೆ ತುಂಬ ಸಂತೋಷವಾಯಿತು. "ನರಪಿಂಡ ವಾಗಲು ಬರಲಿರದು ಈ ಜ್ಞಾನ, ವರಪಿಂಡ ಅಹುದೆಂದು ಮನದಿ" ಭಾವಿಸಿದನು. ಅನಂತರ ತನಗೆ, ಗುತ್ತಿಯ ನ್ನಾಳುತ್ತಿದ್ದ ಕಸ್ತೂರಿ ಚಾಮಯ್ಯ, ಹಳೆಯಬೀಡಿನ ಬಲ್ಲಾಳ, ಓರುಗಲ್ಲಿನ ರಾಜ, ಸುರುತಾಳ ಮೊದಲಾದ ವರು ಪರಮ ವೈರಿಗಳೆಂದು ಹೇಳಿದನು. "ಬಲ್ಲಾಳನ ಕಾಟವಂತೂ ಹೇಳತೀರದು" ಎಂದನು. "ಕಂದಾ ಕೇಳಿರೊ ಎನ್ನ ಕಾಲಕ್ಕೆ ಈ ಕಷ್ಟಭಂಗವಲ್ಲದೆ ಸುಖವ ಕಾಣೆ. ಮುಂದೆ ನಿಮ್ಮಯ ಪುಣ್ಯಫಲದಿಂದ ಎನ್ನಯ

---

1. ಮುಂದೆ ನೋಡಿ : ಉಪಕಥೆ ೨.
2. ಮುಂದೆ ನೋಡಿ : ಉಪಕಥೆ ೩.

ಪಾಟ್ಟು (ಪಾಡು ?) ಹಿಂಗಲು ನಾ ಪುಣ್ಯಜೀವ" ಎಂದು ತಿಳಿಸಿದನು. ತಂದೆಯ ಮಾತುಗಳನ್ನು ಕೇಳಿ ದೊಡನೆಯೇ ರಾಮನು ಗಾಯಗೊಂಡ ಹುಲಿಯಂತೆ ಕೆರಳಿದನು. ಮುಂಗಾರಿನ ಸಿಡಿಲಿನಂತೆ ಗುಡುಗುತ್ತ, ತನಗೆ ಯುದ್ಧಕ್ಕೆ ಹೋಗಲು ವೀಳೆಯವನ್ನು ನೀಡುವಂತೆ ಕೇಳಿಕೊಂಡನು. ಮಕ್ಕಳಿಗೆ ಅವರ ಕಾರ್ಯದ ಹೊಣೆಯನ್ನು ತಿಳಿಸಲು, ಅವರು ವೀರಾವೇಶದಿಂದ ರಾಜನಿಗೆ ಉತ್ತರವಿತ್ತರು. ಅನಂತರ, ರಾಜನು ಅವರಿಬ್ಬರನ್ನೂ ಆಶೀರ್ವದಿಸಿ, ಬೇಕು ಬೇಕಾದ ಸೈನ್ಯ ಸಹಾಯವನ್ನಿತ್ತು ಕಳುಹಿಸಿದನು. ಅಣ್ಣತಮ್ಮಂದಿರು ತಾಯಿಯ ಬಳಿಗೆ ಬಂದು, ತಾವು ಯುದ್ಧಕ್ಕೆ ಹೊರಟಿರುವುದಾಗಿಯೂ, ತಮ್ಮನ್ನು ಹರಸಿ ಕಳುಹಿಸಬೇಕೆಂದೂ ಬೇಡಿಕೊಂಡರು. ಆಕೆ ಒಬ್ಬೊಬ್ಬ ಶತ್ರುರಾಜನ ಪರಾಕ್ರಮವನ್ನೂ ವರ್ಣಿಸಿ, ಅಂಥವರ ಮೇಲೆ ದಂಡೆತ್ತಿ ಹೋಗುವುದು ಹಾಸಿಕರವೆಂದು ಚಿಂತಿಸಿದಳು. ಹುಡುಗರು ಸ್ವಲ್ಪವೂ ಹೆದರದೆ, ದೇವರ ಕೃಪೆಯಿಂದ ತಾವು ಜಯಶಾಲಿಗಳಾಗಿ ಬರುವುದಾಗಿ ಹೇಳಿದರು. ಈ ವೇಳೆಗೆ ರಾಮನಿಗೆ ಹದಿನಾರು ವರ್ಷಗಳಾಗಿದ್ದುವು. ಹರಿ ಯಮ್ಮ ನಿರ್ವಾಹವಿಲ್ಲದೆ, "ಧುರವ ಜಯಸಿ ಬನ್ನಿ, ನಿಮ್ಮ ಮಂಡೆ ಹೂವು ಬಾಡದೆ ಶರೀರ ಒಂದಾಗಿ ಭೇರುಂಡನಂತೆ [ಇರಲಿ]" ಎಂದು ಹರಸಿ ಕಳುಹಿಸಿದಳು.

## ಬಲ್ಲಾಳನೊಂದಿಗೆ ಕದನ

ರಾಮನು ಮಂತ್ರಿಯ ಮಗನಾದ ನೀಲಕಂಠ, ಧುರಧೀರ ಮಲ್ಲಯ್ಯ, ಪೆನುಗೊಂಡೆ ನಾಗ, ಎಡಗೈಯ ಹಂಪ, ಹನುಮಂತ, ಭಾವನ ಸಂಗಯ್ಯ, ಬಲವಂತ ಲಿಂಗಣ್ಣ, ಹಾಗಿನ ಹನುಮಂತ, ಕಾಮಗೇತಿಯ ಚಿಕ್ಕ ನಾಯಕ, ಬೀಜವಾಡಿ ರಂಗಣ್ಣ, ಜಗಳೂರ ಮರಿಚೆಟ್ಟಿ, ಹಗಲು ದೀವಟಿಗೆ ಸರ್ಜನಾಯಕ, ಬಾಣದ ಮುದ್ದ, ಬಡಗಿ ಗಂಗನ ಬಸವಯ್ಯ, ಬೈಚಪ್ಪ ಮುಂತಾದವರನ್ನು ಕೂಡಿಕೊಂಡು ತೆರಳಿದನು. ಈಶ್ವರನ ಆಲಯಕ್ಕೆ ಬಂದು ದೇವರ ಪ್ರಸಾದವನ್ನು ಸ್ವೀಕರಿಸಿ ಹೊರಟನು. ಕುಮಾರರಾಮನು ಕಣುಕುಪ್ಪೆ, ಭೀಮಕೆರೆ, ನೀಲಾನೂರು, ಯಗಟಿಯ ತೊರೆ, ಕಡೂರು, ಯಾದವತಿ, ಕೊಳೂರ ಕೆರೆಗಳ ಮಾರ್ಗವಾಗಿ ಸಾಗಿ ಹಳೆಯ ಬೀಡಿನ ಬಳಿ ಬಂದು ಬೀಡುಬಿಟ್ಟನು. ಮಂತ್ರಿಗಳ ಸಲಹೆಯ ಮೇರೆಗೆ, ಸಾಮೋಪಾಯವನ್ನೇ ಕೈಕೊಂಡು, ಕಪ್ಪವನ್ನು ತೆರಬೇಕೆಂದು ಬಲ್ಲಾಳನಿಗೆ ಕಾಗದವನ್ನು ಕಳುಹಿಸಿದನು. ಆ ಕಾಗದವನ್ನು ಕಂಡ ಬಲ್ಲಾಳನು, ಅದನ್ನು ಹರಿದು ಬಿಸುಟು, ರಾಮನನ್ನು ತುಚ್ಛೀಕರಿಸಿ ಮಾತನಾಡಿ, ದೂತರನ್ನು ಅವಮಾನ ಮಾಡಿ ಕಳುಹಿಸಿದನು. ಈ ವೃತ್ತಾಂತವನ್ನೆಲ್ಲ ಕೇಳಿ ರಾಮನು ಕಿಡಿಕಿಡಿಯಾದನು. ಅನಂತರ ಬಲ್ಲಾಳನ ಊರಿಗೆ ಮುತ್ತಿಗೆ ಹಾಕಿದರು. ಅಣ್ಣ ತಮ್ಮಂದಿರು ಅತ್ಯುಗ್ರವಾಗಿ ಹೋರಾಡಿದರು. ಶತ್ರುಸೈನ್ಯವು ತತ್ತರಿಸಿತು. ಆ ದಿನ ಸಂಜೆಯಾಗಲು ಯುದ್ಧ ಮುಗಿಯಿತು. ಮಾರನೆಯ ದಿನ ಮತ್ತೆ ಬಿರುಸಾದ ಕಾಳಗ ನಡೆದು ರಾಮನ ಕಡೆಯವರ ಕೈಯೇ ಮೇಲಾಯಿತು. ಆದರೂ ಬಲ್ಲಾಳನ ಹಮ್ಮು ಅಡಗಲಿಲ್ಲ. ಆತನು ತನ್ನವರನ್ನೆಲ್ಲ ಬರಮಾಡಿಕೊಂಡು, ಕಂಪಿಲನು ತನ್ನ ಕಂದನನ್ನು ಕಳುಹಿಸಿ, ತಾನು ಮಾತ್ರ ತಲೆಮರೆಸಿಕೊಂಡಿರುವನೆಂದು ಹೀಯಾಳಿಸಿದನು. ಚಿಕ್ಕವನ ಮೇಲೆ ಯುದ್ಧ ಮಾಡಲು ತನ್ನ ಮನಪೊಪ್ಪದೆಂದೂ, ಕಂಪಿಲನೇ ಬರಲಿ ಎಂದೂ, ಕಾಗದವನ್ನು ಬರೆಸಿ ರಾಮನಲ್ಲಿಗೆ ಕಳುಹಿಸಿದನು. ಅದನ್ನು ಓದಿ ರಾಮನಿಗೆ ಮತ್ತಷ್ಟು ಕೋಪವೇರಿತು. ಆ ಕಾಗದವನ್ನು ಅಲ್ಲಿಯೇ ಹರಿದುಹಾಕಿದುದಲ್ಲದೆ "ಮರಿಹಾವು ಕಡಿಯಲು ಮೃತವ ನೈದರೆ", "ಬ(ಮೊ ?)ಲನ ಹಿಡಿಯದ ನಾಯಿ ಹೆಬ್ಬುಲಿಯ ಕೊಲ್ಲುವುದುಂಟೆ" ಎಂಬುದಾಗಿ ಮೂದಲಿಸಿ, ಓಲೆಕಾರರನ್ನು ಹಿಂದಟ್ಟಿದನು.

ಕುಮಾರರಾಮನ ತಿರಸ್ಕಾರದ ಮಾತುಗಳನ್ನು ಕೇಳಿ ಬಲ್ಲಾಳನಿಗೆ ತಡೆಯಲಾರದಷ್ಟು ಕೋಪ ವುಂಟಾಯಿತು. ಸೈನ್ಯವನ್ನು ಸಜ್ಜುಗೊಳಿಸಿ ಯುದ್ಧಕ್ಕೆ ಹೊರಡಲು ಅನುವಾದನು. ಆದರೆ ಆತನ ಮಂತ್ರಿ

ಮೊದಲು ಬೇರೆ ಯಾರನ್ನಾದರೂ ಕಳುಹಿಸಿ, ಅನಂತರ ಅಗತ್ಯವಿದ್ದಲ್ಲಿ ರಾಜನೇ ಹೊರಡಬಹುದೆಂದು ಸೂಚಿಸಿದನು. ಅಂತೆಯೇ ಸಿದ್ಧರಾಜಯ್ಯನೆಂಬುವನ ನೇತೃತ್ವದಲ್ಲಿ ದಂಡನ್ನು ಕಳುಹಿಸಿಕೊಟ್ಟನು. ಉಭಯಪಕ್ಷದವರಿಗೂ ಘೋರವಾದ ಕಾಳಗವಾಯಿತು. ಬಲ್ಲಾಳನ ಕಡೆಯವರು "ಸೀಗೆಲಡಗಿದ ಬಾಳೆಯ" ಹಾಗೆ ಪಾಡು ಪಟ್ಟರು. ಸಿದ್ಧರಸನೂ ತನ್ನ ಶಕ್ತಿಮೀರಿ ಹೋರಾಡಿದನು. "ಹರಿಣ ವ್ಯಾಘ್ರನ ಕಂಡು ಹೆದರಿ ಓಡುವ ತೆರದಿ" ರಾಮನ ಕಡೆಯವರೂ ಹಿಮ್ಮೆಟ್ಟಿದರು. ರಾಮನು ಅವರಿಗೆಲ್ಲ ಧೈರ್ಯವಿತ್ತು, ಈಶ್ವರನನ್ನು ಪ್ರಾರ್ಥಿಸಲು, ಅಣ್ಣ ತಮ್ಮಂದಿರ ಹೆಗಲ ಮೇಲೆ ಸೋಮಧರನು ಬಂದು ನೆಲಸಿದನು. ಅನಂತರ ಅವರ ಕಾಳಗ ದ್ವಿಗುಣವಾಯಿತು. "ತೃಷೆಯಾದ ಕರಿಗೊಂದು ರಸದಾಳಿ ಹೊಲದೊರೆದು (ತು?) ಕೊಸರಿ ಮುರಿವಂತೆ" ಹಗೆಗಳನ್ನು ಕೊಂದು ರಾಶಿ ಹಾಕಿದರು. ಸಿದ್ಧರಾಜಯ್ಯನೂ ಕೈಸೆರೆಯಾದನು. ಆದರೆ, ರಾಮನು ಅವನನ್ನು ಔದಾರ್ಯದಿಂದ ಕಂಡು ಬಿಡುಗಡೆ ಮಾಡಿದನು. ಈ ಗತಿಯನ್ನು ಕೇಳಿದ ಬಲ್ಲಾಳನು ಬಹಳ ಚಿಂತಾಕ್ರಾಂತನಾದನು. ತನ್ನ ಮಂತ್ರಿಯೊಂದಿಗೆ "ಎರಳೆಯ ಮರಿ ಬಂದು ವ್ಯಾಘ್ರನ ಕೊಂದಂತ ತೆರನಾಯಿತಲ್ಲ ಧರೆಯೊಳಗೆ" ಎಂದು ಹೇಳಿಕೊಂಡನು. "ತಾವರೆಯೆಲೆ ಉದುಕಯಿಪ್ಪಂತೆ ಇರಲು ಮನದೊಳಗೆ" ಬಲ್ಲಾಳನು ಮುಂದೇನು ಮಾಡುವುದೆಂದು ಅರಿಯದೆ ಹೋದನು. ಆಗ, ದೇವರಸನೆಂಬ ಮಂತ್ರಿ, ರಾಮನಿಗೆ ಹೆದರುವುದು ಬಲ್ಲಾಳನಂಥವರಿಗೆ ಸಲ್ಲದೆಂದೂ, ಅದರಿಂದ ಆತನ ಕೀರ್ತಿಗೆ ಕಳಂಕವುಂಟಾಗುವುದೆಂದು ಸಲಹೆಯಿತ್ತನು. ಮಂತ್ರಿಯ ಮಾತಿನ ಮೇರೆಗೆ ಭಾವಾಜಿ ಮಲ್ಲಯ್ಯನೆಂಬ ಇನ್ನೊಬ್ಬ ಧೀರನನ್ನು ಯುದ್ಧಕ್ಕೆ ಆರಿಸದರು. ಆತನಾದರೋ "ಕಟ್ಟುಮಾಡುವ ತೆರಕೆ ಹೊಕ್ಕು ಕಾರ್ಯವ ಮಾಳ್ಪೆ, ಮಿಕ್ಕು ಮೀರಲು ಎನ್ನ ಕೈಯಲಿ ಮತ್ತೆ ಮಾಡುವುದೇನು, ಮರಣ ತಪ್ಪದು, ಮಡದಿ ಮಕ್ಕಳು ನಿಮ್ಮವಯ್ಯಾ" ಎಂದು ರಾಜಾಜ್ಞೆಗೆ ಶಿರಬಾಗಿದನು. ಆಗ ಅಲ್ಲಿಯೇ ನಿಂತಿದ್ದ ರಾಜನಿಗೆ ಆ ಮಾತನ್ನು ಕೇಳಿ ದಿಗಿಲಾಯಿತು. ಯಲ್ಲರಸನೆಂಬ ಮತ್ತೊಬ್ಬ ಮಂತ್ರಿ, ರಾಜನನ್ನು ಕುರಿತು ಯುದ್ಧವು ಅನಿಷ್ಟಕಾರಕವೆಂದೂ, ಮೊದಲು ಉಪಾಯದಿಂದ ಕಪ್ಪವನ್ನು ಕೊಟ್ಟು ರಾಮನನ್ನು ಕಳುಹಿಸಿ ಅನಂತರ ಮುಂದಿನ ಯೋಚನೆಯನ್ನು ಮಾಡಬಹುದೆಂದೂ ಸೂಚಿಸಿದನು. ಆ ವೇಳೆಗೆ ರಾಮನಿಂದ ಅಪಮಾನಿತನಾಗಿದ್ದ ದೂತನೊಬ್ಬ ಧಾವಿಸಿ ಬಂದು, ಬಲ್ಲಾಳನ ಪಕ್ಷಕ್ಕೆ ಸಂಭವಿಸಿದ ಅಪಜಯದ ವಿವರವನ್ನು ನಡುನಡುಗುತ್ತ ವರದಿ ಮಾಡಿದನು. ರಾಜನ ಕಡೆಯ ವೀರರಲ್ಲಿ ಯಾರು ಯಾರು ಹತರಾದರೆಂಬುದನ್ನೂ ತಿಳಿಸಿದನು. "ನೆಲ್ಲಿಯ ಮರ ಕೊನಿಗೆ ಕಲ್ಲಿಟ್ಟ ತೆರನಾಗಿ" ತಮ್ಮ ಸೇನೆಯೆಲ್ಲವೂ ದಿಕ್ಕಾಪಾಲಾಯಿತೆಂದು ಹೇಳಿದನು. ರಾಜನಿಗೆ ಮತ್ತಷ್ಟು ಆತಂಕವಾಯಿತು. ದೇವರಸನು, ಆ ರಣಹೇಡಿಯನ್ನು ನೂಕಿಸಿ, ಯಲ್ಲರಸನ ಸಲಹೆಯನ್ನು ಖಂಡಿಸಿ, ರಾಜನನ್ನು ಮತ್ತೆ ಹುರಿದುಂಬಿಸಿದನು. ತಾವು ಆಗ ರಾಮನಿಗೆ ಬಗ್ಗಿದ್ದೇ ಆದರೆ ಮುಂದೆ ತುಂಬ ತೊಂದರೆ ಪಡಬೇಕಾಗುತ್ತದೆಯೆಂದು ಎಚ್ಚರಿಸಿದನು. ನಿರ್ವಾಹವಿಲ್ಲದೆ ಬಲ್ಲಾಳನು ದೇವರಸನ ಮಾತಿಗೆ ಒಡಂಬಟ್ಟನು. ಬೆಳಗಾಗಲು, ರಾಮನೂ ಇತರರೂ ಕೂಡಿ ಹಳೆಯಬೀಡನ್ನು ನಾಲ್ಕೂ ಕಡೆಗಳಿಂದ ಮುತ್ತಿದರು. ಬಲ್ಲಾಳನ ಅಪ್ಪಣೆ ಪಡೆದು ದೇವರಸನೂ, ಭಾವಾಜಿ ಮಲ್ಲಯ್ಯನೂ ಶತ್ರುಗಳನ್ನು ಎದುರಿಸಲು ಸಿದ್ಧರಾದರು. ಆ ಬಾರಿಯ ಯುದ್ಧವೂ ಬಹಳ ಭಯಂಕರವಾಗಿ ಸಾಗಿತು. ಎರಡು ಕಡೆಯವರೂ ಜೀವದ ಮೇಲೆ ಆಸೆ ಬಿಟ್ಟು ಹೋರಾಡುತ್ತಿದ್ದರು. ರಾಮನ ಶೌರ್ಯ, ಸಾಹಸಗಳನ್ನು ಕಂಡು ದೇವರಸನೂ ಸಹ ಆಶ್ಚರ್ಯಪಟ್ಟನು. ಆದರೆ ಹೆದರಿ ಹಿಂದೋಡಲಿಲ್ಲ. ರಾಮನು ತನ್ನ ಕಡೆ ಅಳಿದ ವೀರರನ್ನು ಕೇಳಿ ತಿಳಿದನು. ಯುದ್ಧದ ವೃತ್ತಾಂತವನ್ನು ಊರಿಗೂ ಹೇಳಿ ಕಳುಹಿಸಿದನು. ರಾಮನ ಯೋಧರು ಹಳೆಯಬೀಡಿಗೆ ಮುತ್ತಿಗೆ ಹಾಕಿ ವಶಪಡಿಸಿಕೊಳ್ಳಲು ಹಾತೊರೆಯುತ್ತಿದ್ದರು. ರಾಮನು ಅವರಿಗೆಲ್ಲ ಸಮಾಧಾನದಿಂದ ಇರಬೇಕೆಂದು ಹೇಳುತ್ತಿದ್ದನು. ಬಲ್ಲಾಳನಿಗೆ ಚಿಂತೆ ಮೇರೆ ಮೀರಿತು. ಊರಿನಲ್ಲಿ ಗಂಡಸರನ್ನು ಕಳೆದುಕೊಂಡ ಹೆಂಗಸರ ಸಂಕಟ ಹೇಳತೀರದು. ಬಲ್ಲಾಳನು ಅರಗಿನಂತೆ ಕರಗಿ ನೀರಾದನು. ಬಂಧನದಲ್ಲಿದ್ದ ಯಲ್ಲರಸನನ್ನು ಬರಮಾಡಿಕೊಂಡು ತನ್ನ ಅಸಹಾಯಕ ಸ್ಥಿತಿಯನ್ನು ಹೇಳಿಕೊಂಡನು.

ಯಲ್ಲರಸನು ಎಂದಿನಂತೆಯೇ ಸಾವಧಾನವಾಗಿ ಉತ್ತರವಿತ್ತು ಸಂಧಿಮಾಡಿಕೊಳ್ಳುವುದೇ ಲೇಸೆಂದು ಸೂಚಿಸಿದನು. ಆ ವೇಳೆಗೆ ರಣರಂಗದಿಂದ ಓಡಿಬಂದ ಯೋಧನೊಬ್ಬನು, ಭಾವಾಜಿ ಮಲ್ಲಯ್ಯ, ಪ್ರಧಾನಿ ದೇವರಸರು ಕೈಸೆರೆಯಾದರೆಂದೂ, ಅಸಂಖ್ಯಾತ ವೀರರು ಹತರಾದರೆಂದೂ ಸುದ್ದಿ ತಿಳಿಸಿದನು. ಬೆಳಗಾದ ಕೂಡಲೇ ರಾಮನು ಊರಿನೊಳಕ್ಕೆ ನುಗ್ಗದೆ ಇರುವುದಿಲ್ಲವೆಂದು ಎಚ್ಚರಿಸಿದನು. ಕಡೆಗೆ, ಬಲ್ಲಾಳನು ಯಲ್ಲರಸನನ್ನೇ ಸಂಧಿಕಾರ್ಯಕ್ಕಾಗಿ ನಿಯೋಜಿಸಿದನು. ಆತನು ತಕ್ಕ ಮರ್ಯಾದೆಯಿಂದ ಬಂದು ರಾಮನನ್ನು ಕಂಡು, ಸಂಧಿಯ ಮಾತೆತ್ತಿದನು. ರಾಮನು ಮೊದಮೊದಲು ಮೂದಲಿಸಿದರೂ, ಆಪ್ತರ ಸಲಹೆಯ ಮೇರೆಗೆ ಒಪ್ಪಿಕೊಂಡನು. ಬಾಕಿ ನಿಂತಿದ್ದ ಹದಿನೇಳು ವರ್ಷಗಳ ಕಪ್ಪವನ್ನು ಕೊಡಬೇಕೆಂದೂ, ಬಲ್ಲಾಳನೇ ಬಂದು ತನ್ನನ್ನು ಭೇಟಿಯಾಗಬೇಕೆಂದೂ ನಿರ್ಬಂಧಗಳನ್ನು ವಿಧಿಸಿದನು. ಯಲ್ಲರಸನು ಬಂದು ಆ ವೃತ್ತಾಂತವನ್ನೆಲ್ಲ ಬಲ್ಲಾಳನಿಗೆ ತಿಳಿಸಲು, ರಾಜನು ತಾನು ಶತ್ರುವನ್ನು ಹೇಗೆ ಸಂಧಿಸುವುದೆಂದು ಹಿಂತೆಗೆದನು. ಆದರೆ ಮಂತ್ರಿ, ರಾಮನು ಶರಣಾಗತ ರಕ್ಷಕನೆಂದು ಹೇಳಿ ಒಪ್ಪಿಸಿದನು. ಅನಂತರ, ಇಬ್ಬರೂ ಅತ್ಯಂತ ಪ್ರೀತಿ ವಿಶ್ವಾಸಗಳಿಂದ ಭೇಟಿಯಾದರು. ಪರಸ್ಪರ ಕುಶಲವನ್ನು ವಿಚಾರಿಸಿದರು. ಬಲ್ಲಾಳನು, ಬಾಕಿ ಉಳಿದಿದ್ದ ಕಪ್ಪದಲ್ಲಿ ಆಗ ಅರ್ಧವನ್ನು ಕೊಡುವುದಾಗಿ ಸಮ್ಮತಿಸಿದನು. ರಾಮನು ಬಲ್ಲಾಳನಿಗೆ ಅಭಯವಿತ್ತು ತಾನು ಹಿಂತಿರುಗಲು ಅನುವಾದನು. ತನ್ನ ತಂದೆಗೆ ಎಲ್ಲ ವಿಷಯವನ್ನೂ ಬರೆಸಿ, ವಸೂಲಿಮಾಡಿದ ರೊಕ್ಕವನ್ನೂ ಕಳುಹಿಸಿಕೊಟ್ಟನು. ಸುತ್ತಮುತ್ತಲಿದ್ದ ಇತರ ರಾಜರಿಗೆಲ್ಲ ಕಪ್ಪಕಾಣಿಕೆಗಳನ್ನು ತಂದೊಪ್ಪಿಸುವಂತೆ ಕಾಗದಗಳನ್ನು ಬರೆಸಿದನು. ಅವುಗಳನ್ನು ಓದಿಕೊಂಡ ಇತರರು, ಬಲ್ಲಾಳನಿಗೆ ಆದ ಗತಿಯನ್ನು ಕಂಡು, ಹೆದರಿ, ರಾಮನು ಬಂದ ಕೂಡಲೆ ತಮ್ಮ ತಮ್ಮ ಕಪ್ಪವನ್ನು ತೆತ್ತು ಶರಣಾದರು. ಅವರಲ್ಲಿ, ಗುತ್ತಿಯವನು ಮಾತ್ರ ಬಾರದೆ ಇರಲು, ರಾಮನು ತನ್ನ ದಂಡನ್ನು ಆ ಕಡೆಗೆ ತಿರುಗಿಸಿದನು.

## ಗುತ್ತಿಯ ಚಾಮಯ್ಯನ ಪರಾಭವ

ಕುಮಾರರಾಮನು ತನ್ನವರೊಂದಿಗೆ ಕೂಡಿ, ಯಗಟಿಪುರಕ್ಕೆ ಬಂದು, ಅಲ್ಲಿ ಒಂದು ರಾತ್ರಿಯನ್ನು ಕಳೆದನು. ಆತನ ದಂಡು ಬಹಳ ಬಿರುಸಿನಿಂದ ಮೂರು ಪಯಣವನ್ನು ಮಾಡಿ ಪೆನುಗೊಂಡೆಗೆ ಬಂದು ತಲುಪಿತು. ಬಳಿಕ, ಉರುಕೊಂಡೆ ಮಾರ್ಗವಾಗಿ ಗುತ್ತಿಯನ್ನು ಸಮೀಪಿಸಿತು. ರಾಮನ ದಂಡಿನ ಆಗಮನದ ವಾರ್ತೆಯನ್ನು ಕೇಳಿದ ಜನರು ಹೆದರಿ ತಮ್ಮ ತಮ್ಮ ಸಾಮಾನುಗಳನ್ನು ತೆಗೆದುಕೊಂಡು ಊರುಕೇರಿಗಳನ್ನು ಬಿಟ್ಟು ಹೊರಡಲು ತೊಡಗಿದರು. ರಾಮನ ಸೈನಿಕರು ಗುತ್ತಿಯ ಕೋಟೆಯ ಹೊರವಳಯದಲ್ಲಿ ಯುದ್ಧಕ್ಕೆ ಸಕಲಸಿದ್ಧತೆಗಳನ್ನೂ ಮಾಡಿಕೊಂಡು, ಗುಂಪು ಗುಂಪಾಗಿ ಗೂಡಾರಗಳನ್ನು ಹಾಕಿಕೊಂಡರು. ಗುತ್ತಿಯ ಚಾಮಯ್ಯನು ತನ್ನ ಕೋಟೆಯಿಂದ ಆ ಅಪಾರವಾದ ಸೇನೆಯನ್ನು ಕಂಡು ತಲ್ಲಣಿಸಿದನು. ಯುದ್ಧದಾಸೆಯನ್ನು ತೊರೆದು ಸಂಧಿಮಾಡಿಕೊಳ್ಳುವುದೇ ಲೇಸೆಂದು ಭಾವಿಸಿದನು. ಆ ಕೂಡಲೇ ತನ್ನ ಮಂತ್ರಿಯಾದ ರಂಗರಸನಿಗೆ ಹೇಳಿ ಕಳುಹಿಸಿ, ಅವನ ಅಭಿಪ್ರಾಯವನ್ನೂ ಕೇಳಿದನು. ಮಂತ್ರಿ ಬಲ್ಲಾಳನನ್ನು ಸೋಲಿಸಿದ ರಾಮನು ಅತ್ಯಂತ ಪರಾಕ್ರಮಶಾಲಿಯೇ ಸರಿಯೆಂದೂ ಅಂಥವನನ್ನು ಎದುರಿಸುವುದಕ್ಕಿಂತ, ಕಪ್ಪಕಾಣಿಕೆಗಳನ್ನು ತೆತ್ತು ವಿಪತ್ತಿನಿಂದ ಪಾರಾಗುವುದೇ ಲೇಸೆಂದೂ ಸಲಹೆಮಾಡಿದನು. ರಾಜನಿಗೂ ಅದೇ ಸೂಕ್ತವಾದುದೆಂದು ದೃಢವಾಗಲು, ಸಂಧಿಮಾಡಿಕೊಳ್ಳುವಂತೆ ಮಂತ್ರಿಗೆ ಅಜ್ಞಾಪಿಸಿದನು. ಅತ್ತ, ಬೆಳಗಾಗುವ ವೇಳೆಗೆ ರಾಮನ ಕಡೆಯವರು ಹಲ್ಲೆ ಹತ್ತಲು ನಿಶ್ಚಯಿಸಿದ್ದರು. ಆ ಹೊತ್ತಿಗೆ ಸರಿಯಾಗಿ ರಂಗರಸನು ಕಪ್ಪ ಕಾಣಿಕೆಗಳನ್ನು ತೆಗೆದುಕೊಂಡು ರಾಮನನ್ನು ಕಾಣಲು ಬಂದನು. ರಾಮನು ಮಂತ್ರಿಯನ್ನು ಕುರಿತು ನಾನಾ ವಿಧವಾಗಿ ಮೂದಲಿಸಲಾರಂಭಿಸಿದನು. ಕಡೆಗೆ ಕಾಟಣ್ಣನೂ ಮಂತ್ರಿಗಳೂ ಸಮಾಧಾನ ಹೇಳಲು, ರಾಮನು ರಂಗರಸನನ್ನು ಸನ್ಮಾನಿಸಿ, ಗುತ್ತಿಯ ಚಾಮಯ್ಯನನ್ನು ಕಂಡನು.

## ಬಾದೂರನ ಪ್ರಸಂಗ ಮತ್ತು ನೇಮಿಯ ಆಗಮನ

ಈ ವೇಳೆಗೆ ಅತ್ತ ಡಿಳ್ಳಿಯಲ್ಲಿ ಬಂದು ಅನಿರೀಕ್ಷಿತವಾದ ಘಟನೆ ಸಂಭವಿಸಿತು. ಸುರುತಾಳನ ಆಪ್ತರಲ್ಲಿ ಒಬ್ಬನಾದ ಬಾದೂರನು, ರಾಮನು ಬಲ್ಲಾಳನನ್ನು ಸೋಲಿಸಿದ ಸುದ್ದಿಯನ್ನು ಕೇಳಿ, ಮೆಚ್ಚಿಕೊಂಡು, ಅವನಿಗೆ ಉಡುಗೊರೆ ಕಳುಹಿಸಿದನು. ಅದನ್ನು ಅರಿತ ಇತರ ವಜೀರರು ಸುರುತಾಳನಿಗೆ ಆ ವೃತ್ತಾಂತವನ್ನು ತಿಳಿಸಿದರು. ತನ್ನ ಆಪ್ತನಾದ ಬಾದೂರನು ತನ್ನನ್ನು ಅಲಕ್ಷ್ಯಮಾಡಿ, ಮತ್ತೊಬ್ಬನನ್ನು ಆ ರೀತಿ ಗೌರವಿಸಿದ್ದಕ್ಕಾಗಿ ಸುಲ್ತಾನನು ಅತ್ಯಂತ ಕುಪಿತನಾದನು. ತನ್ನ ಮಂತ್ರಿಯಾದ ನೇಮಿಯನ್ನು ಬರಮಾಡಿಕೊಂಡು ಕೂಡಲೆ ಬಾದೂರನನ್ನು ಕೊಲ್ಲುವಂತೆ ಆಜ್ಞಾಪಿಸಿದನು. ಬಾದೂರನಾದರೋ ಆ ವೇಳೆಗಾಗಲೇ ದೇಶವನ್ನು ತೊರೆದು ರಾಮನನ್ನು ಮರೆಹೊಗಲು ಓಡಿ ಓಡಿ ಬರುತ್ತಿದ್ದನು. ಆ ಒಬ್ಬ ಮನುಷ್ಯನನ್ನು ಬೆನ್ನಟ್ಟಿಕೊಂಡು ಒಂದು ಸೇನೆಯೇ ಸಾಗಿ ಬರುತ್ತಿರುವ ಸುದ್ದಿಯನ್ನು ಚರರು ಬಂದು ರಾಮನಿಗೆ ತಿಳಿಸಿದರು. ತಡಮಾಡದೆ ರಾಮನು ಬಾದೂರನನ್ನು ಬರಮಾಡಿಕೊಂಡು ಆ ರೀತಿ ಆಗಲು ಕಾರಣವೇನೆಂದು ಕೇಳಿದನು. ಭಯಗ್ರಸ್ತನಾಗಿದ್ದ ಬಾದೂರನು "ಭುವನೇಂದ್ರ ಲಾಲಿಸು, ನೀ ಮಾಳ್ಪ ಕಾರ್ಯಕೆ ಮೆಚ್ಚಿದೆ ಉಡುಗೊರೆಯ ಕಳುಹಿದ ಮೂಲದಿ ಬಂತು ಪ್ರಾಣಕ್ಕೆ. ಒಳಗು ನಿಮ್ಮೊಡನೆಂದು ಹಗೆಯವರು ವಾ (ಚಾ ?)ಡಿಯ ಪೇಳೆ ವಿವರಗಾಣದೆ ಸುರಿತಾಳನಿಗೆ, ತಿಳಿಯಲರಿಯದ ಮೂಳ ಹೊಳವ ಕಾ[ರ]ಣಕೆನ್ನ (?) ಕಡಿಯೆಂದು ನೇಮಿಗೆ ಅಭಯ ಕೊಟ್ಟ. ಕೊಡಬೇಡ ವೈರಿಗೆ ಕಡಿ ನೀನು ಈ ಕ್ಷಣವೇ, ಪಡೆವೆನು ಮುಂದೆ ಕೀರ್ತಿಯನು. ಪೊಡವಿರಾಯರ ಗಂಡನೆಂಬೆಂಬ ಬಿರುದಿಗೆ ನಿಮ್ಮ ಒಡಲ ಸೇರಿದೆ ಸಲಹಬೇಕು" ಎಂಬುದಾಗಿ ವಿಜ್ಞಾಪಿಸಿಕೊಂಡನು. ಕುಮಾರ ರಾಮನು " ಹೆದರಬೇಡವೊ ಖಾನ ನಿನಗೆ ಕೊಡುವೆ ಎನ್ನಯ ಪ್ರಾಣ, ನೀ ಬೆ[ದ]ರದೆ ನಿಲ್ಲೊ ಬೆನ್ನೊಡನೆ" ಎಂದು ಮರೆಹೊಕ್ಕವನಿಗೆ ಅಭಯವಿತ್ತನು. ಆ ವೇಳೆಗೆ ನೇಮಿಯ ಕಡೆಯವರು ಮುಂದೆ ಬಂದು, ರಾಮನನ್ನು ಸಂಧಿಸಿ, ಬಾದೂರನನ್ನು ಕೂಡಲೇ ಬಿಟ್ಟುಕೊಡಬೇಕೆಂದು ಕೇಳಿದರು. ರಾಮನು ನಿರಾಕರಿಸಲು, ನಾನಾ ವಿಧವಾಗಿ ಬೆದರಿಸಿ ಮೂದಲಿಸಿದರು. ರಾಮನು ಯಾವುದಕ್ಕೂ ಸಗ್ಗದಿರಲು ಯುದ್ಧವೇ ಘಟಿಸಿತು. "ಕುರಿಗಿಂದ (ತ ?) ಕಡೆಯಾಗಿ ತಲೆಯ ಲಯವಾದ ಡಿಳ್ಳಿಯ ಪೌಜ "ನ್ನು ಕಂಡು ಬಾದೂರನು ನಿಬ್ಬೆರಗಾದನು. ಸುರುತಾಳನ ಸೈನ್ಯವು ತರಹರಿಸಲಾರದೆ ಕ್ಷಯಿಸುತ್ತಿರಲು ನೇಮಿ ದಿಕ್ಕುಗಾಣದೆ "ಮರಣ ಬಂದಿತು ಎಂದು ಹೊಕ್ಕನು ಪಾಣಿಯ ಜಲವ." ಅನಂತರ ಆತನು ರಾಮನ ಕೈಸೆರೆಯಾದನು. ಅಂದಿನ ಯುದ್ಧ ಮುಗಿಯಲು, ರಾಮನು ಕಾಟಣ್ಣ, ವೀರಸಂಗಯ್ಯ, ಮಂತ್ರಿಯ ಮಗ ನೀಲಕಂಠ ಮುಂತಾದವರನ್ನು ಬರಮಾಡಿಕೊಂಡು, ನೇಮಿಯನ್ನು ಬಿಡುವ ವಿಚಾರವನ್ನು ಕುರಿತು ಪ್ರಸ್ತಾಪಮಾಡಿದನು. ಎಲ್ಲರೂ ಅವನನ್ನು ಬಿಟ್ಟುಬಿಡಬೇಕೆಂದು ಸೂಚಿಸಲು, ರಾಮನು "ಲಾಲಿಸು ಅಣ್ಣ, ಇವನ ಮೂಲದಲಿ ಬಾದೂರನ ಬರಬೇಕು ಸತಿಸುತರು ಸದರವಾಗಿ ಎಮ್ಮ ಹೃದಯಕ್ಕೆ ನಿಮಗೆಂತು ಕಾಣೆ" ಎಂದು ಒಂದು ಷರತ್ತನ್ನು ಸೂಚಿಸಿದನು. ಎಲ್ಲರೂ ಆ ಮಾತಿಗೆ ಒಪ್ಪಿದರು. ನೇಮಿಯನ್ನು ಬರಮಾಡಿಕೊಂಡು ಅವನ ಕೈಯಲ್ಲಿಯೇ ಸುಲ್ತಾನನಿಗೊಂದು ಓಲೆಯನ್ನು ಬರೆಸಿದರು. ಸುಲ್ತಾನನಾದರೋ "ನೇಮಿ ಮುಳುಗಲು ಎನ್ನ ನಾಮಲಿಖಿತವು ತೀರೆ ಭೂಮಿಯೊಳಪಕೀರ್ತಿ ಪಡೆವೆ, ನೇಮಿ ಬರಲು ನಮ್ಮ ಮಾನವು ಉಳಿವುದು. ಅವನ ರಾಣಿಯಿಂದ ನಮಗೇನು ಕಳುಹೆ" ಎಂದು ನಿರ್ಧರಿಸಿ, ಬಾದೂರನ ಸಂಸಾರವನ್ನು ಕೊಟ್ಟು ಕಳುಹಿಸಿದನು. ಅನಂತರ, ರಾಮನಿಂದ ಬಿಡುಗಡೆಯನ್ನು ಪಡೆದ ನೇಮಿ ಡಿಳ್ಳಿಗೆ ಬಂದು ಸುರುತಾಳನನ್ನು ಕಂಡನು. ಸುರುತಾಳನು ವಿಚಾರಿಸಲು, ನೇಮಿ " ಮನುಜನಲ್ಲವೊ ಭೂಪ ದನುಜರ ಸಹಶಕ್ತಿ ಲವಕುಶರಿಗೆ ಮಿಗಿಲು ಕಾಣೊ ಭೂಪ" ಎಂದು ಪರಿಪರಿಯಾಗಿ ರಾಮನನ್ನು ಕೊಂಡಾಡಿದನು. ಸುರುತಾಳನಿಗೆ ಆ ಮಾತುಗಳನ್ನು ಕೇಳಲಾಗಲಿಲ್ಲ. ರಾಮನ ಮೇಲೆ ತಾನೇ ದಂಡೆತ್ತಿ ಹೋಗುವೆನೆಂದು ಹೇಳಿದನು. ನೇಮಿ ಕುಪಿತನಾದ ಒಡೆಯನಿಗೆ ಸಮಾಧಾನ ಹೇಳಿ, ಕಾಲವನ್ನು ನೋಡಿಕೊಂಡು ಹೋಗತಕ್ಕುದು ಸೂಕ್ತವೆಂದು ಎಚ್ಚರಿಸಿದನು. ಅಂತೂ, ಕಡೆಗೆ ಸುಲ್ತಾನನು " ಕೀಳುಕುಲದ ಸಣ್ಣ ಮೂಳ ರಾಮನ ತಲೆಯೇ (ಯ?) ಪೂಜೆ ಮಾಡಿಸುವೆ ಡಿಳ್ಳಿಯಲಿ" ಎಂದು ಶಪಥಮಾಡಿದನು.

## ಕುಮಾರರಾಮನ ವಿವಾಹ ಮತ್ತು ಶಪಥ

ಗುತ್ತಿಯ ಚಾಮಯ್ಯನ ಪ್ರಸಂಗದ ಮಧ್ಯೆ ಸಂಭವಿಸಿದ ಬಾದೂರನ ಪ್ರಕರಣವನ್ನೂ ಮುಗಿಸಿಕೊಂಡು ರಾಮನು ತನ್ನ ಊರಿನ ಕಡೆಗೆ ಹಿಂತಿರುಗಿದನು. ಮಾಘಮಾಸದ ದಶಮಿ ಸೋಮವಾರದಂದು ಪ್ರಯಾಣ ಹೊರಟು ಬಳ್ಳಾರಿಯ ಬಳಿಗೆ ಬಂದನು. ವಿಜಯಶಾಲಿಗಳಾಗಿ ಬರುತ್ತಿದ್ದ ಮಕ್ಕಳನ್ನು ಕಂಪಿಲನು ಬಂದು ಎದುರುಗೊಂಡನು. ಕುಮಾರರು ತಾಯಿಯನ್ನು ಕಂಡು ಆಶೀರ್ವಾದವನ್ನು ಪಡೆದರು. ಕಂಪಿಲನು ಓಲಗ ವನ್ನು ಕೂಡಿಸಿ, ಮಂತ್ರಿಯನ್ನು ಕರೆದು ರಾಮನಿಗೆ ಐವರು ಕನ್ಯೆಯರನ್ನೂ, ಕಾಟನಿಗೆ ಇಬ್ಬರು ಕನ್ಯೆಯರನ್ನೂ ನಿಶ್ಚಯಿಸಿಕೊಂಡು ಬರಬೇಕೆಂದು ಹೇಳಿದನು. ಮಂತ್ರಿ ರಾಜಾಜ್ಞೆಯಂತೆಯೇ ಆ ವೇಳೆಗಾಗಲೇ ಮದುವೆಗಾಗಿ ಸಿದ್ಧರಾಗಿದ್ದ ಇಬ್ಬರು ಸೋದರ ಸೊಸೆಯರಲ್ಲದೆ, ಮಿಕ್ಕ ಮೂವರನ್ನು ನಿಶ್ಚಯಿಸಿಕೊಂಡು ಬಂದನು. ವೀರಾಯಿ, ಲಿಂಗರಸಿ, ವಾಣಿ (?), ಅಂಪ್ಸಾಜಿ, ಸವುಭದ್ರೆ, ಎಂಬುವರು ರಾಮನ ಮಡದಿಯರು. ರಂಗಾಯಿ ಮತ್ತು(?) ಎಂಬುವರು ಕಾಟಣ್ಣನ ಹೆಂಡತಿಯರು. ಶಾಸ್ತ್ರೋಕ್ತವಾಗಿ ವಿವಾಹವು ಅತ್ಯಂತ ವೈಭವದಿಂದ ನಡೆಯಿತು. ದೇವಲೋಕದಲ್ಲಿ ಹರ ಪಾರ್ವತಿಯರೂ ಸಹ ರಾಮನ ಮಾಹಾತ್ಮ್ಯೆಯನ್ನು ಕುರಿತು ಮಾತಾಡಿಕೊಳ್ಳು ತ್ತಿದ್ದರು. ಪಾರ್ವತಿ "ರಾಮನಾರ [ವ]ನು ಶೂರಗಣವೊ, ಅವರೆಲ್ಲರು ಬೆರೆದು ವಿವಾಹವ ಮಾಡಲು ಇವಗೆ ನರಕವಿಲ್ಲದೆ ಪುರಕೆ ಬಹನೇ" ಎಂದು ಕೇಳಲು, ಈಶ್ವರನು "ಮುಕ್ತಾಂಗಿನಿ ಕೇಳು, ಮುಂದಿವನು ಎಮ್ಮಯ ಶಕ್ತಿಯೊಳಾದಂಥ ಪಿಂಡ, ಪುಟ್ಟಿದನವನೊಂದು ಕಥೆಯ ಕಾರಣಕೆಲ್ಲ ಶ್ರೇಷ್ಠ ಮುನೀಂದ್ರನ ಮ[ಗ]ನು" ಎಂದು ತಿಳಿಸಿದನು. ಮದುವೆ ಮುಗಿಯಲು, ಬಂದ ಬಂದವರೆಲ್ಲ ಸನ್ಮಾನಿತರಾಗಿ ತಮ್ಮ ತಮ್ಮೆಡೆಗಳಿಗೆ ಹಿಂತಿರುಗಿದರು.

ಬೆಳಗಾಯಿತು. ಎಂದಿನಂತೆಯೇ ಕಂಪಿಲನು ಓಲಗವನ್ನು ಕೂಡಿಸಿದ್ದನು. ಕಂಪಿಲನು ಸಿಂಹ ಪೀಠದಲ್ಲಿಯೂ, ಎಡಭಾಗದಲ್ಲಿ ಬೈಚಪ್ಪನೂ, ಬಲಭಾಗದಲ್ಲಿ ಕಾಟಣ್ಣನೂ ಕುಳಿತಿದ್ದರು. ಸಂಚಿಯವರು, ಕುಂಚದವರು, ಹಡಪಿಗರು, ಹಾಸ್ಯಗಾರರು, ಮೊದಲಾದವರೊಂದಿಗೆ ಮಹಾರಾಜನು ಸರಸವಾಗಿ ಕಾಲ ಕಳೆಯುತ್ತಿದ್ದನು. ಮಾತಿನ ಮಧ್ಯೆ ಕಂಪಿಲನು ಕಾಟನ ಕಡೆ ತಿರುಗಿ "ತರಳೇಂದ್ರ ಕಾಟಯ್ಯ, ಈವತ್ತು ಬೇಂಟೆಯ ಪೋಗಿ ತರಹೋಗೊ ಬೇಕಾದ ಮೃಗವ" ಎಂದು ಆಜ್ಞಾಪಿಸಿದನು. ತಂದೆಯ ಮಾತಿಗೆ ಸಮ್ಮತಿಸಿ, ಕಾಟಣ್ಣನು ರಾಮನನ್ನು ಕರೆಯಲು ಬಂದನು. "ಬಾರಯ್ಯ ಬಿರುದಾಂಕ ಮೂರಾರು ರಾಯರ ಗಂಡ, ರಾಯ ಬೇಂಟೆಗೆ ಹೋಗಿ ಎಂದ" ಎಂಬುದಾಗಿ ವಿಜ್ಞಾಪಿಸಿದನು. ರಾಮನಾದರೋ ಅದಕ್ಕೆ ಸಮ್ಮತಿಸ ಲಿಲ್ಲ. "ಯಾತಕೆ ಬರಲಣ್ಣ, ಪ್ರೀತಿಯ ಮಗಳ(ನಿ?) ಗೆ ಪೇಳ್ದ. ನಿನ್ನ ಭೀತಿಗೆ ಬರಲೇನೊ ಅಣ್ಣ, ಬೇಕಾದ ಮಗನಾದರೆ ನನಗೆ ಹೇಳುವ ರಾಯ. ಸಾಕಣ್ಣ ನೀ ಹೋಗಿ ಬಾರೊ" ಎಂದು ಹಿಂತೆಗೆದನು. ರಾಮನನ್ನು ಒಲಿಸಿಕೊಳ್ಳಲಾರದೆ ಕಾಟನೊಬ್ಬನೇ ಸೇನೆಯೊಂದಿಗೆ ತೆರಳಿದನು. ಅದ್ಭುತವಾಗಿ ಬೇಟೆಯಾಡಿ ನಾನಾ ಮೃಗಗಳನ್ನು ಕೊಂದು ತಂದನು. ಕಾಟನ ಶೌರ್ಯವನ್ನು ಕಂಡು ಕಂಪಿಲನು ತಲೆದೂಗಿ ರಾಮನನ್ನು ಕುರಿತು "ಭೀಮನಂದದಿ ಹೋಗಿ ಆನೆ ಸಹಿತ ತಂದ ಧೀರ ಕಾಟನ ನೋಡೊ ರಾಮ" ಎಂದು ಆಕ್ಷೇಪಿಸಿ ನುಡಿದನು. ತಂದೆಯ ವ್ಯಂಗ್ಯವಾದ ನುಡಿಗಳು ರಾಮನನ್ನು ಕೆರಳಿಸಿದುವು. "ತಾತ ಕೇಳೊ, ಮುನ್ನ ತರಳನ ಬಿನ್ನಪವ. ಈ ಮಾತ ನೀವಾಡಿ ಸೈರಿಸಿದೆ. ಈಶ್ವರ ಹರಿ ಬ್ರಹ್ಮ ಅ[ವ]ರಲ್ಲದೆ ಮಿಕ್ಕ ಭೂನಾಥರಾಡಲು ಎತ್ತಿ ಬಿಡುವೆ" ಎಂದು ಉತ್ತರವಿತ್ತು, ಬೇಟೆ ತೀರ ನಿಕೃಷ್ಟವಾದುದೆಂದು ಖಂಡಿಸಿದನು. ಹರಿಶ್ಚಂದ್ರ, ಕಾಳಿಂಗ ರಾಯ ಕುಮಾರ, ದಶರಥ, ಪಾಂಡು, ಮುಮ್ಮಡಿ ಸಿಂಗ ಮೊದಲಾದವರೆಲ್ಲರೂ ಬೇಟೆಯಾಡಿ ಶಾಪಗ್ರಸ್ತರಾದ ರೆಂದು ಉದಾಹರಣೆಗಳನ್ನಿತ್ತನು.[1] ಕಡೆಗೆ "ಅ(ಥ?)ಲವಿರಲು ಬಂದಂಥ ವೈರಿಯ ಗೆಲಬೇಕು. ಅಡವಿ ಪ್ರಾಣಿ

---

1. ಅಡವಿಯ ಮೃಗಕೆಲ್ಲ ಮಡಲ ಕಟ್ಟಿದ ಕರ್ಮ ಬಿಡಲರಿದು ಜಲ್ಮ ಏಳರಲಿ ।
ಒಡನೆ ಬೇಂಟಿಯ ಹೋಗಿ ಹರಿಶ್ಚಂದ್ರ ರಾಯ ಕೆಟ್ಟ ಸುಡುಗಾಡ ಕಾಯ್ದು ಹೊಲೆಯಗಾಳಾದ ॥

ಗಳ ಕೊಂದೇನು ಫಲವೂ, ಕಡಿಯಲಾರದ ಹೇಡಿ ಕಳ್ಳಗೆ ಬೇಂಟೆ ಬಿಡು ರಾಯ ನಿಮ್ಮಪ್ಪಣೆಯ ಮಾತ" ಎಂದು ಸವಾಲು ಹಾಕಿದನು. ಮಗನ ಮಾತನ್ನು ಕೇಳಿ ಕಂಪಿಲನು "ಕಮ್ಮಾರಕೇರಿಲಿ ಕದರು ಮಾರಿಪ ಗಾದೆ. ನಮ್ಮ ಉತ್ರಗಳ ನಿಲ್ಲಿಸಿದಾ. ಬ್ರಹ್ಮಾಂಡ ಮಗಚುವ ಬಲ್ಮೆಯಾಡುವ ರಾಮ, ಓರುಗಲ್ಲೊಳಗೆ ಬೊಲ್ಲಾನ ತರೊ ಪೋಗಿ" ಎಂದನು. ಅಷ್ಟೇ ಅಲ್ಲದೆ, "ಕರಿ ಸಿಂಹ ಶಾರ್ದೂಲ ವಟ್ಟೆಡಿದು ತಂದವ ನಾನು. ನರಿಗಿಂವ(ತ ?) ಕಡೆಮಾಡಿ ಆಡಿ ಕಡುಸಾಮರ್ಥಿಗೆ ಉಳ್ಳವನ ತೆರದಿ ಮ (ನು ?)ಡಿವೆ. ರುದ್ರನ ಬಳಿಯ ಬೊಲ್ಲನ ನೀನು ತರುವುದುಂಟೆ ರಾಮ" ಎಂದು ಕೇಳಿದನು. ರಾಮನಿಗೆ ವೀರಾವೇಶ ಮಿಗಿಲಾಯಿತು. "ಎಳೆಯಲಾರದ ಎತ್ತು ಎಡಗೋಲನು ಹಿರಿವಂತೆ ಕಳವೋರೆ ಕಂದ ಧೀರರನು. ಬಿಡುರಾಯ, ಅಪ್ಪಣೆಯ. ನುಡಿದ ಬಾಣಕ್ಕೆ ಪ್ರತಿಯ ಹೊಡೆದಂತೆ ಆಯಿತು ಎದೆಗೆ. ....ಯಿಪ್ಪತ್ತು (ಯಪ್ಪತ್ತು ?) ರಾಯನ ತೇಜಿಯ ತರದಿರಲು ಇಟ್ಟ ಬಿರುದಿಗೆ ಹೀನ ಬಂತು. ....ಪ್ರೇಮದಿ ಕೇಳರಸೆ, ಆ ತೇಜಿಯ ತರದಿರಲು ಪರಸ್ತ್ರೀಯರಿಗೆ ಸರಿಯೆಂದು ಕಾಣಾ! ತಂದೆ ನೀನಾಗಲು ಈ ನುಡಿ ಕುಂದಾದಿ (?) ದೇವೇಂದ್ರನಾಡಲು ಎತ್ತಿ ಹಣಿವೆ. ಇಂದಿಗೆ ತಿಂಗಳಿಗೆ ತಂದಾರೆ ಮಗನೆನ್ನು. ಹಿಂದಾಗೆ ಮನೆಯೊಳಂಗೂಸು (ಮನೆಯೊಳೆಂಗುಸು ?)" ಎಂಬುದಾಗಿ ಶಪಥವನ್ನೇ ಮಾಡಿದನು.

## ಓರುಗಲ್ಲಿಗೆ ಪಯಣ

ಆ ರೀತಿ ಕೆರಳಿ ನಿಲ್ಲುವುದು ಸೂಕ್ತವಲ್ಲವೆಂದು ಬೈಚಪ್ಪನು ರಾಮನನ್ನು ಎಚ್ಚರಿಸಿದನು. ರಾಮನಾದರೋ "ತಪ್ಪಲು (ಲ್ಲೊ?) ಎಲೆ ಮಂತ್ರಿ! ಅಪ್ಪಾಜಿಯಂದುದು ಉತ್ರ (?) ಸಿಟ್ಟೆಲ್ಲ ಎನ್ನ ಮನದೊಳಗೆ ಕಟ್ಟಳೆಯಿದ್ದಷ್ಟು ಮೃತ್ಯುಂಜಯಗೆ ಬಿಡದು, ಸಿಟ್ಟು ಪುಟ್ಟಸದೆ? ಬಿಡು ಮಂತ್ರಿ" ಎಂದು ಉತ್ತರವಿತ್ತು ಓಲಗದಿಂದ ಎದ್ದು ಹೊರಡಲು ಅನುವಾದನು. ಅವನೊಂದಿಗೆ ಅವನ ಮಂತ್ರಿಯಾದ ನೀಲಕಂಠ, ಬಾಮೂರ, ಬಾಣಿಯ ಮುದ್ದ, ವೀರ ಸಂಗಯ್ಯ, ಧೀರ ಜಂಗಮ ಬಸವ ಮತ್ತು ಇತರ ರಾವುತರೂ ಹೊರಟರು. ರಾಮನು ತಾಯಿಯ ಬಳಿಗೆ ಬಂದು ನಮಸ್ಕರಿಸಿದನು. ಮಗನನ್ನು ಹಿಡಿದೆತ್ತಿ ಮುದ್ದಾಡಿ, ಪರೆಬಿಟ್ಟ ಹಾವಿನಂತಿರುವ ಅವನನ್ನು ಕಂಡು, ಮತ್ತೆ ದುಗುಡವೇನೆಂದು ವಿಚಾರಿಸಿದಳು. ರಾಮನು "ಕಮಲಲೋಚನೆ ಕೇಳು ಕಳವೇಕೆ (?). ಕಾಟಣ್ಣ ಮೃಗವ ತಂದನು ಬೇಂಟೆಯಾಡಿ. ದಣಿಸಿದ ರಾಯನ ಭ್ರಾಂತು ಪರಿಹರ ವಂತೆ (ವಪ್ಪಂತೆ ?). ಜರಿದು ಆಡಿದ ಎನ್ನ ಸಭೆಯೊಳಗೆ. ತಾಯೆ ಕೇಳ್ಪಿತನೆನ್ನ ಹೇಡಿ ಹೋಗೆನುತಲಿ

---

ಹಿಂದೊಬ್ಬ ಬೇಂಟೆಯಾಡಿ ಉಂಡನು ಕಮಲಾಕ್ಷ ಕಾಳಿಂಗರಾಯ ಕುಮಾರ।
ಒಂದು ಹರಿಣನ ಕೊಲ್ಲೆ ಮುನಿಯ ಶಾಪಕ್ಕೆ ಬಂದು ಹೊಂದಾನೆ ಸಿಂಹದಾತ್ಮದಲಿ॥

ಜಾಣನಾಗಿ ಅವನು ಮರಳಿ ಕೇಳಲು ಶಾಪ ಯಾವಾಗ ಪರಿಹರವೆನಲು।
ಸೋಮಶೇಖರನೆಂಬ ತರಳರ ಕೈಯಿಂದ ಲಯವಾಗಿ ಹೋಗೆನಲು ತನ್ನ ಪುರಕೆ॥

ಧರ್ಮವಲ್ಲವು ಬೇಂಟೆ ದಶರಥನು ತೊಟ್ಟನೆ ಕಾಯ್ದು ಎಸೆಯಲಳಿಯೆ ಗುರುಭಕ್ತ।
ಹುಸಿಯಲಿಲ್ಲವೊ ಬೇಡೂ ಮಾಡು ಬಾಲಯ್ಯನ ಶಾಪ ಗಿಡ ವನ ಚರಿಸೆ ಶ್ರೀರಾಮ॥

ತಪ್ಪದು ಮೃಗಶಾಪ ಕೊಟ್ಟರೆ ರಾಜೇಂದ್ರ ಕೆಟ್ಟ ಕೇಡರಿಯೆ ಪಾಂಡವನ।
ಜೋತುಗೂಡಿರೆ ಹರಿಣಗ (ರ ?) ತಿ ಕ್ರೀಡೆ ಕೆಡಿಸಲು ಶಾಪವಿತ್ತರ ವನವಾಸ ತಿರುಗಿ॥

ಅರಣ್ಯದೊಳು ನಿಲ್ಲೆ ರಾಣಿ ಕ (ಕು ?) ಂತಿಯ ದುಃಖ ಕೇಳಿ ವೇದವ್ಯಾಸ ಬಂದು।
ಆರು ಮಂತ್ರಗಳರುಹಿ ಹೋಗಲು ಪಾಂಡವರ ಕುಮಾರರ ಪಿತರಾರು ಮಂದಿ॥

ದೂರಲಾ (ದ ?) ಮಾತೇಕೆ ರಾಯ ಕೇಳ್ಕೆ ನಿಮ್ಮ ರಾಯ ಮುಮ್ಮಡಿಯ ಪಡಿಪಾಟ।
ಪೋಗಿ ಬೇಂಟೆಗೆ ಒಂದು ಪಕ್ಷಿಮರಿಯನು ತುಳಿಯೆ ಹೋಗವೆ ನಯನ ಮುನಿಯಿಂದ॥ (vii, ೩೭–೪೩)

ಕೂಡಿದ ಸಭೆಯೊಳು ನುಡಿದ. ಓರುಗಲ್ಲಿಗೆ ಹೋಗಿ ಯಪ್ಪತ್ತುರಾಯನ ತೇಜಿ ತರದೆ ನೀರ ಕೊಳ್ಳೆನು ನಿಮ್ಮ ಕರದಿ. ತಾಯೆ, ನಿಮ್ಮ ಹೃದಯದೋಳ್ ಧೀರತನದಲಿ ಜನಿಸಿ, ಹೇಡಿಯಾಗಲು ಹೀನ ನಿಮಗೆ. ಮೂರು ರಾಯರ ಗಂಡನೆಂಬ ಬಿರುದುಗಳ್ಯಾಕೆ ಪಾಲಿಸಬಹುದಮ್ಮಾ ಅಭಯ. ಅಪ್ಪಣೆಯ ಕೊಡು ತಾಯೆ, ಸತ್ಯಸಾಗರ ನಿಧಿಯೆ, ಮತ್ತೊಂದು ತಡಮಾಡಬೇಡ. ತೊಟ್ಟವನು ನಾ ಜೇರೆ, ಸತ್ತರು ಬಿಡಲರಿಯೆ. ಲೋಕಾರ್ಥಕೆ ನಿಮ್ಮ ಕೇಳುವೆನು" ಎಂಬುದಾಗಿ ಅನುಮತಿಯನ್ನು ಬೇಡಿದನು. ಮಗನ ಮಾತುಗಳನ್ನು ಕೇಳಿ ಹರಿಯಾಲದೇವಿಗೆ ತುಂಬ ಸಂಕಟವಾಯಿತು. ಹೆತ್ತವರ ಕಣ್ಣಲ್ಲಿ ನೀರನ್ನು ಕರೆಸಿ ಹಾಗೆ ತೆರಳುವುದು ಸೂಕ್ತವೆ ಎಂದು ಹಲುಬಿದಳು. ತಾಯಿ ಮಗನಲ್ಲಿ ಪರಸ್ಪರ ಸಮಾಧಾನಕರವಾದ ಮಾತುಗಳು ನಡೆದುವು. ಮಂತ್ರಿ ಮೊದಲಾದವರು ರಾಮನಿಗೆ ಮತ್ತೊಮ್ಮೆ ಬಿನ್ನವಿಸಿಕೊಂಡರು. ಯಾರ ಮಾತಿಗೂ ರಾಮನು ಕಿವಿಗೊಡಲಿಲ್ಲ. ರಣಭೇರಿಯ ಸದ್ದು ಕೇಳಿಬಂದಿತು. ಸೈನ್ಯವೆಲ್ಲ ಸಿದ್ಧವಾಯಿತು. ಅಚಲ ಮನಸ್ಕನಾದ ಮಗನನ್ನು ಕಂಡು ಹರಿಯಾಲದೇವಿ "ಓರುಗಲ್ಲೆಂಬುದು ಊರೇನೊ ಎಲೆ ರಾಮ ? ಬೇರೊಂದು ಲಂಕೆಗೆ ಪ್ರತಿಯು ! ಯಾರು ಮುತ್ತಲು ಮರಳಿ ಊರ ಸೇರಲು ಇಲ್ಲ. ಸೂರ್ಯನಮಗನೂರೆ ಗತಿಯು. ಗಂಡಸ ನಿಮ್ಮಯ್ಯ, ದಂಡಾನೆ ಕೊರೆ ಹಾಕಿ, ಕಂಡಿಯ ಮುರಿದೋಡಿ ಬರನೆ ? ಮಂಡೆ ಮಸ್ತಕವಿಟ್ಟ ಮಲಗನಾ ಮೂಲಿ(ಲೆ ?)ಗೆ. ದಂಡುಂಟು ಕೋಟೆ ಬಪವಗೆ(?) ಹೆಸರನು ತಿಳಿಬಲ್ಲುದೆ, ದೆಸೆಕೆ (ಯೆ ?)ಲ್ಲ ಕಲ್ಲೆಂಬ ಅಸಮಾಕ್ಷನಿಟ್ಟಂಥ ನಾಮ ಉಸುರುವರಳವಲ್ಲ ಊರಿನಚ್ಚರಿಯನು. ಹಸಿಯ ಸೀಸದ ಕೋಟೆ ಕೊತ್ತಳವು. ನಗರವೆಂದರೆ ಮಗನೆ ಎದೆ ಶೂಲ ವೈರಿಗಳ ಮೊಗಲ ಪಾಜ್ಯ ಡಿಳ್ಳಿಯಲಿ ತೆಗೆಯಲಮ್ಮರು ಕೋಟೆ ಕದನವ ದಿಕ್ಕಿನ (?) ಬೆದರಿ ಬೀಳ್ವರು ದಿನಕೆಂಟು ಬಾರಿ. ಅಂತವನಾಗಲು ನಿಂತಿರುವುದು ತೇಜಿ. ಭ್ರಾಂತೇನೂ ನೀ ತಿಳಿದು ನೋಡು. ಪಂಥ ಪಾಡಿನ ಮೇಲೆ ನೀನಂತಿ (ತು ?) ಹಿಂದಕೆ ಹೋಗಿ ಕಾಲಾಂತ್ರ ಹೊಳಲಳವೆ ? " ಎಂಬುದಾಗಿ ಬಗೆಬಗೆಯಾಗಿ ಓರುಗಲ್ಲಿನ ದುರ್ಗಮವಾದ ಸ್ಥಿತಿಯನ್ನು ವಿವರಿಸಿದಳು. ರಾಮನಿಗಾದರೋ ಆ ಮಾತುಗಳು ಯಾವುವೂ ಹೆದರಿಕೆಯನ್ನು ಉಂಟುಮಾಡಲಿಲ್ಲ. "ಮಲೆತವ ಮರ್ದಿಸಲು ಬಡವನು ಜರ್ಝರಿಸಿ ಕಡೆಯ ಬಾಗಿಲ ಕಾಯ್ದು ಇರುವ. ಹಡೆದರೆ ಹಣೆಯೊಳು ಬರದಾಕೆ ನೀನಹುದೆ ? ತಾ ಪಡೆದಿರುವ ಫಲ ಪ್ರಾಪ್ತಿ ಬಲ್ಯಾ ? ಹಡೆಯಲ್ಕೆ ನೀ ಕರ್ತೃ, ಪಡೆಯಲ್ಕೆ ನೀ ಕರ್ತೃ. ಸೂತ್ರವಿಡಿದು ಆಡಿಸುವನು ಬೇರಿಹನು" ಎಂದು ಕೆಚ್ಚಿನ ನುಡಿಗಳನ್ನೇ ಆಡಿದನು. ಕೋಪವುಕ್ಕಿ ಬರುತ್ತಿರಲು, "ನಡೆವೆನು ನಿಮ್ಮಾಗ್ನೆ (ಜ್ಞೆ) ಮೀರಿ" ಎಂದು ನುಡಿಯಲೂ ಹಿಂದೆಗೆಯಲಿಲ್ಲ. ಕಡೆಗೆ ತಾಯಿ ಮಗನನ್ನು ವಿಶ್ವಾಸದಿಂದ ಹರಸಿ ಆರತಿ ಬೆಳಗಿದಳು. ಕಾಟನೂ ಬಂದು ಸೇನೆಯೊಂದಿಗೆ ಸೇರಿದನು. ಕಂಪಿಲನು ತಕ್ಕ ಪ್ರೌಢರನ್ನು ಕೂಡಿಸಿದನು. ಹತ್ತು ಸಾವಿರ ಕುದುರೆ, ಮೂವತ್ತು ಸಾವಿರ ಪದಾತಿ, ಏಳೆಂಟು ಸೊಕ್ಕಿದ ಕರಿಗಳು, ದಿಕ್ಕು ದೇಶವನ್ನು ಬಲ್ಲ ಆಪ್ತಜನರನ್ನು ಕೂಡಿಸಿಕೊಟ್ಟು, ಎಚ್ಚರ ಹೇಳಿ, ಮಗನ ಗಲ್ಲವನ್ನು ಹಿಡಿದು ಅಲುಗಿಸಿದನು. ಮಕ್ಕಳಿಬ್ಬರೂ ತಂದೆಯ ಕಾಲಿಗೆ ನಮಸ್ಕರಿಸಲು, ಅವರನ್ನು ಶಿರವಿಡಿದು ತಬ್ಬಿಕೊಂಡು "ಮೊದಲಾಗಿ ನಾ ಮುತ್ತಿ ನಗೆಗೇಡಿ ಗೊಳಗಾದೆ ಹದನರಿತು ನೋಡಿ ಹವಣೆಯ" ಎಂದು ತಿಳಿಸಿದನು. "ಆದರೊಳಿತು ರಾಯ ಅಳವು ಬಳವನೆ ತಿಳಿದು ಮುನಿಸಾಗಿ ಬಂದೇನುಯೆಂದು ಪೋಗುವೆನು ಮೇಲವನ ಶಕ್ತಿ ಸಾರವನೆಲ್ಲ ತಿಳಿದು, ವಶವಾಗದಿರಲು ಸ್ವಸ್ತಿಯಲಿ ಬರುವೆವು" ಎಂದು ಉತ್ತರವಿತ್ತು ಅಣ್ಣತಮ್ಮಂದಿರು ಕುದುರೆಗಳನ್ನೇರಿ ಹೊರಟರು. ಜಟ್ಟಂಗೀಶನ ಗುಡಿಗೆ ಬಂದರು. ದೇವರಿಗೆ ನಮಸ್ಕರಿಸಿ, ರಾಮನು "ಛಲಕೆ ಪೋಗುವೆ ಸ್ವಾಮಿ, ದಯವಿರಲಿ ಪಾದವ ತೊಳೆವ, ಸೇವ[ಕ]ರೊಳಗೆ ಕೃಪೆಯು" ಎಂದು ಪ್ರಾರ್ಥಿಸಲು, ಭಗವಂತನು "ಛಲದಂಕನಹುದೆಂದು ನಿಗಮ ಲೋಚನ ಪುಷ್ಪ ಒಗೆಯಲು ಬಲದಿಂದ ತೆಗೆದು," ರಾಮನು ಅಭಯವಾಯಿತು ಎಂದು ಹಿಗ್ಗಿ ಮುಂದೆ ಸಾಗಿದನು. ಈಶಾನ್ಯ ದಿಕ್ಕನ್ನು ಕುರಿತು ಪ್ರಯಾಣ ಬೆಳಸಿದರು. ಗುತ್ತಿಗೆ ಬಂದು ಚಾಮಯ್ಯನನ್ನು ಸಹಾಯ ನೀಡಲು ಸಿದ್ಧವಾಗಿರಬೇಕೆಂದು ಎಚ್ಚರವಿತ್ತು, ಕಲ್ಲಿಕೋಟೆಯಲ್ಲಿ ಬೀಡುಬಿಟ್ಟನು. ಕೃಷ್ಣವೇಣಿಯನ್ನು

ದಾಟಿ, ಮೂರು ತಿಂಗಳ ಪ್ರಯಾಣವನ್ನು ಮೂವತ್ತು ದಿವಸಗಳಲ್ಲಿಯೇ ಮುಗಿಸಿ, ಬಾರಂಗಿ, ಬಳ್ಳಾರಿಗೆ ಬಂದನು. ಓರುಗಲ್ಲು ಕಾಣಿಸಲು ರಾಮನ ಎದೆ ಅಳುಕಿತು. ಕಾಟಣ್ಣನಿಗೆ ಆ ಊರನ್ನು ತೋರಿಸಿ, ಅದು ರಾವಣನ ಲಂಕೆಯನ್ನು ಹೋಲುವುದೇ ಸರಿಯೆಂದೂ, ತನ್ನ ತಂದೆ ಸೋತಿದ್ದು ಸಾಧುವೆಂದೂ, ಪಾಚ್ಚಾಯವಿಗೂ ಅದು ಅಸಾಧ್ಯವಾದುದು ಆಶ್ಚರ್ಯವಿಲ್ಲವೆಂದೂ ಮುಂದಿನ ಯೋಗವನ್ನು ಕಾದು ನೋಡ ಬೇಕೆಂದೂ ಬಗೆಬಗೆಯಾಗಿ ಚಿಂತಿಸುತ್ತ ಬ್ರಹ್ಮಯ್ಯನ ಗುಡಿಗೆ ಬಂದನು. ಜಾಣರಾದ ನಿಯೋಗಿಗಳನ್ನು ಕರೆಸಿ, ತನ್ನ ಆಗಮನದ ವೃತ್ತಾಂತವನ್ನು ರುದ್ರನಿಗೆ ತಿಳಿಸಬೇಕೆಂದು ಹೇಳಿದನು. "ಮಾತಾಪಿತರೊಳು ಮುನಿದು ಮಗನು ಬಂದನು" ಎಂಬುದಾಗಿಯೂ "ಭೂಪ ನಿಮ್ಮಯ ಬಳಿಯ ಚಾಕರಿಯ ಧರ್ಮಕ್ಕೆ ಬೇಕಾಗಿ ತಾನಿರುವನಲ್ಲಿ" ಎಂಬುದಾಗಿಯೂ ಹೇಳುವಂತೆ ಸೂಚಿಸಿ ಕಳುಹಿಸಿದನು. ರಾಮನು "ಮಾತಿಲಿ ಒಳ ಹೊಗುವ, ಮರಳುವ ಕಾಲಕ್ಕೆ ಹಾಕುವದು ಬಿರುದು ಬೆಂಕಿಯನು. ಪಾಪಕೋಗುವನಲ್ಲ, ಛಲಕೆ ಮ(ಬ?)ಂದರೆ ಹೊರಟು ಹಾಕುವೆ ಕತ್ತಿ" ಎಂದು ಆಲೋಚಿಸಿದನು.

## ರುದ್ರನ ಓಲಗಕ್ಕೆ ಪ್ರವೇಶ

ರುದ್ರ ಭೂಪಾಲಕನು ಒಡ್ಡೋಲಗದಲ್ಲಿರಲು, ರಾಮನ ಕಡೆಯವರು ಬಂದರು. ಅವರನ್ನು ಚರರು ಬಾಗಿಲಲ್ಲಿಯೇ ತಡೆಯಲು, ರಾಮನು ಕಂಪಿಲನೊಂದಿಗೆ ಮನಸ್ತಾಪ ಮಾಡಿಕೊಂಡು ಬಂದಿದ್ದಾನೆಂದು ಹೇಳಿ ಕಳುಹಿಸಿದರು. ಸೇವಕರು ಬಂದು, ಆ ಸುದ್ದಿಯನ್ನು ತಿಳಿಸಿ, "ನಿಮ್ಮಯ ಬಳಿಯ ಓಲೈಸಹ ಬಂದವನೆ ಯಾವ ಹದನೊ ಕಾಣಲರಿದು" ಎಂದು ಹೇಳಲು, ರುದ್ರನು ಆಶ್ಚರ್ಯದಿಂದ "ತಾ ಮುಂನಾದ." ಈಶ್ವರ ನಿಂದಲೂ ಅದನ್ನು ಊಹಿಸಲು ಅಸಾಧ್ಯವೆಂದು ಬಗೆದು, ಜಾಣರಿಂದ ವಿಚಾರಿಸಿ ನೋಡೋಣವೆಂದು ಎಣಿಸಿದನು. "ಹಗೆಯವನು ಬಂದಲ್ಲಿ ಹಾಲು ಅನ್ನವ ನೀಡಿ ಹೋಗು ಎಂದರೆ ಶಿವಗೆ ಮೆಚ್ಚು. ಏನಿರೈ ಮಂತ್ರಿಗಳೆ ಸನುಮತವೆ ನಿಮಗೆ?" ಎಂದು ಸಲಹೆ ಕೇಳಿದನು. ಮಂತ್ರಿಗಳು ಸಮಯೋಚಿತವಾದ ನೀತಿವಾಕ್ಯಗಳನ್ನು ಹೇಳಿ, ಒಪ್ಪಿಗೆಯನ್ನಿತ್ತರು. ರಾಜನು ತಂತ್ರಿಯಾದ ಲಿಂಗಣ್ಣನನ್ನು ಕೆಲಸಕ್ಕೆ ನೇಮಿಸಿದನು. ಆತನು ಬಂದು ರಾಮನ ಕಡೆಯವರನ್ನು ಕಂಡು ಒಳಕ್ಕೆ ಬರಮಾಡಿಕೊಂಡು ಎಲ್ಲ ವನ್ನೂ ವಿಚಾರಿಸಿದನು. ಅವರು "ಹೇಳಿದ [ರೆ] ಹುಸಿಯೆಂಬ (ದು?) ತೋರುವುದು ನಿಮಗೆ....ರಾಯ ರಾಯರ ಗೆದ್ದ ರಾಮಯ್ಯ ಕಂಪಿಲಗೆ ನ್ಯಾಯ ಬಂದುದು ಒಂದು ಕತೆಗೆ. ಹೇಳಿವು ಟೈ (ಠವು?) ಳೆಂದು ತೋರುವುದು ಕೆಲಬರಿಗೆ. ಜಾಣ ಬಲ್ಲನು ಅದರ ಸುಳುಹ. ಸೂಳೆ ರತ್ನಿಯ ತಂದ ಮೂಲ ಬಲ್ಲಿರಿ ನೀವು ಹೇಳಿದ ಕಥೆಗಿದು ಬಂತು" ಎಂದು ಕಾರಣವನ್ನು ಹೇಳಿದರು. ಲಿಂಗಣ್ಣನಿಗೆ ಆ ಮಾತು ಸಹಜವಾಗಿ ತೋರಿತು. ರಾಜನಿಗೆ ಆ ವೃತ್ತಾಂತವನ್ನು ತಿಳಿಸಲು, ಆತನು ಹೇಜೀಬರನ್ನು ಬರಮಾಡಿಕೊಂಡನು. ಅವರು ರುದ್ರನನ್ನು ಕಂಡು ಕೈ ಮುಗಿದು "ಮಂಡಲೇಶ್ವರನೆ, ಮಾರ್ತಂಡ ಭೂಪಾಲನೆ, ಕಂಡೇಯ ಕದನ ಪ್ರಚಂಡ, ಬಂದೀತು ತೃಣದೊಳು ತಂದೆ ಮಗನಿಗೆ ಜಗಳ" ಎಂದು ಹೇಳಿ, ಭೀಮಸಮಾನನಾದ ರಾಮನು ಅವರ ಪಕ್ಷಕ್ಕೆ ಬಂದಿರುವುದು ಪರಮ ಭಾಗ್ಯವೆಂದು ಸ್ಪಷ್ಟಪಡಿಸಿದರು. ಅವರ ಮಾತುಗಳು ರುದ್ರನಿಗೆ ನಿಷ್ಕಪಟವಾಗಿ ಕಂಡುಬಂದುವು. ಮನ್ನೆಯರೊಂದಿಗೆ ವಿಚಾರಮಾಡಿ ನೋಡಿ, "ಕವಡಿಲ್ಲ ಮಾತಿಲಿ ನಿಜ ವಾದಿತೆಂದೆನುತ" ಅವರಿಗೆ ಉಡುಗೊರೆ ಮೊದಲಾದುವುಗಳನ್ನು ಕೊಟ್ಟು ಮಾರನೆಯ ದಿನ ರಾಮನನ್ನು ಕರೆಸಿಕೊಳ್ಳುವುದಾಗಿ ತಿಳಿಸಿದನು. ಹೇಜೀಬರ ಮಾತುಗಳನ್ನು ಕೇಳಿ ರಾಮನು ಸಂತೋಷಪಟ್ಟನು. ಅಣ್ಣ ತಮ್ಮಂದಿರು ಗುಂಡುಬ್ರಹ್ಮಯ್ಯನ ಗುಡಿಗೆ ಬಂದು, ಪೂಜೆಮಾಡಿ, ರಾತ್ರಿಯಾಗಲು ನಿದ್ರಿಸಿದರು. ಅಂದಿನ ರಾತ್ರಿ ಗುಂಡುಬ್ರಹ್ಮಯ್ಯನು ಅಗಣಿತ ರೂಪವನ್ನು ಧರಿಸಿ, ರಾಮನಿಗೆ ತೋರಿಬಂದನು. "ಕಾವಿ ಕಮಂಡಲ ಕರದೊಳು ತ್ರಿಶೂಲ ಮಾಯದ ಮರುಳು ತಂಡಗಳು, ಕಾಮನ ಉರುಹಿದ ಬೂದಿ ಮೈಯೊಳು

ಪೂಸಿ ಬಾಲರಾಮಗೆ ಬಂದು ಸುಳಿಯೆ" ರಾಮನು ಹೆದರದೆ ಕೈಮುಗಿದು ನಿಂತನು. ದೇವರು "ವೈನ ಉಳ್ಳವನೆಂದು ಶರಣನು ತಾ ಮೆಚ್ಚಿ, ವಲವದು (ಒಲಿವುದು ?) ತೇಜಿಯು ನಿನಗೆ ಹೆದರದೆ ನೀ ಮಾಡು ರಣವ. ಗೆಲ್ಲುವೆನೆಂ (ಯೆಂ ?)ದು" ಅಭಯವಿತ್ತು ಮಾಯವಾದನು. ಆ ವೇಳೆಗೆ ಬೆಳಗಾಯಿತು.

ಪದ್ಧತಿಯ ಮೇರೆಗೆ ರುದ್ರನು ಮಜ್ಜನಾದಿಗಳನ್ನು ಮಾಡಿಕೊಂಡು, ಈಶ್ವರ ಪೂಜೆ, ಜಂಗಮರ ಆರಾಧನೆ, ಮೊದಲಾದುವುಗಳನ್ನು ಮುಗಿಸಿಕೊಂಡು ಓಲಗಕ್ಕೆ ಬಂದನು. ಆತನ ಸಭೆಯಲ್ಲಿ ನಾನಾ ರೀತಿಯ ಚಲಗಾರರು ಇದ್ದರು. ರುದ್ರನು ದೇವಿಶೆಟ್ಟಿಲಿಂಗನನ್ನು ಕರೆದು, ರಾಮನನ್ನು ಕರೆತರಬೇಕೆಂದೂ, ಅವನನ್ನು ಚೆನ್ನಾಗಿ ಶೋಧಿಸಿ, ವಿಚಾರಿಸಬೇಕೆಂದೂ ಆಜ್ಞೆ ಮಾಡಿದನು. ಲಿಂಗನು ರಾಜಾಜ್ಞೆಯನ್ನು ಶಿರಸಾವಹಿಸಿ "ಬೆಕ್ಕು ಮಾರ್ಜಾಲನ ಬಳಿಗೆ ಬೆನವಾನವಾಹನ ಬರುವ ವಿಚಿತ್ರದಿ" ಬಂದನು. ರಾಮನನ್ನು ಕಂಡು ವಿಚಾರಿಸಲು, ಆತನು "ಕೆರೆ ಬತ್ತಿ ಬಾಯವರತಿಗೆ (ಒರತೆಗೆ ?) ಬಂದ ತೆರಸಾಯಿತಲ್ಲೊ ಲಿಂಗಣ್ಣ, ನೆರೆ ಗೌಡೋಗಿ ನರಗ್ರಾಮಗಳ ಸೇರೆ, (?) ಕರುಕಾಯ್ವ ತರಳನಂತಾಯಿತು. ಖಗರಾಜಮರಿ ಬಂದು ಗಂಡು ಕರಿಯಿರುವಾಗ ಉರುಗನು ನಲಿದಾಡಿದಂತೆ ಬಡವನ ಬಿನ್ನಪವು ಬಲ್ಲವನ ಕಿವಿಗೊಗಲು ಹರಿಯಿತು ರಾಯಗೆ ದೃಷ್ಟಿ" ಎಂದು ಟೀಕಿಸತೊಡಗಿದನು. ಬಳಿಕ "ಬಡತನವೆಂಬುದು ಹೊಲೆತನ ಧರೆಯೊಳಗೆ, ಬಲುಮೆಗಳೆ ಲೇಸು ಧರೆಯೊಳಗೆ, ವೈರಕ್ಕೆ ಬಂದಿರಲು ಹರುಷಗಾಣುವೆ ಲಿಂಗ, ನಿಮ್ಮರಸನ ಕಾಣೇವೆ ಗಳಿಗೆಯಲಿ" ಎಂದು ಕೇಳಿದನು. ಆ ಮಾತುಗಳನ್ನು ಕೇಳಿ ಲಿಂಗನು "ಭೂಮಿ ಪಾತಾಳಕ್ಕೆ" ಇಳಿದನು. ಲಿಂಗನು ವಿನಯದಿಂದಲೇ ಬಂದ ಕಾರ್ಯವೇನೆಂದು ಬೆಸಗೊಂಡನು. ಎಂದಿನಂತೆಯೇ ರಾಮನು, ರತ್ನಿಯ ದೆಸೆಯಿಂದ ತನಗೂ ತನ್ನ ತಂದೆಗೂ ಕಲಹವುಂಟಾಯಿತೆಂದೂ, ಅಪಕೀರ್ತಿಗೆ ಬೆದರಿ ತಂದೆಯ ಮೇಲೆ ಕೈಮಾಡದೆ ಬಂದೆನೆಂದೂ ಸುರುತಾಳನನ್ನು ಗೆಲ್ಲಬಲ್ಲೆನೆಂದೂ, ಬಿರುದು ಬಿಟ್ಟು ಬಾಳುವನಲ್ಲ ವೆಂದೂ ಹೇಳಿಕೊಂಡನು. ದೇವಿಶೆಟ್ಟಿಲಿಂಗಣ್ಣನು ರುದ್ರನ ಬಳಿಗೆ ಬಂದು ರಾಮನ ಸಾಹಸ ಪೂರ್ಣವಾದ ಮಾತುಗಳನ್ನು ತಿಳಿಸಿ, ಅಂಥವನ ನೆರವು ತಮಗೆ ಅತ್ಯಂತ ಉಪಕಾರವಾದೀ ತೆಂದೂ, ಸುಲ್ತಾನನ ಭಯವಿಲ್ಲದೆ ರುದ್ರನು ರಾಜ್ಯವಾಳಬಹುದೆಂದೂ, ರಾಮನು ಸತ್ಯಸಂಧನೆಂದೂ ವಿಜ್ಞಾಪಿಸಿದನು. ಎಲ್ಲರ ಮಾತಿನ ಮೇರೆಗೆ ರಾಜನು ರಾಮನನ್ನು ಕರೆತರುವಂತೆ ಲಿಂಗನಿಗೆ ಹೇಳಿದನು. ರಾಜನ ಅಪ್ಪಣೆಯ ಮೇರೆಗೆ ಲಿಂಗನು ಮತ್ತೆ ರಾಮನ ಬಳಿಗೆ ಬಂದನು. ರಾಜನ ಆಹ್ವಾನವನ್ನು ಕೇಳಿ, ರಾಮನು ಲಿಂಗನನ್ನು ಒಂದು ಮಾತು ಕೇಳಿದನು. "ಚಂದವಾಯಿತು ಕೇಳು ಲಿಂಗಣ್ಣ, ರಾಯನಿಗೆ ತಂದೆ ಕಂಪಿಲನ ಹಗೆಯುಂಟು ನಂಬಿ ನಿನ್ನೊಳು ಬರಲು ಮತ್ತೊಂದನೆಣಿಸಲು ಹೇಗೆ ರಾಜೇಂದ್ರನ ಮನಸ ನೀ ಬಲ್ಲೆ" ಎಂದು ಪ್ರಶ್ನಿಸಿದನು. ಲಿಂಗಣ್ಣನು ರುದ್ರನು ಅಂಥವನಲ್ಲವೆಂದೂ, ತಾನು ಆತನಿಂದ ಅಭಯ ವನ್ನು ಪಡೆದು ಬಂದಿರುವುದಾಗಿಯೂ, ಆ ಬಗ್ಗೆ ತನ್ನ ಮಾತನ್ನು ನಂಬಬಹುದೆಂದೂ ಸಮಾಧಾನ ಹೇಳಿದನು. ರಾಮನಾದರೋ ಹಾಗೇನಾದರೂ ಆದಲ್ಲಿ ರಾಜನಿಗೆ ಹಳೆಯಬೀಡಿನ ಬಲ್ಲಾಳನ ಗತಿಯೇ ಆದೀತೆನ್ನಲು, ಲಿಂಗನು ರುದ್ರನನ್ನು ಬಾಯಿತುಂಬ ಹೊಗಳಿ ಪ್ರಮಾಣಮಾಡಿದನು. ಆ ಮಾತುಗಳ ಮೂಲಕ ರಾಮನಿಗೆ ಲಿಂಗನ ಸ್ವಭಾವವು ವಿದಿತವಾಯಿತು. ಅನಂತರ ಆತನನ್ನು ತನ್ನ ಆಪ್ತನನ್ನಾಗಿ ಮಾಡಿಕೊಂಡು "ಇಂದು ನಾವು ಬಂದ ಭೇದವನೊರೆವೆವು ಕೇಳು ತುಂಬಿರಲು ಸಲ್ಲ ಮನದೊಳಗೆ" ಎಂದು ಪೀಠಿಕೆ ಹಾಕಿ, ತಾನು ತಂದೆಯೊಂದಿಗೆ ಹಟತೊಟ್ಟು ತೇಜಿಯನ್ನು ಕೊಂಡೊಯ್ಯಲು ಬಂದಿರುವೆನೆಂದೂ, ದಂಡೋಪಾಯಕ್ಕಿಂತಲೂ ಸಾಮೋಪಾಯದಿಂದ ಆ ಕೆಲಸವನ್ನು ಮಾಡಬೇಕೆಂದು ಭಾವಿಸಿರುವುದಾಗಿಯೂ ತನ್ನ ಬಿರುದುಗಳನ್ನು ಹೊಗಳಿಸಿ ರುದ್ರನನ್ನು ಕೆಣಕುವುದಾಗಿಯೂ ನಿಜವಾದ ವಿಷಯವನ್ನು ತಿಳಿಸಿದನು. ಲಿಂಗನಿಗೂ ಮನಸ್ಸು ರಾಮನ ಕಡೆಗೇ ವಾಲಿತು, "ರೋಗಿ ಬಯಸುವ ಕ್ಷೀರವನ್ನು, ಹಾಲನ್ನ ಪಥ್ಯವ ಮಾಡೆಂದ ಪಂಡಿತನು" ಎಂಬಂತೆ ತಾನೂ ರಾಮನಿಗೆ ನೆರವಾಗಿರಲು ಸಮ್ಮತಿಸಿದನು. "ಲಿಂಗ ರಾಮನ ಮನಸು ಒಂದಾಗಿ ದೇಹವು

ಗಂಡಭೇರುಂಡನ ತೆರದಿ" ತೋರಿಬಂದುವು. ರಾಮನ ಸಂತೋಷ ಹೇಳತೀರದು. "ಅಣ್ಣಾಜಿ ಕಾಟಯ್ಯ ಇನ್ನ್ಯಾಕೆ ತಡವೆಮಗೆ, ಪುಣ್ಯ ಕಾಲಕ್ಕೆ ಲಿಂಗ ದೊರೆತ. ಕಣ್ಣೆವೆ ರುದ್ರಗೆ, ಕತ್ತಿಯೊಳ್ ತಪ್ಪಿಲ್ಲ, ಒಮ್ಮೆ ಶೃಂಗಾರ ಮಾಡು ಬಲವ" ಎಂದು ಅಪ್ಪಣೆಮಾಡಿದನು. ಸಮಸ್ತ ಸೈನ್ಯವೂ ಸಜ್ಜಾಗಿ ರಾಮನ ಆಜ್ಞೆಯನ್ನೇ ನಿರೀಕ್ಷಿಸುತ್ತಿತ್ತು. ಆ ಸೇನೆಯನ್ನು ಕಂಡು ಲಿಂಗನು ಮೆಚ್ಚಿ, ಮನಸ್ಸಿನಲ್ಲಿಯೇ "ಗೆಲುವಹೆ ಈ ಬಲವ ಓರುಗಲ್ಲೊಳು ಮುನ್ನ ಇಲಿಯು ಮಾರ್ಜಾಲನ ತೆ[ರವ] ಹುದು" ಎಂದುಕೊಂಡನು.

ರಾಮನೂ ಕಾಟನೂ ಭೇರಿ ವಾದ್ಯಗಳ ಸಮೇತ ಓರುಗಲ್ಲಿಗೆ ಬರುತ್ತಿರಲು ಜನರು ಅವರನ್ನು ನೋಡಲು ಹರಿಣವೇಗದಲ್ಲಿ ಓಡೋಡಿ ಬಂದರು. ಹೆಂಗಸರು ನಾನಾ ತೆರನಾಗಿ ಅಲಂಕರಿಸಿಕೊಂಡು, ಉಪ್ಪರಿಗೆಗಳನ್ನು ಏರಿ ನಿಬ್ಬೆರಗಾಗಿ ನೋಡುತ್ತ ನಿಂತರು. ಊರ ಹೊರಗಿನ ಬಾಗಿಲಿನ ಬಳಿ ಕಾಟಣ್ಣನನ್ನು ಬಿಟ್ಟು, ಎಚ್ಚರವಾಗಿರುವಂತೆ ತಿಳಿಸಿ, ರಾಮನು, ಎರಡು ಸಾವಿರ ಮಂದಿಯನ್ನೂ, ಬಾದೂರ, ಬಲವಂತ ವೀರ ಸಂಗಮರಾಯ, ಬಾಣೆಯಮುದ್ದ, ಎಡಗೈ ಮಾದಿಗ ಹಂಪ, ನಾಗರಸು ಮಂತ್ರಿಗಳು ಮೊದಲಾದವರನ್ನೂ ಕೂಡಿಕೊಂಡು ಹೊರಟನು. ರಾಮನು ಊರನ್ನು ಪ್ರವೇಶಿಸಲು, ಲಿಂಗನು ಆತನಿಗೆ ಊರು ಕೇರಿಗಳನ್ನು ಪರಿಚಯ ಮಾಡಿಕೊಡುತ್ತ ಅದರ ಮಹತ್ವವನ್ನು ವರ್ಣಿಸಿದನು. "ಧರಣಿಯೊಳಗೆಯಿದು ಗುರುತಾದ ಸ್ಥಳವಿದು (?) ಹರಿಹರ ಬ್ರಹ್ಮಗೆ ಮೊದಲು. ಮೂರು ಮೂರ್ತಿಗಳೆಲ್ಲ ಸುಳಿಯಲಮ್ಮರು. ಮಿಕ್ಕ ನರರಿಗೆ ಮುಂದೆ ಸಾಧನವೆ?" ಎನ್ನಲು, ರಾಮನು "ಅದು ಹೇಗೆ ಲಿಂಗಣ್ಣ?" ಎಂದು ಕೇಳಿದನು. "ಹರನು ನಾರದ ಕದ್ದು ಕೊರೆದರು ಕನ್ನ. ಈ ಬಳಿಯ ದೊರೆಗಳ ಒಡವೆಯು ಕದ್ದು ಗುಂಡೈಯಗಳ ಮರೆಹೊಗಲು ಶೂಲವೇರಿದನು" ಎಂದು ಲಿಂಗನು ತಿಳಿಸಲು, ರಾಮನು ಕುತೂಹಲದಿಂದ ಮುಂದಿನ ಕಥೆಯನ್ನು ಕೇಳಲು ತವಕಿಸಿದನು. "ಗಿರಿಜಾವಲ್ಲಭಳ(ನು?) ಮೆಚ್ಚಿ ಗುಂಡಯ್ಯನ ಒಯ್ಯಲ್ಕೆ ಧರಿಣಿಯೋಳ್ ಚೋರನೆನಿಸಿದನು....ನಲಿದು ಲಾಲಿಸು ಭೂಪ ತಲೆಯೆರಡು ಇಲ್ಲಿಗೆ ಕಳೆಯಲು ರುದ್ರನಿಗೆ ಮೂರು" ಎಂಬುದಾಗಿ ತಿಳಿಸಿದನು. ರಾಮನಾದರೋ ಆ ವಿವರಣೆಯಿಂದ ಸ್ವಲ್ಪವೂ ಹೆದರದೆ "ನಗರದ ಬಲವೇನೊ, ತೆಗೆದೊಗೆವ ಅಗಣಿತರುಂಟು, ಪಡೆದ ಲಿಖಿತ ತೀರಿ ಬರಲು ಕಡಲೊಳು ಕೂರ್ಮನ ನಡುಬೆನ್ನಿನೊಳಗಿರ್ದು ಮುಳುಗದೆ ದ್ವಾರಕಪುರವು? ಊರಿನ ಘನಪಾತ್ರ ಹೇಳಬೇಡೈಯ ಲಿಂಗ, ರೋಮದೊಳಗೆ ಇದು ಎನ್ನ (?), ಆಡಬಾರದು ಮುಂದೆ ನೋಡುವ ನಡೆಯಣ್ಣ. ರೂಢೀಶನೊಲುಮೆ ಹೇಗಿಹುದೊ!" ಎಂದು ವಾದಿಸಿದನು. ರಾಮನ ಸ್ಫುರದ್ರೂಪವನ್ನು ಕಂಡ ಊರಿನ ಹೆಂಗಸರು ನಾನಾ ಬಗೆಯಾಗಿ ಮಾತನಾಡಿಕೊಂಡು ವಿಹ್ವಲರಾದರು. ರಾಮನಾದರೋ ಅವರೆಲ್ಲರನ್ನೂ ಅಕ್ಕ ತಂಗಿಯರಿಗೆ ಸಮಾನರೆಂದು ಭಾವಿಸಿದನು. ಲಿಂಗನು ರುದ್ರನ ಅರಮನೆಯ ವಿವಿಧ ಭಾಗಗಳನ್ನು ಪರಿಚಯಮಾಡಿಕೊಡುತ್ತ, ಮಧ್ಯೆ ಅಘಹರನ ಆಲಯವಿದೆಯೆಂದೂ, ಸರ್ವದಾ ರಣಭೂತಗಳು ಕಾವಲಾಗಿರುವುವೆಂದೂ, ವಜ್ರದ ತೊಲೆ ಕಂಬಗಳಿಂದ ನಿರ್ಮಿತವಾಗಿದೆಯೆಂದೂ ವರ್ಣಿಸಿ, ರಾಜನ ಓಲಗದ ಬಳಿಗೆ ಕರೆತಂದನು. ರಾಮನನ್ನು ಕಂಡಕೂಡಲೆ ಅಲ್ಲಿದ್ದವರಿಗೆ "ಆನೆಯ ಮೊತ್ತಕ್ಕೆ ಭೇರುಂಡನು ಇಳಿದಂತೆ" ಎದೆಜಗ್ಗಿತು. "ಇವನು ದೇವಪಿಂಡವು ನರನಲ್ಲ" ಎಂದುಕೊಂಡರು. ರಾಮನು ಪಲ್ಲಕ್ಕಿಯಿಂದ ಇಳಿದು ತನ್ನವರೊಂದಿಗೆ ಕೂಡಿ "ಶುಕ್ರನಂದದಿ ಬರಲು" ರುದ್ರನ ಅಕ್ಕಪಕ್ಕಗಳಲ್ಲಿ ಕುಳಿತಿದ್ದ ಮಂತ್ರಿ, ಮನ್ನೆಯರು, ಸಾಮಂತ ರಾಜರು ಎದೆನಡುಗಿ, ಎದ್ದು ನಿಂತು, ರಾಮನನ್ನು ಕೊಂಡಾಡುತ್ತಿದ್ದರು. ರಾಮನನ್ನು ಕಂಡ ರುದ್ರನೂ ಸಹ "ಪಡೆದಳು ಪಾರ್ಥನ ತೆರದಿ,ಹಡೆದೇನು ನೂರೆಂಟು ಸಗಣಿಯ ಹುಳದಂತೆ? ಗರುಡನಂದದಿ ಸುತನೊಬ್ಬ ಸಾಕು" ಎಂದುಕೊಂಡನು. "ಗರುಡನ ಕಂಡಂತ (ಥ?) ಫಣಿರಾಜನಂದದಿ ರುದ್ರ ಸಿರವ ತೂಗುತ" ರಾಮನ ಕುಶಲವನ್ನು ವಿಚಾರಿಸಿದನು. ರಾಮನು ಒಂದು ರೀತಿಯಾದ ಗತ್ತಿನಿಂದಲೇ ಉತ್ತರವಿತ್ತು, ಕೈ ಮುಗಿಯದೆ, ದೂರದಲ್ಲಿದ್ದ ಪೀಠದಲ್ಲಿ ಮಂಡಿಸಿದನು.

ರುದ್ರನು ಅತ್ಯಂತ ವಿಶ್ವಾಸದಿಂದ ರಾಮನನ್ನು ಕುರಿತು "ಹಡೆದ ತಂದೆಯ ಕೂಡಿ (ಡೆ?) ಕದನ

ವೇತಕೆ ಪುತ್ರ" ಎಂದು ಕೇಳಿದನು. ಅಲ್ಲದೆ "ಕಷ್ಟವೇತಕೆ ಪುತ್ರ, ಪೆತ್ತವರು ಬೈಯಲು ಇಟ್ಟೆಂಬಿನಂತೆ ಬರ ಬಹುದೆ? ಮುಪ್ಪಿನ ಕಾಲದಲಿ ದುಃಖಕಿಟ್ಟು ಬರಲು ಮುಂದೆ ಒಪ್ಪುವುದೆ ಸದ್ಗತಿವಾಲ್ಯ? ತಂದೆ ಮಗನಿಗೆ ಜಗಳ ಬಂದರೆ ಬಲ್ಲವನು ಒಂದುಗೂಡದೆ ಗ್ಯಾನನಗಳನು (?) ಮುಂದಲ್ಲಿ ತಿಳಿದಂತ ಪ್ರಧಾನರಿಲ್ಲದ ಮೇಲೆ ಚಂದವಪ್ಪುದು (ದೆ?) ರಾಜಸ್ಥಾನವು? ಸರ್ವ ವಿವೇಕವ ತಿಳಿದಾಗ ಕಂಪಿಲಗೆ ಕೆಡುಬುದ್ಧಿಯು ಅವಗ್ಯಾಕೆ ಬರಲು? ಕಡೆಗವನ ನೋಡುವ. ಹಡೆದ ಜನನಿಯ ಗರ್ಭ ಉರಿಯದೆ ನೀನೆದ್ದು ಬರಲು? ಬಾಲನೆ ಬರಸಲ್ಲ ಕಾಲ ತೆಗೆದು ಮುನ್ನ ಆಡಲು ಪಡೆದವರೊಂದ. ಬೇರಿಹರೆ ಮಕ್ಕಳು ಮಾಡುವರೆ ಪಟ್ಟವನು, ಜಾನ (ಣ?) ತನಗಳನೇನೆಂಬೆ? ಮಕ್ಕಳು ಎರಡಿರಲು ಸತ್ತರೆ ಮುನ್ನೊಬ್ಬ ಒಕ್ಕಣ್ಣಿನೊಳಗೆ ಜೀವಿಪರು. ಹುಟ್ಟುತಲೆ ಒಂದಾಗಿ ಎಡಬೇಂಟಿಯಲಿ ಪೋದಂತ ಅರ್ಥವಾಯಿತು ಕಂಪಿಲಗೆ" ಎಂಬುದಾಗಿ ಬಹಳ ಮನನೊಂದು ಎಲ್ಲವನ್ನೂ ತಪ್ಪದೆ ವಿಚಾರಿಸಿದನು. ಆ ರೀತಿಯಾಗಿ ತನ್ನ ಮಗನನ್ನು ಹೊರಗಟ್ಟಿರುವ ಕಂಪಿಲನನ್ನು ಕುರಿತು ಟೀಕಿಸಿದನು. ರಾಮನು ಬಹು ಬುದ್ಧಿವಂತಿಕೆಯಿಂದ "ಯಾರೆಂಬುದೇನೊ ಪ್ರಾರಬ್ಧ ಫಲವಿದು, ಮಾಡದೆ ಕುಂತಿಯ ಸುತರ ಆರಣ್ಯವಾಸಕ್ಕೆ....ಮಿಾರಲಾಗದು ಪೂರ್ವಲಿಖಿತ" ಎಂಬುದಾಗಿ ಒಂದು ಮಾತಿನಲ್ಲಿ ತೇಲಿಸಿ ಉತ್ತರವಿತ್ತನು. ರುದ್ರನು ರಾಮನು ತನ್ನ ಮಗನಿಗೆ ಸಮಾನನೆಂದೂ, ತನಗೆ ಬಲಭುಜದಂತೆ ಇರುವ ನೆಂದೂ ಭಾವಿಸಿ, "ರಾಯ ರಾಮನೆ ಕೇಳೊ, ಬೇಕಾದ ಭೂಮಿಯ ಕೊಡುವೆ, ತಾಯಿತಂದೆಗಳ ಮರೆಸುವೆನು. ಯಾವ ಕಾರ್ಯಗಳನು ನಿನಗರುಹಿ ಮಾಡುವೆ, ಎನ್ನ ಕುಮಾರಗೆ ಹೆಚ್ಚಾಗಿ ಕಾಣ್ವೆ" ಎಂದು ಕೊಂಡಾಡಿ, ರಾಮನಿಗೂ ಆತನ ಕಡೆಯವರಿಗೂ ಬೇಕುಬೇಕಾದ ಹಾಗೆ ಸನ್ಮಾನ ಮಾಡಿದನು. ಲಿಂಗನನ್ನು ಕರೆದು, ಊರ ಹೊರಗಿದ್ದ ಕಾಟಣ್ಣನ ದಂಡಿಗೂ ಆಹಾರಾದಿ ಸಾಮಗ್ರಿಗಳನ್ನು ಒದಗಿಸುವಂತೆ ಆಜ್ಞಾಪಿಸಿದನು. ಲಿಂಗನು ಅದೇ ಮೇರೆಗೆ ಕಾಟನಲ್ಲಿಗೆ ಬಂದು, ಆಸ್ಥಾನದಲ್ಲಿ ನಡೆದ ಎಲ್ಲ ವೃತ್ತಾಂತವನ್ನೂ ಅವನಿಗೆ ತಿಳಿಸಿ ದನು. ಇತ್ತ ರುದ್ರನೂ ರಾಮನೂ ಪರಸ್ಪರ ಮಾತಿನಲ್ಲಿ ಮಗ್ನರಾಗಿರಲು, ಅಲ್ಲಿದ್ದವರೊಬ್ಬರು ವಿನೋದದಿಂದ "ಮೂಳ ರತ್ನಿಯ ಮೂಗ ಕೊಯ್ಯದೆ ಬಂದೆ ಏನೆಂಬೆ ನಿನ್ನಯ ಪುತ್ರ" ಎಂದು ಕೊಂಕುನುಡಿ ಆಡಿದರು. ರಾಜನು, ಆ ಮಾತನ್ನು ಆಡಿದ ಮಂತ್ರಿಯನ್ನು ಕುರಿತು, ರಾಮನು ಸ್ವಭಾವತಃ ಶಾಂತಯುಕ್ತನೆಂದೂ, ಬೇರೆ ಯಾರಾದರೂ ಆಗಿದ್ದರೆ ತಮ್ಮ ತಂದೆಯನ್ನೂ ಹಾಗೆಯೇ ಬಿಡುತ್ತಿರಲಿಲ್ಲವೆಂದೂ ರಾಮನ ಪಕ್ಷವನ್ನೇ ವಹಿಸಿ ಉತ್ತರವಿತ್ತನು. ಇದೇ ಸಂದರ್ಭದಲ್ಲಿಯೇ ಪೂರ್ವಕಥೆಯ ಪ್ರಸ್ತಾಪವೊಂದನ್ನು ಎತ್ತಿ ಮಂತ್ರಿಗಳು "ಹಿಂದೊಬ್ಬ ವೀಜೇಂದ್ರರಾಯನೀ ತೆರದೊಳು ಕೊಂದುದಿಲ್ಲವೆ ತನ್ನ ಮಗನ! ಕಂದನು ಜಯಸೇನ ಧರ್ಮಿಷ್ಠನಾಗಲು ಗೆದ್ದು ಕೊಂಡಾದೊಳಳಿದು ಪುಟ್ಟುವುದು" ಎಂದರು. ರುದ್ರನೂ ಸಹ ಅದಕ್ಕೆ ಉತ್ತರ ವಾಗಿ "ಹೇಳಬಹುದು ಮಂತ್ರಿ ನಾ ಕೇಳಿ ಬಲ್ಲೆನು ಮದನಮೋಹಿನಿಯ ತಂದ ಜಯಸೇನ ನೋಡಲು ಅದಕಿದು ಜೋಡಿನ ಪ್ರತಿಯೆಂದು ಗಹಗಹಿಸಿ[1]" ನಕ್ಕನು. ಅನಂತರ ಕಂಪಿಲನು ಹೆಂಗಸನ್ನು ನೆಚ್ಚಿ ಮಗನನ್ನು ತೊರೆದ ಅವಿವೇಕವು ಅವನಿಗೆ ಹೆಡತಲೆಯ ಮೃತ್ಯುವಾಯಿತೆಂದು ಹೇಳಿ, ರಾಮನ ಕಡೆ ತಿರುಗಿ "ಬಿಡು ಪುತ್ರ ಕಂಪಿಲನ ಅಡಿ ಆಸೆ ಬೇಡಿನ್ನು ನಡೆಸುವೆ ನಮಗೆ ಮಿಗಿಲಾಗಿ ಕೊಡುವೆನು ನಂಬುಗೆಯ, ಹಡೆದ ಮಗನಿಗೆ ನಿನ್ನ ಒಡನೆ ಹೆಚ್ಚಾಗಿ ಕಾಣುವೆನು" ಎಂದು ಅಭಯವಿತ್ತನು. ಬಳಿಕ, ಕೋಪಮಾಡಿಕೊಂಡು ಬಂದವನು ಈ ಅಪಾರವಾದ ಸೇನೆಯನ್ನು ಏಕೆ ಕಟ್ಟಿಕೊಂಡು ಬಂದೆ ಎಂಬುದಾಗಿ ಪ್ರಶ್ನಿಸಿದನು. ರಾಮನ ಉತ್ತರವಾದರೋ ಅತ್ಯಂತ ಚಮತ್ಕಾರಯುಕ್ತವಾಗಿತ್ತು. "ರಾಜೇಂದ್ರ, ಲಾಲಿಸು ಕೈಯಾರ ಕಟ್ಟಿದ ಬಲವು, ಪ್ರಾಣವಳಿಯದೆ ತ(ನ?)ನ್ನ ಬಿಡರು. ಸಾವಿರ ವರಹವ ಸಂಬಳವನಿತ್ತರೆ ಪರರ ಓಲೈಸಿ ಕರವ ಮುಗಿವವರೆ? ಆಳುವುಳ್ಳವನರಸು, ತಾಯಿ ಉಳ್ಳಡೆ ಸುಖವು. ಪ್ರಾಣ ಹಂಗರಿದವಗೆ ಕಾರ್ಯ. ವೀರ ವಿಕ್ರಮನಾಗೆ ತಾನೊರ್ವ ಬರಲರಸೆ,

---

1. ಮುಂದೆ ನೋಡಿ : ಉಪಕಥೆ ೫.

ವಿಚಾರ ಮಾಡುವರೆ ಅವನಿಯಲಿ. ಮಂದಿ ಮಾರ್ಬಲಗೂಡಿ ಕಾಣಿಸಿಕೊಳ್ಳೆ ದಯೆಗೊಂಡು ನೀವೆನ್ನ ಕರೆಸಿದಿರಿ. ಮುಂಡೆಯ ತೆರದೊಳು ಮತ್ತೊಬ್ಬನೆ ಬಂದಿರಲು, ಕೊಂಬುವುದೆ ಗಣನೆ ನೀ ಮೊದಲು ?" ಎಂದು ಹೇಳಿದನು. ಹಾಗೆಯೇ ಮಾತು ಮುಂದುವರಿದು ರುದ್ರನು, ರಾಮನನ್ನು ಮತ್ತೊಮ್ಮೆ ಕುರಿತು "ಎಮ್ಮ ಬಾಲಗೆ ಇಮ್ಮಡಿಯಿಂದ ಕಾಣುವೆ, ಮುನ್ನ ಮರೆಸುವೆ ತಾಯಿ ತಂದೆಗಳ, ನಿರ್ಣಯಗಳ ಮಾಡು ಹಿಂದಣ ಯೋಚನೆಯ, ಎನ್ನ ಕಂದಗೆ ನೀ ಹಿರಿಯನೆಂಬೆ" ಎಂಬುದಾಗಿ ವಿಶ್ವಾಸವನ್ನು ಪ್ರಕಟಪಡಿಸಿದನು. ಗಂಡುಗಲಿಯಾದ ರಾಮನು ಆ ಸವಿಮಾತುಗಳನ್ನು ಸುಲಭವಾಗಿ ಸ್ವೀಕರಿಸಲಿಲ್ಲ. ತಾನೂ ಒಂದು ಪರತ್ತನ್ನು ಹಾಕಿದನು. ರಾಜನ ಪ್ರಿಯೋಕ್ತಿಗಳನ್ನು ಹಿರಿಯನ ಮಾತೆಂದು ಮನ್ನಿಸಿ "ಬಾಲ್ಯದೊಳಿಟ್ಟಂತ ಬಿರುದ ಕೂಲಿ ಆಸೆಗೆ ಬೆದರಿ ಕಾಲ ಪೆಂಡೆಯವ ತೆಗೆಯೆ, ಕೇಳಿ ತಡೆಯಲು ಮಾ ಕಷ್ಟ. ದೂರ ಶೋಧಿಸಿ ನೋಡಿ ಹೊಳೆದಡೆ ಸಲ್ಲದು ಮಾತು ಸಾರಿದ ಸಕಲರು ತಿಳಿದಾ ಕ್ರೂರ ಕೊಂಡಿಗರಿಂದ ಚಾಡಿ ಕ್ಷುದ್ರಕೆ ಜಗಳ ಮಾಡಿಕೊಂಡರೆ ಮಣ್ಣ ಕೊಡುವೆ. ಮುಂದೊಮ್ಮೆ ತಿಳಿ ರಾಯ ಕಂದನ ನಿಜಕ (ತ?) ರವ. ಹಿಂದಾಡಕೊಂಡೆ (ಹಿಂದಾಡಿಕೊಂಡು ?) ಮಂತ್ರಿಗಳು ಹಾಗೀಗೆಯೆಗ (ನ?) ಲವರ ಸೇರಿಸುವೆ ಯಮನೂರ. ಭೂಮಿ ಮುನಿಯಲು ಬಿರುದ ಬಿಡೆನು. ಬಿರುದಿಗೆ ಬಾಳುವೆ ಶರೀರವು ಇರುವನಕ. ಬರುವ ಮುಂದಣ ವೈರ ಒರೆದೆ. ಸರ್ವರಿಗು ಮನ ಹರುಷ ಪರಿಣಾ [ಮು] ಕಂಡರೆ ಎನ್ನ ಇರಿಸಿಕೊಳ್ವುದು ಮೂರು ದಿವಸ" ಎಂಬುದಾಗಿ ತನ್ನ ಸ್ವಾಭಿಮಾನವನ್ನು ಮುಚ್ಚುಮರೆಯಿಲ್ಲದೆ ವ್ಯಕ್ತಪಡಿಸಿದನು. ಆ ಬಿಚ್ಚುನುಡಿಗಳನ್ನು ಕೇಳಿ ಅಲ್ಪಸ್ವಲ್ಪ ತರ್ಕವಾಯಿತು. ಸಮಾಧಾನಿಯಾದ ರುದ್ರನು "ಲೇಸು ಒಳ್ಳೇದು ಪುತ್ರ ನಡೆಯೆಂ(ಯಿಂ?)ದು ಪಾಳೆಯಕೆ ಮಾತನಾಡುವೆ ನಾಳೆ ದಿವಸ" ಎಂದನು. ಕಾಲು ಕೆರೆದು ಜಗಳಕ್ಕೆ ಬಂದಾತನು ಅಲ್ಲಿಯತನಕ ಸುಮ್ಮನಿರುತ್ತಾನೆಯೆ ? ಆತನು ತನ್ನ ಎಡಬಲಗಳ ಮನ್ನೆಯರನ್ನು ನೋಡುತ್ತಾ ಎದ್ದೇಳುವುದೇ ತಡ, ಅವರು ಕೈಮುಗಿದು ರಾಮನ ಬಿರುದಾವಳಿಯನ್ನು ಹೇಳತೊಡಗಿದರು. "ಕಡಿಕಾಡಿ ಓರ್ಗಲ್ಲ ಲಯಕರ್ತನು ಹೊರಡೆಂದು ಹಿಡಿಯಲು ಬಿರುದಿನ ಕಹಳೆ, ಕುಂಜರದ ಮೊತ್ತದಿ ಕಂಠೀರ[ವ]ನು ನಡೆವಂತೆ ಬಂದು ಏರಿದ ಪಲ್ಲಕ್ಕಿಯನು." "ಭಲರೆ ಭೇರುಂಡ ಮಾರ್ತಂಡ, ಹೊಳವಾಡಿ ಒಳಹೊಕ್ಕು ಅಳುಕಿ ಹೋಹರ ಗಂಡ, ಕಡೆಗೊಂದನಾಡೋರ ಮಿಂಡ, ಮಾರಮಲೆವರ ಗಂಡ, ಮರೆಬಿದ್ದವನಿಗೆ ಭೂಮಿ ಮುನಿಯಲು ಕೊಡದ ಬಿರುದು. ಬಲವಂತ ಸುರಿತಾಳ ಹಂಮಿಾಖಾನರ ಗಂಡ ರಣವಿಜಯ ರಾಮ ಭೂಪಾಲ. ಚಪ್ಪನ್ನ ದೇಶದಿ ಕಪ್ಪವ ಕೊಡೆನೆಂಬ ದಿಟ್ಟರಾಯರಿಗೆದೆ ಶೂಲ. ಹೊಕ್ಕವನ ಬೆನ್ನಲು ಹರ ಮುನಿಯಲು ತಾ ಕೊಡನು. ಒಪ್ಪುವುದೆ ಆ ಬಿರುದು ತನಗೆ. ಕಡಿಯಲಾರದೆ ರಣವ ಕದ್ದು ಹೋಹರ ಗಂಡ, ಮಡದಿಯರ ಮುಖನೋಡಿ ಮನೆಯ ಬಡವರನು ದಣಿಮಾಡಿ, ಜುಣುಗೋರಾಯರ ಗಂಡ, ಮಡಗೋರ ಮಿಂಡ ಪ್ರಾಣವನು. ಮೂರು ರಾಯರ ಗಂಡ, ಚಾಡಿ ಕೇಳ್ವರ ಮಿಂಡ, ಓರುಗಲ್ಲವಗೆ ಎದೆಶೂಲ. ರಾಯರುದ್ರನ ಬಳಿಯ ಕಾಯಿದು ಓಲೈಸುವ ರಾಯರ ಗಂಡ, ರಣರಾಮ!" ಎಂಬುದಾಗಿ ಮೇಲಿಂದ ಮೇಲೆ ಆಲಿಕಲ್ಲ ಮಳೆ ಸುರಿದಂತೆ ತಡೆಬಡೆಯಿಲ್ಲದೆ ಹೊಗಳಿದರು.

## ರುದ್ರನ ಅಸಮಾಧಾನ

ಆ ಮಾತುಗಳನ್ನು ಕೇಳಿದ ಶೇವಣಿಯವರಿಗೆ ( ? ) ಕೋಪವುಕ್ಕಿತು. ರುದ್ರನೂ ಸಹ ಸಾಕ್ಷಾತ್ ಎರಡನೆಯ ಪರಶಿವನೇ ಆಗಿ ಮಿಾಸೆ ಕೆಂಪೇರಿತು. ಮನ್ನೆಯರು ರಾಮನನ್ನು ಬಾಯಿಗೆ ಬಂದಂತೆ ಜರೆದರು. "ಶ್ವಾನ ಬಲ್ಲುದೆ ಗಂಧ ದಿವ್ಯ ವಾಸನೆ ಫಲವ ?" "ಕೋತಿಯ ಪಿಡಿತಂದು ಪಾಕನ್ನ ನೀಡಿದರೆ ಸಾಕಾಗಿ ಮರನೇರಿ ಹುಬ್ಬ ಹಾಕಿದ ತೆರ ಬಂತು"; ಮುನಿದು ಬಂದವನೆಂದು ನೀವು ಸತ್ಕರಿಸಿದರೆ ಆತನು ಗಂಡನೆಂದು ಮೆರೆದನು ; ಹುಡುಗ ಮೂಳನು ನಿಮ್ಮ ಕುಲ ರೀತಿ ಮಾರ್ಗಗಳನ್ನು ಅರಿಯನು ; "ನರಿ ಸೊಕ್ಕಿ ಕರಿಗೆ

ಬಗುಳ್ದಂತೆ" ಆಯಿತು ; ಸಾಕ್ಷಾತ್ ಶಿವನೇ ನಿಮ್ಮನ್ನು ಕಂಡು ಹೆದರಬೇಕಾದರೆ, ಈ ಮೇಕೆಕಾಯುವ ಖೂಳನ ಪ್ರತಾಪವೇನು ?; ನಮ್ಮನ್ನು ಜರೆದ ಪರಿಣಾಮವಾಗಿ ನಾವೆಲ್ಲರೂ ಹೆಂಡಿರಾದೆವು ; "ಬಡವನ ಸತಿಯಾಗಿರುವುದಕ್ಕಿಂತಲೂ ಬಲ್ಲಿದನ ಮನೆಯ ಗೌಡಿಯಾಗಿರುವುದು ಉತ್ತಮ"; ತಾನು ಪೊಡವಿಯ ರಾಯರಿಗೆಲ್ಲ ಗಂಡನೆಂದು ಜಂಭ ಕೊಚ್ಚಿಕೊಂಡುದರಿಂದ ನಾವೆಲ್ಲ ಆತನಿಗೆ ಮಡದಿಯರಾದೆವು. ತಾವು ಅಪ್ಪಣೆಯನ್ನು ದಯಪಾಲಿಸಿ. ಕೂಡಲೆ ಅವನ ತಲೆಯನ್ನು ಚೆಂಡಾಡಿ ತರುವೆವು—ಎಂಬುದಾಗಿ ರೋಷಾವೇಶದಿಂದ ಉರಿದೆದ್ದರು. ರುದ್ರನಿಗೂ ಉರಿಯುವ ಬೆಂಕಿಗೆ ಎಣ್ಣೆ (ತುಪ್ಪ ?) ಹೊಯ್ದಂತಾಯಿತು. ಆಗ ವೃದ್ಧಮಂತ್ರಿಯಾದ ಜೀವಣ್ಣನು ಒಂದು ಮಾತನ್ನು ಹೇಳಿದನು. "ಕೊಡಸಲ್ಲ ನಂಬುಗೆಯ ತಪ್ಪಬಾರದು ರಾಯ ದೊರೆಗಳ ಮತಾಚಾರದೊಳಗೆ." ಆ ರೀತಿಯಾಗಿ ರಾಜಧರ್ಮವನ್ನೇ ಹಿಡಿದೆತ್ತಿ, ದಾಯಾದಿಯಾದ ಕಂಪಿಲನ ಕುಮಾರನು ತನಗೆ ತಕ್ಕಂತೆಯೇ ನಡೆದಿದ್ದಾನೆಂದೂ, ಅವನನ್ನು ಮೇರೆ ಮೀರಿ ಮನ್ನಿಸಿದ ನಾವೇ ಬೆಪ್ಪರಾದೆವೆಂದೂ ವಿಶದಪಡಿಸಿದನು. ರುದ್ರನಿಗೂ "ಕುಕ್ಕುಟನ ಘನಮಾಡಿ ಪಲ್ಲಕ್ಕಿಯನೇರಿಸಲು ತಿಪ್ಪೆ ವಾಸನವ (ನೆಯ ?) ಮರೆಯುವುದೆ" ಎನ್ನಿಸಿತು. ಕಡೆಗೆ ಆತನನ್ನು ಅಲಕ್ಷ್ಯಮಾಡಿ ಅಟ್ಟಿಬಿಡುವುದೆ ಲೇಸೆಂದು ರಾಜನು ಹೇಳಲು, ಉಳಿದವರು ಒಪ್ಪಲಿಲ್ಲ. ಅವರು, ನೋಡಿದವರು ತಮ್ಮನ್ನು ಹಾಸ್ಯಮಾಡದೆ ಬಿಡುವುದಿಲ್ಲವೆಂದೂ "ಸಾಕರಸೆ ಚಾವಡಿಯ ನೀ ಪಾಲಿಸು....ವೀಳ್ಯ, ಹಾಕಿದ ಬಿರುದ ತೆಗೆಸುವೆವು. ಭೀತಿಯಾಗಲು ನಿಮಗೆ ಬಿಡಿ ಎಮ್ಮ ಕಡೆಗವನ ಸಾಕುವಮಾಡುವೆವು ಯ[ಮ]ಪುರಿಗೆ" ಎಂದೂ ಒತ್ತಾಯ ಮಾಡಿದರು. ಅಷ್ಟಕ್ಕೆಲ್ಲ ದೇವಿಶೆಟ್ಟಿಯ ಲಿಂಗನೇ ಕಾರಣನೆಂದೂ "ದಾರಿಯಲಿ ಹೋಗುವ ಮಾರಿಯ ಕರೆತಂದು ಹೀನದ ನುಡಿಯ ಹೊಗಳಿಸಿದ" ಎಂಬುದಾಗಿಯೂ ಆಕ್ಷೇಪಿಸಿದರು. ಲಿಂಗನನ್ನು ಕೂಡಲೆ ಹಿಡಿದು ತರಿಸಬೇಕೆಂದು ಸಲಹೆಯಿತ್ತರು. ಲಿಂಗನನ್ನು ಚರರು ಕರೆದೊಯ್ಯುವ ವೇಳೆಗೆ ರಾಮನೂ ಪಾಳೆಯಕ್ಕೆ ಹಿಂತಿರುಗಿದನು. ಅವರಿಬ್ಬರಲ್ಲಿಯೂ ಮಾತುಕತೆ ನಡೆದು ರುದ್ರನನ್ನು ಕಂಡುಬರುವುದಾಗಿ ಹೊರಟುಬಂದನು. ರುದ್ರನು ಲಿಂಗನನ್ನು ಕಂಡು "ಕರೆತಂದು ರಾಮುಗೆ ಎಮ್ಮ ಹೆಂಡಿರ ಮಾಡಿದೆಯೊ ಲಿಂಗ ? ತುಂಡೇಳ ಹೊಡೆಸುವೆ ತುಂಡ ಮೂಳನ ಗರ್ವ. ಬಡಮಿಂಡಯೆನುತ ಹೊಗಳಿಸಿದ. ಬಿರುದಂಕನಾದರೆ ಇರಬೇಕು ಮನದಲ್ಲಿ ಬರ ಬಹುದೆ ಪರಹಿತರಿಗೆ (?). ತಡೆದೇನು ಕೊಟ್ಟಂತ ಅಭಯಕೋಸ್ಕರ ಮುಂದೆ ನಡೆಯೆನ್ನು ನೀನು ಬಂದಲ್ಲಿ" ಎಂದು ಸ್ಪಷ್ಟಪಡಿಸಿದನು. ಲಿಂಗನು ತಾನು ಆ ಮೊದಲೇ ಆ ವಿಚಾರವನ್ನು ಹೇಳಿರುವುದಾಗಿಯೂ, ಅವರಿವರ ಚಾಡಿಯ ಮಾತುಗಳನ್ನು ಕೇಳಿ ಅರಸನು ಹಾಗಾಡುವುದು ತರವಲ್ಲವೆಂದೂ, "ಬಲವಂತನಾಗಲು ಹೊಗಳಿಸಿದನಾ ಬಿರುದ, ಬಡವ ಹೊಗಳಿಸಿಕೊಳಬಲ್ಲನೆ ?" ಎಂದೂ ರಾಮನ ಪಕ್ಷವನ್ನೇ ವಹಿಸಿ ಮಾತಾಡಿದನು. ಆ ಮಾತುಗಳು ಇತರರನ್ನು ಮತ್ತಷ್ಟು ಕೆರಳಿಸಿದುವು. ರಾಮನೂ ಲಿಂಗನೂ ಒಂದಾಗಿರುವರೆಂದು ವಾದಿಸಿದರು. ರಾಯನು ಮತ್ತೆ ಅವರಿಗೆಲ್ಲ ಸಮಾಧಾನ ಹೇಳಿ, ತಾನು ತನ್ನ ಧರ್ಮವನ್ನು ಮೀರುವನಲ್ಲವೆಂದೂ, ರಾಮನನ್ನು ಹಿಂದಟ್ಟುವೆನೆಂದೂ, ಜಗಳ ಅನಿವಾರ್ಯವಾದರೆ ಆಗ ಅವರಿಗೆಲ್ಲ ವೀಳ್ಯವನ್ನು ಕೊಡುವೆನೆಂದೂ ತಿಳಿಸಿದನು. ಲಿಂಗನನ್ನು .ಕುರಿತು ಎಚ್ಚರದ ಮಾತುಗಳನ್ನು ಹೇಳಿ ರಾಮನೆಡೆಗೆ ಕಳುಹಿಸಿದನು. ಆತನು ತನಗೂ ಓರುಗಲ್ಲಿಗೂ ಅನ್ನ ನೀರಿನ ಋಣ ತೀರಿತು ಎಂದು ಎಣಿಸುತ್ತ ರಾಮನ ಬಳಿಗೆ ಬಂದು "ಬಿರುದುಗಳ ಬಿಟ್ಟರೆ ಇರಲೆಂದ ರಣಹೇಡಿ ಕಡೆಗೆನ್ನ ಮಾಡಿದವನು" ಎಂದು ತಿಳಿಸಿದನು. ಆ ಮಾತು ರಾಮನಿಗೆ ಸ್ವಲ್ಪವೂ ರುಚಿಸಲಿಲ್ಲ. "ಹಾಕಿದ ಬಿರುದನು ಹರನು ಪೇಳಲು ಬಿಡೆನು. ನಾರಿ ನೃಪಗಂದಿ (ಜ ?) ಪಿಡಿದವನೆ" ಎಂದು ಕಿಡಿಕಿಡಿಯಾದನು. "ಬೇಡಿದ ಬಯಕೆಯ ಅನಾಥಗೆ ಒಲಿದಿತ್ತ ರಾಯ ಜಾಟಂಗಿ ರಾಮೇಶ" ಎಂದು ಹಿಗ್ಗಿ ಲಿಂಗನನ್ನು ಕುರಿತು "ಹೋಗಯ್ಯ ಲಿಂಗಣ್ಣ ರಾಯ ರುದ್ರನ ಬಳಿಗೆ, ಹೋಗುವೆನೆನ್ನೊ ತೃಣಕ್ಕೆ(?). ಅಡಿ ತಪ್ಪುವರೆಡೆಯ, ಅರಗಳಿಗೆ ನಿಲ್ಲನು ಮರಳಿ ನೀರನು ಮುಟ್ಟನುಯೆಂದು ಪೇಳೊ" ಎಂದು ಹೇಳಿ ಕಳುಹಿಸಿದನು. ಅದೇ ಮೇರೆಗೆ, ಲಿಂಗನು ರಾಜನಲ್ಲಿಗೆ ಬಂದು "ಇರೆನೆಂದ ತರಳ ರಾಮಯ್ಯ" ಎಂದು ತಿಳಿಸಿ ತನ್ನ ಮನೆಗೆ

ಬಂದನು. ಲಿಂಗನು ತನ್ನ ತಂದೆಯನ್ನು ಕಂಡು, ಎಲ್ಲವನ್ನೂ ಹೇಳಿ, ತನ್ನ ಸಂಸಾರವನ್ನು ಕರೆದೊಯ್ಯುವಂತೆ ವಿನಂತಿಮಾಡಿಕೊಂಡು, ತನ್ನ ಅಚ್ಚುಮೆಚ್ಚಿನ ಸೈನಿಕರ ಸಮೇತ ಊರನ್ನು ಬಿಟ್ಟು ಹೊರಡಲು ಅಣಿಯಾದನು. ಆ ಸುದ್ದಿ ರುದ್ರನಿಗೆ ಗೊತ್ತಾಗಿ ಚಾರರನ್ನು ಕಳುಹಿಸಲು, ಅವರು ಬಂದು ಕಡೆಬಾಗಿಲಲ್ಲಿ ತಡೆದರು. ಆದರೆ, ಲಿಂಗನು ಅವರನ್ನು ಬಡಿದು ಅಟ್ಟಿದನು. ಅನಂತರ ರಾಜನು ಮಂತ್ರಿಯಾದ ಲಿಂಗರಸನನ್ನು ಕಳುಹಿಸಿದನು. ಆತನು ಬಿನ್ನಾಣದ ಮಾತುಗಳನ್ನು ಆಡುತ್ತ "ಎಲೆಯ ಕೊನೆಗಳ ನೆಚ್ಚಿ ಬಲುಮರನ ಬಿಡಲ್ಯಾಕೆ ಪಡಿ ತೀರಿ ತೇನೊ ಲಿಂಗಣ್ಣ? ಆಳಿದೊಡೆಯಗೆರಡ ಎಣಿಸಿ ಪೋಗಲು ಲಿಂಗ, ಭೂಮಿ ಮುನಿಯದೆ ಹೋದ ಬಳಿಯು? ಹಾದಿ ಸೂಳೆಯ ನೆಚ್ಚಿ ಮನೆಯ ಹೆಂಡತಿ ಬಿಟ್ಟೆ!'' ಎಂದನು. ಲಿಂಗನು ತಾನು ಬರುವುದಿಲ್ಲವೆಂದೂ "ಕೆಟ್ಟ ಮಾತುಗಳಾಡಿ ಕೆಡಬೇಡ ಲಿಂಗರಸೆ" ಎಂದೂ ಎಚ್ಚರಿಸಿದನು. ಅನಂತರ ಇಬ್ಬರಿಗೂ ಘೋರವಾದ ಕಾಳಗ ನಡೆಯಿತು. ಲಿಂಗನ ಆಪ್ತರು ಜೀವದ ಮೇಲಿನ ಹಂಗು ತೊರೆದು ಹೋರಾಡಿದರು. ಲಿಂಗನೂ ಚಂದ್ರಾಯುಧ ವನ್ನು ಹಿಡಿದು ನಿಂತನು. ಈ ಸುದ್ದಿ ರಾಮನಿಗೆ ಮುಟ್ಟಲು, ಆತನು ಕಾಟಣ್ಣ, ವೀರಸಂಗಯ್ಯ ಮೊದ ಲಾದವರನ್ನು ಕೂಡಿಕೊಂಡು ಬಂದು, ಎದುರಾಳಿಗಳನ್ನು ತರಿದು ಹಿಮ್ಮೆಟ್ಟಿಸಿದನು. ಲಿಂಗನನ್ನು ಕೈಹಿಡಿದು ಕೊಂಡು ರಾಮನು ತನ್ನ ಪಾಳಯಕ್ಕೆ ಕರೆದೊಯ್ದನು.

ಇತ್ತ, ಸೋತ ರುದ್ರನ ಮಂದಿ ರಾಜನ ಬಳಿಗೆ ಬಂದು ತಮ್ಮ ಕಷ್ಟ ನಷ್ಟಗಳನ್ನೆಲ್ಲ ವಿವರಿಸಿದರು. ಲಿಂಗರಸನು ಸಂನ್ಯಾಸಿವೇಷವನ್ನು ಧರಿಸಿ ಬೂದಿಯನ್ನು ಪೂಸಿಕೊಂಡು, ರಾಜನ ಬಳಿಗೆ ಬಂದನು. ಆತನನ್ನು ಕಂಡ ರಾಜನು "ಯಾಕಯ್ಯ ಎಲೆ ಮಂತ್ರಿ, ಸಂನ್ಯಾಸಿ ರೂಪನೆ (ವ?) ತೊಟ್ಟೆ?" ಎಂದು ಕೇಳಿ ನಗಲಾರಂಭಿಸಿದನು. ಲಿಂಗರಸನು "ಒಲಿದು ಲಾಲಿಸು ಭೂಪ, ಉಳಿಯಗೊಡುವರೆ ಎನ್ನ ತಲೆಯ ಕಾದಿತು ಬೂದಿ ಮುನ್ನ" ಎಂದು ನಿಜವಾದ ವೃತ್ತಾಂತವನ್ನು ತಿಳಿಸಿದನು. ರುದ್ರನು ಕೋಪಗೊಂಡು "ಮೂಳ ಲಿಂಗನೆ (ಗೆ?) ಹೆದರಿ ಓಡಿಬಂದನು ಮಂತ್ರಿ, ಹದಿನೈದು ಸಾವಿರ ಬಲವೈದು. ಹೋಳಿಗೆ ತುಪ್ಪಕ್ಕೆ ಅಧಿಕಾರ ರಲ್ಲದೆ ನೀವು ಕಾಯ [ಕ] ಬ್ರಹ್ಮರಿಗೆ ಸಾಧನವೆ?" ಎಂದು ಆಕ್ಷೇಪಿಸಿದನು. ಮಂತ್ರಿಗೂ ಮನಸ್ಸು ಚುಚ್ಚಿ ದಂತಾಯಿತು. ಲಿಂಗನನ್ನು ಅಡ್ಡಗಟ್ಟುವ ಸಮಯಕ್ಕೆ ರಾಮನು ಧಾವಿಸಿ ಬಂದು, ಮೋಸದಿಂದ ತಮ್ಮನ್ನು ಜಯಿಸಿದನೆಂದೂ ಮೀಸೆ ಹೊತ್ತಿರುವ ತಾನು ಛಲಹೊತ್ತು ರಾಮನನ್ನೂ ಲಿಂಗನನ್ನೂ ಹಿಡಿದು ತರುವೆನೆಂದೂ ಪಣ ತೊಟ್ಟನು. ಅನಂತರ, ರುದ್ರನು ಮಂತ್ರಿಗೆ ಮಜ್ಜನಾದಿಗಳನ್ನು ಮಾಡಿಸಿ, ಉಡುಗೊರೆ ಮೊದಲಾದವು ಗಳನ್ನು ಕೊಟ್ಟು ಗೌರವಿಸಿದನು. ರುದ್ರನು ಲಿಂಗನನ್ನು ಒಪ್ಪಿಸಿಕೊಡುವಂತೆ ರಾಮನಿಗೊಂದು ಕಾಗದ ಬರೆದು, ಮಾತು ಬಲ್ಲಂಥ ಮಂತ್ರಿಗಳ ಮೂಲಕ ಕಳುಹಿಸಿಕೊಟ್ಟನು. ಅವರು ರಾಮನಲ್ಲಿಗೆ ಬಂದು, "ಕಪ್ಪೆಗೆ ಉರುಗನ ಹಗೆಯೆ?" "ಹರಿಣ ವ್ಯಾಘ್ರನ ಕೂಡೆ ಛಲಗೊಂಡು ಬದುಕುವುದೆ?" ಎಂಬುದಾಗಿ ನೀತಿ ಹೇಳಿ, ಭೀತಿ ಹುಟ್ಟಿಸಿ, ಕಾಗದವನ್ನು ಕೊಟ್ಟರು. ರಾಮನಿಗೆ ಸಿಟ್ಟುಬಂದು, ಅವರನ್ನು ಅವಮಾನ ಮಾಡಿ ಅಟ್ಟಿದನು. ಅವರು ಹಿಂತಿರುಗಿ ಬಂದು ತಮ್ಮ ಪಾಡನ್ನು ರುದ್ರನಿಗೆ ತಿಳಿಸಿದರು. ರಾಜೇಂದ್ರನು ಭೇರುಂಡ ನಂತೆ ಭಯಂಕರನಾಗಿ ಸೇನೆಯನ್ನು ಸಜ್ಜಾಗುವಂತೆ ಆಜ್ಞೆಮಾಡಿದನು.

ಕ್ಷಣ ಮಾತ್ರದಲ್ಲಿ ಅಪಾರವಾದ ಸೈನ್ಯವು ಸಿದ್ಧವಾಯಿತು. ಎಲ್ಲರೂ ಉತ್ಸಾಹದಿಂದ ಮಾತನಾಡ ತೊಡಗಿದರು. ರುದ್ರನು ಮುಮ್ಮೋಜಿ, ಪಾಂಡುರಂಗರಸ, ಮತ್ತು ಲಿಂಗರಸರನ್ನು ನೇಮಿಸಿ, ಕುಮ್ಮಟವನ್ನು ಹೊಕ್ಕರೂ ಬಿಡಬೇಡಿ ಎಂಬುದಾಗಿ ಆಜ್ಞೆಮಾಡಿದನು. ಶತ್ರುಸೇನೆ ಭೂಮಿ ಜರ್ಝರಿಸುವಂತೆ ಓರುಗಲ್ಲಿನಿಂದ ಹೊರಟು, ರಾಮನ ಪಾಳಯದ ಬಳಿ ಬಂದು, ಬೀಡು ಬಿಡಲು, ರಾಮನ ಕಡೆಯವರು ಹೆದರಿ ಒಡೆಯನಿಗೆ ತಿಳಿಸಿದರು. ರಾಮನು ಅವರಿಗೆಲ್ಲ ಧೈರ್ಯ ಹೇಳಿ, ಕಾಟಣ್ಣನನ್ನು ಕರೆಸಿ, ಬಾದೂರ, ಲಿಂಗಣ್ಣ, ಸಂಗಯ್ಯರನ್ನು ಬರಮಾಡಿಕೊಂಡು, ಬಿರುದಿನ ಕಹಳೆಯನ್ನು ಹಿಡಿಸುತ್ತ ಮುನ್ನುಗ್ಗಿ ಬಂದನು. ಯುದ್ಧ ಮೊದಲಾಯಿತು. ರುದ್ರನ ಮಂದಿ ಶತ್ರುಗಳನ್ನು ನಾನಾ ಬಗೆಯಾಗಿ ಮೂದಲಿಸಿದರು. "ಬಡವ ಬಲ್ಲಿದನೊಳು ಸೆಣಸಿ ದವಡೆಯ ಪೆಟ್ಟು ಬಡಿಸಿಕೊಂಡೋಗುವ ತೆರನು" ಎಂಬುದಾಗಿ ಹೇಳಿ, ತಮ್ಮ ನಾಯಕನಾದ ಮುಮ್ಮೋಜಿ ಎಲ್ಲರನ್ನೂ

ಸದೆಬಡಿಯುವನೆಂದು ಜಂಭ ಕೊಚ್ಚಿಕೊಂಡರು. ಕತ್ತಿಗಳು ಕೂಡಿದುವು ; ಭೇರಿಗಳ ಸದ್ದಾದುವು ; ಬಾಣಗಳು ಚಿತ್ತೆಯ ಮಳೆಯಂತೆ ಹಾರಾಡಿದುವು. ಮುಮ್ಮೋಜಿಯ ಸಾಹಸವನ್ನು ಕಂಡು, ರಾಮನೂ ನಿಬ್ಬೆರಗಾಗಿ, ಲಿಂಗನನ್ನು ಕರೆದು ಆತನಾರೆಂದು ಕೇಳಿದನು. ಮುಮ್ಮೋಜಿ ರುದ್ರನ ಬಲಭುಜದಂತಿರುವ ರಣಧೀರನಾದ ಪಾಳಯಗಾರನೆಂದೂ, ಚಿಕ್ಕಪ್ರಾಯದಾತನು ಕತ್ತಿಯ ವರಸೆಯಲ್ಲಿ ಗಟ್ಟಿಗನಾದ ಕಳಿಂಗದೇಶದ ಕ್ಷತ್ರಿಯ ಕುಲದ ಪಾಂಡುರಂಗನೆಂದೂ, ಮತ್ತೊಬ್ಬನು ಹಿಂದಿನ ದಿನ ತಲೆ ತಪ್ಪಿಸಿಕೊಂಡು ಹೋಗಿದ್ದ ಲಿಂಗರಸನೆಂದೂ ಹೇಳಿದನು. ರಾಮನು ಆನೆಯಿಂದ ಇಳಿದನು. ಕುಮಾರರಿಬ್ಬರೂ ಕುದುರೆಯನ್ನೇರಿ, ಲಿಂಗ ಬಾದೂರರೊಂದಿಗೆ ಮುನ್ನುಗ್ಗಿದರು. ವೀರಸಂಗಮರಾಯನು ಮುಮ್ಮೋಜಿರಾಯನನ್ನು ಅಡ್ಡಗಟ್ಟಿದನು. ಬಾದೂರ, ದೇವಿಶೆಟ್ಟಿಯ ಲಿಂಗರು ಧೀರ ಪಾಂಡವನಿಗೆ ಎದುರಾದರು. ಕನಕಗಿರಿಯ ನಾಯಕ, ಹಮ್ಮೀರ, ಬಾಣಿಯ ಮುದ್ದ ಮುಂತಾದವರು ಮಿಕ್ಕ ಸೇನಾಸಮೂಹವನ್ನು ಸಂಹರಿಸತೊಡಗಿದರು. ಮುತ್ತಿ ಬಂದ ಸಂಗಯ್ಯನನ್ನು ಮುಮ್ಮೋಜಿ ನೂಕಿ, ಬಾಣದ ಮಳೆ ಕರೆಯಲು, ನಿತ್ರಾಣನಾದ ಸಂಗಯ್ಯನನ್ನು ಕಂಡು, ಚರರು ಓಡಿ ಬಂದು, ರಾಮನಿಗೆ ತಿಳಿಸಿದರು. ಕೂಡಲೆ ಸಹೋದರರು ಮಿಂಚಿನ ವೇಗದಿಂದ ಧಾವಿಸಿ ಬಂದರು. "ಹಸಿದಿರ್ದ ಕರಿಗಳು ರಸದಾಳೆ ಕಬ್ಬಿನ ಹಸನಾದ ಹೊಲಗದ್ದೆ ಹೊಕ್ಕು, ಅಸ(ಶ?)ನಾ ತುಂಬಲು ಮುಟ್ಟಿ ಗ್ರಾಸವನು ಕೊಂಬಂತೆ" ಕುದುರೆ, ಆನೆ, ಮೊದಲಾದುವುಗಳನ್ನು ಸವರುತ್ತ ಮುಮ್ಮೋಜಿಯನ್ನು ಕೈಸೆರೆ ಹಿಡಿದರು. ಅನಂತರ, ಪಾಂಡುರಂಗನು ಬಾದೂರ ಮತ್ತು ಲಿಂಗನನ್ನು ಜೇನ್ನೊಣದಂತೆ ಮುತ್ತಲು, ವೀರ ಸಂಗಯ್ಯ, ಕಾಟ, ಕುಮಾರ ರಾಮರು ತೆರಳಿ, ಸುತ್ತಲಿದ್ದವರನ್ನು ಒತ್ತರಿಸುತ್ತ ಪಾಂಡುರಂಗನ ಮೇಲೆ ಬಿದ್ದರು. ತರಳನಾದ ಆತನನ್ನು ರಾಮನು ಮೆಚ್ಚುತ್ತ ವಶಪಡಿಸಿಕೊಂಡನು. ಬಾಣಿಯ ಮುದ್ದನು ಲಿಂಗರಸನನ್ನು ಹಿಡಿದುಕೊಂಡು ಬಂದನು. ನಾಯಕರು ಶತ್ರುವಶರಾಗಲು ಉಳಿದ ಸೇನೆ ದಿಕ್ಕುಗೆಟ್ಟಿತು. ತಲೆತಪ್ಪಿಸಿಕೊಂಡು ಓಡಲಾರಂಭಿಸಿದರು. ಅನಂತರ, ಒಬ್ಬ ಸೈನಿಕನನ್ನು ಹಿಡಿದು ನಿಲ್ಲಿಸಿಕೊಂಡು, ರುದ್ರನಿಗೆ ಒಂದು, ಆತನ ಮಗನಿಗೆ ಎರಡು, ಎಂಬುದಾಗಿ ಹೇಳಿ, ಮೂರು ನಾಮಗಳನ್ನು ಬರೆದು ಕಳುಹಿಸಿದರು. ರಾಮನ ಮಂದಿ ಸಂತೋಷಪರವಶರಾಗಿದ್ದಳೆ, ರುದ್ರನ ಮಂದಿ ದುಃಖಸಾಗರದಲ್ಲಿ ಬಿದ್ದಿದ್ದರು. ಮಂತ್ರಿಯನ್ನು ಕುರಿತು ರುದ್ರನು ತೃಣ ಪರ್ವತವಾಯಿತೆಂದೂ, ನರಿ ಹೆಬ್ಬುಲಿಯಾಯಿತೆಂದೂ, ಕಲ್ಯಾಣದಲ್ಲಿ ಬಿಜ್ಜಳನು ಮಡಿವಳನಿಂದ ಹತನಾದಂತೆ ಆಯಿತೆಂದೂ[1] ಹೇಳಿಕೊಂಡು ಬಲು ಮರುಗಿದನು.

## ಘೋರ ಕದನ

ಗಣಪತಿರಾಯನ ಮಗನಾದ ರುದ್ರನು ಸದರಿನಲ್ಲಿ ಕುಳಿತಿರಲು, ಯುವರಾಜನಾದ ಯಪ್ಪತ್ತುರಾಯನು ಬಂದನು. ಮನ್ನೆಯರೇ ಮೊದಲಾದವರು ರಾಜನಿಗೆ ಕೈಮುಗಿದು ಕುಳಿತಿರಲು, ರಾಜನು ಜೀವಣ್ಣ ಮಂತ್ರಿಯನ್ನು ಕುರಿತು ತಮಗಾದ ಅಪಮಾನವನ್ನು ವಿವರಿಸಿದನು. ನಾಯಿ ಹೋಗಿ ಹುಲಿಯಾಯಿತೆಂದೂ, ಆನೆಯ ಮೇಲೆ ಬಿದ್ದ ಭೇರುಂಡನಂತೆ ರಾಮನು ಮಿಗಿಲಾದನೆಂದೂ, ನಾವುಗಳೆಲ್ಲ ಕೋಣನಂತೆ ಆದೆವೆಂದೂ ಕೊರಗಿದನು. ಮಂತ್ರಿ, ಲಿಂಗನನ್ನು ಕಳೆದುಕೊಂಡದ್ದಕ್ಕಿಂತ ಹೆಚ್ಚಾಗಿ, ಪ್ರತಾಪಶಾಲಿಗಳಾದ ತಮ್ಮ ಮೂವರು ನಾಯಕರು ಅವನ ಕೈಸೆರೆಯಾದದ್ದು ತಮಗೆ ತುಂಬ ಅಪಮಾನಕರವೆಂದು ತಿಳಿಸಿದನು. ಈ ವೇಳೆಗೆ ನಾಮಧಾರಿಯಾದ ಸೈನಿಕನು ನಡನಡುಗುತ್ತ ಓಡಿಬಂದು, ರಣರಂಗದ ದುಷ್ಪರಿಣಾಮವನ್ನೆಲ್ಲ ಕಣ್ಣಾರೆ ಕಂಡಂತೆ

1. ಎಲ್ಲಿ ರಾಮನು ಇವ, ಎಲ್ಲಿ ಜಗಳವು ಎಂದು ಕಲ್ಯಾಣದೊಳಗೆ ಬಿಜ್ಜಳನು ।
ಅಲ್ಲಿ ಮೈಲಿಗೆಯಿಂದ ವೀರ ಮಡಿವಳ ಕೊಂದ ಇಲ್ಲಿಗೆ ತನಗಾಯಿತೆಂದ ॥ (viii, ೨೨೫)

ವಿವರಿಸಿದನು. "ಉರಿಕೊಂಡ ಜೇನಿನ ಹುಳಕಿಂತ ಕಡೆಯಾಗಿ ಯಮುನ ಕಂಡರು ತುರಗ ಮಂದಿ" ಎಂದು ಹೇಳಿದನು. ಅರಸನು ಅವನ ನಾಮವನ್ನು ನೋಡಿ "ಹರನ ವ್ರತದವ ನೀನು ಹರಿಯ ನಾಮವನಿಟ್ಟ ಪರಿಯೇನು ?" ಎಂದು ಕೇಳಲು, ಆತನು "ಪರಬಲಾಂತಕ ಕೇಳು, ಧರಿಸಿದ ರಣರಾಮ ನಿಮಗೊಂದ ನಿಮ್ಮಗೆರಡು" ಎಂದು ನಿಜವಾದ ಸಂಗತಿಯನ್ನೇ ತಿಳಿಸಿದನು. ಆ ಮಾತನ್ನು ಕೇಳಿ ರುದ್ರನ ಸಹನೆ ಮೀರಿತು. "ಹುಲಿ ಬಡವನಾದರೆ ನರಿ ಬಂದು ನಂಟತ್ವ ಕೊಡು ಹೆಣ್ಣನೆಂಬ ತೆರ ಬಂತು" ಎಂದು ಕಿಡಿಕಿಡಿಯಾಗಿ, ಸಮಸ್ತ ಸೈನ್ಯವೂ ಸೇರುವಂತೆ ಅಪ್ಪಣೆ ಮಾಡಿದನು. ಜೀವಣ್ಣ ಮಂತ್ರಿ ರಾಯನಿಗೆ ಸಮಾಧಾನ ಹೇಳಿ, "ನಾವೆಲ್ಲ ಇರಲು ತಾವು ಯುದ್ಧಕ್ಕೆ ತೆರಳುವುದೆ ? ತಂತ್ರ ಯುಕ್ತಿಗಳನ್ನು ಮಾಡಿ ನೋಡೋಣ" ಎಂದನು. ರುದ್ರನಾದರೋ "ತಾನು ಮಾಡದ ಕಾರ್ಯ ಕಾ(ತಾ ?)ನು ಮಾಡದೆ ಮಳೆಯು ಆಗುವುದೆ ಧರೆಯೊಳಗೆ ಹೀನಾಯ ತಮಗೆ....ಎರಡು ಜಗಳ ಮುರಿಯೆ ಭೂಮಿಯಿರಲು ಅಪಕೀರ್ತಿ" ಎಂದು ಪ್ರತ್ಯುತ್ತರವಿತ್ತನು. ಆಗ ಅಲ್ಲಿಯೇ ಇದ್ದ ಯಪ್ಪತ್ತುರಾಯನು ತನಗೆ ವೀಳ್ಯ ಕೊಡಬೇಕೆಂದು ಬೇಡಿದನು. "ನಾಮವಿಟ್ಟನ ತಲೆಯ ಚೆಂಡಾಡದಿರ್ದ[ಡೆ] ನಿಮ್ಮ ಕುಮಾರ ಎನಬಹುದೆ ರಣಹೇಡಿ[ಯ]" ಎಂದು ಕೆಚ್ಚಿನಿಂದ ನುಡಿದನು. ರಾಜನಿಗೆ ಮಗನು ತೀರ ಚಿಕ್ಕವನೆಂದು ಸಂಕಟ. "ಅಪ್ಪ, ಹಾನಿಯಾಗಲು ಮೂಗು ಒಮ್ಮೆ ಹೋದಂತೆ" ಎಂದನು. ಯುವರಾಜನು ಆತ್ಮ ಪ್ರಶಂಸೆಯನ್ನು ಮಾಡಿಕೊಳ್ಳಲು ಹಿಂತೆಗೆದು, ದೈನ್ಯದಿಂದ "ಹೇಳಿಕೊಂಬರೆ ರಾಯ ಕುನ್ನಿಯವನೆ ನಾನು ? ಬಾಲನ ಸಾಹಸವ ನೀವು ಕಾಣದಾ[ದಿ]ರೆ ? ತನ್ನ (ನನ್ನ ?) ವಾಹನಕೆ ನವಕ್ಷೋಣಿ ತಾಳಲಾಬು(ಗು ?)ವುದೆ ರಾಜೇಂದ್ರ ! ಹುಲಿಯ ಗರ್ಭದಿ ಹುಲ್ಲೆ ಮರಿ ಮುನ್ನ ಜನಿಸುವುದೆ ? ಖಗರಾಜಗೆಣೆಯೆ ಕಾಗೆಗಳು ? ಪಗಲೊಡೆಯ ಬರುವಾಗ ತಿಮಿರ ನಿಲ್ಲುವುದುಂಟೆ ? ಮಗನ ತೇಜಿಗೆ ರಾಮನಿದಿರೆ ?" ಎಂದು ವಿನಂತಿ ಮಾಡಿಕೊಂಡನು. ಮಗನ ಛಲದ ನುಡಿಗಳಿಗೆ ತಲೆದೂಗಿ, ರಾಜನು ಸೇನೆಯನ್ನು ಅಣಿಮಾಡುವಂತೆ ಅಪ್ಪಣೆ ಮಾಡಿದನು.

ಆ ಆಜ್ಞೆಯನ್ನು ಕೇಳಿ ಅನೇಕರು ತಮಗೆ ಕೇಡುಗಾಲ ಬಂದಿತೆಂದು ಗೊಣಗಿದರು. ಬೊಲ್ಲನನ್ನೂ ಕಳೆದುಕೊಳ್ಳುವ ಕಾಲ ಸನ್ನಿಹಿತವಾಗುತ್ತಿದೆಯೆಂದು ಭಾವಿಸಿದರು. ಕೆಲವು ಮಂದಿ ಶೂರರೇನೋ ಹಿಗ್ಗಿದರು. ಲಂಬೋಜಿಖಾನರು ತಮ್ಮ ಪ್ರತಾಪವನ್ನು ತೋರಲು ಅನುವಾದರು. ರುದ್ರನು ಮಲ್ಲಯ್ಯ ಸಾಣಿಗೆ ಬೊಲ್ಲನನ್ನು ಕರೆತರುವಂತೆ ಹೇಳಲು, ಅದನ್ನು ನಾನಾ ಬಗೆಯಾಗಿ ಸಿಂಗರಿಸಿ ಕರೆತಂದರು. ಆ ಕುದುರೆಯನ್ನು ರಾಜನು ಪೂಜಿಸುತ್ತಿರಲು, ಅದರ ಹೊಕ್ಕಳ ಗಂಟೆ ಕೆಳಗೆ ಬಿದ್ದು ಹದಿನಾರು ಚೂರಾಯಿತು. ಅದನ್ನು ಕಂಡು ರಾಜನ ಮುಖ ಬಾಡಲು, ಮಂತ್ರಿ ಅಪಶಕುನವಾಯಿತೆಂದು ಬಗೆದು "ಮ(ಮು ?)ರಿದೆರಡು ಜಗಳವು ಗೆಲವುದೋರದ ಮೇಲೆ ಮಗನು ಹೋಗುವುದು ಕನಿ(ಡು ?)ಕಷ್ಟ. ಕಳುಹು ಇಂದವಗೆ ಸರ್ವ ಮನ್ನಣೆ ಮಾಡಿ, ಹೊಡೆವ ನಾವಾಗೊಂದು ದಿನ ಬರಲು" ಎಂದು ಸಲಹೆ ನೀಡಿದನು. ಯಪ್ಪತ್ತುರಾಯನಿಗೆ ಆ ಮಾತು ಹಿಡಿಸಲಿಲ್ಲ. "ಮೂಳ ರಾಮನ ಮಾತ ಆಡಬೇಡವೊ ಮಂತ್ರಿ ತಾಳಿಗೆ ಹಿರಿಯನೆಂ(ದೆಂ ?)ದೆನುತ" ಎಂದು ಕುಪಿತನಾದನು. ಮಗನ ವರ್ತನೆ ತಂದೆಗೆ ಒಪ್ಪಿಗೆಯಾಗಲಿಲ್ಲ. "ಮಂತ್ರಿ ಆಡುವ ಮಾತು ಅಸತ್ಯವಲ್ಲವೊ ಪುತ್ರ, ಇಂತು ಮಾಡುವರೆ ಕೇಣವನು ? ಸಂತೈಸು ಕೋಪವ; ಸರ್ವ ರಾಯರು ಹಿಂದೆ ಪಂಥವನಾಡಿ ಕೆಟ್ಟವರು" ಎಂದು ಸಮಾಧಾನ ಹೇಳಿ. ಶಾಸ್ತ್ರಿಗಳನ್ನು ಕರೆಸಿ, ಶಕುನವನ್ನು ಕೇಳಿ. ತಿಳಿಯೋಣವೆಂದನು. ಆ ಮೇರೆಗೆ ಜೋಯಿಸರೂ ಬಂದರು. ಕುದುರೆಯನ್ನು ಮತ್ತೆ ಪೂಜಿಸಿ, ರಾಯನ ಮಡದಿ ಸೋಮಲಾಂಬಿಕೆ ಆರತಿ ಎತ್ತಿದಳು. "ಬಾಲಗೆ ಯಶವಾಗಿ ನಿ(ನ ?)ಮ್ಮ ಕಾರ್ಯ ಗೆಲಿಸುವುದೆಂದು ಪಾದಕ್ಕೆರಗಿದಳು ತುರಗವನು." ಅನಂತರ, ಯಪ್ಪತ್ತುರಾಯನು ಕುದುರೆಯನ್ನೇರುವುದೇ ತಡ, ವೀರಾಧಿವೀರರು ಅವನನ್ನು ಹಿಂಬಾಲಿಸಿದರು. ಎಲ್ಲರೂ ಕೂಡಿ ಮಹರ್ನವಮಿಯ ಬಯಲಿಗೆ ಬಂದು, ಜೇರಾಪುರದ ಬಳಿ ಬೀಡುಬಿಟ್ಟರು. ರಾಮನ ಸೈನಿಕರು ಆ ಅಪಾರವಾದ ಸೇನೆಯನ್ನು ಕಂಡು, ಭಯಗ್ರಸ್ತರಾಗಿ ಓಡಿಬಂದು ತಮ್ಮ ಒಡೆಯನಿಗೆ

ತಿಳಿಸಿದರು. ರಾಮನು " ಭಯ ಬೇಡಿ, ಬಂದುದ ಉಣಲೊಲ್ಲೆ ಎಂದರೆ ಹರನು ಮೆಚ್ಚುವನೆ ಸ್ವರ್ಗದಲಿ " ಎಂದು ಧೈರ್ಯ ಹೇಳಿ, ದೇವರ ದಯೆಯಿಂದ ತಾನು ಗೆಲ್ಲುವೆನೆಂದು ಹೇಳಿದನು. ಈ ರೀತಿಯಾಗಿ ರಾಮನು ಅಭಯವಿತ್ತು, ಸಿಂಗರಿಸಿಕೊಂಡು ಕುದುರೆಯನ್ನೇರಲು, ಲಿಂಗ, ಕಾಟಣ್ಣ ಮತ್ತು ಇತರ ಸೇನೆಯವರೂ ಅಣಿಯಾದರು. ಅತ್ತ, ಯಪ್ಪತ್ತುರಾಯನು ತನ್ನವರನ್ನೆಲ್ಲ ಕರೆದು, ಯುದ್ಧಕ್ಕೆ ವೀಳೆಯವಿತ್ತು, ಕಹಳೆಯನ್ನು ಊದಿಸಿದನು. ಯುದ್ಧ ಮೊದಲಾಗಲು, ಬತ್ತಿ ಬಾಣಗಳ ಹೊಗೆಯೆದ್ದು ಹಗಲು ಕಾವಳ ಕವಿದಂತಾಯಿತು. ಸೂರ್ಯನು ಮುಳುಗಿದಂತೆ ಪ್ರಭೆ ಮಸುಕಾಯಿತು. ಭೂಮಿಯೇ ಜರ್ಝರಿಸಿತು. ರಾಮ, ಕಾಟ, ವೀರಸಂಗಮ, ಲಿಂಗಣ್ಣ ಮೊದಲಾದವರು ಭೀಷಣವಾದ ಕಾಳಗವನ್ನು ನಿರೀಕ್ಷಿಸಿದರು. ಲಿಂಗನು ರಾಮನನ್ನು ಕುರಿತು, ಯಪ್ಪತ್ತುರಾಯನು ತನ್ನ ಭಯಂಕರವಾದ ಕುದುರೆಯನ್ನು ಏರಿ ಬಂದಿದ್ದಾನೆಂದೂ, ಅದು " ಹರಿಯ ವಾಹನದಂತೆ ಮೆಲ್ಲ [ಗ]ಮನದಿ ಬರುವುದು, ನರರ ತಿಂಬುವುದು ಹುಲಿಯಂತೆ, ಗಿರಿಜೆಯ ರಮಣನ ವರದಿಂದ ಧರೆಗಿಳಿದು, ನಮಗೆ ಸೇರುವುದ ನಾ ಕಾಣೆ " ಎಂದೂ ಹೇಳಿ, ಎಚ್ಚರದಿಂದ ಮುಂದಿನ ಕಾರ್ಯವನ್ನು ಮಾಡಬೇಕೆಂದನು. ರಾಮನು ಎಂಥೆಂಥ ಅದ್ಭುತ ಪರಾಕ್ರಮಿಗಳೇ ಹೇಗೆ ಆದರೆಂಬುದನ್ನು ಉದಾಹರಿಸಿ, " ತುರಗದ ಭಯಭೀತಿ ಎನಗೆ ಪೇಳಲಿ ಬೇಡ, ಮೊದಲವಗೆ ಹೇಗೆ ಬಂತಣ್ಣ, ಜನಿಸಿತೆ ಇವನೊಳಗೆ, ದ್ವೀಪಾಂತ್ರದಿಂದಲಿ ಬಂತೆ, ಹರನೊಲುಮೆಯಿಂದ ಸೇರಿದುದೆ ?" ಎಂದು ಕೇಳಿದನು. ಲಿಂಗನು " ಶಂಭುಲೋಕಕ್ಕೆ ಧಾಳಿಯಿಡಲು ಹೊರಟಂಥ ಚೇರಾಮರಾಯನೆಂಬುವನ ಕುದುರೆಯ ಅಂಶವೇ ಮುಂಗುಲಿ ರಾಯನ ಲಾಯದಲ್ಲಿ ರೂಪು ತಾಳಲು, ಅದರ ಬಗ್ಗೆ ಜೋಯಿಸರು ಅಪಶಕುನ ನುಡಿಯಲು ಆತನು ಸುರುತಾಳನಿಗೆ ಒಪ್ಪಿಸಿದನು. ಆತನ ಮೂಲಕ ರುದ್ರನು ಕೊಂಡು ತಂದನು. ಇದು ಸಕಾಲದಲ್ಲಿ ಇತರರಿಗೆ ಒಲಿವಂಥದು ಎಂಬುದಾಗಿ ಜೋಯಿಸರ ಸಿದ್ಧಾಂತ " ಎಂದು ಕುದುರೆಯ ವೃತ್ತಾಂತವನ್ನು ತಿಳಿಸಿದನು. " ಈಶ್ವರನ ಕೃಪೆಯಿಂದ ಜನಿಸಿರುವ ಅದು ಇತರರಿಗೆ ಒಲಿಯುವುದು ಸಹಜವೇ ಸರಿ " ಎಂದು ರಾಮನು ದನಿಗೂಡಿಸಿದನು. ರಾಮ, ಕಾಟಣ್ಣ, ಭಾವಸಂಗಯ್ಯ, ಮೊದಲಾದವರು ತಮ್ಮ ತಮ್ಮ ವಾಹನಗಳನ್ನು ಏರಿದರು. ಬಾಣೆಯ ಮುದ್ದ, ಲಿಂಗ ಮುಂತಾದವರು ಯುದ್ಧಸನ್ನದ್ಧರಾದರು. ದೇವಾನುದೇವತೆಗಳೂ, ದಿಕ್ಪಾಲಕರೂ, ನಾಗಕನ್ಯೆಯರೂ ನೋಡಲು ಬಂದರು. ರುದ್ರನ ಕೇಡನ್ನು ನೋಡಲೆಂದು ಸೂರ್ಯನೂ ಗಗನ ಮಧ್ಯಕ್ಕೆ ಬಂದನು. ಯುದ್ಧ ಮೊದಲಾಯಿತು. ಉಭಯ ಪಕ್ಷಗಳ ಸೈನಿಕರು ಪರಸ್ಪರ ಮೂದಲಿಸಿ ಮೇಲೆ ಬಿದ್ದರು. ಬಾದುರಖಾನ, ದೇವಿಶೆಟ್ಟಿಯ ಲಿಂಗ, ವೀರಸಂಗಮ, ವಿರುಪಣ್ಣ ಮೊದಲಾದವರ ಮುನ್ನುಗ್ಗಿದರು. ಬಾಣೆಯ ಮುದ್ದ ಹುಚ್ಚು ಕೋಣದಂತೆ ಕೆರಳಿ ಕೊಲ್ಲತೊಡಗಿದನು. ಮೇಲೇರಿ ಬರುವ ಅವರನ್ನು ಕಂಡು, ರುದ್ರನ ಕಡೆಯ ರಂಗನಾಯಕ, ತಿಮ್ಮರಸು ಮುಂತಾದವರು ಮುತ್ತಿದರು. ಲಿಂಗ ಮೊದಲಾದವರು ಮಧ್ಯೆ ಸಿಕ್ಕಿಬಿದ್ದರು. ಅವರ ಪಾಡನ್ನು ಕಂಡು ಚರರು ಓಡಿ ಬಂದು ರಾಮನಿಗೆ ತಿಳಿಸಿದರು. ಕೂಡಲೆ ಕಾಟಣ್ಣನನ್ನು ಕರೆದುಕೊಂಡು ರಾಮನು ಆ ಎಡೆಗೆ ಬಂದನು. ಮುನ್ನುಗ್ಗಿ ಬರುತ್ತಿದ್ದವರನ್ನು ತಿಮ್ಮನಾಯಕನು ಎದುರಿಸಿದನು. ಆದರೆ ಎಲ್ಲರನ್ನೂ ಸಂಹರಿಸುತ್ತ ರಾಮನು ಬರುತ್ತಿರಲು, ತಿಮ್ಮರಸನು ನುಸುಳಿಕೊಂಡು ಕಣ್ಮರೆಯಾದನು. ಲಿಂಗ, ಬಾದೂರ, ಬಾಣೆಯ ಮುದ್ದರ ಕೈ ಮೇಲಾಯಿತು. ಈ ವೇಳೆಗೆ ಯಪ್ಪತ್ತುರಾಯನು ತನ್ನ ತೇಜಿಯನ್ನೇರಿ ಅಲ್ಲಿಗೆ ಬಂದನು. ಅದನ್ನು ಕಂಡು ಜನರು ಬೆದರಿ ಚೆದರುತ್ತಿರಲು, ಕಾಟ ಮತ್ತು ಸಂಗಯ್ಯ ಎದುರಾಗಿ ನಿಂತು ಯುದ್ಧಮಾಡತೊಡಗಿದರು. ಯಪ್ಪತ್ತುರಾಯನ ಭಾವನಾದ ಚಂದ್ರಾಂಗನು ಬಂದು ಕಾಟನನ್ನು ಮೂದಲಿಸಿ ಪ್ರತಿಭಟಿಸಿದನು. ಆ ಸಮಯಕ್ಕೆ ಸರಿಯಾಗಿ ಲಿಂಗನು ಅವನ ತಲೆಯನ್ನೇ ಹಾರಿಸಿದನು. ಯಪ್ಪತ್ತುರಾಯನ ಕೋಪ ಕೆಂಡದಂತೆ ಕೆರಳಿತು. ಇತರರು ಬೊಲ್ಲನ ರಭಸವನ್ನು ತಡೆಯಲಾರದೆ ಹಿಮ್ಮೆಟ್ಟುತ್ತಿರಲು, ಕುಮಾರರಾಮನು " ನಿಲ್ಲಿ, ಓಡುವುದೇಕೆ, ಹುಲ್ಲುರಾಯನ ಮಗನ ತೇಜಿ ಸಹಜವಾಗಿ ಪಿಡಿವೆನು " ಎಂದು ಕೂಗುತ್ತ ಮುಂದೆ ಮುಂದೆ ಬಂದನು.

ಕುಮಾರರಾಮನಿಗೂ ಯಪ್ಪತ್ತುರಾಯನಿಗೂ ಕದನವು ಸಂಘಟಿಸಿತು. ಯಪ್ಪತ್ತುರಾಯನು ತನ್ನ ತೇಜಿಯ ಬಲದಿಂದ ಪದೇಪದೇ ಗಗನಕ್ಕೆ ಹಾರುತ್ತಿದ್ದುದನ್ನು ಕಂಡು ರಾಮನು ಹಂಗಿಸಿದನು. ಮರ್ಮಭೇದಕವಾದ ಮಾತುಗಳನ್ನಾಡಿದನು. ಯಪ್ಪತ್ತುರಾಯನಿಗೂ ಸಹನೆ ಮೀರಿತು. ಗಗನಗಾಮಿಯಾಗಿದ್ದ ತುರಗವನ್ನು ನೆಲಕ್ಕೆ ಇಳಿಸಿದನು. ಅನಂತರ, ಪರಸ್ಪರ ಬಾಣಗಳ ಮೇಲಾಟವೇ ನಡೆಯಿತು. ಯಾರಿಗೆ ಯಾರೂ ಕಡಮೆಯಿಲ್ಲದಂತೆ ಕೆಚ್ಚಿನಿಂದ ಹೋರಾಡಿದರು. ತಮತಮಗೆ ಆದ ಗಾಯಗಳನ್ನು ಲೆಕ್ಕಿಸದೆ ಕಾದಾಡಿದರು. ಯಪ್ಪತ್ತುರಾಯನು ಕೆರಳಿ "ತೀರಿಸುವೆ ಇವನ ಲಿಪಿಯನು ಅಕ್ಕಿ(ತಿ?) ಸಾಹ[ಸ]ದೊಳು ಧನುವ ಸೇದಿ ಬಿಡಲು, ತೇಜಿ ಕಚ್ಚಿತು ಭೂಮಿಗೆ ಹುದುಗಿ." ಆದರೂ ಯಪ್ಪತ್ತುರಾಯನು ಧೃತಿಗೆಡದೆ ಹೋರುತ್ತಲೇ ಇದ್ದನು. ರುದ್ರನ ಮಗನ ಮೈಗಾವಲವರು ಕಡೆಯತನಕ ಹೆಣಗಿ ಒರಗುತ್ತಿದ್ದರು. ರಾಮನ ಮಂದಿಯವರ ಕೈ ಮೇಲಾಯಿತು. ಯಪ್ಪತ್ತುರಾಯನು ಚಂದ್ರಾಯುಧವನ್ನು ಹಿಡಿದು ನಿಂತನು. ಸೈನಿಕರು ಸಾಯುತ್ತಿರಲು, ಸಂಗಯ್ಯ, ಬಾದೂರರು, ಆತನನ್ನು ಸಂಹರಿಸಲು ರಾಮನನ್ನು ಅಪ್ಪಣೆ ಬೇಡಿದರು. ರಾಮನು ಒಪ್ಪಲಿಲ್ಲ. ಅದಕ್ಕೆ ಬದಲಾಗಿ, ಯುವರಾಜನನ್ನು ಮೆಚ್ಚಿ "ರಣವಿಜಯನಹುದಯ್ಯ ನವಖಂಡರಾಯರ ಒಳಗೆ, ಬಡವರಿಗೆ ಮುನ್ನ ಮುರಿವವನೆ ಬಿಡು ನಿನ್ನ ಛಲವ್ಯಾಕೆ, ಹೆಡತಲೆ ಮೃತ್ಯಾಗಿ ಹಿಡಿಯಿತು ತೇಜಿ ನೆಲ ಚಂಡಿ" ಎಂದು ನುಡಿದು, ಅಭಯವಿತ್ತು ಯುದ್ಧ ನಿಲ್ಲಿಸಿದನು. ಯಪ್ಪತ್ತುರಾಯನು ನಾಚಿಕೆಯಿಂದ ತಲೆ ತಗ್ಗಿಸಲು, ಸಮಾಧಾನ ಹೇಳಿ, ಅಚಲಿತವಾಗಿ ನಿಂತಿದ್ದ ಕುದುರೆಯಿಂದ ಕೆಳಕ್ಕಿಳಿಸಿ, ಮೈ ತೊಳೆಸಿ, ಉತ್ತಮ ದೇವಾಂಗವನ್ನು ಹೊದಿಸಿ, ಭಾವ ಸಂಗಯ್ಯ ಮತ್ತು ಬಾದೂರಖಾನರ ಮೈಗಾವಲಿನಲ್ಲಿಯೇ ತನ್ನ ಪಾಳೆಯಕ್ಕೆ ಕಳುಹಿಸಿಕೊಟ್ಟನು. ಅನಂತರ, ರಾಮನು ಆ ಕುದುರೆಯನ್ನು ಪೂಜಿಸಿ ಏರಲು, ಅದು "ಒಲಿವ ಸಾರಥಿ" ಯನ್ನು ಕಂಡಂತೆ ಹಿಗ್ಗಿ ಗಗನದೆಡೆಗೆ ಚಿಮ್ಮಿತು.

## ರುದ್ರನ ಪರಾಭವ

ಜೀವಸಹಿತ ಉಳಿದ ಸೈನಿಕರು ಯುದ್ಧ ನಿಂತಿದ್ದಕ್ಕಾಗಿ ಸಂತೋಷಪಡುತ್ತ, ತಲೆತಪ್ಪಿಸಿಕೊಂಡು ಊರಿಗೆ ಹಿಂತಿರುಗಿದರು. ಸತ್ತವರನ್ನು ಕಂಡು ರಾಮನೂ ನೊಂದುಕೊಂಡನು. ಪಲಾಯನ ಮಾಡಿ ಬಂದ ರುದ್ರನ ಸೈನಿಕರು ರಾಜನಿಗೆ ಮುಖ ತೋರಲು ಹಿಂತೆಗೆದರು. ಅವರಲ್ಲಿ ಒಬ್ಬನು ರಾಜನನ್ನು ಕಂಡು, ಆದ ನಷ್ಟವನ್ನೆಲ್ಲ ನಿರೂಪಿಸಿ "ದಂಡೆಲ್ಲ ಮುಳುಗಿದರೆ ಮತ್ತೊಂದ ನೋಡಲಿಬಹುದು, ಕಂದ ಸೇರಿದ ಕೈಸೆರೆಯು, ಸಿಂಗಳ ದ್ವೀಪದ ರಂಗನಾಯಕನಳಿದನು, ತಿಮ್ಮರಸು ಸೆರೆ ಹೋದ ಭೂಪ" ಎಂದು ವಿಜ್ಞಾಪಿಸಿದನು. ಬೊಲ್ಲನು ಶತ್ರುವಶವಾಯಿತೆಂದು ಕೇಳಿ ರಾಯನು ತಲ್ಲಣಿಸಿದನು; ದುಃಖಿಸಿದನು. "ಜೀವದೊಳ್ನುಡಿಯಿಲ್ಲ, ಹಾರಿತು ಪರಮಾತ್ಮ ಭೂಮಿ ಪಾತಾಳಕ್ಕಿಳಿಯೆ." ಈ ರೀತಿಯಾಗಿ ಮಹಾರಾಜನು ಮನನೊಂದಿರಲು, ಊರಿನ ಹೆಣ್ಣುಮಕ್ಕಳ ಸಂಕಟ ಹೇಳಲಳವಲ್ಲ. ಅವರೆಲ್ಲ ಬಗೆಬಗೆಯಾಗಿ ಪ್ರಲಾಪಿಸಿದರು. ರಾಜನು "ತೈಲವು ಸರಿಯದ ಜ್ಯೋತಿಯಂದದಿ" ಬಂದು ಸದರಿನಲ್ಲಿ (ಓಲಗದಲ್ಲಿ) ಕುಳಿತನು. ಮಂತ್ರಿ ಜೀವಣ್ಣನನ್ನು ಬರಮಾಡಿಕೊಂಡು, ತನಗೆ ಬಂದ ಅಪದೆಸೆಯನ್ನು ಹೇಳಿಕೊಂಡನು. ಅನಂತರ, ರಾಮನು ಏನು ಬೇಡಿದರೂ ಅದನ್ನು ಕೊಟ್ಟು ಕುಮಾರನನ್ನು ಕರೆತರುವಂತೆ ಆಜ್ಞಾಪಿಸಿದನು. ಜೀವಣ್ಣನು ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ರಾಮನ ಪಾಳಯಕ್ಕೆ ಬಂದನು. ರಾಮನ ಎಡಭಾಗದಲ್ಲಿ ಯಪ್ಪತ್ತುರಾಯನೂ, ಬಲಭಾಗದಲ್ಲಿ ಕಾಟಣ್ಣ ತಿಮ್ಮರಸರೂ ಕುಳಿತಿದ್ದರು. ಮಂತ್ರಿ ಬಂದು ರಾಮನನ್ನು ಕೊಂಡಾಡಿ, ಯುವರಾಜನನ್ನು ಒಪ್ಪಿಸಬೇಕೆಂದು ಬೇಡಿಕೊಂಡನು. ರಾಮನು ಮೊದಮೊದಲು ಕಟುವಾಗಿ ಆಕ್ಷೇಪಿಸಿ, ಕೈಗೆ ಸಿಕ್ಕಿದ ದೊರೆಮಗನನ್ನು ಹಾಗೆಯೇ ಬಿಡುವುದುಂಟೆ ಎಂದು ಹಂಗಿಸಿ, ತನಗೆ ಸಲ್ಲಬೇಕಾದ ಹಿಂದಿನ ಬಾಕಿಯನ್ನು ತೆತ್ತು,

ರಾಜೇಂದ್ರನೇ ಬಂದು ತನ್ನ ಕಂದನನ್ನು ಬೇಡಿದರೆ ಒಪ್ಪಿಸುವುದಾಗಿ ಹೇಳಿದನು. ಒಂದು ವೇಳೆ ಹಾಗಾಗ ದಿದ್ದಲ್ಲಿ ಊರಿಗೆ ಮುತ್ತಿಗೆ ಹಾಕುತ್ತೇನೆ ಎಂಬುದಾಗಿ ಹೇಳಲೂ ಹಿಂಜರಿಯಲಿಲ್ಲ. ಮಂತ್ರಿ ರಾಮನಿಂದ ಅಭಯವನ್ನು ಪಡೆದು, ರಾಜನನ್ನು ಕರೆತರುವುದಾಗಿ ಹೇಳಿ ಊರಿಗೆ ಹಿಂತಿರುಗಿದನು. ರುದ್ರನಿಗೆ ಎಲ್ಲ ಸಮಾ ಚಾರವನ್ನೂ ವಿವರಿಸಿದನು. ಮಹಾರಾಣಿಯೂ ಸಹ ಮಂತ್ರಿಯ ಬಳಿಗೆ ಬಂದು ಮಗನಿಗಾಗಿ ಪರಿತಪಿಸಿದಳು. ಮಂತ್ರಿಯ ಮಾತಿಗೆ ರಾಜನು ಮೊದಮೊದಲು ಹಿಂತೆಗೆದರೂ, ಕಡೆಗೆ ನಿರ್ವಾಹವಿಲ್ಲದೆ, ಉಡುಗೊರೆ ಮೊದ ಲಾದುವನ್ನು ಹೇರಿಸಿಕೊಂಡು ಪಲ್ಲಕ್ಕಿಯನ್ನೇರಿ ರಾಮನ ಬಳಿಗೆ ಬಂದನು. ಇಬ್ಬರಿಗೂ ಕುಶಲ ಸಂಭಾಷಣೆ ಗಳಾದುವು. ಅನಂತರ, ರಾಜನು ತನ್ನ ಮಗನನ್ನು ದಯಪಾಲಿಸೆಂದು ಬೇಡಲು, ರಾಮನು "ತಡೆದೇನು ನಾ ಕಯ್ಯ ತಾಯಿಗೊಬ್ಬನು ಎಂದು, ಕಡಿದನು ಕೊಲೆಯು ಬಹು ಬಲವ" ಎಂದು ಹೇಳಿ, ತಾನು ಕೈಸೆರೆ ಹಿಡಿದಿದ್ದ ತಿಮ್ಮರಸು, ಮುಮ್ಮೋಜಿರಾಯ, ಪಾಂಡುರಂಗಯ್ಯ, ಲಿಂಗರಸರನ್ನು ಕೊಟ್ಟು ರುದ್ರನನ್ನು ಸನ್ಮಾನಿಸಿದನು. ಮಹಾರಾಜನು ತನ್ನ ಮಗನೇ ಮೊದಲಾದವರನ್ನು ಪಡೆದು, ಕುದುರೆಯನ್ನೂ ಲಿಂಗನನ್ನೂ ಒಪ್ಪಿಸಬೇಕೆಂಮ ಕೇಳಿಕೊಂಡನು. ರಾಮನು "ಲಿಂಗ ತೇಜಿಯ ಸುದ್ದಿ ಇಂದಿಗೆ ಮರೆ ರಾಯ ಬಂದುದೇತಕೆ ನಾ ನಿಮ್ಮ ಪುರಕೆ" ಎಂದು ಹೇಳಿ, ತನಗೂ ತನ್ನ ತಂದೆಗೂ ಆದ ಪಂಥವನ್ನು ತಿಳಿಸಿದನು. ಅನಂತರ, ರುದ್ರನು ತನ್ನ ಊರಿಗೆ ತೆರಳಿದನು. ರಾಮನು ಗುಂಡುಬ್ರಹ್ಮಯ್ಯನ ದೇವಾಲಯಕ್ಕೆ ಬಂದು ಹಬ್ಬವನ್ನು ಮಾಡಿ, ಅಲ್ಲಿಂದ ಪ್ರಯಾಣ ಹೊರಟು ಹಂಪೆಯ ಬಳಿ ಭಾಗೀರಥಿ ಎಂಬ ಹಳ್ಳಿಯನ್ನು ಹಾದು, ಗುತ್ತಿಯ ಚಾಮಯ್ಯನನ್ನು ಕಂಡು, ಬಳ್ಳಾರಿಗೆ ಬಂದನು. ಉದಯ ಕಾಲದಲ್ಲಿದ್ದು ಆನೆಗೊಂದಿಗೆ ಬಂದು ಇಳಿದನು. ರಾಮನ ಆಗಮನವನ್ನು ಕೇಳಿ, ಕಂಪಿಲನು ಬೈಚಪ್ಪನೊಡನೆ ಮಗನನ್ನು ಭೇಟಿಯಾದನು. ಮಗನು ತಂದಿದ್ದ ಕುದುರೆಯನ್ನೂ ಕಪ್ಪಕಾಣಿಕೆಗಳನ್ನೂ ಕಂಡು ತಲೆದೂಗಿದನು. ದೇವಿಶೆಟ್ಟಿಯ ಲಿಂಗನ ಪರಿಚಯವೂ ಆಯಿತು. ರಾಮನು ತನ್ನ ಸಂಗಡ ಬಂದಿದ್ದ ಮನ್ನೆಯರಿಗೆಲ್ಲ ಸನ್ಮಾನ ಮಾಡಿ, ಅವರವರ ಊರಿಗೆ ಬೀಳ್ಕೊಟ್ಟನು.

## ಕಂಪಿಲನ ಬೇಟೆ ಮತ್ತು ಕುಮಾರರಾಮನ ಚೆಂಡಾಟ

ಒಂದು ದಿನ ಕಂಪಿಲನು ರತ್ನಾಜಿಯ ಬಳಿಗೆ ಬಂದು, ಸರಸ ಸಲ್ಲಾಪಗಳ ಮಧ್ಯೆ, ತಾನು ಬೇಟೆಯಾಡಿ ಬಹಳ ದಿನಗಳಾದುವೆಂದೂ, ಹೊಸಮಲೆಗೆ ಹೋಗಿ ಬರುವೆನೆಂದೂ ತಿಳಿಸಿದನು. ರಾಜನ ಮಾತನ್ನು ಕೇಳಿ, ರತ್ನಿ ಬಹಳ ಬಿನ್ನಾಣದ ನುಡಿಗಳನ್ನಾಡಿದಳು. ಕಣ್ಣೀರನ್ನು ಸುರಿಸುತ್ತ "ಕಾಣದೆ ಇರಲಾರೆ ಕಾಂತ ನಿನ್ನರ ಗಳಿಗೆ ಹೋಗಿ ಓಲಗದಿ ಕುಳ್ಳಿರಲು" ಎಂಬುದಾಗಿ ಬಗೆಬಗೆಯಾಗಿ ಮರುಗಲು ಆರಂಭಿಸಿದಳು. "ತರಳೆ ಯೋರ್ವಳ ಬಿಟ್ಟು ರಮಣ, ನೀ ಬರುವನಕ ಉಳಿವುದೆ ಎನ್ನಯ ಪ್ರಾಣ ನಯನದೃಷ್ಟಿಯ ತೆಗೆದು ಪರರ ನೋಡದ ಸತಿಯನಗಲಿ ಹೋಗಲು ನಿಮಗೆಣೆ" ಎಂದಳು. ಕಂಪಿಲನು ಕೇವಲ ಎರಡು ರಾತ್ರಿಗಳು ಮಾತ್ರ ಸೈರಿಸಬೇಕೆಂದೂ, ಖಂಡಿತವಾಗಿಯೂ ತಡೆಮಾಡುವುದಿಲ್ಲವೆಂದೂ ಆಕೆಯನ್ನು ಒಪ್ಪಿಸಿದನು. ಅನಂತರ ಸದರಿಗೆ ಬಂದನು. ಮಂತ್ರಿ ಮೊದಲಾದ ಮನ್ನೆಯರೆಲ್ಲ ಸಭೆ ಸೇರಿದರು. ರಾಜನು ಬೈಚಪ್ಪನನ್ನು ಕರೆದು ಬೇಟೆಯಾಡಿ ಬಹಳ ದಿನಗಳಾದುವೆಂದೂ, ಹೊಸಮಲೆಗೆ ಎರಡು ದಿನಗಳಮಟ್ಟಿಗೆ ಹೋಗಿ ಬರೋಣವೆಂದೂ, ಬಾದೂರ, ನಾಗರಸ, ಮೊದಲಾದವರನ್ನೆಲ್ಲ ಕರೆಸೆಂದೂ ಹೇಳಿ, "ರಾಜೇಂದ್ರ ರಾಮೈಗೆ ಊಳಿಗವನು ಕಳುಹಿ ಪೇಳಿ ವಾರ್ತೆಯನು ಕರೆತನ್ನಿ" ಎಂಬುದಾಗಿಯೂ ಆಜ್ಞಾಪಿಸಿದನು. ಅದೇ ಮೇರೆಗೆ ರಾಮನಿಗೆ ಬಂದು ತಿಳಿಸಲು ಅವನು ಗಹಗಹಿಸಿ ನಕ್ಕನು. ಕಂಪಿಲನು ತನ್ನ ವಯೋಧರ್ಮವನ್ನರಿಯದೆ ಬೇಟೆಗೆ ಹೊರಟಿರುವ ನೆಂದು ಕಾಟಣ್ಣನೊಂದಿಗೆ ಆಕ್ಷೇಪಿಸಿ, ನಿರ್ವಾಹವಿಲ್ಲದೆ ತನ್ನ ವೀರರೊಂದಿಗೆ ಕೂಡಿ ಅಣಿಯಾದನು. ಅಣ್ಣ

ತಮ್ಮಂದಿರು ರಾಮಲಕ್ಷ್ಮಣರಂತೆ ಕುದುರೆಗಳನ್ನೇರಿ ಹೊರಡಲು, ದಾರಿಯಲ್ಲಿ ಅಪಶಕುನಗಳಾದುವು. ಕಾಗೆ ಅಡ್ಡಿ ಬಂದಿತು; ಒಂಟಿ ಬ್ರಾಹ್ಮಣನು ಎದುರಾದನು; ಪೂರ್ವದಲ್ಲಿ ಹಲ್ಲಿ ಲೊಚಗುಟ್ಟಿತು; ಎಡಗಡೆಯಿಂದ ಗರುಡ ಹಾರಿ ಬಂದಿತು. ಅವುಗಳನ್ನು ಕಂಡು ರಾಮನು ಏನೋ ಹಾನಿ ಕಾದಿದೆಯೆಂದು ಬಗೆದು, "ಹೇಳಿರೋ ರಾಯಗೆ ಆದಂತ ಅಪಶಕುನ ಬರಹೇಳು ಎಂದರೆ ಸಾಗಿ ಬರು [ವೆವು]" ಎಂದು ಹೇಳಿ ಕಳುಹಿಸಿದನು. ಕಂಪಿಲನು ಆ ಮಾತನ್ನು ಕೇಳಿ, "ಅಪಶಕುನವಾದಲ್ಲಿ ಬರಸಲ್ಲ ಪಯಣವಿಡಿದು, ಇರಲವರು ಪುರದೊಳು ಸುಖದಿ" ಎಂದು ತಿಳಿಸಿ ತಾನು ಬೇಟೆಗೆ ತೆರಳಿದನು.

ಇತ್ತ, ರಾಮನು ಬೇಟೆಗೆ ಹೋಗಲು ಆಗದಿರಲು, ಜೊತೆಯವರೊಂದಿಗೆ ಹಂಪೆಯ ನದಿಗೆ ಬಂದು ನೀರಾಟವಾಡಲು ತೊಡಗಿದನು. ಅನಂತರ, ಊರಿನ ಕಡೆಗೆ ಬರುತ್ತಿರಬೇಕಾದರೆ, ದಾರಿಯಲ್ಲಿ ಹುಡುಗರು ಲೆಗ್ಗೆ ಚೆಂಡಾಡುತ್ತಿರುವುದನ್ನು ಕಂಡನು. ತನಗೂ ಆಡಬೇಕೆನ್ನಿಸಲು, ಕಾಟಣ್ಣನು ಅವನಂತಹ ಬಿರುದಾಂಕರು ಅಂಥ ಚೆಂಡಾಟವನ್ನು ಆಡಿದರೆ ನೋಡಿದವರು ನಗುವರೆಂದನು. ಕಡೆಗೆ ರಾಮನನ್ನು ಕುರಿತು "ಬೇಡಯ್ಯ ಚೆಂಡು; ಆಡುವ ಪ್ರೀತಿರಲು ಬೇರಿಹುದು ಮುತ್ತಿನ ಚೆಂಡು. ಮುತ್ತ ಮುಮ್ಮಡಿ ಪಿತೃಯನಾಡಿದ ಚೆಂಡು ಹಿಂದ (ದೆ ?), ಮುತ್ತಿನ ಚೆಂಡಿದೆ ತಮ್ಮ, ಹೆತ್ತಮ್ಮ ಹರಿಹರದೇವಿಯ ಬಳಿಯಲ್ಲಿ, ಸಿಕ್ಕಿದರೆ ತಂದು ನೀನಾಡೋ" ಎಂದು ಹೇಳಿದನು. ಆ ಮಾತನ್ನು ಕೇಳಿದ ಕೂಡಲೆ ರಾಮನ ಮುಖವರಳಿತು. ತಾಯಿಯ ಬಳಿ ಬೇಡಿ ತರುವೆನೆಂದು ನಿಶ್ಚಯಿಸಿದನು. ಬೆಳಗಾಗುವುದೇ ತಡ, ರಾಮನು ಅಲಂಕೃತನಾದನು. ಅದನ್ನು ನೋಡುತ್ತಿದ್ದ ಆತನ ಮಡದಿಗೆ ಏನು ಕಾರಣವಿರಬಹುದೆಂದು ಊಹಿಸಲಾಗಲಿಲ್ಲ. ಆಕೆ ತನ್ನ ಅತ್ತೆಗೆ ಆ ಸುದ್ದಿಯನ್ನು ಮುಟ್ಟಿಸಿದಳು. ಆಕೆಯೂ ಏನಿರಬಹುದೆಂದು ಶಂಕಿಸಿದಳು. ಆ ಹೊತ್ತಿಗೆ ಸ್ನೇಹಿತನಾದ ಪ್ರಧಾನಿಯ ಮಗ ನೀಲಕಂಠನು ಬಂದನು. ದೇವಿಶೆಟ್ಟಿಲಿಂಗ, ಭಾವ (ಸಂಗಮ ?) ಮೊದಲಾದವರೂ ಬಂದು ಕಾದಿದ್ದರು. ಕಾಟನನ್ನು ಕರೆದು ರಾಮನು, ಎಲ್ಲರಿಗೂ ಕಾಗದ ಬರೆಯುವಂತೆ ಹೇಳಿದನು. ಕಾಟಣ್ಣನು "ಅಡಿಗೆಯಾಗದ ಮುನ್ನ ಎಲೆಯನು ಹಾಸಿದ ತೆರ ಬಂತು ಕಾಣೊ ತಮ್ಮ" ಎಂದು ನಸುನಕ್ಕು "ಚೆಂಡನ್ನು ಪಡೆಯುವುದಕ್ಕೆ ಮುಂಚೆಯೇ ಹೇಗೆ ತಾನೆ ಅವರಿಗೆಲ್ಲ ಓಲೆ ಬರೆಯುವುದು ?" ಎಂದನು. ರಾಮನು ಅದಕ್ಕಾಗಿ ಚಿಂತಿಸಬೇಕಾಗಿಲ್ಲವೆಂದೂ ತಾಯಿ ಚೆಂಡನ್ನು ಕೊಡದಿರಲು ಪ್ರಾಣವನ್ನೇ ತ್ಯಜಿಸುವೆನೆಂದೂ ಹೇಳಿ, ಮನ್ನೆಯರನ್ನು ಕರೆಸುವಂತೆ ಒತ್ತಾಯಮಾಡಿದನು. ಅನಂತರ ಕಾಟನು ಹಾಗೆಯೇ ಎಲ್ಲರಿಗೂ ಕಾಗದಗಳನ್ನು ಬರೆದನು. ಇತ್ತ, ರಾಮನು ತಾಯಿಯ ಬಳಿಗೆ ಬಂದು, ಮುಮ್ಮಡಿಸಿಂಗನ ಕಾಲದ ಮುತ್ತಿನ ಚೆಂಡನ್ನು ಕೊಡಬೇಕೆಂದು ಕೇಳಿಕೊಂಡನು. ಚೆಂಡಿನ ಮಾತು ಕಿವಿಗೆ ಬಿದ್ದೊಡನೆಯೇ ಹರಿಯಮ್ಮನು ಚಕಿತಳಾದಳು. ಬೆಣ್ಣೆಗೆ ಉರಿ ತಾಕಿದಂತಾದಳು. ಕೈಬೆರಳುಗಳನ್ನು ಮುರಿದುಕೊಳ್ಳುತ್ತ ನೆಟಗೆ ತೆಗೆಯಲಾರಂಭಿಸಿದಳು. ತನಗೆ ಚೆಂಡಿನ ಸುದ್ದಿಯೇ ಗೊತ್ತಿಲ್ಲವೆಂದು ನಟಿಸಿದಳು. ರಾಮನು ಆ ಮಾತನ್ನು ಸುಲಭವಾಗಿ ಒಪ್ಪದೆ "ಪುಣಗು ಇರಲು ಮೂಗಿನ ಸೆಲೆಗಿ (ಯಿ ?) ನ್ನು ಒಡೆಯದೆ ? ಅಡಗುವುದೆ ಆನೆ ಹುಲ್ಲೊಳಗೆ ? ಮಡಗಿರುವ ಸ್ಥಾನದ ನೆಲೆಯ ಬಲ್ಲವರೊಳು ಹೊಳವಾಡೆ ನಡೆವುದೆ ?" ಎಂದು ಪರಿಪರಿಯಾಗಿ ಪ್ರಶ್ನಿಸಿ, ತಾಯಿಯ ಬಾಯಿಂದ ನಿಜವಾದ ಸುದ್ದಿಯನ್ನು ಹೊರಗೆಡಹಿದನು. ಆಕೆ, ನಿರ್ವಾಹವಿಲ್ಲದೆ, ಅದು ತುಂಬ ಹಾನಿಕರವಾದದ್ದು ಎಂದು ತಿಳಿಸಿದಳು. ರಾಮನಿಗೆ ಆ ಮಾತುಗಳಾವುವೂ ಒಪ್ಪಿಗೆಯಾಗಲಿಲ್ಲ. ಏಕೋದೇವನನ್ನು ನೆಚ್ಚಿ ವ್ರತನಿಷ್ಠೆಯಿಂದ ಇದ್ದಿದ್ದೇ ಆದರೆ ಅದರಿಂದ ಯಾವ ಹಾನಿಯೂ ಆಗದೆಂದು ವಾದಿಸಿದನು. ಹರಿಯಮ್ಮನು, ರಾಮನಿಗೆ ಕೆಡುಕಾದರೆ, ಕಂಪಿಲನ ಸ್ಥಿತಿ ತುಂಬ ದುಃಖಕರವಾಗುವುದೆಂದೂ, ಆತನು ಸೋಲಿಸಿರುವ ಬಲ್ಲಾಳ, ಸುರುತಾಳ, ರುದ್ರರಾಯರು ಸಮಯ ಕಾಯುತ್ತಿರುವರೆಂದೂ ಪೇಚಾಡಿದಳು. ರಾಮನಿಗೆ ಚೆಂಡಿನ ವೃತ್ತಾಂತವು ಹೇಗೆ ತಿಳಿಯಿತೆಂದು ಕೇಳಿದಳು. ಅವನು ಕಾಟನ ಮೂಲಕ ತನಗೆ ಗೊತ್ತಾದ ಪರಿಯನ್ನು ವಿಶದಪಡಿಸಿದನು. ರಾಮನ ಕಣ್ಣಲ್ಲಿ ನೀರು ಬಂದಿತು. ಹರಿಯಮ್ಮನು ಮಗನ ದುಃಖ

ವನ್ನು ಕಂಡು ಸಹಿಸಲಾರದೆ, ಪೆಟ್ಟಿಗೆಯಲ್ಲಿದ್ದ ಚೆಂಡನ್ನು ಹೊರಕ್ಕೆ ತೆಗೆಸಿದಳು. ಮಗನ ಕೈಯಿಂದ ಅದಕ್ಕೆ ಬೇಕುಬೇಕಾದ ಪೂಜೆ, ಬಲಿಗಳನ್ನು ಏರ್ಪಡಿಸಿ, ಅದನ್ನು ಕೊಂಡೊಯ್ಯಲು ಸಮ್ಮತಿಸಿದಳು.

ಕುಮಾರರಾಮನು ಹಿಂದಿನ ಕಾಲದ ಮುತ್ತಿನ ಚೆಂಡನ್ನು ಆಡುವನೆಂದೂ, ಪಟ್ಟಣದ ಮಂದಿ ಮನ್ನೆಯರು ಬಂದು ನೋಡಬಹುದೆಂದೂ, ಕಟ್ಟೆಗೆಕಾರರು ಡಂಗುರ ಸಾರಿದರು. ಕಲೆಯನ್ನು ಬಲ್ಲ ಗಣಿಕೆಯರೆಲ್ಲ ಅಲಂಕೃತರಾಗಿ ಸಾರಿದರು. ಓರುಗಲ್ಲಿನ ಯಲ್ಲಾಜಿ, ಕುಂಭಕೋಣೆಯ ಯಿರುಪಾಯಿ, ಪೆನಗೊಂಡೆಯ ಯಲ್ಲಾಜಿ, ವಿಜಯನಗರದ ಭದ್ರಾಜಿ, ಉದ್ದಾಗಿರಿಯ ಸಿದ್ದಿ, ನಾಗಾಜಿ, ಬೇಲೂರು ಚೆನ್ನಿ, ನಾಟ್ಯಣ (?) ವಿರುಪಾಯಿ, ಚಂದ್ರಗಿರಿಯ ಚನ್ನಾಜಿ, ಕಲ್ಲಿಕೋಟೆಯ ಚಿಕ್ಕಾಜಿ, ಮುಂತಾದವರು ಶೃಂಗರಿಸಿಕೊಂಡು ಬಂದರು. ಹಟ್ಟಿಕಾರರು, ಹಳ್ಳಿಕಾರರು, ಹನುಮರು, ದಿಟ್ಟಗಾಣಿಗ ಬೊಮ್ಮನವರು, ಕಟ್ವಾಳುಗಳು, ರಾಮನ ಎಡ ಬಲಗಳಲ್ಲಿ ಬಂದು ನಿಂತರು. ರಾಮನು ಬೊಲ್ಲನನ್ನು ಏರಿ ಬೀದಿಯಲ್ಲಿ ಬರುತ್ತಿರಲು ಊರಿನ ಸ್ತ್ರೀ ಸಮುದಾಯದವರು ಆತನ ರೂಪು ಲಾವಣ್ಯಗಳನ್ನು ಕಂಡು ಮದನತಾಪದಿಂದ ನಾನಾ ಪರಿಯಾಗಿ ಪರಿತಪಿಸಿದರು. ರಾಮನಾದರೋ ಅವರೆಲ್ಲರನ್ನೂ ತನ್ನ ತಾಯಿಗೆ ಸಮಾನವೆಂದು ಭಾವಿಸಿದನು. ಕಾಟಣ್ಣನ ಸಲಹೆಯ ಮೇರೆಗೆ ರತ್ನಾಜಿಯ ಅರಮನೆಯ ಬಳಿಯಲ್ಲಿದ್ದ ಬಯಲಿನಲ್ಲಿಯೇ ಚೆಂಡಾಟವಾಡತಕ್ಕುದೆಂದು ನಿಶ್ಚಯವಾಯಿತು. ರಾಮನು "ಒಳ್ಳಿತಾಯಿತು ನಡಿ, ಚಿಕ್ಕಮ್ಮ ನೋಡಲಿ ಅಲ್ಲಿ ಮಕ್ಕಳ ಆರ್ತಿಯನು" ಎಂದನು. ಅನಂತರ, ಕೊಳ್ಳಿಯ ನಾಗನು ಬೆಳ್ಳಿಯಿಂದ ಮಾಡಿದ ಏಳು ಹಲಗೆಗಳನ್ನೂ, ಚಿನ್ನದಿಂದ ಮಾಡಿದ ಏಳು ಹಲಗೆಗಳನ್ನೂ ಹೂಡಿದನು. ರಾಮನು ಚೆಂಡನ್ನು ನಾನಾ ಹೂವುಗಳಿಂದ ಪೂಜಿಸಿದನು. ಅಣ್ಣ ತಮ್ಮಂದಿರಿಬ್ಬರ ಕಡೆಗೂ ಆಳುಗಳನ್ನು ಹಂಚಲಾಯಿತು. ಎಲ್ಲರೂ ಅಲಂಕೃತರಾಗಿದ್ದರು. ಕಡೆಗೆ, ಚೆಂಡಾಟವು ಮೊದಲಾಯಿತು. ಕ್ಷಣಮಾತ್ರದಲ್ಲಿಯೇ ಆಟ ಕಾವೇರಿತು. ಚೆಂಡನ್ನು ಹಿಡಿಯ ಹೋದವರು ಕೆಡೆದು ಬೀಳುತ್ತಿದ್ದರು. ಉತ್ಸಾಹವಂತೂ ನಿಮಿಷ ನಿಮಿಷಕ್ಕೂ ಉಕ್ಕಲಾರಂಭಿಸಿತು. ಕುಂಭಿನಿಯೇ ಸೀಳು ಸೀಳಾದಂತೆ ಕೋಲಾಹಲವೆದ್ದಿತು. ಕಲ್ಲಣ್ಣ, ಬಾಣಿಯ ಮುದ್ದ, ಚಾಮಯ್ಯ ಮೊದಲಾದವರ ಆಟ ಅದ್ಭುತವಾಗಿತ್ತು. ಅವರ ಕೂಗು ಕೇಕೆಗಳ ಸದ್ದು ರಂಭೆ ರತ್ನಾಜಿಗೆ ಕೇಳಿಸಿತು. ಕಂಪಿಲನು ಬೇಟೆ ಮುಗಿಸಿಕೊಂಡು ಬಂದನೇನೊ ಎಂಬುದಾಗಿ ಭಾವಿಸಿದಳು. ಸಂಗಿಯನ್ನು ನೋಡಿಕೊಂಡು ಬಾರೆಂದು ಕಳುಹಿಸಲು, ಆಕೆ ನೋಡಿಕೊಂಡು ಹೋಗಿ ವಾಸ್ತವಾಂಶವನ್ನು ತಿಳಿಸಿದಳು. ಊರ ಮುಂದಣ ಅರಳಿಯ ಮರದಡಿಯಲ್ಲಿ ರಾಮನು ಚೆಂಡಾಡುತ್ತಿರುವನೆಂದು ಗೊತ್ತಾಗಲು ರತ್ನಾಜಿಗೆ ಅವನನ್ನು ನೋಡಬೇಕು ಎನ್ನಿಸಿತು. ಸಂಗಿಯೂ ಒಡತಿಯನ್ನು ಸಾಕಷ್ಟು ಹುರಿದುಂಬಿಸಿದಳು. ರತ್ನಿ ಅರಮನೆಗೆ ಬಂದು ಬಗೆಬಗೆಯಾಗಿ ಅಲಂಕಾರ ಮಾಡಿಕೊಂಡಳು. ಸಖಿಯ ಪ್ರಶಂಸೆಯನ್ನು ಕೇಳುತ್ತ, "ಬಾಗುತ ಬಳಕುತ ಜಗ್ಗಿಸಿ ನಡೆವುತ ದಾದಿಯರ ಕರಗಳ ಪಿಡಿದು" ಕರುಮಾಡವನ್ನು ಏರಿದಳು. ಅಕ್ಕಪಕ್ಕದ ಸೇವಕಿಯರು ಚಾಮರ ಬೀಸತೊಡಗಿದರು. ಪೀಠದಲ್ಲಿ ಕುಳಿತು, ಸಂಗಿಯನ್ನು ರಾಮನನ್ನು ತೋರಿಸೆಂದು ಕೇಳಿದಳು.

## ರತ್ನಾಜಿಯ ಹಗರಣ

ಉಪ್ಪರಿಗೆಯನ್ನೇರಿ ಕುಳಿತಿದ್ದ ರತ್ನಿ, ಆಟದ ಬಯಲಿನಲ್ಲಿ ನೆರೆದಿದ್ದ ಹಲವಾರು ಮನ್ನೆಯರನ್ನು ತೋರಿಸಿ, ಅವರು ಯಾರು ಯಾರೆಂದು ಸಂಗಾಯಿಯನ್ನು ಕೇಳಿದಳು. ಆಕೆ ಅಲ್ಲಿದ್ದ ಒಬ್ಬೊಬ್ಬರನ್ನೂ ಅವರವರ ಶಕ್ತಿ ಸಾಮರ್ಥ್ಯಗಳನ್ನು ವಿವರಿಸಿ ಪರಿಚಯಮಾಡಿಕೊಟ್ಟಳು. ಗುತ್ತಿಯ ಕಸ್ತೂರಿ ಚಾಮಯ್ಯ, ಮಾದಿಗ ಹಂಪ, ಗಂಗಪಾಟಿಯ ಗಂಗರಾಜ, ಪಾಲುಕುರಿಕೆಯ ಹನುಮ, ಓರ್ಗಲ್ಲ ಲಿಂಗರಾಜ, ಕಾಟನಾಯಕ, ಕಾಟಣ್ಣ, ಗುಂಟನೂರ ಕಾಟರಾಜಯ್ಯ, ಗಾಣಿಗ ಚನ್ನ, ರಸಿಕ ಮೈದುನ ಮಲ್ಲ, ಬಾದೂರ

ಖಾನ[1] (?) ಮಾಚರಮಲ್ಲ, ಮಲ್ಲುಕಖಾನ, ಜೇಡರ ಚನ್ನಣ್ಣ, ರ[?]ಶೆಟ್ಟಿ, ಕೋಮಟಿಗರ ಮಲ್ಲ, ದೊಣ್ಣೆಯ ಬಸವ, ಚಿನಿವಾರ ರಾಮ, ಸಿದ್ಧರಾಜನ ಬಸವಯ್ಯ, ಮುಗಲೂರ ಕಾಮ, ಚೆಲುವಾಡಿಯ ಚಿಕ್ಕ ರಾವುತ, ರಾಯದುರ್ಗದ ರಾಯಗುರು, ಅಕ್ಕಸಾಲೆಯ ಚಿಕ್ಕ, ಕಂಚುಗಾರ ಕೆಂಚ, ಗಿಂಡಿಯ ಸಂಗ, ಗುತ್ತಿಯ ನಾಡ ಗಂಗಣ್ಣ (?), ಜಂಗಮ ಬಸವ, ಸಿಂಗರಾಜ ಮೊದಲಾದವರನ್ನು ಗುರುತಿಸಿ ಹೇಳಿದಳು. ರತ್ನಿಗಾದರೋ ತನ್ನ ಮನಕ್ಕೆ ಬೇಕಾದವನು ಕಣ್ಣಿಗೆ ಬೀಳಲಿಲ್ಲವಲ್ಲ ಎಂಬ ಸಂಕಟ. "ಬೆಕ್ಕಿಗೆ ಚುನ್ನಾಟ ಇಲಿಗೆ ಕಷ್ಟ" ಎಂಬಂತೆ ತೊತ್ತು ಹೆಣ್ಣಾದ ಸಂಗಿ ತನಗೆ ಪ್ರಿಯನಾದವನನ್ನು ತೋರಿಸಲಿಲ್ಲ ಎಂದು ಆಕ್ಷೇಪಿಸಿದಳು. ಕಟ್ಟಕಡೆಗೆ ಆಕೆ ಚೆನ್ನಿಗರಾಮನನ್ನೂ ತೋರಿಸಿದಳು. ಆ ಮಾತು ಕಿವಿಯ ಮೇಲೆ ಬಿದ್ದ ಕೂಡಲೆ ರತ್ನಿಗೆ ಕಾಮತಾಪವೇರಿತು. ರಾಮನ ಸೌಂದರ್ಯವನ್ನು ಕಂಡು ತುಟಿಮಿಸಾರಿಯೇ ಮಾತಾಡಿದಳು. "ಬ್ರಹ್ಮನೆಂಬುವ ಪಾಪಿ ಇಂತಪ[ಪ್ಪ?] ಪುರುಷನ ನಮ್ಮ ಗಂಡನ ಮಾಡದ್ಹೋದ" ಎಂದು ಟೀಕಿಸಿದಳು. "ಗಾಯವಡೆದ ಮೃಗದಂತೆ ಮಾನಾಭಿಮಾನವ ತೊರೆದಳು ರತ್ನಾಜಿ." ರಾಮನನ್ನು ನೋಡುತ್ತಿರುವಂತೆಯೇ ಮೂರ್ಛಾಗತಳಾದಳು. ಗೌಡಿಯರು ಕಳವಳಿಸಲು ಸಂಗಾಯಿ ಸಮಾಧಾನ ಹೇಳಿದಳು. ಆ ವೇಳೆಗೆ ರತ್ನಾಜಿಯೂ ಮೂರ್ಛೆಯಿಂದ ಎಚ್ಚತ್ತು ಚೇತರಿಸಿಕೊಳ್ಳತೊಡಗಿದಳು. ಸಂಗಾಯಿ ಒಡತಿಯನ್ನು ಆ ರೀತಿ ವರ್ತಿಸುವುದು ಅನುಚಿತವೆಂದೂ, ಕಂಪಿಲನಿಗೆ ಆ ವೃತ್ತಾಂತ ತಿಳಿದರೆ ಮುಂದೆ ಗತಿಯೇನೆಂದೂ ಬೆದರಿದಳು. ರತ್ನಾಜಿ ಆ ಮಾತಿಗೆ ಹೆದರದೆ "ದೊರೆ ರಾಯ ಕಂಪಿಲಗೆ ಬೆದರಬಲ್ಲೆನೆ ಸಂಗಿ" ಎಂದು ಉತ್ತರವಿತ್ತು "ಧರೆಯೊಳಗೀ ಕಾಯ ಸ್ಥಿರರಾಜ್ಯ ಪಡೆದಿಹುದೆ, ಒಂದರಗಳಿಗೆ ರಾಮನ ಭೋಗ ಸಾಕು" ಎಂದು ಹಂಬಲಿಸಿದಳು. ಬಳಿಕ ರಾಮನನ್ನು ಒಲಿಸಿಕೊಳ್ಳಲು ಮಾರ್ಗವೇನೆಂದು ಸಖಿಯನ್ನು ಕೇಳಿದಳು. ಆಕೆ "ಲೋಕ ಮಂತ್ರವ ಬಲ್ಲೆ ನಾ ಕರೆತರುವೆ ರಾಮುಗನಾ" ಎಂದು ಸಮಾಧಾನ ಹೇಳಿ, ರತ್ನಿಯ ಉಂಗುರವನ್ನು ಮಂತ್ರಿಸಿ ಕಳುಹಿಸಿಕೊಡಬೇಕೆಂದೂ, ಅವನು ಅದನ್ನು ಸ್ವೀಕರಿಸಿದ್ದೇ ಆದರೆ ಕಾರ್ಯ ಕೈಗೂಡುವುದೆಂದೂ ಸಲಹೆ ಮಾಡಿದಳು. ಅದೇ ಮೇರೆಗೆ ಗಂಧ, ಕಸ್ತೂರಿ, ಪುನುಗು ಮೊದಲಾದ ಸುಗಂಧ ದ್ರವ್ಯಗಳನ್ನು ತಟ್ಟೆಯಲ್ಲಿಟ್ಟುಕೊಂಡು, ಉಂಗುರವನ್ನು ಕಾಣದಂತೆ ಇರಿಸಿ, ಸಂಗಾಯಿ ರಾಮನ ಬಳಿಗೆ ಬಂದಳು. ಆತನು ಕಪಟವನ್ನರಿಯದೆ ತನ್ನವರಿಗೆಲ್ಲ ಸುಗಂಧದ್ರವ್ಯಗಳನ್ನು ಪೂಸಲು ಕೊಟ್ಟನು. ಆಗ ಆತನ ಕೈಗೆ ಉಂಗುರ ಸಿಕ್ಕಿತು. ಅದು ಅಲ್ಲಿ ಏಕೆ ಇದೆಯೆಂದು ಏನೋ ಶಂಕೆಯಾಯಿತು. "ಹರಹರ ಏನು ಕಾರಣ ಬಂತು ಉಂಗುರ ಹರಹರ ಗುರುವೆ ತಾ ಬಲ್ಲ, ಹರಿಹರದೇವಿ ಆಡಿದ ಮಾತು ಬಂತಿಲ್ಲಿ" ಎಂದು ವ್ಯಾಕುಲಚಿತ್ತನಾಗಿ ಸಂಗಿಯನ್ನು ಕೇಳಿದನು. ಅವಳು ಬಿನ್ನಾಣದ ಮಾತುಗಳನ್ನಾಡಿ ಅಪ್ಪಿತಪ್ಪಿ ಬಂದಿರಬಹುದೆಂದು ಮಾತು ತೇಲಿಸಿದಳು. ರಾಮನು ಅದನ್ನು ರತ್ನಾಜಿಗೇ ಹಿಂತಿರುಗಿ ಕಳುಹಿಸಲು ಆಕೆಯ ಮುಖಭಂಗವಾಯಿತು.

ಆ ಉಪಾಯವು ಸಿದ್ಧಿಸದೆ ಹೋಗಲು ರತ್ನಾಜಿ ಕುಟಿಲದೇವತೆಗಳಲ್ಲಿ ಹರಕೆ ಹೊತ್ತಳು. ರಾಮನಾಡುವ ಚೆಂಡು ತನ್ನ ಅರಮನೆಗೆ ಬಂದು ಬೀಳಲೆಂಬುದೇ ಆಕೆಯ ಪ್ರಾರ್ಥನೆ. ತನಗೆ ತಿಳಿದಂಥ ದೇವಾನುದೇವತೆಗಳಿಗೆಲ್ಲ ಒಂದಲ್ಲ ಒಂದು ಪರಿಯಾಗಿ ಸೇವೆ ಮಾಡುವೆನೆಂದು ಹರಸಿಕೊಂಡಳು. "ನಾಡದೇವರ ಮಾತು ಕಾಣಗೊಡದು ಸಂಗಿ. ವಾಯುದೇವರು ಒಂದು ತೆರದಿ, ಮಾಯದ ಗಾಳಿದ್ದು ಹಾರಿಸಿ ತಂದರೆ

---

1. ಈತನು ರಾಜನೊಂದಿಗೆ ಬೇಟೆಗೆ ಹೋದುದಾಗಿ ಮೊದಲೆ ಬರುತ್ತದೆ.

ಕರೆಸಯ್ಯ ಬಾದೂರಖಾನ ನಾಗರಸನ ವೀ[ರ] ಮಾನ್ಯರ ಹಳಬರನೂ।
ರಾಜೇಂದ್ರ ರಾಮ್ಯಗೆ ಊಳಿಗವನು ಕಳುಹಿ ಪೇಳಿ ವಾರ್ತೆಯನು ಕರೆತನ್ನಿ ॥
ಬಾದೂರಖಾನನು ನಾಗರಸು ಮೊನೆಗಾರರು ಧೀರ ಮನ್ನೆಯರು ಶೃಂಗರಿಸಿ।
ಸುಳುಹುದೆ(ಹೆ?)ಜ್ಜೆಯ ತೆಗೆದು ಎಳದು ಮೃಗವನು ಕೊಲ್ವ ಹಳೆಯ ಪೈಕದ ಮಂದಿ ಒದಗೆ ॥

(x, ೪೦, ೪೧.)

ಭೀಮ ಹನುಮಗೆ ನಾಮ ಕೊಡುವೆ" ಎಂದು ಹೇಳಿಕೊಂಡಳು. ಆ ಪಾಟ ದೇವತೆಗಳಿಗೆಲ್ಲ ಹರಸಿಕೊಂಡದ್ದನ್ನು ಕೇಳಿ, ಸಂಗಿ ಬಹಳ ಜಾಣತನದಿಂದ, ಕಂಪಿಲನು ಏನಾದರೂ ಪ್ರಶ್ನಿಸಿದರೆ ಏನು ಹೇಳುವುದೆಂದು ಚಿಂತಿಸಿದಳು. ಚತುರಳಾದ ರತ್ನಿ "ಹಾದರವ ಬಲ್ಲಾಕೆ ಈ ಜಾಲನರಿಯಳೆ ಸಂಗಿ" ಎಂದು ನುಡಿದು, ರಾಜನು ಬರುವುದು ತಡವಾಗಲು ಶಂಕೆಯಿಂದ ಬೇಡಿಕೊಂಡೆನೆಂದು ಹೇಳುವುದಾಗಿಯೂ, "ಮುದಿರಾಯನ ಮ[ನ]ಸು ಕರಗುವಂದದಿ ಪೇಳ್ವೆ ಮರುಳು ಆಗುವನೆ ನಿಜ" ಎಂಬುದಾಗಿಯೂ ಉತ್ತರವಿತ್ತಳು. ಕಂಪಿಲನ ಬಗ್ಗೆ ತನಗಿದ್ದ ಅನಾದರಣೆಯನ್ನೂ ವ್ಯಕ್ತಪಡಿಸಿದಳು. ಈ ರೀತಿ ರತ್ನಾಜಿ ಚಿಂತಾಲೋಲಳಾಗಿ ಕುದಿಯುತ್ತಿದ್ದಳು.

ಅತ್ತ ಕಡೆ ಚೆಂಡಿನಾಟವು ಹುರುಪೇರಿತು. ಅವರವರಲ್ಲಿಯೇ ಬಿಸಿಬಿಸಿಯ ಮಾತುಗಳೂ ನಡೆದುವು. ಚೆಂಡು ಹದ್ದಿನಂತೆ ಗಗನಮಾರ್ಗದಲ್ಲಿ ಅತ್ತಿಂದಿತ್ತ ಅಡ್ಡಾಡುತ್ತಿತ್ತು. ಒಮ್ಮೊಮ್ಮೆ ಬರಸಿಡಿಲಿನಂತೆ ಆರ್ಭಟಿಸಿ ಬರುತ್ತಿತ್ತು. ಪಕ್ಷ ಪ್ರತಿಪಕ್ಷಗಳವರ ಮಾತುಗಳ ಮೇಲಾಟವೂ ಚೆಂಡಾಟವೂ ಒಂದೇ ಸಮನೆ ಮುಂದುವರಿದು ರಾಮನು ಆಗ್ರಹಗೊಂಡು ಮುನ್ನುಗ್ಗಿದನು. ಆಗ ಕಾಟನು ತಮ್ಮನಿಗೆ ಎಷ್ಟೆಷ್ಟೋ ಸಮಾಧಾನ ಹೇಳಿದನು. ಅವುಗಳು ಯಾವುದನ್ನೂ ಲಕ್ಷಿಸದೆ ರಾಮನು ಬಲವಾಗಿ ಲಗ್ಗೆ ಹೊಡೆಯಲು, ಅದು ಆಕಾಶಕ್ಕೆ ನೆಗೆದು, ರತ್ನಿಯ ಮಹಲಿನ ತೋಟಕ್ಕೆ ಹೋಗಿ ಬಿದ್ದಿತು. ಎಲ್ಲರೂ ತೆಪ್ಪಗಾದರು. ರಾಮನು ಕೇಡುಗಾಲ ಬಂತೆಂದು ಭಾವಿಸಿದನು.

ರಾಮನು ಕಾಟಣ್ಣನನ್ನು ಕರೆದು, ತಾಯಿಹೇಳಿದ ಮಾತು ನಿಜವಾಯಿತೆಂದೂ, ಚೆಂಡು ಮಾಯದ ವಿಧಿಯಾಯಿತೆಂದೂ ನುಡಿದು, ರತ್ನಿಯ ಮನೆಗೆ ಹೋಗಿ ಚೆಂಡನ್ನು ತರುವಂತೆ ಕೋರಿದನು. ಕಾಟನಿಗಾದರೋ ಬಹಳ ಆತಂಕ. ರತ್ನಿಯ ಚಾಳಿಯನ್ನು ಬಲ್ಲ ಅವನು ಅಲ್ಲಿ ಏನು ಕಾದಿದೆಯೋ ಎಂದು ಅಳುಕಿದನು. ಆತನ ಅಭಿಪ್ರಾಯವನ್ನು ಅರಿತ ರಾಮನು "ತಾಯೊಡನೆ ಅನ್ಯಾಯ ನಾವು ಹುಡುಕಲುಸಲ್ಲ" ಎಂದು ಹೇಳಿ ಮತ್ತೆ ವಿನಂತಿ ಮಾಡಿಕೊಂಡನು. ಅವರಿಬ್ಬರ ಮಾತುಕತೆಗಳನ್ನು ಆಲಿಸುತ್ತ ನಿಂತಿದ್ದವರು, ಚೆಂಡನ್ನು ತಾವು ತೆಗೆದುಕೊಂಡು ಬರುವುದಾಗಿಯೂ, ಕಂಪಿಲನು ಅಡ್ಡ ಬಂದರೂ ಲಕ್ಷಿಸುವುದಿಲ್ಲವೆಂದೂ, ತಮಗೆ ಅಪ್ಪಣೆ ನೀಡಬೇಕೆಂದೂ ಕೆಚ್ಚಿನಿಂದ ಮಾತಾಡಿದರು. ರಾಮನು ಅವರನ್ನು ಸಮಾಧಾನ ಮಾಡಿ ಅಣ್ಣನನ್ನೇ ಕಳುಹಿಸುವುದಾಗಿ ನಿಶ್ಚಯಿಸಿದನು. ಈ ವೇಳೆಗಾಗಲೇ ಚೆಂಡನ್ನು ಕಂಡ ರತ್ನಿಯ ಸಂತೋಷ ಹೇಳತೀರದು. ಅದನ್ನು ಎದೆಯ ಬಳಿ ಇಟ್ಟುಕೊಂಡು ಸುಖಿಸಿದಳು. ದೇವರೇ ತನ್ನಮೇಲೆ ಕೃಪೆ ತೋರಿ ಅದನ್ನು ದಯಪಾಲಿಸಿರಬೇಕೆಂದು ಭಾವಿಸಿದಳು. ಸಂಗಾಯಿಯ ಜೊತೆಯಲ್ಲಿ, ಚೆಂಡನ್ನು ಬೇಡಲು ಬರುವವನನ್ನು ಹೇಗಾದರೂ ಮಾಡಿ ಒಲಿಸಿಕೊಳ್ಳುವುದಾಗಿ ಹೇಳಿದಳು. ಅಷ್ಟುಹೊತ್ತಿಗೆ, ತಮ್ಮನ ಮಾತಿನ ಮೇರೆಗೆ ಕಾಟಣ್ಣನು ಅಲ್ಲಿಗೆ ಬಂದನು. ಸಂಗಿಯನ್ನು ಕಂಡಕೂಡಲೆ ಚೆಂಡನ್ನು ಕೇಳಿದನು. ಆಕೆ, ತನಗೆ ಏನೂ ತಿಳಿಯದವಳಂತೆ ನಟಿಸಿ, ಆತನ ಆಗಮನವನ್ನು ರತ್ನಿಗೆ ಕೂಗಿ ಹೇಳಿದಳು. ಬಂದಾತನು ಕಾಟನೆಂದರಿತು ರತ್ನಾಜಿ ಇದ್ದಲ್ಲಿಂದಲೇ ಕ್ಷುಲ್ಲಕವಾದ ಮಾತುಗಳನ್ನು ಆಡತೊಡಗಿದಳು. ಗಂಡಸಿಲ್ಲದ ಮನೆಗೆ ಬಂದವನು ಯಾರೆಂದೂ, ಬೇಟೆಗೆ ಹೋಗದೆ ಚೆಂಡಿನ ನೆವಹೂಡಿ, ಹಾಗೆ ಬರಬಹುದೆ ಎಂದೂ ಆಕ್ಷೇಪಿಸಿದಳು. ಕಾಟನಿಗೂ ಕೋಪಬಂದು, ಅವನ ನಾಲಿಗೆಯೂ ಚುರುಕಾಯಿತು. ಅನಂತರ, ರತ್ನಿಯೇ ಅಳುಕಿ, ಅವನನ್ನು ಸಮಾಧಾನ ಮಾಡಿ, ತಾನು ಮಹಾರಾಜನಿಗಾಗಿ ತಪಿಸುತ್ತಿರುವೆನೆಂದೂ ಅವನಿಲ್ಲದ ಅರಮನೆಯಲ್ಲಿ ಯಮನನ್ನೂ ಸಹ ಸೇರಿಸೆನೆಂದೂ ಕಪಟದ ಕಂಬನಿಗಳನ್ನು ಉದುರಿಸಿ, ಬಿನ್ನಾಣದ ಮಾತುಗಳನ್ನು ಆಡಿದಳು. ಕಾಟನು ಹೆಚ್ಚು ಮಾತಾಡದೆ, ಚೆಂಡನ್ನು ಕೊಟ್ಟುಕಳುಹಿಸಬೇಕೆಂದು, ಕೋರಿದನು. ಚೆಂಡನ್ನು ಕಳೆದುಕೊಂಡಿದ್ದನ್ನು ಕೇಳಿ ಬಹಳ ವ್ಯಥೆಪಟ್ಟವಳಂತೆ ನಟಿಸಿ, "ಬಾರಪ್ಪ ಕಾಟಣ್ಣ ರೋಗದಿ ನರಳುವಗೆ ಚೇಳು ಮುಟ್ಟಿ[ದ] ತೆರ ಬಂತು, ಹೋಗಿ ನೋಡು[ವ]ನೇಳು ಹೊರ ಪೌಳಿ ಶೃಂಗಾರದ ಜಾಜಿ ಮಲ್ಲಿಗೆಯ ವನದೊಳಗೆ" ಎಂದು ಹೇಳಿ ಅವನನ್ನೂ ಕರೆದುಕೊಂಡು ತೋಟಕ್ಕೆ ಬಂದಳು. ಚೆಂಡು ಎಲ್ಲಿಯೂ

ಕಾಣದಿರಲು " ಲೋಕದೊಳಪಕೀರ್ತಿ ಚೆಂಡು ಮಡಗಿದಳೆಂಬ ಮಾತ ಹೊತ್ತೆನು ಧ[ರ]ಣಿಯಿರಲು. ಎಲ್ಲಿ ಹೋಯಿತು ಕಾಣೆ ಇಲ್ಲಿಗೆ ದಣಿದೆನು, ಮಲ್ಲಿಕಾರ್ಜುನ ಶಿವಬಲ್ಲ. ಎಲ್ಲಿರಲು ಇನ್ನೊಮ್ಮೆ ಹುಡುಕಿ ಮಡಗುವೆ ಪೋಗಿ ಚೆಲ್ವ ರಾಮನ ಬರಹೇಳೊ" ಎಂದು ನುಡಿದಳು. "ವಾಸನೆಯ ಪರಿಮಳವು(ವ?) ನಾ[ಸಿ]ಕವು ತಿಳಿದವೊಲು" ಕಾಟನಿಗೆ ಆಕೆಯ ಮಾತಿನ ಅಂತರಾರ್ಥವು ಗೋಚರಿಸಿತು. ಅವಳಲ್ಲಿಯೇ ಚೆಂಡಿದೆಯೆಂದು ನಿಶ್ಚಯಿಸಿ "ಯಾಕಮ್ಮ ಈ ರವುಳಿ ನಿಮಗೆ" ಎಂದು ಪ್ರಶ್ನಿಸಿ, ಮಕ್ಕಳನ್ನು ಕಾಡದೆ ತನ್ನ ಕೈಯಲ್ಲಿಯೇ ಕೊಡಬೇಕೆಂದು ಕೋರಿದನು. ಆಕೆಯಾದರೋ ಸಮ್ಮತಿಸಲಿಲ್ಲ. "ಕೊಟ್ಟರೆ ನಾ ಜೇರೆ ಸತ್ಯವಂತಳೆ ನಿಮಗೆ ಕೆಟ್ಟವಳೆಂಬುದು ಬಿಡದು ; ತೊಟ್ಟಕಾರನು ಚೆಂಡ ಇಟ್ಟವನು ಬಾರದೆ ಕೊಟ್ಟೇನೆ ಹೋಗೊ ಕಾಟಣ್ಣ" ಎಂದಳು. ತಾಯಿ ಮಗನಿಗೆ ಮಾತಿಗೆ ಮಾತು ಬೆಳೆದು, ಪ್ರಕೋಪಕ್ಕೆ ತಿರುಗಿ, "ಕೊಡುವುದೊಳ್ಳಿತು ತಾಯಿ ಕಡೆಗಿವರ ಮೂಲದಲಿ ಕೆಡುಬುದ್ಧಿ" ಎಂಬುದಾಗಿ ಕಾಟನು ಕಿಡಿಕಿಡಿಯಾದನು. ಅಲ್ಲಿಗೂ ಆಕೆಅಳುಕದೆ "ಆಗಲಿ ಎಲೆ ಕಾಟ ಒಲ್ಲೆನೆಂದರೆ ಬಿಡದು. ಆನೆಯ ಹೊಡೆದು, ಅವುಡಲವ ಏರಲು ಉಳಿವನೆ ಕುಮಾರನ ಬರಹೇಳೊ, ಮುಖನೋಡಿ ಚೆಂಡ ಕೊಡುವೆನೋ" ಎಂದು ಖಂಡಿತೋಕ್ತಿಯನ್ನು ಆಡಿದಳು. "ಪಾಪಿ, ನಿನ್ನಯ ಮಾತ ಹಾಕು ಬೆಂಕಿಗೆ" ಎಂದು ಕಾಟನು ಕೆರಳಿ ಹಿಂತಿರುಗಿದನು. ರಾಮನನ್ನು ಕಂಡು "ಚಂದವಾಯಿತು ತಮ್ಮ ಚೆಂಡಿನಾಟವು ಸುಡಲಿ, ಬಂದುದು ವಿಧಿಗಾಲ ತಮಗೆ....ಇರುಳು ನೋಡಿದ ಬಾವಿ ಹಗಲುದುಂಬಿರುಯೆಂಬ ತಂನಾದು (ಬಂತಾದುದು?) ದೆಮ್ಮತಲೆಯೊಳಗೆ. ಪಡದಾಕೆ ಜ[ನ]ನಿಯು ಬರೆದು ಹೇಳಿದ ಲಿಖಿತ ತಲೆಮಾರಿ ಕಲ್ಲ ಹಾಯಿದೆವೋ. ಒಂಟೆ ಸೀನನು ಮಾರಿ ಆಡ ಬಂದರೆ ಎಮ್ಮ ಕಂಕಾಟ (ಕಂಟಕ?) ಬೆನ್ನೊಡನೆ ಬಂತು. ಮಂಟಿಯವಾಯಿತು ಎಮ್ಮ ಚೆಂಡಿನಾಟವು ಸುಡಲಿ ಉಂಟು ತೋರಿತು ಅಪಶಕುನ. ಹಸ್ತಪಾದವ ಪಿಡಿದು ವೃ(ಭೃ?)ತ್ಯನಂದದಿ ಕೇಳಿ, ಕತ್ತೆಸೂಳೆಯು ಕೊಡಳು" ಎಂದು ಕಣ್ಣೀರಿಟ್ಟನು. ರಾಮನು ಮನನೊಂದು "ದುಃಖವೇತಕೆ ಅಣ್ಣ ಮತ್ತೆ ಏನೆಂದಳು ಬಹಳ ಹೆಚ್ಚುಕಡಮೆಯ ವಚನಗಳ, ಸತ್ಯದಿ ನುಡಿ, ಅವಳ ಎತ್ತಿ ಮೂಗನು ಕೊರೆಸಿ, ಉಪ್ಪುಕಾರಗಳ ತುಂಬಿಸುವೆ" ಎಂದು ಕಾಟನಿಗೆ ಸಮಾಧಾನ ಹೇಳಿ ವಿಚಾರಿಸಿದನು. ಕಡೆಗೆ ಕಾಟನು "ಮಡಗಿ ಇರುವಳೊ ಚೆಂಡ ಹುಡುಗ ಮಿಂಡರ ಸೂಳೆ. ಪರವೆಂದು ಎನ್ನ ಆಡಿದಳೊ ಮಗ ನೀನು ಬಾರದೆ ಕೊಡೆನೆಂದೊ ಚೆಂಡನು ಆಕೆಯ ಬಗೆಯೆಂತು ಹರಬಲ್ಲ" ಎಂದು ವಿಷಯವನ್ನು ಸ್ಪಷ್ಟಪಡಿಸಿದನು. ರಾಮನು ಅಣ್ಣನನ್ನು ಸಂತೈಸಿ, "ಚಿಂತೆ ಬೇಡಣ್ಣಯ್ಯ ಭೇದಾಂತ್ರ ಮಾಡಲು ತಾಯಿ ನಮ್ಮಂತ ರಂಗವು ಬೈವುದು" ಎಂದು ಹೇಳಿ ತಾನೇ ಹೊರಡಲು ಸಿದ್ಧನಾದನು. ಪ್ರಧಾನಿಯ ಮಗನಾದ ನೀಲಕಂಠನು "ಹೊರಬೇ[ಡ] ನಿಂದ್ಯವ, ಅರಸಿಲ್ಲ ಮನೆಯೊಳಗೆ ತರಳೆಯರ ನಂಬುವುದು ಕಷ್ಟ" ಎಂದು ಎಚ್ಚರಿಸಿದನು. ರಾಮನು ಆ ಮಾತನ್ನು ಒಪ್ಪದೆ "ನೀಲಕಂಠನೆ ನಿನಗೆ ಏರಿಹುದೆ ಭ್ರಮೆ ಮರುಳು? ಬಾಡಾವೆ (?) ತಾಯಡಿಗೆ ಹೋಗೋ ದಾಯಾದಿ ಪರತಿಯೆ(?) ತಂದೀಗೆ ಬಂದಳು ಆಡುವರೆ ಅನ್ಯಾಯ ನುಡಿಯು" ಎಂದನು. ನೀಲಕಂಠನು ಅಷ್ಟಕ್ಕೇ ಸುಮ್ಮನಾಗಲಿಲ್ಲ "ಹಿಂದೆ ಸಾರಂಗನ ಪ್ರಾರಂಬ(ಬ್ಧ?)ವ ಕೇಳ್ದರಿಯಿರೆ ಬಂದ ಅಪಕೀರ್ತಿ ಧರೆಯೊಳಗೆ ? ರಂಭೆ ಊರ್ವಶಿಯರು ಪಾರ್ಥಗೆ ದೃಷ್ಟಿಯನಿಟ್ಟು ಸಿಖಕಂಡಿ (ಶಿಖಂಡಿ?) ಯಾದುದು ಅದೆ ಮೂಲ" ಎಂಬುದಾಗಿ ಹಳೆಯ ಘಟನೆಗಳನ್ನು ಉದಾಹರಿಸಿ, "ತರಬಹುದು ಚೆಂಡನು ಅರಸು ಊರಿಗೆ ಬರಲಿ" ಎಂದು ಹಿತೋಕ್ತಿಯನ್ನು ಹೇಳಿದನು. ನಿಷ್ಕಪಟಿಯಾದ ರಾಮನು "ಒಳ್ಳೆಯ ಪತಿವ್ರತೆಯು ಸೂಳೆಗೇರಿಯೊಳಿರಲು ತನ್ನ ವ್ರತಗೆಟ್ಟು ಬಾಳುವಳೆ" ಎಂಬುದಾಗಿ ತನ್ನ ಅಭಿಪ್ರಾಯವನ್ನು ಮಂಡಿಸಿ "ಎಂದಿಗಿಲ್ಲದ ಮಾತ ತಂದೆಯೊಡನೆ ಪೇಳೆ, ಚೇಯೆಂದು ನಾಲಿಗೆಯ ಸೀಳಿಸದೆ? ಕಂಡು ಆಡಲು ಕಷ್ಟ, ಕಾಣದೆ ನುಡಿದವರಿಗೆ ಹಂದಿಯ ಜಲ್ಮ ಭವಭವದಿ" ಎಂದು ಹೇಳಿದನು. ಕಡೆಗೆ, "ತಾಯ ಸೇರಿದ ಚೆಂಡು ತರದೆ ಹೆದರಿದರೆಂದು ಆಡರೆ ಜನರು ಮನ್ನೆಯ[ರು]? ಕೂಡಿದ ಜ[ನ]ಸ್ತೋಮ ಹೋದ ಬಳಿಕ ನಾವು ಆಡಲು ತಂದು ಪಾಲಿಸುವೆ (ಫಲವೇನು?)" ಎಂದನು. ನೀಲಕಂಠನೂ ಅಸಹಾಯಕನಾದನು. ರಾಮನು ತನ್ನ

ಶೃಂಗಾರವನ್ನೆಲ್ಲ ತೆಗೆದಿಟ್ಟು, ಮಲಿನ ವಸ್ತ್ರವನ್ನು ಧರಿಸಿ, ಪರನಾರಿ ಸಹೋದರನೆಂಬ ಬಿರುದನ್ನು ಹೊತ್ತು, ದೇವರನ್ನು ಪ್ರಾರ್ಥಿಸಿ ತಾಯಮನೆಗೆ ತೆರಳಿದನು. ಆತನ ಬೆನ್ನಹಿಂದೆಯೇ ಧರ್ಮದೇವತೆಯೂ ಅನುಸರಿಸಿದಳು.

ಕುಮಾರರಾಮನು ರತ್ನಿಯ ಮನೆಗೆ ಬರಲು, ಅಲ್ಲಿದ್ದ ಗಿಳಿಗಳು[1] ಅವನಿಗೆ ಎಚ್ಚರಿಕೆಯ ಮಾತುಗಳನ್ನು ಆಡಿದುವು. ರಾಮನು ಅವುಗಳ ಮಾತಿಗೆ ನಕ್ಕು ಮುಂದುವರಿದನು. ರಾಮನನ್ನು ಕಂಡಕೂಡಲೆ ಸಂಗಿ ಬಂದು ತನ್ನ ಒಡತಿಗೆ ತಿಳಿಸಿದಳು. ಆ ಮಾತು ಕಿವಿಗೆ ಬಿದ್ದಕೂಡಲೆ ಆಕೆ "ನಿಜವೇನೆ ಸಂಗಾಯಿ! ನೀಲವರ್ಣನ ಸುತನು ಬರುವುದು ನಿಶ್ಚಯದಿ ಎನಗೆ!" ಎಂಬುದಾಗಿ ಹಿಗ್ಗಿದಳು. "ಬಳಲಿದ ಪೈರಿಗೆ ಜಲವೃಷ್ಟಿ ಸುರಿದಂತೆ," ಪದ್ಮದ ಅರಳಿನಂತೆ ಕಳೆಯೇರಿದಳು. ರಾಮನು ಸಂಗಿಯನ್ನು ಕಂಡು ಮೊದಲು ಗದರಿಸಿಕೊಂಡನು. ಅನಂತರ, ನೇರವಾಗಿ ತಾಯಿಯ ಬಳಿಗೆ ಹೋಗಿ "ಹರಿಯಮ್ಮಗೆ ವನಿತೆಯಿಮ್ಮಡಿಯೆಂದು" ಪಾದಗಳಿಗೆ ನಮಸ್ಕರಿಸಿದನು. ರತ್ನಿ ಕ್ಷಣಕಾಲ ಪರವಶಳಾಗಿದ್ದು, ಬಳಿಕ, ರಾಮನಿಗೆ ಸುಗಂಧದ್ರವ್ಯಾದಿಗಳನ್ನು ಕೊಟ್ಟು "ಸಿಟ್ಟುಮಾಡಳೆ ಅಕ್ಕ ಚಿಕ್ಕಮ್ಮನ ಮನೆಯೊಳು ಬಟ್ಟೇಗೆ ಗತಿ ಇಲ್ಲವೆಂದು" ಎಂದು ಉಪಚಾರೋಕ್ತಿಯನ್ನಾಡಿ ಸತ್ಕರಿಸಿದಳು. ರತ್ನಿಯ ಸವಿನುಡಿಗಳನ್ನು ಸತ್ಯವೆಂದೇ ಭ್ರಮಿಸಿ ರಾಮನು ಹಿಗ್ಗಿ, "ಮುಂದುಗಾಣದೆ ಜನರು ಮನಬಂದ ರೀತಿಗೆ ನುಡಿದು ಯಮಗೊಂಡಕ್ಕೆ ಗುರಿಯಾಗುತಿಹನು(ರು?)" ಎಂದುಕೊಂಡನು. ರತ್ನಿಗಾದರೋ ಉಭಯಸಂಕಟ. "ಬಾಯೊಳು ಬಾಲರೆಂದು ಪ್ರಿಯದಿ ಕಾಣುವಳು, ದೇಹದಿ ಕರಗಿ ಕಾತರದಿ ಯಮಗಾಯದೆಗೆಡುವ ಮಾರನಟ್ಟುಳಿ ಮುರಿದು ಪೊಗಲಿರುವ ಕುಚವ ಮುಚ್ಚುವನು(ಳು?)." ಅವನನ್ನು ಹೇಗೆ ಒಲಿಸಿಕೊಳ್ಳುವುದೆಂದು ಚಿಂತಿಸಿದಳು. ಅನಂತರ ಬಂದ ಕಾರ್ಯವೇನೆಂದು ಕೇಳಿದಳು. ರಾಮನು ಚೆಂಡಿಗಾಗಿ ಬಂದಿರುವೆನೆಂದೂ, ಕಾಟನನ್ನೆ ಕಳುಹಿಸಲು, ನಾನೇ ಬರಬೇಕೆಂದು ತಾವು ತಿಳಿಸಲು ಬಂದೆನೆಂದೂ ಹೇಳಿದನು. ರತ್ನಾಜಿ "ಕಾಟಗೆ ಎಳ್ಳನಿತು ವಿವೇಕವಿಲ್ಲವೊ ಪುತ್ರ ಮಾತಿನೊಳೆನ್ನ ಗರ್ಜಿಸಿದ" ಎಂದು ಅಪವಾದವನ್ನು ಹೊರಿಸಿ, ಮುತ್ತಿನ ಚೆಂಡು ಕಂಪಿಲನು ಮಲಗುವ ಸೆಜ್ಜೆಯ ಗೃಹದಲ್ಲಿರುವುದೆಂದೂ, ಹೋಗಿ ತೆಗೆದುಕೊಳ್ಳಬಹುದೆಂದೂ ತಿಳಿಸಿದಳು. ರಾಮನು ಮಲಗುವ ಮನೆಗೆ ಹೋದದ್ದೇ ತಡ, ತಾನೂ ಹೋಗಿ ಬಾಗಿಲನ್ನು ಹಾಕಿಕೊಂಡಳು. ಚಂದ್ರಬಿಂಬವನ್ನು ರಾಹು ಹಿಡಿವಂತೆ ರಾಮನ ಮುಂಜೆರಗನ್ನು ಹಿಡಿದುಕೊಂಡಳು. ರಾಮನು ಮಾತೃಸಮಾನಳಾದ ಆಕೆ ಹಾಗೆ ವರ್ತಿಸುವುದು ಉಚಿತವಲ್ಲವೆಂದು ಪರಿಪರಿಯಾಗಿ ಬೇಡಿಕೊಂಡನು. "ಅತಿ ಮಾತು ಬೇಡವೆ ಬಿಡು ಮುಂದಲೆಯನು ಸುತನಲ್ಲವೆ ನಾ ನಿನಗೆ, ಸ(ಪ?)ತಿಯಲ್ಲವೆ ನಮ್ಮತಂದೆ ನಿನಗೆ, ಅತಿಮರವ್ಯಾಕೆ ಚಿಕ್ಕಮ್ಮ?....ಹರಿಯಮ್ಮ ಬೇರಲ್ಲ ಚಿಕ್ಕಮ್ಮ ನೀವೀಗ ಹಿರಿಯರು ನೀವು ಉತ್ತಮರೆ. ಸಿರಿಯುಳ್ಳ ರೂಪಾದರೆ ನಿನ್ನಮನಸಿಗೆ ಸರಸಬೇಡವೆ ಚಿಕ್ಕಮ್ಮ" ಎಂದು ಮತ್ತೆ ಮತ್ತೆ ವಿನಂತಿಮಾಡಿಕೊಂಡನು. ಕಾಮಾತುರೆಯಾದ ಆಕೆ "ಚಿಕ್ಕಂದು ಮೊದಲು ನಿನಗೆ ತಕ್ಕಂತ ಹೆಣ್ಣನು ಸೋಕಿ(?)ಕಂಪಿಲ ತನಗೆ ತಂದ. ಚಿಕ್ಕಮ್ಮನಲ್ಲವೊ ನಿನಗೆ ಸೋದರ ಅತ್ತೆಯ ಮಗಳು ಕಾಣಯ್ಯ" ಎಂದು ತನ್ನ ನಡತೆಯನ್ನೇ ಸಮರ್ಥಿಸಿಕೊಂಡಳು. ಈ ರೀತಿ ಇಬ್ಬರಿಗೂ ವಾಗ್ವಾದವಾಯಿತು. "ಆಸೆಬಟ್ಟವಳನು ನಿರಾಸೆ ಮಾಡಲುಬೇಡ, ಶ್ಯಾನೆ ಮೂರ್ಖದಿ ಬಂದವಳಲ್ಲ, ಮುನಿಸುಬೇಡವೊ ನುಂದುಗೆಟ್ಟೆನು ವಿರಹದಲಿ ಮನಸಿಜರೂಪ ನೀ ಕಾಯೊ" ಎಂದು ಅಂಗಲಾಚಿದಳು. ರಾಮನು "ತಂದೆಯೇರುವ ಅಂದಣ ಪಲ್ಲಕ್ಕಿಯ ಕಂದರೇರುವರೆ ಧರೆಯೊಳಗೆ" ಎಂದು ಉತ್ತರವಿತ್ತು ನಿರಾಕರಿಸಿದನು. ಅನಂತರ ಕಂಪಿಲನ ಮುದಿತನಕ್ಕೆ ಹೇಸಿ ತನಗಿರುವ ಅನಾದರವನ್ನೂ ವ್ಯಕ್ತಪಡಿಸಿದಳು. "ಭೋಗದ ಸತಿಯರ್ಗೆ ವಾವೆ

---

1. ಈ ಗಿಳಿಗಳು ಕುಮಾರರಾಮನು ಹಳೆಯಬೀಡಿನ ಬಲ್ಲಾಳನಿಂದ ಕಾಣಿಕೆಯಾಗಿ ಪಡೆದಿದ್ದು ಎಂದು ಹೇಳಿದೆ. "ಹಳೆಯಬೀಡಿನೊಳು ಹೋಗಿ ಕೈಕಾಣಿಕೆ ತಂದ ರಾಮ ॥" (xii, ೧೧೧)

ವರ್ತನೆಯಿಲ್ಲ ಸಾಗರದ ಪರಿ ನೀರು ಕೇಳು" ಎಂದಳು. ರಾಮನು ತಾನು ಪರನಾರಿ ಸೋದರನೆಂದೂ, ಪರಸತಿಗೆ ಭಯಕಾಂತನೆಂದೂ, "ಬ್ರಹ್ಮಮಾಲೆಯ ಪಿಡಿದು ಬಂದ ಸತಿಯರು ಹೊರತು ವರಚನ್ನಿಯರಾಗೆ ಧರೆಯೊಳಗೆ ಪನ್ನಂಗಧರನಾಣೆ ಪುಸಿಯನಾಡುವನಲ್ಲ ಹಡೆದಮ್ಮಗೆ ಸಮನಾ (ಸಮಾನ?)ವೆಂಬೆ ತಾಯೆ" ಎಂದು ತನ್ನ ಸಂಕಲ್ಪವನ್ನೂ ಸ್ಪಷ್ಟಪಡಿಸಿದನು. ರತ್ನಿ ರಾಮನನ್ನು ಮಾತಿನಲ್ಲಿ ಮರುಳುಮಾಡಲಾರದೆ, ಕಾರ್ಯತಃ ಚಿತ್ತವಿಕಾರದಿಂದ ಮುಂದುವರಿಯಲು "ಸಿಡಿಲಿನ ಮರಿಯಂತೆ ಕೋಪಡರಿ ಚೆನ್ನಿಗರಾಮ ಒಗೆದನು ಕೊನೆರೆಟ್ಟೆ ಹಿಡಿದು." ರತ್ನಿ ಮೂರ್ಛಿತಳಾಗಿ, ಚೇತರಿಸಿಕೊಂಡು "ಮಾರಿಯಂದದಿ ಕುಳಿತು ನುಡಿದಳು ರಾಮ ಕೇಳೆನುತ." ಸ್ತ್ರೀಯರನ್ನು ನಿರಾಕರಿಸಿ ಪಾಡುಪಟ್ಟ ಅರ್ಜುನ, ಸಾರಂಗಧರ, ಚೋರ ಚಿಕ್ಕಯ್ಯ, ಕೀಚಕ(?), ಹರಿಶ್ಚಂದ್ರ[1], ಸೂರ್ಯಾಂಗಮುನಿ[2] ಮುಂತಾದವರ ಉದಾಹರಣೆಗಳನ್ನು ಕೊಟ್ಟಳು. "ಹೊರಬೇಡ ಅಪಕೀರ್ತಿ ಕಿರಿತಾಯಿ ಕೈ, ಮಯ್ಯ ಪಿಡಿದನು ಎನಿಸಿ ತಲೆಯ ತರಿಸುವೆನು" ಎಂದು ಬೆದರಿಸಿದಳು. ತಾಯಿ ಮಕ್ಕಳ ಈ ಕಲಹವನ್ನು ಕಂಡು ಶಿವಪಾರ್ವತಿಯರೂ ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡು, ಕುಮಾರರಾಮನನ್ನು ಮೆಚ್ಚಿದರು. ಅಂಥವನು ಪ್ರಮಥನಾಗಲು ಅರ್ಹನೆಂದು ಗಿರಿಜೆ ಹೇಳಲು, ಈಶ್ವರನು "ವಲ್ಲಭೆ ಲಾಲಿಸು ತೀರಿಲ್ಲವೆ ಲಿಪಿ ಮುಂದೆ ಡಿಳ್ಳಿಯ ಕಾರ್ಯಗಳ ಫಲಪದವ." "ಹರನ ವರದೊಳು ಬಂದ. ಜನಿಸಿ ಮರ್ತ್ಯಕೆ ಬರಲು ಕಳೆದನು ಮೊದಲ ಕಂಟಕವ. ಪಡೆ ಮೂರು ಕ್ಷೋಣಿಯ ಸದೆಬಡಿದು ಸತಿಯಿಂದ ತನುವಳಿದು ತ(ನ?)ಮ್ಮ ಕಾಂಬುವನು" ಎಂದು ಭವಿಷ್ಯವನ್ನೂ ಸೂಚಿಸಿದನು. ರಾಮನು ಚೆಂಡನ್ನು ತರದೆ ಹಾಗೆಯೆ ಹಿಂತಿರುಗಿದನು. ಕಾಟನಿಗೆ ಭಯವಾಯಿತು. ಉಳಿದ ಮನ್ನೆಯರು ತಾವು ಹೋಗಿ ತರುವುದಾಗಿ ತವಕಪಟ್ಟರು. ರಾಮನು ಎಲ್ಲರಿಗೂ ಸಮಾಧಾನ ಹೇಳಿ, ಉಡುಗೊರೆಗಳನ್ನು ಕೊಟ್ಟುಕಳುಹಿಸಿದನು. ಚಿಕ್ಕಮ್ಮನಿಂದ ತನಗೆ ಕಂಟಕ ತಪ್ಪದೆಂದು ರಾಮನು ಮರುಗಲಾರಂಭಿಸಿದನು. ಅವನಿಗೆ ಎಲ್ಲರೂ ಭರವಸೆಯಿತ್ತರು. ರಾಮನು "ನಡೆದೆಡೆಯು ಯಿರುವನಕ ಮೃಡ ಬೇರೆ ಕೊಲ್ಲನು, ದೃಢವ ಬಲ್ಲಳು ಧರ್ಮದೇವತೆಯು" ಎಂದು ನೆಚ್ಚಿ, ಕತ್ತಲೆಯಾಗಲು ನೀಲಕಂಠ, ಲಿಂಗ, ಸಂಗಯ್ಯ, ಕಾಟಣ್ಣರೊಂದಿಗೆ ಕೂಡಿ ತನ್ನ ಅರಮನೆಗೆ ತೆರಳಿದನು.

ಬೆಳಗಾದ ಕೂಡಲೆ ರತ್ನಿ ಚೇತರಿಸಿಕೊಂಡು, ರಾಮನನ್ನು ಕಾಣದೆ, ತನ್ನ ಮಂದಬುದ್ಧಿಗೆ ತಾನೇ ನೊಂದುಕೊಂಡಳು. ಕೋಪೋದ್ದೀಪ್ತಳಾಗಿ "ಮಿಕ್ಕ ಮಾತಿಗೆ ಇನ್ನು ದುಃಖ ಮಾಡಲಿ ಸಲ್ಲ, ನಕ್ಕಾರು ಎನ್ನ ಸರಿಯವರು. ಸಿಕ್ಕದೆ ಹೋದವನ ಸಿರವ ತರಿಸಿ(ಸ)ದ ಮೇಲೆ ಹೊತ್ತ ಮೊಲೆಗಳು ಮೆಕ್ಕೇ ಕಾಯಿ" ಎಂದು ಕಿಡಿಕಿಡಿಯಾಗಿ ಬಹಳ ಉಗ್ರವಾದ ಶಪಥವನ್ನೇ ಮಾಡಿದಳು. ಸಂಗಿಯನ್ನು ಕುರಿತು ತನ್ನ ದುಃಖ

---

1. ಸತ್ಯವಲ್ಲವೊ ರಾಮ ಸತಿಯಾರಿಗೊಲಿಯದೆ ಕೆಟ್ಟೋದನರಿ ಆ ಪಾರ್ಥ।
ದೃಷ್ಟಿ ಇಡಲು ಹಿ[ಂ]ನೇ ದೇವೇಂದ್ರನ ಸತಿ[ಯಿ]ಂದ ತೊಟ್ಟನು ಬಳೆಯ ಶಾಪದಲಿ ॥
ಕೊಂದು ಹೋಗೆಲೊ ರಾಮ ತುಂಬಿತು ವಿಧಿ ನಿನಗೆ ಹಿಂದಣಾಗಮ ಕೇಳ್ದರಿಯ।
ಗಂಡನಿಲ್ಲದ ಮನಿಗೆ ಬಂದ ತಪ್ಪಲಿ ನಿನಗೆ ಸಾರಂಗಧರನ ತೆರ ಮಾಳ್ಪೆ ॥
ಬಾಲೆಯರ ಕಲಹದಿ ಮುನಿಯಾಗಲುಳಿವನೆ ಕೇಳಲಿಲ್ಲವೆ ಕಲ್ಯಾಣಪುರದಿ।
ಚೋರಚಿಕ್ಕಯ್ಯನ ತಳವಾರನ ಸತಿ ಭ್ರಮಿಸಿ ಜಾರಿಹೋದಲ್ಲಿ ತಲೆಯನರಸಿದಳು ॥
ಹೆಣ್ಣುಗಳ ಹಗೆಯೊಳು ದಾನವರು ಕೆಟ್ಟರು ಕೇಳು ಮುನ್ನ ಧರ್ಮರಾಯನ ಸತಿಯಿಂದ।
ಮಣ್ಣು ಕೂಡಿದ ರಾಮ(?) ಉತ್ರಕುಮಾರತಿಯು ಅಣ್ಣನ ಮಾವ ಭೀಮನಲಿ ॥
ಮೂರುಶಂಖನಾಳ್ವನ ಕುಮಾರನ ಕೇಳ್ದರಿಯ ಮುನಿರಾಯ ನಿರ್ಮಿಸಿದಂಥ ಸತಿಯ।
ತಾ ಒಲ್ಲೆ ಪರಸತಿಯ ದ್ರೋಹವೆನಲು ನಮಗೆ ಸುಡುಗಾಡ ನಾ(ಕಾ?)ಯದನು ನೀನರಿಯಾ ॥

(xii, ೧೭೧–೧೭೫)

2. ಮುಂದೆ ನೋಡಿ : ಉಪಕಥೆ ೪.

ವನ್ನೆಲ್ಲ ನಿವೇದಿಸಿಕೊಂಡು, "ಕಳ್ಳ ದುಃಖವ ಮಾಡಿ ಕಂಪಿಲಗೆ ಛಲ ಬರುವಂತೆ ಬಣ್ಣಗೆಡಿಸಬೇಕು ಭಾವ ಗಳ." "ನಾನಾ ಠವುಳಿಯ ಮಾಡಿ ಪ್ರಾಣ ಕೊಲ್ಲದೆ ಬಿಡಲು ಮೇಲಿಹುದು ಬಡಿಗಲ್ಲು ತನಗೆ. ತಾ ಮುಂದು ವರಿಯಲು ತೀರುವುದು ಹಗೆತನ, ನಾಗರತಿಭಾರ(?) ತಪ್ಪುವುದು" ಎಂದು ಹೇಳಿ, ಅಂತೆಯೇ ಆಟಕಟ್ಟಲು ಅನುವಾದಳು. ಆಭರಣಗಳನ್ನೆಲ್ಲ ಕಿತ್ತು ಬಿಸುಟಳು. ಮೈಮೇಲೆ ಗಾಯಮಾಡಿಕೊಂಡಳು. ಮಂಡೆಯನ್ನು ಬಿಚ್ಚಿ ಕೆದರಿಕೊಂಡಳು. ಬಾಡಿ ಬಸವಳಿದವಳಂತೆ "ಹರಣ ನೀಗುವಳಂತೆ ಕೊರಗುತ ಮಂಚದಲಿ" ಉರಿಮಾರಿಯಂತೆ ಪವಡಿಸಿದಳು. "ರಾಯನ ಬಳಿಯಿಂದ ಆಳು ಬಂದರೆ ಸಂಗಿ ಹೇಳಮ್ಮ ಹರುಷದಿ(ವಿ?) ಲ್ಲೆಂದು" ಎಂದು ಸೂಚಿಸಿದಳು.

ಅತ್ತ, ಅರಣ್ಯದಲ್ಲಿ ಕಂಪಿಲನು ಬೇಟೆಯಾಡುತ್ತಿರಬೇಕಾದರೆ, ಮೊಲಕ್ಕೆ ಬೆದರಿ ನಾಯಿ ಓಡತೊಡಗಲು ರಾಜನು ಬೆರಗಾದನು. ಬೇಟೆಗೆ ಬಂದು ತಡಮಾಡಿದುದರಿಂದ ರತ್ನಿಗೆ ಏನು ಕೇಡು ಸಂಭವಿಸಿತೋ ಎಂದು ಶಂಕಿಸಿದನು. "ಸಾಯದೆ ಉಳಿಯಳು, ಕೋಣನಾದೆನು ನಾನು, ಪ್ರಾಣಮಿಕ್ಕಿ ಮೋಹತಕ(?)ಹೇಳಿದ ಅಪರಾಧಕೊಟ್ಟು ದೈನ್ಯಗಳಿಂದ ಪಾಲಿಸೆನುತ ಪೇಳುವೆನು." "ಗಾಢ ಮುಸುಕಿದ ಬೇಂಟೆ ರಾಣಿ ರತ್ನಿಯ ನೆನೆದು ಜೀವದ ಮೃಗವನ್ನು ಹಿಡಿಸಿ ಪ್ರಾಣದ ಕಾಂತೆಗೆ ಕೈಗಾಣಿಕೆಯಿವಕೊಟ್ಟು ಮಾನುನಿಯ ಮನಸ ತಿಳುಹುವೆನು" ಎಂದುಕೊಂಡನು. ಕೂಡಲೆ, ಬೇಟೆ ಮುಗಿಸಿಕೊಂಡು ಊರಿನ ಕಡೆಗೆ ತಿರುಗಿದನು. ಅರಮನೆಗೆ ಬಂದ ರಾಜ ನನ್ನು ಹರಿಹರದೇವಿ, ಕಮಲಾಜಿ, ತಿಮ್ಮರಸಿಯರು ಆರತಿ ಎತ್ತಿ ಸ್ವಾಗತಿಸಿದರು. ಕಂಪಿಲನಾದರೋ "ರಾಣಿಯ ರೊಳಗೆಲ್ಲ ಕಾಣದೆ ತನ್ನಯ ಪ್ರಾಣಪದಕ ರತ್ನಿಯನು ಏ[ಣಾ]ಂಕಧರ ಬಲ್ಲ ಯಾವ ಮೂಲದ ಸಿಟ್ಟೋ, ತಾನೀಗ ತಡೆದ ದುಗುಡದ ಸಿಟ್ಟೋ" ಎಂದು ಪರಿತಪಿಸಿದನು. ಸಂಗಿಯನ್ನು ಕರೆದು ಕೇಳಲು, ಆಕೆ "ಕೊರ ಡಾಗಿ ಇರುವಳು ಚಂಡ ಮನ್ಮಥನ ಬಾಧೆಯಲಿ" ಎಂದು ತಿಳಿಸಿದಳು. ರಾಜನನ್ನೇ ನಿರೀಕ್ಷಿಸುತ್ತಿರುವಳೆಂದೂ, ಸಾವಕಾಶ ಮಾಡಿದರೆ ಆಕೆ ಸಾಯುವಳೆಂದೂ ಮಾತು ಸೇರಿಸಿದಳು. ರಾಜನಿಗೆ ಹೃದಯ ತಲ್ಲಣಿಸಿತು. ಆಕೆ ಸತ್ತರೆ ತನಗೆ ಗತಿಯೇನೆಂದು ಹೊರಟನು. ಆತನು ರತ್ನಿಯ ಅರಮನೆಯನ್ನು ಪ್ರವೇಶಿಸುತ್ತಿರಬೇಕಾದರೆ ಹಲ್ಲಿ ಅಪಶಕುನವನ್ನು ನುಡಿಯಿತು.

ಕಂಪಿಲನು ತನ್ನ ರತ್ನಿ ಅಸ್ತವ್ಯಸ್ತಳಾಗಿ ಸೆಜ್ಜೆಯ ಗೃಹದಲ್ಲಿ ಬಿದ್ದಿರುವುದನ್ನು ಕಂಡು ಹೊಟ್ಟೆಯಲ್ಲಿ ಉರಿ ಬಿದ್ದಂತಾಗಿ, ಕಣ್ಣೀರನ್ನು ಸುರಿಸಿದನು. ತಾನು ತಡವಾಗಿ ಬಂದುದಕ್ಕೆ ದೈನ್ಯದಿಂದ ಬೇಡಿಕೊಂಡನು. "ನಾರಿ ನೀನಳಿಯಲು ತಾ ಬೇರೆ ಉಳಿವನೆ, ಜೋಡಿನೊಳಗೆ ಸಾಗಿ ಬರುವೆ, ಕೋಗಿಲೆ ಸ್ವರದವಳೆ ಬಾಯಿದೆರೆದು ನುಡಿಯೆ, ರೋಗವೆ ಮುನಿಸಿನ ಬಗೆಯೆ" ಎಂದು ಕೇಳಿಕೊಂಡನು. ರತ್ನಿ ದುಃಖವನ್ನು ನಟಿಸುತ್ತ ಆಕ್ಷೇಪಿಸಿ ದಳು. ರಾಜನಿಗಾದರೋ ನಿಮಿಷ ನಿಮಿಷಕ್ಕೂ ದೈನ್ಯತೆ ಹೆಚ್ಚಿತು. ಗಂಡನ ಮನಸ್ಸನ್ನು ಅಳೆದು ನೋಡಿ, ತನ್ನ ಕಾರ್ಯಸಾಧನೆಗೆ ಹದವಾಗಿದೆಯೆಂದು ರತ್ನಿ ಬಗೆದಳು. ಆಕೆ ಬಹಳ ಪ್ರಯಾಸದಿಂದ ಎದ್ದು ಕುಳಿತು ಕೊಳ್ಳಲು ರಾಜನಿಗೆ ಹೋದ ಜೀವ ಬಂದಂತಾಯಿತು. ಆಕೆಯನ್ನು ಮುದ್ದಿಸುತ್ತ, ಆಕೆಯ ದುಃಸ್ಥಿತಿಗೆ ಕಾರಣವೇನೆಂದೂ, ರೋಗವೋ, ಇಲ್ಲವೇ ಸವತಿಯರ ಕದನವೋ ಎಂದೂ ಪರಿಪರಿಯಾಗಿ ವಿಚಾರಿಸುತ್ತ, ಆಕೆಯ ಸಲುವಾಗಿ ತಾನು ಏನನ್ನು ಮಾಡಲೂ ಸಿದ್ಧನಾಗಿರುವನೆಂದೂ ವಾಗ್ದಾನ ಮಾಡಿದನು. ರತ್ನಿ ಸಾವ ಧಾನವಾಗಿ "ಹೇಳುವುದಿನ್ನೇನು ಬೇರೆ ಬಲ್ಲವರೊಡನೆ, ಕಾಣದೆ ಬಲ್ಲರಿಗೆ ತಲೆಯು? ಮೇಗಯ್ಯ ಹುಣ್ಣಿಗೆ ನೋಡುವರೆ ಕನ್ನಡಿಯ? ನೀವಾಡಿದ ಮಾತು ನಿಜತರವು" ಎಂದು ಪೀಠಿಕೆ ಹಾಕಿದಳು. ಮುಂದೆ "ಒಡೆದರೆ ಮನೆ ಹಾಳು, ಮಡಗಿದರೆ ಯಮಬಾಧೆ, ನುಡಿಯದಿರಲು ತಾನು ಕಳ್ಳೆ, ಕಡನೇನ ಮಾಡುವದು(?) ಕಂದಗಳ ಮೇಲೊಂದು ಮುದುಕನ ಕೂಡುವುದು ಸುಡಲಿ"; "ಮಗನ ಜೀವಕ್ಕೆ ಮುಂಡೆ ಹಗೆಯಾದೆ ಎನುತಲಿ ಉಗಿವರು ಸರಿಯ ಸವತಿಯರು. ರಮಣನ ಹಿತವೇನು ಮಗನ ಕೊಲ್ಲಲಿಯೆಂದು ನಗೆ ಸರಸ ಮಾಡೆ ನಾಚಿಕೆಯು" ಎಂದು ಕೊಂಕುಮಾತಾಡಿದಳು. ಅನಂತರ, ಬೇಟೆಗೆ ಹೋಗದ ರಾಮನು, ಚೆಂಡಿನಾಟದ ನೆವ ಹೂಡಿ,

ತನ್ನ ಮನೆಗೆ ಬಂದು, ತನ್ನ ಮಾನಭಂಗವನ್ನು ಮಾಡಿದನೆಂದೂ, "ನಗುವ ಸವತೆರು(ರ ?) ಮುಂದೆ ಎಡಹಿದ ತೆರನಾಯ್ತು" ಎಂದೂ ತಾನು ಇನ್ನು ಬದುಕಿರಲಾರೆನೆಂದೂ, ಆ ವಿಷಯವನ್ನೆಲ್ಲ ರಾಜನಿಗೆ ಸ್ಪಷ್ಟ ಪಡಿಸಿ ಸಾಯಬೇಕೆಂದು ಆವರೆಗೆ ಪ್ರಾಣವನ್ನು ಹಿಡಿದಿಟ್ಟಿದ್ದೆನೆಂದೂ ತಡೆಬಡೆಯಿಲ್ಲದೆ ಒಂದೇ ಸಮನೆ ನುಡಿದಳು. ಅನಿರೀಕ್ಷಿತವಾದ ಆ ಮಾತುಗಳನ್ನು ಕೇಳಿ ಕಂಪಿಲನು ಸ್ತಂಭೀಭೂತನಾದನು. ಅದಕ್ಕೂ ಆಕೆ ಹಂಗಿಸಿದಳು. ಬಳಿಕ, ತನ್ನ ಮಾತುಗಳಿಗೆ ಸಾಕ್ಷಿಯಾಗಿ, ಮೈಮೇಲಿನ ಗಾಯಗಳನ್ನೂ, ಮಂಚದಲ್ಲಿದ್ದ ಚೆಂಡನ್ನೂ ತೋರಿಸಿದಳು. ಕಡೆಗೆ "ಕಂದನ ಕೊಂದರೆ ಭೂಮಂಡಲದಿ ಅಪಕೀರ್ತಿ, ಇಂದೆನ್ನ ನೀ ಕೊಲ್ಲು ರಾಯ. ರಂಡೆ ನಾನಳಿಯಲು ನಾಲ್ವರು ನಿನಗುಂಟು. ಹೇಗೆಯಿರಲಿ ಗರತಿಯೆಂದೆನುತ" "ರಾಮನ ಮುಖ ನೋಡಿ ನಾನು ಬಾಳುವಳಲ್ಲ, ಮೇಲವನ ಕೊಂದು ತಲೆ ಬರಲು ಪ್ರಾಣ ಉಳಿದರೆ ಕಾಣೆ, ಸಾರಿದೆ ಕಡೆ ಮಾತು ನೋವೆನು ಎರಡು ಘಳಿಗೆಯಲಿ" ಎಂಬುದಾಗಿ ಚುಚ್ಚುನುಡಿಗಳನ್ನೇ ಆಡಿದಳು. ಕಂಪಿಲನಿಗೆ ಇನ್ನು ಸುಮ್ಮನಿರಲಾಗಲಿಲ್ಲ. "ಸಾಯಬೇಡವೆ ನಿನ್ನ ಜೀವಕ್ಕೆ ಬಾಲನ ಆಹುತಿಯ ಕೊಡುವೆ ನಿಮಿಷದಲಿ" ಎಂದು ಹೇಳಿದನು. ಅಲ್ಲಿಗೂ ರತ್ನಿ ಸುಮ್ಮನಾಗದೆ. ಮತ್ತೆ ಮತ್ತೆ ಕೆಣಕುನುಡಿಗಳನ್ನೇ ಆಡಿದಳು. "ಊರು ಸೊ(ಸೂ ?)ರೋಗಲು ಅಗಸೆ ಹಾಕಿದ ಗಾದೆ, ತೀರಿ,ಹೋಯಿತು ಕೆಲಸ ನಿನ್ನೆ, ಕಾ(ತಾ ?)ಯ ತಬ್ಬಿದ ಮೂಳ ತಂದೆ ಕೊಳ್ಳದೆ ಬಿಡನು. ಸಾಯವೇ(ವುದೇ ?)ತಕೆ ಎನಗಾಗಿ" "ಮಗನು ಮಾಡಿದ ಕರ್ಮ ಜನರು ಕಾಣರು ರಾಯ, ಭುವನ ಕಾಣದು, ತಲೆಯ ಹೊಡೆಸಿ ಹೊರಬೇಡ ಅಪಕೀರ್ತಿ, ಹೊರ ಸೂಳೆ ತಾನಪ್ಪೆ, ತರಳಗೆ ಮಾಡೆ ತಣ್ಣಗಿಹುದು" ಎಂಬುದಾಗಿಯೂ, ತಾನು ಸಾಯಲು ಸಿದ್ಧವಾಗಿರುವುದಾಗಿಯೂ ನುಡಿದಳು. ಕಂಪಿಲನಿಗೆ ಆ ಮಾತುಗಳನ್ನು ಕೇಳಲಾಗಲಿಲ್ಲ. ಕೂಡಲೆ ಓಲಗಕ್ಕೆ ಬಂದು, ಭಂಡಾರಿ ಬುಕ್ಕನನ್ನು ಕರೆದು, ಮಂತ್ರಿಯನ್ನು ಕರೆತರುವಂತೆ ಕೊಟ್ಟು ಕಳುಹಿಸಿದನು.

## ಕಂಪಿಲನ ಅಪ್ಪಣೆ ಮತ್ತು ಬೈಚಪ್ಪನ ಬುದ್ಧಿವಂತಿಕೆ

ಭಂಡಾರಿ ಬುಕ್ಕನು ಅವಸರ ಅವಸರವಾಗಿ ಓಡಿ ಬಂದು ರಾಜಾಜ್ಞೆಯನ್ನು ಬೈಚಪ್ಪನಿಗೆ ತಿಳಿಸಿದನು. ಆತನು ಅಷ್ಟು ಅವಸರಕ್ಕೆ ಕಾರಣವೇನೆಂದು ವಿಚಾರಿಸಿದನು. ಬುಕ್ಕನು ತನಗೆ ಯಾವುದೂ ಸರಿಯಾಗಿ ತಿಳಿಯದೆಂದೂ, ಆದರೆ ರತ್ನಿಯಿಂದ ರಾಮನಿಗೆ ಏನೋ ವಿಪತ್ತು ಸಂಭವಿಸಿದಂತೆ ತೋರುವುದೆಂದೂ ಸೂಕ್ಷ್ಮವಾಗಿ ತಿಳಿಸಿದನು. ಬೈಚಪ್ಪನು ಮನಸ್ಸಿನಲ್ಲಿಯೇ ಗುರುಮುನಿಯ ಮಾತನ್ನು ನೆನೆಯುತ್ತ, ರಾಜನನ್ನು ಬಂದು ಕಂಡನು. ಮಂತ್ರಿ ತನ್ನನ್ನು ಕರೆಸಿದ ಕಾರಣವೇನೆಂದು ಕೇಳಲು, ರಾಜನು ಬಹಳ ಹೇಸಿದವನಾಗಿ, ರಾಮನು ಮಾಡಿದ ಅಚಾತುರ್ಯವನ್ನೆಲ್ಲ ಹೇಳಿ, ಮುಂದೆ ಏನು ಮಾಡುವುದೆಂದು ಪ್ರಶ್ನಿಸಿದನು. ಬೈಚಪ್ಪನಿಗಾದರೋ ರಾಮನು ಅಂಥ ಅಕಾರ್ಯವನ್ನು ಮಾಡಿರಲಾನೆಂದೇ ದೃಢವಾದ ನಂಬಿಕೆ. "ನಾರಿಯರ ಮನಸನು ಮೂದೇವರ(ರು ?) ತಿಳಿಯದು(ರು ?)" ಎಂದು ಹೇಳಿ, ವಿಜಯಸೇನನ ಮಗನಾದ ಜಯಸೇನನನ್ನು ತಾಯಿಯಾದವಳು ಕಾಮಿಸಿ, ಆತನಿಗೆ ಇತ್ತ ವಿಪತ್ಪರಂಪರೆಯ ಕಥೆಯನ್ನು ವಿಸ್ತಾರವಾಗಿಯೇ ನಿರೂಪಿಸಿದನು.[1] ಕಂಪಿಲನು ಮಂತ್ರಿಯ ಮಾತಿಗೆ ಸುಮ್ಮನಾಗದೆ ಬೈಚಪ್ಪನನ್ನು ರತ್ನಿಯ ಮನೆಗೆ ಕರೆದೊಯ್ದು ಆಕೆಗೆ ಆಗಿದ್ದ ಗಾಯ ಮೊದಲಾದುವುಗಳನ್ನು ತೋರಿಸಿದನು. ರಾಜನು, ತಾನು ಕರ್ತವ್ಯ ಚ್ಯುತನಾಗಲು ಬಯಸದೆ, ಹಿಂದೆ ಯುದ್ಧಕ್ಕೆ ಬರಲು ವಿಳಂಬ ಮಾಡಿದ ಸುಧನ್ವನನ್ನು ಹಂಸಧ್ವಜನು ಹೇಗೆ ಉರಿವ ಎಣ್ಣೆಯಲ್ಲಿ ಹಾಕಿಸಿದನೋ ಹಾಗೆ ತಪ್ಪಿತಸ್ಥನಾದ ಮಗನ ತಲೆಯನ್ನು ಕೂಡಲೆ ತೆಗೆಯುವಂತೆ

---

1. ಮುಂದೆ ನೋಡಿ : ಉಪಕಥೆ ೫.

ಅಪ್ಪಣೆ ಮಾಡಿದನು. ರಾಮನು ಧರ್ಮಿಷ್ಠನಾದರೆ ಸುಧನ್ವನಂತೆ ಉಳಿದುಕೊಳ್ಳಲಿ[1] ಎಂದು ಟೀಕಿಸಿದನು. ಕಳೆಗುಂದಿದ ಬೈಚಪ್ಪನು ಹೆಚ್ಚು ಮಾತನಾಡಲಾರದೆ, ಸದ್ಯದಲ್ಲಿ ರಾಮನನ್ನು ನೆಲಮಾಳಿಗೆಯಲ್ಲಿ ಬಚ್ಚಿಟ್ಟು ಗುರುತಿಗಾಗಿ ಕಳ್ಳರಾಮನ ತಲೆಯನ್ನು ತೋರಿ, ಸುರುತಾಳ ಬಂದು ಊರನ್ನು ಮುತ್ತುವ ಕಾಲಕ್ಕೆ ಅವನನ್ನು ತಂದು ತೋರಿಸಬೇಕೆಂದು ತನ್ನಲ್ಲಿಯೇ ನಿಶ್ಚಯಿಸಿಕೊಂಡನು.

ಕಂಪಿಲರಾಯನ ಅಪ್ಪಣೆಯ ಮೇರೆಗೆ ಬೈಚಪ್ಪನು ರಾಮನ ಬಳಿಗೆ ಬಂದನು. ಅನಿರೀಕ್ಷಿತವಾಗಿ ಬಂದ ಮಂತ್ರಿಯನ್ನು ಕಂಡು ರಾಮನು, ರತ್ನಿಯ ದೆಸೆಯಿಂದ ತನಗೆ ಏನೋ ಕೇಡು ಬಂದಿರಬೇಕೆಂದು ಊಹಿಸಿಕೊಂಡನು. ರಾಮನು ಮಂತ್ರಿಯನ್ನು ಮಾತನಾಡಿಸುವುದೇ ತಡ, ಅವನು "ರತ್ನಿಯ ಮನೆಗೆ ಏಕೆ ಹೋದೆ? ನಿನಗೆ ಅಪಕೀರ್ತಿ ಬಂದಿತು" ಎಂದು ನೊಂದುಕೊಂಡನು. ಅನಂತರ ರಾಜಾಜ್ಞೆಯನ್ನು ತಿಳಿಸಿದನು. ತನ್ನ ತಂದೆ ಹೇಳಿದಂತೆಯೇ ಮಾಡಬಹುದೆಂದು ರಾಮನು ಸಮ್ಮತಿಸಿದನು. ರಾಜನು ರತ್ನಿಯ ಮಾತನ್ನು ನಂಬಿದ್ದಕ್ಕಾಗಿ ಪಶ್ಚಾತ್ತಾಪವೂ ಆಯಿತು. ತಂದೆಯನ್ನು ಒಂದೆರಡು ಮಾತುಗಳಲ್ಲಿ ಹಂಗಿಸಿದನು. ಅನಂತರ, "ಸರಿ ಮಂತ್ರಿ ಈ ಮಾತು ಶತವರುಷ ತುಂಬಿತು. ಮುನ್ನವೆ ಹೊಡಕೊಳ್ಳೊ ತಲೆಯ" ಎಂಬುದಾಗಿ ನುಡಿದು, ಹಿಂತೆಗೆಯುತ್ತಿದ್ದ ಬೈಚಪ್ಪನ ಕೈಗೆ ತನ್ನ ಚಂದ್ರಾಯುಧವನ್ನು ಕೊಡಲು ಮುಂದುವರಿದನು. ಮಂತ್ರಿ ಕುಮಾರರಾಮನನ್ನು ಕೂಡಿಸಿಕೊಂಡು, ವರರುಚಿಯೆಂಬುವನ ಕಥೆಯನ್ನು ಹೇಳಿ[2] ಆ ಸಂದರ್ಭದಲ್ಲಿ ಮಂತ್ರಿಯಾದವನು ಹೇಗೆ ಮಾಡಿದನೋ ಹಾಗೆ ತಾನೂ ಮಾಡುವುದಾಗಿ ತಿಳಿಸಿ, ಕೆಲವು ದಿನಗಳವರೆಗೆ ರಾಮನನ್ನು ಬಚ್ಚಿಡುವುದಾಗಿ ಸೂಚಿಸಿದನು. ರಾಮನು ಒಪ್ಪಿಕೊಳ್ಳಲು, ಅವನನ್ನೂ, ಲಿಂಗ, ಕಾಟಣ್ಣ, ಕೊಳ್ಳಿಯನಾಗ, ಲಿಂಗಣ್ಣ(?), ಲಿಂಗಯ್ಯ(?), ಮುಮ್ಮಡಿ ಮೊದಲಾದವರನ್ನೂ ಜಟ್ಟಂಗಿ ರಾಮೇಶ್ವರನ ಬಳಿಯಲ್ಲಿದ್ದ ನೆಲಮಾಳಿಗೆಯಲ್ಲಿ ಮರೆಸಿಟ್ಟನು. ಇತ್ತ, ಕಳ್ಳರಾಮನ ಬಳಿಗೆ ಬಂದು, ರಾಮನಿಗೆ ಉಂಟಾಗಿರುವ ಸಂಕಟವನ್ನು ತಿಳಿಸಲು, ಅವನು ತಾನಾಗಿಯೇ ತನ್ನ ತಲೆಯನ್ನು ಕೊಡಲು ಒಪ್ಪಿದನು. ಅದೇ ಮೇರೆಗೆ, ಕಳ್ಳರಾಮನ ಮತ್ತು ಅವನ ಕೆಲವು ಮಿತ್ರರ ತಲೆಗಳನ್ನು ತೆಗೆಸಿಕೊಂಡು ಬೈಚಪ್ಪನು ಕಂಪಿಲನಿಗೆ ಒಪ್ಪಿಸಿದನು. ರಾಜನು "ಇತರರನ್ನು ಕೊಂದದ್ದು ಏಕೆ?" ಎನ್ನಲು, ಬೈಚಪ್ಪನು "ಬಿಡು ಅವರ ಮಾತುಗಳ ಹಿಡಿ ನಿನ್ನ ಹಗೆಯಾದ ಮಗ ಮುದ್ದು ಚೆನ್ನಿಗರಾಮನ ಶಿರವ" ಎಂದು ತಾನು ತಂದಿದ್ದ ಕಳ್ಳರಾಮನ ರುಂಡವನ್ನು ತೋರಿಸಿದನು. ಅವನ್ನು ಕಾಣುತ್ತಲೆ ಕಂಪಿಲನು ದಿಕ್ಕುಗಾಣದೆ, ತುಂಬ ದುಃಖಿಸಿದನು. ಮಂತ್ರಿಯನ್ನು "ಮೂರು ಅಪ್ಪಣೆಯನ್ನು ಕಾಯಲಿಬೇಕು ಮಂತ್ರಿಗಳು, ಭಾಗೀರಥಿಯು ವ್ಯಾಳ್ಯಾ ತೋರದೆ" ಎಂದು ಆಕ್ಷೇಪಿಸಿದನು. ಮಂತ್ರಿಗೆ ಅಸಮಾಧಾನವುಂಟಾಗಿ, "ಸೋದರ ಅಳಿಯನುಯೆಂದು ಕಾಯ್ದುದುಂಟಾದರೆ ಶೂಲಕೆ ತೆಗೆಸುವೆನೆಂದೆ, ಮೂರು ಅಭಯವ ಕೊಟ್ಟು ಮುಖವನು ತಿರುಹಿದೆ ಕೋಡಗ ಕೊನೆಗೆ ನೆಗೆವಂತೆ" ಎಂದು ಉತ್ತರವಿತ್ತನು. ರಾಜನು ನಿರ್ವಾಹವಿಲ್ಲದೆ ಸುಮ್ಮನಾದನು. ರಾಮನು ಸಾಯುವಾಗ ಏನು ಹೇಳಿದನೆಂಬುದಾಗಿ ನೊಂದು ಕೇಳಿದನು. ಕುಶಲನಾದ ಮಂತ್ರಿ, "ತಂದೆ ರಾಜೇಂದ್ರ ಸ್ಥಿರ ಪಟ್ಟವಾಳಲಿಯೆಂದ, ಬಂಧು ಬಳಗವು ಸುಖದೊಳಗೆ ಮಂದಗಮನೆ ಹರಿಯಮ್ಮ ಇಟ್ಟೋಲೆಯು ಕುಂದದೆ ಸ್ಥಿರವೆಂದ ರಾಮ" ಎಂದು ಕೂಡಲೆ ವರದಿಮಾಡಿದನು. ಮಂತ್ರಿ ಈ ರೀತಿ ರಾಜನನ್ನು ಹಂಗಿಸುತ್ತಿರಬೇಕಾದರೆ, ರತ್ನಾಜಿ ಸಂಗಿಯೊಂದಿಗೆ ಅಲ್ಲಿಗೆ ಬಂದಳು. ತಲೆಯನ್ನು ಆಕೆಯ ಕೈಗೆ ಕೊಡಲು, ಅದನ್ನು ತೆಗೆದುಕೊಂಡು ಅರಮನೆಗೆ ಕೊಂಡೊಯ್ದು

---

1. ಸತ್ಯವಾಡಲು ನಾನು ಕತೆ ಬುದ್ಧಿಗೆ ನಡೆವ ಲಿಖಿತದ ಫಲವೆಂದ ಮಂತ್ರಿ |
ಅಪರಾಧವಿರ್ದಡೆ ಅಳಿ[ವ] ರಾಮನು ಧರ್ಮಪಥವಿರಲು ಸುಧನ್ವನಂತುಳಿವ ||

(xiii, ೨೦೭)

2. ಮುಂದೆ ನೋಡಿ : ಉಪಕಥೆ ೬.

ಮುಖದಲ್ಲಿ ಗುರುತನ್ನು ಕಾಣದೆ ಶಂಕಿಸಿದಳು. ಸಂಗಿ ಸಮಾಧಾನ ಹೇಳಲು, ಕಾಮಾತುರೆಯಾದ ಆಕೆ ಆ ರುಂಡವನ್ನೇ ಮುದ್ದಾಡತೊಡಗಿದಳು.

ರಾಮನು ಸತ್ತಸುದ್ದಿ ಊರಿನಲ್ಲೆಲ್ಲ ವ್ಯಾಪಿಸಿತು. ಹರಿಯಮ್ಮನು ಕೇಳಿ ಅಳುತ್ತ ಓಡಿಬಂದಳು. "ಏನ ಮಾಡಿದ ತಪ್ಪ ಎನ್ನಯ ಮಗ, ಮಂತ್ರಿ ಹೇಳದೆ ಎನಗೆ ಕೊಲ್ಲುವರೆ ? ಸೂಳೆಯ ಚಾಡಿಗೆ ಸುತನ ಕೊಂದನೆ, ಮನೆಯ ಹಾಳುಮಾಡಿದನೆ?" ಎಂದು ಗೋಳಿಟ್ಟಳು. ಕೆಟ್ಟಕನಸನ್ನು ಕಂಡ ಫಲವು ಪ್ರಾಪ್ತವಾಯಿತಲ್ಲ ಎಂದು ಮರುಗಿದಳು. ತನ್ನ ಹೊಟ್ಟೆಉರಿಯನ್ನು ನಾನಾ ರೀತಿಯಾಗಿ ತೋಡಿಕೊಂಡಳು. ಕಂಪಿಲನೂ ಆತ್ಮ ನಿಂದೆ ಮಾಡಿಕೊಂಡು ದುಃಖಿಸಿದನು. ಈ ವೇಳೆಗೆ ರಾಮನ ಅಕ್ಕತಂಗಿಯರಾದ ಮಾಯಕ್ಕ (ಮಾರಮ್ಮ ?)ನೂ, ಸಿಂಗಮ್ಮನೂ ಬಂದು, ತಮ್ಮ ಸಹೋದರನ ಸಾವಿಗಾಗಿ ಒಂದೇ ಸಮನೆ ಹಲುಬಿದರು. ರತ್ನಾಜಿಯನ್ನು ನಿಂದಿಸಿದರು. ಕಡೆಗೆ, " ಬಂದರು ರಾಮನ ಸತಿಯರು ಐವರು ಕಿರಣದ ಪ್ರಭೆ ಸೂಸುವಂತೆ, ಮೊರೆಯಿಡುತ ಮನ್ಮಥನು ಮು(ವು ?)ರಿದಾಗ ರತಿದೇವಿ ಹರನೆಡೆಗೆ ಹೋದಂತೆ ಶೋಕದಲಿ." ಅವರೆಲ್ಲರೂ ಮಾವನಾದ ಕಂಪಿಲನನ್ನು ಕಂಡು ಕಿಚ್ಚನ್ನು ಬೇಡಿದರು. "ಸೊಸೆಯರಾಡುವ ಮಾತುಕೇಳಿ ಕಂಪಿಲರಾಯ ಬಿಸಿಗೆ ಕಬ್ಬಿಣದಂತೆ ಕರಗಿ" ತುಂಬ ದುಃಖಿಸಿದನು. ಅವರನ್ನು ಮಂತ್ರಿಯ ಬಳಿಗೆ ಕಳುಹಿಸಿದನು. ಆತನು "ಅಳಿಯಲೇತಕೆ ತಾಯಿ, ಹೊರೆಯಿರೆ ಪ್ರಾಣವ ದೊರೆಯಿರುವ ಮಾವಾಜಿ ನಿಮ್ಮ ಕಿರಿಯತ್ತೆ ರತ್ನಮ್ಮ ಇರುವಳು ಭಯವೇನು" ಎಂದು ಸಮಾಧಾನ ಹೇಳುವನಂತೆ ನಟಿಸಿದನು. ಆ ಸ್ತ್ರೀಯರು ಆ ಮಾತನ್ನು ಸೈರಿಸದೆ "ಸಾಕಯ್ಯ ಮಂತ್ರೀಶ ನಿಮ್ಮಾತ್ಮದೊಳಗೆ ಜನಿಸಿ ರಣಭೂಪಗೆ ಕರವನೊಡ್ಡಿದೆವು. ಹಾಕಿದ ಹರಕೆಲ್ಲ ಇನ್ನ್ಯಾಕೆ ? ಲೋಕದ ಬಾಳು ಆತನ ಅಡಿಗೆ ಹೋಗುವೆವು" ಎಂದು ತಮ್ಮ ಸಂಕಲ್ಪವನ್ನು ಸ್ಪಷ್ಟಪಡಿಸಿದರು. ಬೈಚಪ್ಪನು ಕಂಪಿಲನ ಅನುಮತಿಯನ್ನು ಪಡೆದು, ಅವರಿಗೆ ಚಿತೆಯನ್ನು ಏರ್ಪಡಿಸಿದನು. ಅವರು ಶಾಸ್ತ್ರೋಕ್ತ ವಾಗಿ ಅಲಂಕೃತರಾಗಿ ಎಲ್ಲರ ಆಶೀರ್ವಾದವನ್ನೂ ಪಡೆಯುತ್ತ, ಕೊಂಡದ ಬಳಿಗೆ ಬಂದರು. ಅವರನ್ನು ನೋಡಲೆಂದು ರಾಜ ರಾಣಿಯರು ಬರಲು, ಮಂತ್ರಿ ಅವರನ್ನು ಹಿಂದಕ್ಕೆ ಕಳುಹಿಸಿದನು. ಇತ್ತ, ಮಾಸ್ತಿಯರು ಸ್ವಾತಿಕಲ್ಲನ್ನು ಮೆಟ್ಟಿ, ಒಮ್ಮೆ ಊರನ್ನು ನೋಡಿ, ಎಣ್ಣೆಯ ಬಟ್ಟಲಿನಲ್ಲಿ ಬಗ್ಗಿನೋಡಲು ತಮ್ಮ ಇನಿಯನ ಮುಖವೇ ಕಾಣಲಿಲ್ಲ. ಅವರಿಗೆಲ್ಲ ರಾಮನು ಸತ್ತವಿಷಯದಲ್ಲಿಯೇ ಅಪನಂಬಿಕೆಯುಂಟಾಯಿತು. ಮಂತ್ರಿ ಯನ್ನು ಕಾರಣವೇನೆಂದು ಕೇಳಿದರು. ಜಾಣನಾದ ಬೈಚಪ್ಪನು, ಅವರನ್ನು ಸುಮ್ಮನಿರಬೇಕೆಂದು ಕಿವಿಯಲ್ಲಿ ಪಿಸುಗುಟ್ಟಿ, ನೋಡುತ್ತಿರುವವರ ಕಣ್ಣಿಗೆ ಮಣ್ಣೆರಚುವಂತೆ, ದೊಡ್ಡದಾಗಿ ಹೊಗೆಯೇಳುವಂತೆ ಮಾಡಿ, ಕುರಿ ಕೋಳಿಗಳ ತಲೆಗಳನ್ನು ಕಿಚ್ಚಿನಲ್ಲಿ ಹಾಕಿಸಿ, ಆ ಐವರನ್ನೂ ಅಲ್ಲಿಯೇ ನೆಲಮಾಳಿಗೆಯಲ್ಲಿದ್ದ ರಾಮನೆಡೆಗೆ ಕಳುಹಿಸಿದನು. ಇತ್ತ ಜನಗಳು ಆ ಕಪಟವನ್ನರಿಯದೆ, ರತ್ನಿಯನ್ನು ಶಪಿಸುತ್ತ, "ಕಾಳಿಂಗ ತನ್ನಯ ಸಂತಾನವ ತಿಂದಂತೆ ರಾಮನ ತಿಂದ ಕಂಪಿಲನು" ಎಂಬುದಾಗಿ ಅವಹೇಳನಮಾಡುತ್ತ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು.

## ನೇಮಿಯ ದ್ವಿತೀಯ ದಂಡಯಾತ್ರೆ

ರಾಮನು ಸತ್ತ ವೃತ್ತಾಂತವು ಆಕ್ಕಪಕ್ಕದ ಪಾಳೆಯಗಾರರಿಗೆಲ್ಲ ತಿಳಿದುಬರಲು ಸಂತೋಷಪಟ್ಟರು. ಅವರು ಸುರುತಾಳನಿಗೆ ಕಾಗದ ಬರೆದರು. "ಬಹಳ ಬೆಳೆದವರಿಗೆ ಲಯವಾಗೋ ಕಾಲ ಬಂತು" ಎಂದು ಅಂದು ಕೊಂಡರು. ಪಾಳೆಯಗಾರರ ಕಾಗದಗಳನ್ನು ಓದಿನೋಡಿ ಸುರುತಾಳನು ಅಮಿತವಾಗಿ ಆನಂದಿಸಿದನು. ಒಡ್ಡೋಲಗಕ್ಕೆ ನೇಮಿಯನ್ನು ಬರಮಾಡಿಕೊಂಡು ಸುದ್ದಿಯನ್ನು ತಿಳಿಸಿದನು. ನೇಮಿ ಆಶ್ಚರ್ಯದಿಂದ "ಕಂಡು ಬಂದವರಾರು ಸ್ಥಳದಿಂದ ಬಂದರೆ(?) ಸುದ್ದಿ ತುಂಡು ದೊರೆಗಳು ಬರೆದ ಲಿಖಿಯೋ ?" ಎಂದು

ಶಂಕಿಸಿ ಕೇಳಿದನು. ಸುಲ್ತಾನನು ಕಾಗದಗಳನ್ನು ತೋರಿಸಲು ನೇಮಿ ಸುಲಭವಾಗಿ ಒಪ್ಪದೆ, ಯಾವುದನ್ನೂ ವಿಚಾರಿಸಿ ತಿಳಿಯೋಣವೆಂದನು. ನೇಮಿ ಹಿಂತೆಗೆಯುತ್ತಿರುವುದನ್ನು ಕಂಡು ಸುರುತಾಳನಿಗೆ ಸಿಟ್ಟುಬಂದಿತು. "ಬೆನವನಂದದಿ ನೀನು ಒಡಲ ಬೆಳಸಿ ಮಂತ್ರಿ, ಸರಿಪಾಲು ಒಡವೆಯ ಗಳಿಸಿ, ಪರಕಾರ್ಯವೆಂದರೆ ಚಳಿ ಜ್ವರ ಬರುವುದು ಹೆಣ ಮೋರೆ ಮೀಸೆ ಸುಡು ನಿನ್ನ" ಎಂದು ಹಂಗಿಸಿದನು. ಮಂತ್ರಿ ಕೆರಳದೆ, ನಿಜವಾದ ವೃತ್ತಾಂತವನ್ನು ಆ ಕೂಡಲೆ ತರಿಸುವೆನೆಂದು ಹೇಳಿ, ಕೆಲವು ಪ್ರವೀಣರನ್ನು ಸುದ್ದಿಯನ್ನು ತಿಳಿದುಕೊಂಡು ಬರಲು ನೇಮಿಸಿದನು. ಅವರು ಜೋಗಿಗಳಂತೆ ವೇಷ ಧರಿಸಿಕೊಂಡು ಕುಮ್ಮಟವನ್ನೆಲ್ಲ ಸುತ್ತಿ, ಜನಜನಿತವಾಗಿದ್ದ ರಾಮನ ಮರಣ ವೃತ್ತಾಂತವನ್ನೆಲ್ಲ ಕೇಳಿ, ತಿಳಿದುಕೊಂಡು, ಹಿಂತಿರುಗಿ ಬಂದು ನೇಮಿಗೆ ವರದಿ ಮಾಡಿದರು. ಸುಲ್ತಾನನು ಅದನ್ನು ಕಿವಿಯಾರ ಕೇಳಿ, "ಇಳಿಯಿತು ಈಗ ಎನ್ನೆದೆಯ ಮೇಲಣ ಗುಂಡು" ಎಂದುಕೊಂಡು, "ಮಂಸ(ಣ್ಣ ?)ಮಡಿಕೆಯ ಮೆಚ್ಚಿ ದೊಣ್ಣೆಯಲಿ ಹಗೆಗೊಂಡ", "ಹಣ್ಣು ಮುದಿಯನ ಕೊಂದು ಕುಮ್ಮಟಕೆ ಠಾಣ್ಯವ ಹಾಕಿ, ಮುನ್ನ ಬಾದೂರನ ಹಿಡಿ ತಾರೊ" ಎಂದು ನೇಮಿಗೆ ಆಜ್ಞಾಪಿಸಿದನು. ಸುರುತಾಳನ ಅಪ್ಪಣೆಯ ಮೇರೆಗೆ ನಾನಾ ಖಾನರಿಗೆ ಕಾಗದಗಳನ್ನು ಬರೆಸಲಾಯಿತು. ಎಲ್ಲರಿಗೂ ಆ ಸುದ್ದಿ ಸೋಜಿಗವೆನ್ನಿಸಿತು. ದೈವಲೀಲೆಯನ್ನು ಕುರಿತು ಮಾತಾಡಿಕೊಳ್ಳುತ್ತಿದ್ದರು. ಅಮರಂಗಿಖಾನ, ತುಮರೋಜಖಾನ, ಕಾಲಾಳ (?), ಗುಜ್ಜಳ, ಗೌಳ, ಪಾಂಡವ, ಅನವರ್ದಿಖಾನ, ಕಮದುಮ್ಮಖಾನ ಮುಂತಾದವರು ತಮ್ಮತಮ್ಮ ದಂಡಿನ ಸಮೇತ ಬಂದು ಸೇರಿದರು. ಸುರುತಾಳನಿಗೆ ಪರಿಪರಿಯಾಗಿ ಭರವಸೆ ಕೊಟ್ಟರು. "ಕುಮ್ಮಟದ ಬೇರನು ಕಿತ್ತು ಎಸೆವೆನು ಡಿಳ್ಳಿಯ ಪುರಕೆ"; "ಕಿತ್ತೇವೊ ಹೊಸಮಲೆಯ ಕಲ್ಲನೆ ಪುಡಿಮಾಡಿ ಬೂದಿಮಾಡೇವು ಕುಮ್ಮಟವ" ಎಂದು ಶಪಥಮಾಡಿದರು. ಸುರುತಾಳನು ನಗುನಗುತ್ತ "ಬಾದೂರನ ತಂದರೆ,ನೀವೆನ್ನ ಬಂಧುಗಳು ನಾ ಬೇರೆ ಹೇಳುವುದೇನು" ಎಂದು ಹೇಳಿ, ಅವರಿಗೆ ತಕ್ಕ ಏರ್ಪಾಡುಗಳನ್ನು ಮಾಡಿದನು. ಎಲ್ಲರನ್ನೂ ಹುರಿದುಂಬಿಸಿ ಬೀಳ್ಕೊಟ್ಟನು.

ನೇಮಿಯ ದಂಡು ಊರುಬಿಟ್ಟು ಸ್ವಲ್ಪ ದೂರ ಬರುವುದೇ ತಡ, ನಾನಾ ದಿಕ್ಕುಗಳಲ್ಲಿ ಅಪಶಕುನಗಳಾದುವು. ಅನಂತರ, ಟಗರು ಮತ್ತು ಹುಂಜಗಳನ್ನು ತರಿಸಿ, ಬಲವಾದುದಕ್ಕೆ ಸುರುತಾಳನೆಂದೂ, ದುರ್ಬಲವಾದುದಕ್ಕೆ ರಾಮನೆಂದೂ ಹೆಸರಿಟ್ಟು ಕಾಳಗ ಹೂಡಿದರು. ಆಗಲೂ ಸಹ, ರಾಮನ ಹೆಸರಿನ ಪ್ರಾಣಿಗಳೇ ಗೆಲ್ಲಲು, ತಮಗೆ ಏನೋ ಕೇಡು ಕಾದಿದೆಯೆಂದೂ, "ಗಿರಿಜೆಯ ರಮಣನ ವರಕೃಪೆ ಅವಗುಂಟು ಮರಣವಾದುದು ಹೇಗೆ ಕಾರ್ಯ" ಎಂಬುದಾಗಿಯೂ ತಮ್ಮ ತಮ್ಮಲ್ಲಿಯೇ ಮಾತಾಡಿಕೊಳ್ಳಲು ಆರಂಭಿಸಿದರು. ನೇಮಿ ತನಗೆ ಬಂದ ಸಂಕಟವನ್ನು ಸೂಚಿಸಿ ಸುರುತಾಳನಿಗೆ ಕಾಗದ ಬರೆದನು. ಅದನ್ನು ಓದಿದ ಕೂಡಲೆ ಸುಲ್ತಾನನಿಗೆ ತುಂಬ ಕೋಪವುಂಟಾಯಿತು. ನೇಮಿಯನ್ನು ಮೂದಲಿಸಿ, "ನಡೆ ಮುಂದೆ ದಂಡನು ಹೊಡೆಸುವೆ" ಎಂದು ಕಟ್ಟಪ್ಪಣೆ ಮಾಡಿದನು. ನಿರ್ವಾಹವಿಲ್ಲದೆ ನೇಮಿಯ ದಂಡು ಮುಂದುವರಿಯಿತು. ದಂಡಿನಲ್ಲಿದ್ದ ಸೂಳೆಯರು ನಾನಾ ರೀತಿಯಾಗಿ ರಾಮನನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದರು. ಡೊಂಬರ ಚೆನ್ನಿಯ ಕತೆ[1]ಯನ್ನು ಹೇಳಿ ಎಂಥ ಗಂಡಸಾದರೂ ಹೆಂಗಸಿಗೆ ವಶವಾಗದಿರನು ಎಂದುಕೊಂಡರು. ಖಾನರನ್ನು ಕುರಿತು "ರಾಮನಿರಲು, ನಿಮಗೆ ಮಣೆಯದಿರಲು ಎಮಗಿರಲಿ" ಎಂದರು. ಹೆದರಿದ್ದ ಖಾನರಿಗೆ ಈ ಮಾತು ಮತ್ತಷ್ಟು ಕೆರಳುವಂತೆ ಮಾಡಿತು. ಸೇನೆ ಭೀಮರತಿಯ ಬಳಿಗೆ ಬಂದು ಬೀಡುಬಿಟ್ಟಿತು. ಊರಿನ ಜನರು ನೇಮಿಯ ದಂಡಿನ ಸುದ್ದಿಯನ್ನು ಕೇಳಿ ಭಯಗೊಂಡು, ತಮ್ಮ ತಮ್ಮ ಸಾಮಾನು ಸಲಕರಣೆಗಳನ್ನೆಲ್ಲ ಹೊತ್ತುಕೊಂಡು ಗೂಳೆಯ ತೆಗೆದರು.

ಕೆಲವು ಖಾನರು ಕುಮ್ಮಟದ ಗಡಿಯ ಮೇಲೆ ಬೀಳಲು ಅಲ್ಲಿದ್ದ ಬೇಡರು ಅವರನ್ನು ಸದೆಬಡಿದರು.

---

1. ಮುಂದೆ ನೋಡಿ : ಉಪಕಥೆ ೭.

ಅವರು ಕಂಗೆಟ್ಟು ತಲೆತಪ್ಪಿಸಿಕೊಂಡು ನೇಮಿಯ ಬಳಿಗೆ ಬಂದರು. ಅವರನ್ನು ಕಂಡು ನೇಮಿ ಧೈರ್ಯ ಹೇಳಿ, ಒಟ್ಟಿಗೆ ಹೋಗಿ ಮುತ್ತಿಗೆ ಹಾಕಬೇಕೆಂದನು. ಇತ್ತ, ಬೇಡರು, ತಾವು ತಂದಿದ್ದ ಸಾಮಾನುಗಳನ್ನು ರಾಜನಿಗೆ ಸಲ್ಲಿಸಿ, ನೇಮಿಯ ದಂಡು ಅಪಾರವಾಗಿದೆಯೆಂದೂ, ಅದನ್ನು ಗೆಲ್ಲುವ ಯೋಚನೆ ಮಾಡಬೇಕೆಂದೂ, ರಾಮನಾಥನನ್ನು ಕೊಂದು ತಾನಾಗಿಯೇ ಕೇಡನ್ನು ತಂದುಕೊಂಡನೆಂದೂ ಹೇಳಿದರು. ಕಂಪಿಲನು ಬೈಚಪ್ಪನನ್ನು ಕರೆಸಿ, ತನಗೆ ಒದಗಿರುವ ಕಷ್ಟವನ್ನು ಹೇಳಿಕೊಂಡು ಮರುಗಿದನು. ರಾಮನನ್ನು ಕೊಲ್ಲಿಸಿದ ತನ್ನ ಮೌಢ್ಯಕ್ಕೆ ತಾನೇ ನಿಂದಿಸಿಕೊಂಡನು. ಬೈಚಪ್ಪನು, "ಮಾರಮ್ಮ ಇರಲೆಮಗೆ ಏನು ಭಯಗಳು ಉಂಟೆ, ಹಾಳು ಮಾಡಲು ಅರುಹಿಸಿ ಹೇಳಿಕಳುಹವ ನರರ ಸೆರೆಯ ನೇಮಿಯ ಬಳಿಗೆ ಹೋಗಿಯೆ ಮಾರಿ ಬಿಡಲೆನುತೆ" ಎಂದು ಮಾರ್ಮಿಕವಾಗಿ ಹಂಗಿಸಿದನು. ಕಂಪಿಲನಿಗೆ ಸಂಕಟವಾಗಿ "ಮಾರ್ಜಾಲಗೆ ಸರಸಗಳು ಮೂಷಕಕೆ ಪರಮಾತ್ಮ ಹೋಗದು" ಎಂದು ನೊಂದುಕೊಂಡು, ಬೈಚಪ್ಪನನ್ನು ಏನಾದರೂ ಏರ್ಪಾಡು ಮಾಡುವಂತೆ ಕೇಳಿಕೊಂಡನು. ಮಂತ್ರಿ ಶತ್ರುಸೈನ್ಯವನ್ನು ಎದುರಿಸದೆ ವಿಧಿಯಿಲ್ಲವೆನ್ನಲು, ಕೈಯಲ್ಲಾಗದ ಕಂಪಿಲನು, "ಹುಚ್ಚೇನೊ ಎಲೆ ಮಂತ್ರಿ, ಹುಲಿಯ ಬಣ್ಣಕೆ ನರಿಯು ಸುಟ್ಟುಕೊಂಡರೆ ಬರುವುದೆ ? ಪುತ್ರನ ಸಹಶಕ್ತಿ ಪಾಂಡುರಾಯಗೆ ಇತ್ತೆ ? ಎತ್ತಣ ಮಾತೆಂದು ನುಡಿವೆ ?" ಎಂದನು. ಕಡೆಗೆ, ಮಂತ್ರಿಯೇ ರಾಯನಿಗೆ ತಕ್ಕ ಭರವಸೆಯಿತ್ತು ಯುದ್ಧಕ್ಕೆ ಅಣಿಮಾಡಿದನು.

ನೇಮಿ ತನ್ನ ಚಾರರ ಮೂಲಕ ಕಂಪಿಲನಿಗೆ ಬಾದೂರನನ್ನು ಒಪ್ಪಿಸಬೇಕೆಂದೂ, ವೃಥಾ ಕೆಡಬಾರದೆಂದೂ, ಹೇಳಿ ಕಳುಹಿಸಿದನು. ಈ ಮಾತನ್ನು ಕೇಳಿದ ಮಂತ್ರಿಗೆ ಕೋಪವುಂಟಾಗಿ ಅವರನ್ನು ಅವಮಾನಮಾಡಿ ಕಳುಹಿಸಿದನು. ಅವರ ಪರಾಭವವನ್ನು ಕೇಳಿದ ನೇಮಿ ಚಿಂತಿಸುತ್ತಿರಬೇಕಾದರೆ ಹಮ್ಮೀರಖಾನನೆಂಬುವನು ಮೇಲೆದ್ದು, ವೀರಾವೇಶದಿಂದ ಮಾತನಾಡಿದನು. ನೇಮಿಯ ಅಪ್ಪಣೆ ಪಡೆದು ಸೈನ್ಯ ಸಮೇತನಾಗಿ ಬಂದು ಕುಮ್ಮಟವನ್ನು ನಾಲ್ಕೂ ಕಡೆಗಳಿಂದ ಮುತ್ತಿದನು. ಪರಸ್ಪರ ಮೂದಲಿಕೆಗಳು ಸಾಗಿ, ಒಕ್ಕಲಿಗರ ಮುದ್ದ, ಬುಕ್ಕಣ್ಣ, ವೀರಸಂಗಯ್ಯ ಮುಂತಾದವರು ಶತ್ರುಗಳನ್ನು ಸಂಹರಿಸಿದರು. ಬೇರೆ ಬೇರೆ ಕಡೆಗಳಲ್ಲಿ ನಿಂತು, ಎಡಗಯ್ಯ ಹಂಪ, ನೀಲಕಂಠ, ಲಿಂಕೆಯ ಹನುಮ, ಮೊದಲಾದವರು ಕಾದಾಡಿದರು. ಈ ಪೆಟ್ಟುಗಳನ್ನು ಸಹಿಸಲಾಗದೆ ಶತ್ರುಗಳು ಪಲಾಯನಮಾಡತೊಡಗಿದರು. ಹಮ್ಮನಾಡುತ್ತ ಬಂದ ಹಮ್ಮೀರಖಾನನು ಖಿನ್ನನಾಗಿ ಹಿಂತಿರುಗಿದನು. ಅಂದಿನ ಯುದ್ಧವೇನೋ ತಮಗೆ ಕೈಗೂಡಿತು ; ಆದರೆ ನೇಮಿಯೇ ಉಳಿದ ದಂಡನ್ನು ಕೂಡಿ ಬಂದರೆ ತಮ್ಮ ಗತಿಯೇನು ? "ಜನಕೊಂದು ಕಲ್ಲಿಡಲು ನಗರ ತುಂಬದೆ ಎನ್ನ ಮಂತ್ರಿ ?"—ಎಂಬುದಾಗಿ ಕಂಪಿಲನು ಬೆದರಿದನು. ಬೈಚಪ್ಪನಾದರೋ ಸ್ವಲ್ಪಮಾತ್ರವೂ ಅಳುಕದೆ, ರಾಜನನ್ನು ಮನೆಗೆ ಕಳುಹಿಸಿ, ಅಂದಿನ ರಾತ್ರಿಯೇ ಹಮ್ಮೀರಖಾನನ ಪಾಳೆಯದ ಮೇಲೆ ಬಿದ್ದು, ಅವರನ್ನೆಲ್ಲ ಪೀಡಿಸಿ, ಬೆಳಗಾದ ಕೂಡಲೆ ನೆಲೆಬಿಟ್ಟು ಓಡುವಂತೆ ಮಾಡಿದನು. ಹಮ್ಮೀರಖಾನನಿಗಾದ ಅಪಜಯವನ್ನು ಕಂಡು, ನೇಮಿ ಆತನಿಗೆ ಸಮಾಧಾನ ಹೇಳಿ, "ಮುರಿದವನು ನಾನು, ನೀನಲ್ಲ" ಎಂದು ಕಿಡಿಕಿಡಿಯಾದನು. ಮಾರನೆಯ ದಿನವೇ ಸಮಸ್ತ ಸೇನೆಯನ್ನೂ ಸರಿಪಡಿಸಿಕೊಂಡು "ಕಬ್ಬಕ್ಕಿ ಮುಸುಕಿದ ಅಬ್ಬರದೊಳು ಬಂದು" ಕುಮ್ಮಟವನ್ನು ಮುತ್ತಿದರು. ಬೈಚಪ್ಪನಾದರೋ ಸ್ವಲ್ಪವೂ ಹೆದರಲಿಲ್ಲ. ಕುಮ್ಮಟದ ಕೋಟೆಯನ್ನು ಕಂಡು ಶತ್ರುಗಳೂ ಹೆದರಿದರು. ಆದರೂ "ಕುಮ್ಮಟವನು ನಂಬಿ ಸುಮ್ಮನೆ ಕೆಡಬೇಡಿ. ನಮ್ಮ ಬಾದೂರಖಾ[ನ]ನಾ ಕೊಡು ಲವುಡಿ (?) ಇಮ್ಮಡಿಯ ಪಾಶ್ಚಾ್ಯಗೆ ನೇಮಿಖಾನನು ಬಂದ, ಸುಮ್ಮನೆ ಕಳುಹಿ, ಕೆಡಬೇಡಿ" ಎಂದು ವೀರಾಲಾಪ ಮಾಡುತ್ತ ಲಗ್ಗೆ ಹತ್ತಲಾರಂಭಿಸಿದರು. ಕೋಟೆಗಾಳಗ ಸಾಗಿತು. ಕೋಟೆಯ ಮೇಲಿದ್ದ ಸೈನಿಕರು ಬಾಣ, ಇಡಿಗಲ್ಲು, ಮುಂತಾದುವುಗಳನ್ನು ಪ್ರಯೋಗಿಸಿ ಸುತ್ತಮುತ್ತಲಿನ ಅಗಳು ಹೆಣಮಯವಾಗುವಂತೆ ಹೋರಾಡಿದರು. ನೇಮಿಯ ಕಡೆಯವರು ನಿಶ್ಶಕ್ತರಾದರು. ಓಡಿ ಹೋಗಲು ತೊಡಗಿದರು. ನೇಮಿಖಾನನಾದರೋ "ಹೇಳಬಹುದು ಇದನು ವೀರ ಕುಮ್ಮಟವೆಂದು" ಎಂದು ತಲೆದೂಗಿ,

ಸುಲ್ತಾನನ ಸಮ್ಮುಖದಲ್ಲಿ ಶಪಥಮಾಡಿದ ಖಾನರನ್ನು ಹಂಗಿಸಿದನು. ಕುಮಾರರಾಮನು ಬದುಕಿದ್ದರೂ ಬದುಕಿರಬಹುದು ಎಂದು ಅನುಮಾನಿಸುತ್ತ ಹಿಂತೆಗೆದನು.

ಇಷ್ಟಾದರೂ ನೇಮಿ ಸುಮ್ಮನಿರದೆ ತನ್ನ ಚಾರರ ಮೂಲಕ ಕಂಪಿಲನಿಗೆ ಹೇಳಿ ಕಳುಹಿಸಿದನು. ಅವರು ಬಂದು "ಕರಿಯೊಳು ನರಿ ಸೆಣಸಿ ಬದುಕುವುದೆ ನೀನರಿಯಾ ?" ಎಂದು ಪೀಠಿಕೆ ಹಾಕಿ ಕೋಟೆಯನ್ನು ನೆಚ್ಚಿ ಕೆಡಬೇಡವೆಂದೂ, ಬಾದೂರನನ್ನು ಒಪ್ಪಿಸಿ, ಕಪ್ಪವಿತ್ತು ಬದುಕಬೇಕೆಂದೂ, ಬೆದರಿಸಿದರು. ಕಂಪಿಲನಿಗೆ ಯಾವುದೋ ಭಯ ಬಂದು "ಚಲದಂಕ ರಣ ರಾಮ ತೊಲಗಿದ ಎನ್ನೊಳಗೆ ಉಳುಹಿಕೊಳ್ಳಲು ತ್ರಾಣವಿಲ್ಲ" ಎಂದು ಬಗೆದು, ಬಾದೂರನನ್ನು ಒಪ್ಪಿಸುವ ಯೋಚನೆಯನ್ನೂ ಮಾಡಿದನು. ಇದನ್ನರಿತ ತಳವಾರ ಬಮ್ಮನು ಕೂಡಲೆ ಓಡಿ ಬಂದು ಬೈಚಪ್ಪನಿಗೆ ತಿಳಿಸಿದನು. ಆತನು ನಿಂತ ನಿಲುವಿನಲ್ಲಿಯೇ ಕಂಪಿಲನ ಬಳಿಗೆ ಓಡಿ ಬಂದನು. ರಾಜನು ಮಂತ್ರಿಯೊಂದಿಗೆ, ಊರು ಉಳಿದರೆ ಸಾಕೆಂದು ಎಣಿಸಿ, ಬಾದೂರನನ್ನು ಒಪ್ಪಿಸಿಕೊಡಲು ಸಮ್ಮತಿಯಿತ್ತೆನೆಂದನು. ಬೈಚಪ್ಪನು "ಮರೆಯ ಬಿದ್ದವನ ಕೊಡಲು ಮಾತೆಲ್ಲಿ ಹೋ[ದು]ದು ಸ್ವಾಮಿ ಮಡದಿ ಯಿತ್ತುದಕೆ ಮಿಗಿಲಲ್ಲವೆ ?" ಎಂದು ಕೇಳಿ, ಅಲ್ಲಿದ್ದ ಚಾರರನ್ನು ಕುರಿತು "ಬಾದೂರನ ಕೊಡುವುದಕೆ ಸುರಿತಾಳನು ಬರಬೇಕು, ಮೂಳ ನೇಮಿಗೆ ಮುನ್ನ ಕೊಡೆನು" ಎಂದನು. ಅವರು "ಹೊಡೆಯಲ್ಕೆ ಪಾಶ್ಚಾತ್ಯಯು ಬಡವನೆ ಎಲೆ ಮಂತ್ರಿ ? ಸುಡು ನಿನ್ನ ಮಾತಿನ ಗರ್ವ" ಎಂದು ಧಿಕ್ಕರಿಸಿ ಮಾತನಾಡಿದರು. ಮಾತಿಗೆ ಮಾತು ಬೆಳೆದು, ಅವರನ್ನು ಅವಮಾನಮಾಡಿ, ಕಳುಹಿಸಿದನು. ಅವರು ನೇಮಿಯ ಬಳಿಗೆ ಬಂದು, ಪ್ರಧಾನಿ ಅವಾಚ್ಯವಾದ ಮಾತುಗಳನ್ನಾಡಿ ತಮ್ಮನ್ನು ಅಟ್ಟಿದನೆಂದು ಸುದ್ದಿ ತಿಳಿಸಿದರು. ನೇಮಿ ಮತ್ತೆ ಸೈನ್ಯವನ್ನು ಕಟ್ಟಿಕೊಂಡು ಪಿಳ್ಳೆಕೋಟೆಯನ್ನು ಮುತ್ತಿದನು. ಕಂಪಿಲನ ಭಯವನ್ನು ಹೇಳತೀರದು. ಯುದ್ಧಕಾರ್ಯದಲ್ಲಿ ನಿಯುಕ್ತನಾಗಿದ್ದ ಬೈಚಪ್ಪನನ್ನು ಕರೆಸಿದನು. ಕಂಪಿಲನು ಮಂತ್ರಿಯೊಂದಿಗೆ, ಶತ್ರುಗಳು ಹೊರಕೋಟೆಗೆ ಮುತ್ತಿಗೆ ಹಾಕಿರುವರೆಂದೂ, ಖಾನರ ಕೈಲಿ ತಾನು ಸಾಯುವ ಕಾಲ ಬಂತೆಂದೂ ಹೇಳಿಕೊಂಡು ದುಃಖಿಸಿ ದನು. ಮಂತ್ರಿ "ಸತ್ತ ರಾಮನು ಎಂದು ಅತ್ತರೆ ತೀರದು, ರತ್ನಿಯ ಕರಸಯ್ಯ ಭೂಪ" "ಮುತ್ತಿಗೆ ತೆಗೆಸಾಳು ಪುತ್ರನ ಕೊಂದವಳು" ಎಂದು ಚುಚ್ಚುನುಡಿಗಳನ್ನು ಆಡಿದನು. ಸಾಲದ್ದಕ್ಕೆ "ಭೀಮನ ಕೊಂದವಳಿಗೆ ನೇಮಿಯು ಇದಿರುಂಟೆ ? ಓಡಿಸಳೆ ಒಂಟೆ ಕುದುರೆಯಲಿ ?" ಎಂಬ ಕೊಂಕುನುಡಿ ಬೇರೆ. ಕಂಪಿಲನ ಸಂಕಟ ವರ್ಣಿಸಲಸಾಧ್ಯ. "ಯಾಕೆ ನನ್ನನ್ನು ಹಂಗಿಸುವೆ ? ನಾನು ಸಂಧಿಮಾಡಿಕೊಳ್ಳಲು ಬಯಸಲಿಲ್ಲವೆ ? ನೀನಲ್ಲವೆ ಚಾರರ ಸಂಗಡ ಪೌರುಷದ ಮಾತುಗಳನ್ನು ಆಡಿದವನು ?" ಎಂದು ಬಿರುನುಡಿಗಳನ್ನು ಆಡಿದನು. ಆಗ ಮಂತ್ರಿ, ರಾಜನಿಗೆ ಸಮಾಧಾನ ಹೇಳಿ ಧೈರ್ಯವಾಗಿರಬೇಕೆಂದೂ, ರಾಮನಿಗೆ ಮಿಗಿಲಾದ ಮತ್ತೊಬ್ಬ ಶೂರನನ್ನು ಕರೆತರುವುದಾಗಿಯೂ ತಿಳಿಸಿದನು. ಆ ಮಾತು ಕೇಳಿದೊಡನೆಯೇ ಕಂಪಿಲನಿಗೆ ಹೋದ ಜೀವ ಬಂದಂತಾಯಿತು.

## ಕುಮಾರರಾಮನ ಪುನರಾಗಮನ ಮತ್ತು ವಿಜಯ

ಅನಂತರ, ಬೈಚಪ್ಪನು ರಾಮನಿದ್ದ ನೆಲಮಾಳಿಗೆಯ ಬಳಿಗೆ ಬಂದನು. ಮಂತ್ರಿಯ ಧ್ವನಿಯನ್ನು ಕೇಳಿದ ಕೂಡಲೇ ಕಾಟಣ್ಣನೂ ರಾಮನೂ ಬಂದರು. ಅವರು ಊರಿನ ಕುಶಲವಾರ್ತೆಯನ್ನು ವಿಚಾರಿಸಲು, ನೇಮಿ ದಂಡೆತ್ತಿ ಬಂದಿರುವುದನ್ನು ತಿಳಿಸಿದನು. "ಬಾಳೊಂದ ಪೇಳುವೆ, ವ್ಯಾಖ್ಯಾವು ತನಗಿಲ್ಲ, ಬಾದೂರನ ಹಿಡಿಕೊಡುವನರಸು" ಎಂದನು. ಆ ಮಾತನ್ನು ಕೇಳಿದ ತಕ್ಷಣ ರಾಮನು ಚಕಿತನಾಗಿ, ಮರೆಯ ಬಿದ್ದ ವನನ್ನು ಕೊಡುವುದುಂಟೆ ಎಂದು ಬಗೆದು ಯುದ್ಧಕ್ಕೆ ಸನ್ನದ್ಧನಾದನು. ಬೈಚಪ್ಪನು ರಾಮನೇ ಮೊದಲಾದವ ರನ್ನು ತನ್ನ ಮನೆಗೆ ಕೊಂಡೊಯ್ದು, ಆರತಿ ಅಕ್ಷತೆಯ ಶಾಸ್ತ್ರವನ್ನು ಮಾಡಿ, ಅವನನ್ನು ಅಲಂಕರಿಸಿ, ರಣರಂಗಕ್ಕೆ

ಕರೆತಂದನು. ಅವನು ತನ್ನ ಬೊಲ್ಲನನ್ನು ಏರಲು, ಅದು ತನ್ನ ಸ್ವಾಮಿಯನ್ನು ಗುರುತಿಸಿ ಹಿಗ್ಗಿತು. ಆರು ತಿಂಗಳ ಕಾಲ ಕೊರಗಿ ಸೊರಗಿದ್ದ ಕುದುರೆಗೆ ಜೀವ ಬಂದಂತಾಯಿತು. ಇತ್ತ, ಕಂಪಿಲನು ಹೊಸರಾವುತನನ್ನು ನೋಡಬೇಕೆನ್ನಲು, ಬೈಚಪ್ಪನು, ಬಂದ ಕೆಲಸ ಮುಗಿದಬಳಿಕ ಆತನು ಬರುವನೆಂದು ಉತ್ತರವಿತ್ತನು. ಇತರರು ಬೆರಗಾಗಿ ಕೇಳಲು, ಆತನು ಕಲ್ಯಾಣಪುರದಿಂದ ಬಂದನೆಂದು ಸಮಾಧಾನ ಹೇಳಿದನು. ಬಾದೂರನಿಗೆ ಮಾತ್ರ ಮಂತ್ರಿ ನಿಜವಾದ ಸುದ್ದಿ ತಿಳಿಸಿದನು. ಯುದ್ಧ ಭರದಿಂದ ಸಾಗುತ್ತಿರಲು, ಬಾದೂರನೂ ಮುನ್ನುಗ್ಗಿದನು. ಅವನನ್ನು ಕಂಡ ನೇಮಿಯ ಮಂದಿ, ಮೇಲೆ ಬೀಳಲು, ರಾಮನು ಧಾವಿಸಿ ಬಂದು, ಖಾನರುಗಳನ್ನು ಮೂದಲಿಸುತ್ತ ಸದೆಬಡಿದನು.

ರಾಮನ ಪ್ರವೇಶವೇನೋ ಆಯಿತು. ಪ್ರತಿಪಕ್ಷದವರ ಕೋಲಾಹಲವೇನೂ ಕಡಮೆಯಾಗಿರಲಿಲ್ಲ. ಅವರು ಒಂದೇ ಸಮನೆ ಬಾಯಿಗೆ ಬಂದಂತೆ ಮಾತನಾಡುತ್ತ ಹೋರಾಡುತ್ತಲೇ ಇದ್ದರು. ನೇಮಿಯ ಮೂದಲೆ ಬೇರೆ ಹೇಳತೀರದು. ವಿರೋಧಿಗಳ ಪಕ್ಷ ವಹಿಸಿದ್ದ ಪಾಳೆಯಗಾರರು ನೊಂದು, ಬಸವಳಿದು, ತಮ್ಮ ಪಾಡಿಗೆ ತಾವೇ ಮರುಗಲಾರಂಭಿಸಿದರು. ಶತ್ರುಗಳ ಆಟೋಪವೂ ಹೆಚ್ಚಾಗಲು ರಾಮನು ದೇವರನ್ನು ನೆನೆದು, ಮೇಲೆ ಬಿದ್ದನು. ಅವನ ಹಿಂದೆಯೇ ಮುದ್ದಯ್ಯ, ಬಾದೂರ, ಬಾಣಮುದ್ದ, ಹಂಪ, ಸಂಗಯ್ಯ, ಮುಂತಾದವರನ್ನು ಒಕ್ಕಲಿಕ್ಕಿದನು. ವೀರಾವೇಶದಿಂದ ಕಾದಾಡುತ್ತಿದ್ದ ರಾಮನನ್ನು ಕಂಡು "ಅಹುದು ಎಂಬರು ಕೆಲರು ಅಲ್ಲ ಎಂಬರು ಅರ್ಥ." ಪಾಳೆಯಗಾರರು ಹೆದರಿ ಓಡಲಾರಂಭಿಸಿದರು. ಆ ಸುದ್ದಿಯನ್ನು ಯನ್ನು ಕೇಳಿದ ನೇಮಿ ಯುದ್ಧ ಮುಗಿದ ಮೇಲೆ ಅವರೆಲ್ಲರನ್ನೂ ವಿಚಾರಿಸಿದರಾಯಿತು ಎಂದುಕೊಂಡನು. ಉಳಿದವರು "ರಾಮನೆ ನಿಜವಾಗಿ ನೋಡಿರೆ ಬಲ್ಲವರು ನಾವಂತು ಅವನ ಕಂಡಿಲ್ಲ ಈಗೇನು ಮಾಡುವುದು ಮೇಲುಗೋಟೆಯ ಮಿಂಡ ಓಡಿದರೆ ಬೇರೆ ಬಿಡುವನೆ" ಎನ್ನುತ್ತಿದ್ದರು. ಕೆಲವರು ರಾಮನನ್ನು ತೆಗಳಿ ಮಾತಾಡಿದರು. ಕಡೆಗೆ ಸುರುತಾಳನ ಅಳಿಯ ಸಂತೋಜಿ ಎಂಬಾತನು ತನ್ನ ಪಡೆಗೂಡಿ ಮುನ್ನುಗ್ಗಿದನು. ಬಾದೂರ, ಗೋವಿಂದನಾಯಕ, ವೀರಸಂಗ, ಲಿಂಗಣ್ಣ, ಮುದ್ದ, ಮಾಚ, ರಾಚೂರಮಲ್ಲ, ಲೆಂಕೆಯ ಹನುಮ ಮುಂತಾದ ಏಳುನೂರು ಮನ್ನೆಯರು ಅತ್ಯುಗ್ರವಾಗಿ ಕಾದಾಡತೊಡಗಿದರು. ಸಂತೋಜಿ ಕಾಟನ ಮೇಲೆ ನುಗ್ಗಿ ಬಂದನು. ರಾಮನೂ ಬಂದು ಮುತ್ತಿದನು. ಕದನದಲ್ಲಿ ಸಂತೋಜಿ ಸಂಹಾರವಾದನು. ಈ ಸುದ್ದಿಯನ್ನು ಕೇಳಿದ ಖಾನರೆಲ್ಲರೂ ನಡುನಡುಗಿದರು. ಸುರುತಾಳನ ಅಳಿಯನ ಸಾವು ತಮಗೆ ಏನು ತಾನೆ ತಂದೊಡ್ಡುದು ಎಂದು ಬೆದರಿದರು. ಉಳಿದ ಖಾನರು ಮೇಲಿಂದ ಮೇಲೆ ಬರಲಾರಂಭಿಸಿದರು. "ಕರಿಯಿಂದ ತುರಗದ ರವದಿಂದ ಭೇರಿಯ ಭರದಿಂದ ಭೂಮಿ ಜರ್ಝರಿಸಿ (ಸೆ?) ದೊರೆ ರಾಮ ತನ್ನಯ ಬಲವ ಬೆನ್ನಿಗೆ ನಿಲಿಸಿ ಎದೆಗೆಡದೆ" ನಿಂತು ನೋಡಿದನು. ರಾಮನ ಕಡೆಯವರ ಕೈ ಮೇಲಾಯಿತು. "ರಾಮಗೆ ತಲೆಯೆಷ್ಟು ಬಾಣಾಸುರನ ತೆರದಿ ಸಾವಿರ ತೋಳ ಪಡೆದಿಹನೆ" ಎಂದು ಶತ್ರುಗಳು ಆಶ್ಚರ್ಯಪಡುವಂತಾಯಿತು. ಬಾದೂರನನ್ನು ಕೊಡಿರೆಂದು ಕೇಳಿದವರನ್ನು ಪರಿಪರಿಯಾಗಿ ಹೀಯಾಳಿಸಿದರು, ಕಪ್ಪರ, ಬಬ್ಬುರ, ತುಂಬುರ ಮುಂತಾದ ವೀರಾಧಿವೀರರು ಶತ್ರುಗಳ ಕಡೆಯಲ್ಲಿ ಹತರಾದರು. ಉಳಿದವರು ಪಲಾಯನಮಾಡತೊಡಗಿದರು. ರಾಮನ ಧರ್ಮಗಹಳೆಯ ಸದ್ದು ಕೇಳಿಬರುವತನಕ ಓಡಿಹೋದವರ ಆತಂಕವೂ ತಪ್ಪಲಿಲ್ಲ. ತಮಗಾದ ಅಪಶಕುನಗಳನ್ನು ಅಲಕ್ಷ್ಯಮಾಡಿದ್ದಕ್ಕಾಗಿ ಕೆಲವರು ಸುರುತಾಳನನ್ನು ನಿಂದಿಸಿದರು. ಹಲವರಿಗಂತೂ ರಾಮನ ಭಯವೇ ಭಯ! ಕತ್ತಿಯ ಬೆಳಕನ್ನು ಕಂಡರಾಗಲಿ, ನೀರಿನಲ್ಲಿ ತಮ್ಮ ಪ್ರತಿಬಿಂಬವನ್ನು ಕಂಡರಾಗಲಿ, ರಾಮನೇ ಬಂದನೆಂದು ಬೆಚ್ಚಿ ಬೀಳುತ್ತಿದ್ದರು. ನೇಮಿ ನಿರ್ವಾಹವಿಲ್ಲದೆ ಪಲಾಯನಸೂತ್ರವನ್ನೇ ಹಿಡಿದು ಹೆನ್ದೊರೆಯ ಕಡೆ ತಿರುಗಿದನು. ರಾಮನು ಧರ್ಮಗಹಳೆಯನ್ನು ಹಿಡಿಸಿದನು. ಯುದ್ಧ ಶಾಂತವಾಗಲು ಮರುಳು ತಂಡಗಳು ತೃಪ್ತಿಯಾಗುವಂತೆ ತಿಂದು ತೇಗಿ ರಾಮನನ್ನು ಕೊಂಡಾಡಿದುವು.

ನೇಮಿಯ ದಂಡು ದಿಕ್ಕಾಪಾಲಾಗಿ ಚೆದರಿದ್ದುದನ್ನು ಕಂಡು ಕಂಪಿಲನು ಹಿಗ್ಗಿದನು. ಬೈಚಪ್ಪನನ್ನು

ಬಹನಾಡಿಕೊಂಡು ಬಾಯಿ ತುಂಬ ಹೊಗಳಿ "ರಾಮರ ಬಲವೆಲ್ಲ ಲಯವಾದ (ವಾಗೆ?) ಹನುಮಂತ ಸಂಜೀವನ ತಂದ ತೆರನಾಯ್ತು" ಎಂದು ಮೆಚ್ಚಿದನು. ರಾಯರಾಹುತನು ರಾಮನ ಪ್ರತಿರೂಪವೇ ಸರಿಯೆಂದೂ, ಹಿಡಿಂಬನನ್ನು ಮುರಿದ ಭೀಮನೇ ಹೌದೆಂದೂ, "ಕತ್ತಿಯೊಳ್ ಕಲಿಪಾರ್ಥ ಶಕ್ತಿಯಲಿ ರಣಭೀಮ"ನೆಂದೂ, "ಪುತ್ರರಾಮಗೆ ಮುನ್ನ ಹೆಚ್ಚೆಂದು ನಾ ಕಂಡು ಲಕ್ಷರಾಜ್ಯವ ಧಾರೆಯೆರೆವೆ"ನೆಂದೂ, "ನೋಡುವೆ ಕರೆಸಯ್ಯ ಬಾಲೆಯರ ಮುತ್ತೈದೆ ವಾಲೆ ಬಳೆಗಳು ಮಣಿಯ ಕಾದವನ" ಎಂಬುದಾಗಿಯೂ ನುಡಿಯುತ್ತಿದ್ದನು. ಬೈಚಪ್ಪನು ರಾಮನ ಬಳಿಗೆ ಬಂದು, ರಾಜನ ಬಳಿಗೆ ದಯಮಾಡಿಸಬೇಕೆನ್ನಲು "ಆದೀತು ಮಂತ್ರಿಗಳರಸೆ ಶಿರೋಮಣಿಯೆ, ಏರಯ್ಯ ನೀವು ಪಾಲಿಕೆಯ" ಎಂದು ವಿನಯದಿಂದ ಉತ್ತರವಿತ್ತು, ಅತ್ಯಂತ ವೈಭವದಿಂದ ಹೊರಟನು. ಊರಜನರೆಲ್ಲ ಆತನನ್ನು ಕಂಡು ತಮ್ಮ ಆಪದ್ಬಾಂಧವನೆಂದು ಬಾಯಿ ತುಂಬ ಹೊಗಳಿದರು. ಕೆಲವರಿಗೆ ಆತನು ರಾಮನಿರಬಹುದೇನೋ ಎಂಬ ಸಂದೇಹವೂ ಆಯಿತು. ಹೆಣ್ಣುಮಕ್ಕಳಂತೂ ತಮ್ಮ ಸೌಭಾಗ್ಯವನ್ನು ಉಳಿಸಿಕೊಟ್ಟನೆಂದು ಹಿಗ್ಗಿದರು. ರಾಮನೂ ಕಾಟನೂ ಎಲ್ಲರಿಗೂ ನಮಸ್ಕರಿಸುತ್ತ ಕಂಪಿಲನ ಬಳಿಗೆ ಬಂದರು. ಕಂಪಿಲನಿಗೂ ಅವರನ್ನು ಕಂಡಕೂಡಲೆ ತನ್ನ ಕುಮಾರರಿರಬಹುದೇನೋ ಎನ್ನಿಸಿತು. ಆದರೆ, ಆ ಯೋಚನೆಯನ್ನು ಅಲ್ಲಿಗೇ ಬಿಟ್ಟು, "ರಾಯರಾಹುತರೆ ಬನ್ನಿ ಪ್ರಾಣಕಾಯ್ದಿರಿ ಎನ್ನ, ಯಾವ ಸ್ಥಳದೊಳಗೆ ಮನೆ ಮಠವು? ಸೇರಕ್ಕಿ ಎನಗಿತ್ತ ಭೂಮಿ ನಿಮ್ಮದು ಇಲ್ಲಿ ದಯಮಾಡಬಹುದು" ಎಂದು ಅವರನ್ನು ಬರಮಾಡಿಕೊಂಡನು. ರಾಮನು "ಬಾಲನ ಕೊಲಿಸಿದೊ ರಾಣಿಯೆಂಬರು ನಿನ್ನ ಪರದಿ ಇದ್ದಲ್ಲಿ ಉಳಿವವರೆ (?)" ಎಂದನು. ತಕ್ಷಣವೇ ಕಂಪಿಲನಿಗೆ ಮಗನ ಧ್ವನಿ ಪತ್ತೆಯಾಯಿತು. ಮಗನ ಸ್ವರವನ್ನು ಗುರುತು ಹಿಡಿದು "ತೊಟ್ಟಂಗಿ ಮೂರು ಪಾಲಾಗೆ" ಹರ್ಷಬಾಷ್ಪಗಳನ್ನು ಸುರಿಸುತ್ತ, ತಲೆಯ ಮೇಲಿನ ಟೊಪ್ಪಿಯನ್ನು ತೆಗೆದು ಮುದ್ದಾಡಿದನು. ರಾಯನಿಗೆ "ಕಾಲನು ಕರೆದೊಯ್ದ ಜೀವವನು ಕಳುಹಿ"ದಂತೆಯೂ "ಹಾವಿನ ಪರೆಯ ಕಳೆದಂತೆ"ಯೂ, "ಹೋಗಿದ್ದ ನಯನಗಳು ಎಲ್ಲವು ಬಂದಂತೆ"ಯೂ ಆಯಿತು. ತನ್ನ ಅಕಾರ್ಯಕ್ಕಾಗಿ ನಿಂದಿಸಿಕೊಂಡಿದ್ದಲ್ಲದೆ, ಮಕ್ಕಳನ್ನು ಕೊಲ್ಲದೆ ಕಾಯ್ದ ಪ್ರಧಾನಿಯನ್ನು ಮೆಚ್ಚಿ ತನಗೆ ಬುದ್ಧಿ ಕಲಿಸಿದನೆಂದು ಹೇಳಿದನು. ರಾಮನ ಪುನರಾಗಮನವನ್ನು ಕೇಳಿದ ಹರಿಯಮ್ಮ, ಮಾಯಕ್ಕ (ಮಾರಮ್ಮ?) ಲಿಂಗಮ್ಮ (ಸಿಂಗಮ್ಮ?) ಮೊದಲಾದವರು ಧಾವಿಸಿ ಬಂದು, ತಮ್ಮ ತಮ್ಮ ಅಮಿತಾನಂದವನ್ನು ಪ್ರಕಟಪಡಿಸಿದರು. ಆತನ ತಾಯಂದಿರಂತೂ "ಯಾವಲ್ಲಿ ಇದ್ದಿರಿ, ಹೇಳದೆ ಹೋಗಬಹುದೆ" ಎಂದು ಕೇಳಿದರು. ರಾಮನು ಅತ್ಯಂತ ವಿನಯದಿಂದ "ತಾಯೆ ನಿಮ್ಮಯ ಮಾತ ಮೀರಿ ನಡೆಯಲು, ಎಮಗೆ ಗುರುರಾಯ ತಂದ ಕಂಟಕವ," "ಬಾರಹನ್ನೆರಡೊರುಷ ಪಾಂಡವರ ಸುತರಂತೆ ನಾವಿರ್ದೆವಮ್ಮ ಮರೆಯಾಗಿ" ಎಂದು ಉತ್ತರವಿತ್ತನು. ಈ ವೇಳೆಗೆ "ಅಂಧಕನಿಗೆ ಕಣ್ಣು ಬಂದಂತೆ ಪುರಜನರು ತುಂಬಲು ನಯನದಿ ಜಲವ," ರಾಮನು "ಬಂದ ಕಂಟಕವನು ಕಳೆದುಳಿದೆ ಅಳಬೇಡಿ" ಎಂದು ಅವರನ್ನು ಸಂತೈಸಿ ಕಳುಹಿಸಿದನು. ಅವರು ಎಲ್ಲರಿಗೂ ನಮಸ್ಕರಿಸಿ, "ಮುತ್ತೈದೆತನವನು ಕೊಟ್ಟನು ಮಂತ್ರಿ" ಎಂದು ಕೃತಜ್ಞತೆಯನ್ನು ಸೂಚಿಸಿದರು. ಕಂಪಿಲನು ಬೈಚಪ್ಪನನ್ನು ಕುರಿತು ರಾಮನಿಗೆ ಪಟ್ಟಾಭಿಷೇಕವನ್ನು ಮಾಡಲು ಏರ್ಪಡಿಸಬೇಕೆಂದನು. ಅಪ್ಪಣೆಯಾಗುವುದೇ ತಡ, ಎಲ್ಲವೂ ಸಿದ್ಧವಾದುವು. ಪ್ರಧಾನಿಯ ಮಗನಾದ ನೀಲಕಂಠನು ರಾಮನ ಸಚಿವನಾದನು. ದಾನ ಧರ್ಮಾದಿಗಳು ನೆರವೇರಿದುವು. ಆ ವಿಜೃಂಭಣೆಯನ್ನು ಕಂಡ ರತ್ನಾಜಿ ವಿಷಯವೇನೆಂದು ಸಂಗಾಯಿಯನ್ನು ಕಳುಹಿಸಿ ತಿಳಿಯಲು, ಮುದಿಯ ಕಂಪಿಲನಿಂದ ತಾನು ಮೋಸ ಹೋದೆನೆಂದು ಕಿಡಿಕಿಡಿಯಾಗಿ, "ಸತ್ತರು ಮರಳೊಮ್ಮೆ ಬಿಟ್ಟರೆ ರಾಮನ ರತಿಲ್ಲ ನಾನವನ ಮಡದಿ" ಎಂದು ಪಂಥ ಕಟ್ಟಿಕೊಂಡು ಆತ್ಮಹತ್ಯೆಮಾಡಿಕೊಂಡಳು. ಸಂಗಾಯಿಯೂ ಒಡತಿಯನ್ನೇ ಹಿಂಬಾಲಿಸಿದಳು. ಈ ಸುದ್ದಿಯನ್ನು ತಿಳಿದ ಕಂಪಿಲನು "ಹೋಗಲಿ ಹೊಲೆರಂಡೆ" ಎಂದುಕೊಂಡು,

"ಮೂಳ ಕತ್ತೆಯ ಮೇಲೆ ಬೀದಿ ಮೆರವಣಿಗೆ ಮಾಡಿ ಆನೆ ಕಾಲಿಂದ" ಎಳಿಸಬೇಕೆಂದು ಇದ್ದೆನೆಂದು ನುಡಿದನು. ರಾಮನು ಮಾತ್ರ, ರತ್ನಿಯ ಸಾವನ್ನು ಕೇಳಿ, "ಹರಹರ ಪರಮೇಶ ತಮಗೇನು ಬಂದುದು ಧರೆ ನಿಂದ್ಯನನು ಹೊತ್ತೆ ನಾನು" ಎಂದು ಪಶ್ಚಾತ್ತಾಪಪಟ್ಟನು.

## ಮಾತಂಗಿಯ ಜನನ ಮತ್ತು ಕುಮಾರರಾಮನ ರಾಜ್ಯಭಾರ

ಸೋತ ನೇಮಿಯೂ, ಕಳೆಗುಂದಿದ ಖಾನರೂ ಬಂದು ತಮ್ಮ ದುರ್ಗತಿಯನ್ನು ಸುಲ್ತಾನನಿಗೆ ವಿನಂತಿ ಮಾಡಿಕೊಂಡರು. ಮಂತ್ರಿ ಬೈಚಪ್ಪನು ರಾಮನನ್ನು ಬಚ್ಚಿಟ್ಟಿದ್ದು, ಸಕಾಲದಲ್ಲಿ ಆತನನ್ನು ಕರೆತಂದು, ತಮ್ಮ ಸೇನೆಯನ್ನು ಸಂಹಾರಮಾಡಿಸಿದನೆಂದು ತಿಳಿಸಿದರು. ಸುಲ್ತಾನನು ಬೈಚಪ್ಪನನ್ನು ಮೆಚ್ಚಿ, ತನ್ನವರನ್ನು ಅವಹೇಳನ ಮಾಡಿದನು. ಈ ವೇಳೆಗೆ, ಅತ್ತ, ಸತ್ತ ರತ್ನಿಯನ್ನು ಕಂಡು ಯಮನು ಆಕೆಯ ಆಯುಸ್ಸು ಇನ್ನೂ ತೀರಿರಲಿಲ್ಲವೆಂದೂ, ಅವಳು ಚಲ ಹೊತ್ತು ಬಂದವಳೆಂದೂ ಆಕ್ಷೇಪಿಸಿ, ಡಿಳ್ಳಿಯಲ್ಲಿ ಮಾತಂಗಿ ಕುಲದಲ್ಲಿ ಜನಿಸುವಂತೆ ನಿಯಾಮಿಸಿದ್ದನು. ಅಂತೆಯೇ ಆಕೆ, ಕೀಳುಕುಲದಲ್ಲಿ ಮತ್ತೆ ಹುಟ್ಟಿದ್ದಳು. ಆದರೆ, ನೋಡಲು ಸ್ಫುರದ್ರೂಪಿಯಾಗಿದ್ದಳು. ಮಾತಂಗಿ ಎಂಬ ಹೆಸರಿನಿಂದ ಸುಲ್ತಾನನ ಬಳಿಗೆ ಬಂದಳು. ರಾಮನಿಂದ ಪರಾಭವವನ್ನು ಪಡೆದ ಸುಲ್ತಾನನು ಖಿನ್ನನಾಗಿರಲು, ಮಾತಂಗಿ "ರಾಮನ ತಲೆ ತರುವೆ ಪಾಲಿಸಿ ವೀಳ್ಯವ" ಎಂದು ಬೇಡಿದಳು. ವೀರಾಧಿವೀರರಾದ ಖಾನರಿಂದಲೇ ಆಗದ ಕೆಲಸ, ಆಕೆಯಿಂದ ಆದೀತೇ ಎಂದು ಸುರುತಾಳನು ಶಂಕಿಸಲು, "ಹೀನಾಯ ತರುವಂಥ ನಾರಿ ಅಲ್ಲವೊ ರಾಯ, ರಾಮನ ಮರಣ ಹೆಣ್ಣೊಳಗೆ. ಕೇಳಲಿಲ್ಲವೊ ಸುದ್ದಿ ಕೊಲಿಸೊಮ್ಮೆ ಮರೆಮಾಡಿ ಠವುಳಿ ಮಾಡಿದನು ಕಂಪಿಲನು," "ಇಟ್ಟಂತ ಛಲಸದವ ಬಿಟ್ಟು ಬಾಳ್ವೆ(ನೇ)ನೇ ರಾಯ ? ಕೊಟ್ಟೆನುರುಳಿಗೆ ಪ್ರಾಣವನು, ಸೃಷ್ಟಿಕರ್ತನು ಬ್ರಹ್ಮ ಕಾಲಿನಿಂದಲಿ ಬಂದು ಹುಟ್ಟಿದೆ ನಿಮ್ಮಯ ಪುರದಿ," "ರಾಮನ ಕೊಲಿಸಿದೊ ರತ್ನಾಜಿ ಎಂಬುದು ಬಿಡದು ಹೀನಾಯ, ಹೊರಬಹುದೆ ಬರಿದೆ, ಹ್ಯಾಗಾಗೆ ಅಪಕೀರ್ತಿ ಸಾಧನಕ್ಕೆ ಗುರಿಯಾದೆ ಚೆಂಡಾಡುವೆ ಕೊಡು ರಾಯ ವೀಳ್ಯ" ಎಂದು ನುಡಿದಳು. ಸುರುತಾಳನೂ ಆಕೆಯ ಪುನರ್ಜನ್ಮವನ್ನು ನಂಬಿ, "ಬಾಲೆಯಿಂದಲಿ ಎನ್ನ ಹೋದ ವಿಸಾಸೆಯು ಬಂದು ಕೂಡ್ಯಾವು" ಎಂದು ಕೊಂಡನು. ಆದರೆ, ಆಕೆಯನ್ನು ಕುರಿತು, ಇನ್ನೂ ಸ್ವಲ್ಪ ಕಾಲ ತಾಳಬೇಕೆಂದೂ ಸಮಯ ಕಾದು ತಾನು ಆಕೆಯನ್ನು ಕಳುಹಿಸಿಕೊಡುವೆನೆಂದೂ ಭರವಸೆಯಿತ್ತನು.

ಇತ್ತ, ರಾಮನ ರಾಜ್ಯಭಾರವು ಬಹಳ ವೈಭವದಿಂದ ಸಾಗಿತ್ತು. ಮಕ್ಕಳ ಮೇಲ್ಮೆಯನ್ನು ಕಂಡು ಕಂಪಿಲನೂ ಹಿಗ್ಗುತ್ತಿದ್ದನು. ಅಷ್ಟು ಹೊತ್ತಿಗೆ ಸರಿಯಾಗಿ, ಗುರುಮುನಿಗಳೂ ಆಗಮಿಸಿದರು. ಕಂಪಿಲನನ್ನು ಕುರಿತು, ಮಗನಿಗೆ ಕೇಡುಗಾಲ ಸಮೀಪಿಸುತ್ತಿದೆಯೆಂದೂ, "ಕಡುಪಾಪಿ ರತ್ನಾಜಿ ಡಿಳ್ಳಿಯೊಳಗೆ ಜನಿಸಿ ಬರುವಳು ದಂಡೆತ್ತಿ ಮರಳಿ" ಎಂದೂ ಭವಿಷ್ಯವನ್ನು ಅರುಹಿದನು. ರಾಮನ ಬಳಿಗೂ ಸಾರಿ, "ಮಗನೆ, ಲಾಲಿಸು ಮುಂದೆ ಸ್ಥಿರವಲ್ಲ ನರಕಾಯ ನೆರೆಮನೆಗೆ ಹೋಗಿ ಕುಳಿತಂತೆ," ಚತುರಂಗ, ಬಂಧು ಬಳಗಗಳಾವುವೂ ಸಾಯುವ ಕಾಲಕ್ಕೆ ಬರುವುದಿಲ್ಲ, ಧರ್ಮಕಾರ್ಯಾದಿಗಳನ್ನು ಮಾಡು, ಧರ್ಮವನ್ನು ಬಿಡದಿರು, ಬೆನ್ನ ಬಿದ್ದವರನ್ನು ಕೈಬಿಡಬೇಡ. ಕಡೆಯ ಕಾಳಗದಲ್ಲಿ ಸದ್ಗತಿ ದೊರೆಯುವುದು. "ಕಡಿಯದಿರು ಹೆಣ್ಣು ಜಲ್ಮವನು" —ಎಂದು ಹಲವಾರು ರೀತಿಯಲ್ಲಿ ನೀತಿ ಹೇಳಿ ತೆರಳಿದರು. ಕೂಡಲೆ ರಾಮನು ನೀಲಕಂಠನನ್ನು ಬರಮಾಡಿಕೊಂಡು, ಮುನಿಗಳು ಸೂಚಿಸದಂತೆಯೇ ಧರ್ಮಕಾರ್ಯಗಳನ್ನು ನಡೆಸುವಂತೆ ಆಜ್ಞಾಪಿಸಿದನು. ಇಷ್ಟೇ ಅಲ್ಲದೆ, ಈಶ್ವರನು ರಾಮನಿಗೆ ಸ್ವಪ್ನದಲ್ಲಿ ದರ್ಶನವಿತ್ತು, ಆತನಿಗೆ ಪುತ್ರಸಂತಾನವಾಗುವುದೆಂದೂ, ಅದಕ್ಕೆ ಜಟ್ಟಂಗಿ ಎಂಬುದಾಗಿ ಹೆಸರಿಡಬೇಕೆಂದೂ, ಮಾತಂಗಿಯಿಂದ ಮರಣವು ಪ್ರಾಪ್ತವಾಗುವುದೆಂದೂ ತಿಳಿಸಿದನು.

ರಾಣಿಗೂ ಇದೇ ರೀತಿಯಾದ ಕನಸಾಯಿತು. ಈ ಮಧ್ಯೆ ರಾಮನಿಗೆ, ತನ್ನ ತಂದೆಗೆ ದ್ರೋಹ ಮಾಡಿ ಸುಲ್ತಾನನಿಗೆ ಕಾಗದ ಬರೆದು, ಯುದ್ಧವನ್ನು ತಂದೊಡ್ಡಿದ ಪಾಳೆಯಗಾರರನ್ನೆಲ್ಲ ಮದವಿಳಿಯುವಂತೆ ದಂಡಿಸಬೇಕೆನ್ನಿಸಿತು. ಅಂತೆಯೇ ಕಾಟಣ್ಣನನ್ನು ಕರೆಸಿ ದಂಡೆತ್ತಿ ತೆರಳಿ, ಗುತ್ತಿಯ ಚಾಮಯ್ಯ ಮೊದಲಾದವರನ್ನು ಮತ್ತೆ ಭಂಗಿಸಿದನು. ಕಾಟನಂತೂ, ಡಿಳ್ಳಿಯತನಕ ಹೋಗಿ ಸುಲ್ತಾನನನ್ನೂ ಬೆದರಿಸಿ ಬಂದನು. ಈಶ್ವರನ ಅನುಗ್ರಹದಂತೆ, ರಾಮನ ರಾಣಿಯರಲ್ಲಿ ಒಬ್ಬಳಾದ ಸುಭದ್ರೆಗೆ ಆಷಾಢಮಾಸದ ಆದಿತ್ಯವಾರದಂದು ಸೂರ್ಯೋದಯವಾಗುವ ವೇಳೆಗೆ ಪುತ್ರ ಜನನವಾಯಿತು. ಕಂಪಿಲ ಮತ್ತು ಹರಿಯಾಲದೇವಿಯರ ಸಂತಸ ಹೇಳತೀರದು. ಜಯಶಾಲಿಯಾದ ಕಾಟಣ್ಣನನ್ನು ರಾಮನು ಮಹರ್ನವಮಿಯ ಬಯಲಿನಲ್ಲಿ ಎದುರುಗೊಂಡು ಮನ್ನೆಯರನ್ನು ಸತ್ಕರಿಸಿ ಕಳುಹಿಸಿದನು. ಸಂತೋಷದ ಮೇಲೆ ಸಂತೋಷ ; ವೈಭವದ ಮೇಲೆ ವೈಭವ. ನೀಲಕಂಠನು ಬಂದು ತಾನು ಮಾಡಿದ ಧರ್ಮಕಾರ್ಯಗಳ ವರದಿಯನ್ನು ರಾಮನಿಗೆ ಒಪ್ಪಿಸಿದನು. "ಗಾವುದಕೆ ಮೂರೆರಡು ರಾಮನಾಥನು ಎಂಬ ದೇವರಾಲಯವ ನಿರ್ಮಿಸಿದೆ" ಎಂದನು. ಈ ರೀತಿ ರಾಮನ ರಾಜ್ಯಭಾರ ಹಲವು ವರ್ಷಗಳು ಸಾಗಿದುವು.

## ಮಾತಂಗಿಯ ಮುತ್ತಿಗೆ

ಸುರುತಾಳನಿಗೆ ರಾಮನ ಮೇಲೆ ದಂಡನ್ನು ಕೊಟ್ಟು ಕಳುಹಿಸಬೇಕು ಎನ್ನಿಸಿತು. ಮಾತಂಗಿಯನ್ನು ಕರೆಸಲು ಆಕೆ, "ಕೊಡು ಭೂಪ ವೀಳ್ಯವನು ಹೊರಡಿಸಿ ದಂಡನು ತರುವೆನು ರಾಮನ ತಲೆಯು" ಎಂದಳು. ಸಂತೋಷಗೊಂಡ ಸುಲ್ತಾನನು ನೇಮಿಗೆ ಹೇಳಿ ಕಳುಹಿಸಿ, ಖಾನರಿಗೆಲ್ಲ ಬಂದು ಕೂಡುವಂತೆ ಕಾಗದ ಬರೆಸಿದನು. ಅವರಿಗೆಲ್ಲ ಹೆಂಗಸಿನ ಮಾತನ್ನು ನೆಚ್ಚಿ ಮತ್ತೆ ಸಾಯುವ ಕಾಲ ಬಂದಿತಲ್ಲ ಎಂದು ಸಂಕಟ. ನಿರ್ವಾಹವಿಲ್ಲದೆ ಸಿದ್ಧರಾದರು. ಮಾತಂಗಿ "ಕರ್ನಾಸ (?) ಸಿಂಗಾಡಿ, ಹೊಂಗೆಲಸದ ವೈಜೋಡು" ಗಳನ್ನು ಧರಿಸಿ ಗಂಡಿನಂತೆಯೇ ಮುಂಡಾಸನ್ನು ಇಟ್ಟುಕೊಂಡು ಬಿಳಿಯ ಕುದುರೆಯನ್ನೇರಿ ದಂಡುಗೂಡಿ ಹೊರಟಳು. ಬೇಗ ಬೇಗ ಸಾಗಿ ಬಂದು ಗಡಿಯು ಬೇಡರನ್ನು ತಾಗಿದರು. ಪರಸ್ಪರ ಮೂದಲಿಕೆಗಳಿಂದ ಕದನ ಮೊದಲಾಯಿತು. ಕೋಟೆಯನ್ನೇ ಮುತ್ತಿದರು. ಆಟವಾಡುತ್ತಿದ್ದ ರಾಮನು ಕೂಡಲೆ ಎದ್ದು ತನ್ನ ಮನ್ನೆಯರೊಂದಿಗೆ ಶತ್ರುಗಳನ್ನು ಎದುರಿಸಿದನು. ಶತ್ರುಗಳು ಮುಂದೆ ಸಾಗಲಾರದೆ ಹಿಮ್ಮೆಟ್ಟಿದರು. ಅಂದಿನ ರಾತ್ರಿ ಶತ್ರುವಿನ ಪಾಳೆಯದ ಮೇಲೆ ಬೀಳಬೇಕೆಂದು ಕಂಪಿಲನು ಸೂಚಿಸಿದನು. ರಾಮನಿಗಾದರೋ ಇರುಳು ಕಗ್ಗೊಲೆ ಅಷ್ಟು ಒಪ್ಪಿಗೆಯಲ್ಲ. ಆದರೂ ತಂದೆಯ ಮಾತಿಗೆ ಒಪ್ಪಿ ಭಟರಿಗೆ ಅನುಮತಿಯಿತ್ತನು. ಸೋತು, ದಣಿದು, ನಿದ್ರಿಸುತ್ತಿದ್ದ ಸೇನೆ, ಆ ಇರುಳುಮುತ್ತಿಗೆಯಿಂದ ಮತ್ತಷ್ಟು ಕಂಗೆಟ್ಟಿತು. ಬೆಳಗಾಗುವ ವೇಳೆಗೆ ಖಾನರೆಲ್ಲ ಕುಪಿತರಾದರು. ತಮಗೆ ಆ ದುಃಸ್ಥಿತಿಯನ್ನು ತಂದಂಥ ಮಾತಂಗಿಯನ್ನು ಬಾಯಿಗೆ ಬಂದಂತೆ ಬೈದರು. ಖಾನರ ಅವಹೇಳನವೊಂದು ಕಡೆ, ಸೇನೆಯ ಪರಾಭವವೊಂದು ಕಡೆ ಸಂಭವಿಸಿ ಮಾತಂಗಿಗೆ ತುಂಬ ಸಂಕಟವಾಯಿತು. ಹಿಂತಿರುಗುವುದೇ ಸರಿ ಎನ್ನಿಸಿತು. ಈ ವೇಳೆಗೆ ಅನಿರೀಕ್ಷಿತವಾಗಿ ರತ್ನಾಜಿಯ ಮಗನೂ, ತೆಲುಗರ ಮುಂದಾಳುವೂ ಆದ ಯಲ್ಲರಸನೆಂಬಾತನು, ಕಂಪಿಲನ ಮೇಲಿನ ಆಗ್ರಹದಿಂದ, ತನಗೆ ಪಟ್ಟಕಟ್ಟಿದ್ದೇ ಆದರೆ, ಕೋಟೆಯ ಬಾಗಿಲನ್ನು ತೆಗೆಸುವೆನೆಂದೂ ನೇಮಿಗೆ ಜಯವು ಸಿದ್ಧವೆಂದೂ, ಮಾತಂಗಿಗೆ ಒಂದು ಪತ್ರವನ್ನು ಬರೆದು ಕಳುಹಿಸಿದನು. ಎಲ್ಲರ ಮುಖವೂ ಅರಳಿತು. ಮಾತಂಗಿ ಅಂತೆಯೇ ಭರವಸೆಯನ್ನು ಕೊಟ್ಟು ಕಳುಹಿಸಿದಳು. ಅದೇ ಮೇರೆಗೆ ಮಾತಂಗಿ ಮತ್ತೆ ಕೋಟೆಯನ್ನು ಮುತ್ತಿದಳು. ರಾಮನಿಗೆ ಈ ಸುದ್ದಿ ತಿಳಿಯಿತು.

ಮಾತಂಗಿಯಿಂದ ತನಗೆ ಮರಣಕಾಲವು ಸನ್ನಿಹಿತವಾಯಿತೆಂದು ರಾಮನು ಬಗೆದನು. ನೀಲಕಂಠನಿಗೆ

ತಾನು ಕೂಡಲೇ ಯುದ್ಧಕ್ಕೆ ಬರುವುದಾಗಿ ಹೇಳಿ ಕಳುಹಿಸಿ, ದೇವರ ದರ್ಶನ ಮಾಡಿಕೊಂಡು ಬರಲು ಈಶ್ವರನ ಗುಡಿಗೆ ಬಂದನು. ದೇವರು ಎಡಗಡೆಯ ಹೂವನ್ನು ದಯಪಾಲಿಸಲು, ಅದನ್ನು ಸ್ವೀಕರಿಸಿ, ತಂದೆ ತಾಯಿಗಳ ಬಳಿಗೆ ಬಂದನು. ತನ್ನ ಮಗನಿಗೆ ಪಟ್ಟಕಟ್ಟಬೇಕೆಂದು ಹೇಳಿ, ಆರು ವರ್ಷದ ಜಟ್ಟಂಗಿಗೇ ಅಭಿಷೇಕ ಮಾಡಿಸಿದನು. ತಾನು ಸತ್ತರೆ ಯಾರೂ ಕೊರಗಬಾರದು ಎಂದನು. ವೀರರಾಮನ ಮಾತುಗಳು ಎಲ್ಲರ ಮನಸ್ಸನ್ನೂ ಕಲಕಿತು. ಹೆಂಡತಿಯರನ್ನು ಕುರಿತು, ತಾನು ಸಾಯುವ ಸುದ್ದಿ ತಿಳಿದ ಕೂಡಲೆ ಸಹಗಮನ ಮಾಡಲು ಅಣಿಯಾಗಿರಬೇಕು ಎಂದನು. ರಾಮನ ಈ ಏರ್ಪಾಡುಗಳನ್ನೆಲ್ಲ ಕಂಡು ಮಂತ್ರಿಗಂತೂ ತುಂಬ ಸಂಕಟವಾಯಿತು. ಹರಿಯಮ್ಮನೇನೋ ದುಃಖದಿಂದ "ಪುತ್ರ ನೀನಳಿಯಲು ಧಾತ್ರಿಯು ಉಳ್ಳನಕ ಕೀರ್ತಿ ಮೆರೆಯದೆ ಕಾವ್ಯದಲಿ, ಬೆಚ್ಚದೆ ರಣದೊಳು ಸತ್ತ[ರೆ] ಕೈವಲ್ಯವಪ್ಪುದು ಸಿವಗಣಪದವು" ಎಂದಳು. ಆಗಲೂ ರಾಮನು ಮಂತ್ರಿಯೊಡನೆ "ಕೊಡಬೇಡಿ ಬಾದೂರನ" ಎಂದು ಹೇಳುವುದನ್ನು ಮರೆಯಲಿಲ್ಲ. ಕಾಟಣ್ಣನು ಕೂಡಲೆ ಯಲ್ಲರಸನು ಬಗೆದ ದ್ರೋಹದ ಸುದ್ದಿಯನ್ನು ತಂದು ಮುಟ್ಟಿಸಿದನು. ರಾಮನಿಗೆ ಅತ್ಯಾಶ್ಚರ್ಯವಾಯಿತು. ಆತನಿಗೆ ಕೋಪವುಂಟಾಗಿ ತೆಲುಗರನ್ನೆಲ್ಲ ಒಂದು ನರಪಿಳ್ಳೆಯೂ ಉಳಿಯದಂತೆ ಕೊಲ್ಲಿಸಿ, ಯಲ್ಲರಸನ ತಲೆಯನ್ನೂ ಕಡಿಸಿ, ನೇಮಿಗೆ ಕೊಟ್ಟು ಕಳುಹಿಸಿದನು. ಅದನ್ನು ಕಂಡ ಶತ್ರುಗಳು, ಮಾತಂಗಿಯನ್ನು ಮತ್ತೆ ಹಂಗಿಸಲಾರಂಭಿಸಿದರು.

ಆದರೂ ಶತ್ರುಗಳು ಕೋಟೆಯ ಕಡೆ ನುಗ್ಗಿ ಬರಲು, ರಾಮನ ಕಡೆಯವರಿಗೂ ಅವರಿಗೂ ಘೋರವಾದ ಕಾಳಗವಾಯಿತು. ರಾಮನ ಆಗಮನ ಮಾತ್ರದಿಂದಲೇ ಅವರು ತಲ್ಲಣಿಸಿದರು. ರಾಮನ ಪಕ್ಷದಲ್ಲಿದ್ದ, ಮುದ್ದ, ಹಂಪ, ರಂಗ, ಲಿಂಗ, ಬಸವಜಂಗಮ, ಸಂಗಯ್ಯ, ಬಾದೂರ, ಲೆಂಕೆ ಹನುಮ, ಕೊಡಲಿ ಸರ್ಜ ಹನುಮನಾಯ್ಕ, ಚೆನ್ನಮಲ್ಲ, ಪಾಂಚಾನ ಗಂಗ, ಚಿಕ್ಕಣ್ಣ, ಮಾಣಿಕಶೆಟ್ಟಿ, ಮಡಿವಾಳ ಮಾಚ, ಗಂಗೆಯ ಮಗ ನಾಗ, ಮರಚೆಟ್ಟಿ ಮೊದಲಾದ ಏಳುನೂರಿಪ್ಪತ್ತು ಮನ್ನೆಯರೂ ಶತ್ರುಗಳನ್ನು ಸಂಹರಿಸಲು ರಾಮನನ್ನು ಅಪ್ಪಣೆ ಬೇಡುತ್ತಿದ್ದರು. ರಾಮನು "ಹಳದಿ ಹಸಿರು ಪಟ್ಟೆ ಬಳಿದು ಕೆಂಪಿನ ಮೇಲೆ ಎಳಗಾವಿ ಚಂದ್ರ ಸುರಿಪಟವ(ದ ?) ಹಿರಿದು ಸತ್ತಿಗೆ"ಯಿಂದ ಕೂಡಿ ದೇವೇಂದ್ರನಂತೆ ಸಾರಿ ಬಂದನು. ಮಹರ್ನವಮಿ ಬಯಲಿನಲ್ಲಿ ಶತ್ರುಗಳಿಬ್ಬರೂ ಎದುರು ಬದುರಾಗಿ ನಿಂತರು. ಲಂಬೋಜಿಖಾನ, ಮಿಂಡಾಗಾಲಿಯಖಾನ, ಇಬ್ರಖಾನ, ಮುಂತಾದವರು ಪ್ರತಿಭಟಿಸಲು, ರಾಮನ ವೀರರು ಹೋರಾಡತೊಡಗಿದರು. ರಾಮನೂ ಸಹ ವ್ಯಾಘ್ರದಂತೆ ಎದ್ದು, ರುದ್ರಾವತಾರವನ್ನು ತಾಳಿ, ಕಾಟಯ್ಯನ ಸಂಗಡ ಸೇರಿ, ಎಡ ಬಲಗಳಲ್ಲಿ ಶತ್ರುಗಳನ್ನು ಒಂದೇಸಮನೆ ಸವರಿದನು. ಬಾದೂರನು ಸಿಕ್ಕಿಬಿದ್ದಂತಾಗಲು, ಒಕ್ಕಲಿಗರ ಮುದ್ದ, ಲಿಂಗ, ಹಂಪ ಮೊದಲಾದವರು ಹೊರಟು ಶತ್ರುಗಳ ಮೋರೆಗಳನ್ನು ಕೆತ್ತಿದರು. ಬಾಲಿಯಖಾನ, ಲಾಲಮಿಯರು ರಾಮನನ್ನು ಅಡ್ಡಗಟ್ಟಿ ಗಾಯಗೊಂಡರು. ಈ ವೇಳೆಗಾಗಲೇ ತನ್ನ ಕಡೆಯಲ್ಲಿ ಕೆಲವರು ಸತ್ತಿದ್ದನ್ನು ಕಂಡು, ಅವರು ಯಾರು ಯಾರೆಂದು ರಾಮನು ಕೇಳಿದನು. ಭಂಟರು "ನಲ್ಲಿಸಂಗನು ಬಿದ್ದ, ಬಿಲ್ಲರಂಗನು ಬಿದ್ದ, ಬಿಲ್ಲ ನಾಯ್ಕಗೆ ಹಸಿಗಾಯ, ಕಲ್ಲಿ ಕೋಟೆಯ ಚಿಕ್ಕ, ಕಡಪೆ ರಂಗನು ಸತ್ತ, ಬಳ್ಳಾರಿ ಹನುಮ ಹೇಗೋ ಉಳಿದುಕೊಂಡ, ಮಾದಿಗರ ಹಂಪಗೆ ಮೂರು ಅಂಬಿನ ಗಾಯ, ಕಾಳೆ ಹೊಲೆಯ ಬಿದ್ದ" ಎಂದು ತಿಳಿಸಿದರು. ಗಾಯಗೊಂಡವರನ್ನು ಊರಿಗೆ ಕಳುಹಿಸಿದನು. ದೇವರನ್ನು ಧ್ಯಾನಿಸಿ, "ಭೂಮಿ ಬ್ರಹ್ಮಾಂಡದ ಆಧಾರಕರ್ತನೆ ಮಾಡಿದಾತನು ನೀನು, ಎನ್ನ ನೋಡಯ್ಯ, ವಿನಯದಲಿ ಕುಮಾರ ಮಾಡುವ ಕಾರ್ಯ, ಸಾಯಲು ಮುಕ್ತಿ ಪಾಲಿಪುದು" ಎಂದು ಬೇಡಿದನು. ಈಶ್ವರನೂ ಸಹ ರಾಮನನ್ನು ಅನುಗ್ರಹಿಸಿ, ಆತನ ಮಂಡೆಯ ಮಧ್ಯದಲ್ಲಿ ನಿಲ್ಲಲು, ರಾಮನ ರೋಮಗಳು ಅಂಬಿನಂತಾದುವು. ಗಾಲಿಖಾನನೇ ಮೊದಲಾದ ತುರುಷ್ಕ ಪ್ರಮುಖರು ಸತ್ತಿದ್ದನ್ನು ಕಂಡು, ನೇಮಿಯ ಮಂದಿ ಮಾತಂಗಿಯನ್ನು ಮೂದಲಿಸಿ, ನೇಮಿಗೆ ದೂರು ಹೇಳಲು, ಆತನು ಅವರನ್ನು ಸಮಾಧಾನಮಾಡಿದನು. ಕಡೆಗೆ, ಮಾತಂಗಿಯೂ ಸಹ, ಖಾನರಿಗೆ ಸೆರಗನ್ನು ಹಾಸಿ, ಸಾಷ್ಟಾಂಗವೆರಗಿ

"ಗೆಲಿಸುವೆ ಛಲ ಪದವ, ಹೊಗಲೇರಿ ಇನ್ನೊಮ್ಮೆ ಅರೆಶಕ್ತಿಗವನಾ ನಿಲ್ಲಿಸುವೆ" ಎಂದು ಹೇಳಿ ಅವರನ್ನು ಹುರಿದುಂಬಿಸಿದಳು.

## ಕುಮಾರರಾಮನ ಕಡೆಗಾಲ

ಮತ್ತೆ ಬಿರುಸಾದ ಕಾಳಗ ಘಟಿಸಿತು. ಒಬ್ಬೊಬ್ಬ ವೀರನೂ ಮೈಮರೆತು ಹೋರಾಡಿದನು. ಕಡೆಗೆ ಮಾತಂಗಿ ರಾಮನಿಗೆ ಎದುರಾಗಿ ಬಂದಳು. ವೀರಾವೇಶದಿಂದ ಕಾದಾಡುತ್ತಿದ್ದ ರಾಮನು ಎತ್ತಿದ ಕತ್ತಿಯನ್ನು ಇಳುಹಬೇಕೆನ್ನುವಷ್ಟರಲ್ಲಿ, ಮೂಗುತಿಯನ್ನು ಕಂಡು ತಟಸ್ಥನಾದನು. ಆಕೆಯಾದರೋ "ಕಡಿಯದೆ ಬಿಡನೆಂದು ಎದೆಯ ಸೆರಗನು ತೆಗೆದು ಕಳಶ ಕುಚಗಳನು ತೋರಿದಳು." ರಾಮನು ಆ ಕೂಡಲೆ "ಹರಹರ ತನ್ನಯ ಪಂಥ ಬಿರುದಿಗೆ ಹೀನ ಬಂತು. ಭೂಕಾಂತಿ ಉಳ್ಳನಕ ಕ್ಯಾಕೊಡೆದು ಬಾಳುವ[ದೆ] ಕಾಯ ? ಮಾತು ನಿಲ್ಲುವುದು ಮಧ್ಯದಲಿ," "ಮಾಡಿದ ಕಾರ್ಯ ಕಲಿಯುಗಕೆ ಇದು ಹೆಚ್ಚು. ಮೂರು ಕೋಟೆಯ ಬಲವ ಕೊಂದೆ. ತೀರುವ ಸಮಯದಿ ಶ್ರೀ (ಸ್ತ್ರೀ ?)ಯ ಕಡಿದನು ಎಂದು ಸೂರ್ಯರುಳ್ಳನಕ ನಾಜುವುದೆ" ಎಂದು ಬಗೆದು, ಮಚ್ಛೇಂದ್ರನ ಕತೆಯನ್ನು ಹೇಳಿ,[1] ಮಾತಂಗಿಯನ್ನು ಕೊಲ್ಲದೆ ಬಿಟ್ಟನು. ಆಕೆ "ಹಿಂದೊಮ್ಮೆ ಕರೆಯಲು ಒಲ್ಲೆನೆಂದೆ ರತಿಗಲೆಗೆ, ಇಂದಿನ್ನು ಮನಸು ಒಪ್ಪದೆ ಕೊಂದೆನೆಂಬುವ ಕೈಯ ನಿಲ್ಲಿಸಿ, ನೇಮಿಯ ಕಳುಹಿ ಆನಂದದಿ ಸುಖದೊಳು ಬಾಳ್ವ" ಎಂದಳು. ಈ ಮಾತುಗಳು ರಾಮನ ಕಿವಿಗಳಿಗೆ ಕರ್ಕಶವಾದುವು. "ಮೂಳಿಯ ಮಾತೇ(ತ ?)ನು ಆಡಬೇಡವೆ ಮೂಗ ಮಾದಿಗನಿಂದ ಕೊರೆಸುವೆನು ಏಣಾಂಕಧರನೊಲುಮೆ ಆಗಿ ಇರುವುದು ಕಾಣೆ, ಪರಸ್ತ್ರೀಯರು ತಾಯಿ ಹೋಗಮ್ಮ" ಎಂದು ಅವಹೇಳನ ಮಾಡಿದನು. ರಾಮನು ಹಿಂದೆ ಸರಿಯುತ್ತಿರಲು, ಮಾತಂಗಿ ಅವನ ಮೇಲೆ ಬಾಣಗಳನ್ನು ಮಳೆಗರೆದಳು. ಆತನ ವಜ್ರಕವಚ ತಾತಾ ತೂತಾಯಿತು. ಗಾಯಗೊಂಡ ರಾಮನು ಶಕ್ತಿಗುಂದಿದನು. ಖಾನರು ಮಾತಂಗಿಯ ಶೌರ್ಯಕ್ಕೆ ತಲೆದೂಗಿದರು. ಆ ಹೊತ್ತಿಗೆ ಸರಿಯಾಗಿ ರಾಮನ ಕಡೆಯವರೂ ಬಂದು ತಾಗಿದರು. ಖಾನರು ಹತರಾದರು. ತಮ್ಮನನ್ನು ಕಂಡ ಕಾಟಣ್ಣನು, ಅವನನ್ನು ಬಿಗಿಯಪ್ಪಿ "ಊರಿಗೆ ನಡೆ ಭೂಪ ಮೂಗು ಮೊಲೆಯನು ಕೊಯಿದು ಓಡಿಸುವೆ ಮಾದಿಗಿತ್ತಿಯನು" ಎಂದು ವಿನಂತಿಮಾಡಿಕೊಂಡನು. ವೀರರಾಮನು "ಬಾರಯ್ಯ ಅಣ್ಣಾಜಿ ಆಡಬಹುದೆ ನೀನು ಹೀನವಾಗದೆ ಸ್ವರ್ಗದೊಳಗೆ, ಓಡೋ ರಾಯರ ಗಂಡ, ಸಾ[ವಿ]ಗಂಜೋರ ಮಿಂಡ, ಕಾಲ ಪ್ಯಾಂಡ್ಯವು (ಪೆಂಡೆಯ ?) ಹೋಯಿತೇನು" ಎಂದು ಉತ್ತರವಿತ್ತು ದೇಹಾಭಿಮಾನವನ್ನು ಬಿಡಬೇಕೆಂದನು. ಕಾಟನನ್ನು ಕುರಿತು ಊರಿಗೆ ಹೋಗಿ ತಂದೆ ತಾಯಿಗಳಿಗೆ ಸುದ್ದಿ ಮುಟ್ಟಿಸಬೇಕು ಎನ್ನಲು, ಆತನು ರಾಮನನ್ನು ಬಿಟ್ಟು ಹೋಗಲು ಒಡಂಬಡಲಿಲ್ಲ. "ಅಡವಿ ಗೊಲ್ಲನ ತಂದು ಅಣ್ಣಾಜಿಯೆನಿಸಿದ ರುಣವ ಕಡಿದಾಡಿ ಅಳಿವೆ ನಿನ್ನೆಡೆಯೆ" ಎಂದನು. ರಾಮನೂ ಸಹ, ಆ ಗಾಯಗಳಿಗೆಲ್ಲ ತಾನು ಸಾಯುವವನಲ್ಲವೆಂದೂ, ಇನ್ನೂ ಶತ್ರುಗಳನ್ನು ಸಂಹಾರಮಾಡಬೇಕಾಗಿದೆಯೆಂದೂ, ತಾಯಿಗೆ ಹರಕೆ ದೃಢವಾಗಿ ಕೊಡುವಂತೆ ಹೇಳಬೇಕೆಂದೂ ತಿಳಿಸಿ, ತನ್ನ ಕಾಲಿನಲ್ಲಿದ್ದ ಕಡೆಯವನ್ನೂ ಉಡಿದಾರ, ಮುದ್ರೆಯುಂಗುರಗಳನ್ನೂ ಕಳಚಿಕೊಟ್ಟನು. ಮಗನಾದ ಜಟ್ಟಂಗಿರಾಯನಿಗೂ ತನ್ನ ಆಶೀರ್ವಾದವನ್ನು ಹೇಳಿಕಳುಹಿಸಿದನು. ಬೈಚಪ್ಪನಿಗೂ ಕೃತಜ್ಞತೆಯನ್ನು ಸಲ್ಲಿಸಿದನು. ನೀಲಕಂಠನನ್ನು ಕರೆದು "ಮಗನನ್ನು ನೋಡಿಕೊಳ್ಳುವ ಭಾರ ನಿನ್ನದು" ಎಂದನು. ಆತನು "ಆಳಿದೊಡೆಯನ ಬಿಟ್ಟು ಓಡಿದ ಪ್ರಧಾನಿ ಮೂರು ಶಂಕೊರುಷ ಬಾಳುವನೆ ?" ಎನ್ನಲು ಅವನನ್ನೂ ಸಮಾಧಾನಮಾಡಿದನು. ಅನಂತರ "ಹೋಗು ಬಾದೂರಖಾನ ಮೇಲುದುರ್ಗಕೆ ನೀನು, ಪ್ರಾಣ ಕೊಡುವೆನು ನಿನಗಾಗಿ, ಶಾನಳಿದ ಘಳಗೆಲಿ ಖಾನರೊಯ್ಯುರು ನಿನ್ನ, ಕಾಲನ ಬಾಧೆ ಬಿಡದೆನಗೆ" ಎಂದು ಕೇಳಿ

1. ಮುಂದೆ ನೋಡಿ: ಉಪಕಥೆ ಅ.

ಕೊಂಡು ಮರೆಹೊಕ್ಕವರನ್ನು ಕೈಬಿಡದೆ ಶೂಲವೇರಿದ ಗುಂಡುಬ್ರಹ್ಮಯ್ಯನ ನಿದರ್ಶನವನ್ನು ಸ್ಮರಿಸಿದನು. ಬಾದೂರನೂ ಸಹ "ಅಳಿದ ಕಾಯವ ಭೂಪನುಳುಹಿದೆ ಪ್ರತಿಯಾಗಿ ಯಮನಿಂದ ಬಿಡಿಸಿ ತಂದಂತೆ. ಹೊಡೆ ದಾಡಿ ನಿಮ್ಮೆಡೆಯೆ ತರಿಗಡಿದು ದಂಡನು ಅರ್ಥ, ಕೊಡುವೆ ಪ್ರಾಣವ ಪಸರೆಡೆಯೆ" ಎಂದು ತನ್ನ ಅಭೀಷ್ಟವನ್ನು ನಿವೇದಿಸಿದನು. ರಾಮನು "ಜೇಡ ಬಾದೂರಖಾನ ರಣಧೀರನೆಂಬುದ ಬಲ್ಲೆ ನೀನಳಿದು ತಲೆ ಡಿಳ್ಳಿಸೇರೆ, ಭೂನಾಥ ಸುರಿತಾಳನ ಛಲಪಂಥ ಏಳದೆ, ತನಗೆ ತಡವಾಗದೆ ಕೈವಲ್ಯ ಪದವಿ" ಎಂದು ಕೇಳಿಕೊಂಡನು. ಬಳಿಕ, ತನ್ನ ಭಾವ ಸಂಗಯ್ಯನಿಗೂ ಅಂತೆಯೇ ಹೇಳಲು ಆತನು ರಾಮನನ್ನು ಹಿಂಬಾಲಿಸುವುದಾಗಿ ನುಡಿ ದನು. ರಾಮನು "ಸೋದರದ ಬಾಲೆಯರು ಶೋಕಪಮಾಡಲು ಎನಗೆ ಬಾಧೆ ಬಿಡದು ಯಮನೊಳು" ಎಂದು ಉತ್ತರವಿತ್ತು ಆತನನ್ನು ಒಪ್ಪಿಸಿದನು. ದೇವತೆಗಳು ಇವುಗಳನ್ನೆಲ್ಲ ಕಂಡು ಮೆಚ್ಚಿದರು.

ರಾಮನು ಜೀವದ ಹಂಗು ತೊರೆದವರನ್ನು ಕೂಡಿಸಿಕೊಂಡನು. ಅವನ ಇಷ್ಟದಂತೆಯೇ ಮೂರು ಸಾವಿರ ಮಂದಿ ವೀರರು ಬಂದು "ನೂರೊರುಷ ಬಾಳಲು ಸಾವ ಕಾಲವು ಬಿಡದು ಕಾಯವಳಿಯಲು ಕೀರ್ತಿ ಉಂಟು ಆಸೆಯೆಂದೂ ರಾಯ ಎಳ್ಳಿನಷ್ಟು ತಮಗಿಲ್ಲ" ಎಂದು ಹೇಳಿ ನಮಸ್ಕರಿಸಿದರು. ಪ್ರಮುಖರನ್ನೆಲ್ಲ ಊರಿಗೆ ಕಳುಹಿಸಿ, ಕಾಟನ ಸಂಗಡ "ರಾಣಿಯರ ತೊಡಕೊಂದು ಇಹುದು ನಾಲ್ವರ ತಲೆ ಹೊಡೆಯೆ ಕುಮಾರನ ಪಡೆದಂಥ ಬಾಲೆಯೊರ್ವಳ ಕಾಯಿ" ಎಂದು ಹೇಳಿಕಳುಹಿಸಿದನು. ಕಾಟನು ಬೇಗ ಹೋಗಿ ಬರುವೆನೆಂದು ಮನ್ನೆಯರಿಗೆಲ್ಲ ಎಚ್ಚರವಿತ್ತು ಕುಮ್ಮಟಕ್ಕೆ ಬಂದನು.

ಕಾಟನ ಆಗಮನವನ್ನು ಕಂಡು, ತರಳೆಯರು ಸುತ್ತುಗಟ್ಟಿಕೊಂಡರು. ದೊರೆ, ರಾಣಿ, ಮಂತ್ರಿ ಮೊದಲಾದವರು "ರಣವಿಜಯ ಕಲಿಪಾರ್ಥ ಏನಾದನು?" ಎಂದು ಕೇಳಿದರು. ಕಾಟನು "ಅಂಬಿನ ಮಳೆ ಯಲ್ಲಿ ಓಕುಳಿಯನಾಡಿದ ತುಂಬಲು ಸರ್ವಾಂಗವೆಲ್ಲ ಬಂದುದು ಕಡುತಾಪ ಮೂರ್ಛೆ ಕೈವಲ್ಯವ ನಂಬುವ ಸಮಯವಾಗಿಹುದು" ಎಂದು ಉತ್ತರವಿತ್ತನು. ರಾಮನು ಕೊಟ್ಟುಕಳುಹಿಸಿದ್ದ ಬಿರುದು, ಬಾವಲಿ, ಉಡಿ ದಾರ, ಮುದ್ರೆಯುಂಗುರಗಳನ್ನು ಒಪ್ಪಿಸಿದನು. ಆ ಮಾತನ್ನು ಕೇಳಿದ ಹರಿಯಮ್ಮ "ಹರನ ಪಾದವ ಕೊಡ ಲೆಂದೊ, ಮರಳೇಳು ಜಲ್ಮದಿ ಬರಲೆನ್ನ ಗರ್ಭದಿ ಗಿರಿಜಾವಲ್ಲಭನೆ ಕೊಡು ಕಂಡ್ಯಾ" ಎಂದು ದೇವರನ್ನು ಪ್ರಾರ್ಥಿಸಿದಳು. ಕಂಪಿಲ, ಬೈಚಪ್ಪ, ಮಾಯ[ಣ್ಣ], ಲಿಂಗಯ್ಯ ಮೊದಲಾದವರು ದುಃಖಿಸಿದರು. ಊರಿನ ಜನರಂತೂ "ತಾಯಳಿದ ಬಾಲನ ತೆರದಿ" ಗೋಳಿಟ್ಟರು. ಕಾಟಣ್ಣನು, ರಾಮನ ಅರಸಿಯರ ಬಳಿಗೆ ಬಂದು, ವಿಷಯ ತಿಳಿಸಿ, ಸುಭದ್ರೆಯೊಬ್ಬಳನ್ನು ಉಳಿದು, ಮಿಕ್ಕ ನಾಲ್ವರನ್ನೂ ಸಂಹರಿಸಿದನು. ತನ್ನ ಹೆಂಡತಿಯ ರಿಬ್ಬರನ್ನೂ ಅಂತೆಯೇ ಗತಿ ಕಾಣಿಸಿದನು. ಎಲ್ಲ ಕೆಲಸಗಳನ್ನೂ ಕ್ಷಣಮಾತ್ರದಲ್ಲಿ ನೆರವೇರಿಸಿ ವಾಯುವೇಗ ಗದಿಂದ ಓಡಿ ಬಂದು ರಾಮನನ್ನು ಕೂಡಿಕೊಂಡನು.

ಗಳಿಗೆಗಳಿಗೆಗೂ ಯುದ್ಧ ಜೋರಾಯಿತು. ಕೊಡಲಿ ಹನುಮ, ಹಂಪ, ಲೆಂಕೆಯ ಹನುಮ, ಬಾಣಿಮುದ್ದ, ಮರಜೆಟ್ಟಿ ಮೊದಲಾದವರು ಅನೇಕರನ್ನು ಆಹುತಿ ತೆಗೆದುಕೊಂಡರು. ವೀರರಾಮನು ಜಾಜಿಖಾನ, ಮಲ್ಲೋಜಿಖಾನರನ್ನು ಬಡಿದು ಮುಂದೆ ಸಾಗಿದನು. ನೇಮಿ ಮಾತಂಗಿಯರು ಪರಸ್ಪರವಾಗಿ, ತಮ್ಮ ದಂಡಿನಲ್ಲಿ ಅಳಿದು ಉಳಿದವರನ್ನು ಕುರಿತು ಮಾತಾಡಿಕೊಳ್ಳುತ್ತಿದ್ದರು. ರಾಮನು ಕ್ಷಣಕಾಲ ಸುಧಾರಿಸಿಕೊಳ್ಳುತ್ತ ನಿಂತನು. ನೇಮಿಯ ಕಟುನುಡಿಗಳನ್ನು ಕೇಳಿದ ಮಾತಂಗಿ "ಹೆದರಬೇಡವೊ ನೇಮಿ ಎರಡು ಗಳಿಗೆಲಿ ಅವನ ತಲೆಯ ಕೊಡುವೆನು ನಿನ್ನ ಕರದಿ ಲಯಮಾಡಿ ದಂಡನು ಊರಿಗೆ ನಾ ಹೋಗಲು ಹೊಡೆಸನೆ ತುಂಡೇಳ ಪಾಶ್ಚ್ಯ" ಎಂದು ಪಣತೊಟ್ಟಳು. ನೇಮಿ ಮೂವತ್ತು ಸಾವಿರ ಕುದುರೆ ಪೌಜಿನೊಂದಿಗೆ ಬಂದು ಮೇಲೆ ಬಿದ್ದನು. ಲಿಂಗಣ್ಣನು ಆ ಸೇನೆಯನ್ನು ಕಂಡು ಕೇಕೆ ಹಾಕಿದನು. ಆತನನ್ನು ಅಲ್ಲಿಯಖಾನನು ಎದೆಗೆ ಹೊಡೆಯಲು ಸತ್ತುಬಿದ್ದನು. "ರಾಮ ಭೂಪಾಲನ ಮದದಾನೆ ಬಿದ್ದಿತು" ಎಂಬುದಾಗಿ ಕೂಗುತ್ತ ಬಾಣಿಯ ಮುದ್ದನು ನುಗ್ಗಿಬಂದು ಮೂರುಸಾವಿರ ಮಂದಿ

ಯನ್ನು ನೀರು ಕೇಳದಂತೆ ಸದೆಬಡಿದನು. ವಿಸಾರ್‌ಖಾನನ ಸಂಹಾರವಾಯಿತು. ರಣದೂಲಖಾನನೂ ಸತ್ತು ಬಿದ್ದನು. ಎಡಗಯ್ಯ ಹಂಪನು ಹೊಕ್ಕು ಮೂರುಸಾವಿರ ಮಂದಿಯನ್ನು ಕೊಚ್ಚಿದನು. ಪಂಡಿತಖಾನನ ಹಮ್ಮೂ ಇಳಿಯಿತು. ಗುಂಪು ಗುಂಪಾಗಿ ಬಂದು ಬಿದ್ದವರನ್ನು ಕಂಡು ಯಮಧರ್ಮರಾಯನು, ತನ್ನ ಊರಲ್ಲಿ ಎಡೆಯಿಲ್ಲವೆಂದು ತಿಳಿದು, ತನ್ನ ವಾಹನವನ್ನೇರಿ ಈಶ್ವರನ ಬಳಿಗೆ ಬಂದನು. ತನ್ನ ಅಧಿಕಾರಮುದ್ರೆಯನ್ನು ದೇವರ ಮುಂದಿಟ್ಟು ತನ್ನಿಂದ "ಮಣಿಹ್ಯಾ" ಸಾಗದೆಂದನು. ಈಶ್ವರನು ಕಾರಣವೇನೆಂದು ಕೇಳಲು, ಭೂಮಿಯವರೆಲ್ಲ ಒಂದೇ ಸಮನೆ ಯಮಪುರಿಗೆ ಬರುತ್ತಿರುವರೆಂದೂ, "ನರನಿಗೆ ಈ ಬಗೆಯ ಜಯಪ್ರದವನಿತ್ತರೆ ನೀವು, ಹರಿಯದೆ ಬಿಡುವನೆ ಜಗವ" ಎಂದೂ ಆಕ್ಷೇಪಿಸಿದನು. ಈಶ್ವರನು ಯಾವುದೋ ನಿಮಿತ್ತಕ್ಕಾಗಿ ಅವನಿಂದ ಈ ಕಾರ್ಯ ನೆರವೇರಿತೆಂದೂ, ಸದ್ಯದಲ್ಲಿಯೇ ಅವನ ಕಾರ್ಯ ಮುಗಿಯುವುದೆಂದೂ ಸಮಾಧಾನ ಹೇಳಿದನು. ಯಮನು "ಕಲಿ ಪಾರ್ಥನೆನಬಹುದು ಅವನ", "ಕಾಲನೊ ಕೊಲುವೆಡೆಯ ಭೀಮನೊ, ಬಲುಮೆಯಲಿ ಕಾಲಭೈರವನೊ ಕಾಳಗದಿ ವಾಲ್ಮೀಕಿ ತನುಜೆಯ ಕುಮಾರನೊ ಲವಕುಶ, ಶಾಲಿವಾಹನನೋ ಶರಭವನೊ" ಎಂಬುದಾಗಿ ರಾಮನನ್ನು ಕೊಂಡಾಡುತ್ತ ಹಿಂತಿರುಗಿದನು. ರಾಮನು ಹೋರಾಡುತ್ತ ಬರುತ್ತಿರಲು ನೇಮಿ ಬಂದು ಅಡ್ಡಗಟ್ಟಿದನು. ಆತನನ್ನು ಹೊಡೆಯಲು ಮಾತಂಗಿ ಬಂದು ಎದುರಾದಳು. ಆದರೆ, ಆಕೆಯನ್ನು ಹೊಡೆಯದೆ ಹಿಂತೆಗೆಯಲು, ಮಾತಂಗಿ ರಾಮನ ಮೇಲೆ ಸರಳ ಮಳೆಯನ್ನು ಕರೆದಳು. ರಾಮನು ಗಾಯಗೊಂಡು ತುಂಬ ನಿತ್ರಾಣನಾಗುತ್ತಿರಲು, ಕಾಟನು ಓಡಿಬಂದು ಖಾನರನ್ನು ಹಿಂದಟ್ಟಿದನು. ಕ್ಷಣಮಾತ್ರದಲ್ಲಿ ಕಾಟನೂ ಸಹ ಪೆಟ್ಟುತಿಂದು ಶಕ್ತಿಗುಂದುವಂತಾಗಲು, ಆತನ ಕುದುರೆ ನೆಲಕ್ಕೊರಗಿತು. ರಾಮನು ಧಾವಿಸಿ ಬಂದು, ಸಾಯುತ್ತಿರುವ ಅಣ್ಣನಿಗೆ ಕೈಸೀಡಿ "ಊರಿಗೆ ಕಳುಹಿದೆ ಉಳಿಯಲೆನ್ನುತ ನಾನು ಓಡಿಬಂದೆಯ" ಎಂದು ಪಶ್ಚಾತ್ತಾಪಸಡುತ್ತ, ಶೈತ್ಯೋಪಚಾರ ಮಾಡಿ, "ಗೊಲ್ಲರ ಮಗನೆಂದು ಊರೆಲ್ಲ ಆಡಲು ಭೇದವಿಲ್ಲದೆ ನಾವು ಬಾಳಿದೆವು, ನೋಡಣ್ಣ ನಿನ್ನಯ ಬೆನ್ನೊಡನೆ ನಿಮಿಷದಿ ಬರುವೆ ಬೀಡಾರ ಮಾಡಿಸು ಈರ್ವರಿಗೆ" ಎಂದು ಹೇಳಿ ಕಣ್ಣೀರು ಕರೆದನು. ಅಣ್ಣನ ತಲೆ ಶತ್ರುಗಳ ಕೈಗೆ ಬೀಳದಂತೆ ಮಾಡಿ, ತುರುಕರ ಮೇಲೆ ಕಾಳಗವನ್ನು ಮುಂದುವರಿಸಿದನು. ರಾಮನು ತನ್ನ ಪ್ರಜ್ಞೆಯೂ ಉಡುಗುತ್ತ ಬರಲು ಗೂಗೆಕಲ್ಲಿಗೆ ಸಾಗಿಬಂದನು. ಕುದುರೆಯಿಂದಿಳಿದ ಒಡೆಯನನ್ನು ಕಂಡು, ಬೊಲ್ಲನು ತನಗೆ ಇನ್ನಾರು ಗತಿಯೆಂದು ಮೊರೆಯಿಟ್ಟಿತು. ಅಲ್ಲದೆ, "ಕೊಡಬೇಡ ನಿನ್ನಯ ವೈರಿ ಸುರಿತಾಳಗೆ, ಬಿಡದಯ್ಯ ಹೀನಾಯ ನಿಮಗೆ, ಹೊಡೆ ನಿನ್ನ ಬಳಿಯೊಳು ಬಿಡುವೆ ಪ್ರಾಣವನು" ಎಂದು ಕೇಳಿಕೊಂಡಿತು. ರಾಮನಿಗೆ ಅದನ್ನು ಕೊಲ್ಲಲು ಕೈಬರಲಿಲ್ಲ. ಆದ್ದರಿಂದ, "ಹರನ ಕೃಪೆಯಿಂದ ಶಿಲೆಯಾಗು ಗುರುತಿರಲಿ ಕುಂಮಡ(ಟ?)ದೀ ಯಪ್ಪತ್ತುರಾಯರ ಬೊಲ್ಲ ನರಪಡೆಯು ಇರುವ ಕಾಲದಲಿ" ಎಂದು ಹರಸಿ ವೈದಡವಿದನು. ಅಂತೆಯೇ ಅದು ಕಲ್ಲಾಯಿತು. ಈಶ್ವರನನ್ನು ಧ್ಯಾನಿಸಿ, ತನಗೆ ಪ್ರಾಪ್ತವಾದ ಮರಣವನ್ನು ಕಂಡು "ದುಃಖ ಎಂಬುವುದಿಲ್ಲ ನೇತ್ರಲೋಚನ[ನ] ಪೂಜೆ ಹೆಚ್ಚಾಗಿ ಮಾಡಿರಲು ಈ ಮರಣ ಕೊಟ್ಟನಲ್ಲದೆ ಗುರುವು, ವ್ರತಭ್ರಷ್ಟಗೆ ಬ[ರ]ದೆಂದು ನಕ್ಕನು ರಾಮ ನಲಿನಲಿದು." ರಾಮನು ಜಟ್ಟಂಗಿ ದೇವರನ್ನು ಸ್ಮರಿಸಿ ಶಿವೈಕ್ಯನಾಗಲು, ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು.

## ಕುಮಾರರಾಮನ ಪ್ರಶಸ್ತಿ

ಗೂಗೆಕಲ್ಲಿನ ಮೇಲಿದ್ದ ರಾಮನ ಶವವನ್ನು ಕಂಡು, ಇತರರು ಇನ್ನೂ ಬದುಕಿರುವನೇನೋ ಎಂದು ಬೆದರಿ ಓಡುತ್ತಿರಲು, ಅವನ ತಲೆಯ ಮೇಲೆ ಒಂದು ಕಾಗೆ ಬಂದು ಕುಳಿತುಕೊಂಡಿತು. ಆಗ ಮಾತಂಗಿಯೂ ಧೈರ್ಯಮಾಡಿಕೊಂಡು, ಹತ್ತಿರ ಸುಳಿದು ರಾಮನ ತಲೆಯನ್ನು ಕತ್ತರಿಸಿ, ಡಿಳ್ಳಿಗೆ ಕಳುಹಿಸಿದಳು. ರಾಮನ ಮುಂಡಕ್ಕೆ ಬೆಂಕಿ ಕಾಣಿಸಿದಳು. ಇತ್ತ ರಾಮನ ರುಂಡವನ್ನು ತಂದಿದ್ದ ಸುರುತಾಳನ ಭಟನು ರಾಮನ ಪರಾಕ್ರಮ

ವನ್ನೆಲ್ಲ ನಿವೇದಿಸಿ, ಮಾತಂಗಿ ಎದುರಾದರೂ ಹೆಂಗಸನ್ನು ಸಂಹರಿಸದೆ ಹಿಂತೆಗೆದನೆಂದೂ "ಪಡೆದಲಿಖಿತವು ಮೀರಿ ಅಳಿದನಲ್ಲದೆ ರಾಯ ಮಡಿಕೆ(?) ಮೂಳಿಗೆ ಜೇರೆ ಸಾಯ, ತಿಳಿಯಬಾರದೆ ಸ್ತ್ರೀಯ ಕಡಿಯದೆ ತಲೆ ಗೊಟ್ಟ ಕಡಿಯೆ ಮಾತಂಗಿ ದೊ[ಡ್ಡಿ]ತಲ್ಲ" ಎಂಬುದಾಗಿಯೂ ವಿಜ್ಞಾಪಿಸಿದನು. ಸುರುತಾಳನಿಗಾದರೋ ಬಾದೂರನ ಯೋಚನೆ. "ಬಾದೂರನೇನಾದ, ರಾಮನ ಮಾತಿರಲಿ, ಊರೇನಾಯಿತು ಕುಮ್ಮಟವು" ಎಂದು ಪ್ರಶ್ನಿಸಿದನು. ಸೇವಕನು "ಬಾದೂರನ ತರುವುದಕ್ಕೆ ನೀವೆ ನಡಿಯಲು ಕಾಣೆ, ನಿಮ್ಮಂತಾರು ಮುಳುಗಿದ ಬಳಿಕ ಆರೆರಡು ಲಕ್ಷಗಳ ಗೋರಿ ಸಾಲದು ಎಂದು ವೀರಕುಮ್ಮಟವು ಕುಣಿಯುವುದು" ಎಂದು ಉತ್ತರವಿತ್ತನು. ಅನಂತರ, ಸುರುತಾಳನು ತನ್ನ ಮಗಳಾದ "ಬಿಬ್ಬಿ"ಯ ಸಮೇತ ಸದರಿಗೆ ಬಂದನು. ರಾಮನ ತಲೆಯನ್ನು ಕಂಡು, ಅಂಥ ಚೆಲುವನನ್ನು ಸಂಹರಿಸಬಹುದೆ ಎಂಬುದಾಗಿ ದುಃಖಿಸುತ್ತ, "ಕೈಸೆರೆಯ ಪಿಡಿತರದೆ ಕೊಂದರೆ ಪಾಪಿಗಳು ಹಿಂದಣ ಹಗೆಯೆ ಮಾತಂಗಿ" ಎಂದು ಆಕ್ಷೇಪಿಸುತ್ತ, ಅದನ್ನು ಅಪ್ಪಿ ಕೊಂಡು ಮುದ್ದಾಡಿದಳು. ಸುರುತಾಳನು "ಬಿಡು ಮಗಳೆ ಅಪಕೀರ್ತಿ ಮುಸುಕಲು ಮಾನವರಲ್ಲಿ(ಲ್ಲ?)" ಎಂದು ಸಮಾಧಾನ ಹೇಳಿದನು. ಆ ರುಂಡಕ್ಕೆ ಅಗ್ನಿಯನ್ನು ಕಾಣಿಸಬೇಕೆಂದು ಎಷ್ಟು ಕಿತ್ತರೂ ಬಾರದೆ ಹೋಗಲು, "ಅಗ್ನಿ ಕೂಡಲು ನಿಮ್ಮ ಬಿಬ್ಬಿ ಹಾದರ, ಉಂಟೆ ಬೊಬ್ಬೆಲಿ ಕೊಲುವೆ ಡಿಳ್ಳಿಯನು" ಎಂದು ಗರ್ಜಿಸಲಾರಂಭಿಸಿತು. ಜನಗಳೆಲ್ಲ ಭಯಗ್ರಸ್ತರಾದರು. ಸುರುತಾಳನು "ಕರಿಘಟೆಗಳಿಂದಲಿ ತುಳಿಸಿ ಹಾಕು ವುದು" ಎಂದು ಉರಿದುರಿದು ಆಜ್ಞೆ ಮಾಡಿದನು. ಅಂತೆಯೇ ಏಳುಕೋಟಿ ಆನೆಗಳು ಒಮ್ಮೆಗೇ ಬರಲು, ರಾಮನ ರುಂಡವು ಘಕಘಕನೆ ನಗಲು, ಭೇರುಂಡನನ್ನು ಕಂಡು ನಡುಗುವಂತೆ ಹೆದರಿ ಹಿಮ್ಮೆಟ್ಟಿದುವು. "ಮಾರಿಯ ಕರೆತಂದು ಮನೆಯನು ಹೊಗಿಸಿದ ಕೊಣಬಿಗನ ಗಾದೆ ಬಂತು" ಎಂದು ಜನಗಳು ಒಗೆದು, ಸುಲ್ತಾನನಿಗೆ ಬುದ್ಧಿಹೇಳಿದರು.

ಜನರ ಸಲಹೆಯ ಮೇರೆಗೆ ಸುಲ್ತಾನನು ಕಂಪಿಲನಿಗೆ ಕಾಗದ ಬರೆದು ಕಳುಹಿಸಿದನು. ಕಂಪಿಲನು ರಾಮನ ತಲೆಯನ್ನು ತರಲು ಭಟ್ಟರ ಯಲ್ಲನನ್ನು ಕಳುಹಿಸಿದನು. ಸುರುತಾಳನು ರಾಮನ ತಲೆಯನ್ನು ಕೊಂಡೊಯ್ಯಬೇಕೆಂದು ಆಜ್ಞೆಮಾಡಿದನು. ಅಂದಿನ ರಾತ್ರಿ ಭಟನ ಕನಸಿನಲ್ಲಿ ರಾಮನ ತಲೆ ಕಾಣಿಸಿ ಕೊಂಡು, ತನ್ನನ್ನು ಬಿರುದೆತ್ತಿ ಕೊಂಡಾಡಿದರೆ ಮಾತ್ರವೇ ಬರುವೆನೆಂದೂ, ಇಲ್ಲದಿದ್ದರೆ ಡಿಳ್ಳಿಯನ್ನೇ ಹಾಳು ಮಾಡುವೆನೆಂದೂ ತಿಳಿಸಿತು. ಎದೆಗೆಟ್ಟು ಎಚ್ಚತ್ತ ಭಟನು ಆ ವೃತ್ತಾಂತವನ್ನು ಸುರುತಾಳನಿಗೆ ಹೇಳಿದನು. ನಿರ್ವಾಹವಿಲ್ಲದೆ ಸುರುತಾಳನು ಸಮ್ಮತಿಸಿದನು. ಸದರಿನಲ್ಲಿ, ಸುಲ್ತಾನನ ಸಮ್ಮುಖದಲ್ಲಿ, ಭಟನು "ಆರು ರಾಯರ:ಗಂಡ, ಮೂರು ರಾಯರ ಮಿಂಡ, ಪಾಳೆಗಾರರಿಗೆ ಎದೆಶೂಲ, ಧುರಧೀರ ಮಾರ್ತಂಡ, ಭಲರೇ ಚಾಂಗುಲೇ ರಾಮ" ಎಂದು ಹೊಗಳಲು, ಆ ತಲೆ ಕಿಲಕಿಲನೆ ನಕ್ಕಿತು. "ಕಾಯವಿರಲು ಡಿಳ್ಳಿ ಆ[ಳ]ಬೇಕೆನು ತಿರ್ದೆ ಮೀರಿದು ಮುಂಚಾಲು ಮರಣ ಅಳಿದರೆ ಬಿಡಲಿಲ್ಲ ಲಯವಾದರು ದಿನಯೆ[ವೆಂ?]ಟು ಭೂಮಿ ಆರ್ಭಡಿ(ಟಿ?)ಸೆದ್ದು ಬರಲು" ಎಂದುಕೊಂಡಿತು. ಅನಂತರ ಭಟನು ಅದನ್ನು ತೆಗೆದುಕೊಂಡು ಹೊರಟನು. ನಡುದಾರಿಯಲ್ಲಿ ಮರಳಿ ಅದು ಮರವನ್ನೇರಿ ಕುಳಿತುಕೊಂಡಿತು. ಭಟನ ವಾಕ್ಯಕ್ಕೆ ಕಟ್ಟುಬಿದ್ದು ಅದು ಇಳಿದು ಬರಲು, ಅದನ್ನು ಜಟ್ಟಂಗಿರಾಮೇಶ್ವರನ ಗುಡಿಗೆ ತೆಗೆದುಕೊಂಡು ಹೋಗಿ ಪೂಜಿಸಿದನು. ಖಾನ ರೆಲ್ಲರೂ ಬಂದು ನಮಸ್ಕರಿಸಿದರು. ಮಾತಂಗಿಯನ್ನು ಡಿಳ್ಳಿಗೆ ಹೋಗೋಣವೆಂದು ಖಾನರು ಹೇಳಲು, ಆಕೆ "ಕೃತಿಯೊಳು ರೇಣುಕಿ, ತ್ರೇತಾರದೊಳು ಬಂದು ರಘುನಾ[ಥ]ನ ಕಡಿ ತಾಟಕಿಯು, ದ್ವಾಪರಯುಗದೊಳು ದ್ರೌಪತಿ(ದಿ?)ಯಾಗಿ ಜನಿಸಿದೆ, ಈ ಕಲಿಗೆ ರತ್ನಾಜಿಯಾಗೆ" ಎಂಬುದಾಗಿ ತನ್ನ ಜನ್ಮರಹಸ್ಯವನ್ನು ಹೇಳಿ ದಳು. ಸತ್ಯವನ್ನು ಬಿಡದ ರಾಮನಿಗಾಗಿ ಮೆಚ್ಚಿ "ತಾಯೆಂದು [ಭಾ]ವಿಸಿದ. ನಾನವನ ಕೊಂದು ಇರಸಲ್ಲ" ಎಂದು ನುಡಿದು, "ಬಾಲನ ಒ[ತ್ತಿಲಿ] ನಾನಿರುವೆ ಮಾತಂಗಿ ದೇವಿಯೆಂದೆನಿಸಿ ಹೊರಕುಲದಿ" ಎಂದು ಸಂಕಲ್ಪ ಮಾಡಿ, ಖಾನರಿಗೆಲ್ಲ ಕೈಮುಗಿದು ಕೊಂಡಕ್ಕೆ ಹಾರಿದಳು. ಖಾನರು ಡಿಳ್ಳಿಗೆ ತೆರಳಿದರು.

ಊರಿನವರೆಲ್ಲ ಬಂದು ಅಲ್ಲಿ ಸೇರಿದರು. ಹರಿಹರದೇವಿ "ಕುಲಕೆಲ್ಲ ದೇವರಾಗು" ಎಂದು ಹರಸಿದಳು. ಕಂಪಿಲ, ಬೈಚಪ್ಪ ಮೊದಲಾದವರು ತಲೆಬಾಗಿ ನಮಸ್ಕರಿಸಿದರು. ಹುಟ್ಟುಬಂಜೆಯರಿಗೆ ಸಂತಾನವನ್ನು ಕರುಣಿಸುವನೆಂದೂ, ಬೇಡರ ಕುಲದವರು ಆತನ ಜಾತ್ರೆಯನ್ನು ನಡೆಸಬೇಕೆಂದೂ, ರಾಮಯ್ಯನು ದೇವರಾದನೆಂದೂ ಸಾರಿ ಹೇಳಿದರು. ಕಂಪಿಲನು ತನ್ನ ಮೊಮ್ಮಗನಾದ ಜಟ್ಟಂಗಿಯೊಡನೆ ರಾಜ್ಯಭಾರವನು ಮುಂದುವರಿಸಿದನು.

# ಉಪಕಥೆಗಳ ಸಂಗ್ರಹ

## ೧. ತ್ರಿಶಂಕುವಿನ ಕಥೆ

**ಡೊಂಬರ ರತ್ನಿಯನ್ನು ಕಂಪಿಲನು ಮದುವೆಯಾಗಲು ಇಚ್ಛಿಸಿದ ಸಂದರ್ಭದಲ್ಲಿ, ಗುರುಗಳು ಜಟ್ಟಂಗಿ ರಾಯನಿಗೆ ಹೇಳಿದ ಕಥೆ:—**

ತ್ರಿಶಂಕು ನವಖಂಡ ಪೃಥ್ವಿಯನ್ನು ಆಳುತ್ತಿದ್ದನು. ಅವನ ಹಣೆಯಬರಹವೋ ಎಂಬಂತೆ ಒಂದು ಘಟನೆ ಸಂಭವಿಸಿತು. ಚಕ್ರನಾದನೆಂಬುವನು ತನ್ನ ಕುಮಾರಿಯನ್ನು ಒಡಗೊಂಡು ಬೀದಿಯಲ್ಲಿ ಆಟವಾಡುತ್ತಿದ್ದನು. ಅರಸನು ಆಕೆಯ ಚೆಲುವನ್ನು ಕಂಡು, ಕಣ್ಣುಗಳು ತಣಿವಂತೆ ಸವಿದು ಈಕೆ "ಜಾತಿಪದ್ಮಿನಿಯೋ, ಮೇನಕಿಯೋ" ಎಂದು ಶಂಕಿಸಿದನು. "ಮೂರು ಶಂಕೊರುಷ"ವು ಭೂಮಿಯನ್ನು ಆಳಿದ್ದರೂ ಅಂಥ ನಾರಿಯನ್ನು ಕಾಣೆನಲ್ಲ ಎಂಬುದಾಗಿ ಭಾವಿಸಿ, ಮಂತ್ರಿಯನ್ನು ಕುರಿತು "ಹರನ (ತನ್ನ?) ಉರಿಗಣ್ಣಿನಿಂದ ಸುಟ್ಟ ಕಾಮನನ್ನು ಹರನಾದರೂ ಜಯಿಸಲು ಶಕ್ಯನಾದನೆ? ನಾನು ಮದನನ ಬಾಣಕ್ಕೆ ಗುರಿಯಾದೆ. ಈಕೆ ಯಾರಿರಬಹುದು?" ಎಂದು ಕೇಳಿದನು. ಮಂತ್ರಿ ವಿನಯದಿಂದ "ಆಕೆ ಈ ಊರಿನ ಬಾರಿಕನ ಕುಮಾರಿ. ಹೀನಜಾತಿಯವಳು" ಎಂದು ಉತ್ತರವಿತ್ತನು. ರಾಜನು ಆ ಮಾತಿಗೆ ಹಿಂತೆಗೆಯದೆ "ಆದರಾಗಲಿ, ಆ ನಾರಿಗೆ ಮನಸೋತಿದ್ದೇನೆ. ಆ ಕೇರಿಯಲ್ಲಿ ನನಗೊಂದು ಅರಮನೆಯನ್ನು ಏರ್ಪಡಿಸು" ಎಂದು ಆಜ್ಞೆಮಾಡಿದನು. ಮಂತ್ರಿಗೆ ಬಹಳ ಪೇಚಾಟಕ್ಕಿಟ್ಟುಕೊಂಡಿತು. "ಮೂರು ಶಂಖೆ(?)ಯನಾಳಿ" ಮಹಾರಾಜನು ಕಡೆಗೆ ಹೀನಸತಿಯೊಬ್ಬಳನ್ನು ನೆರೆದು ಹಾಳಾಗುವ ಕಾಲ ಬಂದಿತೆ ಎಂಬುದಾಗಿ ಪರಿತಪಿಸಿದನು. ಹೆದರುತ್ತ ರಾಜನನ್ನು ಕುರಿತು "ಮಹಾರಾಜನೆ, ನನ್ನ ಬಿನ್ನಪವನ್ನು ಲಾಲಿಸಬೇಕು (ಆಲಿಸಸಬೇಕು?). ಕ್ಷೀಣಜಾತಿಯ ಸತಿಯೇಕೆ? ತಿಳಿಯದೆ ಮನಸ್ಸಿಟ್ಟರೂ ಯಮಬಾಧೆ ತಪ್ಪಿದ್ದಲ್ಲ ಎನ್ನುವರು" ಎಂದು ವಿನಂತಿಮಾಡಿಕೊಂಡನು. ಅಲ್ಲಿಗೂ ಮಹಾರಾಜನು ಸಗ್ಗದೆ "ಎಲೈ ಮಂತ್ರಿ ಕೇಳು. ನೀನು ತಿಳಿಯದೆ ಮಾತಾಡುತ್ತಿರುವೆ. ಹಲವು ಜನ್ಮಗಳನ್ನೆತ್ತುವ ಹೊಲೆ ಇಲ್ಲವೆ? 'ಹೊಲೆಯರ ಮನೆಯೊಳಗಿರಲೊಂದು ರತ್ನವ ದೊರೆಗಳಾದರು ಧರಿಸರೆ?' ಹೆಣ್ಣು ಹೊನ್ನಿಗೆ ರತ್ನ ಮಣ್ಣಿಗೆ ಕುಲವೇನು? ಸುಣ್ಣ ಮಡಕೆಯಲಿ ಸೂತಕವೆ? ಕಣ್ಣಿಟ್ಟ ಬಳಿಕ ಇನ್ನೇನು? ದೊರೆಗಳಿಗೆ ಕುಲವೇನು? ತಿರುಕಗೆ ಭಯವೇನು? ಪರಮಲಿಂಗಕೆ ಹೊಲೆ ಛಲವೆ? ನವರತ್ನದಲ್ಲಿ ಶ್ರೀರತ್ನ (ಸ್ತ್ರೀರತ್ನ?) ಮುಖ್ಯ. ಹರಳಯ್ಯನೊಳಗೆ ಹರನುಣ್ಣನೆ? ದೊರೆತನವೆಂಬ ನರಕವಲ್ಲದೆ ಬೇರೆ ಜನ್ಮವಿನ್ನುಂಟೆ? (ದೊರೆತನವ ಮಾಳ್ಪ ನರಕವಲ್ಲದೆ ಮುಂದೆ ಮರುಜಲ್ಮ ಉಂಟೆ ಭವಭವದ.) ಜಾತಿಕೊಡೆಯರು (ಗುರು?) ಡೊಂಬರ ಚೆನ್ನಿಯೊಂದಿಗೆ ಉಣ್ಣಲಿಲ್ಲವೆ? ಆದ್ದರಿಂದ ಪ್ರತಿಮಾತನ್ನಾಡದೆ ಅರಮನೆಯನ್ನು ರಚಿಸು. ಮನ್ಮಥನ ಬಾಧೆ ಹೇಳತೀರದು. 'ಸಕಲ ಜಾತಿಗಳೊಳಗೆ ಹಿರಿಯ ಕುಲದವರಾಗೆ ಪ್ರತಿನೀರು ಹೊರಗವರ ಮನೆಯು (?)'—" ಎಂದು ವಾದಿಸಿದನು. ಕಡೆಗೆ ಮಂತ್ರಿ ಇದು ಮಹಾರಾಜನ ಹಣೆಯಬರಹವೆಂದೂ ರಾಜಾಜ್ಞೆ ಮೀರಲು ಸಾಧ್ಯವಿಲ್ಲವೆಂದೂ ಎಣಿಸಿದನು. ಹೊಲಗೇರಿಯಲ್ಲಿ ಸುತ್ತಾಡಿ ಬಂದು, ಮಹಾರಾಜನಿಗೆ ಒಂದು ಮಾತನ್ನು ಹೇಳಿದನು. "ರಾಜೇಂದ್ರ! ತಮಗೆ ತಿಳಿಸಲು ಬೆದರಿಕೆಯಾಗುತ್ತದೆ. ತಾವು ಕೂಡಲಿರುವ ಸತಿಯ ಸಂಗಡ ಇರುವಾಗ ನಂದಾದೀಪದ (ಹಣತೆ?) ಬೆಳಕಿದ್ದರೂ ಅದು ಗಂಡಿಗೆ ಮರಣ" ಎಂದನು.

ರಾಜನು "ಮಂತ್ರಿ! ದೀವಿಗೆಯೇ ಬೇಡ, ಮಾಡುವುದಿನ್ನೇನು? ನಾನೊಂದು ಬಯಸಿದರೆ ಅದು ಬೇರೊಂದಾಯಿತು. ಆಕೆಗೆ ತಕ್ಕ ಆಭರಣಾದಿಗಳನ್ನು ಕಳುಹಿಸು" ಎಂದು ಹೇಳಿ ಮಂತ್ರಿಯ ಸಲಹೆಯಂತೆ ನಡೆಯಲೊಪ್ಪಿದನು. ಇತ್ತ ಮಂತ್ರಿ ನೇರವಾಗಿ ಮಹಾರಾಣಿಯ ಬಳಿಗೆ ಬಂದನು. ರಾಣಿಯನ್ನು ಕಂಡು "ತಾಯಿ! ಏನು ಹೇಳಲಿ, ಮಹಾರಾಜರಿಗೆ ಮೂರು ಲೋಕಗಳಿಗೂ ವ್ಯಾಪಿಸುವ ಅಪಕೀರ್ತಿಯು ಕಾಲ ಸಾರಿಬರುತ್ತಿದೆ. ಹರಳನ ಮನೆಯ ಹೆಣ್ಣೊಬ್ಬಳನ್ನು ಕಂಡು, ಆಕೆಯನ್ನು ಕೂಡಲಿಚ್ಛಿಸಿ, ಆ ಕೇರಿಯಲ್ಲಿ ಮನೆಮಾಡಿಸಿದ್ದಾರೆ. ಈ ವಿಷಯವನ್ನು ತಮಗೂ ತಿಳಿಸಿರುತ್ತೇನೆ. ಆದರೆ ತಾವು ಈ ಸೇವಕನ ಒಂದು ಬಿನ್ನಹ ವನ್ನು ಕೇಳಬೇಕು. ತಾವು ಈ ರಾತ್ರಿ ಆ ಮನೆಯಲ್ಲಿದ್ದು ಅವರ ಇಷ್ಟದಂತೆ ನಡೆದರೆ, ಮಹಾ ರಾಜರಿಗೆ ಕಾಲನ ಭಯ ತಪ್ಪಬಹುದು. ಮಹಾರಾಜರ ಮನಸ್ಸು ಗ್ರಹಚಾರವಶಾತ್ ಹೀಗಾಗಿ ಕೀಳು ಕುಲದ ಕನ್ನೆಯ ಕಡೆಗೆ ಹರಿದಿದೆ. ತಾವು ಮಾತ್ರ ತಮ್ಮ ಕುರುಹನ್ನು ತೋರಿಸದಂತೆ ನಾಚಿ ಮೂಗರಂತಿರಬೇಕು" ಎಂದು ಹೇಳಿದನು. ಮಹಾರಾಣಿ ಆ ಸಂಚಿಗೆ ಒಪ್ಪಿದಳು. ಮಂತ್ರಿಯ ಬುದ್ಧಿಗೆ ಮೆಚ್ಚಿದಳು. ಕತ್ತಲೆಯಾಯಿತು. ತ್ರಿಶಂಕು ಹೊಲಗೇರಿಗೆ ಬಂದು ಸಂಕೇತ ಸ್ಥಳದಲ್ಲಿ ಸತಿಯನ್ನು ಕೂಡಿ ಸುಖಿಸಿದನು. ಆತನು "ಅಗಲಿದ ರತಿಯನು ಅಳಿದ ಮನ್ಮಥ ಕಂಡು ಕೂಡುವಂತೆ" ಹಲವು ಬಗೆಯಲ್ಲಿ ರಮಿಸಿದನು. ತಂದೆ ಮಾಡಿದ ಕರ್ಮ ಮಕ್ಕಳನ್ನು ಕಾಡುವುದೋ ಎಂಬಂತೆ, ಆ ಹೊಲಗೇರಿಯಲ್ಲಿ ರಮಿಸಿದ ಪರಿಣಾಮವಾಗಿ ಮುಂದೆ ಹರಿಶ್ಚಂದ್ರನು ಹುಟ್ಟಿ ಹಲವಾರು ಕಷ್ಟಗಳನ್ನು ಅನುಭವಿಸಬೇಕಾಯಿತು.

(i, ೧೫೬–೧೮೫.)

## ೨. ರೇಣುಕೆಯ ಕಥೆ

ಕುಮಾರರಾಮ ಮೊದಲಾದವರ ಜನ್ಮವೃತ್ತಾಂತವನ್ನು ತಿಳಿಸುವ ಸಂದರ್ಭದಲ್ಲಿ, ಹೊಸಮಲೆಯಲ್ಲಿ ತಪಸ್ಸುಮಾಡುತ್ತಿದ್ದ ಮುನಿಗಳನ್ನು ಕಂಡು ನಾರದರು ಹೇಳಿದ ಕಥೆ:—

ರೇಣುಕಿ ಎಂಬುವಳು ಜಮದಗ್ನಿಯೆಂಬ ಋಷಿಯ ಸತಿಯೆಂದು ಬಲ್ಲಿರಷ್ಟೆ. ಆಕೆ ಎಂಥ ಹೆಂಗಸೆಂಬುದನ್ನು ಕೇಳಿ. ಜಮದಗ್ನಿ "ಹತಮಾಡಿ(?) ಸತಿಯಳನು ಸುಟ್ಟು ಬುದ್ಧಿಯ ಬಿಟ್ಟು ಸ್ತ್ರೀತಿ (ಅಸಿತ?) ಕಂಠನೆಡೆಗೆ" ಹೋಗುತ್ತಿದ್ದನು. ರೇಣುಕೆಯ ಪುತ್ರನಾದ ಪರಶುರಾಮನು ಅದನ್ನು ನೋಡಿ, "ಬಿಡಬೇಕು....ಈ ಸುಡುವ ಶ್ರೀ (ಸ್ತ್ರೀ?) ಹತ್ಯಗಳ, ಕೊಡುವೆ ತಾಯ ಪಾದಕೆ ಶಿರವ" ಎಂದು ತಂದೆಯನ್ನು ಕೇಳಿಕೊಂಡನು. ಪರಶುರಾಮನನ್ನು ಕುರಿತು ಮುನಿ "ಬೇಡವೊ ತನುಜವಳು ನಾಡಾಡಿ ಸತಿಯಲ್ಲ" ಎಂದು ಎಚ್ಚರಿಸಿ, ಈಶ್ವರನು ಸಕಲ ಪಾಪ ಗಳನ್ನೂ ಒಟ್ಟುಗೂಡಿಸಿ ಸ್ತ್ರೀಯನ್ನು ಸೃಷ್ಟಿಸಿದ್ದಾನೆಂದೂ, ಆಕೆಯನ್ನು ಕೂಡಿದ ಗಂಡಸಿಗೆ ಕೇಡು ತಪ್ಪದೆಂದೂ ವಿವರಿಸಿದನು. ಆದರೂ ಪರಶುರಾಮನು "ತಂದೆ ಮುನಿವರನೆ, ನಿಮಗೆ ಅಂಜಿ ಬೇಡುತ್ತೇನೆ. ಇಂದು ನನಗಾಗಿ ದಯೆತೋರಿ. ದೋಷ ಕಂಡುಬಂದರೆ, ನಿಮಗಿಂತ ಮುಂಚಿತವಾಗಿಯೇ ನಾನು ಚಂಡಿಕೆಯನ್ನು ಹೊಡೆದು ಹಾಕುತ್ತೇನೆ" ಎಂದು ವಿನಂತಿಮಾಡಿ ಕೊಂಡನು. ಆಗ, ನಿರ್ವಾಹವಿಲ್ಲದೆ ಜಮದಗ್ನಿ ಒಪ್ಪಬೇಕಾಯಿತು. ಮುನಿಯ ಕರ್ಮಫಲ ತಪ್ಪಲಿಲ್ಲ.

ಒಂದು ಬಾರಿ, ಕಾರ್ತವೀರ್ಯನೆಂಬ ರಾಜನು ಜಮದಗ್ನಿಯ ಆಶ್ರಮಕ್ಕೆ ಬಂದನು.

ಅಲ್ಲಿ ಮೃಗಪಕ್ಷಿಗಳು ತಮ್ಮ ಬದ್ಧವೈರವನ್ನು ತೊರೆದು ಶಾಂತವಾಗಿರುವುದನ್ನು ಕಂಡು, ರಾಜನು ಆ ಸ್ಥಳದಲ್ಲಿ "ಅಗಜೆಯ ರಮಣಗಿಂ ಮಿಗಿಲಾದ ಮುನಿ" ಯಾರೋ ಇರಬೇಕೆಂದು ಭಾವಿಸಿದನು. ಅನಂತರ ಜಮದಗ್ನಿಗಳ ದರ್ಶನವಾಯಿತು. ಮಹಾರಾಜನು ಬಂದು ನಮಸ್ಕರಿಸಲು ಮುನಿ ಎಲ್ಲರನ್ನೂ ಆಶೀರ್ವದಿಸಿದನು. ಅನಂತರ, "ಎಲೈ ರಾಜನೇ, ಕಾಡಿನಲ್ಲಿ ಜೀವಿಸುವ ನಮ್ಮೆಡೆಗೆ ಏಕೆ ಬಂದಿ? ನಾವು ಬಡವರು" ಎಂದು ವಿಚಾರಿಸಿದನು. ಕಾರ್ತವೀರ್ಯನು ವಿನಯದಿಂದ "ತಮ್ಮನ್ನು ಕಂಡಿದ್ದು ಸಾಕ್ಷಾತ್ ಈಶ್ವರನನ್ನು ಕಂಡಂತೆಯೇ ಆಯಿತು. ತಾವಿದ್ದಲ್ಲಿಯೇ ಕೈಲಾಸವಿರುವುದು. ನನ್ನನ್ನು ಅನುಗ್ರಹಿಸಬೇಕು" ಎಂದು ನುಡಿದನು. ಜಮದಗ್ನಿ "ಎಲೈ ರಾಜನೆ, ಬಳಲಿ ಬಂದಿದ್ದೀಯೆ, ದಣಿವನ್ನು ಆರಿಸಿಕೊಂಡು ಭೋಜನ ಮಾಡಿಕೊಂಡು ಹೋಗು. ಮುನಿಯ ಆಶ್ರಮಕ್ಕೆ ಬಂದು ಹಾಗೇ ಹೋಗಬೇಕಾಯಿತೆಂಬ ಅಪವಾದವು ನನಗೆ ಬರದಿರಲಿ" ಎಂದು ಉಪಚರಿಸಿದನು. ಆ ಮಾತುಗಳನ್ನು ಕೇಳಿ ಕಾರ್ತವೀರ್ಯನಿಗೆ ಅತ್ಯಂತ ಆಶ್ಚರ್ಯವಾಯಿತು. ಏನೇನೂ ಗತಿಯಿಲ್ಲದ ಮುನಿ ಅಪಾರವಾದ ತನ್ನ ಪಡೆಗೆ ಆಹಾರ ನೀಡಲು ಹೇಗೆ ಸಾಧ್ಯವೆಂದು ಚಿಂತಿಸಿದನು. ಆದರೆ, ಮುನಿಯ ಮಾತಿನ ಮೇರೆಗೆ ಒಪ್ಪಿ ನಿಂತನು.

ಸಮಸ್ತ ಸೇನೆಯೂ ಊಟಕ್ಕೆ ಸಿದ್ಧವಾಯಿತು. ಎಲ್ಲರಿಗೂ ವಟಪತ್ರವನ್ನು ಹಾಕಲಾಯಿತು. ಋಷಿ ತಪಸ್ಸನ್ನು ಮಾಡಲು ದೇವಲೋಕದ ಕಾಮಧೇನು ಭೂಮಿಗೆ ಅವತರಿಸಿತು. ಯಾರು ಯಾರ ಮನಸ್ಸಿನಲ್ಲಿ ಏನೇನು ಅಪೇಕ್ಷೆಯಿದ್ದಿತೋ ಅದಕ್ಕನುಸಾರವಾಗಿ ಅದು ಉಣಬಡಿಸಿತು. ಸಮಸ್ತ ಸೇನೆಯೂ ತೃಪ್ತಿಗೊಂಡಿತು. ಎಲ್ಲರೂ ಜಮದಗ್ನಿಯನ್ನು ಕೊಂಡಾಡುತ್ತಿದ್ದರು. ಕಲ್ಯಾಣಪುರದಲ್ಲಿ ಬಸವೇಂದ್ರನು ಜಂಗಮರಿಗೆ ಉಣಬಡಿಸಿದಂತಾಯಿತು ಎಂಬುದಾಗಿ ಮೆಚ್ಚಿದರು. ಈವರೆಗೆ ಆ ವೃತ್ತಾಂತವನ್ನು ಕೇವಲ ಕೇಳಿದ್ದೆವೆಂದೂ ಇಂದು ಕಣ್ಣಾರೆ ಕಂಡೆವೆಂದೂ ಹಿಗ್ಗಿದರು. ಕಾರ್ತವೀರ್ಯನಿಗಾದರೋ ಅದು ಎಂಥ ವಿಸ್ಮಯವೆಂದು ಎನಿಸಿತು. "ಹಚ್ಚದೆ ಬೆಂಕಿಯ ಹೊಗೆಯ ಕಾಣದೆ ಪರಮ ಮೃಷ್ಟಾನ್ನವ ಉಂಡ ಪರಿ ಹೇಗೆ" ಎಂದು ಬೆರಗಾಗಿ, ಅದರ ರಹಸ್ಯವೇನೆಂದು ಜಮದಗ್ನಿಯನ್ನು ಕೇಳಿದನು. ಆಗ ಜಮದಗ್ನಿ ಮುಂದಾಗುವ ಕೇಡನ್ನು ಅರಿಯದೆ, "ಈಶ್ವರನು ಕಾಮಧೇನುವನ್ನು ಕಳುಹಿಸಿಕೊಡಲು ಇದು ಸಾಧ್ಯವಾಯಿತು. ಇಲ್ಲದಿದ್ದಲ್ಲಿ ಮುನಿಗಳಿಗೆ ಹೇಗೆ ಆದೀತು?" ಎಂದು ತಿಳಿಸಿದನು. ಕಾರ್ತವೀರ್ಯನು "ಹರಹರ" ಎಂದು ಬೆರಗಾದನು. ಆತನ ಮಂತ್ರಿಗಳು ಚಾಡಿಮಾತನ್ನು ಹೇಳಿದರು."ಧರಣಿಪಾಲಕರೊಳಗೆ ಇರಬೇಕು ಈ ಪಸುವು,ಮುನಿಗೇಕೆ ಕಾಡವಾಸರಿಗೆ?" ಎಂದು ಕಿವಿಚುಚ್ಚಿದರು. ಮಹಾರಾಜನು ಆಸೆಗೆ ಸಿಕ್ಕಿಬಿದ್ದು, ಜಮದಗ್ನಿಯನ್ನು ಕುರಿತು "ಒಂದರ ಬದಲಿಗೆ ನೂರೊಂದ ಕೊಡುವೆನು ಮುನಿಯೆ, ಸಂದೇಹಬೇಡ ಮನದೊಳಗೆ. ಮುಂದಾಗಿ ಪಿಡಿಕೊಳ್ಳಿ ಮುನ್ನೂರನಾದರು. ಕಡೆಗೆ ಹಿಂದಾಗಿ ಕೊಡಿ ನಿಮ್ಮ ಒಡವೆ" ಎಂದು ವಿಜ್ಞಾಪಿಸಿಕೊಂಡನು. ರಾಜನ ಮಾತುಗಳನ್ನು ಕೇಳಿ ಜಮದಗ್ನಿಗೆ ನಗು ಬಂದಿತು. "ಚಂದವಾಯಿತು. ಇತ್ತ ಬಾರೆಂದರೆ ಮನೆಯನು ಇಂಬುಗೊಂಡರು ಎಂಬ ಗಾದೆ. ಕೊಂದೆನೆಂಬಾತಗೆ ಕೋಲನು ಕರಕಿತ್ತೆ. ಎನ್ನಿಂದವೆ ತನಗಾಯಿತು" ಎಂದು ಪಶ್ಚಾತ್ತಾಪಪಟ್ಟನು. ಅಲ್ಲದೆ, ಕಲಿಗಾಲ(?)ದಲ್ಲಿ ಉಪಕಾರಕ್ಕೆ ಅಪಕಾರವೇ ಪ್ರತಿಫಲವೆಂದೂ ರಾಜನಿಗೆ ಆದಾಯ ತೋರುವವನು ಜಾಣನಲ್ಲವೆಂದೂ, ಯಾವ ಪ್ರಾಣಿಗೇ ಆಗಲಿ, ಕಡೆಗೆ ನಾಯಿಗೂ ಸಹ ಉಪಕಾರಸ್ಮರಣೆ ಉಂಟೆಂದೂ, ಮಾನವನಿಗೆ ಆ ಕ್ರಿಯೆ ಲವಲೇಶವೂ ಇಲ್ಲವೆಂದೂ ಬಗೆಬಗೆಯಾಗಿ ಸಂಕಟ

ಪಟ್ಟನು. ಬಳಿಕ, " ನೂರವ ಕೊಡಲೆಂದು ಆಡಲು ನೃಪವರನೆ ಜೋಡಹುದೇ ರತ್ನಕೆ ಮುತ್ತು ? ಬೇಡಿದ ಬಯಕೆಯ ನೀಡುವ ಕಾಮಜೇನಿಂಗೆ ನಾಡಾಡಿ ಪಶುಗಳು ಎಣೆಯೆ ? ನಮ್ಮದಲ್ಲವೊ ಗೋವು. ಆಗ್ನೆಮಾಡಿ ಕೆಡಲ್ಯಾಕೆ. ನಿಮ್ಮಿಚ್ಛೆ ಬರುವುದಕ್ಕೆ ಘುರುಳೇ ? ಬ್ರಹ್ಮಾದಿ ವಿಷ್ಣು[ಗಳ]ಗೆ ಅಳವಡದು. ಲೋಕದ ಹುಲ್ಲುಗೋವೇನೋ ಎಲೆ ರಾಯ " ಎಂದು ರಾಜನಿಗೆ ಹಿತೋಕ್ತಿಗಳನ್ನು ಹೇಳಿದನು. ಕಾರ್ತವೀರ್ಯನಿಗೆ ಈ ಮಾತುಗಳು ಪ್ರಿಯವಾಗಲಿಲ್ಲ. ಮುನಿಯನ್ನು ಕುರಿತು, " ಎಲೈ ಮುನಿಯೆ, ಕೈಮುಗಿದು ಕೇಳುತ್ತೇನೆ. ಊಟವನ್ನು ಮಾಡಿದ ಸಲುವಾಗಿ ವಿನಯದಿಂದ ಬೇಡುತ್ತೇನೆ. ಸಲ್ಲದ ಬೆದರಿಕೆಗಳಿಗೆ ಸಗ್ಗುವವನಲ್ಲ. ನಾನು ಕೋಪಗೊಂಡಿದ್ದೇ ಆದರೆ ಆ ಹಸುವನ್ನು ಈಗಲೇ ಹಿಡಿಸಬಲ್ಲೆ" ಎಂದು ಕಟುವಾಗಿ ಮಾತಾಡಿದನು. ಜಮದಗ್ನಿ " ಕೊಡುವುದಕ್ಕೆ ಅದು ನಮ್ಮ ಒಡವೆಯೆ ? ನೀನು ಹಿಡಿದಿದ್ದೇ ಆದರೆ ನಿನ್ನ ಬಲವೆಲ್ಲ ನಾಶವಾಗುವುದು ಖಂಡಿತ. ಸಿಡಿಲಿನ ಮರಿಯೊಂದಿಗೆ ಉರಗ ಸರಸವಾಡಲು ಕೆಡದೆ ಇದ್ದೀತೆ ರಾಜೇಂದ್ರ ? " ಎಂದನು. ಮಹಾರಾಜನು ಮತ್ತೆ ಬಲಾತ್ಕಾರದ ಮಾತುಗಳನ್ನೇ ಮುಂದುವರಿಸಿದನು. ಜಮದಗ್ನಿ " ಅದನ್ನು ಹಿಡಿಯಲೂ ಸಹ ಆಗದು. ನಿಮಿಷಮಾತ್ರದಲ್ಲಿ ನಿಮ್ಮ ಪಡೆಯೆಲ್ಲ ನಾಶವಾಗುವುದು. ಸಿಡಿಲೆರಗಿ ಹೊಡೆಯಲು ಕೊಡೆ ಕಾಯ್ವುದೆ ಎಲೆ ಮರುಳೆ ? ಬಲಕೆ ಬೆದರುವುದೆ ಕಾಮಧೇನು ?" ಎಂದು ಎಚ್ಚರಿಸಿದನು. ಕಾರ್ತವೀರ್ಯನಿಗೆ ಈ ಮಾತುಗಳು ಯಾವುವೂ ಹಿಡಿಸಲಿಲ್ಲ. "ಎಲೈ ಮುನಿಯೆ, ನಿಮ್ಮ ದಯವಿದ್ದರೆ ಸಾಕು, ನಾನು ಹೇಗಾದರೂ ಮಾಡಿ ಹಿಡಿಸುವೆನು " ಎಂದನು. ಮುನಿ "ವಾದಿ ಮನುಜನ ಕೂಡೆ ಮಾತಾಡಿ ಫಲವೇನು" ಎಂದು ಬಗೆದು, "ನೀ ಕಂಡ ತೆರನ ಮಾಡು" ಎಂದನು.

ರಾಜನು ಆಜ್ಞೆಮಾಡುವುದೇ ತಡ, ಸೈನಿಕರು ಕಾಮಧೇನುವನ್ನು ಹಿಡಿಯಲು ಪ್ರಯತ್ನಿಸಿದರು. ಆ ಧೇನು ಯಮನ ಸ್ವರೂಪವನ್ನು ತಾಳಿದಂತೆ,ಕಣ್ಣುಗಳಿಂದ ಕಿಡಿ ಸೂಸುತ್ತ, ಸಿಡಿಲಿನಂತೆ ಗುಡುಗುಡಿಸುತ್ತ, ಭೂಮಿಯೇ ಕಂಪಿಸುವಂತೆ ಮುನ್ನುಗ್ಗಿತು. ಸೈನಿಕರು ಜೇನಿನಂತೆ ನಾಲ್ಕೂ ಕಡೆಗಳಿಂದ ಕವಿಯಲು, ಅದು ತನ್ನ ಬಾಲವನ್ನು ಮೇಲಕ್ಕೆತ್ತಿ ನುಗ್ಗಿ ಎಲ್ಲರನ್ನೂ ಅಟ್ಟತೊಡಗಿತು. ಸೀನುತ್ತ ತನ್ನ ಕೋಡೆರಡರ ತುದಿಯಲ್ಲಿ ಹೆಣಗಳನ್ನು ಮೇಲಕ್ಕೆ ಎತ್ತಿ ಒಗೆಯಿತು. ತನ್ನ ಪಾದಗಳಿಂದ ಎಂಟು ಸಾವಿರ ಮಂದಿಯನ್ನು ಒರಸಿತು. ಹೀಗೆ ಹೆಣದ ಮೇಲೆ ಹೆಣಗಳು ಉರುಳಿದುವು. ಆಗ ಕಾರ್ತವೀರ್ಯನಿಗೆ ದುಃಖವುಂಟಾಗಿ " ಮುನಿಯ ಮಾತನು ಮೀರಿಸುನ[ಕ]ಗಿಂತ ಕಡೆಯಾದೆ. ಮುನಿಗೆ ಎರಗಲು ಕರುಣಿಸನೆ ? ಕೆಂಡ ಕರದೊಳು ಪಿಡಿದು ಮುಂಡೆ ತುರಿಸಿದಂತೆ ಆಯಿತು " ಎಂದು ನೊಂದುಕೊಂಡನು.

ಈ ವೇಳೆಗೆ ಪರ್ಣಶಾಲೆಯಲ್ಲಿದ್ದ ರೇಣುಕೆ, ಕಾರ್ತವೀರ್ಯನನ್ನು ಕೈಸನ್ನೆ ಮಾಡಿ ಕರೆದಳು. ಮಹಾರಾಜನನ್ನು ಕುರಿತು, " ಎಲೈ ಅರಸೆ, ಆ ಧೇನು ಶಕ್ತಿ ಮಾತ್ರದಿಂದ ಬರುವುದಿಲ್ಲ. ಮುನಿಯ ಶಿರವನ್ನು ಕತ್ತರಿಸಲು ನಿನಗೆ ತ್ರಾಣವುಂಟೆ ?" ಎಂದು ಕೇಳಿದಳು. ಕಾರ್ತವೀರ್ಯ ಆ ಚೆಲುವೆಯನ್ನು ಕಂಡು ವ್ಯಾಮೋಹವುಂಟಾಗಿ, ಆಕೆಯನ್ನೇ ನಿಟ್ಟಿಸಿ ನೋಡಿದನು. ಆ ಹೆಂಗಸು " ಇದಕ್ಕಾಗಿ ಕಳವಳ ಬೇಡ. ಬೇಕೆನಲು ನಾ ಬರುವೆ. ಪಾಪಿ ಮುನಿಯನ್ನು ಸಂಹರಿಸು. ಈ ಕ್ಷಣ ಮುನಿಯ ತಲೆಕಡಿದು, ಆ ಗೋವಿನ ಕತ್ತಿಗೆ ಕಟ್ಟಲು, ಅದು ಕುರಿಯಂತೆ ನಿನ್ನನ್ನು ಹಿಂಬಾಲಿಸುವುದು" ಎಂದಳು. ಈ ಗುಟ್ಟನ್ನರಿತ ರಾಜನು ಹಿಗ್ಗಿದನು. ಮುನಿಯನ್ನು ಕೊಲ್ಲಲು ಭಯವೆಲ್ಲಿಯದು ? ಕಾಲನ ಭಯವನ್ನು ದಾನ ಧರ್ಮಾದಿಗಳಿಂದ ಪರಿಹರಿಸಕೊಳ್ಳ

ಬಹುದು. ಹಸುವು ಬರದಿದ್ದರೂ ಆ ಹೆಣ್ಣು ನನ್ನವಳಾಗುತ್ತಾಳೆ. ಮುನಿ ಬದುಕಿದ್ದರೆ ಈ ಆಸೆ ನೆರವೇರದು " ಎಂದು ದುರಾಲೋಚನೆ ಮಾಡಿದನು. ಅನಂತರ, ರಾಜನು ಚರರಿಗೆ ಆಜ್ಞಾಪಿಸಲು, ಅವರು ಮುನಿಯ ತಲೆಯನ್ನು ಕಡಿದರು. ಆ ಶಿರವನ್ನು ತಂದು ಕಾಮ ಧೇನುವಿನ ಮುಂದೆ ಹಿಡಿಯಲು ಅದು ಶಾಂತವಾಗಿ, ತನ್ನ ತಲೆಯನ್ನು ಮುಂದೆ ನೀಡಿತು. ರೇಣುಕೆಯ ಮಾತು ಸತ್ಯವಾಯಿತೆಂದು ನಲಿದರು. ಕಾಮಧೇನುವಾದರೋ, ಜಮದಗ್ನಿಯ ತಲೆ ತನ್ನ ಕೊರಳಿಗೆ ಬರಲೆಂಬ ಶಾಪವೊಂದು ಕಳೆಯಿತೆಂದು ಭಾವಿಸಿ, ಅದನ್ನು ಈಶ್ವರನಿಗೆ ಅರ್ಪಿಸಲೆಂದು ಕೈಲಾಸದತ್ತ ತೆರಳಿತು. ದಾರಿಯಲ್ಲಿ ಪರಶುರಾಮನ ಭೇಟಿಯಾಗಲು, ಅವನು ಧೇನುವನ್ನು ಸಮಾಚಾರವೇನೆಂದು ಕೇಳಿದನು. ಆಗ ಅದು ನಡೆದ ಸಂಗತಿಯನ್ನೆಲ್ಲ ಹೇಳಿ "ಕೊಲ್ಲಿಸಿ ನಡೆದಾಳು ತಾಯಿ ರೇಣುಕೆ ನಿಮ್ಮ, ಕುಲ್ಲ ಕಾರ್ತೀಕನ ಮೆಚ್ಚಿ" ಎಂದಿತು. ಪರಶುರಾಮನು ಉಗ್ರವಾಗಿ, ಸಿಡಿಲಿನ ಮರಿಯಂತೆ ಹೊರಟು ಬಂದು ರೇಣುಕೆಯನ್ನು ಕತ್ತರಿಸಿ, ಕಾರ್ತೀಕನನ್ನು ಸದೆಬಡಿದನು. ಕಾಮಧೇನು ಜಮದಗ್ನಿಯ ಶಿರವನ್ನು ಈಶ್ವರನಿಗೆ ಸಮರ್ಪಿಸಿ, ತಾನು ಹೇಮಗಿರಿಗೆ ತೆರಳಿತು. ಈಶ್ವರನ ಕರಸ್ಪರ್ಶದಿಂದ ಜಮದಗ್ನಿ ಬದುಕಲು, ಶಿವನು "ವನಿತೆ ಯರ ದೆಸೆಯಿಂದ ತಾವು ಸಾಯುವ ದುರ್ಗತಿ ಬಂದಿತೆ? ಆ ಹಣೆಯ ಬರಹ ಕಳೆಯಿತು. ಮತ್ತೆ ತಪಸ್ವಿಗಳಾಗಿ ಇರಿ" ಎಂದು ಹೇಳಿದನು. ಆ ಮಾತಿಗೆ ಜಮದಗ್ನಿ "ಕಾರ್ತವೀರ್ಯನು ಮಾಡಿದ ಅಪಕಾರಕ್ಕೆ ಹಾಗೆಯೇ ಇರಲಾದೀತೆ ? ಆತನು ಡಿಳ್ಳಿಯಲ್ಲಿ ಜನಿಸುವಂತೆ ಅಪ್ಪಣೆಯಾಗಬೇಕು. ನಾನು ಆತನನ್ನು ಹತಮಾಡಬೇಕು. ನನಗೆ ಆತನನ್ನು ಕೊಲ್ಲಬಲ್ಲ ಒಬ್ಬ ಮಗನನ್ನು ದಯ ಪಾಲಿಸಬೇಕು" ಎಂದು ಬೇಡಿಕೊಂಡನು. ಈಶ್ವರನು ಹಾಗೆಯೇ ಆಗಲೆಂದು ಸಮ್ಮತಿಸಲು, ಜಮದಗ್ನಿಯೇ ಕಂಪಿಲನಾಗಿಯೂ, ಕಾರ್ತೀಕನು ಸುರುತಾಳನಾಗಿಯೂ, ಪರಶುರಾಮನು ಕುಮಾರರಾಮನಾಗಿಯೂ,ರೇಣುಕೆ ಡೊಂಬತಿ ರತ್ನಿಯಾಗಿಯೂ ಜನಿಸಿದರು[1].

(ii, ೯೨–೧೭೨.)

## ೩. ಇಂದ್ರಕುಮಾರಿಯ ಕಥೆ

ತಪಸ್ವಿಗಳು ಹೊಸಮಲೆಯನ್ನು ಬಿಟ್ಟು ತೆರಳುವ ಸಂದರ್ಭದಲ್ಲಿ, ಮುನಿಯೊಬ್ಬನು ಕಾಮಾಂಧಳಾದ ಹೆಂಗಸಿನ ದುರ್ವರ್ತನೆಯನ್ನು ಕುರಿತು ನಾರದನಿಗೆ ಹೇಳಿದ ಕಥೆ:—

ಮಾಳವ ದೇಶದಲ್ಲಿ ಕಳಾವತಿಯೆಂಬುದೊಂದು ಪಟ್ಟಣ. ಅದನ್ನು ಸೂರ್ಯವಂಶದ ವಿಜಯೇಂದ್ರನೆಂಬುವನು ಆಳುತ್ತಿದ್ದ. ಆತನಿಗೆ ಇಂದ್ರಕುಮಾರಿಯೆಂಬ ಅತ್ಯಂತ ಚೆಲುವೆ ಯಾದ ಮಗಳೊಬ್ಬಳಿದ್ದಳು. ಚೋಳೇಂದ್ರದೇಶದ ಪಾಂಚಾಲರಾಯನ ಮಗ ಪಾಲೇಂದ್ರ ನೆಂಬುವನು ಆಕೆಯನ್ನು ಮದುವೆಯಾದನು. ಮದುವೆಯಾದ ಮೇಲೂ ಮೂರುವರ್ಷಗಳವರೆಗೆ ಆಕೆಯನ್ನು ತವರುಮನೆಯಲ್ಲಿಯೇ ಬಿಟ್ಟಿದ್ದನು. ಅನಂತರ ಆತನು ತನ್ನ ಹೆಂಡತಿಯನ್ನು

---

1. ಧರಣಿಪಾಲಕ ತಾನಾದ ಮುನಿಯು ಕಂಪಿಲರಾಯ ಮಗ ಬಂದು ಜನಿಸಿದ ಈಗ ॥
ಮಾತೆಯನು ಕೊಂದಾತ ಮಗನಾದ ಕಂಪಿಲಗೆ ಜೋತೆ (?) ವಾಯ್ತು ಋಷಿಗಳಿಗೆ ।
ಕಾರ್ತೀಕ ವೀರನು ಡಿಳ್ಳಿಯೊಳ್ನೇಮದ ಶಾಪಕ್ಕೆ ಬಂದು ಜನಿಸಿದರು ॥
ಕೊಂದ ರಾಮಗೆ ಕೊಲೆಯು ಮುಂದೆ ತಪ್ಪದು ಋಷಿಯೆ ಡೊಂಬಾತಿಯಾಗಿ ರೇಣುಕಿಯು ।
ಬಂದಾಳು ಕಂಪಿಲಗೆ ಮೆಚ್ಚಿನ ವೇಶ್ಯಾಗಿ ತಿಂಬಾಳು ಮಗನ ಚಲ ಪದಕ್ಕೆ ॥

(ii, ೧೭೦–೧೭೨.)

ಕರೆದುಕೊಂಡು ಹೋಗಲು ಮಂತ್ರಿಕುಮಾರನೊಂದಿಗೆ ಮಾಳವ ದೇಶಕ್ಕೆ ಬಂದನು. ತನ್ನ ಅಳಿಯನೊಂದಿಗೆ ಗೆಳೆಯನೂ ಬಂದಿರುವ ಉದ್ದೇಶವೇನೆಂದು ಮಹಾರಾಜನಿಗೆ ಗೊತ್ತಾಗಲಿಲ್ಲ. ಆಮೇಲೆ ವಿಚಾರಿಸಿದರಾಯಿತು ಎಂದುಕೊಂಡು, ಅಳಿಯನಿಗೆ ತಕ್ಕ ಏರ್ಪಾಡುಗಳನ್ನು ಮಾಡಿದನು. ಆಪ್ತಮಿತ್ರನನ್ನು ಅಗಲಿರಲಾರದ ಪ್ರಧಾನಿಯ ಮಗನಿಗೆ ಅಳಿಯನ ಸೆಜ್ಜೆವನೆಯ ಪಕ್ಕದಲ್ಲಿಯೇ ಮಲಗಲು ವ್ಯವಸ್ಥೆ ಮಾಡಿದನು.

ರಾತ್ರಿಯಾಗಲು, ಪಾಲೇಂದ್ರನು ಮೈಮರೆತು ನಿದ್ದೆಹೋದನು. ಇದನ್ನರಿತ ರಾಜಕುಮಾರಿ ಮೇಲೆದ್ದು, ಚಿಕ್ಕಂದಿನಿಂದ ತಾನು ಆಟಪಾಟಗಳನ್ನಾಡಿ, ಅನಂತರ ಮನವಾರೆ ಮೆಚ್ಚಿದ್ದ, ಕುಂಟ ಮೇದನನ್ನು ನೋಡಿಕೊಂಡು ಬರಲು ಅದೇ ತಕ್ಕ ಸಮಯವೆಂದು ಬಗೆದಳು. ಆತನಿಗಾಗಿಯೇ ಮಾಡಿಸಿಟ್ಟಿದ್ದ ಷಡ್ರಸಪೂರಿತವಾದ ಅನ್ನದ ಬುತ್ತಿಯನ್ನು ತೆಗೆದುಕೊಂಡು ಮೆಲ್ಲನೆ ಹೊರಹೊರಟು ಬಂದಳು. ಅದನ್ನು ಕಂಡ ಮಂತ್ರಿಯ ಮಗನು ಕುತೂಹಲಗೊಂಡನು. ಅವಳಿಗೆ ಕಾಣದಂತೆಯೇ ಹಿಂಬಾಲಿಸಿದನು. ರಾಜಕುಮಾರಿ ಏಳುತ್ತ ಬೀಳುತ್ತ, ಊರಿನ ಮೂಲೆಮೂಲೆಗಳನ್ನು ಸುತ್ತಿ, ಕಡೆಗೆ ಕಾಲಿಲ್ಲದ ಮೊಟ್ಟನ ಬಳಿಗೆ ಬಂದಳು. ಅದನ್ನು ಕಂಡ ಮಂತ್ರಿಯ ಮಗನಿಗೆ "ಹಿಂದಲ ಜನ್ಮದ ಸ್ನೇಹದ ಫಲವಿದು" ಎನ್ನಿಸಿತು. ಎಲ್ಲವೂ ಹಣೆಯ ಬರಹ ಎಂದುಕೊಂಡನು. "ಕಡಮೆಯವರ ಮಾತೇನು ದೊರೆ ರಾಯವಲ್ಲಭೆಯು ಮುಡಬಗೆ ಮನವಿಟ್ಟ ಬಳಿಕ" ಎಂದು ನಿಟ್ಟುಸಿರುಬಿಟ್ಟನು.

ಅತ್ತ, ಆ ಹೆಳವನು ತಡವಾಗಿ ಬಂದ ರಾಜಕುಮಾರಿಯ ಮೇಲೆ ಕೋಪಿಸಿಕೊಂಡು, ತೆವಳಿಕೊಂಡೇ ಗಳುವಿನಿಂದ ಆಕೆಯನ್ನು ಹೊಡೆದನು. ರಾಜಕುಮಾರಿ ಆತನ ಎರಡು ಕಾಲುಗಳನ್ನೂ ಹಿಡಿದುಕೊಂಡು "ತಪ್ಪಾಯಿತು, ಕ್ಷಮಿಸಬೇಕು. ಮದುವೆಯಾದಂದು ಮೊದಲಾಗಿ ಈವರೆಗೆ ಮುಖವನ್ನೇ ಕಾಣದ ನನ್ನ ಗಂಡನು ಬಂದಿರುತ್ತಾನೆ. ಆದ್ದರಿಂದ ಬರುವುದು ತಡವಾಯಿತು. ಇನ್ನು ನನ್ನನ್ನು ಕರೆದುಕೊಂಡು ಹೋಗುವನು. ಇಂದಿಗೆ ನಮ್ಮಿಬ್ಬರ ಋಣ ತೀರಿತು. ಹೆಣ್ಣು ಜನ್ಮಕ್ಕೆ ಬೆಂಕಿ ಬೀಳಲಿ. ಚಿಕ್ಕಂದಿನಿಂದಲೂ ನಾವಿಬ್ಬರೂ ಹಾಲು ಹಣ್ಣು ಬೆರೆತಂತಿದ್ದೆವು. ನಾನು ಈವರೆಗೆ ಗೂಡಿನ ಗಿಣಿಯಂತಿದ್ದೆ. ಹೋಗಲು ಮನಸ್ಸಿಲ್ಲ. ಆದರೆ ಹೋಗದಿರಲು ಜನರು ಹಾದರಗಿತ್ತಿ ಎಂದು ದೂಷಿಸುವರು" ಎಂದು ದುಃಖಿಸಿದಳು. ಆಗ ಆ ಹೆಳವನು "ಇದಕ್ಕೇಕೆ ಇಷ್ಟು ಯೋಚನೆ? ಮೇದಗತ್ತಿಯನ್ನು ತೆಗೆದುಕೊಂಡು ಹೋಗಿ, ಅವನ ಕತ್ತನ್ನು ಕತ್ತರಿಸಿ ಹಾಕು. ಆದರ ಅಪವಾದ ಅವನ ಸ್ನೇಹಿತನ ಮೇಲೆ ಬರುತ್ತದೆ." ಎಂದು ಸಲಹೆಮಾಡಿದನು. ರಾಜಕುಮಾರಿ "ಇದು ಸರಿಯಾದ ಮಾತು. ಕತ್ತಿಯನ್ನು ಹದಮಾಡಿ ಕೊಡು. ಅನಂತರ, ಯಾವ ತೊಡರೂ ಇರದು. ಜನರು ನನ್ನನ್ನು ಮುಂಡೆ ಎನ್ನುವರು. ಚಿಂತೆಯಿಲ್ಲ. ನಿರಾತಂಕವಾಗಿ ಬಾಳಬಹುದು" ಎಂದು ಒಡಂಬಟ್ಟಳು. ಆ ಮಾತುಗಳನ್ನೆಲ್ಲ ಆಲಿಸುತ್ತ ನಿಂತಿದ್ದ ಮಂತ್ರಿಯ ಮಗನು ತನಗೆ ತಾನೇ ನಕ್ಕನು. ಮುಂದೆ ಏನಾಗುವುದೋ ನೋಡೋಣವೆಂದು ಭಾವಿಸಿ, ತನ್ನ ಎಡೆಗೆ ಹಿಂತಿರುಗಿದನು.

ರಾಜಕುಮಾರಿ ಹಿಂತಿರುಗಿ ಬಂದು, ಅತ್ತಿತ್ತ ನೋಡಿ ಗಂಡನ ತಲೆಯನ್ನು ಕಡಿದಳು. ಬಳಿಕ, "ಅಯ್ಯೋ, ನಾನು ಮುಂಡೆಯಾದೆನು" ಎಂದು ಒಂದೇ ರೀತಿಯಾಗಿ ಬೊಬ್ಬೆಯಿಟ್ಟು ಪ್ರಲಾಪಿಸುವಂತೆ ನಟಿಸಿದಳು. ಪಹರೆಯವರೇ ಮೊದಲಾಗಿ ಎಲ್ಲರೂ ಬಂದು ವಿಚಾರಿಸಿದರು. ಆಕೆ, "ಅಯ್ಯೋ, ನನ್ನ ಗಂಡನು ತೀರಿ ಹೋದ ಎಂದೂ ಬಾರದ ಪ್ರಿಯನು ಇಂದು ಬಂದಿದ್ದಾನೆಂದು ಬಂದು ನೋಡಲು, ಆತನ ತಲೆ ಕಡಿದು ಬಿದ್ದಿತ್ತು. ನಾನು ಬದುಕಿ ಮಾಡುವುದೇನು?

ಸಹಗಮನ ಮಾಡುತ್ತೇನೆ. ಅವನ ಜೊತೆಯಲ್ಲಿ ಸ್ನೇಹಿತನಲ್ಲದೆ ಮತ್ತಾರೂ ಇರಲಿಲ್ಲ. ಅವನಿಗೆ ರಾಜಕುಮಾರನ ಮೇಲೆ ಏನಾದರೂ ಹಗೆಯಿತ್ತೋ ಏನೋ!" ಎಂದು ಗೋಳಾಡಿದಳು. ಅಲ್ಲಿದ್ದವರು, ಮಂತ್ರಿಕುಮಾರನನ್ನು ಹಿಂಗಟ್ಟುಮುರಿ ಕಟ್ಟಿ, ಆಳಿಗೊಂದು ಗುದ್ದು ಹೊಡೆದು, ಅವನನ್ನು ಛೀಮಾರಿ ಮಾಡಿ, ರಾಜನ ಬಳಿಗೆ ಕರೆದು ತಂದರು. ಮಹಾರಾಜನು ತನ್ನ ಮಂತ್ರಿಯನ್ನು ಕರೆದು, ಅವನನ್ನು ಶೂಲಕ್ಕೇರಿಸುವಂತೆ ಆಜ್ಞೆಮಾಡಿದನು.

ಮಂತ್ರಿ ಆ ಹತಭಾಗ್ಯನನ್ನು ತನ್ನ ಮನೆಗೆ ಕರೆತಂದು ಉಪಚರಿಸಿ, "ಆ ರೀತಿ ಅವನು ರಾಜಕುಮಾರನನ್ನು ಕೊಂದದ್ದು ನಿಜವೇ ?" ಎಂದು ವಿಚಾರಿಸಿದನು. ಆಗ ಆತನು, "ಅಯ್ಯಾ ಮಂತ್ರಿ ! ನಿಮ್ಮ ರಾಜನು ಸ್ವಲ್ಪವೂ ಮುಂದಾಲೋಚನೆಯುಳ್ಳವನಲ್ಲ. ನೀರಿನಲ್ಲಿ ಬಿದ್ದವನನ್ನೂ ಕೂಡ ಅದು ಮೂರು ಬಾರಿ ಹೊರಕ್ಕೆ ಹಾಕಿ, ಅನಂತರ ಮುಳುಗಿಸುವುದು. ನಿಮ್ಮ ರಾಜನಾದರೋ 'ಎತ್ತು ಕರು ಹಾಕಿತು ಎಂದು ಹೇಳಿದರೆ ಹಿತ್ತಲಿಗೆ ಹೊಡೆ' ಎಂದು ಹೇಳುವಂತಹ ಜಾಣ. ಸತ್ಯಾಂಶವನ್ನು ಶೋಧಿಸಿ ತಿಳಿಯಬೇಕೆಂಬ ಜ್ಞಾನವಿಲ್ಲ. ಮುಖ್ಯವಾಗಿ, ಸರ್ಪನ ಬಾಯಲ್ಲಿ ಸಿಕ್ಕಿಬಿದ್ದಿರುವ ಕಪ್ಪೆ ನೊಣಕ್ಕಾಗಿ ಹಂಬಲಿಸಿದಂತಾಯಿತು. ಅಂಥ ಆಪ್ತಮಿತ್ರನೇ ತೀರಿಕೊಂಡ ಮೇಲೆ ನಾನು ಏಕೆ ಬದುಕಬೇಕು ? ಅವನ ಜೊತೆಯಲ್ಲಿಯೇ ನಾನೂ ಸಾಯುತ್ತೇನೆ. ಆ ಕೆಟ್ಟ ಹೆಂಗಸೂ ಮೋದರವನೂ ಬದುಕಲಿ. ನನ್ನನ್ನು ಗಲ್ಲಿಗೇರಿಸು" ಎಂದು ಅರ್ಥಗರ್ಭಿತವಾಗಿ ಮಾತನಾಡಿದನು. ಅನಂತರ ಮಂತ್ರಿ ಆ ಮೋದನನ್ನು ಹಿಡಿತರಿಸಿ, ಅವನನ್ನು ದಂಡಿಸಿ ಕೇಳಲು, ಆಗ ನಿಜವಾದ ವೃತ್ತಾಂತವು ಗೊತ್ತಾಯಿತು. ಮಹಾರಾಜನಿಗೆ ತಿಳಿಸಲು, ಆಗ ರಾಜಕುಮಾರಿಯನ್ನು ಕರೆಸಿ, ಸಿಗಿದು, ತೋರಣ ಕಟ್ಟಿದನು.

(ii, ೧೮೦–೨೧೯.)

### ೮. ಸೂರ್ಯಾಂಗಮುನಿಯ ಕಥೆ

ಮುತ್ತಿನ ಚೆಂಡಿಗಾಗಿ ಬಂದ ಕುಮಾರರಾಮನಿಗೆ ರತ್ನಾಜಿ ಹೇಳಿದ ಕಥೆ :—

ಸೂರ್ಯಾಂಗನೆಂಬುವನು ಯತಿಪದವಿಯನ್ನು ಕೈಕೊಂಡು ಊರೂರು ಅಲೆಯುತ್ತ ಒಂದು ಪಟ್ಟಣಕ್ಕೆ ಬಂದನು. ಆ ಊರಿನ ರಾಜನು ಬಂದು ನಮಸ್ಕರಿಸಿ, ಆತನನ್ನು ತನ್ನ ಅರಮನೆಗೆ ಕರೆದೊಯ್ದನು. ಆತನ ರಾಣಿಯರಿಬ್ಬರೂ ಬಂದು ಮುನಿಯ ಪಾದಗಳಿಗೆ ನಮಸ್ಕರಿಸಿ "ತಮಗೆ ಎಷ್ಟೇ ರಾಜವೈಭವಗಳಿದ್ದರೂ ಸಂತಾನಭಾಗ್ಯವನ್ನು ದೇವರು ಈವರೆಗೂ ಅನುಗ್ರಹಿಸಿಲ್ಲ. ಅದನ್ನು ತಾವು ಕೃಪೆ ಮಾಡಬೇಕು" ಎಂದು ಬೇಡಿದರು. ರಾತ್ರಿಯಾಯಿತು. ಸೂರ್ಯಾಂಗನಿಗೆ ದೂರದಲ್ಲಿ ಒಂದುಕಡೆ ಮಲಗಲು ಏರ್ಪಾಡಾಯಿತು. ಅಂದಿನ ಮಧ್ಯರಾತ್ರಿಯಲ್ಲಿ, ಕಿರಿಯ ರಾಣಿ ಹಿರಿಯಾಕೆಯನ್ನು ಕುರಿತು "ಅಕ್ಕ, ಸೂರ್ಯಾಂಗಮುನಿ ಮನ್ಮಥನಂತೆ ಚೆಲುವಾಗಿದ್ದಾನೆ. ನೀನು ಸಮ್ಮತಿಸಿದ್ದೇ ಆದರೆ, ನಾನು ಆತನನ್ನು ಕಂಡುಬರುವೆನು." ಎಂದು ಕೇಳಿಕೊಂಡಳು. ಹಿರಿಯಾಕೆ "ಊರಿನಲ್ಲಿ ಬಲವಾದ ಕಾವಲುಂಟು. ಸದ್ಯದಲ್ಲಿ ರಾಜನು ಬೇರೆ ಇಲ್ಲ. ನೀನು ಹೋಗಲು ನನ್ನದೇನೂ ಅಡ್ಡಿಯಿಲ್ಲ" ಎಂದಳು. ಅನಂತರ ಕಿರಿಯ ರಾಣಿ ಸಾಹಸದಿಂದ ಬಂದು ಮುನಿಯನ್ನು ಕಂಡಳು. ಆತನನ್ನು ಕಾಡಿದಳು. ಕಡೆಗೆ ನಿರ್ವಾಹವಿಲ್ಲದೆ ಮುನಿಗೆ ಆಕೆಯ ಸಂಪರ್ಕವಾಯಿತು. ಪ್ರತಿಫಲವಾಗಿ ಆತನಿಗೆ ತೊನ್ನು ಹತ್ತಿತು. ಮುನಿ ವೇದವ್ಯಾಸನನ್ನು ಬಂದು ಕಾಣಲು, ಅವರು ಕರ್ಮಫಲವನ್ನು ಅನುಭವಿಸಿಯೇ ತೀರಬೇಕೆಂದರು. ಬಳಿಕ, ಉತ್ತುಂಗನ ಪುರಕ್ಕೆ ಬಂದು, ರಂಭೆಯನ್ನು ಕಂಡು, ಅದನ್ನು ಪರಿಹರಿಸಿಕೊಂಡನು.

(xii, ೧೭೭–೧೯೨.)

## ೫. ಜಯಸೇನನ ಕಥೆ

ಕುಮಾರರಾಮನನ್ನು ಸಂಹರಿಸಬೇಕೆಂದು ಕಂಪಿಲನು ಆಜ್ಞಾಪಿಸಲು, ಬೈಚಪ್ಪನು ರಾಜನಿಗೆ ಹೇಳಿದ ಕಥೆ :—

ತಿಗುಳಾಣ್ಯ ದೇಶದಲ್ಲಿ ಚಂಪಕಾನಗರ ಎಂಬುದಾಗಿ ಒಂದು ಪಟ್ಟಣವಿದ್ದಿತು. ಅದನ್ನು ವಿಜಯೇಂದ್ರನೆಂಬ ಅರಸು ಆಳುತ್ತಿದ್ದನು. ಅವನಿಗೆ ಸೂಳೆಯಂತಹ ಒಬ್ಬ ಕಿರಿಯ ರಾಣಿಯಿದ್ದಳು. ರಾಜನು ಅವಳನ್ನು ಬಿಟ್ಟು ಇರುತ್ತಿರಲಿಲ್ಲ. ಪಟ್ಟದ ರಾಣಿಯ ಹೊಟ್ಟೆಯಲ್ಲಿ ಹುಟ್ಟಿದ ಕುಮಾರನು ತುಂಬ ಅನುರೂಪನಾಗಿದ್ದನು. ಆತನ ಹೆಸರು ಜಯಸೇನ. ಒಂದು ಬಾರಿ, ಅವನು ಬೇಟೆಗಾಗಿ ಅರಣ್ಯಕ್ಕೆ ಹೋದನು. ಅಲ್ಲಿ ಆತನ ಕಣ್ಣಿನ ಮುಂದೆ ಒಂದು ಜಿಂಕೆ ಸುಳಿಯಿತು. ಅದು ಕೈಗೆ ಸಿಕ್ಕದಿರಲು, ಬಾಣವನ್ನು ಗುರಿಯಿಟ್ಟು ಬಿಟ್ಟನು. ಆಗ ಅದರ ಒಡಲಿನಿಂದ ಕಂಸೀಕನೆಂಬ ಮುನಿಯೊಬ್ಬನು ಉದಿಸಿ ಬಂದನು. ಮುನಿ ಕೋಪಾಕ್ರಾಂತನಾಗಿರಲು ಜಯಸೇನನು ತಲ್ಲಣಿಸಿದನು. ತಾನು ಸಾಯುವ ಕಾಲ ಬಂತೆಂದೂ, ಹಣೆಯಬರಹ ತಪ್ಪಿದ್ದಲ್ಲವೆಂದೂ ನೊಂದುಕೊಂಡು ಕುದುರೆಯಿಂದಿಳಿದು, ಆ ಮುನಿಗೆ ನಮಸ್ಕರಿಸಿ ಕ್ಷಮೆಬೇಡಿದನು. ಆ ಮುನಿ ಸ್ವಲ್ಪಮಟ್ಟಿಗೆ ಶಾಂತಚಿತ್ತನಾಗಿ "ನೀನು ಗರ್ವದಿಂದ ವರ್ತಿಸಿದ್ದಲ್ಲಿ ಶಾಪವನ್ನು ಕೊಡಬಹುದಾಗಿತ್ತು. ಆದರೆ, ನಿನ್ನ ವಿನಯಕ್ಕೆ ಏನು ಹೇಳಲಿ! ಜಿಂಕೆಯನ್ನು ಕೊಲ್ಲಬಹುದೆ? ನಿನ್ನ ಕುದುರೆಯನ್ನು ಒಪ್ಪಿಸಿ ಹೋಗು" ಎಂದನು. ಜಯಸೇನನು ನರಕದ ಬಾಧೆ ತಪ್ಪಿದರೆ ಸಾಕೆಂದು ಸಮ್ಮತಿಸಿದನು. ಮುನಿಯಾದರೋ ರಾಜಕುಮಾರನನ್ನು ಹಾಗೆಯೇ ಕಳುಹಿಸುವುದು ಉಚಿತವಲ್ಲವೆಂದು ಭಾವಿಸಿ, ಮೇಘಮಾರ್ಗದಲ್ಲಿ ಸಂಚರಿಸುವ ಒಂದು ಮಂತ್ರತುರಗವನ್ನು ಕೊಟ್ಟು ಕಳುಹಿಸಿದನು. ರಾಜಕುಮಾರನ ಜೊತೆಯಲ್ಲಿ ತೆರಳಿದ್ದ ಭಟರು ಅರಣ್ಯದಲ್ಲಿ ಒಡೆಯನನ್ನು ಕಾಣದೆ ಪರಿತಪಿಸಿ ಊರಿಗೆ ಹಿಂತಿರುಗಿದರು. ಆ ವೇಳೆಗೆ ಜಯಸೇನನು ಮಂತ್ರತುರಗವನ್ನೇರಿ ಆಕಾಶಮಾರ್ಗದಿಂದ ತನ್ನ ಊರಿನಲ್ಲಿ ಬಂದು ಇಳಿದನು. ತಂದೆ ತಾಯಿಗಳಿಗೆ ಹೋದ ಕಣ್ಣುಗಳು ಬಂದಂತಾದುವು. ಜಯಸೇನನನ್ನು ಕಂಡು ಸಂತೋಷಪಟ್ಟರು.

ಕಿರಿಯ ರಾಣಿಗಾದರೋ ಮಂತ್ರಿಯಲ್ಲಿ ಅನುರಾಗ ಅಂಕುರವಾಗಿತ್ತು. ಆಕೆ ನಿಶ್ಚಿಂತೆಯಾಗಿ ತನ್ನ ಆಸೆ ನೆರವೇರಿಸಲು ಒಂದು ಉಪಾಯ ಹೂಡಿದಳು. ಗಂಡನನ್ನು ಕಂಡು, ರಾಜಕುಮಾರನು ಬೇಟೆಗೆ ಹೋಗಿ ಎಂಥ ಅಪೂರ್ವವಾದ ವಸ್ತುವನ್ನು ತಂದನೆಂದೂ ಹಾಗೆಯೇ ಆತನೂ ಹೋಗಿ ಬರಬಾರದೆ ಎಂದೂ ಹಂಗಿಸಿದಳು. ಕಡೆಗೆ, ರಾಜನು ಹಾಗೆಯೇ ತೆರಳಲು, ಇತ್ತ ಆಕೆಯೂ ಮಂತ್ರಿಯೂ ಸರಸಸಲ್ಲಾಪಗಳಲ್ಲಿ ಮಗ್ನರಾಗಿದ್ದರು. ಈ ವಿಚಾರವನ್ನು ಓಲಗದಲ್ಲಿದ್ದ ಜಯಸೇನನಿಗೆ ದೂತಿಯೊಬ್ಬಳು ಬಂದು ತಿಳಿಸಲು, ಆತನು ಕಿಡಿಕಿಡಿಯಾದನು. ಅವರಿಬ್ಬರಿಗೂ ಕೂಡಲೇ ಶಿಕ್ಷೆ ವಿಧಿಸುವೆನೆಂದು ಕೋಪಿಸುತ್ತ ಅವರಿದ್ದಲ್ಲಿಗೆ ಬಂದನು. ಆದರೆ, ಅದು ಅವರ ಕರ್ಮಫಲವೆಂದು ಬಗೆದು ಹಿಂತಿರುಗಿದನು. ರಾಜಕುಮಾರನಿಗೆ ಸುದ್ದಿ ಗೊತ್ತಾಯಿತೆಂದು ಗೌಡಿಯರು ರಾಣಿಗೆ ಬಂದು ಹೇಳಲು ಅವಳು ತಲ್ಲಣಿಸಿದಳು. ರಾಜನು ಬಂದ ಕೂಡಲೆ ತನಗೆ ಹಾನಿ ತಪ್ಪದೆಂದು ಬಗೆದು, ಪ್ರಾಣ ಕಳೆದುಕೊಳ್ಳಬೇಕೆಂದು ಚಿಂತಿಸಿದಳು. ಕುಟಿಲನಾದ ಮಂತ್ರಿ ಆಕೆಗೆ ಸಮಾಧಾನ ಹೇಳಿ, ತಾನು ಅದಕ್ಕೆ ತಕ್ಕ ಉಪಾಯವನ್ನು ಸೂಚಿಸಿ, ರಾಜಕುಮಾರನಿಗೇ ಹಾನಿಬರುವಂತೆ ಮಾಡುವುದಾಗಿ ಭರವಸೆಯಿತ್ತನು.

ಮಹಾರಾಜನು ಬೇಟೆ ಮುಗಿಸಿಕೊಂಡು ಬರುವ ವೇಳೆಗೆ ರಾಣಿ ಯಾವುದೋ ಗ್ರಹ ಬಡಿದವಳಂತೆ ನಿಶ್ಚೇಷ್ಟಿತಳಾಗಿ ಬಿದ್ದಿದ್ದಳು. ಮಹಾರಾಜನು ರಾಣಿ ಸತ್ತುಹೋದಳೆಂದು

ಭ್ರಮಿಸಿ ಗೋಳಾಡತೊಡಗಿದನು. ಮಂತ್ರಿ ಅಲ್ಲಿಗೆ ಬಂದು "ನಾಯುಳಿಯೆ ಶೋಕವ ಮಾಡಪಲ್ಲದು ರಾಯ, ಬಾರಳೆ ಬೇಕೆನಲು ಹೆಣ್ಣು" ಎಂದು ತಾತ್ಸಾರದಿಂದ ನುಡಿದನು. ಆಗ ಮಹಾರಾಜನು ತನ್ನ ಅಮಿತವಾದ ಅನುರಾಗವನ್ನು ವ್ಯಕ್ತಪಡಿಸಿದನು. ಅನಂತರ ಮಂತ್ರಿ ಆಕೆಯನ್ನು ಪರೀಕ್ಷಿಸಿದವನಂತೆ ನಟಿಸಿ, ಆಕೆ ಇನ್ನೂ ಬದುಕಿರುವಳೆಂದು ತಿಳಿದು "ಕುಮುದಿನಿ, ನಿನಗೆ ಏನು ಬೇಕು ಕೇಳು ತರಿಸಿ ಕೊಡುವೆ" ಎಂದು ಮಾತನಾಡಿಸಿದನು. ಆಕೆ ರಣದುರ್ಗಿಯಂತೆ ಎದ್ದು ಕುಳಿತು "ದೇವೇಂದ್ರಲೋಕದ ಪಾರಿಜಾತದ ಹೂವು ಬೇಕು" ಎಂದಳು. ಹೆಂಡತಿ ಮಾತಾಡಿದ್ದನ್ನು ಕೇಳಿ ಮಹಾರಾಜನಿಗೆ ಜೀವಬಂದಂತಾಯಿತು. ತನ್ನ ಕಡೆಯವರನ್ನು ಕುರಿತು "ಯಾರಾದರೂ ಪಾರಿಜಾತದ ಹೂವನ್ನು ತರುವಿರಾ ?" ಎಂದು ಕೇಳಲು, ಎಲ್ಲರೂ, ತಮ್ಮ ಅಸಹಾಯಕತೆಯನ್ನು ಪ್ರಕಟಪಡಿಸಿದರು. ಕಡೆಗೆ ಮಂತ್ರಿ, ಆ ಕೆಲಸವು ಮೇಘವಾಹನವುಳ್ಳ ರಾಜಕುಮಾರನಿಂದಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲವೆಂದನು. ರಾಜನು ಮಗನಿಗೇ ಆಜ್ಞಾಪಿಸಿದನು. ಆವನು "ಜನನಿಯ ಅನುವಿಂಗೆ ತನುವನೊಯ್ಯ (ನೀಯು ?)ದ ಮಗನಿರ್ದು ಫಲವೇನೊ ಭೂಪ, ಕರಮುಗಿದು ತರುವೆನು ದಿನವೇಳರೊಳಗಾಗಿ" ಎಂದು ಹೇಳಿ ಹೊರಟನು. ಅಂತೂ ರಾಣಿ ತನ್ನ ಅತ್ಯಾಚಾರವನ್ನು ಮುಚ್ಚಿಡಲು ಮಗನನ್ನು ಊರಿನ ಹೊರಕ್ಕೆ ಅಟ್ಟಿದಳು. ದೇವಲೋಕಕ್ಕೆ ಹೊರಟವನು ಹಿಂತಿರುಗಿ ಬಾರನೆಂದೇ ಅವಳ ನಂಬಿಕೆ.

ಜಯಸೇನನು ವಾಯುಮಾರ್ಗದಲ್ಲಿ ಬರುತ್ತಿರಬೇಕಾದರೆ, ಯಾವುದೋ ಒಂದು ಹಾಳೂರು ಕಾಣಿಸಿತು. ಅಲ್ಲಿ ಬೇಕಾದ ಹಾಗೆ ಹೊನ್ನು ಬೆಳ್ಳಿಗಳಿದ್ದುವು. ಅದು ಯಾವುದಿರಬಹುದೆಂದು ನೋಡಲು, ಆಗ ಒಬ್ಬ ಹೆಂಗಸಿನ ಆಕ್ರಂದನ ಧ್ವನಿ ಕೇಳಿಸಿತು. ಆಕೆ ಆ ಸುಂದರ ಯುವಕನನ್ನು ಯಾವ ದೇವಪುರುಷನೋ ಎಂದು ಭಾವಿಸತೊಡಗಿದಳು. ಅನಂತರ ಜಯಸೇನನು ಆಕೆಯನ್ನು ಕಂಡು ವಿಚಾರವೇನೆಂದು ಕೇಳಿದನು. ಆ ತರುಣಿ "ನಾನು ಮಧುಸೂದನರಾಯನ ಮಗಳು. ನನ್ನ ಹೆಸರು ಮದನಮೋಹಿನಿ. ರಾಕ್ಷಸನೊಬ್ಬನು ಈ ಮಂದಾಕಿನಿ ಪಟ್ಟಣವನ್ನು ಹಾಳುಮಾಡಿ ನನ್ನನ್ನು ಸೆರೆಯಲ್ಲಿಟ್ಟಿದ್ದಾನೆ. ನನ್ನನ್ನು ಒಲಿಸಿಕೊಳ್ಳಬೇಕೆಂದು ಅವನ ಅಪೇಕ್ಷೆ. ನಾನು ಯಾವುದೋ ವ್ರತದ ನೆಪದಲ್ಲಿ ಆರು ವರ್ಷಗಳನ್ನು ಕಳೆದೆ." ಎಂದಳು. ಜಯಸೇನನು ತನ್ನ ತಂದೆ ಹೇಳಿದ ಕೆಲಸವನ್ನು ಪೂರೈಸಿಕೊಂಡು, ಇನ್ನು ಆರು ದಿನಗಳ ಒಳಗಾಗಿ ಹಿಂತಿರುಗಿ ಬಂದು ಆಕೆಯನ್ನು ಸೆರೆಯಿಂದ ಬಿಡಿಸುವೆನೆಂಬುದಾಗಿ ಹೇಳಿ ಮುಂದೆ ತೆರಳಿದನು. ಮದನಮೋಹಿನಿ ಆತನಿಗೆ ಮಂಗಳವಾಗಲೆಂದು ಹಾರೈಸಿ ಕಳುಹಿಸಿಕೊಟ್ಟಳು.

ಜಯಸೇನನು ಇಂದ್ರನ ನಂದನಕ್ಕೆ ಬಂದನು. ಅಲ್ಲಿ ಭಾಸ್ಕರರಾಯನು ಅಪ್ಸರೆಯರೊಂದಿಗೆ ಜಲಕ್ರೀಡೆಯಾಡುತ್ತಿದ್ದನು. ಸಮಯ ಕಾದಿದ್ದು, ಭಾಸ್ಕರರಾಯನಿಗೆ ಬಂದು ನಮಸ್ಕರಿಸಿದನು. ಆತನು ಆ ತರುಣನನ್ನು ಕಂಡು ವಿಸ್ಮಿತನಾಗಿ ಯಾರೆಂದು ವಿಚಾರಿಸಿದನು. ಜಯಸೇನನು ತನ್ನ ತಂದೆ ತಾಯಿಗಳ ಸಲುವಾಗಿ ಪಾರಿಜಾತವನ್ನು ಬೇಡಿದನು. ಭಾಸ್ಕರರಾಯನಿಗೆ ನಗು ಬಂದಿತು. "ಪಾರಿಜಾತದ ವಾಸನೆ ಬಂದರೂ ಸಾಕು, ವನದ ಕಾವಲುಗಾರರು ನಿನ್ನನ್ನು ಜೀವಸಹಿತ ಬಿಡುವುದಿಲ್ಲ" ಎಂದನು. ಜಯಸೇನನ ಮುಖ ಸಪ್ಪೆಯಾಯಿತು. ಆಗ ಭಾಸ್ಕರರಾಯನ ಸ್ತ್ರೀಯರು ತಮ್ಮ ಒಡೆಯನಿಗೆ ಹೇಳಿ, ಜಯಸೇನನ ಇಷ್ಟಾರ್ಥವನ್ನು ನೆರವೇರಿಸುವಂತೆ ಸೂಚಿಸಿದರು. ಕಡೆಗೆ ಭಾಸ್ಕರರಾಯನು ಒಂದು ಭರಣಿ

ಯಲ್ಲಿ ಪಾರಿಜಾತವನ್ನಿಟ್ಟು, ಆತನು ತನ್ನ ಊರು ತಲಪುವವರೆಗೂ ಅದರ ಮುಚ್ಚಳವನ್ನು ತೆರೆಯದಂತಿರಬೇಕೆಂದು ಎಚ್ಚರಿಸಿದನು. ಜಯಸೇನನು ಆ ಮಾತಿಗೆ ಒಪ್ಪಿ ಹೊರಟು ಬಂದನು.

ಇತ್ತ, ಮದನಮೋಹಿನಿ ರಾಕ್ಷಸನಿಗೆ ಅಭ್ಯಂಜನಾದಿಗಳನ್ನು ನೆರವೇರಿಸಿ ಆತನಿಗೆ ತುಂಬ ಸಂತೋಷವನ್ನು ಉಂಟುಮಾಡಿದಳು. ಆತನು ಹಿಗ್ಗಿನಲ್ಲಿರುವಾಗ ಮೈಮರೆತು ತನ್ನ ಜೀವ ರಹಸ್ಯವು ಎಲ್ಲಿದೆಯೆಂದು ಆಕೆಗೆ ತಿಳಿಸಿದನು. ಜಯಸೇನನು ಹಿಂತಿರುಗಿ, ಮದನಮೋಹಿನಿ ಯನ್ನು ಕಾಣಲು, ಆಕೆ ಅವನಿಗೆ ರಾಕ್ಷಸನ ಜೀವರಹಸ್ಯವಿರುವ ಎಡೆಯನ್ನು ತಿಳಿಸಿದಳು. ಅವನು ಸಾಹಸದಿಂದ ಅಂದಿನ ರಾತ್ರಿಯಲ್ಲಿ ರಾಕ್ಷಸನ ಜೀವರತ್ನವನ್ನು ಹತಮಾಡಲು, ಆ ದನುಜನು ಕಾಲವಾದನು. ಅನಂತರ ರಾಜಕುಮಾರನು ಮದನಮೋಹಿನಿಯನ್ನು ಕರೆದು ಕೊಂಡು ತನ್ನ ಊರಿಗೆ ಹಿಂತಿರುಗಿ, ತಾನು ತಂದಿದ್ದ ಪಾರಿಜಾತವನ್ನು ತಂದೆಗೆ ಒಪ್ಪಿಸಿದನು.

ರಾಜಕುಮಾರನನ್ನು ಕಂಡು ಕುಮುದಿನಿಗೆ ಮತ್ತೆ ಸಂಕಟ ಪ್ರಾರಂಭವಾಯಿತು. ತಾನು ಸಾಯುವುದೇ ಲೇಸು ಎಂದುಕೊಂಡಳು. ಮಂತ್ರಿ ಪುನಃ ಹಿಂದಿನಂತೆಯೇ ಸಮಾಧಾನಮಾಡಿ, ಎಂದಿನಂತೆಯೇ ಗ್ರಹ ಬಡಿದವಳಂತೆ ನಟಿಸಬೇಕೆಂದು ಸಲಹೆಯಿತ್ತನು. ರಾಣಿ ಹಾಗೆಯೇ ಮಾಡಿದಳು. ವಿಜಯೇಂದ್ರನು ಬಂದು ವಿಚಾರಿಸಲು "ಯಮಲೋಕ(ಸುರಲೋಕ?)ದಲ್ಲಿ ರುವ ಸುರಧೇನುವನ್ನು ತರಿಸಿಕೊಟ್ಟರೆ ನಾನು ಉಳಿಯುತ್ತೇನೆ" ಎಂದಳು. ಮಹಾರಾಜನು ನಿರ್ವಾಹವಿಲ್ಲದೆ ಮತ್ತೆ ಮಗನಿಗೇ ಹೇಳಿದನು. ರಾಜಕುಮಾರನು ಆ ವಿಚಾರವನ್ನು ಮದನ ಮೋಹಿನಿಗೆ ತಿಳಿಸಲು, ತಂದೆಯೇ ಮಗನಿಗೆ ಹಗೆಯಾಗಿರುವನಲ್ಲ ಎಂದು ಆಕೆ ದುಃಖಿಸಿ ದಳು. ಜಯಸೇನನು ಅಗ್ನಿಕುಂಡದಲ್ಲಿ ಬಿದ್ದನು. ಎರಡು ದಿನಗಳ ಬಳಿಕ ಮದನಮೋಹಿನಿ ತನ್ನಲ್ಲಿದ್ದ ಜೀವರತ್ನದಿಂದ ಪ್ರಿಯನನ್ನು ಬದುಕಿಸಿದಳು. ಜಯಸೇನನು ಸುರಧೇನುವನ್ನು ತಂದಿತ್ತು, ತಾನು ರಾಣಿಯ ಅತ್ತೆ ಮಾವಂದಿರಿಂದ ಒಂದು ಕಾಗದವನ್ನು ತಂದಿರುವುದಾಗಿ ಕೊಟ್ಟನು. ಅದರಲ್ಲಿ, ಆ ಪಿತೃಗಳು, ತಾವು ಕುಶಲವಾಗಿರುವುದಾಗಿಯೂ, ಕೆಲಕಾಲದ ಮಟ್ಟಿಗೆ ತಮ್ಮ ಸೊಸೆಯಾದ ಕುಮುದಿನಿಯನ್ನು ಮಂತ್ರಿಯನ್ನು ಜೊತೆಮಾಡಿ ಕಳುಹಿಸಿಕೊಡ ಬೇಕೆಂದೂ ಬರೆದಿತ್ತು. ಕುಮುದಿನಿ ಅದು ನಿಜವೆಂದು ನಂಬಿ, ಜೊತೆಗೆ ಮಂತ್ರಿಯೂ ಬರುವ ನೆಂದು ಹಿಗ್ಗಿ, ತಾನು ಹೋಗಿಬರಲು ರಾಜನನ್ನು ಒಪ್ಪಿಸಿದಳು. ಬಳಿಕ, ರಾಣಿಯೂ ಮಂತ್ರಿಯೂ ಸಿದ್ಧವಾಗಿದ್ದ ಅಗ್ನಿಕುಂಡದಲ್ಲಿ ಬಿದ್ದರು!

(xiii, ೧೬೬—೧೮೦.)

## ೬. ವರರುಚಿಯ ಕಥೆ

ಕಂಪಿಲನ ಕಠೋರವಾದ ಆಜ್ಞೆಯ ಮೇರೆಗೆ ಬೈಚಪ್ಪನು ಕುಮಾರರಾಮನ ಬಳಿಗೆ ಬಂದ ಸಂದರ್ಭ ದಲ್ಲಿ ಹೇಳಿದ ಕಥೆ:—

ಮದನಾವತಿ ಎಂಬ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದ ಚಕ್ರವರ್ತಿಗೆ ಭಾನುಮತಿ ಎಂಬ ಹೆಂಡತಿಯಿದ್ದಳು. ರಾಜನು ಸದಾ ಅವಳ ಜೊತೆಯಲ್ಲಿಯೇ ಇರುತ್ತಿದ್ದನು. ಇದನ್ನರಿತು ಮಂತ್ರಿ ರಾಜ್ಯಭಾರದ ಕೆಲಸಗಳು ಹೇಗೆ ತಾನೆ ನಡೆಯುವುದೆಂದು ರಾಜನನ್ನು ಆಕ್ಷೇಪಿಸಿದನು. ರಾಜನು ತಾನು ಆಕೆಯನ್ನು ಒಂದು ನಿಮಿಷವೂ ಬಿಟ್ಟಿರಲಾರೆನೆಂದನು. ಕಡೆಗೆ, ಮಂತ್ರಿ ಹಾಗಾದರೆ ತಾನು ಆಕೆಯ ಭಾವಚಿತ್ರವೊಂದನ್ನು ಬರೆಸುವುದಾಗಿ ತಿಳಿಸಿದನು. ರಾಜನು ಸಮ್ಮತಿಸಿದನು. ಅದೇ ಮೇರೆಗೆ ಆ ಪ್ರಧಾನಿ ಒಬ್ಬ ಚಿತ್ರಕಾರನನ್ನು ನೇಮಿಸಿದನು. ಆತನು

ಮಹಾರಾಣಿಯ ಚಿತ್ರವನ್ನೆಲ್ಲ ಬರೆದು ಮುಗಿಸುವ ವೇಳೆಗೆ ಕೈಯಲ್ಲಿದ್ದ ಕುಂಚವು ತೊಡೆಯ ಬಳಿ ಸ್ವಲ್ಪ ತಾಕಿ ಒಂದು ಗುರುತಾಯಿತು. ಅದನ್ನು ಅಳಿಸಿಬೇಕೆಂಬಷ್ಟರಲ್ಲಿ, ಅಲ್ಲಿಗೆ ಬಂದ ವರರುಚಿ ಆಕೆಗೆ ಆ ಗುರುತು ಇರುವುದೆಂದೂ, ಅದನ್ನು ಅಳಿಸಬೇಡವೆಂದೂ ಹೇಳಿದನು. ರಾಜನು ಚಿತ್ರವನ್ನು ನೋಡಿ ತುಂಬ ಸಂತೋಷಪಟ್ಟು, ಆಕೆಯ ತೊಡೆಯ ಮೇಲಿನ ಗುರುತನ್ನು ಚಿತ್ರಕಾರನು ಕಂಡ ಪರಿ ಹೇಗೆಂದು ಶಂಕಿಸಿ, ಆತನನ್ನು ಹಿಡಿತರಿಸಿ ಕೇಳಿದನು. ಆ ಚಿತ್ರಕಾರನು ನಿಜವಾದ ವೃತ್ತಾಂತವನ್ನು ತಿಳಿಸಿ, ವರರುಚಿಯ ಮಾತಿನ ಮೇರೆಗೆ ತಾನು ಹಾಗೆಯೇ ಬಿಟ್ಟಿರುವೆನೆಂದು ಹೇಳಿದನು. ಮಹಾರಾಜನು ವರರುಚಿಯನ್ನು ಹಿಡಿತರಿಸಿ, ಕೂಡಲೇ ಅವನನ್ನು ಕೊಲ್ಲಬೇಕೆಂದು ತಳವಾರನಿಗೆ ಆಜ್ಞಾಪಿಸಿದನು. ಮಂತ್ರಿ ಬೇಡವೆಂದು ಎಷ್ಟು ಹೇಳಿದರೂ ಕೇಳಲಿಲ್ಲ. ಕಡೆಗೆ, ಮಂತ್ರಿ ತಳವಾರನಿಗೆ ಹೇಳಿ ಉಪಾಯದಿಂದ ವರರುಚಿಯನ್ನು ಒಂದು ಕಡೆ ಬಚ್ಚಿಟ್ಟನು.

ಕೆಲವು ದಿನಗಳಾದುವು. ಒಂದು ದಿನ ರಾಜಕುಮಾರನು ಬೇಟೆಯಾಡಲು ಹೊರಟು, ಒಂದು ಜಿಂಕೆಯನ್ನು ಬೆನ್ನಟ್ಟುತ್ತ ಬರುತ್ತಿರಲು ಕತ್ತಲೆ ಕವಿಯಲು ಒಬ್ಬಂಟಿಗನಾದನು. ಹುಲಿಯ ಭಯದಿಂದ ಒಂದು ಮರವನ್ನೇರಿ ಕುಳಿತನು. ಆ ಮರದ ಮೇಲಿದ್ದ ಕರಡಿ ಅವನನ್ನು ಆದರದಿಂದ ಬರಮಾಡಿಕೊಂಡಿತು. ಅದು ಅವನನ್ನು ತನ್ನ ತೊಡೆಯ ಮೇಲೆ ಮಲಗಿಸಿ ಕೊಳ್ಳಲು ರಾಜಕುಮಾರನು ನಿದ್ರೆ ಮಾಡಿದನು. ಸ್ವಲ್ಪ ಹೊತ್ತಿನ ಬಳಿಕ, ಒಂದು ಹುಲಿ ಅಲ್ಲಿಗೆ ಬಂದು ಆ ಮನುಷ್ಯನನ್ನು ತನಗೆ ಒಪ್ಪಿಸಬೇಕೆಂದೂ, ಹಾಗೆ ಮಾಡಿದ್ದೇ ಆದರೆ, ಅಂದಿನಿಂದ ತಮ್ಮಿಬ್ಬರ ವೈರವೂ ಕೊನೆಗಾಣುವುದೆಂದೂ ಹೇಳಿತು. ಕರಡಿ, ನಂಬಿಕೆಗೆ ದ್ರೋಹ ಮಾಡಿದರೆ ಜಗದೀಶ್ವರನು ಮೆಚ್ಚುವುದಿಲ್ಲವೆಂದು ಹೇಳಿ, ಆ ನರನನ್ನು ಒಪ್ಪಿಸಿಕೊಡಲಿಲ್ಲ. ರಾಜಕುಮಾರನು ನಿದ್ದೆಮಾಡಿ ಎದ್ದ ಮೇಲೆ, ಕರಡಿ ಅವನ ತೊಡೆಯ ಮೇಲೆ ಮಲಗಿ ನಿದ್ರಿಸಿತು. ಹುಲಿ ಪುನಃ ಬಂದು, ಬೆಳಗಾದ ಕೂಡಲೆ ಆ ಕರಡಿ ಅವನನ್ನು ತಿನ್ನುವುದೆಂದೂ, ಆದ್ದರಿಂದ ಅದನ್ನು ತನಗೆ ಒಪ್ಪಿಸಿದರೆ ಬಡಿದು ಹಾಕುವೆನೆಂದೂ, ಆತನು ಜೀವ ಸಹಿತ ಹೋಗಬಹುದೆಂದೂ ಹೇಳಿತು. ರಾಜಕುಮಾರನು ಉಪಕಾರಸ್ಮರಣೆಯಿಲ್ಲದೆ, ಕರಡಿಯನ್ನು ಮೆಲ್ಲನೆ ನೂಕಿದನು. ಆಗ ಆದಕ್ಕೆ ಎಚ್ಚರವಾಗಿ, ರಾಜಕುಮಾರನಿಗೆ "ಶಶಿಮಿರಾ" (ಸಸೇಮಿರಾ ?) ಎಂಬ ಶಾಪವನ್ನು ಕೊಟ್ಟಿತು. ರಾಜಕುಮಾರನು ಬೆಳಗಾಗುವ ವೇಳೆಗೆ ತನ್ನವರನ್ನು ಅರಸುತ್ತ ಬಂದನು. ಆತನನ್ನು ಊರಿಗೆ ಕರೆತರಲು, ಆತನು "ಶಶಿಮಿರಾ" ಎಂಬ ಮಾತನ್ನು ಬಿಟ್ಟು ಬೇರೇನನ್ನೂ ಆಡುತ್ತಿರಲಿಲ್ಲ.

ಮಹಾರಾಜನು ಚಿಂತಾಕ್ರಾಂತನಾಗಿ ತನ್ನ ಮಗನಿಗೆ ಹಿಡಿದಿರುವ ಆ ಗ್ರಹವನ್ನು ಯಾರಾದರೂ ಬಿಡಿಸಿದರೆ ಆತನಿಗೆ ಅರ್ಧ ರಾಜ್ಯವನ್ನು ಕೊಡುವುದಾಗಿ ಹೇಳಿದನು. ಮಂತ್ರಿ ಆ ಕಾರ್ಯವು ವರರುಚಿಯಿಂದಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲವೆಂದನು. ಆಗ ರಾಜನಿಗೆ ತುಂಬ ಸಂಕಟವಾಯಿತು. ತಳವಾರನನ್ನು ಕುರಿತು, ಎಲ್ಲಿಯಾದರೂ ಆತನನ್ನು ಬಚ್ಚಿಟ್ಟದ್ದು ಉಳಿಸಬಾರದಾಗಿತ್ತೆ ಎಂಬುದಾಗಿ ಪ್ರಲಾಪಿಸಿದನು. ಆಗ ಮರೆಸಿಟ್ಟಿದ್ದ ವರರುಚಿಯನ್ನು ಕರೆತರಲಾಯಿತು. ಆತನಿಗೆ ರಾಜಕುಮಾರನನ್ನು ತೋರಿಸಲು, ಆತನು "ಮೂರು (ನಾಲ್ಕು ?) ಗ್ರಾಂತ (ಗ್ರಂಥ ?)" ದಲ್ಲಿ ಅವನ ಗ್ರಹವನ್ನು ಬಿಡಿಸಿದನು. ಮಂತ್ರಿಯ ಜಾಣತನದಿಂದ ಆ ರೀತಿ ವರರುಚಿಯೂ ಉಳಿದನು; ರಾಜಕುಮಾರನೂ ಗುಣ ಹೊಂದಿದನು.

(xiv, ೩೬—೫೫.)

## ೭. ಡೊಂಬರ ಚೆನ್ನಿಯ ಕಥೆ

ಸುರುತಾಳನ ಸೇನೆಯಲ್ಲಿದ್ದ ಸ್ತ್ರೀಯರು ಖಾನರನ್ನು ಕುರಿತು, ರಾಮನನ್ನು ಅವರು ಗೆಲ್ಲಲಾಗದಿದ್ದರೆ ತಾವು ಚಾತುರ್ಯದಿಂದ ಗೆದ್ದು ತರುವುದಾಗಿ ಶಪಥ ಮಾಡುತ್ತಿದ್ದ ಸಂದರ್ಭದಲ್ಲಿ ಹೇಳಿದ ಕಥೆ:—

ಒಂದು ಬೆಟ್ಟದ ಗವಿಯೊಂದರಲ್ಲಿ ಮುನಿಯೊಬ್ಬನು ವ್ರತವನ್ನು ಕೈಕೊಂಡು ವಾಸಿಸುತ್ತಿದ್ದನು. ಆ ಊರಿನ ರಾಜನು ಆತನನ್ನು ಕಾಣದೆ ಒಂದು ದಿನವಾದರೂ ಅನ್ನ ನೀರುಗಳನ್ನು ಮುಟ್ಟುತ್ತಿರಲಿಲ್ಲ. ಹೀಗಿರಲು ಆ ಊರಿಗೆ ಒಂದು ಡೊಂಬರ ಗುಂಪು ಬಂದಿತು. ಅವರಿಗೆ ರಾಜನನ್ನು ಕಾಣವುದಕ್ಕೆ ಸಾಧ್ಯವಾಗಲಿಲ್ಲ. ರಾಜನು ಮೂರು ಹೊತ್ತೂ ಶಿವಧ್ಯಾನಪರನಾಗಿದ್ದನು ; ಇಲ್ಲವೇ ತನ್ನ ಗುರುವಿನ ಉಪದೇಶವನ್ನು ಕೇಳುವುದರಲ್ಲಿ ಮಗ್ನನಾಗಿರುತ್ತಿದ್ದನು. ಇದರಿಂದ ಆ ಡೊಂಬರ ಗುಂಪಿನ ಚೆನ್ನಿಗೆ ತುಂಬ ಅಸಹನೆಯುಂಟಾಯಿತು. ರಾಜನ ಗುರುವಿನ ವ್ರತವನ್ನು ಭಂಗಮಾಡಬೇಕು ಎನ್ನಿಸಿತು. ಆತನಿಂದ ತನ್ನ ಕತ್ತೆಯನ್ನು ಕಾಯಿಸದಿದ್ದರೆ ತನ್ನ ಹೆಸರು ಡೊಂಬರ ಚೆನ್ನಿ ಅಲ್ಲವೆಂದು ಹಟತೊಟ್ಟಳು. ಅಂತೆಯೇ ಆಕೆ ಆಭರಣಾದಿಗಳನ್ನು ಧರಿಸಿಕೊಂಡು, ಆ ಗುರುವಿನ ಬಳಿಗೆ ಬಂದು ತನ್ನ ಬೆಡಗು ಬಿನ್ನಾಣಗಳನ್ನು ಪ್ರಕಟಪಡಿಸಿ, ಆತನನ್ನು ಮರುಳುಮಾಡಿದಳು. ಆತನ ಜಪತಪಗಳೆಲ್ಲ ಮಣ್ಣುಪಾಲಾದುವು. ಕಡೆಗೆ ಆ ಗುರು ಡೊಂಬರ ಚೆನ್ನಿಯನ್ನೇ ಹಿಂಬಾಲಿಸಿದನು.

(xv, ೧೧೩–೧೧೯.)

## ೮. ಮಚ್ಛೇಂದ್ರನ ಕಥೆ

ಮಾತಂಗಿಯನ್ನು ಕೊಲ್ಲಲು ಹಿಂತೆಗೆದ ಸಂದರ್ಭದಲ್ಲಿ ಕುಮಾರರಾಮನು ಆಕೆಗೆ ಹೇಳಿದ ಕಥೆ:—

[ಉ]ಜ್ಜನಿ ಪೊಳಲಿನಲ್ಲಿ ರಾಮಚಂದ್ರನೆಂಬ ರಾಜನು ಆಳುತ್ತಿದ್ದನು. ಅವನ ಬಳಿಗೆ ದರಿದ್ರನಾದ ಒಬ್ಬ ಬ್ರಾಹ್ಮಣನು ಬಂದನು. ಅವನು ರಾಜನಿಗೆ ತಾನು ಏನನ್ನೂ ಕೊಡಲು ಶಕ್ತನಲ್ಲವೆಂದು ವ್ಯಥೆಪಟ್ಟನು. ರಾಜನು ದೇವತಾಸ್ತುತಿಯನ್ನು ಮಾಡುವಂತೆ ಸಲಹೆಯಿತ್ತನು. ಅಂತೆಯೇ ಅವನು ಮಿಂದು, ಮಡಿಯುಟ್ಟು, ಶುಚಿಯಾಗಿ ಮಹಾಕಾಳಿಯನ್ನು ಸ್ತುತಿಸಿದನು. ಆಕೆ ಪ್ರತ್ಯಕ್ಷಳಾಗಿ ಮಾವಿನ ಹಣ್ಣುಗಳನ್ನು (ಹಣ್ಣನ್ನು ?) ಕೊಟ್ಟು, ಅದನ್ನು ತಿಂದರೆ ಅಮರತ್ವವು ಪ್ರಾಪ್ತವಾಗುವುದೆಂದು ಹೇಳಿ, ಅಂತರ್ಧಾನಳಾದಳು. ಬ್ರಾಹ್ಮಣನು ಆ ಹಣ್ಣನ್ನು ರಾಜನಿಗೆ ತಂದುಕೊಟ್ಟು ಬೇಕಾದಷ್ಟು ಹೊನ್ನನ್ನು ಪಡೆದನು. ಮಹಾರಾಜನು, ತಾನು ಸತ್ತರೂ ತನ್ನ ಹೆಂಡತಿಯಾದ ಪ್ರಜಾವತಿ ಚಿರಕಾಲ ಬಾಳಿರಬೇಕೆಂದು ಬಯಸಿ, ಅದನ್ನು ಆಕೆಯ ಕೈಗೆ ಕೊಟ್ಟನು. ಆಕೆ ತಾನು ಅನುರಕ್ತಳಾಗಿದ್ದ ಸಹಣಿಯ ಕೈಗಿತ್ತಳು. ಅವನು ತನ್ನ ಪ್ರಿಯೆಯಾದ ದಾಸಿಯೊಬ್ಬಳಿಗೆ ಕೊಟ್ಟನು. ಆಕೆ ತನ್ನ ಕೆಲಸದ ಮಧ್ಯೆ ಅದನ್ನು ತಿನ್ನಲು ಸಮಯ ಸಿಕ್ಕದೆ, ತನ್ನ ಬುಟ್ಟಿಯಲ್ಲಿಟ್ಟುಕೊಂಡು ಬರುತ್ತಿರಬೇಕಾದರೆ, ಅದು ರಾಜನ ಕಣ್ಣಿಗೆ ಬಿದ್ದಿತು. ಮಹಾರಾಜನು ಆಕೆಯನ್ನು ಕರೆದು ವಿಚಾರಿಸಲು, ಆಕೆ ಸಹಣಿಯ ಕಡೆಗೆ ಕೈತೋರಿಸಿದರೆ, ಆತನು ರಾಣಿಯ ಕಡೆಗೆ ಕೈತೋರಿಸಿದನು. ಅಲ್ಲದೆ, ಆ ಸಹಣಿ ಹೆಂಗಸರನ್ನು ನಂಬುವವನು ದಡ್ಡನೆಂದೂ, ರಾಜನು ಕಾಶಿಯಾತ್ರೆಯನ್ನು ಕೈಕೊಳ್ಳಬೇಕೆಂದೂ ಬೋಧಿಸಿದನು. ರಾಮಚಂದ್ರನು ಖಿನ್ನನಾಗಿ, [ಹೆಂಡತಿಯ ಮೇಲೆ ಕೈಮಾಡದೆ] ಕಾಶಿಯಾತ್ರೆಯನ್ನು ಮಾಡಿ, ಕಡೆಗೆ ಮಚ್ಛೇಂದ್ರಮುನಿಯಾದನು.

(xix, ೭೭–೮೭.)

## ಕೃತಿಯ ವೈಶಿಷ್ಟ್ಯಗಳು

ಮಹಲಿಂಗಸ್ವಾಮಿಯ ರಚನೆಯಲ್ಲಿ ನಮ್ಮ ಮನಸ್ಸನ್ನು ಮೊದಲು ಸೆಳೆಯುವುದು ಯಾವುದೆಂದರೆ, ಆತನು ಕಥೆಯನ್ನು ಪ್ರಾರಂಭಿಸುವ ವಿಧಾನ. ಕುಮಾರರಾಮನ ಮಗನಾದ ಜಟ್ಟಂಗಿರಾಯನು ರಾಜ್ಯಭಾರ ಮಾಡುತ್ತಿರಲು ಆತನ ಆಸ್ಥಾನಕ್ಕೆ ಪ್ರಭುದೇವರೆಂಬ ಗುರುಗಳು ಬರುತ್ತಾರೆ. ಜಟ್ಟಂಗಿರಾಯನು ಅವರಿಗೆ ನಮಸ್ಕರಿಸಿ ತನಗೆ ಭಾರತದ ಕಥೆಯನ್ನು ಹೇಳಬೇಕೆಂದು ಕೇಳಿಕೊಳ್ಳುತ್ತಾನೆ. ಆಗ, ಅವರು "ತನುಜನೆ ಕೇಳ್ನಮ್ಮ ಜನಕ ಮಾಡಿದ ಕಾರ್ಯ ದಣಿಯಲಾಗುವುದು ಈ ಧರಣಿ, ಜೈಮುನಿಯು ರಾಮಣ್ಯ ಸಮರುಕ್ತಿ ಭಾರತಕೆ ಮಿಗಿಲಾಗಿ ಮಾಡಿ ಅಳದಿಹರು (i, ೩೫)" ಎಂದು ಹೇಳುವರು. ಮಹಾರಾಜನು ಸಮ್ಮತಿಸಲು ಪ್ರತಿನಿತ್ಯವೂ ಓಲಗ ಕೂಡಿ, ದಿನಕ್ಕೊಂದು ಸಂಧಿಯ ಮೇರೆಗೆ ಕಥೆ ಸಾಗುವುದು. ಇದನ್ನೆಲ್ಲ ಗಮನಿಸಿದರೆ ಈ ಕೃತಿರಚನೆಯ ಕಾಲಕ್ಕೆ ಕುಮಾರರಾಮನ ಕಥೆಗೆ ಎಷ್ಟು ಮಹತ್ವ ದೊರೆತಿದೆಯೆಂಬುದು ವಿಶದವಾಗುತ್ತದೆ. ಭಾರತ ರಾಮಾಯಣಗಳಂತೆ ಅದು ಜನಪ್ರಿಯವಾಗಿ ಪರಿಣಮಿಸಿದೆ. ಅಲ್ಲದೆ, ಜನಮೇಜಯರಾಯನು ತನ್ನ ಪೂರ್ವಜರ ಕಥೆಯನ್ನು ಕೇಳಿದ ಮಾದರಿಯನ್ನೇ ಅನುಸರಿಸಿ ಈ ಕೃತಿಯನ್ನು ಬರೆಯಲಾಗಿದೆ.

ಈ ಕೃತಿಯಲ್ಲಿ ಉದಾಹರಿಸಿರುವ ಉಪಕಥೆಗಳು ಇದರ ಇನ್ನೊಂದು ಪ್ರಧಾನ ಗುಣ. ನಂಜುಂಡನಲ್ಲಾಗಲಿ, ಪಾಂಚಾಳಗಂಗನಲ್ಲಾಗಲಿ ಪೂರ್ವಕಥೆಗಳನ್ನು ಉಪಮಾನಗಳಂತೆ ಸಂಗ್ರಹವಾಗಿ ನಿರ್ದೇಶಿಸಿರುವುದುಂಟು. ಮಹಲಿಂಗಸ್ವಾಮಿ ಅನೇಕ ಸಂದರ್ಭಗಳಲ್ಲಿ ಈ ಸೂಚ್ಯಕ್ರಮವನ್ನೇ ಅನುಸರಿಸಿದ್ದರೂ ಕೆಲವೆಡೆಗಳಲ್ಲಿ ಕಥೆಯನ್ನು ಆದ್ಯಂತವಾಗಿ ಹೇಳಿರುತ್ತಾನೆ. ಈ ಕಥೆಗಳನ್ನು ಕವಿ ಹೇಗೆ ಸಂಗ್ರಹಿಸಿದನೋ ಹೇಳುವುದು ಕಷ್ಟ. ಇವುಗಳನ್ನು ಹೋಲುವ ಕೆಲವು ಕಥೆಗಳು ಬೇರೆ ಎಲ್ಲೆಲ್ಲಿ ಕಂಡುಬರುತ್ತವೆ ಎನ್ನುವುದನ್ನು ಸ್ವಲ್ಪಮಟ್ಟಿಗೆ ಗುರುತಿಸಬಹುದು :—

(i) "ತ್ರಿಶಂಕುವಿನ ಕಥೆ"ಯಲ್ಲಿ ತ್ರಿಶಂಕು ಬಾರಿಕನ ಮಗಳನ್ನು ಕಂಡು ಅನುರಕ್ತನಾದಂತೆಯೇ ಸೌಧರಿಪುರದ ಹರಿದ್ರಾಜನೆಂಬ ಮಹಾರಾಜನು ಹೊಲತಿಯೊಬ್ಬಳನ್ನು ಕಂಡು ವ್ಯಾಮೋಹಕ್ಕೆ ಗುರಿಯಾಗುತ್ತಾನೆ. ಚತುರನಾದ ಯೋಗಿಶ್ವರನೆಂಬ ಮಂತ್ರಿ ಮಹಾರಾಜನ ಅಪೇಕ್ಷೆಯನ್ನು ಕಡೆಗಣಿಸಲಾರದೆ, ಕಿರಿಯ ರಾಣಿಯನ್ನೇ ಉದ್ಯಾನವನದಲ್ಲಿ ಗೋಪ್ಯವಾಗಿಟ್ಟು ಒಡೆಯನಿಗೆ ಆಕೆಯೇ ಆತನು ಬಯಸಿದ ಹೆಣ್ಣೆಂದು ಭ್ರಮೆಯುಂಟುಮಾಡುತ್ತಾನೆ. ನಿಜವಾದ ವೃತ್ತಾಂತ ತಿಳಿದ ಮೇಲೆ ರಾಜನು ಮಂತ್ರಿಯನ್ನು ಆತನ ಜಾಣತನಕ್ಕಾಗಿ ಪುರಸ್ಕರಿಸುವನು—ಈ ರೀತಿ ಕನ್ನಡ "ಬತ್ತೀಸ ಪುತ್ತಳಿ ಕಥೆ" ಯ ಒಂದು ಹಸ್ತಪ್ರತಿಯಲ್ಲಿ ಬರುತ್ತದೆ.[1] ತ್ರಿಶಂಕುವಿನ ಕಥೆಯಲ್ಲಿ ಬರುವ ಕೆಲವು ಸಂಗತಿಗಳು ಈ ಕಥೆಯನ್ನೇ ಹೋಲುತ್ತವೆ.

(ii) "ರೇಣುಕೆಯ ಕಥೆ"ಯಲ್ಲಿ ಆಕೆ ಕಾರ್ತವೀರ್ಯನಿಗೆ, ಜಮದಗ್ನಿಯ ತಲೆಯನ್ನು ಕಡಿದರೆ ಕಾಮಧೇನು ಹಿಂಬಾಲಿಸಿ ಬರುವುದು ಎನ್ನುವ ಸೂಚನೆಯನ್ನು ಕೊಡುವಳಷ್ಟೆ. ಈ ಕಥಾಸಂವಿಧಾನ ಶಾಂತಲಿಂಗದೇಶಿಕನ "ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ"ದಲ್ಲಿರುವ "ಜಮದಗ್ನಿಯ ಕೊಂದ ಕಾರ್ತವೀರ್ಯನೆಂಬುದಕ್ಕೆ ಕಥೆ" ಎಂಬಲ್ಲಿ ಕಂಡುಬರುತ್ತದೆ.[2]

---

1. K.A. 78, ೧೫ನೆಯ ದಿವಸದ ಕಥೆ, ಪು. ೧೩೯—೧೪೫.
2. ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ, ಪು. ೬೪, ಸಂ. ಎನ್. ಬಸವಾರಾಧ್ಯ.

(iii) "ಇಂದ್ರಕುಮಾರಿಯ ಕಥೆ"ಯ ಪೂರ್ವಾರ್ಧ "ಯಶೋಧರ ಚರಿತೆ" ಯಲ್ಲಿನ ಅಮೃತಮತಿ ಅಪಾತ್ರನಲ್ಲಿ ವ್ಯಕ್ತಪಡಿಸುವ ಅನುರಾಗವನ್ನೇ ಹೋಲುತ್ತದೆ. ಅಲ್ಲದೆ ಇಂಥ ಕಪಟ ಸ್ತ್ರೀಯರ ಕಥೆಗಳು ಹೇರಳವಾಗಿವೆ. "ಕಥಾಸರಿತ್ಸಾಗರ"ವೊಂದರಲ್ಲಿಯೇ ಇಂಥ ಹದಿನೈದು ಕಥೆಗಳು ಹುದುಗಿರುವುದನ್ನು ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳು ತೋರಿಸಿ ಕೊಟ್ಟಿರುತ್ತಾರೆ.[1] ಇವುಗಳಲ್ಲಿ "ಭೇತಾಳ ಪಂಚವಿಂಶತಿ" ಕಥಾಭಾಗದಲ್ಲಿ ಬರುವ ವಸುದತ್ತೆಯ ಕಥೆಯೂ[2] "ವಿಷಮಶೀಲಲಂಬಕ"ದಲ್ಲಿ ಬರುವ ಅಗ್ನಿಶರ್ಮನ ಕಥೆಯೂ[3] ಇಂದ್ರಕುಮಾರಿಯ ಕಥೆಯನ್ನು ಸ್ವಲ್ಪಮಟ್ಟಿಗೆ ಹೋಲುತ್ತವೆ.

(iv) "ಜಯಸೇನನ ಕಥೆ"ಯಲ್ಲಿ ರಾಜಕುಮಾರನಿಗೆ ಕೇಡನ್ನು ಬಗೆಯುವ ಕುಮುದಿನಿಯ ವರ್ತನೆ ನರಸಿಂಹಕವಿಯಿಂದ ರಚಿತವಾದ "ಮದನಮೋಹಿನಿ ಕಥೆ"ಯಲ್ಲಿನ ಮಲತಾಯಿಯ ನಡತೆಯನ್ನೇ ಹೋಲುತ್ತದೆ.[4] ಅಲ್ಲಿ ರಾಜಕುಮಾರನು ದೇಶಭ್ರಷ್ಟನಾದರೂ ತನ್ನ ಸಾಹಸದಿಂದ ದೇವೇಂದ್ರನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಮದನಮೋಹಿನಿ ಎಂಬಾಕೆ ಯನ್ನು ಮದುವೆಯಾಗುತ್ತಾನೆ. ಇಲ್ಲಿಯೂ ಜಯಸೇನನು ನಾನಾ ಸಾಹಸಕಾರ್ಯಗಳಲ್ಲಿ ಜಯಶೀಲನಾಗುವುದಲ್ಲದೆ, ಮದನಮೋಹಿನಿ ಎಂಬ ಯುವತಿಯನ್ನೂ ಮದುವೆಯಾಗುವನು. ಈತನು ಈ ಹುಡುಗಿಯನ್ನು ರಾಕ್ಷಸನ ಸೆರೆಯಿಂದ ಬಿಡಿಸಿಕೊಂಡು ಬರುವ ಸಂದರ್ಭ ಕನ್ನಡ "ಬತ್ತೀಸಪುತ್ತಳಿ ಕಥೆ" ಯಲ್ಲಿನ ಒಂದು ಕಥೆಯನ್ನು ಹೋಲುತ್ತದೆ[5]. ತನಗೆ ಕಂಟಕವಾಗಿ ಪರಿಣಮಿಸಿದ ಕುಮುದಿನಿಯನ್ನೂ ದ್ರೋಹಿಯಾದ ಮಂತ್ರಿಯನ್ನೂ ಸಾವಿಗೆ ಗುರಿಮಾಡುವ ಈತನ ಜಾಣ್ಮೆ ಪ್ರಶಂಸಾರ್ಹವಾಗಿದೆ.

(v) "ವರರುಚಿಯ ಕಥೆ"ಗಂತೂ ಒಂದು ದೊಡ್ಡ ಪರಂಪರೆಯೇ ಇದೆ. ಇದು ಕ್ಷೇಮೇಂದ್ರನ "ಬೃಹತ್ಕಥಾಮಂಜರಿ"[6] ಸೋಮದೇವನ "ಕಥಾಸರಿತ್ಸಾಗರ"[7] ಗಳಲ್ಲಿ ಸಂಗ್ರಹ ವಾಗಿ ಕಂಡುಬರುತ್ತದೆ. ಸಂಸ್ಕೃತದ "ವಿಕ್ರಮಾರ್ಕಚರಿತ್ರಂ"ಎಂಬ ಕೃತಿಯಲ್ಲಿ ವಿಸ್ತಾರವಾಗಿ ಗೋಚರವಾಗುತ್ತದೆ[8] ಈ ವೇಳೆಗೆ ಇದು "ಸಸೇಮಿರಾ" ಎಂಬ ಕಥೆಯ ರೂಪವನ್ನು ತಾಳಿರು ವುದನ್ನು ಕಾಣುತ್ತೇವೆ.[9] ಮಹಲಿಂಗಸ್ವಾಮಿಯ ಕಥೆಯಾದರೋ ಕಡೆಯ ಸಂವಿಧಾನವನ್ನೇ

---

1. ಕಥಾಮೃತ, ಪೀಠಿಕೆ, ಪು. liv.
2. ಕಥಾಮೃತ, ಪು. ೩೩೧–೩೩೨.
3. ಅದೇ, ಪು. ೪೪೩–೪೪೪.
4. ಕ. ಚ, ii, ಪು. ೪೩೫–೪೩೬ ; DCKM, Vol. V, D. Nos. 1015–1019.
5. K. 139, ಆರನೆಯ ಕಥೆ, ಪು. ೪೬–೪೮ a.
6. ಕಥಾಪೀಠ, ಪ್ರಥಮ ಲಂಬಕ, ಪ. ೧೫೫–೧೬೩ ; ೧೯೧–೨೦೨.
7. ಕಥಾಪೀಠಲಂಬಕ, ಪಂಚಮಸ್ತರಂಗ ; ಪ. ೧–೧೪೧ ; ಕಥಾಮೃತ, ಪು. ೨–೮.
8. ಪೀಠಿಕಾ, ಪು. ೧೬–೨೭.
9. ಈ ವಿಷಯವನ್ನು ಕುರಿತು ಜಿ. ಎ. ಗ್ರಿಯರ್ಸ್ನ ಅವರು "Mithila Folklore-Vararuchi as a guesser of Acrostics" ಎಂದು ಒಂದು ಲೇಖನವನ್ನೇ ಬರೆದಿರುತ್ತಾರೆ. Indian Antiquary, 1881, X, pp. 366-370
   'ಸಸೇಮಿರಾ' ಎಂಬ ಉಕ್ತಿಗೆ ಸಂವಾದಿಯಾಗಿ ಸಂಸ್ಕೃತದ 'ವಿಕ್ರಮಾರ್ಕಚರಿತ್ರ' ದಲ್ಲಿ ಈ ನಾಲ್ಕು ಶ್ಲೋಕಗಳಿವೆ :—

   ಸದ್ಭಾವಂ ಪ್ರತಿಪನ್ನಾನಾಂ ವಂಚನೇ ಕಾ ವಿದಗ್ಧತಾ ।
   ಅಂಕಮಾರುಹ್ಯ ಸುಪ್ತಾನಾಂ ಹನನೇ ಕಿಂ ನು ಪೌರುಷಂ ॥

ಹೋಲುತ್ತದೆ. ಈತನ ರಚನೆಯಲ್ಲಿ, ಚಿತ್ರಕಾರನು ಭಾನುಮತಿಯ ಚಿತ್ರವನ್ನು ಬರೆಯುತ್ತಿರುವಾಗ ಕೈತಪ್ಪಿ ತೊಡೆಯ ಬಳಿ ಮಸಿ ಬೀಳಲು, ಅದನ್ನು ವರರುಚಿಯ ಮಾತಿನ ಮೇರೆಗೆ ಹಾಗೆಯೇ ಬಿಟ್ಟನೆಂದೂ, ಇದೇ ಮುಂದೆ ಪ್ರಮಾದವಾಗಿ ಪರಿಣಮಿಸಿತೆಂದೂ ಹೇಳಿದೆ. ಈ ವಿಷಯವು ಸಂಸ್ಕೃತ ಕಥೆಗಳ ವಿಧಾನದಂತಿರದೆ ಕವಿದೇವನ ಕನ್ನಡ "ಬತ್ತೀಸ ಪುತ್ತಳಿ ಕಥೆ"ಯ ರೀತಿಯನ್ನು ಹೋಲುತ್ತದೆ.[1] ಆದ್ದರಿಂದ, ಮಹಲಿಂಗಸ್ವಾಮಿ ಈ ಕೃತಿಯಿಂದಲೋ, ಅಥವಾ ಈ ಪಾಠವು ಪ್ರಚಾರಕ್ಕೆ ಬಂದ ಮೇಲೋ, ಓದಿಯೋ ಇಲ್ಲವೇ ಕೇಳಿಯೋ ಈ ಕಥೆಯನ್ನು ಸಂಗ್ರಹಿಸಿರಬೇಕೆಂದು ಊಹಿಸಬಹುದು.

(vi) "ಡೊಂಬರ ಚೆನ್ನಿಯ ಕಥೆ" ಕನ್ನಡಕ್ಕೆ ಹೊಸದೇನೂ ಅಲ್ಲ. ಇದು ಜನಪದ ಸಾಹಿತ್ಯದಲ್ಲಿ ಇಂದಿಗೂ ಕಂಡುಬರುತ್ತದೆ.[2] "ಬುಕ್ಕರಾಯ ಚರಿತ್ರೆ"ಯಲ್ಲಿ ಪವಾಡಪ್ಪನಾಯಕನೆಂಬ ಒಬ್ಬ ಪಾಳೇಗಾರನು ಇದೇ ರೀತಿ ಡೊಂಬರವಳೊಬ್ಬಳನ್ನು ಕಂಡು ಅನುರಕ್ತನಾಗುವ ಸಂದರ್ಭ ಬರುತ್ತದೆ.[3] [ಶ್ರೀ. ಪಂಜೆ ಮಂಗೇಶರಾಯರು ಇದೇ ವಿಷಯವನ್ನೇ ಅವಲಂಬಿಸಿ, "ಡೊಂಬರ ಚನ್ನೆ" ಎಂಬ ಪದ್ಯವೊಂದನ್ನು ಬರೆದಿರುತ್ತಾರೆ (ಪಂಜೆಯವರ ನೆನಪಿಗಾಗಿ, ಪು. ೧೫೫-೧೬೧)] ಮಹಲಿಂಗಸ್ವಾಮಿ ಚಿತ್ರಿಸಿರುವ ರತ್ನಾಜಿಯ ಪ್ರಕರಣವೂ ಸಹ ಈ ವಸ್ತುವನ್ನೇ ಹೋಲುತ್ತದೆ. ಕವಿ ಈ ಕಥೆಯನ್ನು ಜನಸಾಮಾನ್ಯರ ಕಥಾಭಂಡಾರದಿಂದ ಆರಿಸಿಕೊಂಡನೋ ಏನೋ!

(vii) "ಮಚ್ಛೇಂದ್ರನ ಕಥೆ"ಯೂ ಸಹ ಸಂಸ್ಕೃತದ "ವಿಕ್ರಮಾರ್ಕ ಚರಿತ್ರಂ" ಎಂಬ ಪುಸ್ತಕದಲ್ಲಿ ಬರುವ ಭರ್ತೃಹರಿಯ ನಿರ್ವೇಗದ ಕಥೆಯನ್ನೇ ಹೋಲುತ್ತದೆ.[4] ವರರುಚಿಯ

---

ಸೇತುಂ ದೃಷ್ಟ್ವಾ ಸಮುದ್ರಸ್ಯ ಗಂಗಾಸಾಗರ ಸಂಗಮಂ ।
ಬ್ರಹ್ಮಹತ್ಯಾ ಪ್ರಮುಚ್ಯೇತ ಮಿತ್ರದ್ರೋಹೋ ನ ಮುಚ್ಯತೇ ॥
ಮಿತ್ರದ್ರೋಹೀ ಕೃತಘ್ನಶ್ಚ ಯಶ್ಚ ವಿಶ್ವಾಸಘಾತುಕಃ ।
ತ್ರಯಸ್ತೇ ನರಕಂ ಯಾಂತಿ ಯಾವಚ್ಚಂದ್ರ ದಿವಾಕರಂ ॥
ರಾಜನ್ ಭೋಸ್ತವ ಪುತ್ರಸ್ಯ ಯದಿ ಕಲ್ಯಾಣಮಿಚ್ಛಸಿ ।
ದಾನಂ ದೇಹಿ ದ್ವಿಜಾತಿಭ್ಯೋ ವರ್ಣಾನಾಂ ಬ್ರಾಹ್ಮಣೋ ಗುರುಃ ॥

(ಪೀಠಿಕಾ, ಪ. ೫೩-೫೬.)

ಸಂಸ್ಕೃತದಲ್ಲಿ 'ಗ್ರಂಥ' ಎಂದರೆ, ೩೨ ಅಕ್ಷರಗಳುಳ್ಳ ಅನುಷ್ಟುಭ್ (ಶ್ಲೋಕ) ಎಂಬ ಅರ್ಥವುಂಟು. ಈ ನಾಲ್ಕು ಶ್ಲೋಕಗಳನ್ನು ಹೇಳಿ ರಾಜಕುಮಾರನ ಚಿತ್ತವೈಕಲ್ಯವನ್ನು ಪರಿಹರಿಸಲಾಯಿತೆಂದು ಕಥೆಯಲ್ಲಿ ಬರುತ್ತದೆ. ಇದನ್ನೇ ಮಹಲಿಂಗ ಸ್ವಾಮಿಯ ಕೃತಿಯಲ್ಲಿ 'ನೂರು ಗ್ರಾಂತ' ಎಂದು ತಪ್ಪಾಗಿ ಬಳಸಿರುತ್ತದೆ. ವಾಸ್ತವವಾಗಿ ಇದು 'ನಾಲ್ಕು ಗ್ರಂಥ' ಎಂದು ಇರಬೇಕು.

1. "ಲಕ್ಕಣಿಕೆಯ ಕಡ್ಡಿಯಿಂದ ಕಪ್ಪು ಘನವಾಗಿ ವಾಮಭಾಗದ ತೊಡೆಯಮೇಲೆ ಬೀಳ್ವುದುಂ ತೊಡೆಯಲೆಂದನುಗೈವುತಿರಲಾ ಸಮಯಕ್ಕೆ ವರರುಚಿ ಬಂದು ಆ ಆಕ್ಕಂಗೆ ಅ ಲಕ್ಷ್ಮಣಮುಂಟೆಂದು ನುಡಿವುದುಂ ಬಿಡೆ.........", K. 33, ಬತ್ತೀಸ ಪುತ್ತಳಿ ಕಥೆ, ದ್ವಿತೀಯ ಪ್ರಕರಣ, ಓ. ೩೮-೩೮ a.

   ಬರುವಂತ ಸಮಯದಿ ಕರದ ಕಪ್ಪಿನ ಕಡ್ಡಿ ಉದುರಿ ಬೀಳಲು ಬಳದೊಡೆಗೆ।
   ಬರಸುವ ಸಮಯದಿ ವರರುಚಿಯು ಬಂದಾಗ ಇರುವುದಾಕೆಗೆ ಬೇಡವೆನಲು॥ (xiv, ೪೦)

2. ಜನಪದಗೀತ, ಭಾಗ ೧, ಪು. ೫೩-೫೮, ಸಂ. ಶ್ರೀ. ಎಸ್.ಕೆ. ಕರೀಂಖಾನ್.
3. ಕಸಾಪಪ, ಸಂ. viii, ಸಂ. ೧, ಪು. ೪೪.
4. ಪೀಠಿಕಾ, ಪು. ೩-೮.

ಕಥೆಯನ್ನು ಆರಿಸಿಕೊಂಡಂತೆಯೇ ಕವಿ ಇದನ್ನೂ ಕವಿದೇವನ ಕನ್ನಡ ಕೃತಿಯಿಂದಲೋ, ಇಲ್ಲವೇ ಕರ್ಣಾಕರ್ಣಿಕೆಯಾಗಿ ಕೇಳಿಯೋ ಪಡೆದಿರಬಹುದು.[1] ಮಹಲಿಂಗಸ್ವಾಮಿ ಮೂಲ ಕಥೆಯಲ್ಲಿ ಬರುವ ಪಾತ್ರಗಳ ಹೆಸರುಗಳನ್ನೆಲ್ಲ ಬದಲಾಯಿಸಿರುವುದಲ್ಲದೆ, ವಿರಾಗಿಯಾದ ರಾಜನು ಮಚ್ಛೇಂದ್ರನೆಂಬ ಮುನಿಯಾದನೆಂದು ಹೇಳಿರುವುದು ಕುತೂಹಲಕಾರಿಯಾಗಿದೆ.[2] ಈ ಹೆಸರುಗಳ ಮಾರ್ಪಾಟು ಹೇಗೇ ಇರಲಿ, ಮಹಲಿಂಗಸ್ವಾಮಿ ಜನಾನುರಾಗವನ್ನು ಗಳಿಸಿದ "ಬತ್ತೀಸ ಪುತ್ತಳಿಯ ಕಥೆ"ಗಳಿಂದ ಸಾಕಷ್ಟು ಉಪಕೃತನಾಗಿದ್ದಾನೆಂದು ಹೇಳಬಹುದು.

ಈ ಉಪಕಥೆಗಳಲ್ಲದೆ, ಸೂಚ್ಯವಾಗಿ, ಸಾ ರ ಂ ಗ ಧರ, ಚಿಕ್ಕಯ್ಯ, ಶಾಲಿವಾಹನ, ಕರೀಭಂಟ, ಕಾಳಿಂಗರಾಯ, ಶೂದ್ರಕ ಮುಂತಾದವರ ಪ್ರಸಂಗಗಳನ್ನು ಸಂದರ್ಭೋಚಿತವಾಗಿ ಹೇಳಿರುತ್ತಾನೆ.[3] ಇವುಗಳನ್ನೆಲ್ಲ ನೋಡಿದರೆ ಮಹಲಿಂಗಸ್ವಾಮಿಗೆ ಜನಪ್ರಿಯವಾದ ಕಥೆಗಳಲ್ಲಿರುವ ಆಸಕ್ತಿ ವಿದಿತವಾಗುತ್ತದೆ. ಲಕ್ಷ್ಮೀಶನಂತೆ ಈತನೂ ಉಪಕಥಾಪ್ರಿಯನೆನ್ನಬಹುದು. ಈತನ ಕೃತಿಯನ್ನು ಉಪಾಖ್ಯಾನ ಪ್ರಧಾನವೆಂದು ಹೇಳಿದರೆ ಒಪ್ಪುತ್ತದೆ.

ಈ ಕವಿ ಇತರ ಕವಿಗಳಂತೆ ಸಾಂಗತ್ಯವನ್ನೇ ಬಳಸಿದ್ದರೂ ಪ್ರಾಸನಿಯಮವನ್ನು ಕಟ್ಟುನಿಟ್ಟಾಗಿ ಪರಿಪಾಲಿಸದೆ ಇರುವುದು ಗಮನಾರ್ಹವಾದುದು.

---

1. ಕನ್ನಡದ "ಬತ್ತೀಸ ಪುತ್ತಳಿ ಕಥೆ" ಯಲ್ಲಿ ಈ ಕಥೆಯಲ್ಲಿ ಬರುವ ಬ್ರಾಹ್ಮಣನನ್ನು ಭದ್ರಶರ್ಮನೆಂದೂ, ಹೆಂಡತಿಯನ್ನು ಭೂತಾಂಡಿಯೆಂದೂ ಕರೆದಿದೆ. ಕನ್ನಡ "ಬತ್ತೀಸ ಪುತ್ತಳಿ ಕಥೆ"ಯಲ್ಲಿ ಬೇರೆ ಬೇರೆ ಪಾಠಭೇದಗಳಿರುವಂತಿವೆ. ಇವುಗಳ ವಿಚಾರ ನಡೆಯಬೇಕಾಗಿದೆ.
2. "ಸಾರಂಗಧರನ ಕಥೆ"ಯಲ್ಲಿ ಮಚ್ಛೇಂದ್ರನೆಂಬಾತನ ಪ್ರಭಾವ ಮಿಗಿಲಾಗಿ ಬರುತ್ತದೆ. ಕವಿಯ ಮನಸ್ಸು ಈ ಮಹಿಮಾಪುರುಷನ ಹೆಸರಿಗೆ ಮಾರುಹೋಯಿತೋ ಏನೋ!
3. ಇವುಗಳಲ್ಲಿ ಕೆಲವು ಗಂಗನ ಕೆಲವು ಪ್ರತಿಗಳಲ್ಲಿಯೂ ಕಂಡುಬರುತ್ತವೆ.

# ೬. ಮೂರು ಕೃತಿಗಳ ತುಲನೆ

ಈವರೆಗೆ ಕುಮಾರರಾಮನ ಕಥೆಯನ್ನು ಕುರಿತ ಮೂರು ಕೃತಿಗಳನ್ನೂ ಸಾಕಾದಷ್ಟು ವಿಸ್ತಾರವಾಗಿಯೇ ಪರಿಚಯಮಾಡಿಕೊಂಡಿದ್ದಾಯಿತು. ಈಗ ಅವುಗಳನ್ನು ಪರಸ್ಪರವಾಗಿ ಹೋಲಿಸಿ ನೋಡಬಹುದು. ಒಂದೇ ಕಥೆಯನ್ನು ಬೇರೆ ಬೇರೆ ಕವಿಗಳು ಆರಿಸಿಕೊಂಡು ಬರೆದಾಗ ಅವರ ಕೃತಿಗಳಲ್ಲಿ ಅನೇಕ ಸಾಮ್ಯಗಳು ವ್ಯಕ್ತವಾಗುವುದು ಸಹಜ. ಬೇರೆ ಬೇರೆ ಕಾಲಕ್ಕೆ ಸೇರಿದ ಈ ಕವಿಗಳ ಮೇಲೆ ನೇರವಾಗಿಯೋ ಪರೋಕ್ಷವಾಗಿಯೋ ಪರಸ್ಪರ ಪ್ರಭಾವ ಬಿದ್ದಿರುವ ಸಂಭವವುಂಟು. ಪ್ರಕೃತದಲ್ಲಿ, ಈ ತೆರನಾದ ಲಕ್ಷಣಗಳು ಇಲ್ಲಿ ಎಷ್ಟರಮಟ್ಟಿಗೆ ತೋರಿಬರುತ್ತವೆ ಎನ್ನುವುದನ್ನು ಮುಂದೆ ವಿಚಾರಮಾಡಲಾಗಿದೆ.

### ಮೂರು ಕೃತಿಗಳಲ್ಲಿನ ಸಮಾನಾಂಶಗಳು

1. ಮೂವರು ಕವಿಗಳೂ ಸಾಂಗತ್ಯವನ್ನೇ ತಮ್ಮ ಕಾವ್ಯಕ್ಕೆ ಬಳಸಿಕೊಂಡಿರುತ್ತಾರೆ. ಕುಮಾರರಾಮನ "ಶುಚಿತೆ" ಮತ್ತು "ವೀರತೆ"ಗಳನ್ನು ಸಾರಿ ಹೇಳುವುದೇ ಈ ಕವಿಗಳ ಮುಖ್ಯೋದ್ದೇಶ. ಈ ಕಾರ್ಯವನ್ನು ಜನಪ್ರಿಯವಾದ ಮಟ್ಟಿನಲ್ಲಿ ಹೇಳಿರುವುದು ಸ್ವಾಭಾವಿಕವಾಗಿದೆ. ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಗಳಂತೂ ಬಹುಮಟ್ಟಿಗೆ ಜನಸಾಮಾನ್ಯರ ಮನಸ್ಸನ್ನು ಒಲಿಸುವಂತೆ ಬರೆದಿರುವುದರಿಂದ ಈ ರೀತಿ ಒಪ್ಪತಕ್ಕುದಾಗಿದೆ. ನಂಜುಂಡನು ವಿದ್ವಜ್ಜನರನ್ನು ಕುರಿತು ಹೇಳಿರುವುದಲ್ಲದೆ, ತಾನೂ ವಿದ್ವಾಂಸನಾಗಿದ್ದನೆಂಬುದು ಅವನ ಪ್ರೌಢಶೈಲಿಯಿಂದ ವಿದಿತವಾಗುತ್ತದೆ. ಈತನೂ ಸಾಂಗತ್ಯವನ್ನೇ ಆರಿಸಿಕೊಡಿರುವುದನ್ನು ನೋಡಿದರೆ ಈ ವೇಳೆಗಾಗಲೇ ಈ ಛಂದಸ್ಸು ಎಷ್ಟು ಆದರವನ್ನು ಗಳಿಸಿತ್ತೆಂಬುದು ಸ್ಪಷ್ಟವಾಗುತ್ತದೆ

2. ಮುಖ್ಯ ಕಥಾವಸ್ತುವಿನಲ್ಲಿ ಈ ಕೆಳಗೆ ಕಂಡುಬರುವಂತೆ ಸಾದೃಶ್ಯಗಳಿವೆ.

(i) ಕಥೆಗೆ ಸಂಬಂಧಿಸಿದ ಪ್ರಧಾನ ಪಾತ್ರಗಳಲ್ಲಿ ಹೋಲಿಕೆಯಿದೆ. ಎಂದರೆ, ಕುಮಾರರಾಮನು ಕಂಪಿಲ ಮತ್ತು ಹರಿಯಾಲದೇವಿಯರ ಮಗ. (ಹರಿಯಾಲದೇವಿಯನ್ನು ಹರಿಹರದೇವಿ, ಹರಿಯಮ್ಮ ಎಂಬುದಾಗಿಯೂ ಕರೆದಿರುವುದುಂಟು.) ಈ ಕುಮಾರನು ದೈವಾನುಗ್ರಹದಿಂದ ಜನಿಸುತ್ತಾನೆ. ಕಾಟಣ್ಣನೆಂಬಾತನು ಕುಮಾರರಾಮನನ್ನು ಒಂದು ಕ್ಷಣವೂ ಬಿಟ್ಟಿರಲಾರ. ಕುಮಾರರಾಮನಿಗೆ ಅಕ್ಕ ಮಾರಮ್ಮ, ತಂಗಿ ಸಿಂಗಮ್ಮ ಎಂಬ ಸಹೋದರಿಯರಿದ್ದರು. ಭಾವಸಂಗಮ ಎಂಬುವನು ಒಬ್ಬ ಬಂಧು. ರತ್ನಾಜಿ ಕುಮಾರರಾಮನ ಚಿಕ್ಕಮ್ಮ. ಬೈಚಪ್ಪನೆಂಬುವನು ವಂಶಪಾರಂಪರ್ಯವಾಗಿ ಬಂದ ಮಂತ್ರಿ.

(ii) ಕುಮಾರರಾಮನ ಜೀವನದ ಪ್ರಾರಂಭದ ಭಾಗವೆಲ್ಲವೂ ಅವನ ಪರಾಕ್ರಮದ ನಿರೂಪಣೆಗಾಗಿ ಮೀಸಲಾಗಿದೆ. ಪ್ರಾಪ್ತವಯಸ್ಕನಾದ ಕೂಡಲೆ, ಬಲ್ಲಾಳ ಭೂಮೀಶ್ವರ, ವೀರರುದ್ರ ಮತ್ತು ನೇಮಿಯೊಂದಿಗೆ ಕಾಳಗ ಮಾಡುವನು. ಈ ಒಂದೊಂದು ಸಂದರ್ಭದಲ್ಲಿಯೂ ಅವನಿಗೇ ಜಯವಾಗುವುದು. ಅನಂತರ, ನೇಮಿಯೊಂದಿಗೆ ಎರಡನೆಯ ಬಾರಿಯೂ, ಮಾತಂಗಿಯೊಂದಿಗೆ ಕೊನೆಯ ಸಲವೂ ಯುದ್ಧಮಾಡುವನು. ಈ ಘಟನೆಗಳನ್ನು ಮೂವರು ಕವಿಗಳೂ ಚಿತ್ರಿಸಿರುವರು.

(iii) ಕುಮಾರರಾಮನ ಕಥೆಯ ಮತ್ತೊಂದು ಮುಖ್ಯವಾದ ಭಾಗವೇ ರತ್ನಾಜಿಯ ಪ್ರಸಂಗ. ಚಿಕ್ಕಮ್ಮನಾದ ರತ್ನಾಜಿ ರಾಮನನ್ನು ಕಂಡು ವ್ಯಾಮೋಹಕ್ಕೆ ಗುರಿಯಾಗುವಳು.

ಬೇಟೆಗೆ ಹೋಗದ ರಾಮನು ನೀರಾಟ ಚೆಂಡಾಟಗಳನ್ನು ಆಡುವನು. ಮುತ್ತಿನ ಚೆಂಡು ಚಿಮ್ಮಿ ಚಿಕ್ಕಮ್ಮನ ಅರಮನೆಯಲ್ಲಿ ಬೀಳುವುದು. ಕಾಟಣ್ಣನನ್ನು ಕಳುಹಲು ಅವನು ಬರಿಗೈಯಲ್ಲಿ ಹಿಂತಿರುಗುವನು. ನಿರ್ವಾಹವಿಲ್ಲದೆ ರಾಮನೇ ಹೋಗುವನು. ರತ್ನಾಜಿ ಆತನನ್ನು ಬಗೆ ಬಗೆಯಾಗಿ ಬೇಡಿಕೊಳ್ಳಲು, ಆಕೆಯ ಇಷ್ಟಾರ್ಥವನ್ನು ನೆರವೇರಿಸಲಾರದೆ, ಕೈಕೊಡವಿ, ದೂಡಿ, ಬರುವನು. ಆಕೆ ಮಾರಿಯಾಗಿ ಪರಿಣಮಿಸುವಳು. ಕಂಪಿಲನೊಂದಿಗೆ ದೂರುಹೇಳಿ ರಾಮನಿಗೆ ಶಿರಶ್ಛೇದನವನ್ನು ವಿಧಿಸುವಂತೆ ಮಾಡುವಳು. ಬುದ್ಧಿವಂತನಾದ ಬೈಚಪ್ಪನು ದುಡುಕಿ ರಾಮನನ್ನು ಕೊಲ್ಲದೆ ನೆಲಮಾಳಿಗೆಯಲ್ಲಿ ಬಚ್ಚಿಡುವನು. ನೇಮಿ ಎರಡನೆಯ ಬಾರಿ ದಂಡೆತ್ತಿ ಬಂದಾಗ, ಮಂತ್ರಿಯ ಜಾಣತನದಿಂದ, ರಾಮನಿಗೆ ಈ ಅಜ್ಞಾತವಾಸದಿಂದ ಬಿಡುಗಡೆಯಾಗುವುದು. ರತ್ನಾಜಿ ಅವಮಾನಿತಳಾಗಿ ಪ್ರಾಣ ನೀಗುವಳು. ಆಕೆಯ ಸಖಿಯಾದ ಸಂಗಿಯೂ ಒಡತಿಯನ್ನೇ ಹಿಂಬಾಲಿಸುವಳು.

(iv) ಬಾದೂರನ ಪಲಾಯನದ ವೃತ್ತಾಂತವೊಂದು ಪ್ರಮುಖವಾದ ಘಟನೆ. ಸುಲ್ತಾನನ ಆಶ್ರಯದಲ್ಲಿದ್ದ ಈತನು ಕಾರಣಾಂತರದಿಂದ ಅವನ ಆಗ್ರಹಕ್ಕೆ ಗುರಿಯಾಗಿ, ದೇಶ ಭ್ರಷ್ಟನಾಗಿ, ಕುಮಾರರಾಮನ ಮರೆಹೊಗುವನು. ದಿನದಿನಕ್ಕೂ ಪ್ರಬಲನಾಗುತ್ತಿದ್ದ ಕುಮಾರರಾಮನನ್ನು ಕಂಡು, ಮನಸ್ಸಿನಲ್ಲಿಯೇ ಕುದಿಯುತ್ತಿದ್ದ ಸುಲ್ತಾನನಿಗೆ ಈಗ ಕುಮ್ಮಟದ ಮೇಲೆ ದಂಡೆತ್ತಿ ಬರಲು ಬಲವಾದ ಕಾರಣ ದೊರೆತಂತಾಯಿತು. ಬಾದೂರನನ್ನು ತನಗೆ ಒಪ್ಪಿಸಬೇಕೆಂಬ ಷರತ್ತನ್ನೇ ಮುಂದಿಟ್ಟು ನೇಮಿಯ ನೇತೃತ್ವದಲ್ಲಿ ದಂಡನ್ನು ಕಳುಹಿಸುವನು ಮೊದಲನೆಯ ಎರಡು ಬಾರಿಗಳಲ್ಲಿಯೂ ನೇಮಿ ಪರಾಜಿತನಾಗುವನು. ಮೂರನೆಯ ಬಾರಿ ಮಾತಂಗಿಯ ಸೇನಾಧಿಪತ್ಯದಲ್ಲಿ ಜಯವೇನೋ ಲಭಿಸುವುದು. ಬಾದೂರನು ಮಾತ್ರ ದೊರೆಯುವುದಿಲ್ಲ.

(v) ಪರಾಕ್ರಮಶಾಲಿಯಾದ ರಾಮನ ಹೆಸರನ್ನು ಕೇಳಿದ ಸುಲ್ತಾನನ ಮಗಳಿಗೆ ಆತನನ್ನು ಮದುವೆಯಾಗಬೇಕೆಂಬ ಹಂಬಲವುಂಟಾಗುವುದು. ಸುಲ್ತಾನನ ಪ್ರಯತ್ನಗಳೆಲ್ಲ ವಿಫಲವಾಗುವುವು. ಮಾತಂಗಿ ರಾಮನ ರುಂಡವನ್ನು ಡಿಳ್ಳಿಗೆ ಕಳುಹಿಸಲು, ಅದನ್ನು ಕಂಡು ಆಕೆ ಹತಾಶಳಾಗುವಳು. ಆ ರುಂಡವನ್ನು ಡಿಳ್ಳಿಯಲ್ಲಿ ಇಟ್ಟುಕೊಳ್ಳಲಾರದೆ ಸುಲ್ತಾನನು ಕುಮ್ಮಟಕ್ಕೆ ಹಿಂತಿರುಗಿ ಕಳುಹಿಸುವನು. ಅನಂತರ ಅದು ಲಿಂಗಾಕೃತಿಯಾಗುವುದು.

(vi) ರಾಮನನ್ನು ಅವತಾರಪುರುಷನೆಂದು ಮೂವರೂ ಒಪ್ಪಿರುತ್ತಾರೆ. ಆದರೆ, ಈ ಕಲ್ಪನೆ ನಂಜುಂಡನಲ್ಲಿ ಖಚಿತವಾಗಿಯೂ, ಪಾಂಚಾಳ ಗಂಗನಲ್ಲಿ ಸ್ಥೂಲವಾಗಿಯೂ, ಮಹಲಿಂಗಸ್ವಾಮಿಯಲ್ಲಿ ಹಲಕೆಲವು ಬದಲಾವಣೆಗಳ ಮೂಲಕವೂ ಪ್ರತಿಪಾದಿತವಾಗಿದೆ.

## ನಂಜುಂಡ ಮತ್ತು ಪಾಂಚಾಳಗಂಗ

1. **ಹುಳಿಯೊರಿನ ಯುದ್ಧ:** ಹುಳಿಯೇರು ಎಂಬಲ್ಲಿನ ಅಧಿಕಾರಿಯ ಬಳಿ ಒಳ್ಳೆಯ ಜಾಯಿಲಗಳಿರುತ್ತವೆ. ಅವುಗಳನ್ನು ತನಗೆ ಕೊಡಬೇಕೆಂದು ರಾಮನು ಹೇಳಿ ಕಳುಹಿಸಲು ಅವನು ನಿರಾಕರಿಸುತ್ತಾನೆ. ಬಲ್ಲಾಳನ ಸಾಮಂತನಾದ ತನಗೆ ಕಂಪಿಲನು ಎಷ್ಟರವನು ಎಂದು ಉದಾಸೀನಮಾಡುತ್ತಾನೆ. ಆಗ ರಾಮನು ಸೈನ್ಯಸಮೇತನಾಗಿ ಬಂದು ಹುಳಿಯೇರನ್ನು ಮುತ್ತುತ್ತಾನೆ. ಆ ಅಧಿಕಾರಿ ಕೈಸೆರೆಯಾಗುತ್ತಾನೆ. ಅನಂತರ

ಆವನಿಂದ ಕಪ್ಪ ಕಾಣಿಕೆಗಳನ್ನು ವಸೂಲ್ಮಾಡಿಕೊಂಡು ಜಯಶಾಲಿಯಾಗಿ ಹಿಂತಿರುಗುತ್ತಾನೆ. ಈ ವೃತ್ತಾಂತ ವನ್ನು ಕೇಳಿದ ಬಲ್ಲಾಳನು ಸಿಟ್ಟುಗೊಂಡು ಕಂಪಿಲನ ಮೇಲೆ ದಂಡೆತ್ತಿ ಹೋಗುತ್ತಾನೆ. ಇದು ಕವಿ ನಂಜುಂಡನ ನಿರೂಪಣೆ.

ಈ ಸಂದರ್ಭವನ್ನು ಪಾಂಚಾಳಗಂಗನೂ ಚಿತ್ರಿಸಿರುತ್ತಾನೆ. ಕುಮಾರರಾಮನು ಜಗತಾಪಿಯನ್ನೂ (ಜಗದಪ್ಪ), ವೀರರುದ್ರನನ್ನೂ ಜಯಿಸಿದ ಸುದ್ದಿ ದೇಶದಲ್ಲೆಲ್ಲ ವ್ಯಾಪಿಸಿತು. ಇದನ್ನು ಕೇಳಿದ ಹುಳಿಯಾರಿನ ಮಾರಭೂಪಾಲನು ರಾಮನ ಅಹಂಕಾರವನ್ನು ಅಡಗಿಸಬೇಕೆಂದು ಆಡಿಕೊಳ್ಳುವನು. ಇದು ರಾಮನಿಗೆ ತಿಳಿಯಲು, ತಾನೇ ದಂಡೆತ್ತಿ ಬಂದು, ಹುಳಿಯಾರಿಗೆ ಮುತ್ತಿಗೆ ಹಾಕುವನು. ಬಲವಾದ ಕಾಳಗವಾಗುವುದು. ಮಾರಭೂಪಾಲನು ಕುಮಾರರಾಮನಿಗೆ ಹೊನ್ನ ಪಂಜರದೊಂದಿಗೆ ಒಂದು ಗಿಳಿಯನ್ನೂ ಕೊಡುವನು. ಇದು ಮುಂದೆ ರತ್ನಾಜಿಯ ಕರುಮಾಡದಲ್ಲಿ ಅಲಂಕಾರದ ಸಾಧನವಾಗುವುದು. ಮಾರಭೂಪಾಲನು ಬಲ್ಲಾಳನ ಸಾಮಂತನಾಗಿದ್ದನೆಂಬ ಅಂಶವು ಇಲ್ಲಿಯೂ ಕಂಡುಬರುತ್ತದೆ.

**2. ಶೂಲದ ಹಬ್ಬ :** ಕವಿ ನಂಜುಂಡನಲ್ಲಿ ಇದು ಒಂದು ವರ್ಷಾವಧಿ ಹಬ್ಬ. ವಸಂತಋತುವಿನಲ್ಲಿ ಆಚರಿಸುವ ಹಬ್ಬ. ಪದ್ಧತಿಯ ಮೇರೆಗೆ ಕಂಪಿಲನು ಇದಕ್ಕೆ ಏರ್ಪಾಡುಮಾಡುವನು. ಆಗ ಸುತ್ತಮುತ್ತಲಿನ ರಾಜಕುಮಾರರೂ, ರಾಜರೂ ಆಗಮಿಸುವರು. ಸಂಗಿ ರತ್ನಾಜಿಯನ್ನು ಹುರಿದುಂಬಿಸಿ ಆಕೆ ಈ ವೈಭವವನ್ನು ಕರುಮಾಡದಿಂದ ನೋಡುವಂತೆ ಏರ್ಪಡಿಸುವಳು. ಅಲ್ಲಿಗೆ ಬಂದಿದ್ದ ಮನ್ನೆಯರ ಪರಿಚಯ ಮಾಡಿಕೊಡುವಳು. ಬಂದವರೆಲ್ಲರೂ ರತ್ನಾಜಿಯ ಸೌಂದರ್ಯವನ್ನು ಕಂಡು ಬೆರಗಾಗುವರು. ರತ್ನಾಜಿ ರಾಮನನ್ನು ಕಂಡಾಗ ಮೋಹಪರವಶಳಾಗುವಳು.

ಪಾಂಚಾಳಗಂಗನಲ್ಲಿ ಈ ಪ್ರಸಂಗ ಕುಮಾರರಾಮನು ವೀರರುದ್ರನ ಮೇಲೆ ದಂಡೆತ್ತಿ ಹೋಗಿ, ಬೊಲ್ಲನನ್ನು ತಂದ ಬಳಿಕ ಬರುತ್ತದೆ. ಓರುಗಲ್ಲಿಗೆ ಹೋಗುವಾಗ ದಾರಿಯಲ್ಲಿ ಕುಮಾರರಾಮನು ಗುಂಡು ಬ್ರಹ್ಮಯ್ಯನ ದೇವಾಲಯಕ್ಕೆ ಹೋಗುತ್ತಾನೆ. ಅಲ್ಲಿ ಆ ದೇವರಲ್ಲಿ, ತನ್ನ ಕಾರ್ಯವು ಫಲಿಸಿದರೆ ಶೂಲದ ಹಬ್ಬವನ್ನು ಆಚರಿಸುವುದಾಗಿ ಹರಕೆ ಹೊತ್ತುಕೊಳ್ಳುತ್ತಾನೆ. ಆ ಮೇರೆಗೆ, ಬೊಲ್ಲನನ್ನು ತಂದ ಮೇಲೆ, ತಂದೆಗೆ ಹೇಳಿ ಈ ಹಬ್ಬಕ್ಕೆ ಏರ್ಪಾಡುಮಾಡುತ್ತಾನೆ. ನಾನಾ ದೇಶಗಳ ರಾಜರು ಈ ಸಮಾರಂಭಕ್ಕೆ ಸೇರುತ್ತಾರೆ. ಆಗ ರತ್ನಾಜಿ ಸಂಗಿಯ ಮೂಲಕ ಅವರುಗಳು ಯಾರು ಯಾರೆಂದು ಕೇಳಿ ತಿಳಿಯುತ್ತಾಳೆ. ಕಡೆಗೆ ಕುಮಾರ ರಾಮನನ್ನು ಕಂಡಾಗ ಆಕೆಯ ಕಾಮಾಭಿಲಾಷೆ ಕೆರಳುತ್ತದೆ. ಒಟ್ಟಿನಲ್ಲಿ, ಈ ಎರಡು ಕೃತಿಗಳಲ್ಲಿಯೂ ಶೂಲದ ಹಬ್ಬದ ಪರಿಣಾಮ ಒಂದೇ ರೀತಿಯಾಗಿರುವುದು.

**3. ಇತರ ಕೆಲವು ಅಂಶಗಳು :** ನಂಜುಂಡನಲ್ಲಿ ಕುಮಾರರಾಮನು ಕಟ್ಟಕಡೆಯ ಹೋರಾಟದಲ್ಲಿ ಕುದುರೆಯಿಂದ ಇಳಿಯುವುದೇ ತಡ ಅದು ಮೃತವಾಗುವುದು. ಪಾಂಚಾಳಗಂಗನು ಇದನ್ನು ಬೊಲ್ಲನೆಂದು ಕರೆದಿದ್ದಾನೆ. ಇಲ್ಲಿಯೂ ಇದು ರಣರಂಗದಲ್ಲಿಯೇ ತನ್ನ ಪ್ರಾಣವನ್ನು ಬಿಡುವುದು. ರಾಮನಿಗಾಗಿ ಹಂಬಲಿಸು ತ್ತಿದ್ದ ಹರಿಯಾಲದೇವಿಗೆ ಬೈಚಪ್ಪನು ನಿಜವಾದ ಸಂಗತಿಯನ್ನು ತಿಳಿಸುವ ಸಂದರ್ಭವನ್ನು ನಂಜುಂಡನು ಅತ್ಯಂತ ವಿಸ್ಮಯಕಾರಿಯಾಗಿ ಚಿತ್ರಿಸಿರುತ್ತಾನೆ. ತನ್ನ ವಶನಾಗಿದ್ದ ದೇವದೂತನ ಮೂಲಕ ಆಕೆಗೆ ಅದು ದೃಢವಾಗುವಂತೆ ಏರ್ಪಡಿಸುತ್ತಾನೆ. ಪಾಂಚಾಳಗಂಗನ ಒಂದು ಪ್ರತಿಯಲ್ಲಿ ಇದನ್ನು ನೇರವಾಗಿಯೇ ಬೈಚಪ್ಪನೇ ಹೇಳಿದನೆಂದು ಉಕ್ತವಾಗಿದೆ (ಗಂಗ ೩, XXX, ೧೧೯). ಬಾದೂರನು ರಣರಂಗದಲ್ಲಿಯೇ ಮಡಿದನೆಂದು ನಂಜುಂಡನಲ್ಲಿ ಉಲ್ಲೇಖಿತವಾಗಿದೆ. ಗಂಗನ ಒಂದು ಪ್ರತಿಯಲ್ಲಿ ಇಂತೆಯೇ ಉಕ್ತವಾಗಿದೆ (ಗಂಗ ೪, vii, ೩೦೩).

**4. ಪದ್ಯಸಾಮ್ಯ :** (i) ನಂಜುಂಡ ಮತ್ತು ಗಂಗನ ಕೃತಿಗಳಲ್ಲಿ ಈಶ್ವರನನ್ನು ಕುರಿತ ಈ ಕೆಳಗಿನ ಪದ್ಯ ಬಹುಮಟ್ಟಿಗೆ ಒಂದೇ ತೆರನಾಗಿ ಕಂಡುಬರುತ್ತದೆ.

ಶ್ರೀ ಗಿರಿಜಾಸ್ಯಾಂಬುಜ ದಿನನಾಯಕ
ಭೋಗಿಭೂಷಣ ಭಾಳನೇತ್ರ
ಭಾಗೀರಥೀಧರ ಭವರೋಗವೈದ್ಯ ನೀ
ನಾಗು ಶಂಕರ ಶರಣೆನಗೆ (ನಂಜುಂಡ, i, 1.)

ಶ್ರೀ ಗಿರಿಜೇಶ್ವರ ಭುಜದಿಂದ ವಿನಾಯಕ (?)
ಭೋಗಿಭೂಷಣ ಭಾಳನೇತ್ರ
ಭಾಗೀರಥೀಧರ ಭವರೋಗವೈದ್ಯನೆ
ನಾಗಶಂಕರ ಶರಣೆಮಗೆ (ಗಂಗ ೧, i, 1.)

ಶ್ರೀ ಗಿರಿಜಾಶಂಭು ಜಗದೀಶನಾಯಕ
ಭೋಗಿಭೂಷಣ ಭಾಳನೇತ್ರ
ಭಾಗೀರಥೀಧರ ಭವರೋಗವೈದ್ಯನೆ
ನಾಗಶಂಕರ ಶರಣಾರ್ಥಿ (ಗಂಗ ೨, ii, 1.)

ಶ್ರೀ ಗಿರಿಜಾಸ್ಯಾಂಬುಜ ದಿನನಾಯಕ
ಭೋಗಿಭೂಷಣ ಭಾಳನೇತ್ರ
ಭಾಗೀರಥೀಧರ ಭವರೋಗವೈದ್ಯನೆ
ನಾಗಶಂಕರ ಶರಣೆಂಬೆ (ಗಂಗ ೩, x, 1.)

ಶ್ರೀ ಗಿರಿಜಾಧೀಶ ಶಂಭುವಧಿನಾಯಕ
ಭೋಗಿಭೂಷಣ ಭಾಳನೇತ್ರ
ಭಾಗಿರಥಿಯಧರ ಭವರೋಗವೈದ್ಯನೆ
ನಾಗಕುಂಡಲಧರ ಶರಣು (ಗಂಗ ೫, vii, 1.)

(ii) ನಂಜುಂಡನ ಕೆಲವು ಪ್ರತಿಗಳಲ್ಲಿ ಕಂಡುಬರುವ ಸಂಧಿಮುಕ್ತಾಯದ ಈ ಕೆಳಗಿನ ಪದ್ಯವೊಂದು ಗಂಗನ ಕೆಲವು ಪ್ರತಿಗಳಲ್ಲಿಯೂ ಕಂಡುಬರುತ್ತದೆ.

ಇದು ಪರದಾರ ಸೋದರ ರಾಮನಾಥನ
ಪದಕೃತಿಯೊಳಗೊಂದನೆಯ
ವಿದಿತಾಶ್ವಾಸದೊಳೊಂದನೆಯದು ಸಂಧಿ
ಮೃದುಪದಚಯಸಂಬಂಧಿ (ನಂಜುಂಡ, i, ೧೧೨.)

ಇದು ಪರದಾರ ಸೋದರ ರಾಮನಾಥನ
ಪದದರ್ಥದೊಳಗೆ ಒಂದನೆಯ
ವಿದಿತಾಶ್ವಾಸದೊಳೊಂದನೆಯ ಸಂಧಿ
ಪದುಮೋದ್ಭವ ಸಂಬಂಧಿ (ಗಂಗ ೧, i, ೨೨೮.)

ಇದು ಪರನಾರಿ ಸಹೋದರನೆಂಬ ರಾಮನ
ಪದಕೃತಿಯೊಳಗೊಂದು ಕಥೆಯು
ಚದುರ ರಾಮಯ್ಯನು ಮದಿವ್ಯಾದ ಸುದ್ದಿಯ
ಪದಗಳು ಮುಗಿದು ಪೂರಾಯ್ತು (ಗಂಗ ೨, vii, ೧೩೭.)

ಇದು ಪರನಾರಿ ಸೋದರ ರಾಮನಾಥನ
ಪದಕೃತಿಯೊಳಗೊಂದು ಕಥೆಯು
ಚದುರರಾಮಯ್ಯ ತಾ ಮದಿವ್ಯದ ಸುದ್ದಿಯ
ಪದಗಳು ಮುಗಿದು ಪೂರಾಯ[1] (ಗಂಗ ೩, viii, ೯೧.)

## ನಂಜುಂಡ ಮತ್ತು ಮಹಲಿಂಗಸ್ವಾಮಿ

**1. ರಾಮನ ಮರಣದ ಭವಿಷ್ಯ :** ನೆಲಮಾಳಿಗೆಯಿಂದ ಎದ್ದು ಬಂದ ರಾಮನು, ತನ್ನ ಮರಣವು ಹೇಗೆ ಆಗುವುದೆಂದು ದೇವದೂತನನ್ನು ಕೇಳುವನು. ಆತನು ಮಾತಂಗಿಯ ವೃತ್ತಾಂತವನ್ನು ವಿವರಿಸಿ, ಆಕೆಯಿಂದ ಸಂಭವಿಸುವುದೆಂದು ತಿಳಿಸುವನು (xxxix, ೪೪–೫೧).

ಮಹಲಿಂಗಸ್ವಾಮಿಯಲ್ಲಿ ಈ ಸಂಗತಿ ಇನ್ನೊಂದು ತೆರನಾಗಿದೆ. ಎರಡನೆಯ ಬಾರಿ ನೇಮಿಯನ್ನು ಹಿಂದಟ್ಟಿದ್ದಾಗಿದೆ. ರತ್ನಾಜಿಯೂ ಆತ್ಮಹತ್ಯ ಮಾಡಿಕೊಂಡಿದ್ದಾಳೆ. ಆಕೆಯೇ ಡಿಳ್ಳಿಯಲ್ಲಿ ಮಾತಂಗಿಯೆಂಬ ಹೆಸರಿನಲ್ಲಿ ಮತ್ತೆ ಹುಟ್ಟಿರುವಳೆಂದು ಗುರುಮುನಿ ಎಂಬ ಗುರುಗಳಿಗೆ ಗೋಚರವಾಗುತ್ತದೆ. ಅವರು ಕಂಪಿಲನ ಆಸ್ಥಾನಕ್ಕೂ ರಾಮನ ಬಳಿಗೂ ಬಂದು, ಈ ವೃತ್ತಾಂತವನ್ನೆಲ್ಲ ತಿಳಿಸುವರು. ರಾಮನನ್ನು ದಾನ ಧರ್ಮಾದಿ ಕಾರ್ಯಗಳನ್ನು ಮಾಡಬೇಕೆಂದು ಪ್ರೇರಿಸುವರು. ಎಂದೆಂದಿಗೂ ಹೆಣ್ಣಿನ ಮೇಲೆ ಕೈ ಎತ್ತಿ ಅಪಮಾನಕ್ಕೆ ಗುರಿಯಾಗಬಾರದೆಂದು ಎಚ್ಚರಿಸುವರು. ಅನಂತರ, ಈಶ್ವರನೂ ಕನಸಿನಲ್ಲಿ ಕಾಣಿಸಿಕೊಂಡು ಈ ವಿಷಯವನ್ನು ಮತ್ತಷ್ಟು ದೃಢಪಡಿಸುವನು (xviii, ೪೭–೫೭, ೬೨–೬೯).[2]

**2. ಜಾತಿಸ್ಮರತೆ :** ಜಾತಿಸ್ಮರಣೆ ನಂಜುಂಡನಲ್ಲಿ ಒಂದು ವಿಶೇಷವೆಂದು ಹಿಂದೆ ಹೇಳಿದೆಯಷ್ಟೆ. ಇದರ ಒಂದು ತುಣುಕನ್ನು ಮಹಲಿಂಗಸ್ವಾಮಿಯಲ್ಲಿಯೂ ಕಾಣಬಹುದು. ಮಾತಂಗಿ ರಣರಂಗದಲ್ಲಿ ರಾಮನನ್ನು ಕಂಡಾಗ ಅವಳಿಗೆ ತನ್ನ ಹಿಂದಿನ ಜನ್ಮದ ವ್ಯಾಮೋಹ ಮರುಕಳಿಸುವುದು. ಆಕೆ "ಹಿಂದೊಮ್ಮೆ ಕರೆಯಲು ಒಲ್ಲೆನೆಂದೆ ರತಿಗಲೆಗೆ ಇಂದಿನ್ನು ಮನಸು ಒಪ್ಪದೆ ಕೊಂದನೆಂಬುವ ಕೈಯ ನಿಲಿಸಿ ನೇಮಿಯ ಕಳುಹಿ ಆನಂದದಿ ಸುಖದೊಳು ಬಾಳ್ವ (xix, ೯೦)" ಎನ್ನುವಳು. ರಾಮನು "ಮೂಳಿಯ ಮಾತನು ಆಡಬೇಡವೆ ಮೂಗ ಮಾದಿಗನಿಂದ ಕೊರೆಸುವೆನು. ಏಣಾಂಕಧರನೊಲುಮೆ ಆಗಿ ಇರುವುದು ಕಾಣೆ ಪರಸ್ತ್ರೀಯರು ತಾಯಿ

---

1. ಈ ಮೇಲ್ಕಂಡ ಹೋಲಿಕೆಗಳಲ್ಲದೆ ಗಂಗ ೩ರಲ್ಲಿ ನಂಜುಂಡನ ಕೃತಿಯ ಅನೇಕ ಪದ್ಯಗಳನ್ನು ಸಂಧಿಗಟ್ಟಲೆ ತಂದು ಸೇರಿಸಿರುವುದೂ ಸ್ಪಷ್ಟವಾಗಿ ಗೊತ್ತಾಗುತ್ತದೆ. ಈ ರೀತಿ ಆಗಲು ಬಹುಮಟ್ಟಿಗೆ ಪ್ರತಿಕಾರರೇ ಕಾರಣ ಎಂಬುದಾಗಿ ಬೇರೆ ಹೇಳಬೇಕಾಗಿಲ್ಲ.

2. ಈ ಅಂಶವನ್ನು ಗಂಗ ಹೇಳದೆ ಇಲ್ಲ. ಆದರೆ ಆತನಲ್ಲಿ ಇದು ತುಂಬ ಸೂಚ್ಯವಾಗಿದೆ. ನೆಲಮಾಳಿಗೆಯಿಂದ ಕುಮಾರರಾಮನು ಎದ್ದು ಬಂದು, ಯುದ್ಧ ಮಾಡಿ, ಗೆದ್ದು ಜಟ್ಟಂಗಿ ರಾಮೇಶ್ವರನನ್ನು ಕಂಡು ತನ್ನ ಸಾವನ್ನು ಬೇಡುವನು. ಈಶ್ವರನು ಪುಷ್ಪಪ್ರಸಾದವನ್ನು ದಯಪಾಲಿಸುವನು (ಗಂಗ ೨, xxiii, ೪೨–೪೫).

ಹೋಗನ್ನು (ಅದೇ, ೯೧)" ಎಂದು ಹೇಳಿ ನಿರಾಕರಿಸುವನು. ರಾಮುನ ಮರಣಾನಂತರ ಖಾನರು ಮಾತಂಗಿಯನ್ನು "ಬಾ" ಎನ್ನಲು ಆಕೆ "ಕೃತಿಯೊಳು ರೇಣುಕಿ, ತ್ರೇತಾರದೊಳು ಬಂದು....ತಾಟಕಿಯೂ, ದ್ವಾಪರ ಯುಗದೊಳು ದ್ರೌಪದಿಯಾಗಿ ಜನಿಸಿದೆ. ಈ ಕಲಿಗೆ ರತ್ನಾಜಿಯಾಗೆ (xix, ೨೪೯)"[1] ಎನ್ನುವಳು. ಅಲ್ಲದೆ, ಆಕೆ ತನ್ನ ವೈರವನ್ನೆಲ್ಲ ಮರೆತು ರಾಮುನ ಒತ್ತಿನಲ್ಲಿಯೇ ನಿಂತು ಸೇವೆ ಮಾಡಲು ಸಂಕಲ್ಪಿಸುವಳು.[2]

## ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿ

**1. ಬಾಹ್ಯಸ್ವರೂಪ:** (i) ಎರಡು ಕೃತಿಗಳಲ್ಲಿಯೂ ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿಯೂ ಇಷ್ಟದೇವತೆಯ ಸ್ತುತಿಯಿದೆ. (ಗಂಗನ ಪ್ರತಿಗಳಲ್ಲಿ ಈ ದೇವತಾಸ್ತುತಿ ಏಕರೀತಿಯಾಗಿಲ್ಲ.) ರಾಮುನ ಕಥೆಯ ಮಹತ್ವವನ್ನೂ ಆಗಿಂದಾಗ್ಗೆ ಸೂಚಿಸಿರುತ್ತಾರೆ.

(ii) ಇಬ್ಬರೂ ತಗಡೂರಿನ ವಿನಾಯಕನನ್ನು ಸ್ತುತಿಸಿರುತ್ತಾರೆ.

ಜಗದೊಳಗೀ ಕೃತಿ ಹವಣಿಸಬೇಕೆಂದು
ಅಗಜೆಯ ಅರಸನ ನೆನೆದು
ತಗಡೂರ ಕಡೆಯಲ್ಲಿ ನೆಲಸಿದನೀವ
ಮಿಗಿಲು ರೂಪಿಗ ವಿಘ್ನರಾಜ (ಗಂಗ ೧, i, ೮.)

ನರಮುಖನನತಿಗಳೆದು ಕರಿಮುಖ ಧರಿಸಿದೆ
ಒಲಿದು ಮೂಷಕವನೇರಿದನೆ
ವಿವಾಹವನೊಲ್ಲದೆ ಬಲಿದೆ ಶಾಸ್ತ್ರನ ನಿರ್ಘೆ (?)
ತಗಡೂರ ಬೆನವ ಕೊಡುಮತಿಯ (ಮ. ಲಿಂ. i, ೪.)

ಗಜಮುಖನೆ ಗಣನಾಥ ಜಗವೆಲ್ಲ ಪೂಜಿಪನೆ
ಅಗಜೆಯ ರಮಣನ ಪ್ರಿಯ
ನಿಜದೋರಿ ತಗಡೂರ ಕಟ್ಟೆಯೋಳ್ ನೆಲಸಿದ
ಭುಜಗಧರನೆ ವಿಘ್ನರಾಜ (ಮ. ಲಿಂ. ii, ೨.)

---

1. ಈ ಹೇಳಿಕೆಯೊಂದಿಗೆ ಕವಿದೇವನ ಕನ್ನಡ 'ಬತ್ತೀಸ ಪುತ್ತಳಿ ಕಥೆ'ಯಲ್ಲಿ ಉದಾಹರಿಸಿರುವ ಈ ಪದ್ಯವನ್ನು ಹೋಲಿಸಿ ನೋಡಬಹುದು:

ಕೃತೇ ಚ ರೇಣುಕಾದೇವಿ ತ್ರೇತಾಯಾಂ ಜನಕಾತ್ಮಜಾ ।
ದ್ವಾಪರೇ ದ್ರೌಪದಾದೇವಿ ಕಲೌ ಮೃತ್ಯು ಗೃಹೇ ಗೃಹೇ ॥ (K. 33, ಓ. ೧೨.)

2. ನಂಜುಂಡನ ಮೇರೆಗೆ ಗಾಂಧಾರಿ ಮಾತಂಗಿಯಾದಳೆಂದೂ, ದ್ರೌಪದಿ ಬಾಬಮ್ಮನಾದಳೆಂದೂ ಬರುತ್ತದೆ. ಗಂಗ ೨ ಮತ್ತು ಗಂಗ ೩ರಲ್ಲಿ ಇದೇ ರೀತಿಯಿದ್ದರೂ ಪೂರ್ವಜನ್ಮಸ್ಮರಣೆಯನ್ನು ಕುರಿತ ಗಂಗನ ಬೇರೊಂದು ಪ್ರತಿಯಲ್ಲಿ ಈ ವಿಷಯ ಸ್ವಲ್ಪ ಮಾರ್ಪಟ್ಟಿದೆ. ಮಾತಂಗಿ ರಾಮುನನ್ನು ಸಂಧಿಸಿದಾಗ "ಮೃತ್ಯು ಬಂದಿದೆ ರಾಮಯ್ಯ ನಿನಗೆ ಯ (ಯಿ ?)ಂದು, ಸತ್ತ ರತ್ನಿಯು ನಾನೆಂದರಿಯಾ, ಅತ್ತ ದಿಳ್ಳಿಯೊಳು ನಾ ಪುಟ್ಟಿ ನಿನ್ನನು ಕೊಲ್ಲ (ಲ್ಲೆ ?) ಮಿತ್ತಾಗಿ ಬಂದಿಹೆನ್ನೆಸೆ (ಗಂಗ ೪, vii, ೩೩೧)" ಎನ್ನುತ್ತಾಳೆ. ಭಟ್ಟರಮಲ್ಲನಾಗಿ ಹುಟ್ಟಿದ್ದ ಸಂಗಾಯಿ "ಹಿಂದಳ ಸಂಗಿಯು ನಾನೆಂದು (ಅದೇ, ೪೦೫-೪೦೬) " ನುಡಿದು ಮಾತಂಗಿಯು ಪೂರ್ವವೃತ್ತಾಂತವನ್ನು ಮತ್ತೆ ಹೇಳುವುದೂ ಉಂಟು.

(iii) ಸಂಧಿಯ ಕಡೆಯಲ್ಲಿ ಆಯಾ ಸಂಧಿಯ ಸಾರವನ್ನು ಸಂಗ್ರಹವಾಗಿ ಹೇಳುವ ಪದ್ಯಗಳು ಗಂಗನ ಕೆಲವು ಪ್ರತಿಗಳಲ್ಲಿಯೂ ಮಹಲಿಂಗಸ್ವಾಮಿಯಲ್ಲಿಯೂ ಕಂಡುಬರುತ್ತವೆ.

ಇದು ಪರನಾರಿ ಸಹೋದರ ರಾಮನಾಥನ
ಪದಕೃತಿಯೊಳಗೊಂದು ಪದನು
ಕದನವ ಗೆಲಿದು ರಾಮುಲದೇವಿಯನು ತಂದ
ಕದನದ ಸಂಧಿ ಸಂಪೂರ್ಣ (ಗಂಗ ೨, vi, ೬೦.)

ತಂದೆಯ ಕೂಡ ಮುನಿದು ರಾಮಯ್ಯನು
ತಂದನು ಬೊಲ್ಲನೆಂಬುದನು
ಇಂದು ದಿಗ್ದೇಶದಿ ಹೆಸರಾದನು ರಾಮ
ನೆಂದೆಂಬ ಸುದ್ದಿಯು ಪೂರಾಯ (ಗಂಗ ೩, ix, ೪೧೫.)

ಧರೆಗಧಿಕ ಹಂಪೆಯ ವರ ಪುಣ್ಯಕ್ಷೇತ್ರದ
ಕರುಣಿಸು ವಿರೂಪಾಕ್ಷ ಲಿಂಗ
ದೊರೆ ರಾಮನೋರ್ಗಲ್ಲ ಅರಸು ರುದ್ರನ ಕಂಡು
ಇರುವ ಠಾವಿಗೆ ಸಂಧಿ ಏಳು (ಮ. ಲಿಂ. vii, ೨೪೬.)

(iv) ಗಂಗನ ಕೆಲವು ಪ್ರತಿಗಳಲ್ಲಿ ಈ ರೀತಿಯ ರಚನೆಗಳು ಸೂಚನಾರೂಪದಲ್ಲಿ ಸಂಧಿಯ ಪ್ರಾರಂಭದಲ್ಲಿಯೇ ಬರುವುದುಂಟು.

ಮುಂದಣ ಸಂಧಿಯ ಅಂದವಾವುದು ಎನೆ
ಕಂದರ್ಪರೂಪ ಶೂಲವನು
ಚಂದದಿ ಹಬ್ಬವ ಮಾಡಿ ತಾ ಕೀರ್ತಿಗೆ
ಬಂದ ಕೃತಿಯ ವಿಸ್ತರಿಪೆ (ಗಂಗ ೧, iii, ೨.)

ಸುರಿತಾಳ ಡಿಳ್ಳಿಂದ ದೇವಗಿರಿಗೆ ಬಂದು
ಸೆರೆಸೂರೆವಿಡಿಯೆ ರಾಯರನು
ಧುರಧೀರ ಸಿಂಗ ಮಲ್ಲಿಪಲ್ಲಿ ದೇಶಕ್ಕೆ
ಬರುವ ಚರಿತೆಯ ಲಾಲಿಪುದು[1] (ಗಂಗ ೫, ii, ೧.)

(v) "ಗಂಗ ೧"ರಲ್ಲಿ ಈಶ್ವರನನ್ನೂ ವಿಷ್ಣುವನ್ನೂ ಕುರಿತ ಪ್ರಹೇಳಿಕೆಗಳು ಸಂಧಿಯ ಪ್ರಾರಂಭದಲ್ಲಿ ಬರುತ್ತವೆ. ಮಹಲಿಂಗಸ್ವಾಮಿಯಲ್ಲಿ, ಈಶ್ವರ, ಗಣಪತಿ ಮುಂತಾದವರನ್ನು ಕುರಿತ ಪ್ರಹೇಳಿಕೆಗಳು ಪ್ರತಿಯೊಂದು ಸಂಧಿಯ ಮೊದಲಿನಲ್ಲಿಯೂ ಬರುತ್ತವೆ.

---

1. "ಗಂಗ ೩" ರಲ್ಲಿ ನಂಜುಂಡನ ಕೃತಿಯಲ್ಲಿ ಒಮ್ಮೊಮ್ಮೆ ಬರುವಂತೆ ಪ್ರತ್ಯೇಕವಾದ ಸೂಚನಾ ಪದ್ಯಗಳೇ ಬರುತ್ತವೆ. ಎಲ್ಲ ಪ್ರತಿಗಳಲ್ಲಿಯೂ ಈ ಲಕ್ಷಣವು ನಿಯತವಾಗಿ ಬಾರದೆ ಇರುವುದರಿಂದ ಇವುಗಳು ಅನ್ಯಕೃತವಿರಬಹುದೆಂದು ತೋರುತ್ತದೆ.

ಶೈಲಜೆ ಕಾಂತನೆ ಕಾವನ ಗೆಲಿದನೆ
ಬಾಲೆಯ ಶಿರದಿ ತಾಳಿದನೆ
ಮೂಲೋಕ ಜನರಿಗೆ ಮುಕ್ತಿಯನೀವನೆ
ಪಾಲಿಸು ಮತಿಗೆ ಮಂಗಳಾ (ಳವ ?) (ಗಂಗ ೧, iii, ೧.)

ಹರಿಯ ವೈರಿಯನೇರಿ ಹರಿಯ ವೈರಿಯ ಕೊಂದು
ಹರಿಯ ಮಗನಿಗೆ ಸಾರುತ್ತಿಹ (?)
ಹರಿಯ ಸುತೆಯ ಕೂಡಿ ಹರಿಯ ಭಂಗಿಸಿದಂಥ
ನರಹರಿಯೆ ಸಲಹೋ ಮೂಜಗವ (ಗಂಗ ೧, iv, ೧.)

ಕಿವಿಯೆರಡು ಇಲ್ಲದೆ ನಯನದಿ ಕೇಳ್ವನ
ಆಭರಣಮಾಡಿ ಧರಿಸಿದನ
ಹೊದಿಯಲ್ಕೆ ಇಲ್ಲದೆ ಗಜಚರ್ಮ ಹೊದ್ದಂತ
ಅಭವ ಕೊಡೆನಗೆ ಸುಮತಿಯ (ಮ. ಲಿಂ. ೨, xiii, ೨.)

ವಿನಾಯಕನನ್ನು ಕುರಿತ ಒಂದು ಪ್ರಹೇಳಿಕೆಯಂತೂ ಎರಡು ಕೃತಿಗಳಲ್ಲಿಯೂ ಒಂದೇ ರೀತಿಯಾಗಿದೆ.

ಕಾಯವೆ ಮೂರು ಕಾಲಾರು ಮಸ್ತಕ ನವ
ಬಾಯಿ ಒಂಬತ್ತು ಬಾಲೆರಡು
ಕಯ್ಗಳು ನಾಲ್ಕು ಕಂಗಳ ರವೆ ಹದಿನೆಂಟು
ವೈಯಿಕ್ಕಿ ನಾನೆರಗುವೆನು (ಗಂಗ ೧, i, ೭.).

ಕಾಯವೆ ಮೂರು ಕಾಲಾರು ಮಸ್ತಕ ನವ
ಬಾಯಿ ಒಂಬತ್ತು ಬಾಲವೆರಡು
ಕರಗಳು ನಾಲ್ಕು ಕಂಗಳು ರವೆ ಹದಿನೆಂಟಕ್ಕೆ
ವೈಯಿಕ್ಕಿ ಮುನ್ನ ಎರಗುವೆನು (ಮ. ಲಿಂ. xix, ೩.)

ಈ ಮೇಲಿನ ಪದ್ಯದ ಭಾವವನ್ನೇ ಬೇರೊಂದು ರೀತಿಯಾಗಿ ಹೇಳಿರುವ ಸಂದರ್ಭವೂ ಉಂಟು.

ವರಕಿವಿ ನಾಲ್ಕು ದೇಹಗಳು ಮೂರಾಗಿ
ಬಾಲಗಳೆರಡು ಕರ ನಾಲ್ಕು
ಆವ ಮೃಗವ ನಾ ಬೇಡುವೆ ನಯನವು ಹದಿನೆಂಟು
ಜಿಹ್ವೆ ಹದಿನಾರರಲಿ ಕೊಡು ಮತಿಯ (ಮ. ಲಿಂ. xvii, ೨.)

**2. ವಂಶಚರಿತ್ರೆ:** ಗಂಗನ ಪ್ರತಿಗಳಲ್ಲಿ ಕುಮಾರರಾಮನ ತಾತನಾದ ಮುಮ್ಮಡಿಸಿಂಗನಿಂದ ಮೊದಲ್ಗೊಂಡು ಸಂಕ್ಷಿಪ್ತವಾಗಿಯೋ ಇಲ್ಲವೇ ವಿಸ್ತಾರವಾಗಿಯೋ ಪೂರ್ವ ವಂಶೀಯರ ಚರಿತ್ರೆ ಬರುವುದು ಉಂಟು. ಈ ವಿವರಗಳು ಏಕರೀತಿಯಾಗಿಲ್ಲದಿದ್ದರೂ ಪ್ರತಿಯೊಂದು ಪ್ರತಿಯಲ್ಲಿಯೂ ಪ್ರಾರಂಭದಲ್ಲಿಯೇ ಬರುವುದನ್ನು ಗಮನಿಸಿದರೆ ಅದರ ಮಹತ್ವವನ್ನು ಕಡೆಗಣಿಸಲಾಗುವುದಿಲ್ಲ.

ಮಹಲಿಂಗಸ್ವಾಮಿಯಲ್ಲಿಯೂ ಕಾವ್ಯದ ಪ್ರಾರಂಭದಲ್ಲಿಯೇ ಕಥೆಗೆ ಹಿನ್ನೆಲೆಯಾಗಿ ಹಲವು ವಿವರಗಳು ಬರುತ್ತವೆ. ಕಾಮಗೇತಿಯ ವಂಶದ ವೀರ ಕಸ್ತೂರಿನಾಯಕನೆಂಬುವನು ಈ ಪೀಳಿಗೆಯ ಮೂಲಪುರುಷನೆಂದೂ, ತರುವಾಯ ಮುಮ್ಮಡಿನಾಯ್ಕ, ಕಂಪಿಲ, ಕುಮಾರರಾಮರು ಉದಿಸಿದರೆಂದೂ ವಿದಿತವಾಗುತ್ತದೆ. ಇಷ್ಟೇ ಅಲ್ಲದೆ, ಕುಮಾರರಾಮನಿಗೆ ಜಟ್ಟಂಗಿರಾಯನೆಂಬ ಮಗನೊಬ್ಬನಿದ್ದನೆಂಬ ಹೆಚ್ಚಿನ ಸಂಗತಿಯೊಂದು ತಿಳಿದುಬರುತ್ತದೆ.

**3. ಗುತ್ತಿಯ ಪ್ರಸಂಗ:** ಗಂಗನ ಪ್ರತಿಗಳಲ್ಲೆಲ್ಲ ಗುತ್ತಿಯ ಜಗತಾಪಿಗೂ (ಜಗದಪ್ಪ) ಕುಮಾರ. ರಾಮನಿಗೂ ಒಂದಲ್ಲ ಒಂದು ನೆಪದಿಂದ ಯುದ್ಧನಾಗುವ ಸಂದರ್ಭವನ್ನು ಚಿತ್ರಿಸಲಾಗಿದೆ [1]

ಮಹಲಿಂಗಸ್ವಾಮಿಯಲ್ಲಿ ಈ ಘಟನೆ ಕೆಲವು ಮಾರ್ಪಾಡುಗಳಿಂದ ಕೂಡಿ ನಿರೂಪಿತವಾಗಿದೆ ಗುತ್ತಿಯ ರಾಜನನ್ನು ಕಸ್ತೂರಿ ಚಾಮಯ್ಯ ಎಂದು ಕರೆದಿದ್ದಾನೆ.[2] ರಾಮನು ಬಲ್ಲಾಳನನ್ನು ಗೆದ್ದ ತರುವಾಯ, ತನಗೆ ಕಪ್ಪಕಾಣಿಕೆಗಳನ್ನು ತಂದು ಒಪ್ಪಿಸದಿದ್ದ ಗುತ್ತಿಯ ರಾಜನ ಮೇಲೆ ದಂಡೆತ್ತಿ ಹೋಗುತ್ತಾನೆ. ಆಗ ಕಸ್ತೂರಿ ಚಾಮಯ್ಯನು, ಮಂತ್ರಿ ರಂಗರಸನ ಮೂಲಕ ರಾಮನೊಂದಿಗೆ ಸಂಧಿ ಮಾಡಿಕೊಳ್ಳುತ್ತಾನೆ (vi, ೧೬-೯೯)

**4 ಬೊಲ್ಲನನ್ನು ತರುವ ಪ್ರಸಂಗ:** ಕುಮಾರರಾಮನ ಪರಾಕ್ರಮವನ್ನು ಸಾರಿ ಹೇಳುವ ಈ ಘಟನೆಯನ್ನು ಪಾಂಚಾಳಗಂಗನ ಎಲ್ಲ ಪ್ರತಿಗಳಲ್ಲಿಯೂ ತಕ್ಕಮಟ್ಟಿಗ ದೀರ್ಘವಾಗಿಯೇ ವರ್ಣಿಸಿದೆ. "ಗಂಗ ೧" ರಲ್ಲಿ ಕುಮಾರರಾಮನು ತನಗೆ ಉತ್ತಮವಾದ ಒಂದು ಅಶ್ವದ ಅಗತ್ಯವಿದೆಯೆಂದು ತಂದೆಗೆ ಹೇಳಿದಂತೆಯೂ, ಕಂಪಿಲನ ಸೂಚನೆಯ ಮೇರೆಗೆ ಓರುಗಲ್ಲಿಗೆ ತೆರಳಿದನೆಂದೂ ಕಾರಣನಿರೂಪಣೆಯಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಉಳಿದ ಪ್ರತಿಗಳಲ್ಲೆಲ್ಲ, ಕುಮಾರರಾಮನು ತಂದೆಯ ಸವಾಲನ್ನು ನೆರವೇರಿಸುವ ಹಟವನ್ನು ತೊಟ್ಟು ಹೊರಟನೆಂದೇ ಹೇಳಿರುತ್ತದೆ. ಎಂದಿನಂತೆಯೇ ಗುಂಡುಬ್ರಹ್ಮಯ್ಯನ ಅನುಗ್ರಹ, ದೇವಿಶೆಟ್ಟಿಲಿಂಗನ ಸಹಾಯಗಳಿಂದ ಈ ಕಾರ್ಯದಲ್ಲಿ ಕುಮಾರರಾಮನು ವಿಜಯವನ್ನು ಸಂಪಾದಿಸುತ್ತಾನೆ. ಪ್ರಾಸಂಗಿಕವಾಗಿ ದೇವಿಶೆಟ್ಟಿಯ ಮೂಲಕ ಬೊಲ್ಲನ ಜೀವನ ವೃತ್ತಾಂತವೆಲ್ಲ ತಿಳಿದುಬರುತ್ತದೆ.

ಈ ಸನ್ನಿವೇಶ ಮಹಲಿಂಗಸ್ವಾಮಿಯಲ್ಲಿಯೂ ಬಹುಮಟ್ಟಿಗೆ ಗಂಗನ ನಿರೂಪಣೆಯಂತೆಯೇ ಚಿತ್ರಿತವಾಗಿದೆ. ಆದರೆ, ಕಂಪಿಲನಿಗೂ ಕುಮಾರರಾಮನಿಗೂ ಬೇಟೆಯ ವಿಷಯದಲ್ಲಿ ಮನಸ್ತಾಪವುಂಟಾಗುತ್ತದೆ. ಮಾತಿಗೆ ಮಾತು ಬೆಳೆದು ಕಂಪಿಲನು "ಬೊಲ್ಲನನ್ನು ತರಬಲ್ಲೆಯಾ?" ಎಂದು ಮಗನಿಗೆ ಸವಾಲು ಹಾಕುತ್ತಾನೆ. ರಾಮನು ಛಲ ತೊಟ್ಟು ವೀರರುದ್ರನೊಂದಿಗೆ ವಿರಸ ಕಟ್ಟಿಕೊಂಡು, ಯುದ್ಧದಲ್ಲಿ ಬೊಲ್ಲನನ್ನು ಪಡೆಯುತ್ತಾನೆ. ಬೊಲ್ಲನ ಮಹತ್ವ, ಗುಂಡುಬ್ರಹ್ಮಯ್ಯನ ಕೃಪೆ, ದೇವಿಶೆಟ್ಟಿಲಿಂಗನ ನೆರವು ಮೊದಲಾದುವುಗಳು ಎಂದಿನಂತೆಯೇ ಬರುತ್ತವೆ (vii, ೪೭-೨೪೯. viii, ೧೩-೨೨೬; ix, ೧೫-೨೬೦).

**5. ಕಳ್ಳರಾಮನ ವೃತ್ತಾಂತ:** ನಿರಪರಾಧಿಯಾದ ಕುಮಾರರಾಮನ ತಲೆಗಾಗಿ, ಎಂದೋ ಅಪರಾಧಿಯಾಗಿಯೋ ಏನೋ ದೇಶಭ್ರಷ್ಟನಾಗಿದ್ದ ಕಳ್ಳರಾಮನು ತನ್ನ ತಲೆಯನ್ನು ಕೊಡುವ ಸಂದರ್ಭ ಗಂಗನ ಕೃತಿಯಲ್ಲಿ ತಪ್ಪದೆ ಬರುತ್ತದೆ. ಈತ ದಾಸೀಪುತ್ರನೆಂದು ಒಂದು ಕಡೆ ಸ್ಪಷ್ಟವಾಗಿ ಹೇಳಿದೆ (ಗಂಗ ೨, ii, ೪೨-೪೩).

---

1. "ಗಂಗ ೧"ರಲ್ಲಿ ಇದರ ವಿವರ ತಪ್ಪಿದ್ದರೂ ವೈಮನಸ್ಯದ ಸೂಚನೆ ಗೋಚರವಾಗುತ್ತದೆ. ಚೆಂಡನ್ನು ಕೇಳಲು ಬಂದ ರಾಮನನ್ನು ಹರಿಯಾಲದೇವಿ "ಗುತ್ತಿಯ ನಾಡನಿರಿದು ಜಗಪ್ರಿಯಗೆ (ಜಗತಾಪಿಗೆ? ಜಗದಪ್ಪಗೆ?) ಹೊತ್ತಿ ಸಾಧ್ಯವ ಮಾಡಿಕೊಳೊ (?) (iv, ೬೭)" ಎಂದು ಹೇಳುತ್ತಾಳೆ.

2. ನಂಜುಂಡನಲ್ಲಿ ಶೂಲದ ಹಬ್ಬಕ್ಕೆ ಬಂದವರಲ್ಲಿ ಗುತ್ತಿಯ ಕಾಚಯ್ಯ ಎಂಬುವನೊಬ್ಬನಿದ್ದನು ಎಂದು ತಿಳಿದುಬರುತ್ತದೆ (xxi, ೮೨). ಹೆಚ್ಚಿನ ಸಂಗತಿಗಳಾವುವೂ ಇಲ್ಲ.

ಇದೇ ಪ್ರಸಂಗವನ್ನು ಮಹಲಿಂಗಸ್ವಾಮಿ ಮತ್ತಷ್ಟು ಮಹಿಮಾತಿಶಯವನ್ನು ಬೆರೆಸಿ ಬಣ್ಣಿಸಿರುತ್ತಾನೆ. ಎಂದಿನಂತೆಯೇ ಬೈಚಪ್ಪನು ರಾಮನಿಗೆ ಪ್ರಾಪ್ತವಾಗಿರುವ ಸಂಕಟವನ್ನು ಖಳರಾಮನಿಗೆ ಹೇಳಲು, ಆತನು "ಹತಗಾಲ ಬಂದಾಗ ಒಡೆಯಗೆ ತಲೆಗೊಡದ ಭಂಟಗೆ ನರಕ ತಪ್ಪುವುದೆ" ಎಂಬ ಕರ್ತವ್ಯಭಾವನೆಯಿಂದ ತನ್ನ ತಲೆಯನ್ನು ಅರ್ಪಿಸಲು ಅಣಿಯಾಗುವನು. ಮಂತ್ರಿ ಶಿರವನ್ನು ಕಡಿಯುವುದೇ ತಡ ಆತನ ಜೀವವನ್ನು ಪುಷ್ಪಕ ವಿಮಾನದಲ್ಲಿ ದೂತರು ಈಶ್ವರನ ಬಳಿಗೆ ಕರೆತರುವರು. ಆಗ ಪಾರ್ವತಿ ಆತನು ಯಾರೆಂದು ಗಂಡನನ್ನು ಕೇಳುವಳು. ಈಶ್ವರನು ಖಳರಾಮನ ವೃತ್ತಾಂತವನ್ನು ತಿಳಿಸುವನು. "ಆತನೂ ರಾಮನ ಜನನವಾದಂದೇ ಶೂಲದ ಮೇಲಿನಿಂದ ಬಿದ್ದ ಪುಷ್ಪದ ಪ್ರಸಾದದಿಂದ ಜನಿಸಿದವನು. ಆತನು ಕಳ್ಳತನ ಮಾಡಿ ಜೀವಿಸುತ್ತಿದ್ದುದರಿಂದ ರಾಜನಿಂದ ಶಿಕ್ಷೆಗೆ ಗುರಿಯಾಗಿದ್ದನು. ಈಗ ಅವನು 'ಪ್ರೀತಿಯಿಂದಲಿ ಕೊಟ್ಟ ಪರಹಿತಕೆ ಪ್ರಾಣವ ಸೇರಿದ ಕೈವಲ್ಯ ಗತಿಯು'" ಎಂದು ಸ್ಪಷ್ಟಪಡಿಸುವನು (xiv, ೬೬–೮೬).

**6. ರಾಮನ ಶಿರಶ್ಛೇದನ ಮತ್ತು ಸಹಗಮನದ ಪ್ರಸಂಗ:** ಬೈಚಪ್ಪನು ರಾಮ ಮತ್ತು ಆತನ ಆಪ್ತರ ತಲೆಗಳೆಂದು ಹೇಳಿ ರುಂಡಗಳನ್ನು ತಂದು ಕಂಪಿಲನಿಗೆ ಒಪ್ಪಿಸುವನಷ್ಟೆ. ಆಗ ರಾಜನು ಮಗನ ಮರಣಕ್ಕಾಗಿ ಒಂದೇ ಸಮನೆ ಪ್ರಲಾಪಿಸುವನು. ರತ್ನಾಜಿ ರಾಮನ ತಲೆಯನ್ನು ಕಂಡು ಮನದಲ್ಲಿಯೇ ಹಿಗ್ಗಿ ಅದನ್ನು ಕಣ್ಣಿಟ್ಟು ನೋಡಲು, ತಾನು ಚಿಕ್ಕಂದಿನಲ್ಲಿ ಮಾಡಿದ್ದ ಗುರುತು ಕಾಣದಿರಲು, ಶಂಕೆಯುಂಟಾಗುವುದು. ಸಂಗಿ ಅವಳಿಗೆ ಸಮಾಧಾನ ಹೇಳುವಳು. ಅನಂತರ ಹರಿಯಾಲದೇವಿ, ಅಕ್ಕ ಮಾರಮ್ಮ, ತಂಗಿ ಸಿಂಗಮ್ಮ ಮತ್ತು ರಾಮನ ಸತಿಯರ ದುಃಖ ಹೇಳತೀರದು. ರಾಮನ ಸತಿಯರು ಕಿಚ್ಚನ್ನು ಬೇಡುವರು. ಕಂಪಿಲನಿಗೆ ಏನೂ ತೋಚದೆ ಮಂತ್ರಿಗೆ ಆ ಹೊಣೆಯನ್ನು ಒಪ್ಪಿಸುವನು. ಬೈಚಪ್ಪನು ಅವರಿಗೆಲ್ಲ ಸಮಾಧಾನ ಮಾಡಿ, ಸತಿಯರಿಗೆ ಆರು ತಿಂಗಳು ದುಃಖವನ್ನು ಸಹಿಸಬೇಕೆಂದು ಬುದ್ಧಿ ಹೇಳಿ ಚಿತೆಯನ್ನೇರ್ಪಡಿಸಿ, ಚಾತುರ್ಯದಿಂದ ಕೆಲಸವನ್ನು ನಿರ್ವಹಿಸುವನು.

ಈ ಒಟ್ಟು ಸನ್ನಿವೇಶವನ್ನು ಮಹಲಿಂಗಸ್ವಾಮಿಯೂ ಇದೇ ರೀತಿಯಾಗಿ ಸಹಜವಾಗಿ ಚಿತ್ರಿಸಿದ್ದಾನೆ. (xiv, ೯೦–೨೦೬).[1]

**7. ನೇಮಿಯ ಎರಡನೆಯ ದಂಡಯಾತ್ರೆಯ ಪೂರ್ವವಿವರ:** ರಾಮನ ಮರಣದ ವೃತ್ತಾಂತ ಸುಲ್ತಾನನಿಗೆ ತಿಳಿಯಲು ಪುನಃ ನೇಮಿಯನ್ನು ಕರೆದು ಕುಮ್ಮಟವನ್ನು ಮುತ್ತುವಂತೆ ಆಜ್ಞಾಪಿಸುವನು. ನೇಮಿಗಾದರೋ ಅಂತಹ ಪರಾಕ್ರಮಿ ಸತ್ತನೆಂಬುದನ್ನು ನಂಬಲು ಸಾಧ್ಯವಿಲ್ಲ. ಸುಲ್ತಾನನು ಕುಪಿತನಾಗಲು, ವಿಷಯವನ್ನು ತಿಳಿದು ಬರಲು, ಗೂಢಚಾರರನ್ನು ಕುಮ್ಮಟಕ್ಕೆ ಕಳುಹಿಸುವನು. ಅವರು ಜೋಗಿಗಳಂತೆ ಊರಿನಲ್ಲಿ ಸುಳಿದಾಡಿ, ವಿಷಯವನ್ನು ಕೇಳಿ ತಿಳಿದುಕೊಂಡು ಬಂದು ವರದಿಮಾಡುವರು. ಅನಂತರ ಸೇನೆ ಪ್ರಯಾಣಮಾಡುವುದು. ಮಾರ್ಗಮಧ್ಯದಲ್ಲಿ ಬೀಡಿನಲ್ಲಿ ಶಕುನ ನೋಡುವರು. ಟಗರು ಮತ್ತು ಹುಂಜಗಳ ಕಾಳಗವನ್ನು ಏರ್ಪಡಿಸಿ, ಬಲಿಷ್ಠವಾದ ಪ್ರಾಣಿಗೆ ನೇಮಿಯ ಹೆಸರನ್ನೂ, ದುರ್ಬಲವಾದ ಪ್ರಾಣಿಗೆ ರಾಮನ ಹೆಸರನ್ನೂ ಇಟ್ಟು ಹೋರಾಡಿಸುವರು. ರಾಮನ ಹೆಸರಿಗೇ ಜಯ ಲಭಿಸುವುದು. ಸುಲ್ತಾನನ ಆಗ್ರಹಕ್ಕೆ ಗುರಿಯಾಗಲಾರದೆ ನೇಮಿ ದಂಡಯಾತ್ರೆಯನ್ನು ಮುಂದುವರಿಸುವನು. ಲೂಟಿಮಾಡುತ್ತ ಬರುತ್ತಿದ್ದ ತುರುಕರ ಹಾವಳಿಗೆ ಹೆದರಿ ಊರಿನ ಮಂದಿ ತಮ್ಮ ತಮ್ಮ ಸಾಮಾನುಗಳನ್ನು ಹೊತ್ತುಕೊಂಡು ಗೂಳೆಯ ತೆಗೆಯುವರು.

ಮಹಲಿಂಗಸ್ವಾಮಿ ಇದೇ ವಿವರವನ್ನು ಅನುಸರಿಸಿದ್ದಾನೆ (xv, ೯–೧೫೬).

---

1. ನಂಜುಂಡನಲ್ಲಿ ದೇವದೂತ ಮತ್ತು ಪಡಿರೂಪಗಳ ಸೃಷ್ಟಿ ಬರುತ್ತದೆ.

**8. ತೆಲುಗರ ದ್ರೋಹ :** ಈ ಅಂಶಕ್ಕೆ ಪಾಂಚಾಳಗಂಗನಲ್ಲಿ ಸಾಕಾದಷ್ಟು ಪ್ರಾಧಾನ್ಯ ದೊರೆತಿದೆ. ಮಾತಂಗಿ ರಾಮನ ಸೇನೆಯನ್ನು ಜಯಿಸಲಾರದೆ ಹಿಂತಿರುಗುತ್ತಿರುವಾಗ, ರಾಮನ ದಂಡಿನಲ್ಲಿದ್ದ ಕೆಲವು ತೆಲುಗು ನಾಯಕರು ಆಕೆಗೆ ಸಹಾಯಮಾಡುವುದಾಗಿ ಹೇಳಿಕಳುಹಿಸುತ್ತಾರೆ. ಅದೇ ವೇಳೆಗೆ, ಅವಳು ಮತ್ತೆ ಕೋಟೆಗೆ ಮುತ್ತಿಗೆ ಹಾಕಲು, ಕೋಟೆಯ ಬಾಗಿಲುಗಳನ್ನು ತೆಗೆಯುವರು. "ಗಂಗ ಳ"ರಲ್ಲಂತೂ ತೆಲುಗರು ಮಾತಂಗಿಗೆ ಎರಡು ಬಾರಿ ಬಾಗಿಲುಗಳನ್ನು ತೆಗೆದರೆಂದೂ, ರಾಮನು ಕಡೆಗಾಲದಲ್ಲಿ ತೆಲುಗರು ದ್ರೋಹ ಮಾಡಿದರೆಂದು ಕೂಗಿ ಹೇಳಿದನೆಂದೂ ನಿರೂಪಿಸಲಾಗಿದೆ (vii, ೧೨೭-೧೨೯ ; ೨೩೨-೨೩೬ ; ೩೧೭)

ಮಹಲಿಂಗಸ್ವಾಮಿ ಈ ಘಟನೆಗೆ ಮತ್ತೊಂದು ಹೊಸ ಅಂಶವನ್ನು ಸೇರಿಸಿದ್ದಾನೆ. ರತ್ನಾಜಿಯ ಮಗನಾದ ಯಲ್ಲರಸನು ರಾಮನಿಗೆ ದ್ರೋಹಮಾಡಿ, ಮಾತಂಗಿಯನ್ನು ಬರಮಾಡಿಕೊಂಡನೆಂದು ಹೇಳಿರುತ್ತಾನೆ (xviii. ೧೭೪-೧೮೫). ಈ ಅಕಾರ್ಯಕ್ಕಾಗಿ ಅವನ ತಲೆ ಉರುಳುವುದು.

**9. ಇತರ ಕೆಲವು ಅಂಶಗಳು :** ಸಣ್ಣ ಸಣ್ಣ ಹೋಲಿಕೆಗಳೂ ಸಾಕಾದಷ್ಟಿವೆ. ರತ್ನಾಜಿ ಸಂಗಿಯ ಮೂಲಕ ರಾಮನಿಗೆ ಸುಗಂಧದ್ರವ್ಯವನ್ನು ಕಳುಹಿಸುವ ನೆಪದಲ್ಲಿ ತನ್ನ ಉಂಗುರವನ್ನೂ ಮರೆಸಿ ಕಳುಹಿಸುವ ಸಂದರ್ಭ ಎರಡು ಕೃತಿಗಳಲ್ಲಿಯೂ ಇದೆ (ಗಂ. ೧, iv, ೨೨೧-೨೨೮ ; ಗಂ. ೩, xxvii, ೬೨-೬೪ ; ಗಂ. ೪, iii, ೪೭೭-೪೯೩ ; ಮ. ಲಿಂ. xi, ೭೫-೮೮).[1] ನೆಲಮಾಳಿಗೆಯಿಂದ ಕರೆದು ತಂದ ರಾಮನನ್ನು ಹೊಸ ರಾವುತನೆಂದೂ, ಇಲ್ಲವೇ ಕಲ್ಯಾಣದ ಕಡೆಯಿಂದ ಬಂದವನೆಂದೂ ಬೈಚಪ್ಪನು ಕಂಪಿಲನಿಗೆ ಹೇಳುವನು (ಗಂ. ೩, xxxii, ೬೯ ; ಗಂ. ೫, xiv, ೩-೮ ; ಮ. ಲಿಂ. xvii. ೧೫೭). ರಾಮನು ರತ್ನಾಜಿಯ ಮನೆಯನ್ನು ಪ್ರವೇಶಿಸುತ್ತಿದ್ದಾಗ ಪಂಜರದ ಗಿಳಿ ಅವನನ್ನು ಎಚ್ಚರಿಸುವುದು (ಗಂ. ೧, v, ೮೪-೯೧ ; ಗಂ. ೨, xvii, ೫೭-೭೧ ; ಗಂ. ೩, xxviii, ೯೪-೯೬ ; ಗಂ. ೪. iv, ೧೫೦-೧೭೦ ; ಗಂ. ೫, x, ೬೨-೭೮). ಇದು ಕುಮಾರರಾಮನು ಹುಳಿಯಾರು ಮಾರಭೂಪಾಲನನ್ನು ಗೆದ್ದಾಗ ಕಾಣಿಕೆಯಾಗಿ ಪಡೆದ ಗಿಳಿ. ಮಹಲಿಂಗಸ್ವಾಮಿ ಈ ಯುದ್ಧದ ಪ್ರಸಂಗವನ್ನು ಬಿಟ್ಟಿದ್ದರೂ ಈ ಗಿಳಿಯ ಸೂಚನೆಯನ್ನು ಬಿಟ್ಟಿಲ್ಲ (ಮ. ಲಿಂ., xii, ೧೧೦-೧೨೧). ಆದರೆ ಈ ಗಿಳಿಯನ್ನು "ಹಳೆಯ ಬೀಡಿನೊಳು ಹೋಗಿ ಕೈಗಾಣಿಕೆ ತಂದ ರಣರಾಮ" ಎಂದು ಸ್ವಲ್ಪ ಬದಲಾಯಿಸಿ ಹೇಳಿರುತ್ತಾನೆ. ಇದರಂತೆಯೇ, ಮಹಲಿಂಗಸ್ವಾಮಿ ಶೂಲದ ಹಬ್ಬದ ಪ್ರಸಂಗವನ್ನು ನಿರೂಪಿಸದಿದ್ದರೂ, ರಾಮನು ಸತ್ತನೆಂಬ ಸುದ್ದಿಯನ್ನು ಕೇಳಿದಾಗ ಆತನ ಸಹೋದರಿ "ಶೂಲದ ಹಬ್ಬಕ್ಕೆ ಯಾರು ಕರೆವರು ನನ್ನ ಮೇಲೆ ನೂಲುಂಡೆಯವ ಗೌರಿಯ...." (xiv. ೧೫೫) ಎಂದು ದುಃಖಿಸುವುದು, ಗಂಗನ ಪ್ರತಿಗಳಲ್ಲಿರುವ "ಶೂಲದ ಹಬ್ಬಕಿನ್ನಾರ ಮನೆಗೆ ಹೋಹೆ [ವು], ಮೇಲೆ ಗೌರಿಯ ನೋಂಪಿಯನು ಲೀಲೆಯಿಂದೊಲಿದು ಮಾಡಿಸುವ ಕಂಪಿಲ ಎಂದು ಕಾಲಮೇಲ್ಬಿದ್ದು ಹೊರಳಿದಳು" ಎಂಬುದನ್ನು ಹೋಲುತ್ತದೆ. ರತ್ನಾಜಿಯ ಸಾವನ್ನು ಕೇಳಿದ ಕಂಪಿಲನು ಉದಾಸೀನನಾದನೆಂದು ಇಬ್ಬರು ಕವಿಗಳೂ ಹೇಳಿರುತ್ತಾರೆ.

**10. ಪದ್ಯಸಾಮ್ಯ :** ಈ ಕೆಳಗೆ ಆರಿಸಿಕೊಟ್ಟಿರುವ ಕೆಲವು ಪದ್ಯಗಳು ಎರಡು ಕೃತಿಗಳಲ್ಲಿಯೂ ಕಂಡು ಬರುತ್ತವೆ.

(i) ಚಿಕ್ಕಂದು ನಿನಗೆ ಕೇಳದ ಹೆಣ್ಣು ರಾಮಯ್ಯ
ಸೊಕ್ಕಿ ಕಂಪಿಲ ತಂದ ತನಗೆ
ಚಿಕ್ಕಮ್ಮನಲ್ಲವೊ ನಿನಗೆ ನಾ ಸೋದರ
ಅತ್ತೆ (?) ಯ ಮಗಳು ಕಾಣಯ್ಯ (ಗಂ. ೪, iv, ೨೨೧.)

---

1. ಈ ಪ್ರಸಂಗಕ್ಕೆ ಸಂಬಂಧಿಸಿದ ಕೆಲವು ಪದ್ಯಗಳು ಗಂಗ ೩ರಲ್ಲಿಯೂ ಮಹಲಿಂಗಸ್ವಾಮಿಯಲ್ಲಿಯೂ ಒಂದೇ ತೆರನಾಗಿವೆ.

ಚಿಕ್ಕಂದು ಮೊದಲು ನಿನಗೆ ತಕ್ಕಂತ ಹೆಣ್ಣನು
ಸೊಕಿ (?) ಕಂಪಿಲ ತನಗೆ ತಂದ
ಚಿಕ್ಕಮ್ಮನಲ್ಲವೊ ನಿನಗೆ ಸೋದರ
ಅತ್ತೆಯ ಮಗಳು ಕಾಣಯ್ಯ (ಮ. ಲಿಂ. xii, ೧೫೫.)

(ii) ತಂದೆಯೇರುವ ದಂಡಿಗೆ ಪಲ್ಲಕ್ಕಿಯ
ಕಂದರೇರುವರೆ ಧರೆಯೊಳಗೆ
ಕುಂದು ಕೊರತೆಯಿಲ್ಲ ಇದಕೆ ಚೆನ್ನಿಗರಾಮ
ಒಂದಾಗಿ ಕೂಡುವ ನಡೆಯೋ (ಗಂ. ೧, v, ೧೧೩.)

ತಂದೆಯೇರುವ ಅಂದಣ ಪಲ್ಲಕ್ಕಿಯ
ಕಂದರೇರುವರೆ ಧರೆಯೊಳಗೆ
ಕುಂದು ಕೊರತೆಯಿಲ್ಲ ಇದಕೆ ಚೆನ್ನಿಗರಾಮ
ಒಂದಾಗಿ ಕೂಡುವ ನಡೆಯೋ (ಮ. ಲಿಂ. xii, ೧೫೯.)

(iii) ಪೊಡವಿಯೊಳಗೆ ಗೋವಿನ ಜಲ್ಮ (ನ್ಮ ?) ಉತ್ತಮ
ನಡೆವುವೆ ವಾಯು ವರ್ತನೆಯು
ಒಡನೆ ಹುಟ್ಟಿದನೆಂ (ವೆಂ ?) ದು ಕೂಡದಿಹವೆ ಕೇಳು
ನುಡಿವೆಯ ಧರ್ಮಶ್ರವಣವ (ಗಂ. ೧, v, ೧೧೫.)

ಪೊಡವಿಯೊಳಗೆ ಗೋವಿನ ಜಲ್ಮ (ನ್ಮ ?) ಉತ್ತಮ
ನಡೆವಂತ್ತೆ (?) ತಾ (ವಾ ?) ವೆ ವರ್ತನೆಯು
ಒಡಹುಟ್ಟಿದವರೆಂದು ಕೂಡದಿಹುದೆ ಕೇಳು
ಕಡುಗಲಿ ಚೆನ್ನಿಗರಾಮ (ಮ. ಲಿಂ. xii, ೧೬೨.)

(iv) ಅಕ್ಕ ಮಾರಮ್ಮ ಬಂದಳು ಕೇಳಿ ಸುದ್ದಿಯ
ಇಕ್ಕಿದೆಯಲ್ಲೊ ಅಪ್ಪ ಎನುತ
ಮಿಕ್ಕಿತೆ ನಿನ್ನ ವಾಸಿಯು ಕಲ್ಪತರುವ ಒಂ
ದೆಕ್ಕೆಗಾಗಿಯು ಕಡಿಸುವರೆ (ಗಂ. ೧, v, ೨೧೦)

ಅಂಬಲಿಗಾಗಿ ಅಮೃತಾನ್ನವ ಚೆಲ್ಲಿದೆ
ಡೊಂಬತಿಗಾಗಿ ರಾಮನನು
ನಂಬಿಸಿ ಕೊರಳ ಕೊಯ್ಸುವರೆ ಅಪ್ಪಾಜಿ ನೀ
ಸಂದೆ (?) ಹೀಗೆ ಮಾಡುವರೆ (ಗಂ. ೧, v, ೨೧೨.)

ಅಂಬಲಿಗಾಗಿ ಅಮೃತವ ಚೆಲ್ಲಿದೆ
ಡೊಂಬತಿಗಾಗಿ ಅಣ್ಣಯ್ಯನ
ತಿಂಬೋರೆ ಅಪ್ಪಾಜಿ ಮಿಂಡರಾಗಾಳೆಯ (?)
ದೊಂದಿಯ ಕಟ್ಟಿ ಸುಡಿಸದೆ (?) (ಮ. ಲಿಂ. xiv, ೧೪೯.)

ಎಕ್ಕೆಯ ಗಿಡಕಾಗಿ ಕಲ್ಪವೃಕ್ಷವ ಕಡಿವರೆ
ತೊತ್ತು ಮುಂಡೆಯ ಮಾತ ಕೇಳಿ
ಚಕ್ರಧರನ ಸುತನ ಮರಸಿಪ್ಪ ಚೆನ್ನನ ಕೊಂದೆ
ದಿಕ್ಕಾರು ಮುದಿಯ ಮನೆತನಕೆ (ಮ. ಲಿಂ. xiv, ೧೫೦.)

(v) ಗಂಡನೆ ಗತಿಮತಿ ಗಂಡನೆ ಕುಲದೈವ
ಗಂಡನೆ ಪ್ರಾಣೇಶನೆನುತ
ಗಂಡ ಉದ್ದಂಡ ರಾಮನ ಬಿಟ್ಟು ನಾವಿನ್ನು
ಮುಂಡೆಗೂಳುಂಬುವರಲ್ಲ (ಗಂ. ೩, xxx, ೧೧೬.)

ಗಂಡನೆ ಗತಿಮತಿ ಗಂಡನೆ ಮನೆದೈವ
ಗಂಡನೆ ಪ್ರಾಣದೊಲ್ಲಭನು
ಗಂಡರ ಗಂಡ ಉದ್ದಂಡ ರಾಮನ ಬಿಟ್ಟು
ರಂಡೆಯ ಬಾಳು ಬಾಳುವರೆ (ಮ. ಲಿಂ. xiv, ೧೬೫.)

(vi) ಅರಿರಾಯ ಕದನ ಪ್ರಚಂಡ ಚೌಪಟಮಲ್ಲ
ಧುರಧೀರ ರಾಮನಾಥನನು
ದೊರೆ ಕಂಪಿಲರಾಯ ಕೊಲಿಸಿದ ಸುದ್ದಿಯು
ಹರಹಿತು ಮೂಜಗದೊಳಗೆ (ಗಂ. ೧, vi, ೪.)

ಸತ್ತ ರಾಮನು ಎಂದು ದಿಕ್ಕು ದೇಶಕೆ ಸುದ್ದಿ
ಹತ್ತೆಂಟು ಗಾವುದ ಹರಿಯೆ
ದೊರೆಯು ಕಂಪಿಲರಾಯ ಕೊಂದನೆಂಬುವ ಸುದ್ದಿ
ಹರಹಿತು ಮೂರು ಲೋ[ಕ]ದೊಳು (ಮ. ಲಿಂ. xv, ೪.)

ಅರಿಯ ಕದನ ಪ್ರಚಂಡ ಚವುಪಟ ಮಲ್ಲ
ಧುರಧೀರ ರಾಮ ಸತ್ತುದನು
ಕನಲಿ ದುಃಖವ ಮಾಡುತ ಊರ ಪ್ರಜೆಯೆಲ್ಲ
ಅನುದಿನದಲ್ಲಿ ಇರುತಿಹರು (ಮ. ಲಿಂ. xv, ೫.)

(vii) ನಿಂದಲ್ಲಿ ನಿಲ್ಲದೆ ಬಂದು ಬೇಹಿನ ಭಟರು
ಬಂದಾರು ದಿವಸ ಬೇಗದಲಿ
ತಂದೆಯು ಮಗನ ಕೊಲಿಸಿರ್ದು ನಿರ್ಧರ
ವೆಂದು ಸುದ್ದಿಯನಾರೈದು (ಗಂ. ೫, xiii, ೧೩.)

ಅಲ್ಲಲ್ಲಿ ಕೇಳುತ ಅಲ್ಲಲ್ಲಿ ನಿಲ್ಲುತ
ಅಲ್ಲಲ್ಲಿ ಗುಜುಗುಜು ಎಡೆಯು
ಅಲ್ಲಲ್ಲಿ ಸುದ್ದಿಯ ನಿರ್ಧರಗಳ ಕೇಳಿ
ಅಲ್ಲಿ ಹೊಕ್ಕರು ಕುಮ್ಮಟವನು (ಗಂ ೫, xiii, ೧೪.)

ನಿಲ್ಲದೆ ನಿಂದಲ್ಲಿ ಬಂದರು ದಿನದಿನಕೆ
ತಿಂಗಳಾದರೊಂದು ಪಕ್ಷ
ಮುಂದಿನ್ನು ತುಳಿದರು ಕುಮ್ಮಟದ ಕೊನೆರಾಜ್ಯ
ಬಂದು ಹೊಕ್ಕರು ತಿಳುಹುತಲಿ (ಮ. ಲಿಂ. xv, ೨೫.)

ಕೇಳುವರಲ್ಲಲ್ಲಿ ಕಾಣದವರಂದದಿ
ಬಾಲನೊ ರಜ(ಣ?)ವಿಜಯ ಪಾಲ
ಎಲ್ಲ ತಿಳಿದರೆ ಒಂದೆ ನಿರ್ಧರವಾಗಿದೆ
ತಾವಾಗಿ ಹೊಕ್ಕರು ಕುಮ್ಮಟವ (ಮ. ಲಿಂ. xv, ೨೬.)

(viii) ಇಳಿಯಿತು ಬೇಗಲೆನ್ನೆದೆಯ ಮೇಲಣ ಗುಂಡು
ಕಳೆಯಿತು ಕಂಗಳ ಮುಳ್ಳು
ಉಳಯಿತು ಲಜ್ಜೆಯು ಬೆಳೆಯಿತು ಧೈರ್ಯವು
ಹೊಳೆಯಿತು ಮನದ ಪ್ರತಾಪ (ಗಂ. ೧, vi, ೨೮.)

ಇಳಿಯಿತು ಈಗ ಎನ್ನೆದೆಯ ಮೇಲಣ ಗುಂಡು
ಕಳಹಿತು ಕಾಲ ಮುಳ್ಳುಗಳ
ಮನೆ ಹೇಡಿ ಎಲೆ ಮಂತ್ರಿ ನಿನಗೆ ನಿರ್ಧರವೇನು
ನಡಸಯ್ಯ ಈ ಮೇಲೆ ದಂಡ (ಮ. ಲಿಂ. xv, ೩೫.)

(ix) ಎಲ್ಲಿಗಾದರು ನಮ್ಮ ಕಳುಹಿಸಿ ಬೇಗದಿ
ಬಲ್ಲಿದ ರಾಮನ ಮೇಲೆ (?)
ಎಲ್ಲಿಗಾದರು ಪೋಗಿ ಕಷ್ಟವ ಮಾಡೇವು
ಮತ್ತಲ್ಲಿಗೆ ಬೇಡ ಕುಮ್ಮಟಕೆ (ಗಂ. ೧, viii, ೧೮.)

ಎಲ್ಲಿಗಾದರು ಕಳುಹು ಒಲ್ಲೆ ಎಂಬುವರಲ್ಲ
ಖುಲ್ಲರಾಮನ ಮೇಲೆ ಬೇಡ
ಅಲ್ಲಿ ಅಳಿವುದು ಏನು ಇಲ್ಲಿಯೆ ಹೊಡೆಸಯ್ಯ
ಒ (ಬ?)ಲ್ಲೆವು ಯಮನೂರ ಹಾದಿ (ಮ. ಲಿಂ. xviii, ೨೦.)

(x) ಸುಣ್ಣ ಸಾಸಿವೆಯ ಒಡಲೊಳು ಹೊಯ್ದಂತೆ
ಕಣ್ಣೊಳು ದಸಿಯ ನೆಟ್ಟಂತೆ
ಸುಣ್ಣದ ಕಲ್ಲು ನಟ್ಟ ನೀರೊಳು ಬಿದ್ದಂತೆ
ಅಣ್ಣ ಕಾಟಣ್ಣ ಹೊರಳಿದನು (ಗಂ. ೫, xv, ೧೫೫.)

ಸಾಸಿವೆ ಹಿಟ್ಟನು ತನುವಿಗೆ ವೈದಂತೆ
ನಯನಕ್ಕೆ ದಸಿಯು ಬಲಿದಂತೆ
ಹಲವು ದುಃಖದಿ ಕಾಟ ಭೋರ್ಗರೆವುತ
ಮ (?) ದೊಳು ವರಗಿದ ಪಾದದ ಅಡಿಗೆ (ಮ. ಲಿಂ. xix, ೧೨೯.)

ಈ ಮೇಲ್ಕಂಡ ಪದ್ಯಗಳು ಇಲ್ಲಿ ಆರಿಸಿಕೊಂಡಿರುವ ಗಂಗನ ಎಲ್ಲ ಪ್ರತಿಗಳಲ್ಲಿಯೂ ಹಲಕೆಲವು ಪಾಠಾಂತರಗಳೊಂದಿಗೆ ಕಂಡುಬರುತ್ತವೆ. ಮಹಲಿಂಗಸ್ವಾಮಿಯ ರಚನೆಯನ್ನು ಯಾವುದು ಹೆಚ್ಚಾಗಿ ಹೋಲುತ್ತದೆಯೋ ಅಂಥದನ್ನು ಮಾತ್ರ ಇಲ್ಲಿ ಆರಿಸಿಕೊಳ್ಳಲಾಗಿದೆ. ಈ ಉದಾಹರಣೆಗಳಲ್ಲಿ ಕೆಲವಲ್ಲಿ ಭಾಷಾಸಾದೃಶ್ಯವಿದ್ದರೆ, ಉಳಿದ ಕೆಲವಲ್ಲಿ ಭಾವವನ್ನು ಅನುಸರಿಸಿ ಬರೆದಿರುವಂತಿದೆ. ಮೊದಲನೆಯ ಅಂಶವನ್ನು ಪ್ರತಿಕಾರರಿಗೆ ಆರೋಪಿಸಬಹುದಾದರೂ, ಎರಡನೆಯ ಲಕ್ಷಣವನ್ನು ಗಮನಿಸಿದರೆ ಕವಿಗೆ ಗಂಗನ ಕೃತಿಯ ಪರಿಚಯವಿದ್ದರೂ ಇರಬಹುದು ಎಂದು ಸಂದೇಹವುಂಟಾಗುತ್ತದೆ.

## ನಂಜುಂಡನಲ್ಲಿ ಕಂಡುಬರುವ ವಿಶೇಷಾಂಶಗಳು

(i) ಕಂಪಿಲನ ಮಕ್ಕಳಲ್ಲಿ ಅಣ್ಣ ಭೈರವದೇವನೆಂಬ ಒಬ್ಬ ಯುವರಾಜನಿದ್ದನೆಂದು ತಿಳಿದುಬರುತ್ತದೆ. ಈತನ ಪಾತ್ರಕ್ಕೆ ಕಾವ್ಯದಲ್ಲಿ ಸ್ಥಾನ ಎಲ್ಲದೆ ಇಲ್ಲ. ಕುಮಾರರಾಮನು ಅಜ್ಞಾತನಾಗಿರುವ ಸಂದರ್ಭದಲ್ಲಿ ನೇಮಿ ದಂಡೆತ್ತಿಬರಲು, ಕಂಪಿಲನು ಭಯಪಡುವನು. ಆಗ ಅಣ್ಣ ಭೈರವದೇವನು ತಮ್ಮನ ಹೆಸರನ್ನು ಹೇಳಿ ತಾನು ಯುದ್ಧಮಾಡುವುದಾಗಿ ತಂದೆಗೆ ಧೈರ್ಯ ಹೇಳುವನು (v. ೨೨; xxxvii, ೯೦–೯೮).

(ii) ರತ್ನಾಜಿ ಸೂರ್ಯವಂಶದಲ್ಲಿ ಹುಟ್ಟಿದವಳೆಂದು ಒಂದು ಮಾತಿನಲ್ಲಿ ಹೇಳಿ ಮುಗಿಸಿರುತ್ತಾನೆ. (vii, ೧).

(iii) ರಾಮನ ದಿವ್ಯಾಶ್ವವು ಅಯೋನಿಜವೆಂದು ವರ್ಣಿತವಾಗಿದೆ. ಅದನ್ನು, ಅಂದಿನ ವೀರರುದ್ರ, ಬಲ್ಲಾಳ, ಸುಲ್ತಾನರೂ ಹಿಡಿಯಲು ಅಶಕ್ತರಾಗುವರು. ಅದನ್ನು, ರಾಮನ ಅಪೇಕ್ಷೆಯ ಮೇರೆಗೆ ಗೋವೆಯ ವರ್ತಕನೊಬ್ಬನಿಂದ ಕಂಪಿಲನು ಕೊಂಡುಕೊಳ್ಳುವನು. ಆಗ ಆತನು ಅದು ಹುತ್ತದಿಂದ ಉದ್ಭವಿಸಿಬಂತೆಂದೂ, ಅದರ ಜೊತೆಯಲ್ಲಿಯೇ ಕೆಲವು ದಿವ್ಯಾಯುಧಗಳೂ ದೊರೆತುವೆಂದೂ ವಿಶದಪಡಿಸಿ, ಎಲ್ಲವನ್ನೂ ರಾಮನಿಗೆ ಒಪ್ಪಿಸುವನು. ದೇವಲೋಕದಲ್ಲಿ ಅರ್ಜುನನು ತನ್ನ ಜನ್ಮದ ಬಗ್ಗೆ ಈಶ್ವರನೊಂದಿಗೆ ಮಾತನಾಡುವಾಗ, ದೇವರು, ಅವನಿಗೆ ಭೂಲೋಕದಲ್ಲಿ ನೆರವಾಗಿ ಇಂದ್ರನ ಉಚ್ಚೈಃಶ್ರವಸ್ಸಿನ ಅಂಶವು ಕುದುರೆಯಾಗಿಯೂ, ಕೃಷ್ಣನ ಶಾರ್ಙ್ಗವೂ, ನಕುಲನ ಬಲ್ಲೆಹವೂ, ಸಹದೇವನ ಖಡ್ಗವೂ, ಲಭಿಸುವುದೆಂದು ಇತ್ತಿದ್ದ ಭರವಸೆ ಈ ಮೂಲಕ ಫಲಿಸುವುದು. ರಾಮನ ಕಡೆಗಾಲದ ಮುನ್ಸೂಚನೆಯೋ ಎಂಬಂತೆ ಆ ದಿವ್ಯವಾಜಿ ರಾಮನು ಕೆಳಕ್ಕೆ ಇಳಿಯುವುದೇ ತಡ ಹಠಾತ್ತನೆ ರಣರಂಗದಲ್ಲಿಸಾಯುವುದು (ix, ೨೩–೧೧೧; xlv, ೪೮–೫೦).

(iv) ಯುದ್ಧಗಳಲ್ಲಿ ಕರಿಪತಿ ಕಪಿಲೇಶ್ವರನು ಕಂಪಿಲನ ಮೇಲೆ ದಂಡೆತ್ತಿ ಬರುವುದು ತುಂಬ ವಿಶಿಷ್ಟವಾಗಿದೆ (xvi, ೧–೭೪).

(v) ಸುಲ್ತಾನನು, ರಾಮನು ತನ್ನ ಮಗಳನ್ನು ಮದುವೆಯಾಗಬೇಕೆಂದೂ ಆದಕ್ಕೆ ಸಮ್ಮತಿಸಿದಲ್ಲಿ ಬಿದಿರೆ, ಸಾಗರ, ನಿಂಬಾಪುರ, ಜಂಬುಖಂಡಿ, ರಾಯಚೂರುಗಳನ್ನು ಬಳುವಳಿಯಾಗಿ ಕೊಡುವೆನೆಂದೂ ಹೇಳಿ ಕಳುಹಿಸುವನು. ಕಂಪಿಲನು ನಿರಾಕರಿಸುವನು. ಅನಂತರ ಸುಲ್ತಾನನು ಸ್ವಯಂವರವನ್ನೇನೋ ಏರ್ಪಡಿಸುವನು. ಆಕೆ ಯಾರನ್ನೂ ಒಪ್ಪುವುದಿಲ್ಲ. ಇದರಿಂದ ಸುಲ್ತಾನನಿಗೆ ಏನಾದರೂ ಮಾಡಿ ರಾಮನನ್ನು ಹಿಡಿತರಿಸಿಯಾದರೂ ಮಗಳ ಬಯಕೆಯನ್ನು ನೆರವೇರಿಸಬೇಕು ಎನ್ನಿಸುವುದು. ಕಡೆಗೂ ಈ ಕಾರ್ಯ ಕೈಗೂಡುವುದಿಲ್ಲ. ರಾಮನ ರುಂಡವನ್ನು ಕಂಡಕೂಡಲೆ ಆಕೆ ಪ್ರಾಣತ್ಯಾಗ ಮಾಡುವಳು. ಸುಲ್ತಾನನು ತುಂಬ ನೊಂದುಕೊಂಡು ಗೋರಿಯನ್ನು ನಿರ್ಮಿಸುವನು (xvii, ೬೪–೧೦೪; xlvii, ೯೧–೯೪).

(vi) ಸುಲ್ತಾನನು, ವೀರರುದ್ರನ ಮೂಲಕ ಕಂಪಿಲನನ್ನು ಜಯಿಸಬೇಕೆಂದು ಬಗೆದು, ವೀರರುದ್ರನನ್ನು ಗೆದ್ದು ಕರೆತರುತ್ತಿರಲು ಆತನು ತನಗಾದ ಅಪಮಾನವನ್ನು ಸಹಿಸಲಾರದೆ ಸೆರೆಮನೆಯಲ್ಲಿಯೇ ಸಾಯುವುದು ವಿಚಾರಾರ್ಹವಾದ ಸಂಗತಿ (xvii, ೧೧೧–೧೨೫).

(vii) ಮುಂಗುಲಿರಾಯನು ಟಾಕಿನ ಸಿಂಗಾಡಿಯನ್ನು ಸುಲ್ತಾನನಿಗೆ ಕಳುಹಿಸಿ ಪರತ್ತನ್ನು ಹಾಕುವುದೂ, ಆಗ ಅದನ್ನು ಬಾದುರನು ಹೆದೆಯೇರಿಸುವುದೂ, ಅದೇ ಕಾರಣದಿಂದ ಇತರ ಖಾನ ಮಲ್ಲುಕರ ಅಸೂಯೆಗೊಳಗಾಗಿ ಅವನು ದೇಶಭ್ರಷ್ಟನಾಗುವುದೂ ಸೋಜಿಗವಾಗಿದೆ (xvii, ೫೧–೧೫೨).

(viii) ಕುಮಾರರಾಮನು ವಿನೋದಾರ್ಥವಾಗಿ ಬೆಳುದಿಂಗಳ ರಾತ್ರಿಯಲ್ಲಿ ಸೂಳೆಗೇರಿಯಲ್ಲಿ ಸುತ್ತಾಡಿ ಬರುವುದು ನಂಜುಂಡನ ಸಂಪ್ರದಾಯಪ್ರಿಯತೆಗೆ ಒಂದು ನಿದರ್ಶನವಾಗಿದೆ (xxviii, ೧–೧೦೮).

(ix) ಬೈಚಪ್ಪನು ಕುಮಾರರಾಮನನ್ನು ರಕ್ಷಿಸಲು ಇಂದ್ರಜಾಲವನ್ನು ಆಶ್ರಯಿಸುವುದು ವಿಶಿಷ್ಟವಾಗಿದೆ (xxxvi, ೧–೧೮೨).

(x) ಬೈಚಪ್ಪನು ಕುಮಾರರಾಮನನ್ನು ನೆಲಮಾಳಿಗೆಯಿಂದ ಕರೆತರುವುದಕ್ಕೆ ಮುಂಚೆ ಕಂಪಿಲನಿಗೆ ಹೇಳುವ ಹೊಸ ರಾವುತನ ವಿವರ ಕುತೂಹಲಕಾರಿಯಾಗಿದೆ. ದೇವಗಿರಿಯ ರಾಮದೇವರಾಯನ ನಾಲ್ಕು ಮಕ್ಕಳಲ್ಲಿ ಒಬ್ಬನು ಬೇಡರವಳನ್ನು ಮದುವೆಯಾದದ್ದರಿಂದ, ಜಾತಿಭ್ರಷ್ಟನಾಗಬೇಕಾಯಿತು. ಆತನ ವಂಶದಲ್ಲಿ ಹುಟ್ಟಿಬಂದ ಧೀರನೇ ಇವನು ಎಂದು ಹೇಳುವನು. ಬೈಚಪ್ಪನ ಈ ನಿರೂಪಣೆ ನವೀನವಾಗಿದೆ (xxxviii, ೧–೪೨).

(xi) ಗಣನಾಥನಾಗಿದ್ದ ಅರ್ಜುನನು ಕಾರಣಾಂತರದಿಂದ ಭೂಲೋಕಕ್ಕೆ ರಾಮನಾಗಿ ಬಂದಿದ್ದನಷ್ಟೆ. ಅವನು ಮರಣಾನಂತರ ಕೈಲಾಸಕ್ಕೆ ಪುಷ್ಪಕವಿಮಾನದಲ್ಲಿ ತೆರಳುವ ಸನ್ನಿವೇಶವನ್ನು ಕವಿ ರಾಮನ ಮಹಿಮೆಗೆ ತಕ್ಕಂತೆ ದೀರ್ಘವಾಗಿ ವಿವರಿಸಿರುತ್ತಾನೆ (xlvi, ೪೩–೧೦೨; xlvii, ೧–೧೦೯).

## ಪಾಂಚಾಳ ಗಂಗನಲ್ಲಿ ಕಂಡುಬರುವ ವಿಶೇಷಾಂಶಗಳು

(i) ಹರಿಯಾಲದೇವಿ ಚಾರಾಮರಾಯನ ಮಗಳೆಂದೂ, ಈತನು ಗುರ್ಜರದೇಶದವನಾಗಿದ್ದು ರಾಜ್ಯಕೋಶಗಳನ್ನು ಕಳೆದುಕೊಂಡು ಬರಲು ಕಂಪಿಲನು ಆಶ್ರಯವಿತ್ತು, ಈತನ ಮಗಳನ್ನು ಮದುವೆಯಾದನೆಂದೂ ನಿರೂಪಿತವಾಗಿದೆ(ಗಂ. ೨, ii, ೧೩–೧೮). ಕುಮಾರರಾಮನ ಮದುವೆಯಲ್ಲಿ ಈ ಚಾರಾಮರಾಯನನ್ನು ಸತ್ಕರಿಸಿದ ಸಂದರ್ಭವೊಂದು "ಗಂಗ ೩" ರಲ್ಲಿಯೂ ಕಂಡುಬರುತ್ತದೆ (viii, ೧೮೧–೧೮೩). ರತ್ನಾಜಿ ದೇವಿರೆಡ್ಡಿಯ ಮಗಳೆಂದೂ, ಬೇಟೆಗಾಗಿ ಬಂದಿದ್ದ ಕಂಪಿಲನು ಈಕೆಯನ್ನು ಕಂಡು ಮದುವೆಯಾದನೆಂದೂ ಹೇಳಿರುತ್ತದೆ(ಗಂ. ೨, iii, ೪–೧೯).

(ii) ಕುಮಾರರಾಮನು ಗುತ್ತಿಯ ಜಗತಾಪಿ (ಜಗದಪ್ಪ) ಯನ್ನು ಸೋಲಿಸಲು, ಆತನು ತನ್ನ ಮಗಳಾದ ರಾಮುಲದೇವಿಯನ್ನು ಕೊಟ್ಟು ಮದುವೆಮಾಡಿದನೆಂಬ ವಿಷಯ ಕೆಲವು ಪ್ರತಿಗಳಲ್ಲಿ ಮಾತ್ರ ತೋರಿಬರುತ್ತದೆ (ಗಂ. ೨, vi, ೫೬–೬೩; ಗಂ. ೩, viii, ೧೪೭–೧೫೪).

(iii) ಗಂಗನ ಕೆಲವು ಪ್ರತಿಗಳಲ್ಲಿ ಕಂಡುಬರುವ ಸುಲ್ತಾನನ ಪಾದುಕೆಯ ಪ್ರಸಂಗ ಅತ್ಯಂತ ನವೀನವಾಗಿದೆ. ರಾಮನ ವಿಚಾರವನ್ನು ತಿಳಿದು ಬರಲೆಂದು ಸುಲ್ತಾನನು ತನ್ನ ವಜೀರರನ್ನು, ಪಾದುಕೆಗಳ ನೆವವೊಡ್ಡಿ ಕಳುಹಿಸುವನು. ಅವರು ದಾರಿಯುದ್ದಕ್ಕೂ ಕಪ್ಪ ಕಾಣಿಕೆಗಳನ್ನು ಪಡೆಯುತ್ತ, ಜಗತಾಪಿಯ ಬಳಿಗೆ ಬರುವರು. ಆತನು ಶರಣಾಗುವನು. ಅನಂತರ ಕುಮ್ಮಟಕ್ಕೆ ಬರುವರು. ಬೈಚಪ್ಪನು ಬಂದು

ವಿಚಾರಿಸಲು, ತಾವು ಕಪ್ಪದ ವಸೂಲಿಗಾಗಿ ಬಂದಿರುವೆವೆಂದೂ, ಒಂದು ಬಳ್ಳ ಹೊನ್ನನ್ನು ಕೊಡಬೇಕೆಂದೂ ತಿಳಿಸುವರು. ಕಂಪಿಲನಿಗೆ ಏನುಮಾಡಬೇಕೆಂದು ತೋಚುವುದಿಲ್ಲ. ಹಾಗಿಲ್ಲದಿದ್ದಲ್ಲಿ ಕುಮಾರರಾಮ ನನ್ನಾದರೂ ಡಿಳ್ಳಿಗೆ ಕಳುಹಿಸಬೇಕೆನ್ನುವರು. ಕಂಪಿಲನಿಗೆ ಇದು ಅಧಿಕಪ್ರಸಂಗವೆನ್ನಿಸುವುದು. ರಾಮನು ಇದೇ ಸಮಯವನ್ನು ಕಾದುಕೊಂಡಿದ್ದು, ಪಲ್ಲಕ್ಕಿಯಲ್ಲಿರುವ ಪಾದುಕೆಗಳನ್ನು ನೋಡುವೆನೆಂಬ ನೆಪವೊಡ್ಡಿ, ಅವುಗಳನ್ನು ಮೆಟ್ಟುವನು. ತನ್ನ ಅಣ್ಣನಿಗೋಸ್ಕರ ಇನ್ನೂ ಒಂದು ಜತೆ ಇದ್ದರೆ ತನ್ನಿ ಎನ್ನುವನು. ನೋಡು ತ್ತಿದ್ದವರೆಲ್ಲ ಚಕಿತರಾಗಿ ನಡನಡುಗುವರು. ಕುಮ್ಮಟಕ್ಕೆ ಕೇಡುಗಾಲ ಬಂದಿತೆಂದು ಬೆದರುವರು. ರಾಮನು ಕಿಂಚಿತ್ತೂ ಅಳುಕದೆ ದಿಟ್ಟತನದಿಂದ ಉತ್ತರವಿತ್ತು ವಜೀರರನ್ನು ಕಳುಹುವನು. ಅವರು ಬಂದ ದಾರಿ ಹಿಡಿದು ತೆರಳುವರು. ಸುಲ್ತಾನನಿಗೆ ಎಲ್ಲವನ್ನೂ ತಿಳಿಸುವರು. ಸುಲ್ತಾನನಿಗೆ ಕೋಪ ಕಾವೇರುವುದು. ಆದರೆ ಮುದ್ದು ಮಗಳ ಸಲುವಾಗಿ ತಾತ್ಕಾಲಿಕವಾಗಿ ಸುಮ್ಮನಾಗುವನು (ಗಂ. ೨, v, ೩೫-೧೦೭ ; ಗಂ. ೩, vii, ೩೮-೧೦೫ ; ಗಂ. ೪, i, ೨೧-೨೬ ; vii, ೨೫-೩೬).

ಈ ಮೇಲಿನ ಕಥಾವ್ಯತ್ಯಾಸಗಳು ಗಂಗನ ಕೆಲವು ಪ್ರತಿಗಳಲ್ಲಿ ಮಾತ್ರವೇ ಕಂಡುಬರುವುದರಿಂದ ಇವು ಎಷ್ಟರಮಟ್ಟಿಗೆ ಮೂಲಕೃತಿಗೆ ಸೇರಿದುವು ಎಂದು ಸಂದೇಹಬಾರದೆ ಇರದು. ಆದರೆ, ಇತರ ಕೃತಿಗಳಲ್ಲಿ ಉಕ್ತವಾಗದೆ, ಗಂಗನ ಪ್ರತಿಗಳಲ್ಲಿ ಮಾತ್ರವೇ ತೋರಿಬರುವುದು ಇವುಗಳ ಮುಖ್ಯ ವಿಶೇಷ.

## ಮಹಲಿಂಗಸ್ವಾಮಿಯಲ್ಲಿ ಕಂಡುಬರುವ ವಿಶೇಷಾಂಶಗಳು

(i) ರತ್ನಾಜಿ ಡೊಂಬರವಳೆಂದು ಸ್ಪಷ್ಟವಾಗಿ ನಿರೂಪಿಸಿರುತ್ತಾನೆ. ಒಂದು ದಿನ, ಡೊಂಬರ ಗುಂಪೊಂದು ರಾಜಧಾನಿಗೆ ಆಗಮಿಸಿ, ತಮ್ಮ ಚಾತುರ್ಯವನ್ನು ಪ್ರಕಟಿಸುತ್ತಾರೆ. ಆ ತಂಡದಲ್ಲಿದ್ದ ರತ್ನಾಜಿಯ ರೂಪು ಲಾವಣ್ಯಗಳನ್ನು ಕಂಡು ಕಂಪಿಲನು ವ್ಯಾಮೋಹಗೊಳ್ಳುತ್ತಾನೆ. ರಾಜನು ಆಕೆಯನ್ನು ಮದುವೆಯಾಗ ಬೇಕೆನ್ನಲು, ಮಂತ್ರಿ ಜಾತಿಯ ಪ್ರಶ್ನೆಯನ್ನು ಎತ್ತುತ್ತಾನೆ. ಆಗ, ರಾಜನು ಅದಕ್ಕೆ ಬೇರೆ ಬೇರೆ ಪೂರ್ವ ಕಥೆಗಳನ್ನು ಹೇಳಿ ಕಡೆಗೂ ರತ್ನಾಜಿಯನ್ನು ಮದುವೆಯಾಗುತ್ತಾನೆ. ಅಂದಿನಿಂದಲೇ ಪ್ರಜೆಗಳು ಆಕೆಯನ್ನು ನಿಂದಿಸುತ್ತಾರೆ. ಕಥೆಯು ಉದ್ದಕ್ಕೂ ಈ ಅವಹೇಳನೆ ಸಾಗುತ್ತಲೇ ಹೋಗುತ್ತದೆ (i, ೧೨೭-೧೯೯).

(ii) ಇಲ್ಲಿನ ಅವತಾರಕಲ್ಪನೆ ತುಂಬ ವಿಶಿಷ್ಟವಾಗಿದೆ. ಪ್ರಾರಂಭದಲ್ಲಿಯೇ ನಾರದರು ಬಂದು ಹೊಸಮಲೆಯಲ್ಲಿದ್ದ ಋಷಿಗಳನ್ನು ಕುರಿತು ಭವಿಷ್ಯವನ್ನು ಹೇಳುವರು. ಆ ಪ್ರಶಾಂತವಾದ ಸ್ಥಳವು ಅತಿ ಬೇಗ ಪ್ರಕ್ಷುಬ್ಧವಾದ ರಣರಂಗವಾಗುವುದೆಂದೂ ಅದಕ್ಕೆ ಕುಮಾರರಾಮನ ಅವತಾರವೇ ಕಾರಣವೆಂದೂ ತಿಳಿಸುವರು. ಇಲ್ಲಿನ ನಿರೂಪಣೆಯ ಮೇರೆಗೆ ಕಂಪಿಲನು ಜಮದಗ್ನಿಯ ಅವತಾರ, ಕುಮಾರರಾಮನು ಪರಶುರಾಮನ ಅವತಾರ, ರತ್ನಿ ರೇಣುಕೆಯ ಅವತಾರ, ಸುಲ್ತಾನನು ಕಾರ್ತವೀರ್ಯನ ಅವತಾರ. ಕೃತಯುಗದಲ್ಲಿ ರೇಣುಕೆಯಾಗಿಯೂ, ತ್ರೇತಾಯುಗದಲ್ಲಿ ತಾಟಕಿಯಾಗಿಯೂ ದ್ವಾಪರದಲ್ಲಿ ದ್ರೌಪದಿ ಯಾಗಿಯೂ, ಕಲಿಯುಗದಲ್ಲಿ ರತ್ನಾಜಿಯಾಗಿಯೂ ಜನಿಸಿದ ಹೆಣ್ಣೇ ಮತ್ತೆ ಚಲಗಾರ್ತಿಯಾದ ಮಾತಂಗಿ ಯಾಗಿ ಜನ್ಮವೆತ್ತಿರುವಳು. (ಕವಿ ರಾಮನನ್ನು ಆಗಿಂದಾಗ್ಗೆ ಭೀಮನಿಗೂ ಹೋಲಿಸಿರುವುದುಂಟು.) (ii, ೭೫-೧೭೪ ; xix, ೨೪೯-೨೫೧.)

(iii) ಕುಮಾರರಾಮನು ಪ್ರವರ್ಧಮಾನಕ್ಕೆ ಬಂದಂತೆಲ್ಲ ಅವನ ಪರಾಕ್ರಮ, ಪ್ರತಿಷ್ಠೆಗಳು ಸುತ್ತ ಮುತ್ತಲೂ ವ್ಯಾಪಿಸುತ್ತವೆ. ಆಗಿನ ಕಾಲದಲ್ಲಿ ಪ್ರಬಲರಾಗಿದ್ದ ದಕ್ಷಿಣಾಪಥದ ರಾಜರುಗಳನ್ನೆಲ್ಲ ಅವನು ಬಾಲ್ಯ ದಲ್ಲಿಯೇ ಸೋಲಿಸುತ್ತಾನೆ. ಇದನ್ನು ಕೇಳಿದ ಬಾದೂರನು ಆತನಿಗೆ ಉಡುಗೊರೆಯನ್ನು ಕಳುಹಿಸುವನು. ಈ ವೃತ್ತಾಂತ ಸುಲ್ತಾನನಿಗೆ ತಿಳಿಯಲು ಆತನು ಕುಪಿತನಾಗುವನು. ಈ ಕಾರಣದಿಂದಲೇ ಬಾದೂರನು ದೇಶಭ್ರಷ್ಟನಾಗಿ ಕಂಪಿಲನಲ್ಲಿ ಆಶ್ರಯವನ್ನು ಪಡೆಯಬೇಕಾಗುತ್ತದೆ (vi, ೧೦೧-೧೩೧).

(iv) ಕುಮಾರರಾಮನನ್ನು ಬೈಚಪ್ಪನ ಸೋದರಳಿಯ ಎಂಬುದಾಗಿ ಹೇಳಿದೆ. ಈ ಅಂಶವನ್ನು ಅನೇಕ ಎಡೆಗಳಲ್ಲಿ ಸೂಚಿಸಲಾಗಿದೆ. ಬೈಚಪ್ಪನು ಕಂಪಿಲನನ್ನು ಆಕ್ಷೇಪಿಸುವಾಗ "ಸೋದರ ಅಳಿಯನು ಎಂದು ಕಾಯ್ದುದುಂಟಾದರೆ ಶೂಲಕೆ ತೆಗೆಸುವನೆಂದೆ (xiv, ೧೦೫)" ಎಂದು ಹೇಳುತ್ತಾನೆ. ರಾಮನ ಸತಿಯರು ಮಂತ್ರಿಯನ್ನು ಕಿಚ್ಚು ಬೇಡುವಲ್ಲಿ "ಸಾಕಯ್ಯ ಮಂತ್ರೀಶ ನಿಮ್ಮಾತ್ಮದೊಳಗೆ ಜನಿಸಿ ರಣಭೂಪಗೆ ಕರವನೊಡ್ಡಿದೆವು....ಇನ್ಯಾಕೆ ಲೋಕದ ಬಾಳು ಆತನ ಎಡೆಗೆ ಹೋಗುವೆವು (xiv ೧೭೬)" ಎಂದು ನುಡಿಯುತ್ತಾರೆ.[1] ರಾಮನ ಸತಿಯರು ಚಿತಾಪ್ರವೇಶವನ್ನು ಮಾಡುವ ಸಂದರ್ಭದಲ್ಲಿ ಬೈಚಪ್ಪನನ್ನು ಕುರಿತು "ಪಡೆದವನೆ ಎಲೆ ತಂದೆ ನಿನ್ನೊಡಲೊಳಗೆ ಜನಿಸಿ ಹೊರುವರಲ್ಲವೋ ಭಂಡಬಾಳು, ದೃಢವಾಗಿ ನಡೆವೆವು ಕವಡಿಲ್ಲ ಕೃಷ್ಣನ ಮಗನ ಪೋಲ್ವನ ಬಿಟ್ಟು ಇರುವವರೆ (xiv, ೧೮೧)" ಎನ್ನುವರು. ಮಂತ್ರಿ ಅವರ ಮಾತನ್ನು ಕೇಳಿ, ಮೆಚ್ಚಿ, ತನ್ನ "ಪುತ್ರಿ ಬಾಲೆಯರನು" ಕಳುಹಿದನೆಂದು ಗೊತ್ತಾಗುತ್ತದೆ (xiv, ೧೮೨).

(v) ಕುಮಾರರಾಮನಿಗೆ ಜಟ್ಟಂಗಿರಾಯನೆಂಬ ಮಗನಿರುವುದೂ, ಈತನ ತಾಯಿಯ ಹೆಸರು ಸುಭದ್ರೆ ಎಂಬುದೂ ಅಪೂರ್ವವಾದ ಸಂಗತಿ. ರಾಮನು ಜೀವಂತನಾಗಿದ್ದಾಗಲೇ ಒಂದಲ್ಲ ಒಂದು ಬಗೆಯಲ್ಲಿ ಅವನಿಗೆ ತನ್ನ ಮರಣದ ಪರಿ ವಿದಿತವಾಗುತ್ತದೆ. ಆಗ, ಒಮ್ಮೆ, ಸ್ವಪ್ನದಲ್ಲಿ ಈಶ್ವರನ ಸಂದರ್ಶನವಾಗಿ, ದಂಪತಿಗಳಿಗೆ ಸಂತಾನಫಲ ಲಭಿಸುವುದು. ಅನಂತರ ರಾಣಿಯಾದ ಸುಭದ್ರೆ ಮಗನನ್ನು ಪಡೆಯುವಳು. ಈತನೇ ಜಟ್ಟಂಗಿ ರಾಯ. ಚಿಕ್ಕವನಾಗಿರುವಾಗಲೇ ರಾಮನು ಈತನಿಗೆ ಅಧಿಕಾರ ಪಟ್ಟವನ್ನು ಕಟ್ಟುವನು. ಎಲ್ಲಕ್ಕಿಂತಲೂ ಹೆಚ್ಚಾಗಿ ಈ ಕಾವ್ಯವನ್ನು ಆಲಿಸುವ ಶ್ರೋತೃವೇ ಇವನು (xviii, ೬೨–೬೯; ೮೪–೮೮).[2]

(vi) **ಇತರ ಕೆಲವು ಅಂಶಗಳು :** ಕೈಸೆರೆಯಾದ ನೇಮಿಯನ್ನು ಬಾದೂರನ ಹೆಂಡತಿ ಮಕ್ಕಳಿಗೆ ಬದಲಾಗಿ ಬಿಟ್ಟುಕೊಡುವ ಸುದ್ದಿ ಹೊಸದಾಗಿದೆ (vi, ೧೫೩-೧೬೩). ಕಳ್ಳರಾಮನ ಜನನದ ಪ್ರಸಂಗ ಗಂಗನಲ್ಲಿ ಬಂದರೂ, ಅವನ ಜೀವನ ಚರಿತ್ರೆಯನ್ನು ಮಹಲಿಂಗಸ್ವಾಮಿ ಈಶ್ವರನ ಮೂಲಕ ಸಂಕ್ಷಿಪ್ತವಾಗಿ ತಿಳಿಸುವುದು ವಿಶಿಷ್ಟವಾಗಿದೆ (xiv, ೮೪-೮೭). ರತ್ನಾಜಿಗೆ ಯಲ್ಲರಸನೆಂಬ ಮಗನಿದ್ದನೆಂದು ತಿಳಿದುಬರುತ್ತದೆ (xviii, ೧೮೫). ಬೊಲ್ಲನು ಕಡೆಗಾಲದಲ್ಲಿ ರಾಮನ ಇಷ್ಟದಂತೆ ಶಿಲೆಯಾಗಿ ಮಾರ್ಪಡುತ್ತದೆ (xix, ೧೯೯–೨೦೦).

## ಘಟನೆಗಳ ಪರಸ್ಪರಾವಲೋಕನ

ನಂಜುಂಡ, ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿ—ಇವರ ಕೃತಿಗಳನ್ನು ಈವರೆಗೆ ತುಲನಾತ್ಮಕವಾಗಿ ನೋಡಿದ್ದಾಯಿತು. ಇವುಗಳಲ್ಲಿ ಪರಸ್ಪರವಾಗಿ ತೋರಿಬರುವ ಸಾದೃಶ್ಯಗಳನ್ನೂ ಬೇರೆ ಬೇರೆಯಾಗಿ ಕಂಡುಬರುವ ವೈಶಿಷ್ಟ್ಯಗಳನ್ನೂ ಗಮನಿಸಿರುತ್ತೇವೆ. ಪ್ರಕೃತದಲ್ಲಿ, ಕಲವು ಘಟನಾವಳಿಗಳಲ್ಲಿ ಕಂಡುಬರುವ ಸಂಬಂಧದ ಸ್ವರೂಪವನ್ನು ಇಲ್ಲಿ ಪರಿಶೀಲಿಸಲಾಗಿದೆ.

---

1. ಕುಮಾರರಾಮನಿಗೆ ಬೈಚಪ್ಪನ ಮಗಳೊಬ್ಬಳನ್ನು ಕೊಟ್ಟು ಮದುವೆಯಾಗಿತ್ತೆಂದು "ಗಂಗ ೨"ರಲ್ಲಿ ಮಾತ್ರ ಬರುತ್ತದೆ. ಆಕೆಯ ಹೆಸರು ತಿಮ್ಮಾಯಿ (vii, ೬೫-೬೬.)

2. ಗಂಗ ೩ರಲ್ಲಿ ಮರಳಿ ಬದುಕಿ ಬಂದ ರಾಮನು ಶಿಂಗಣ್ಣ ಎಂಬುವನಿಗೆ ರಾಜ್ಯಭಾರವನ್ನೂ, ಬೈಚಪ್ಪನ ಮಗ ರಂಗಣ್ಣನಿಗೆ ಮಂತ್ರಿಪದವಿಯನ್ನೂ ಕೊಟ್ಟನೆಂದು ಹೇಳಿದೆ. ಈ ವಿವರಗಳು ಬೇರೆ ಎಲ್ಲಿಯೂ ದೊರೆಯದೆ ಇರುವುದರಿಂದ ಈ ಭಾಗವು ಪ್ರಕ್ಷಿಪ್ತವೆಂದು ಹೇಳಬಹುದು (xxxvii, ೧೦೭–೧೧೪).

**I. ಕುಮಾರರಾಮನ ಮಹಿಮೆ :** ಈ ಕೃತಿಗಳು ರಚನೆಯಾಗುವ ಕಾಲಕ್ಕಾಗಲೇ ಕುಮಾರರಾಮನು ಒಬ್ಬ ಮಹಿಮಾಪುರುಷನಾಗಿ ಪರಿಗಣಿತನಾಗಿದ್ದನೆಂಬುದು ನಿರ್ವಿವಾದವಾದ ಸಂಗತಿ. ಈ ಮಹಿಮೆಯ ಕಲ್ಪನೆ ಹೇಗೆ ರೂಪುದಾಳಿದೆಯೆಂಬುದನ್ನು ಪ್ರಕೃತ ಕೃತಿಗಳ ಆಧಾರದ ಮೇಲೆ ಸೂಚಿಸಬಹುದು.

ಗಂಗನ ಕೃತಿಯಲ್ಲಿ, ಒಂದು ಪ್ರತಿಯನ್ನು ಹೊರತು ಉಳಿದ ಯಾವ ಪ್ರತಿಗಳಲ್ಲಿಯೂ ಕುಮಾರರಾಮನ ಅವತಾರದ ವೃತ್ತಾಂತವನ್ನು ವಿಸ್ತಾರವಾಗಿ ನಿರೂಪಿಸಿಲ್ಲ. "ಗಂಗ ೨"ರಲ್ಲಿ ನಂಜುಂಡನಲ್ಲಿರುವಂತೆಯೇ ದೇವಲೋಕದ ಘಟನೆಯನ್ನು ಅತ್ಯಂತ ಸಂಗ್ರಹವಾಗಿ ವರ್ಣಿಸಿರುತ್ತದೆ (ii, ೧೯–೨೭; iii, ೩–೪). ಈ ಮೇರೆಗೆ ಕುಮಾರರಾಮನು ಅರ್ಜುನನ ಅಂಶವೆಂದೂ ರತ್ನಾಜಿ ರಂಭೆಯ ಅಂಶವೆಂದೂ ಗೊತ್ತಾಗುತ್ತದೆ. ಇದೇ ಪ್ರತಿಯಲ್ಲಿ ಒಂದು ಕಡೆ ಆಕೆಯನ್ನು "ಊರ್ವಶಿ ರಂಭೆ"ಯರ ಅಂಶವೆಂದೂ ಹೇಳಿರುವುದುಂಟು. (iii, ೨). ಉಳಿದ ಕೆಲವು ಪ್ರತಿಗಳಲ್ಲಿ ಕುಮಾರರಾಮನನ್ನು ಅರ್ಜುನನ ಅವತಾರವೆಂದು ಬಹು ಸೂಕ್ಷ್ಮವಾಗಿ ಸೂಚಿಸಿದೆ. ಆದರೆ, ಅವನು ಜಟ್ಟಂಗಿರಾಮನ ವರಕುಮಾರನೆಂಬ ಭಾವನೆಗೇ ಹೆಚ್ಚು ಪುರಸ್ಕಾರ ದೊರೆತಿದೆ.

ಕುಮಾರರಾಮನ ಅವತಾರ ವೃತ್ತಾಂತಕ್ಕೆ ಕವಿ ನಂಜುಂಡನಲ್ಲಿ ಸಾಕಾದಷ್ಟು ಪ್ರಾಧಾನ್ಯ ದೊರೆತಿದೆ. ಕುಮಾರರಾಮ ಮತ್ತು ರತ್ನಾಜಿಯರು, ಅರ್ಜುನ ಊರ್ವಶಿಯರ ಅವತಾರವೆಂಬ ಕಲ್ಪನೆ ಇಲ್ಲಿ ದೃಢವಾಗಿ ಕಂಡುಬರುತ್ತದೆ. ದೇವಲೋಕದಲ್ಲಿ ನಡೆದ ಘಟನೆಯ ವಿವರಗಳೆಲ್ಲ ಪ್ರಾರಂಭದಲ್ಲಿಯೇ ವಿಸ್ತಾರವಾಗಿ ಬರುತ್ತದೆ. ಕಟ್ಟಕಡೆಯ ಸಂಗತಿಗಳೂ ಸಹ ಭವ್ಯವಾಗಿ ನಿರೂಪಿತವಾಗಿವೆ. ಕಥೆ ಬೆಳದಂತೆಲ್ಲ. ಬಾಚಮ್ಮನು ದ್ರೌಪದಿಯ ಅವತಾರವೆಂದೂ ಮಾತಂಗಿ ಗಾಂಧಾರಿಯ ಅವತಾರವೆಂದೂ ತಿಳಿದುಬರುತ್ತದೆ.[1] ಅಷ್ಟೇ ಏಕೆ! ಬೈಚಪ್ಪನು ನೇಮಿಸಿದ್ದ ದೇವದೂತನು ರಾಮನನ್ನೇ ಕುರಿತು "ಧರಿಣಿಯೊಳಗೆ ದೇವರೆಂದು ನಿನ್ನನು ಕೆಲ ನರರು ಕೊಂಡಾಡಿ ಪೂಜಿಸರು (xxxix, ೫೦)" ಎಂದು ಹೇಳಿರುವ ಮಾತು ಈ ಬಗ್ಗೆ ಕವಿಯ ಕಾಲದಲ್ಲಿದ್ದ ದೃಷ್ಟಿಯನ್ನು ಸ್ಪಷ್ಟಪಡಿಸುತ್ತದೆ. ಆದರೂ, ಕುಮಾರರಾಮನು ಜಟ್ಟಂಗಿರಾಮನ ಅಂಶವೆಂಬುದನ್ನು ನಂಜುಂಡನು ಸೂಚಿಸದೆ ಇಲ್ಲ. ಮಕ್ಕಳಿಲ್ಲದೆ ಹಲಬುತ್ತಿದ್ದ ಹರಿಹರದೇವಿಯನ್ನು ಕುರಿತು ಕಂಪಿಲನು "ಆಯತಲೋಚನೆ ಬಿಡು ಮನದಳಲ ಜಟಾಯು ರಾಮೇಶ್ವರನೆಡೆಗೆ ಒಯ್ಯಾರದಿಂ ಪೋಗಿ ಪುತ್ರವರವ ಪಡೆದಾಯುಸವಿಲ್ಲದೆಯ್ದುವೆನು (vii, ೭೨)" ಎಂದು ಸಮಾಧಾನಪಡಿಸುವನು.

ಮಹಲಿಂಗಸ್ವಾಮಿಯಲ್ಲಿ ಈ ಅವತಾರದ ಮಹತ್ವ ಕಂಪಿಲ ಸುರಿತಾಳರವರೆಗೂ ವ್ಯಾಪಿಸಿದೆ. ಅಷ್ಟೇ ಅಲ್ಲದೆ, ಹೊಸದಾರಿಯನ್ನೇ ಹಿಡಿದಿದೆ. ಜಮದಗ್ನಿಯೇ ಕಂಪಿಲ; ಪರಶುರಾಮನೇ ಕುಮಾರರಾಮ; ಕಾರ್ತವೀರ್ಯನೇ ಸುರುತಾಳ; ರೇಣುಕೆಯೇ ರತ್ನಾಜಿ; ರತ್ನಾಜಿಯ ಪುನರ್ಜನ್ಮವೇ ಮಾತಂಗಿ. ಕಾವ್ಯದ ಕಟ್ಟಕಡೆಯಲ್ಲಿ, ಹರಿಹರದೇವಿ ಸತ್ತ ರಾಮನನ್ನು ಕಂಡು "ಕುಲಕೆಲ್ಲ ದೇವರಾಗು (xix, ೨೫೩)"ಎಂದು ಹರಸುವುದೂ, ಆಕೆಯೇ "ನಾಡೊಳಗಿರುವಂಥ ಬೇಡರ ಕುಲ ಬಂದು.... ಜಾತ್ರೆ ನಡೆಸಿ (xix, ೨೫೫)" ಎಂದು ಇತರರಿಗೆ ಹೇಳುವುದೂ ಅರ್ಥವತ್ತಾಗಿವೆ. ಕಡೆಗೆ "ರಾಮಯ್ಯ ದೇವರೆನ್ನಿಸಿಕೊಂಡ ಪೂಜೆಗೊಳ್ಳುತ....(xix, ೨೫೬)" ಎಂಬ ಕವಿಯ ವಾಕ್ಯ ಕುಮಾರರಾಮನ ಪ್ರಾಶಸ್ತ್ಯವನ್ನು ಸ್ಪಷ್ಟಪಡಿಸುತ್ತದೆ.

**II. ವಂಶಾವಳಿ :** ಪಾಂಚಾಳ ಗಂಗನ ಕೃತಿಯ ಪ್ರತಿಗಳಲ್ಲಿ ಕುಮಾರರಾಮನ ವಂಶೀಯರು, ಸಾಮಂತರಾಗಿದ್ದೋ ಇಲ್ಲವೇ ಸಾಮಾನ್ಯ ವಲಸೆಗಾರರಾಗಿದ್ದೋ ಕ್ರಮಕ್ರಮವಾಗಿ ಕೋಟೆ ಕೊತ್ತಲಗಳನ್ನು ಕಟ್ಟಿಕೊಂಡು, ದಿನಕ್ರಮೇಣ ಹೇಗೆ ಪ್ರಬಲರಾದರೆಂಬ ಚಿತ್ರವೊಂದು ಚೆನ್ನಾಗಿ ಸ್ಪಷ್ಟವಾಗುತ್ತದೆ.

---

[1]. ಗಂ. ೨ ಮತ್ತು ಗಂ. ೩ರಲ್ಲಿ ಈ ವಿಷಯ ಉಲ್ಲೇಖಿತವಾಗಿದೆ (xxiv, ೬ ; xxxiv, ೧೬–೧೭).

ನಂಜುಂಡನ ಕೃತಿಯಲ್ಲಾದರೋ, ಸಾಂಪ್ರದಾಯಿಕವಾದ ರೀತಿಯಲ್ಲಿ ಕಾವ್ಯ ಪ್ರಾರಂಭವಾದ ಬಳಿಕ, ಕಂಪಿಲನು ಹೊಸಮಲೆಯಲ್ಲಿ ಹೇಗೆ ವೈಭವದಿಂದ ರಾಜ್ಯವಾಳುತ್ತಿದ್ದನೆಂಬ ಅಂಶದಿಂದಲೇ ಕಥೆ ಮೊದಲಾಗುತ್ತದೆ. ಕಾವ್ಯದ ನಡುವೆ ಬೈಚಪ್ಪನು ಹೊಸರಾವುತನನ್ನು ಪರಿಚಯಮಾಡಿಕೊಡುವ ನೆಪದಲ್ಲಿ, ಕುಮಾರರಾಮನ ಪೂರ್ವಜರ ವೃತ್ತಾಂತವನ್ನೇ ಹೋಲುತ್ತದೆಯೋ ಎಂಬಂತೆ ಕೆಲವು ಸಂಗತಿಗಳನ್ನು ಹೇಳುವುದುಂಟು (xxxviii, ೮–೪೨). ಆದರೆ ಇದು ಬಂದಿರುವ ಸನ್ನಿವೇಶ, ಮಂತ್ರಿ ಹೇಳುವ ಉದ್ದೇಶ, ವಿಷಯದ ಸ್ವರೂಪಗಳನ್ನು ಗಮನಿಸಿದರೆ, ಈ ಅಂಶಕ್ಕೆ, ಇತರ ಕೃತಿಗಳಲ್ಲಿ ಸಿಕ್ಕಿರುವಷ್ಟು ಮನ್ನಣೆ ಇಲ್ಲಿ ದೊರೆತಿಲ್ಲವೆಂದು ವಿದಿತವಾಗುತ್ತದೆ.

ಮಹಲಿಂಗಸ್ವಾಮಿ ಈ ಬಗ್ಗೆ ಗಂಗನ ಜಾಡನ್ನೇ ಹಿಡಿದು ಕಾವ್ಯದ ಪ್ರಾರಂಭದಲ್ಲಿಯೇ ಹೇಳಿದ್ದಾನೆ. ಸಾಲದ್ದಕ್ಕೆ ಕಾಮಗೇತಿಯ ವಂಶದ ವೀರ ಕಸ್ತೂರಿನಾಯಕನಿಂದ ಮೊದಲುಮಾಡಿದ್ದಾನೆ. ಮುಮ್ಮಡಿ ಸಿಂಗ ಮತ್ತು ಕಂಪಿಲರ ವಿಷಯ ಬರುತ್ತದೆ. ಆದರೆ, ಕವಿ ಈ ವಿವರಗಳನ್ನು ಹೇಳುವ ರೀತಿ, ನಾರದರ ಆಗಮನ, ಭವಿಷ್ಯವಾಣಿ ಮುಂತಾದುವು ಇತಿಹಾಸಕ್ಕಿಂತ ಹೆಚ್ಚಾಗಿ ಪುರಾಣವನ್ನು ಹೋಲುತ್ತವೆ.

**III. ಕದನ ಪರಂಪರೆ :** ಕಡುಗಲಿಯಾದ ಕುಮಾರರಾಮನ ಜೀವನದಲ್ಲಿ ಕದನಗಳಿಗೆ ಕೊರತೆಯಿಲ್ಲ. ಈ ಸಾಹಸದ ಚಿತ್ರ ಒಬ್ಬೊಬ್ಬ ಕವಿಯಲ್ಲಿಯೂ ಒಂದೊಂದು ತೆರನಾಗಿ ಮುಂದುವರಿದಿರುತ್ತದೆ.

ಪಾಂಚಾಳ ಗಂಗನಲ್ಲಿ ಗುತ್ತಿಯ ಜಗತಾಪಿಯನ್ನು ಗೆಲ್ಲುವುದರಿಂದ ಈ ವಿಜಯಪರಂಪರೆ ಮೊದಲಾಗುತ್ತದೆ. ಶತ್ರುವಾಗಿ ರಣರಂಗವನ್ನು ಪ್ರವೇಶಿಸಿದ ರಾಮು ಯುದ್ಧದಲ್ಲಿ ಜಯಶೀಲನಾಗುವುದಲ್ಲದೆ ಜಗತಾಪಿಯ ಮಗಳನ್ನು ಮದುವೆಯಾಗುವುದು ತುಂಬ ಅರ್ಥಪತ್ತಾಗಿದೆ. ಅನಂತರ ಆತನ ಜೀವನದಲ್ಲಿ ಒದಗಿ ಬರುವ ವೀರರುದ್ರನ ಕಾಳಗ, ಮಾರಭೂಪಾಲನ ಕದನ, ನೇಮಿಯ ದಂಡಯಾತ್ರೆ, ಬಲ್ಲಾಳನ ಸಮರ ಮೊದಲಾದುವು ಅವನ ಪರಾಕ್ರಮದ ಹಿರಿಮೆಯನ್ನು ಸಾರಿ ಹೇಳುತ್ತವೆ. ಮಾತಂಗಿಯ ಮುತ್ತಿಗೆಯಲ್ಲಿ ಕುಮಾರರಾಮನು ಹತನಾದರೂ ಅವನ ಹೆಸರು ಚಿರಸ್ಥಾಯಿಯಾಗುತ್ತದೆ.

ನಂಜುಂಡನ ನಿರೂಪಣೆಯಲ್ಲಿ ಕ್ರಮವಿಪರ್ಯಯವಿದ್ದರೂ ರಾಮನ ಬಾಹುಪರಾಕ್ರಮಕ್ಕೆ ಎಲ್ಲಿಯೂ ಚ್ಯುತಿಯುಂಟಾಗಿಲ್ಲ. ಹುಳಿಯೇರಿನ ಕಾಳಗ ತಳಹದಿಯಂತಿದ್ದರೆ, ಅಲ್ಲಿಂದ ಮುಂದೆ, ವೀರ ಬಲ್ಲಾಳ, ವೀರರುದ್ರ, ಕರಿಪತಿ ಕಪಿಲೇಶ್ವರ ಮತ್ತು ನೇಮಿಖಾನರ ಪ್ರತಿಭಟನೆಯಲ್ಲಿ ಕುಮಾರರಾಮನ ಕಲಿತನ ದಿಗಂತವ್ಯಾಪಿಯಾಗುತ್ತದೆ. ಮಾತಂಗಿ ಮೃತ್ಯುವಾಗಿ ಬಂದರೂ, ದೇವಲೋಕದಲ್ಲಿ ಕುಮಾರರಾಮನ ಕೀರ್ತಿ ಕನ್ನಿಕೆಯನ್ನು ತೂಗಿ ಮೆರೆಸುವ ದಾದಿಯಾಗುವ ಆಕೆಯ ವರ್ತನೆ, ಕುಮಾರರಾಮನ ಪ್ರಶಸ್ತಿಯನ್ನು ಒತ್ತಿ ಹೇಳುವಂತಿದೆ.

ಮಹಲಿಂಗಸ್ವಾಮಿಯ ಯುದ್ಧ ಪ್ರಸಂಗಗಳ ವರ್ಣನೆ ಬಲ್ಲಾಳನ ಕಾಳಗದಿಂದಲೇ ಮೊದಲಾಗುತ್ತದೆ. ವೀರರುದ್ರನ ಕಲಹಕ್ಕೆ ವಿಶೇಷ ಪುರಸ್ಕಾರ ದೊರೆತಿದೆ. ಗುತ್ತಿಯ ಚಾಮಯ್ಯನ ಘಟನೆ ಬಹು ಕ್ಷಿಪ್ರವಾಗಿ ಸಾಗುತ್ತದೆ. ನೇಮಿಯ ಎರಡು ಕಾಳಗಗಳೂ ಯಥಾರೀತಿಯಾಗಿವೆ. ಮಾತಂಗಿಯ ಪ್ರಕರಣದಲ್ಲಿ ಹೆಚ್ಚು ವ್ಯತ್ಯಾಸವಿಲ್ಲದಿದ್ದರೂ, ಆಕೆ, ಯುಗ ಯುಗಗಳಲ್ಲಿಯೂ ಪ್ರತೀಕಾರದ ಪ್ರತೀಕವಾಗಿ ಜನ್ಮವೆತ್ತಿ ಬಂದು, ಪ್ರಕೃತದಲ್ಲಿ ರತ್ನಾಜಿಯಾಗಿ ಛಲವನ್ನು ತೀರಿಸಿಕೊಳ್ಳಲಾರದೆ, ಮಾತಂಗಿಯಾಗಿ ತನ್ನ ಮಾತ್ಸರ್ಯವನ್ನು ನೆರವೇರಿಸಿಕೊಂಡು, ಕಟ್ಟಕಡೆಗೆ ಕುಮಾರರಾಮನ ಸಾನ್ನಿಧ್ಯದಲ್ಲಿ ಮಾತಂಗ ಕನ್ಯೆಯಾಗಿ ಸೇವೆ ಕೈಕೊಳ್ಳುವ ಈ ನಿರೂಪಣೆ ಸೋಜಿಗವೆನ್ನಿಸಿದರೂ, ಕುಮಾರರಾಮನ ಸಾಹಸಕ್ಕೆ ಕಳಶವಿಟ್ಟಂತಿದೆ.

ಮೂವರು ಕವಿಗಳೂ ಕುಮಾರರಾಮನ ಪರಾಕ್ರಮಕ್ಕೆ ಸಮಾನವಾದ ಪ್ರಾಶಸ್ತ್ಯವಿತ್ತಿರುತ್ತಾರೆ.

**IV. ಬಾದೂರನ ಪಲಾಯನ :** ಈ ಘಟನೆಯನ್ನು ಮೂರು ಜನ ಕವಿಗಳೂ ಬಳಸಿಕೊಂಡಿರುತ್ತಾರೆ. ಪಾಂಚಾಳ ಗಂಗನಲ್ಲಿ ಈತನು ಮಾಡಬಾರದ ತಪ್ಪನ್ನು ಮಾಡಿ, ಸುಲ್ತಾನನ ಆಗ್ರಹಕ್ಕೆ ಗುರಿಯಾಗಿ, ತಲೆ

ತಪ್ಪಿಸಿಕೊಂಡು ಬಂದನೆಂದು ಹೇಳಿರುತ್ತದೆ (ಗಂ. ೨, x, ೫; ಗಂ, ೩, xiii, ೪–೧೦). ಕಂಪಿಲನ ಮೇಲೆ ದಂಡೆತ್ತಿ ಹೋಗಬೇಕೆಂದು ಹಂಬಲಿಸುತ್ತಿದ್ದ ಸುಲ್ತಾನನಿಗೆ ಈ ಘಟನೆ ದಾರಿಮಾಡಿಕೊಡುತ್ತದೆ.

ನಂಜುಂಡನಾದರೋ ಈ ಸನ್ನಿವೇಶವನ್ನು ಅತ್ಯಂತ ವಿಸ್ಮಯಕರವಾಗಿ ವಿವರಿಸಿರುತ್ತಾನೆ. ಬಾದುರನು ಮುಂಗುಲಿರಾಯನು ಕಳುಹಿಸಿದ್ದ ಬಿಲ್ಲನ್ನು ಹೆದೆಯೇರಿಸಿ, ಏಳು ಕೊಪ್ಪರಿಗೆಗಳನ್ನು ಭೇದಿಸುತ್ತಾನೆ. ಈ ಸಾಹಸ ಕಾರ್ಯವೇ ಅವನಿಗೆ ಉರುಲಾಯಿತು. ಇತರ ಖಾನರ ಒಳಸಂಚಿನಿಂದ ವಂಚಿತನಾಗಿ ಬಾದುರನು ವಿನಾಕಾರಣ ತಲೆ ತಪ್ಪಿಸಿಕೊಂಡು ಓಡಿ ಬಂದು ಕಂಪಿಲನ ಆಶ್ರಯವನ್ನು ಪಡೆಯುತ್ತಾನೆ. ಉಳಿದ ಕಥೆ ಎಂದಿನಂತೆಯೇ ಮುಂದುವರಿಯುತ್ತದೆ.

ಮಹಲಿಂಗಸ್ವಾಮಿಯ ನಿರೂಪಣೆಯಲ್ಲಿ ಗಂಗನಷ್ಟು ಸಂಕ್ಷಿಪ್ತವೂ ಇಲ್ಲದೆ, ನಂಜುಂಡನಷ್ಟು ಬಳಸೂ ಆಗದೆ, ಸಹಜವಾಗಿಯೇ ಕಥೆ ಬೆಳೆಯುತ್ತದೆ. ಕುಮಾರರಾಮನ ಕೀರ್ತಿಯನ್ನು ಕೇಳಿ, ಪರಾಕ್ರಮಪಕ್ಷಪಾತಿಯಾದ ಬಾದೂರನು, ಅವನಿಗೆ ಉಡುಗೊರೆಯನ್ನು ಕಳುಹಿಸಿಕೊಡುತ್ತಾನೆ. ಈ ವಿಷಯ ಸುಲ್ತಾನನಿಗೆ ತಿಳಿಯಲು ಆತನು ಕೋಪಮಾಡಿಕೊಳ್ಳುತ್ತಾನೆ. ಬಾದೂರನನ್ನು ಕೊಲ್ಲಬೇಕೆಂದು ಆಜ್ಞಾಪಿಸಲು, ನಿರ್ವಾಹವಿಲ್ಲದೆ ಆತನು ದೇಶಭ್ರಷ್ಟನಾಗುತ್ತಾನೆ.

**V. ರತ್ನಾಜಿಯ ವೃತ್ತಾಂತ:** ಗಂಗನ ಪ್ರತಿಗಳಲ್ಲಿ ಒಂದೆಡೆಯಲ್ಲಿ ಈಕೆ ತಾನು ಕುಮಾರರಾಮನ ಸೋದರತ್ತೆಯ ಮಗಳು ಎಂದು ಹೇಳಿಕೊಳ್ಳುತ್ತಾಳೆ. ಇನ್ನೊಂದು ಪ್ರತಿಯಲ್ಲಿ ಈಕೆ ದೇವಿರೆಡ್ಡಿ ಮತ್ತು ಯಲ್ಲಮ್ಮನ ಮಗಳು ಎಂಬುದಾಗಿ ಹೇಳಿದೆ (ಗಂ. ೨. iii, ೪). ಕವಿ ನಂಜುಂಡನು ಈಕೆಯನ್ನು ಸೂರ್ಯವಂಶದಲ್ಲಿ ಜನಿಸಿದ ರಾಜಕುಮಾರಿ ಎಂಬುದಾಗಿ ಸೂಚಿಸಿ ಮುಂದೆ ಸಾಗುತ್ತಾನೆ. ಮಹಲಿಂಗಸ್ವಾಮಿಯಲ್ಲಿ ಈಕೆ ಕಂಡ ಹಾಗೆಯೇ ಕೀಳು ಕುಲದಲ್ಲಿ ಹುಟ್ಟಿದ ಒಬ್ಬ ಡೊಂಬರವಳು. ಈ ಸಂಗತಿಗಳನ್ನು ನೋಡಿದರೆ, ಗಂಗನ ಕೃತಿಗಿಂತ ನಂಜುಂಡನಲ್ಲಿ ರತ್ನಾಜಿಯ ಸ್ಥಾನ ಒಂದು ರೀತಿಯಲ್ಲಿ ಉತ್ತಮವಾಗುತ್ತದೆ. ಪ್ರಾಯಶಃ ಆಕೆ ಉರ್ವಶಿಯ ಅವತಾರವೆಂದು ಅವನು ಎಣಿಸಿರುವುದೇ ಇದಕ್ಕೆ ಕಾರಣವಿದ್ದರೂ ಇರಬಹುದು. ಮಹಲಿಂಗಸ್ವಾಮಿಯಲ್ಲಿ ಈಕೆಯ ಗೌರವ ತುಂಬ ಕಡಮೆಯಾಗುತ್ತದೆ. ಈಕೆ ಜನ್ಮಜನ್ಮಾಂತರಗಳಿಂದಲೂ ಸೇಡಿನ ಪ್ರತೀಕವಾಗಿರುವಂತಿದೆ. ಕಾವ್ಯದ ಉದ್ದಕ್ಕೂ ಈಕೆಯ ಬಗ್ಗೆ ಅಸಹನೆ ಬೆಳೆಯುತ್ತ ಹೋಗುತ್ತದೆ. ಗಂಗನ ನಿರೂಪಣೆಯ ಪ್ರಕಾರ ರತ್ನಾಜಿ ಸತ್ತಾಗ ಕಂಪಿಲನು ದುಃಖಿಸುವುದಿಲ್ಲ. ಮಹಲಿಂಗಸ್ವಾಮಿಯಲ್ಲಂತೂ ಸಹಾನುಭೂತಿಗೆ ಅವಕಾಶವೇ ಇಲ್ಲ. ನಂಜುಂಡನಲ್ಲಿಯಾದರೋ ಈಕೆಯ ಸಾವನ್ನು ಕೇಳಿದ ಕಂಪಿಲನು ತುಂಬ ಸಂಕಟಪಡುತ್ತಾನೆ.

**VI. ನೆಲಮಾಳಿಗೆಯ ಪ್ರಸಂಗ:** ಗಂಗನಿಗೆ ಘಟನೆಗಳನ್ನು ಬಣ್ಣಕಟ್ಟಿ ಹೇಳಬೇಕೆಂಬ ಚಪಲ ಕಡಮೆ. ನೇರವಾದ ನಿರೂಪಣೆಯೇ ಅವನ ದಾರಿಯಾದುದರಿಂದ, ಕುಮಾರರಾಮನನ್ನು ಬಚ್ಚಿಡುವ ಪ್ರಸಂಗವೂ, ರಾಮನ ಸತಿಯರನ್ನು ಅಗ್ನಿಪ್ರವೇಶ ಮಾಡದಂತೆ ಸಂರಕ್ಷಿಸುವ ಪ್ರಸಂಗವೂ ಬೈಚಪ್ಪನ ಬುದ್ಧಿವಂತಿಕೆಯಿಂದ ಸ್ವಾಭಾವಿಕವಾಗಿ ಚಿತ್ರಿತವಾಗಿವೆ. ಮಹಲಿಂಗಸ್ವಾಮಿಯಲ್ಲಿಯೂ ಇದೇ ಕ್ರಮ ಕಂಡು ಬರುತ್ತದೆ.

ನಂಜುಂಡನ ನಿರೂಪಣೆ ಇದಕ್ಕೆ ತೀರ ಭಿನ್ನವಾಗಿದೆ. ಇಂದ್ರಜಾಲ ನಿಬಿಡವಾಗಿದೆ. ಸಾಕಾದಷ್ಟು ಸೋಜಿಗವಾಗಿ ಪರಿಣಮಿಸಿದೆ.

**VII. ರಾಮನ ಸಾವಿನ ಭವಿಷ್ಯ:** ಕುಮಾರರಾಮನು ತನಗೆ ಬಂದಿದ್ದ ಗಂಡಾಂತರವನ್ನು ಕಳೆದುಕೊಂಡ ಬಳಿಕ ತನ್ನ ಇಷ್ಟದೇವತೆಯಾದ ಜಟ್ಟಂಗಿರಾಮನನ್ನು ಕಾಣುವನು. ಆಗ, ಅವನಿಗೆ ತನ್ನ ಬದುಕು ಎಂದಿಗೆ ಕೊನೆಯಾದೀತೋ ಎಂಬ ಚಿಂತೆ ವ್ಯಾಪಿಸಿದ್ದಂತಿದೆ. ಏಕೆಂದರೆ, ದೇವರನ್ನು ತನಗೆ ಸಾವನ್ನು ಅನುಗ್ರಹಿಸಬೇಕೆಂದು ಕೇಳಿಕೊಳ್ಳುವನು. ಆಗ ಒಂದು ಪುಷ್ಪವು ಬೀಳುವುದು.

ಈ ಸಂದರ್ಭವನ್ನು ನಂಜುಂಡನಲ್ಲಿ ಬೇರೊಂದು ರೂಪದಲ್ಲಿ ಕಾಣುತ್ತೇವೆ. ಕುಮಾರರಾಮನು ದೇವದೂತನನ್ನು ಕೇಳುವನು. ಆತನು, ಮಾತಂಗಿಯ ದೆಸೆಯಿಂದ ರಾಮನಿಗೆ ಮರಣಸಂಭವಿಸುವುದೆಂದೂ, ಆದರೆ ಅವನ ಹೆಸರು ಚಿರಸ್ಥಾಯಿಯಾಗುವುದೆಂದೂ ಅವನ ರುಂಡವನ್ನು ಕಂಡೊಡನೆಯೇ ಸುರುತಾಳನ ಮಗಳೂ ಪ್ರಾಣತ್ಯಾಗಮಾಡುವಳೆಂದೂ ಹೇಳುವನು.

ಮಹಲಿಂಗಸ್ವಾಮಿಯಲ್ಲಿ ಇದರ ಪ್ರಸ್ತಾಪವನ್ನು ಅಲೌಕಿಕವಾದ ಪವಾಡದಿಂದ ನಿವಾರಿಸಿದ್ದರೂ, ಕೌತುಕದಿಂದ ಪರಿಹರಿಸಲು ಸಾಧ್ಯವಾಗಿಲ್ಲ. ಗುರುಮುನಿ ಎಂಬುವರ ಮೂಲಕ ರಾಮನಿಗೆ ತನ್ನ ಅಂತ್ಯ ಕಾಲ ಸಮಿಾಪಿಸುತ್ತಿರುವುದು ಅರಿವಾಗುತ್ತದೆ.

**VIII. ತೆಲುಗರ ದ್ರೋಹ:** ಗಂಗನ ಎಲ್ಲ ಪ್ರತಿಗಳಲ್ಲಿಯೂ ಇದರ ವಿಚಾರ ಬರುತ್ತದೆ. ಇದು ಅಸಂಭವವೇನೂ ಅಲ್ಲ. ಗುತ್ತಿಯ ಜಗತಾಪಿ, ವೀರರುದ್ರ ಇವರನ್ನು ಸೋಲಿಸಿದ್ದೊಂದು ಕಡೆ, "ನವಲಕ್ಕ ತೆಲುಗರ ಗಂಡ" ಎಂಬ ಬಿರುದನ್ನು ಧರಿಸಿದ್ದೊಂದು ಕಡೆ, ಎರಡೂ ಸೇರಿ ಹೀಗಾಗಿರಬಹುದು. ಗಂಗನ ನಿರೂಪಣೆಗೆ ಅನುಸಾರವಾಗಿ ಇದು ಸಹಜವಾಗಿದೆ. ಈ ಅಂಶವನ್ನು ನಂಜುಂಡನು ಹೇಳುವುದಿಲ್ಲ. ಇದನ್ನು ಸ್ವೀಕರಿಸಿರುವ ಮಹಲಿಂಗಸ್ವಾಮಿ ವಿಷಯವನ್ನು ಮತ್ತಷ್ಟು ಬೆಳೆಸಿರುವನು. ರತ್ನಾಜಿಯ ಮಗ ನಾದ ಯಲ್ಲರಸನನ್ನು ತೆಲುಗರು ಮುಂದಿಟ್ಟುಕೊಂಡು ಈ ಕೆಲಸವನ್ನು ನಿರ್ವಹಿಸಿದರೆಂದು ಹೇಳಿರುತ್ತಾನೆ.

**IX. ಬೊಲ್ಲನ ಸಾವು:** ಇದೊಂದು ಸಣ್ಣ ಘಟನೆಯಾದರೂ ತುಂಬ ಗಮನಾರ್ಹವಾದುದು. ಗಂಗ ನಲ್ಲಿ ಬೊಲ್ಲನ ಪ್ರಸಂಗವನ್ನು ಕುಮಾರರಾಮನ ಸಾಹಸಕಾರ್ಯಗಳಲ್ಲಿ ಒಂದು ಎಂಬಂತೆ ಚಿತ್ರಿಸಲಾಗಿದೆ ಯಷ್ಟೆ. ಇದು ಕಡೆಗಾಲದಲ್ಲಿ ಹೇಗೆ ಸತ್ತಿತೆಂಬ ಬಗ್ಗೆ ಹೆಚ್ಚು ವಿಶೇಷವೇನೂ ಕಂಡುಬರುವುದಿಲ್ಲ. ಆದರೆ, ನಂಜುಂಡನು ಇದನ್ನು ದಿವ್ಯಾಶ್ವವೆಂದು ಗ್ರಹಿಸಿದ್ದರಿಂದಲೋ ಏನೋ ಇದರ ಅಂತ್ಯವು ಆಶ್ಚರ್ಯಕಾರಿ ಯಾಗಿದೆ. ರಾಮನು ಕೆಳಕ್ಕೆ ಇಳಿದ ಕೂಡಲೇ ಇದು ಪ್ರಾಣ ಬಿಡುತ್ತದೆ. ಇದರ ಕಡೆಗಾಲ ಅಷ್ಟು ಅನಿರೀಕ್ಷಿತ ಮತ್ತು ಅದ್ಭುತ. ಮಹಲಿಂಗಸ್ವಾಮಿಯೂ ಸಹ ಈ ಘಟನೆಯನ್ನು ನಂಜುಂಡನಷ್ಟೇ ವಿಸ್ಮಯಕರವಾಗಿ ಹೇಳಿದ್ದಾನೆ. ಇದು, ಕಡೆಗಾಲದಲ್ಲಿ ರಾಮನನ್ನು ತನ್ನನ್ನು ವೈರಿಗೆ ಕೊಡಬೇಡವೆಂದೂ ; ಆತನ ಕೈಯಿಂದಲೇ ತನ್ನನ್ನು ಸಂಹರಿಸಬೇಕೆಂದೂ ಬೇಡುವುದು. ರಾಮನಿಗೆ ಕೊಲ್ಲಲು ಮನಸ್ಸಾಗದೆ ಶಿಲೆಯಾಗುವಂತೆ ಹೇಳು ವನು. ಅಂತೆಯೇ ಇದು ಕಲ್ಲಾಗುವುದು.

**X. ಕುಮಾರರಾಮನ ಮರಣ ಮತ್ತು ಮಹತ್ವ:** ಕುಮಾರರಾಮನು ಒಬ್ಬೊಬ್ಬರನ್ನಾಗಿ ಎಲ್ಲರನ್ನೂ ಕಳೆದುಕೊಂಡು ಮಾತಂಗಿಯ ದ್ರೋಹದಿಂದ ಅಂಬುಗೂಡಾಗಿ ಸತ್ತನೆಂದು ಗಂಗನು ಚಿತ್ರಿಸಿರು ತ್ತಾನೆ. ಆತನ ರುಂಡ ಲಿಂಗಾಕೃತಿಯಾಯಿತೆಂಬುದಾಗಿ ಪಾಂಚಾಳಗಂಗ ನಂಜುಂಡರಲ್ಲಿ ಹೇಳಿದೆ. ಈ ಅಲೌಕಿಕ ಅಂಶವನ್ನು ಬಿಟ್ಟರೆ, ಗಂಗನ ನಿರೂಪಣೆ ಬಹುಮಟ್ಟಿಗೆ ನೈಜವಾಗಿದೆ. ನಂಜುಂಡನಲ್ಲಿ ಕುಮಾರ ರಾಮನು ಧ್ಯಾನಮಗ್ನನಾಗಿ, ಯೋಗವಿಧಿಯಿಂದಲೇ ಸೂಕ್ಷ್ಮಶರೀರಧಾರಿಯಾಗಿ ಕೈಲಾಸಕ್ಕೆ ತೆರಳುವನು. ಈ ಭಾಗ ಸಂಪೂರ್ಣವಾಗಿ ಮಹಿಮಾತಿಶಯದಿಂದ ಕೂಡಿದೆ. ಪದಚ್ಯುತನಾಗಿದ್ದ ಅರ್ಜುನ ಗಣನಾಥನು ಮತ್ತೆ ಗಣ ಪದವಿಯನ್ನು ಪಡೆಯುವುದೇ ಇಲ್ಲಿನ ಚರಮ ಲಕ್ಷ್ಯ. ಮಹಲಿಂಗಸ್ವಾಮಿಗೂ ಈ ಅದ್ಭುತ ಚಿತ್ರಣದ ಸೋಂಕು ತಪ್ಪಿಲ್ಲ. ಯುದ್ಧದಲ್ಲಿ ಕಡೆಯತನಕ ಹೋರಾಡಿ, ಗೂಗೆಗಲ್ಲಿಗೆ ಬಂದು, ರಾಮನು ಶಿವನನ್ನು ಧ್ಯಾನಿಸುತ್ತ ಪ್ರಾಣ ಬಿಡುವನು. ವೀರನೊಬ್ಬನ ಮರಣದ ಘಟನೆ ಕಾಲ ಬದಲಾವಣೆಯಿಂದಲೊ, ಇಲ್ಲವೇ ದೃಷ್ಟಿ ಬದಲಾವಣೆಯಿಂದಲೋ ಹೇಗೆ ಪವಾಡಸದೃಶವಾಗುತ್ತದೆಯೆಂಬುದಕ್ಕೆ ಇದು ಒಂದು ನಿದರ್ಶನವೆನ್ನಬಹುದು.

## ಸಾದೃಶ್ಯಗಳ ಸಮೀಕ್ಷೆ

ಇಲ್ಲಿಯತನಕ ಮೂರು ಕೃತಿಗಳಲ್ಲಿಯೂ ಕಂಡುಬರುವ ಸಾದೃಶ್ಯಗಳನ್ನು ಸಾಕಾದಷ್ಟು ವಿವರವಾಗಿಯೇ ಪರಿಶೀಲಿಸಿದ್ದಾಯಿತು. ಈ ಹೋಲಿಕೆಗಳೆಲ್ಲವೂ ಒಂದೇ ರೀತಿಯಾಗಿಲ್ಲ. ಆಯಾ ಕೃತಿಗಳ ಕಥಾನಿರೂಪಣೆಗೆ ಅನುಗುಣವಾಗಿ ವಿಷಯ ಸಾದೃಶ್ಯ, ವಿವರ ಸಾದೃಶ್ಯ ಮತ್ತು ಪದ್ಯ ಸಾದೃಶ್ಯಗಳು ವ್ಯಕ್ತವಾಗುತ್ತವೆ. ಈ ಕವಿಗಳು ಒಬ್ಬರನ್ನೊಬ್ಬರು ನೆನೆಯದೆ ಇರುವುದರಿಂದ, ಈ ಅಂತರಿಕ ಸಾಮ್ಯಗಳ ಆಧಾರದ ಮೇಲೆ ಪರಸ್ಪರ ಪ್ರಭಾವವನ್ನು ನಿರ್ದೇಶಿಸಲು ಪ್ರಯತ್ನಮಾಡಬಹುದು.

ಮೂವರು ಕವಿಗಳೂ ಒಂದೇ ವಸ್ತುವನ್ನು ಕುರಿತು ಬರೆದಿರುವುದರಿಂದ ಎಲ್ಲರಲ್ಲಿಯೂ ಮುಖ್ಯವಾದ ಕಥಾಭಾಗದಲ್ಲಿ ವಿಷಯ ಸಾದೃಶ್ಯ ಕಂಡುಬರುತ್ತದೆ. ಪ್ರಧಾನ ಘಟನೆಗಳು ಮತ್ತು ಪ್ರಮುಖ ಪಾತ್ರಗಳಲ್ಲಿ ಯಾರೂ ಯಾವ ಬದಲಾವಣೆಯನ್ನೂ ಮಾಡಿಲ್ಲ. ಆದರೆ ಉಳಿದ ಕಥಾಭಾಗದಲ್ಲಿ ನಂಜುಂಡ ಮತ್ತು ಪಾಂಚಾಳಗಂಗರನ್ನಾಗಲಿ, ನಂಜುಂಡ ಮತ್ತು ಮಹಲಿಂಗಸ್ವಾಮಿಯರನ್ನಾಗಲಿ ಬೇರೆ ಬೇರೆಯಾಗಿ ಪರಿಶೀಲಿಸಿದಾಗ ಸ್ಥೂಲ ಸಾದೃಶ್ಯವೇ ಹೆಚ್ಚಾಗಿ ತೋರಿಬರುತ್ತದೆ. ಹುಳಿಯಾರಿನ ಯುದ್ಧ ಮತ್ತು ಶೂಲದ ಹಬ್ಬಗಳನ್ನು ನಂಜುಂಡ ಮತ್ತು ಪಾಂಚಾಳಗಂಗರು ಮಾತ್ರವೇ ವಿವರಿಸಿದ್ದರೂ ಇಲ್ಲಿ ಕಂಡುಬರುವ ಸಾಮ್ಯ ಬಾಹ್ಯದ ರೂಪು ರೇಖೆಗಳಿಗಿಂತ ಹೆಚ್ಚಾಗಿ ಮುಂದುವರಿಯುವುದಿಲ್ಲ. ಈ ಘಟನೆಗಳಿಗೆ ಸಂಬಂಧಿಸಿದ ವಿವರಗಳನ್ನು ಇಬ್ಬರೂ ಬೇರೆ ಬೇರೆ ರೀತಿಯಾಗಿ ಬೆಳೆಸಿರುತ್ತಾರೆ. ಇಂತೆಯೇ ನಂಜುಂಡ ಮತ್ತು ಮಹಲಿಂಗಸ್ವಾಮಿಯರ ಕೃತಿಗಳಲ್ಲಿ ಮಾತ್ರವೇ ಬರುವ ಕುಮಾರರಾಮನ ಮರಣದ ಭವಿಷ್ಯವನ್ನು ಸೂಚಿಸುವ ದೇವದೂತ ಮತ್ತು ಗುರುಮುನಿಗಳ ಪ್ರಸಂಗವೂ ಕೇವಲ ಬಾಹ್ಯ ಸಾದೃಶ್ಯವನ್ನುಳ್ಳದ್ದು. ಇಲ್ಲಿನ ಸನ್ನಿವೇಶಗಳೂ ಇತರ ವಿವರಗಳೂ ಬೇರೆ ಬೇರೆಯಾಗಿರುವುದರಿಂದ, ಈ ಕವಿಗಳು ಇವುಗಳನ್ನು ಸ್ವತಂತ್ರವಾಗಿಯೇ ನಿರ್ಮಿಸಿಕೊಂಡಿರಬಹುದು. ಮಾತಂಗಿ ತನ್ನ ಪೂರ್ವಜನ್ಮವನ್ನು ಸ್ಮರಿಸಿಕೊಳ್ಳುವ ಸಂಗತಿ ಸ್ವಲ್ಪಮಟ್ಟಿಗೆ ನಂಜುಂಡನ ಪೂರ್ವಜನ್ಮ ಸ್ಮರಣೆಯ ರೀತಿಯನ್ನು ನೆನಪಿಗೆ ತಂದರೂ, ಈ ಭಾವನೆ ಅನುಕರಣೆಯಿಂದಲೇ ಆಗಿದೆಯೆಂದು ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಮಹಲಿಂಗಸ್ವಾಮಿ ನಂಜುಂಡನಲ್ಲಿ ಕಂಡುಬರುವ ಇದೇ ರೀತಿಯ ಇತರ ಸಂದರ್ಭಗಳನ್ನು ಸ್ವೀಕರಿಸದೆ ಬಿಟ್ಟಿರುವುದು ಗಮನಾರ್ಹವಾಗಿದೆ. ಈ ಮಧ್ಯೆ, ನಂಜುಂಡನ ಕೃತಿಯ ತರುವಾಯ ರಚಿತವಾದ ಗಂಗನ ಕೃತಿಯ ಒಂದು ಪ್ರತಿಯಲ್ಲಿಯೂ (ಗಂ. ೪, vi, ೧೯೦–೧೯೬) ಈ ಕಲ್ಪನೆ ವ್ಯಕ್ತವಾಗುವುದರಿಂದ, ಮಹಲಿಂಗಸ್ವಾಮಿಯ ಕಾಲದಲ್ಲಿ ಯಾವುದು ಆತನಿಗೆ ಈ ಪ್ರೇರಣೆಯನ್ನುಂಟುಮಾಡಿತೆಂದು ನಿರ್ಧರಿಸುವುದು ಕಷ್ಟ. ಒಟ್ಟಿನಲ್ಲಿ ಈ ಮೂರು ಕೃತಿಗಳನ್ನೂ ಹೀಗೆ ಹೋಲಿಸಿ ನೋಡಿದಾಗ ಇಲ್ಲಿ ವ್ಯಕ್ತವಾಗುವ ವಿಷಯ ಸಾದೃಶ್ಯ ಇವುಗಳ ಪರಸ್ಪರ ಪ್ರಭಾವಗಳನ್ನು ನಿರ್ಧರಿಸಿ ಹೇಳುವಷ್ಟು ಗಾಢವಾಗಿಲ್ಲ ಎನ್ನಬಹುದು. ಬೇರೆ ಬೇರೆಯಾಗಿ ಗಮನಿಸಿದಾಗಲೂ ನಂಜುಂಡನ ರಚನೆ ಉಳಿದೆರಡು ಕೃತಿಗಳ ಮೇಲೆ ತನ್ನ ಪ್ರಭಾವವನ್ನು ಬೀರಿದೆಯೆಂದು ಹೇಳಲು ಸಾಕಾದಷ್ಟು ಸಾಮಗ್ರಿಯಿಲ್ಲ.

ಇನ್ನು ವಿವರ ಸಾದೃಶ್ಯವನ್ನು ತೆಗೆದುಕೊಂಡರೆ, ನಂಜುಂಡನ ಸರಣಿಗೂ, ಉಳಿದ ಇಬ್ಬರ ರೀತಿಗೂ ಹೋಲಿಕೆ ಕಡಮೆ. ಈ ದೃಷ್ಟಿಯಿಂದ ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಯರ ಕೃತಿಗಳಲ್ಲಿ ತೋರಿಬರುವ ಹಲವಾರು ಅಂಶಗಳು ತುಂಬ ಗಣನೀಯವಾಗಿವೆ. ಕುಮಾರರಾಮನು ಬೊಲ್ಲನನ್ನು ಸಂಪಾದಿಸುವುದು, ದೇವಿಶೆಟ್ಟಿಲಿಂಗನ ಸ್ನೇಹವನ್ನು ಬೆಳಸುವುದು, ರಾಮನ ಸತಿಯರ ಚಿತಾಪ್ರವೇಶ, ಗೂಳೆಯದ ವರ್ಣನೆ, ನೇಮಿಯ ದಂಡಿನಲ್ಲಿ ಟಗರು ಮತ್ತು ಹುಂಜಗಳ ಶಕುನವನ್ನು ನೋಡುವುದು, ತೆಲುಗರ ದ್ರೋಹ ಮುಂತಾದ ಅನೇಕ ಸನ್ನಿವೇಶಗಳ ವಿವರಣೆ ಇಬ್ಬರಲ್ಲಿಯೂ ಒಂದೇ ರೀತಿಯಾಗಿ ಬರುತ್ತವೆ. ಸೂತ್ರರೂಪದಲ್ಲಿ ಹೇಳುವುದಾದರೆ ಇವರ ರೀತಿ ಒಂದು ; ಮಾತು ಬೇರೆ. ಸಣ್ಣಸಣ್ಣ ಸಂಗತಿಗಳಲ್ಲಿಯೂ ಸಾಮ್ಯ ತೋರಿಬರುತ್ತದೆ. ಆದ್ದರಿಂದ, ಈ ಕೃತಿಗಳು ಪರಸ್ಪರ ಪ್ರಭಾವಕ್ಕೆ ಒಳಗಾಗಿವೆಯೆಂದು ಊಹಿಸಬಹುದು. ಆದರೆ

ಈ ಪ್ರಭಾವ ಎಷ್ಟರಮಟ್ಟಿಗೆ ಪ್ರತ್ಯಕ್ಷವಾದುದು ಎಂಬ ಅಂಶವನ್ನು ಇಷ್ಟು ಮಾತ್ರದಿಂದಲೇ ಹೇಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ, ಮಹಲಿಂಗಸ್ವಾಮಿಯ ಕಾಲಕ್ಕಾಗಲೇ ಗಂಗನ ಕೃತಿಯ ಪಾಠ ಜನಪ್ರಚುರವಾಗಿ ಕರ್ಣಾಕರ್ಣಿಕೆಯಾಗಿ ಹಬ್ಬಿ, ಕವಿ ಈ ವಿಚಾರಗಳನ್ನು ಬಳಸಿಕೊಂಡಿರಬಹುದು. ಇಲ್ಲವೇ, ಈ ಇಬ್ಬರು ಕವಿಗಳೂ ಅನುಸರಿಸಿರುವ ಕಥಾಮೂಲ ಒಂದೇ ಆಗಿರಬಹುದು. ಅಂತೂ, ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿಯರಲ್ಲಿ ಕಂಡುಬರುವ ವಿವರ ಸಾದೃಶ್ಯದ ಸ್ವರೂಪ ಈ ಕೃತಿಗಳ ಪಾಠಸಂಪ್ರದಾಯದ ಪರಸ್ಪರ ಸಂಬಂಧವನ್ನು ನಿರ್ದೇಶಿಸಲು ಸಾಕಾದಷ್ಟು ಸಹಾಯಕವಾಗಿದೆ.

ಯಾವುದಾದರೂ ಎರಡು ಕೃತಿಗಳ ಸಂಬಂಧವನ್ನು ನಿಷ್ಕರ್ಷಿಸಲು ಪದ್ಯಸಾಮ್ಯ ಉಳಿದೆರಡು ಸಾದೃಶ್ಯಗಳಿಗಿಂತಲೂ ಹೆಚ್ಚು ಪ್ರಮಾಣಭೂತವಾದದ್ದು. ಆದರೆ, ಈ ವಿಷಯದಲ್ಲಿ ಪ್ರತಿಕಾರರ ಕೈವಾಡವನ್ನು ಮರೆಯುವಂತಿಲ್ಲ. ಅದರಲ್ಲಿಯೂ ಒಂದೇ ವಿಷಯವನ್ನು ಕುರಿತ ಬೇರೆ ಬೇರೆ ರಚನೆಗಳು ಒಂದೇ ಛಂದಸ್ಸಿನಲ್ಲಿದ್ದರಂತೂ ಹೇಳಬೇಕಾಗಿಯೇ ಇಲ್ಲ. ಪ್ರಕೃತದಲ್ಲಿ ಈ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ. ನಂಜುಂಡ ಮತ್ತು ಪಾಂಚಾಳ ಗಂಗರಲ್ಲಿ ಕಂಡುಬರುವ ಪದ್ಯಸಾಮ್ಯ ಹೆಚ್ಚಾಗಿಲ್ಲ. ಅಲ್ಲದೆ, ಅವು ಎಲ್ಲ ಪ್ರತಿಗಳಲ್ಲಿಯೂ ಕಂಡುಬಾರದಿರುವುದೂ, ಏಕರೀತಿಯಾಗಿ ಇಲ್ಲದಿರುವುದೂ ಈ ವಿಚಾರಕ್ಕೆ ಸಾಕಾದಷ್ಟು ಪುಷ್ಟಿಯನ್ನು ಕೊಡುವುದಿಲ್ಲ. ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿಗಳ ಕೃತಿಗಳಲ್ಲಿಯಾದರೋ ಕೆಲವೆಡೆಗಳಲ್ಲಿ ಪದ್ಯಸಾದೃಶ್ಯವೂ, ಹಲವೆಡೆಗಳಲ್ಲಿ ಭಾವಸಾದೃಶ್ಯವೂ ಗಾಢವಾಗಿ ವಿದಿತವಾಗುತ್ತವೆ. ಒಂದು ಪಕ್ಷ ಪದ್ಯಗಳನ್ನು ಬೇರೆಯವರು ತಂದು ಸೇರಿಸಿದರೂ ಸೇರಿಸಬಹುದು. ಆದರೆ, ಭಾವವನ್ನು ಅನುಕರಿಸಿ ಹೇಳುವ ಕಾರ್ಯ ಬಹುಮಟ್ಟಿಗೆ ಕವಿಯಿಂದಲೇ ಆಗಬಹುದಾದದ್ದು. ಇಬ್ಬರೂ ತಗಡೂರಿನ ವಿನಾಯಕನನ್ನು ಸ್ಮರಿಸಿರುವುದೂ, ಗಂಗನಲ್ಲಿ ಕಂಡುಬರುವ ಕೆಲವು ಪದ್ಯಗಳ ಭಾವವನ್ನು ಮಹಲಿಂಗಸ್ವಾಮಿ ವಿವರಿಸಿ ಹೇಳಿರುವುದೂ, ಅನೇಕ ಸಣ್ಣಪುಟ್ಟ ಬದಲಾವಣೆಗಳನ್ನು ಗ್ರಹಿಸಿರುವುದೂ ಈ ಎರಡು ಕೃತಿಗಳ ನಿಕಟ ಪರಿಚಯವನ್ನು ತಾವಾಗಿಯೇ ವಿಶದಪಡಿಸುತ್ತವೆ. ಈ ರೀತಿಯ ಸಾದೃಶ್ಯವಿಶೇಷದ ಆಧಾರದ ಮೇಲೆ, ಗಂಗನ ಕೃತಿ ಮಹಲಿಂಗಸ್ವಾಮಿಯ ಕೃತಿಯ ಮೇಲೆ ತಕ್ಕಮಟ್ಟಿಗಾದರೂ ನೇರವಾಗಿ ತನ್ನ ಪ್ರಭಾವವನ್ನು ಬೀರಿದೆಯೆಂದು ಹೇಳಲು ಅವಕಾಶವಿದೆ.

ಘಟನಾವಳಿಗಳ ಪರಸ್ಪರ ಸಂಬಂಧದ ಪರಿಶೀಲನೆಯಲ್ಲಿ ಒಂದೆರಡು ಸಮಸ್ಯೆಗಳೂ ಉಂಟು. ಒಂದೊಂದು ಘಟನೆಯನ್ನೂ ಸ್ವರೂಪದ ದೃಷ್ಟಿಯಿಂದ ನೋಡಿದಾಗ, ಕೆಲವು ಗಂಗನಲ್ಲಿ ಸಂಕ್ಷಿಪ್ತವಾಗಿಯೂ, ನಂಜುಂಡ ಮತ್ತು ಮಹಲಿಂಗಸ್ವಾಮಿಯರಲ್ಲಿ ವಿಸ್ತಾರವಾಗಿಯೂ ನಿರೂಪಿತವಾಗಿರುವುದು ವಿದಿತವಾಗುತ್ತವೆ. ಮಹಲಿಂಗಸ್ವಾಮಿಯ ಕೃತಿ ಎಲ್ಲಕ್ಕಿಂತಲೂ ಇತ್ತೀಚಿನದಾಗಿರುವುದರಿಂದ ಈ ಲಕ್ಷಣ ಅದಕ್ಕೆ ಸಹಜವೇ ಸರಿ. ಆದರೆ, ಈ ಮೊದಲೇ ಸೂಚಿಸಿರುವಂತೆ ನಂಜುಂಡನಿಗಿಂತಲೂ ಇತ್ತೀಚಿನದಾದ ಪಾಂಚಾಳಗಂಗನಲ್ಲಿ ವಿಷಯ ಬೆಳೆಯುವುದಕ್ಕೆ ಬದಲಾಗಿ ಹೀಗೆ ಸಂಕ್ಷಿಪ್ತವಾಗಲು ಕಾರಣವೇನು ಎನ್ನಿಸುವುದು ಸ್ವಾಭಾವಿಕ. ಪ್ರಕೃತದಲ್ಲಿ ಇದಕ್ಕೆ ಹೀಗೆ ಸಮಾಧಾನವನ್ನು ಹೇಳಬಹುದು. ಗಂಗನದು ಇತ್ತೀಚಿನ ಕೃತಿಯಾದರೂ ಅದರಲ್ಲಿ ಘಟನೆಗಳು ಬೆಳೆಯದೆ ಇರುವುದಕ್ಕೆ ಅದರ ಮೇಲೆ ನಂಜುಂಡನ ಪ್ರಭಾವ ಬೀಳದೇ ಇರುವುದೇ ಒಂದು ಕಾರಣ. ಎರಡನೆಯದಾಗಿ, ಗಂಗನ ಕೃತಿಯ ವ್ಯಾಪ್ತಿ. ಈ ಕವಿ ತನ್ನ ಕಾವ್ಯವನ್ನು ಬಹಳ ಸಂಗ್ರಹವಾಗಿ ಹೇಳಿರುತ್ತಾನೆ. ಈತನ ಗಮನವೆಲ್ಲವೂ ಕಥೆಯ ಮುಖ್ಯಾಂಶಗಳ ಕಡೆಗೇ ಹೆಚ್ಚಾಗಿ ಬಿದ್ದಿರುವುದನ್ನು ಕಾಣಬಹುದು. ಇದಲ್ಲದೆ, ಇತರ ರಚನೆಗಳೊಂದಿಗೆ ಈ ಮೂರು ಕೃತಿಗಳನ್ನೂ ಪರಿಶೀಲಿಸಿ ನೋಡಿದಾಗ (ಮುಂದೆ ಈ ವಿಚಾರವನ್ನು ವಿಸ್ತಾರವಾಗಿ ಪ್ರತಿಪಾದಿಸಿದೆ.) ಗಂಗನ ಕೃತಿ ಎಲ್ಲಕ್ಕಿಂತಲೂ ಹೆಚ್ಚಾಗಿ ಜನಪ್ರಿಯವಾದ ಸಂಗತಿಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ಈ ಕವಿ ಜನರಲ್ಲಿ ಬಳಕೆಯಲ್ಲಿದ್ದಿರಬಹುದಾದ ಕುಮಾರರಾಮನ ಕಥೆಯನ್ನು ಹೆಚ್ಚು ಬೆಳಸದಂತೆಯೂ, ಪಾಮರರಿಗೆ ಪ್ರಿಯವಾಗುವಂತೆಯೂ

ಸುಲಭವಾಗಿ ಅರ್ಥವಾಗುವಂತೆಯೂ ನಿರೂಪಿಸಿರುವಂತಿದೆ. ಆದ್ದರಿಂದ ಗಂಗನಲ್ಲಿ ಅನೇಕ ಘಟನೆಗಳು ಬೀಜ ಪ್ರಾಯವಾಗಿ ತೋರಿಬರುತ್ತವೆ.

ಮೂರು ಕೃತಿಗಳ ವೈಶಿಷ್ಟ್ಯವನ್ನು ಪ್ರತ್ಯೇಕವಾಗಿ ಗಮನಿಸಿದಾಗಲೂ ಮತ್ತೊಂದು ಅಂಶ ವಿದಿತ ವಾಗುತ್ತದೆ. ನಂಜುಂಡನು ತನಗೆ ದೊರೆತ ಕಥೆಯನ್ನು ತನ್ನ ಉದ್ದೇಶಕ್ಕೆ ಅನುಸಾರವಾಗಿ ಹೇಗೆ ಪ್ರೌಢ ವಾಗಿಯೂ, ಚಮತ್ಕಾರವಾಗಿಯೂ ಪರಿವರ್ತಿಸಿಕೊಂಡಿರುವನೆಂಬುದನ್ನು ಕಾಣಬಹುದು. ಉದಾಹರಣೆಗೆ, ರತ್ನಾಜಿಯ ಜನನ, ಹಗರಣ ಮತ್ತು ಮರಣಗಳ ಕಥೆ ನಂಜುಂಡನಲ್ಲಿ ಒಂದು ತೆರನಾಗಿ ಸಾಗುತ್ತದೆ. ನಂಜುಂಡನಲ್ಲಿ ಆಕೆಯ ಪಾತ್ರ ವಿಶಿಷ್ಟವಾಗಿ ಮುಂದುವರಿಯುತ್ತದೆ. ರಾಜಪುತ್ರಿಯಾದ ಆಕೆ ತಾನು ಸತ್ತ ಬಳಿಕ, ತನ್ನ ಛಲವನ್ನೆಲ್ಲ ಮರೆತು ದೇವಲೋಕದಲ್ಲಿ ರಾಮನ ಕೀರ್ತಿಯನ್ನು ಸಾರಿ ಹೇಳುವ ಕಾರ್ಯವನ್ನು ಕೈಕೊಳ್ಳುತ್ತಾಳೆ. ಮಹಲಿಂಗಸ್ವಾಮಿಯಲ್ಲಿ ಈಕೆ ಮೊದಲಿನಿಂದ ಕಡೆಯವರೆಗೆ ಎಲ್ಲರ ಅವಹೇಳನೆಗೂ ಗುರಿಯಾಗುತ್ತಾಳೆ. ಹುಟ್ಟಿನಲ್ಲಿ ಡೊಂಬರವಳು; ನಡತೆಯಲ್ಲಿ ಬಹಳ ನೀಚಳು; ಮರಣದಲ್ಲಿಯೂ ಮತ್ಸರ ವನ್ನು ಬಿಡುವವಳಲ್ಲ. ಮಾತಂಗಿಯ ಜನ್ಮದಿಂದಲೇ ಆಕೆಗೆ ಬಿಡುಗಡೆ ದೊರೆಯುವುದು. ಅವತಾರ ಕಲ್ಪನೆ ಯಲ್ಲಿ ನಂಜುಂಡನದೊಂದು ದಾರಿಯಾದರೆ, ಮಹಲಿಂಗಸ್ವಾಮಿಯದು ಮತ್ತೊಂದು ಮಾರ್ಗ. ನಂಜುಂಡನ ರಚನೆ ಪ್ರೌಢವಾದ ಕಾವ್ಯವೆನ್ನಿಸಿದರೆ, ಮಹಲಿಂಗಸ್ವಾಮಿಯ ಕೃತಿ ಕಗ್ಗವಾಗಿ ಪರಿಣಮಿಸಿದೆ. ಈ ಮಧ್ಯೆ, ಪಾಂಚಾಳ ಗಂಗನ ಕೃತಿಯಲ್ಲಿ ಮಾತ್ರ ಕಂಡುಬರುವ ಯಾವ ವಿಶೇಷಾಂಶವೂ ಪೂರ್ತಿಯಾಗಿ ಕವಿಕೃತ ವೆಂದು ನಿರ್ಧರಿಸಿ ಹೇಳುವಂತಿಲ್ಲ. ಏಕೆಂದರೆ, ಪಾದುಕೆಯ ಪ್ರಸಂಗ, ವಂಶಾವಳಿಯ ವಿವರ, ರಾಮಲ ದೇವಿಯ ವಿವಾಹದ ವೃತ್ತಾಂತಗಳು ಎಲ್ಲ ಪ್ರತಿಗಳಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ, ಗಂಗನಲ್ಲಿ ಕುಮಾರರಾಮನ ಕಥೆಯ ಸಾಮಾನ್ಯಾಂಶಗಳಿಗೆ ಮಾತ್ರ ಮನ್ನಣೆ ದೊರೆತಿದೆ ಎನ್ನಬಹುದು. ಈ ಕಾರಣ ದಿಂದಲೇ ಗಂಗನ ಕೃತಿಗಳಿಗೂ ಉಳಿದೆರಡು ಕೃತಿಗಳಿಗೂ ಮುಖ್ಯಾಂಶಗಳಲ್ಲಿ ವಿಶೇಷವಾಗಿ ಹೋಲಿಕೆ ಕಂಡು ಬರುತ್ತದೆ.

ಈ ಮೇಲ್ಕಂಡ ಸಮೀಕ್ಷೆಯ ಆಧಾರದ ಮೇಲೆ, ಈ ಮೂರು ಕೃತಿಗಳಲ್ಲಿ ನಂಜುಂಡನ ಕಥಾ ಸಂಪ್ರದಾಯ ಒಂದು ವಿಶಿಷ್ಟವಾದ ವರ್ಗಕ್ಕೆ ಸೇರಿದುದೆಂದೂ, ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿ ಯರದು ಬೇರೊಂದು ಬಗೆಯಾದುದೆಂದೂ ವಿಂಗಡಿಸಿ ಹೇಳಬಹುದು. ಇದನ್ನು ಈ ಕೆಳಗೆ ಕಂಡಂತೆ ರೇಖಾ ರೂಪದಲ್ಲಿ ವ್ಯಕ್ತಪಡಿಸಬಹುದು :—



# ೭. ಇತರ ರಚನೆಗಳು

ಕುಮಾರರಾಮನನ್ನು ಕುರಿತು ಜನಜನಿತವಾದ ಕಥೆಗಳು, ಯಕ್ಷಗಾನಗಳು, ಜನಪದ ಸಾಹಿತ್ಯ, ಕೈಫಿಯತ್ತುಗಳು ಮತ್ತು ಇತ್ತೀಚಿನ ಕೆಲವು ಗ್ರಂಥಗಳೂ ಇವೆ. ತೆಲುಗಿನಲ್ಲಿ "ಕುಮಾರರಾಮುನಿ ಕಥ" ಎಂಬ "ತಂದನಾನಾ ಪಾಟ"ವಿದೆ.[1] ಅಲ್ಲದೆ, "ವಾಲ್ಮೀಕಿ ನಾಯಕುಲ ಜೀವಿತ ಚರಿತ್ರಮು" ಎಂಬ ಮತ್ತೊಂದು ಕೃತಿಯಲ್ಲಿ "ಕುಮಾರರಾಮುನಿ ಚರಿತ್ರ" ಎಂಬ ಕಥಾಭಾಗವಿದೆ.[2] ಈ ರಚನೆಗಳಲ್ಲಿ ವಿದಿತ ವಾಗುವ ಕೆಲವು ಅಂಶಗಳನ್ನು ಒಂದೊಂದಾಗಿ ಇಲ್ಲಿ ನಿರೂಪಿಸಿದೆ.

## ೧. ಜನಜನಿತವಾದ ಕಥೆಗಳು

ಕುಮಾರರಾಮನನ್ನು ಕುರಿತು ಇಂದಿಗೂ ಜನಸಾಮಾನ್ಯರಲ್ಲಿ ಅನೇಕ ಕಥೆಗಳು ಪ್ರಚಾರದಲ್ಲಿವೆ. ಅದರಲ್ಲಿಯೂ ಈ ಘಟನೆಗಳು ನಡೆದಿರಬಹುದಾದ ಎಡೆಗಳಲ್ಲಿ ಇವು ವಿಶೇಷವಾಗಿ ಬಳಕೆಯಲ್ಲಿರುವುದು ಸಹಜ. ಈಗಾಗಲೇ ಈ ಕಥೆಗಳಲ್ಲಿ ಎಷ್ಟು ಬದಲಾವಣೆಗಳು ಆಗಿವೆಯೋ ಏನೋ ಹೇಳಲು ಸಾಧ್ಯವಿಲ್ಲ. ಅಲ್ಲದೆ, ಹಿಂದೆ ವಿಚಾರಮಾಡಿರುವ ಕವಿಗಳ ರಚನೆಗಳೇ ಕಿವಿಯ ಮೇಲೆ ಬಿದ್ದು ಇವು ಪ್ರಚಾರಕ್ಕೆ ಬಂದಿರ ಬಹುದಾದ ಸಂಭವವೂ ಉಂಟು. ಆದರೂ ಕುಮಾರರಾಮನ ವಿಷಯವನ್ನು ಗ್ರಹಿಸಲು ಈ ಸ್ಥಳೀಯ ಐತಿಹ್ಯಗಳ ಪರಿಶೀಲನೆ ತುಂಬ ಸಹಾಯಕವಾದೀತು.

ಬಳ್ಳಾರಿ ಜಿಲ್ಲೆಯಲ್ಲಿನ ಸಂಡೂರಿನ ಸುತ್ತಮುತ್ತಲೂ ಪ್ರಚಾರದಲ್ಲಿರುವ ಎರಡು ಕಥೆಗಳನ್ನು ಮೊದಲು ನೋಡಬಹುದು.[3]

> (i) "ಹೊಸಮಲೆ ದುರ್ಗ; ಧೀರ ಕಂಪಿಲರಾಯ; ಕಾಸಿಗಿರಿ ಪಟ್ಟಣ (ದೇವಗಿರಿ). ಕಾಸಿಸೇನರಾಜ ಜಹಗೀರ್‌ದಾರ್. ಈತಗೆ ಇಬ್ಬರು ಮಕ್ಕಳು. ಒಂದು ಗಂಡು, ಒಂದು ಹೆಣ್ಣು. ಹರಿಯಾಲದೇವಿ ಹಿರಿಯ ಮಗಳು. ತಮ್ಮ ಬೈಚಪ್ಪ. ಬ್ರಾಹ್ಮಣರ ಆಚಾರ ಪ್ರಕಾರ ಆಕೆ ಯನ್ನು ಅಡವಿಯಲ್ಲಿ ಬಿಡುವರು. ಯಾಕೆಂದರೆ ಲಗ್ನಕ್ಕೆ ಮುಂಚಿತವಾಗಿ ಋತುಮತಿಯಾದಳು. ತಮ್ಮನು ಕಣ್ಣು ಕಟ್ಟಿ ಅಡವಿಯಲ್ಲಿ ಬಿಡಲು ಹೋಗುತ್ತಾನೆ. ರಾತ್ರಿ ವೇಳೆಯಲ್ಲಿ ಆಕೆ ಅಳುವು ದನ್ನು ಕಂಪಿಲಿಯವ ಕೇಳುತ್ತಾನೆ. ನಂತರ ಮಂತ್ರಿಯನ್ನು ಕೇಳಲು ಕಳಿಸುತ್ತಾನೆ. ಎಲ್ಲ ವಿಷಯ ತಿಳಿಸುತ್ತಾರೆ. ಆಕೆಯ ತಾಯ ಹೆಸರು ಕಮಲಾವತಿ. ಮಂತ್ರಿ ಎಲ್ಲಾ ವಿಷಯ ಕೇಳಿ ರಾಜನಿಗೆ ತಿಳಿಸುತ್ತಾನೆ.
>
> ಹರಿಯಾಲದೇವಿ ರಾಜನನ್ನು ಮದುವೆಯಾಗಲು ಒಪ್ಪುತ್ತಾಳೆ. ಬೈಚಪ್ಪನು ಮಂತ್ರಿ ಯಾಗುವನು. ಅವನಿಗೂ ಕೂಡ ಅಲ್ಲಿ ಲಗ್ನವಾಗುತ್ತದೆ. ಜಟ್ಟಂಗಿ ರಾಮೇಶ್ವರ, ಏಳನೇ ಜಗದಾಂಬಾ ಇವರ ಕುಲದೇವತೆಗಳು. ದೇವಿಯು ಪ್ರತ್ಯಕ್ಷಳಾಗಿ ಒಂದು ಹಣ್ಣನ್ನು ದಯಪಾಲಿಸುತ್ತಾಳೆ. ಆ ಹಣ್ಣನ್ನು ಪೂಜೆಗೆ ಇಟ್ಟುಬಿಡುತ್ತಾರೆ. ಗಡಿನಾಡ ಪಟ್ಟಣದಲ್ಲಿ

---

1. ಪ್ರಕಾಶಕರು : ಮದರಾಸು ಸರ್ಕಾರದ ಪ್ರಾಚ್ಯಪುಸ್ತಕ ಭಂಡಾರ, ೧೯೫೨.

2. ಪ್ರಕಾಶಕರು : ವಾಲ್ಮೀಕಿ ನಾಯಕುಲ ಸಂಘ, ಆದವಾನಿ ; ಲೇಖಕರು : ಶ್ರೀ ವೈ. ವಿ. ಸುಬ್ಬಯ್ಯ ನಾಯುಡು, ಕರ್ನೂಲು.

3. ಈ ಕಥೆಗಳನ್ನು ಸಂಗ್ರಹಿಸಿಕೊಟ್ಟವರು ಶ್ರೀ ಎಸ್. ನಾಗರಾಜ ; ಸಂಡೂರಿನ ಒಬ್ಬ ವಿದ್ಯಾರ್ಥಿ. ಸಂಗ್ರಹಕಾರರ ಶೈಲಿಯನ್ನೇ ಉಳಿಸಿಕೊಳ್ಳಲಾಗಿದೆ.

ಒಬ್ಬ ಆರೆ ಡೊಂಬರು ಗಂಡ ಹೆಂಡತಿ ಇದ್ದರು. ಹೆಂಡತಿ ಆರು ತಿಂಗಳು ಗರ್ಭವತಿ ಇದ್ದಳು. ಅವರ ಹೊಟ್ಟೆಯಲ್ಲಿ ಒಂದು ಹೆಣ್ಣು ಕೂಸು ಹುಟ್ಟಿತು. ಆಕೆಯ ಹೆಸರು ರತ್ನಾಜಿ(ರತ್ನಿ). ರಾಜನು ರತ್ನಾದೇವಿಯನ್ನು ಲಗ್ನವಾದ. ಆಕೆಯನ್ನು ಬೇರೆ ಮಹಲಿನಲ್ಲಿ ಇಟ್ಟುಬಿಟ್ಟ. ಇಬ್ಬರು ಗೌಡೇರು ಹಾಗೂ ಹರಿಯಾಲದೇವಿ ಹಣ್ಣನ್ನು ಮೂರು ಭಾಗ ಮಾಡಿ[ತಿಂದು], ಬೀಜ ವನ್ನು ಹಿತ್ತಲಲ್ಲಿ ಚೆಲ್ಲಿಬಿಟ್ಟರು. ಒಬ್ಬ ಬ್ರಾಹ್ಮಣ ಹೆಣ್ಣುಕುದುರೆಯನ್ನು ಸಂಪಾದಿಸಿದ್ದ. ಅದು ಬಂಜೆಕುದುರೆ. ಬೀಜವನ್ನು ಕುದುರೆ ತಿಂದುಬಿಟ್ಟಿತು. ಒಬ್ಬ ಕುರುಬನಿದ್ದ. ಕುರಿ ಗಳು ಇದ್ದವು....? ಒಬ್ಬ ಗೌಡಿ ಹೊಟ್ಟೆಯಲ್ಲಿ ಇಬ್ಬರು ಮಕ್ಕಳಾದರು. ಒಬ್ಬನ ಹೆಸರು ಅಣ್ಣ ಕಾಟಣ್ಣ. ಇನ್ನೊಬ್ಬನ ಹೆಸರು ಹೋಲಿಕೆರಾಮ. ಇನ್ನೊಬ್ಬ ಗೌಡಿ ಹೊಟ್ಟೆಯಲ್ಲಿ ಒಂದು ಗಂಡುಮಗು. ಅವನ ಹೆಸರು ಚೆನ್ನಿಗರಾಮ. ಹರಿಯಾಲದೇವಿ ಹೊಟ್ಟೆಯಲ್ಲಿ ಗಂಡುಮಗು ಹುಟ್ಟಿತು. ಅವನ ಹೆಸರು ಕುಮಾರರಾಮ. ಕುದುರೆಯ ಮರಿಯ ಹೆಸರು ಬಲ್ಲ (ಬೊಲ್ಲ ?). ಕುರಿಯ ಮರಿಯ ಹೆಸರು ಎಳಗ. ಆ ಕುದುರೆಯ ಮರಿಯನ್ನು ಓರುಗಲ್ಲು ಪಟ್ಟಣದಲ್ಲಿಯ ಎಪ್ಪತು ರಾಜನಿಗೆ ಮಾರಿಬಿಟ್ಟ. ಆ ಊರಿಗೆ ಏಳು ಅಗಸೆ ಬಾಗಿಲು ಗಳಿದ್ದುವು. ನಡುವಿನ ಅಗಸೆಯೊಳಗೆ ಚಂಡಿನಾಟವಾಡುತ್ತಿದ್ದರು. ಡಿಲ್ಲಿ ಸುಲ್ತಾನ ಬಾದಷಾ. ಧೀರ ಕಂಪಿಲರಾಯ ಅವನಿಗೆ ಕಪ್ಪ ಕಾಣಿಕೆ ಕೊಡುತ್ತಿದ್ದ. ಜಟ್ಟಂಗಿರಾಮೇಶ್ವರನಿಗೆ ಕೈ ಮುಗಿದು ಬಂದ. ಚಂದ್ರಗುತ್ತಿಪಟ್ಟಣದಲ್ಲಿ ಜಗದೇವನೆಂಬುವನು ಒಡ್ಡಿನ ಕೆಲಸ ಮಾಡು ತ್ತಿದ್ದನು. ಅವನ ಮನೆಯಲ್ಲಿ ಒಂದು ದೊಡ್ಡ ಭಲ್ಲೆವು ಇತ್ತು. ಎಪ್ಪತ್ತರಾಯನ ಮಂತ್ರಿಯ ಹೆಸರು ದೇವಸೆಟ್ಟಿ. ನೆಲಮನಿ ಆಲದ ಮರದ ಕೆಳಗೆ ಕುಮಾರರಾಮನನ್ನು ಬಿಟ್ಟುಬಿಟ್ಟರು. ಅದು ದೇವತೆಗಳು ವಾಸಮಾಡಿದ ಸ್ಥಳ. ಚನ್ನಿಗರಾಮನನ್ನು ಕಡಿದರು. ರತ್ನ ಮಹಲಿನ ಮೇಲಿಂದ ಬಿದ್ದು ಸತ್ತಳು. ಡಿಲ್ಲಿ ಸುಲ್ತಾನನಿಗೆ ಹೆಣ್ಣು ಮಗುವು ಹುಟ್ಟಿತು. ಡಿಲ್ಲಿ ಸುಲ್ತಾನನ ಹೆಂಡತಿ ಹೆಸರು ಕಾಸಿಂ ಬೀಬಿ. ಮಗಳಿಗೆ ರತ್ನೋಜಿ ಎಂದು ಹೆಸರಿಟ್ಟರು. ಗಂಡುರೂಪ ಧರಿಸಿ ಯುದ್ಧಕ್ಕೆ ಹೋದಳು. ರತ್ನೋಜಿ ರುಂಡವನ್ನು ತೆಗೆದುಕೊಂಡು ಹೋದಳು. ಅಗಸೆ ಬಾಗಿಲಿಗೆ ಕಟ್ಟಿದರು. ಕುಂಬಾರ ಗುಂಡಪ್ಪನಿಗೆ ಕೊಟ್ಟು ಹೊಸಮಲೆಗೆ ಕಳಿಸಿದ. ರುಂಡ ವನ್ನು ಅಗ್ನಿಯಲ್ಲಿ ಹಾಕಿ ತಂದೆ ಕೂಡ ಸೇರಿಬಿಟ್ಟ."

ಸಂಡೂರಿನ ಬಳಿಯಲ್ಲಿ ಪ್ರಚಾರದಲ್ಲಿರುವ ಮತ್ತೊಂದು ಕಥೆ:—

(ii) "ಧೀರ ಕಂಪಲಿ (ಕಂಪಿಲ ?) ರಾಯನು ಕಂಪ್ಲಿಯ ರಾಜ. ಅವನು ಕುಂಪಟಾಲು ನಗರದಲ್ಲಿ ವಾಸಿಸುತ್ತಿದ್ದನು. ಅವನು ಮೊದಲು ಲಗ್ನವಾಗಿದ್ದಿಲ್ಲ. ಒಂದಾನೊಂದು ದಿನ ಕಂಪಲಿರಾಯನು ಬೇಟೆಗೆಂದು ಅಡವಿಗೆ ಹೋಗಿದ್ದನು. ಅಲ್ಲಿ ಅವನಿಗೆ ದಣಿವು ಹೆಚ್ಚಾಗಲು ಅಲ್ಲಿಯೆ ಬಿಡಾರವನ್ನು ಹೂಡಿದನು. ಹೀಗೆ ನೋಡುತ್ತಿರಲು ಅಲ್ಲಿ ಒಂದು ಮೊಲವು ಎಲ್ಲರನ್ನೂ ತಪ್ಪಿಸಿ ಓಡಿ ಹೋಯಿತು. ಅದನ್ನು ಕಂಪಲಿರಾಯನು ನೋಡಿ ಅಲ್ಲಿಯೇ ಒಂದು ಪಟ್ಟಣ ವನ್ನು ಕಟ್ಟಲು ಆಶಿಸುತ್ತಾನೆ. ಡೇರೆಯಲ್ಲಿ ಇರಲು ಅವನಿಗೆ ಒಂದು ಹೆಣ್ಣಿನ ರೋದನೆ ಕೇಳಿಸುತ್ತದೆ. ಆಗ ಮಂತ್ರಿಯನ್ನು ರೋದನೆ ಬಂದ ಕಡೆ ಕಳಿಸುತ್ತಾನೆ.

ಕುಂಪಟಾಲು ನಗರಕ್ಕೆ ಸಮೀಪದಲ್ಲಿ ಒಂದು ಕಾಶಿಗಿರಿ ಪಟ್ಟಣವೆಂಬ ಹಳ್ಳಿ ಇರುತ್ತದೆ. ಅದು ಜಹಗೀರಿ. ಅದರ ಒಡೆಯನು ಕಾಶಿಸೇನ ರಾಜನೆಂಬುವನು. ಅವನು ಬ್ರಾಹ್ಮಣ. ಅವನಿಗೆ ಇಬ್ಬರು ಮಕ್ಕಳು ಇರುತ್ತಾರೆ. ಹಿರಿಯ ಮಗು ಹೆಣ್ಣು, ಹಾಗು ಕಿರಿಯ ಮಗು ಗಂಡು. ಹಿರಿಯ ಮಗಳ ಹೆಸರು ಹಿರಿಯಾಲದೇವಿ (ಹರಿಯಾಲದೇವಿ ?) ಯೆಂದೂ, ಕಿರಿಯ

ಮಗನ ಹೆಸರು ಬೈಚಪ್ಪನೆಂದೂ ಇಡುತ್ತಾರೆ. ಹಿರಿಯ ಮಗಳು ದೊಡ್ಡವಳಾಗುತ್ತಾಳೆ. ವಯಸ್ಸಿಗೆ ಬಂದರೂ ಕೂಡ ಇನ್ನೂ ಲಗ್ನವಾಗಿರುವುದಿಲ್ಲ. ಒಂದು ದಿನ [ಆಕೆ] ಋತುಮತಿಯಾಗುತ್ತಾಳೆ. ಆದರೆ ಆಗ್ಗೆ ಬ್ರಾಹ್ಮಣ ನಿಯಮದ ಪ್ರಕಾರ ಲಗ್ನವಾಗದ ಅಥವಾ [ಮದುವೆ] ನಿಶ್ಚಯದ (ಕ್ಕೆ ?) ಮುಂಚಿತವಾಗಿ ಯಾರಾದರೂ ಋತುಮತಿಯಾದರೆ ಅಡವಿಯಲ್ಲಿ ಆಕೆಗೆ ಕಣ್ಣು ಕಟ್ಟಿ ಬಿಡಬೇಕೆಂದು ನಿಯಮವಿರುತ್ತದೆ (ಬಿಡಬೇಕಾಗಿ ಬರುತ್ತದೆ ?). ಆ ನಿಯಮದ ಪ್ರಕಾರ ಆಕೆಯನ್ನು ಆಕೆಯ ಅಣ್ಣ (ತಮ್ಮ ?) ನಾದ ಬೈಚಪ್ಪನು ಅಡವಿಗೆ ಕರೆದುಕೊಂಡು ಬರುತ್ತಾನೆ. ಆಗ್ಗೆ ರಾತ್ರಿಯಾಗಿರುತ್ತದೆ. ಆಕೆಯ ರೋದನ ರಾಜನಿಗೆ ಕೇಳಿಸುತ್ತದೆ.

ಮಂತ್ರಿ ಬರಲು ಎಲ್ಲ ವಿಷಯವನ್ನೂ ಬೈಚಪ್ಪನು ಮಂತ್ರಿಗೆ ತಿಳಿಸುತ್ತಾನೆ. ಮಂತ್ರಿ ಬಂದು ರಾಜನಿಗೆ ತಿಳಿಸಲು ರಾಜನು ತಾನು ಆಕೆಯನ್ನು ಲಗ್ನವಾಗುವನೆಂದು ಹೇಳುತ್ತಾನೆ. ಮಂತ್ರಿ ಆ ವಿಷಯವನ್ನು ಬೈಚಪ್ಪನಿಗೆ ತಿಳಿಸಲು ಆತನು ಅಕ್ಕನನ್ನು ಕೇಳುತ್ತಾನೆ. ಆಕೆ ಒಪ್ಪುತ್ತಾಳೆ. ನಂತರ ಮೂವರೂ ರಾಜನ ಸನ್ನಿಧಿಗೆ ಆಗಮಿಸಲು, ರಾಜನು ಅವರನ್ನು ಸತ್ಕರಿಸಿ ಕೆಲವು ದಿನಗಳ ನಂತರ ಲಗ್ನವಾಗುತ್ತಾನೆ. ಹಾಗೆ ಲಗ್ನವಾದ ನಂತರ ಅಲ್ಲಿ ಹೊಸಮಲೆಯೆಂಬ ಪಟ್ಟಣವನ್ನು ಕಟ್ಟಿಸುತ್ತಾನೆ. ಹೀಗೆ ನವದಂಪತಿಗಳು ಸುಖವಾಗಿರಲು ರಾಣಿಯ ಹೊಟ್ಟೆಯಲ್ಲಿ ಮಕ್ಕಳಾಗುವುದಿಲ್ಲ. ರಾಜನಿಗೆ ಅದರ ಚಿಂತೆ ಹೆಚ್ಚಾಗುತ್ತದೆ. ಹೀಗೆ ಹನ್ನೆರಡು ವರ್ಷ ಕಳೆಯುತ್ತದೆ. ಒಂದಾನೊಂದು ದಿನ ದಂಪತಿಗಳು ಅವರ ಕುಲದೇವರಾದ ಜಟ್ಟಂಗಿ ರಾಮೇಶ್ವರ ಹಾಗೂ ಏಳನೆ ಜಗದಂಬಾ ಇಬ್ಬರನ್ನೂ ಮರೆಹೊಕ್ಕರು. ಜಟ್ಟಂಗಿ ರಾಮೇಶ್ವರನು ಪ್ರತ್ಯಕ್ಷನಾಗಿ ಒಂದು ಹಣ್ಣನ್ನು ದಯಪಾಲಿಸುತ್ತಾನೆ. ಆ ಹಣ್ಣನ್ನು ತಂದು ಪೂಜಿಸಿ, ಅದನ್ನು ಮೂರು ಭಾಗ ಮಾಡುತ್ತಾನೆ. ಒಂದು ಭಾಗವನ್ನು ಹಿರಿಯಾಲದೇವಿ ಸ್ವೀಕರಿಸುತ್ತಾಳೆ. ಹಾಗೂ ಇನ್ನುಳಿದ ಎರಡು ಭಾಗವ (ಗಳ ?) ನ್ನು ಅವಳ ದಾಸಿಯರಾದ ಇಬ್ಬರು ಗೌಡೇರು ತಿನ್ನುತ್ತಾರೆ. ಆ ತೊಗಟೆ ಹಾಗು ಬೀಜವನ್ನು ಒಂದು ಕುರಿಯೂ ಹಾಗೂ ಒಂದು ಕುದುರೆಯೂ ತಿನ್ನುತ್ತದೆ (ವೆ ?). ಎಲ್ಲರಿಗೂ ಗರ್ಭ ನಿಲ್ಲುತ್ತದೆ. ಹಿರಿಯಾಲದೇವಿಯ ಹೊಟ್ಟೆಯಲ್ಲಿ ಒಂದು ಗಂಡು ಮಗು ಹುಟ್ಟುತ್ತದೆ. ಹಿರಿಯಾಲದೇವಿಯ ಮಗನ ಹೆಸರು ಕುಮಾರರಾಮ, ಮೊದಲನೆಯ ಗೌಡಿಯ ಇಬ್ಬರು ಮಕ್ಕಳ ಹೆಸರು ಕಾಟಣ್ಣ, ಹೋಲಿಕೆರಾಮ. ಇನ್ನೊಬ್ಬ ಗೌಡಿಯ ಮಗನ ಹೆಸರು ಚೆನ್ನಿಗರಾಮ.

ಕುದುರೆಯೂ ಗರ್ಭಧರಿಸಿ ಒಂದು ಗಂಡುಮರಿಯನ್ನು ಹೆತ್ತಿತು (ಹಾಕಿತು ?). ಅದರ ಹೆಸರು ಬಲ್ಲ (ಬೊಲ್ಲ ?)ನೆಂದು. ಅದು ಒಬ್ಬ ಬ್ರಾಹ್ಮಣನಲ್ಲಿರುತ್ತದೆ. ಕುರಿಯೂ ಕೂಡ ಗರ್ಭ ಧರಿಸುತ್ತದೆ. ಅದು ಒಂದು ಗಂಡುಮರಿಯನ್ನು ಹೆರುತ್ತದೆ (ಹಾಕುತ್ತದೆ ?). ಅದರ ಹೆಸರು ಎಳಗನೆಂದಿರುತ್ತದೆ. ಆ ಕುದುರೆಮರಿಯನ್ನು ಬ್ರಾಹ್ಮಣನು ಓರುಗಲ್ಲು ಪಟ್ಟಣದಲ್ಲಿರುವ ಎಪ್ಪತ್ತು ರಾಜನಿಗೆ ಮಾರಿಬಿಟ್ಟದ್ದನು. ಕುರಿಮರಿ ಕುಮಾರರಾಮನಿಗೆ ವಾಹನವಾಗಿತ್ತು. ಬೈಚಪ್ಪನನ್ನು ಮಂತ್ರಿಯಾಗಿ ನೇಮಿಸುತ್ತಾರೆ. ಅವನಿಗೂ ಲಗ್ನವಾಗುತ್ತದೆ.

ಹೀಗೆ ಇರಲು ಒಂದು ದಿನ ಹೊಸಮಲೆ ಪಟ್ಟಣಕ್ಕೆ ಗಡಿನಾಡು ಪಟ್ಟಣದಿಂದ ಒಬ್ಬ ಆರೆ ಡೊಂಬರವನು ಅಲ್ಲಿಗೆ ಆಟಕ್ಕೆಂದು ಬರುತ್ತಾನೆ. ಆತನಿಗೆ ಒಬ್ಬ ಹೆಣ್ಣುಮಗಳು ಇರುತ್ತಾಳೆ. ಆಕೆಯ ಹೆಸರು ರತ್ನ ಎಂದು ಇರುತ್ತದೆ. ಅವರು ರಾಜರ ಅರಮನೆಯಲ್ಲಿ ಆಟವಾಡಿ ತೋರಿಸುತ್ತಾರೆ. ಅವರ ಆಟವಲ್ಲಿ ತಲ್ಲೀನನಾದ ರಾಜನಿಗೆ ರತ್ನಳ ಮೇಲೆ ಮೋಹ ಹುಟ್ಟುತ್ತದೆ. ಆಕೆಯನ್ನು ಲಗ್ನವಾಗಲು ಆಕೆಯ ತಂದೆಯನ್ನು ಕೇಳುತ್ತಾನೆ. ಮೊದಲು ಅವನು ಒಪ್ಪುವು

ದಿಲ್ಲ. ಕಡೆಗೆ, ರಾಜನ ಒತ್ತಾಯದ ಮೇಲೆ ಒಪ್ಪುತ್ತಾನೆ. ಆಕೆಯನ್ನು ರಾಜನು ಲಗ್ನವಾಗಿ ಬೇರೆ ಅರಮನೆಯನ್ನು ಕಟ್ಟಿಸಿಕೊಟ್ಟು ಅದರಲ್ಲಿ ಇರಿಸುತ್ತಾನೆ.

ಧೀರ ಕಂಪಲಿರಾಯನು [ಒಬ್ಬ] ಸಾಮಂತರಾಜ. ಅವನು ಡಿಲ್ಲಿ ಸುಲ್ತಾನನಿಗೆ ಕಪ್ಪ ಕಾಣಿಕೆಗಳನ್ನು ಪ್ರತಿವರ್ಷ ಸಲ್ಲಿಸುತ್ತಿದ್ದನು. ಆದರೆ ಕುಮಾರರಾಮನು ಹುಟ್ಟಿದ ಅನಂತರ ಅದು ನಿಂತುಹೋಗಿರುತ್ತದೆ. ಆದರೆ (?) ಸುಲ್ತಾನನು ಕೋಪೋದ್ರೇಕಿತನಾಗಿ ಮಂತ್ರಿಯನ್ನು ಇವನಲ್ಲಿಗೆ ಕಳಿಸುತ್ತಾನೆ. ಅವನು ಬಂದ ಸಮಯದಲ್ಲಿ ಕುಮಾರರಾಮನು ಗರಡಿಮನೆಯಲ್ಲಿ ಇರುತ್ತಾನೆ. ಅವರು ಬಂದಿದ್ದನ್ನು ನೋಡಿ ಅವರು ಯಾರೆಂದು ಎಲ್ಲ ವಿಷಯವನ್ನೂ ಕೇಳು ತ್ತಾನೆ. ಆಗ ಮಂತ್ರಿ ಎಲ್ಲಾ ವಿಷಯವನ್ನೂ ಹೇಳಿ "ಕಪ್ಪಕಾಣಿಕೆ ಕೊಡದಿದ್ದರೆ ಸುಲ್ತಾನನು ನಿಮ್ಮ ಮೇಲೆ ಯುದ್ಧಕ್ಕೆ ಬರುತ್ತಾನೆ" ಎಂದು ಹೇಳುತ್ತಾನೆ. ಇದನ್ನು ಕೇಳಿ ಕುಮಾರರಾಮನು ಕಪ್ಪಕಾಣಿಕೆ ಕೊಡಲು ನಿರಾಕರಿಸಿ ಕಳಿಸುತ್ತಾನೆ.

ಈ ವಿಷಯವು ಸುಲ್ತಾನನಿಗೆ ತಿಳಿಯುತ್ತದೆ. ಅವನು ಇವರ ಮೇಲೆ ದಂಡೆತ್ತಿ ಬರು ತ್ತಾನೆ. ಆ ಕೂಡಲೆ ಕುಮಾರರಾಮನು ರಾಮೇಶ್ವರನಿಗೆ ಕೈಮುಗಿದು ಯುದ್ಧಕ್ಕೆ ಸನ್ನದ್ಧ ನಾಗುತ್ತಾನೆ. ಆಗ ಅವನು ಸುಲ್ತಾನನನ್ನು ಸೋಲಿಸಿಬಿಟ್ಟು ಅವನ ರಾಜ್ಯ ಅವನಿಗೆ ಕೊಟ್ಟು ಕಳಿಸಿಬಿಡುತ್ತಾನೆ (?).

ಒಂದು ದಿನ ಕುಮಾರನು ಚೆಂಡಿನ ಆಟವನ್ನು ಆಡುತ್ತ ಇರಲು ಆ ಚೆಂಡು ಹೋಗಿ ರತ್ನಾದೇವಿಯ ಮಹಲಿನಲ್ಲಿ ಬೀಳುತ್ತದೆ. ಆ ಚೆಂಡನ್ನು ಆಕೆ ತೆಗೆದುಕೊಂಡುಬಿಡುತ್ತಾಳೆ. ಆ ಸಮಯಕ್ಕೆ ಸರಿಯಾಗಿ ಆ ವಿಷಯವು ಕುಮಾರರಾಮನಿಗೆ ತಿಳಿಯುತ್ತದೆ. ಅವನು ಚೆಂಡು ಕೇಳಲು ಅರಮನೆಗೆ ಹೋಗುತ್ತಾನೆ. ಒಳಗೆ ಹೋಗಿ ಚೆಂಡು ಕೇಳುತ್ತಾನೆ. ಆದರೆ ಆಕೆ ಕುಮಾರರಾಮನನ್ನು ಮೋಹಿಸುತ್ತಾಳೆ. ಅವನು ತನ್ನನ್ನು ಮೋಹಿಸುವಂತೆ ಕೇಳುತ್ತಾಳೆ. ಆದರೆ ಅವನು ನಿರಾಕರಿಸುತ್ತಾನೆ. ಯಾಕೆಂದರೆ, ಆಕೆ ತನ್ನ ತಾ[ಯಿ]ಯೆಂದೂ, ತಾನು ಮಗನೆಂದೂ ಇಬ್ಬರಿಗೆ ಸಂಬಂಧವಾಗುವುದಿಲ್ಲವೆಂದೂ ಉಪದೇಶಮಾಡಲು ಹೋಗುತ್ತಾನೆ. ಆದರೆ ಆಕೆ ಅದನ್ನೆಲ್ಲ ಕೇಳದೆ ಹಟಮಾಡುತ್ತಾಳೆ. ಇದನ್ನೆಲ್ಲ ತಿಳಿದ ರಾಮನು ಅರಮನೆ ಯನ್ನು ಬಿಟ್ಟು ಹೊರಟು ಬಂದುಬಿಡುತ್ತಾನೆ(ಬರುತಾನೆ ?). ರಾಜನು ಬೇಟೆಗೆ ಹೋದವನು ತಿರುಗಿ ಅರಮನೆಗೆ ಬರುತ್ತಾನೆ. ಅವನು ರತ್ನನ(ರತ್ನಿಯ ?) ಅರಮನೆಗೆ ಹೋಗಲು ಸಿಟ್ಟಿನಿಂದ ಮಲಗಿರುವುದನ್ನು ನೋಡಿ, ವಿಷಯವು ಏನೆಂದು ಕೇಳುತ್ತಾನೆ. "ರಾಜನೆ! ನಿನ್ನ ಮಗನು ಚೆಂಡು ಆಡುತ್ತಿದ್ದನು. ಅದು ನನ್ನ ಅರಮನೆಯಲ್ಲಿ ಬಂದು ಬಿದ್ದಿತು. ನಾನು ಅದನ್ನು ಕೊಡಲು ಹೋದರೆ ಅವನು ನನ್ನ ಮೇಲೆ ಬಂದು(ಬಿದ್ದು ?) ನನ್ನನ್ನು ಮೋಹಿಸಲು ಬಂದನು. ನಾನು ಎಷ್ಟು ಹೇಳಿದರೂ ಕೇಳದೆ ನನ್ನ ಮಾನಭಂಗ ಮಾಡಿದನು." ಎಂದು ತಿಳಿಸಿಬಿಡು ತ್ತಾಳೆ.

ಅದರಿಂದ ರಾಜನಿಗೆ ಬಹಳ ಸಿಟ್ಟು ಬರುತ್ತದೆ. ಮಂತ್ರಿಯನ್ನು ವಿಚಾರಿಸಲು ಅದಕ್ಕೆ ಮರಣ ದಂಡನೆಯೆ ಸರಿಯಾದ ಮಾರ್ಗವೆಂದು ತಿಳಿಸಿಬಿಡುತ್ತಾನೆ. ಆಗ ಕುಮಾರರಾಮನಿಗೆ ಮರಣ ದಂಡನೆ ವಿಧಿಸುತ್ತಾರೆ. ಇದನ್ನು ಕೇಳಿದ ಇನ್ನುಳಿದ ಮೂವರು ತಮ್ಮಲ್ಲಿ ಯೋಚಿಸಿ, ತಮ್ಮಲ್ಲಿ ಯಾರಾದರೊಬ್ಬರು ಬಲಿಯಾಗಿ ಕುಮಾರರಾಮನನ್ನು ಉಳಿಸಬೇಕೆಂದು ನಿಶ್ಚಯಿಸು ತ್ತಾರೆ. ಹಾಗು ಕಟುಕರಿಗೆ ಸ್ವಲ್ಪ ಹಣವನ್ನು ಕೊಟ್ಟು ತಮ್ಮ ವಶಮಾಡಿಕೊಂಡು ಬಿಡು ತ್ತಾರೆ. ಹಾಗು ಅವರೆಲ್ಲರೂ ಅಡವಿಗೆ ಹೋಗುತ್ತಾರೆ. ಆದರೆ (ಅಲ್ಲಿ ?) ಚೆನ್ನಿಗರಾಮನನ್ನು

ಕಡಿದುಬಿಡುತ್ತಾರೆ. ಅವನು ಕುಮಾರರಾಮನನ್ನೇ ಹೋಲುತ್ತಿರುತ್ತಾನೆ. ಅವನ ರುಂಡವನ್ನು ರಾಜನಿಗೆ ತೋರಿಸುತ್ತಾರೆ. ಕುಮಾರರಾಮನನ್ನು ಅಲ್ಲೇ ಒಂದು ಗುಹೆಯಲ್ಲಿ ವಾಸಮಾಡಲು ಹೇಳಿ ಅವನಿಗೆ ಎಲ್ಲಾ ಅನುಕೂಲಗಳನ್ನೂ ಮಾಡಿಕೊಡುತ್ತಾರೆ. ಅವನು ಅಲ್ಲಿ ದೊಡ್ಡವನಾಗಿ ಎಲ್ಲಾ ವಿದ್ಯೆಗಳಲ್ಲಿ ಪ್ರವೀಣನಾಗುತ್ತಾನೆ...............".

ಬಳ್ಳಾರಿ ಜಿಲ್ಲೆಯಲ್ಲಿನ ರಾಯದುರ್ಗದಿಂದ ಐದು ಮೈಲಿ ದೂರದಲ್ಲಿರುವ ಗೊಲ್ಲಹಳ್ಳಿ ಎಂಬಲ್ಲಿ ವೃದ್ಧರಾದ ಶ್ರೀ. ಮುತ್ತಯ್ಯನವರು ಹೇಳಿದ ಕಥೆ[1] :

(iii) "ನೂರಾರು ವರ್ಷಗಳ ಹಿಂದಿನ ಮಾತು. ಆಗ ಕಂಪಿಲಿ ದೊಡ್ಡ ಪಟ್ಟಣವಾಗಿತ್ತು. ಅಲ್ಲಿಗೆ ದೊರೆ ಕಂಪಿಲಿ (ಕಂಪಿಲ?) ರಾಯ. ಆತನ ರಾಣಿ ಹರಿಯಾಲದೇವಮ್ಮ. ಅನೇಕ ವರ್ಷಗಳು ಕಂಪಿಲಿರಾಯ ದರ್ಪದಿಂದ ರಾಜ್ಯವಾಳುತ್ತಿದ್ದ. ದೇಶ ಸಂಪತ್ಸಮೃದ್ಧಿಯಿಂದ ಶೋಭಿಸುತ್ತಿತ್ತು. ಕಂಪಿಲಿರಾಯನ ಕೀರ್ತಿ ದಶ ದಿಕ್ಕುಗಳಲ್ಲೂ ಹರಡಿತ್ತು. ಆದರೆ ಆತನಿಗೆ ಮಕ್ಕಳಾಗಿರಲಿಲ್ಲ.

ಅಂತಹ ಪರಾಕ್ರಮಿಯಾಗಿದ್ದು, ಅಷ್ಟು ಪ್ರಸಿದ್ಧನಾದ ದೊರೆಯಾಗಿದ್ದರೂ ಸಂತಾನವಿಲ್ಲದ ಕೊರತೆ ಬಹಳವಾಗಿ ಅವನ ಮನಸ್ಸನ್ನು ಕೊರೆಯುತ್ತಿತ್ತು. ಬಲ್ಲವರ ಸಲಹೆಯಂತೆ ಕೊನೆಗೆ ಜಟಂಗಿರಾಮೇಶ್ವರನನ್ನು ಪೂಜಿಸಿ, ವರ ಪಡೆಯಲು ನಿರ್ಧರಿಸಿದ.

ಒಂದು ದಿನ ಪ್ರಾತಃಕಾಲ ರಾಜ ರಾಣಿಯರು ಉಪವಾಸ ವ್ರತ ಮಾಡಿ ನಡೆಮುಡಿಯಿಂದ ಜಟಂಗಿರಾಮೇಶ್ವರನ ಬಳಿಗೆ ಹೋದರು. ಪೂಜೆಯಾದ ನಂತರ ಈಶ್ವರ ಲಿಂಗದ ಮುಂದೆ ರಾಣಿ ಸೂಜಿಮೊನೆಯ ಮೇಲೆ ಕುಳಿತು ತಪಸ್ಸು ಮಾಡತೊಡಗಿದಳು. ಅನೇಕ ದಿನಗಳ ಉಗ್ರ ತಪಸ್ಸಿನಿಂದ ಈಶ್ವರ ಮೆಚ್ಚಿದ. ಅವನು ಪ್ರತ್ಯಕ್ಷನಾಗಿ "ನಿನಗೆ ಬೇಕಾದ ವರವನ್ನು ಬೇಡು" ಎಂದು ಹೇಳಿದ. ಆಗ ಹರಿಯಾಲದೇವಮ್ಮ "ನಮ್ಮ ಮಕ್ಕಳಿಲ್ಲದ ಕೊರತೆಯನ್ನು ನೀಗಿ, ಜಗತ್ಪ್ರಸಿದ್ಧನಾಗುವ ಮಹಾ ಬಲಶಾಲಿಯಾದ ಪುತ್ರನಾಗುವಂತೆ ಕರುಣಿಸು" ಎಂದು ಬೇಡಿದಳು. "ನಿನ್ನ ಇಷ್ಟದಂತೆಯೇ ಆಗಲಿ" ಎಂದು ಆಶೀರ್ವದಿಸಿದ ಜಟಂಗಿ ರಾಮೇಶ್ವರ.

ಹರಿಯಾಲದೇವಮ್ಮ ಪರಮ ಆನಂದಭರಿತಳಾಗಿ ಪೂಜೆಗಿಟ್ಟಿದ್ದ ಬಾಳೆ ಹಣ್ಣನ್ನು ಸೇವಿಸಿ ಮನೆಗೆ ಬಂದಳು. ತಕ್ಷಣ ಶುಭ ಗರ್ಭಸೂಚನೆಗಳು ಕಂಡುಬಂದವು. ನವಮಾಸ ತುಂಬುವುದೇ ತಡ ಹರಿಯಾಲದೇವಿಯ ಗರ್ಭಸಾಗರದಲ್ಲಿ ಜಗತ್ತನ್ನೆಲ್ಲ ಬೆಳಗುವ ತೇಜಸ್ಸನ್ನುಳ್ಳ ಚಂದ್ರನಂತಹ ಪುತ್ರರತ್ನ ಜನಿಸಿದನು.

ಧನ್ಯರಾದ ಕಂಪಿಲ ದಂಪತಿಗಳು ಅವರ ಪುತ್ರನಿಗೆ ಜಟಂಗಿರಾಮನ ದಯೆಯಿಂದ ಜನಿಸಿದುದರಿಂದ ಅವನ ಹೆಸರನ್ನೇ ಇಡಬೇಕೆಂದು, ಅವನನ್ನು "ಕುಮಾರರಾಮ" ಎಂದು ಕರೆದರು.

ರಾಜಕಳೆಯಿಂದ ಕೂಡಿದ ಬಾಲಕ ಇನ್ನೂ ಬಾಲ್ಯಾವಸ್ಥೆಯಲ್ಲಿರುವಾಗಲೇ ತನ್ನ ವರ್ಚಸ್ಸನ್ನು ಬೀರಿದ. ಅವನು ತನ್ನ ಎಳೆತನದಲ್ಲಿ ತನ್ನ ಓರಗೆಯ ಹುಡುಗರಿಗೆ ಬಹಳ ತೊಂದರೆ ಕೊಡುತ್ತಿದ್ದ. ಮಹಾ ಬಲಶಾಲಿಯಾದ ಇವನು ಸಿಡಿಲಮರಿಯಾಗಿ ಬೆಳೆದ. ಇವನ ಚೇಷ್ಟೆ

1. ಇದನ್ನು ನನ್ನ ವಿದ್ಯಾರ್ಥಿಗಳಾಗಿದ್ದ ಶ್ರೀ. ಕೆ. ನಾಗೇಂದ್ರಪ್ಪ ಮತ್ತು ಶ್ರೀ. ಜಿ. ಸಿದ್ದಪ್ಪ ಅವರು ೧-೫-೧೯೫೭ ರಲ್ಲಿ ಸಂಗ್ರಹಿಸಿದ್ದು. ಸಂಗ್ರಹಕಾರರ ಭಾಷೆಯನ್ನೇ ಉಳಿಸಿಕೊಳ್ಳಲಾಗಿದೆ.

ಯಿಂದ ನೊಂದ ಹುಡುಗರು ಕನಸಿನಲ್ಲಿಯೂ ಇವನನ್ನೇ ಕನವರಿಸಿಕೊಳ್ಳುತ್ತಿದ್ದರು. ಅನೇಕ ಹುಡುಗರನ್ನು ಪರಾಭವಗೊಳಿಸಿ, ಇವನು ಆನಂದಿಸುತ್ತಿದ್ದ. ಇವನ ಕಾಟವನ್ನು ತಡೆಯಲಾರದೆ ಊರಿನ ಅನೇಕ ತಾಯಂದಿರು ತಮ್ಮ ಮಕ್ಕಳ ಸಮೇತರಾಗಿ ಹರಿಯಾಲದೇವಮ್ಮನ ಬಳಿಗೆ ಬಂದು ದೂರಿದರು. ಅದನ್ನು ಕೇಳಿದ ರಾಣಿ ಅವರನ್ನೆಲ್ಲ ಸಮಾಧಾನಗೊಳಿಸಿ ಪ್ರತಿಯೊಬ್ಬ ತಾಯಿಗೂ ಒಂದು ಹಿಡಿ ವರಹಗಳನ್ನು ಕೊಟ್ಟು ತಾನು ಹಲವು ಕಾಲದ ವ್ರತಗಳಿಂದ ಒಬ್ಬ ಪುತ್ರರತ್ನನನ್ನು ಪಡೆದುಕೊಂಡಿರುವುದರಿಂದ ಅವನನ್ನು ಶಪಿಸಕೂಡದೆಂದೂ, ಅವನಿಂದ ತೊಂದರೆಗಳೇನಾಗಿದ್ದರೂ ಕ್ಷಮಿಸಿ ಅವನನ್ನು ಆಶೀರ್ವದಿಸಬೇಕೆಂದೂ ಬೇಡಿಕೊಂಡಳು.

ಪ್ರತಿದಿನವೂ ತನ್ನ ಮನಸ್ಸಿಗೆ ತಿಳಿದಾಗ ಜಟಂಗಿರಾಮೇಶ್ವರನ [ಬಳಿಗೆ] ಹೋಗಿ ದರ್ಶನ ತೆಗೆದುಕೊಂಡು ಬರುವುದು ಕುಮಾರರಾಮನ ಪದ್ಧತಿ. ಹಾಗೆ ಹೋಗುವಾಗ ಅವನು ಸುಮ್ಮನೆ ಹೋಗುತ್ತಿರಲಿಲ್ಲ. ರಸ್ತೆಯಲ್ಲಿ ಸಿಕ್ಕಿದ ಮಕ್ಕಳನ್ನೆಲ್ಲ ಅಪಜಯ, ಅಪಮಾನಗಳಿಗೀಡುಮಾಡುತ್ತಾ ಹೋಗುತ್ತಿದ್ದನು. ಅಲ್ಲದೆ ಜಟಂಗಿರಾಮೇಶ್ವರನ [ಬಳಿಗೆ] ಹೋಗುವಾಗ ಅಕ್ಕಪಕ್ಕದ ಕಾಡಿನಲ್ಲಿರುವ ಮೃಗಗಳ ಮರಿಗಳನ್ನೋ ಅಥವಾ ಜಿಂಕೆಯಮರಿಗಳನ್ನೋ ಹಿಡಿದುಕೊಂಡು ಅವುಗಳೊಡನೆ ಆಟವಾಡುತ್ತಿದ್ದನು. ಕೊನೆಗೆ ಜಿಂಕೆಯ ಮರಿಯ ಕೊರಳಿಗೆ ಮಲ್ಲಿಗೆ ಹೂವಿನ ಹಾರವನ್ನು ಹಾಕಿ ಕೈಬಿಡುತ್ತಿದ್ದನು.

ಊರಿನ ಹುಡುಗರಿಗೆ ಕುಮಾರರಾಮನೆಂದರೆ ಸಿಂಹಸ್ವಪ್ನ. ಒಂದು ದಿನ ಹುಡುಗರಿಗೆಲ್ಲ "ಮರಕೋತಿ" ಆಟವಾಡಬೇಕೆಂದು ಆಸೆಯಾಯಿತು. ಆದರೆ ಕುಮಾರರಾಮ ಎಲ್ಲಿ ಬಂದು ತಮ್ಮನ್ನು ಪೀಡಿಸುತ್ತಾನೋ ಎಂಬ ಹೆದರಿಕೆ. ಆಟದಲ್ಲಿ ತೀವ್ರಾಸಕ್ತಿಯುಳ್ಳ ಅವರೆಲ್ಲ ಒಂದು ಉಪಾಯ ಹುಡುಕಿದರು. ಜಟಂಗಿರಾಮೇಶ್ವರ ದೇವಾಲಯದ ಪಕ್ಕದಲ್ಲಿದ್ದ ಮರದಲ್ಲಿ ತಾವು ಆಟವಾಡಬೇಕೆಂದೂ, ಆ ಕಡೆಗೇನಾದರೂ ಕುಮಾರರಾಮ ಬಂದರೆ ತಕ್ಷಣ ತಮಗೆ ತಿಳಿಸಬೇಕೆಂದೂ, ಆಗ ತಾವೆಲ್ಲ ಅವನ ದೃಷ್ಟಿಯಿಂದ ತಪ್ಪಿಸಿಕೊಳ್ಳಬೇಕೆಂದೂ ಏರ್ಪಾಟು ಮಾಡಿಕೊಂಡರು. ಕುಮಾರರಾಮನ ಬರುವಿಕೆಯನ್ನು ತಿಳಿಸಲು ಒಂದು ಕಣ್ಣಿನ ನವಾಬ್ ಸಾಬಿಯನ್ನು ನೇಮಿಸಿ ಹುಡುಗರೆಲ್ಲರೂ ಆಟದಲ್ಲಿ ನಿರತರಾದರು.

ಎಂದಿನಂತೆ ಕುಮಾರರಾಮನು ದೇವಸ್ಥಾನಕ್ಕೆ ಬಂದ. ಪೂಜೆಯಾದ ಮೇಲೆ ಹೊರಗೆ ಬಂದು ಮನೆಗೆ ಬರಲು ಹೊರಟ. ತಕ್ಷಣ ಹುಡುಗರ ಆಟದ ಶಬ್ದ ಇವನ ಕಿವಿಗೆ ಬಿತ್ತು. ಇಲಿಗಳ ಶಬ್ದ ಕೇಳಿದ ಬೆಕ್ಕಿಗೆ ಆಗುವಷ್ಟು ಆನಂದ ಇವನಿಗಾಯಿತು. ಹೋಗಿ ನೋಡಿದ. ಹುಡುಗರೆಲ್ಲ ಆಟದಲ್ಲಿ ಮಗ್ನರಾಗಿದ್ದಾರೆ. ಅವನಿಗೆ ಕಜ್ಜಾಯ ಸಿಕ್ಕಿದಂತಾಯಿತು. ಅವರ ಉಪಾಯವನ್ನು ತಿಳಿದುಕೊಂಡ. ಅವರಿಗೊಬ್ಬರಿಗೂ ತಿಳಿಯದಂತೆ ನವಾಬ್ ಸಾಬಿಯ ಕುರುಡುಗಣ್ಣಿನ ಕಡೆಯಿಂದಲೇ ಹೋಗಿ ಎಲ್ಲರನ್ನೂ ಹಿಡಿದುಕೊಂಡ. ಅವರ ಜುಟ್ಟುಜುಟ್ಟಿಗೆ ಗಂಟು ಹಾಕಿದ. ತಲೆತಲೆಗೆ ಡಿಕ್ಕಿ ಹೊಡೆಸಿದ. ಕೊನೆಗೆ ಎಲ್ಲರನ್ನೂ ಕೈಬಿಟ್ಟು ಓಡಿಸಿ ಮನೆಗೆ ಬಂದ.

ರಾಜಕುಮಾರ ಪ್ರಾಪ್ತವಯಸ್ಕನಾದುದನ್ನೆ ನೋಡಿ ಕಂಪಿಲಿರಾಯ ಅವನಿಗೆ ಎಲ್ಲ ರೀತಿಯ ಅಸ್ತ್ರ ಶಸ್ತ್ರಾಭ್ಯಾಸಗಳನ್ನೂ ಮಾಡಿಸಿದ. ಸುತ್ತಲ ದೇಶದಲ್ಲೆಲ್ಲ ಡಂಗುರ ಹೊಡೆಸಿ ಕಂಪಿಲಿರಾಯ ಏಳು ಜನ ಜಟ್ಟಿಗಳನ್ನೇ ಕರೆಸಿದ. ತನ್ನ ಮಗನಿಗೆ ಕುಸ್ತಿ ವಿದ್ಯೆಯನ್ನು ಕಲಿಸಬೇಕೆಂದು ಕುಮಾರರಾಮನನ್ನು ಅವರಿಗೊಪ್ಪಿಸಿದ. ವರಪುತ್ರನಿಗೆ ಕೇವಲ ಮಾನುಷ ಬಲದ ಜಟ್ಟಿಗಳು ಎದುರೆ? ಆ ಜಟ್ಟಿಗಳು ಒಂದು ಕೆಲಸ ಮಾಡುವುದರೊಳಗೆ ಇವನು ನಾಲ್ಕು

ಕೆಲಸಗಳನ್ನು ಮಾಡಿ ತೋರಿಸಿ ಅವರನ್ನು ಅಚ್ಚರಿಯ ಮಡುವಿನಲ್ಲಿ ಕೆಡಹುತ್ತಿದ್ದ. ಇದನ್ನು ನೋಡಿದ ಜಟ್ಟಿಗಳು ಕೆಲ ದಿನವಾದ ಮೇಲೆ ರಾಜನ ಬಳಿಗೆ ಬಂದು ನಮಸ್ಕಾರ ಮಾಡಿ, ರಾಜಕುಮಾರನನ್ನು ಹತೋಟಿಗೆ ತರುವುದು ತಮ್ಮ ಕೈಯಲ್ಲಾಗದೆಂದೂ ಅವರ ಮಗನನ್ನು ಅವರು ಕರೆದುಕೊಳ್ಳಬೇಕೆಂದೂ ಬಿನ್ನವಿಸಿಕೊಂಡರು.

ಹೀಗೆ ಕುಮಾರರಾಮನು ಅತುಳ ಪರಾಕ್ರಮಿಯಾಗಿ ಬೆಳೆಯುತ್ತಿದ್ದ.

ಒಂದು ದಿನ ರಾತ್ರಿ ಕುಮಾರರಾಮನಿಗೆ ಸ್ವಪ್ನದಲ್ಲಿ ಓರುಗಲ್ಲಿನ ದೇವತೆಗಳಾದ ಎಲ್ಲಮ್ಮ ಮತ್ತು ಶಂಭುಲಿಂಗರು ಕಾಣಿಸಿಕೊಂಡು "ನೀನು ಓರುಗಲ್ಲಿಗೆ ಬಾ, ನಾವು ನಿನಗೆ ಒಲಿದಿದ್ದೇವೆ. ನೀನು ಇಲ್ಲಿಗೆ ಬಂದರೆ ಓರುಗಲ್ಲು ಪಟ್ಟಣ ನಿನ್ನ ವಶವಾಗುತ್ತದೆ. ಸಕಲ ಯಶಸ್ಸೂ ಉಂಟಾಗುತ್ತದೆ. ನಾವು ನಿನ್ನ ವಶವಾಗುತ್ತೇವೆ. ಬಾ" ಎಂದು ಬೇಡಿಕೊಳ್ಳುತ್ತಾರೆ.

ಈ ಸ್ವಪ್ನದಿಂದ ಪುಲಕಿತಗೊಂಡ ಕುಮಾರರಾಮ ಮಾರನೆ ದಿನ ಪ್ರಾತಃಕಾಲ ಜಟಂಗಿರಾಮೇಶ್ವರನ ಬಳಿ ಹೋಗಿ ತಾನು ಓರುಗಲ್ಲಿಗೆ ಹೋಗಲು ಅಪ್ಪಣೆ ಮತ್ತು ಆಶೀರ್ವಾದವನ್ನು ಕೇಳಿದ. ಜಟಂಗಿರಾಮೇಶ್ವರ ಅಪ್ಪಣೆ ಕೊಟ್ಟು ಆಶೀರ್ವದಿಸಿದ.

ಅಲ್ಲಿಂದ ಕುಮಾರರಾಮ ಹಂಪೆಗೆ ಹೋಗಿ ಅಲ್ಲಿದ್ದ ನೂರ ಒಂದು ಲಿಂಗಗಳನ್ನು ಪೂಜಿಸಿ ಓರುಗಲ್ಲಿಗೆ ಹೋಗಲು ಅನುಮತಿ ಬೇಡಿ ಪಡೆದ.

ಓರುಗಲ್ಲಿನ ರಾಜ ಗಣಪತಿರಾಯ. ಅವನದು ಸೊಗಸಾದ ಒಂದು ಎಲೆ ತೋಟವಿತ್ತು. ಅದಕ್ಕೆ ಸುತ್ತಲೂ ಕಂಚಿನ ಕೋಟೆ ಕಟ್ಟಿದ್ದರು. ಅದರ ಕಬ್ಬಿಣದ ಬಾಗಿಲಿಗೆ ವಜ್ರದ ಬೀಗ ಹಾಕಿದ್ದರು. ಕುಮಾರರಾಮನಿಗೆ ಎಲೆದೋಟವನ್ನು ಪ್ರವೇಶಿಸಬೇಕು ಎನ್ನುವ ಆಸೆಯುಂಟಾಯಿತು. ಆದರೆ ಒಳಗೆ ಹೋಗಲು ದಾರಿಯಿರಲಿಲ್ಲ. ಆಗ ಅವನು ಹೆಬ್ಬೆರಳಿನ ಮೇಲೆ ಭಾರ ಬಿಟ್ಟು ಮೇಲೆ ನೆಗೆದು ತೋಟದ ಮಧ್ಯಕ್ಕೆ ಧುಮುಕಿದ. ಅವನು ಧುಮುಕಿದ ರಭಸಕ್ಕೆ ಸುತ್ತ ಗಾವುದದ ಎಲೆ ತೋಟ ಅತ್ತಕೊತ್ತಲಾಯಿತು (ಅಸ್ತವ್ಯಸ್ತ ?). ಗಿಡಗಳೆಲ್ಲ ನೆಲಸಮವಾದುವು. ಇದನ್ನು ಗಮನಿಸದೆ ಕುಮಾರರಾಮ ಹತ್ತಿರದಲ್ಲಿ ಸೊಂಪಾಗಿ ಬೆಳೆದಿದ್ದ ಮರದ ನೆರಳಿನಲ್ಲಿ ಮಲಗಿ ನಿದ್ರೆ ಹೋದ.

ಸ್ವಲ್ಪ ಹೊತ್ತಿನಲ್ಲೇ ಅವನು ಮಲಗಿದ್ದ ಜಾಗಕ್ಕೆ ಬಿಸಿಲು ಬಂತು. ಆಗ ಏಳು ಹೆಡೆಯ ಸರ್ಪ ಬಂದು ಅವನ ತಲೆಯ ಮೇಲೆ ಹೆಡೆ ಬಿಚ್ಚಿ ನೆರಳು ಮಾಡಿತು. ಅಷ್ಟು ಹೊತ್ತಿಗೆ ಎಲ್ಲಿಯೋ ಹೋಗಿದ್ದ ಗಣಪತಿರಾಯನ ಕಾವಲಿನವರು ಬಂದು ನೆಲಸಮನಾದ ತೋಟವನ್ನು ನೋಡಿ ಅಚ್ಚರಿಗೊಂಡರು. ಅಲ್ಲಿಯವರೆಗೂ ವಾಡಿಕೆಯಲ್ಲಿದ್ದಂತೆ "ದೇವಲೋಕದ ದೇವೇಂದ್ರನ ರೆಕ್ಕೆಯ ಕುದುರೆಗಳೇನಾದರೂ ಮೇದು ಹೋಗಿರಬಹುದೆ?" ಎಂಬ ಸಂಶಯದಿಂದ ಆ ಕಡೆ, ಈ ಕಡೆ ಹುಡುಕತೊಡಗಿದರು. ಆಗ ಹತ್ತಿರದಲ್ಲಿಯೇ ಯಾವನೋ ಒಬ್ಬ ಮಲಗಿರುವುದೂ, ಅವನ ತಲೆಯ ಮೇಲೆ ಹೆಡೆ ಬಿಚ್ಚಿ ನಿಂತಿದ್ದ ಸರ್ಪವೂ ಕಣ್ಣಿಗೆ ಬಿದ್ದಿತು. ಅವರನ್ನು ನೋಡಿದ ಕೂಡಲೆ ಸರ್ಪ ಓಡಿಹೋಗಿ ಹುತ್ತದಲ್ಲಿ ಸೇರಿಕೊಂಡಿತು.

ಅವನಾರೆಂಬುದನ್ನು ತಿಳಿಯುವ ಕುತೂಹಲದಿಂದ ಅವರು ವಿಚಾರಿಸಿದರು. ತಾನು ಕಂಪಿಲಿರಾಯನ ಸುಪುತ್ರನಾದ ಕುಮಾರರಾಮನೆಂಬುದನ್ನು ಅವನು ತಿಳಿಸುತ್ತಿದ್ದಂತೆಯೇ ಆ ಆಳುಗಳೆಲ್ಲ ನಡುಗತೊಡಗಿದರು. ಆದರೂ ಕರ್ತವ್ಯನಿರ್ವಹಣೆಯನ್ನು ಅರಿತ ಅವರು ಎಲ್ಲರೂ ಸೇರಿ ಅವನ ತೋಳುಗಳನ್ನು ಹಿಡಿದು ಗಣಪತಿರಾಯನ ಹತ್ತಿರಕ್ಕೆ ಎಳೆದರು. ತನ್ನನ್ನು ಮುಟ್ಟಕೂಡದೆಂದೂ, ತನ್ನನ್ನು ಹಿಡಿದೆಳೆದರೆ ಅವರೆಲ್ಲ ಕಷ್ಟಕ್ಕೆ ಗುರಿಯಾಗ

ಬೇಕಾಗುತ್ತದೆಂದೂ ಕುಮಾರರಾಮನು ಮೊದಲೇ ಎಚ್ಚರಿಸಿದನು. ಆದರೂ ಆಳುಗಳು ಕೇಳಲಿಲ್ಲ. ಅವರೆಲ್ಲರೂ ತೋಳುಗಳನ್ನು ಹಿಡಿದು ಎಳೆದ ತಕ್ಷಣ ಕುಮಾರರಾಮ ಹಬ್ಬೆರಳನ್ನು ನೆಲಕ್ಕೆ ಊರಿ ಚಂಗನೆ ಮೇಲಕ್ಕೆ ನೆಗೆದನು. ಆ ಆಳುಗಳೆಲ್ಲರೂ ಮರದ ಹಣ್ಣಿನಂತೆ ನೆಲಕ್ಕೆ ಬಿದ್ದರು. ಪುನಃ ಎಲ್ಲರೂ ಒಟ್ಟಿಗೆ ಸೇರಿ ಅವನನ್ನು ಹಿಡಿದುಕೊಂಡು ಹೋಗಲಾರಂಭಿಸಿದರು.

ಹೋಗುವ ಮಾರ್ಗದಲ್ಲಿ ಊರ ಬಾಗಿಲು ಸಿಕ್ಕಿತು. ಊರ ಬಾಗಿಲ ಮೇಲೆ ಒಂದು ದೊಡ್ಡ ರಣಭೇರಿ, ಏಳು ಖಂಡುಗದ ಒಂದು ಡಾಲು (ಗುರಾಣಿ ?), ಮೂರು ಖಂಡುಗದ ಒಂದು ಬಾಕು ಇದ್ದುವು. ವೀರನಾದ ತಾನು ಇವುಗಳ ಕೆಳಗೆ ಹೋದರೆ ತನ್ನ ಶೌರ್ಯಕ್ಕೆ ಕುಂದುಂಟಾಗುವುದೆಂದು ಬಗೆದು, ಆಗ ತನ್ನನ್ನು ಹಿಡಿದುಕೊಂಡಿರುವವರಿಗೆ "ಬಿಗಿಯಾಗಿ ಹಿಡಿದುಕೊಳ್ಳಿ, ಇಲ್ಲದಿದ್ದರೆ ಬಿದ್ದು ಸಾಯುವಿರಿ" ಎಂದು ಎಚ್ಚರಿಕೆ ಕೊಟ್ಟು ಮೇಲೆ ನೆಗೆದ. ಅವನು ಹಾರಿದಾಗ ಎಷ್ಟೇ ಬಿಗಿಯಾಗಿ ಹಿಡಿದುಕೊಂಡಿದ್ದರೂ ಕೂಡ ಸೇವಕರೆಲ್ಲ ನೆಲದ ಮೇಲೆ ಬಿದ್ದು ಉರುಳಾಡಿದರು. ಮೇಲೇರಿದ ಕುಮಾರರಾಮ ರಣಭೇರಿಯನ್ನು ಹೊಡೆದು, ಡಾಲು ಬಾಕುಗಳನ್ನು ವಶಪಡಿಸಿಕೊಂಡು, ಪಟ್ಟಣವನ್ನು ಪ್ರವೇಶಿಸಿ, ಸಾವಿರಾರು ಜನರನ್ನು ತುಂಡರಿಸಿ ಗಣಪತಿರಾಯನ ಮುಂದೆ ಕಾಣಿಸಿಕೊಂಡ. ಸಿಂಹಾಸನದ ಮೇಲಿದ್ದ ಗಣಪತಿ ರಾಯನನ್ನು ಕೆಳಗೆ ಎಳೆದು ಹಾಕಿ, ತಾನು ಸಿಂಹಾಸನವನ್ನು ಹತ್ತಿ ಕುಳಿತ.

ಆ ಸಮಯಕ್ಕೆ ಸರಿಯಾಗಿ ಅಲ್ಲೇ ನೆಲಮಾಳಿಗೆಯಲ್ಲಿದ್ದ ರೆಕ್ಕೆಯ ಕುದುರೆ ತನ್ನನ್ನು ಹತ್ತಿ ಜಯಿಸುವ ವೀರ ಇವನೊಬ್ಬನೇ ಎಂದು ಅರಿತು ಅಲ್ಲಿಂದಲೇ ಕೆನೆಯಿತು. ಅದನ್ನು ಕೇಳಿದ ಕುಮಾರರಾಮ ಹೋಗಿ ಕುದುರೆಯನ್ನು ವಶಪಡಿಸಿಕೊಂಡು ಅಲ್ಲಿಯದರೆಗೆ ಆ ಕುದುರೆಯನ್ನು ಸಾಕುತ್ತಿದ್ದ ಮುದಿ ಸರದಾರನನ್ನು ಕುರಿತು "ನೀನು ಈ ತಕ್ಷಣ ನಿನ್ನ ಮನೆಯನ್ನು ಊರ ಹೊರಗೆ ಕಟ್ಟಿಕೋ. ಏಕೆಂದರೆ ನಾನು ಇನ್ನು ಸ್ವಲ್ಪ ಹೊತ್ತಿನಲ್ಲೇ ಈ ಪಟ್ಟಣವನ್ನು ನಾಶಮಾಡುತ್ತೇನೆ" ಎಂದು ತಿಳಿಸಿದ. ಅವನ ಆಜ್ಞೆಯಂತೆ ಆ ಸರದಾರ ಮನೆ ಕಟ್ಟಿಕೊಂಡ ಮೇಲೆ ಕ್ಷಣಾರ್ಧದಲ್ಲೇ ಸಂಪೂರ್ಣ ಪಟ್ಟಣವನ್ನೇ ಹೇಳ ಹೆಸರಿಲ್ಲದಂತೆ ಮಾಡಿ, ತಾನು ರೆಕ್ಕೆ ಕುದುರೆ, ಡಾಲು ಮತ್ತು ಬಾಕುಗಳ ಸಮೇತನಾಗಿ ಹೊರಟು, ಗಗನ ಮಾರ್ಗವಾಗಿ ಬಂದು ತನ್ನ ತಂದೆಗೆ ವಂದಿಸಿದ. ತನ್ನ ಮಗನ ಪರಾಕ್ರಮವನ್ನು ನೋಡಿ ಕಂಪಿಲಿರಾಯ ಬಹು ಮೆಚ್ಚಿದ.

ದಿನದಿನಕ್ಕೆ ಬೆಳೆದು ಸಾಹಸಿಯಾಗುತ್ತಿರುವ ತನ್ನ ಮಗನಿಗೆ ಈಗ ಯೌವನೋದಯವಾದುದನ್ನು ಅರಿತು ಕಂಪಿಲಿರಾಯ ತನ್ನ ಮಗನಿಗೆ ವಿವಾಹಮಾಡುವ ಯೋಚನೆಯಿಂದ ಅವನ ಭಾವಚಿತ್ರವನ್ನು ತೆಗೆದುಕೊಂಡು ಅನೇಕ ದೇಶಗಳನ್ನು ತಿರುಗಿ ಕೊನೆಗೆ ಡಿಳ್ಳಿಗೆ ಹೋಗುತ್ತಾನೆ.

ಆಗ ಡಿಳ್ಳಿಯನ್ನು ಆಳುತ್ತಿದ್ದ ನವಾಬನ ಮಗಳು ರತ್ನಾಜಿ ಪರಮ ಸೌಂದರ್ಯವತಿ. ಅವಳ ರೂಪನ್ನು ನೋಡಿ ಮೆಚ್ಚುತ್ತಾನೆ. ಕೊನೆಗೆ ತಾನೇ ಅವಳನ್ನು ಮೋಹಿಸುತ್ತಾನೆ. ತನ್ನ ಇಷ್ಟಾರ್ಥವನ್ನು ಸಾಧಿಸಿಕೊಳ್ಳುವುದಕ್ಕಾಗಿ ದೆಹಲಿಯ ನವಾಬನ ಕುವರಿಗೆ ಕುಮಾರ ರಾಮನ ಚಿತ್ರವನ್ನು ತೋರಿಸಿ, ತಮ್ಮ ಕಡೆ ಇರುವ ಪದ್ಧತಿಯೇ ಇದೆಂದು ಹೇಳಿ ಅವಳನ್ನು ಕತ್ತಿಗೆ ಧಾರೆ ಎರೆದುಕೊಂಡು ಬರುತ್ತಾನೆ. ರತ್ನಾಜಿಯನ್ನು ತಂದು ತನ್ನ ಪಟ್ಟಣದ ಏಳು ಅಂತಸ್ತಿನ ಚಿತ್ರಾಂಗಿ ಮಹಲಿನಲ್ಲಿಟ್ಟು ಅವಳೊಡನೆ ಸರ್ವಸುಖಗಳನ್ನೂ ಅನುಭವಿಸಿದ. ತನಗಾದ ಮೋಸಕ್ಕಾಗಿ ಖೇದಪಡುತ್ತ ರತ್ನಾಜಿ ಹಗಲಿರುಳೂ ಅವನಿಗಾಗಿ ಹುಡುಕುತ್ತಿರುತ್ತಾಳೆ.

ಭಾವಚಿತ್ರದಲ್ಲಿ ಕುಮಾರರಾಮನ ಸೌಂದರ್ಯಕ್ಕೆ ಮಾರುಹೋಗಿ "ಒಂದು ಗಂಟೆ ಹೊತ್ತಾದರೂ ತಾನು ಇಂತಹ ಸುಂದರ ಪುರುಷನಾದ ಕುಮಾರರಾಮನೊಡನೆ ಸುಖಪಡಬೇಕು. ಇದೇ ರಾಜನು ತನಗೆ ಮಾಡಿರುವ ಮೋಸಕ್ಕೆ ಮಾಡಬಹುದಾದ ತಕ್ಕ ಪ್ರತಿಫಲ" ಎಂದು ನಿರ್ಧರಿಸಿ ಕೊಳ್ಳುತ್ತಾಳೆ. ಅಲ್ಲದೆ, ಅವನಿಗಾಗಿ ಹಂಬಲಿಸುತ್ತ ಯಾವಾಗಲೂ ಅವನ ಧ್ಯಾನದಲ್ಲಿಯೇ ಇರುತ್ತಾಳೆ.

ಒಂದು ದಿನ ರಾತ್ರಿ ಕುಮಾರರಾಮನಿಗೆ ನೆಲಮಾಳಿಗೆಯಲ್ಲಿ ಬೆಳ್ಳಿಯ ಸೋರೆ, ಬಂಗಾರದ ಲೂಬು (?), ಮುತ್ತಿನ ಚೆಂಡು ಇರುವಂತೆಯೂ, ಅವುಗಳೆಲ್ಲ ತಾವೇ ಬಂದು ತಮ್ಮನ್ನು ತೆಗೆದುಕೊಂಡು ಆಟವಾಡು ಎಂದು ಕೇಳಿಕೊಂಡಂತೆಯೂ ಸ್ವಪ್ನ ಬೀಳುತ್ತದೆ. ಆಗ ಕುಮಾರರಾಮನು ಹರಿಯಾಲದೇವಮ್ಮನ ಬಳಿಗೆ ಹೋಗಿ ವಿಷಯವನ್ನು ತಿಳಿಸಿ, ತಮಗೆ ಆ ಲೂಬು ಮತ್ತು ಚೆಂಡುಗಳನ್ನು ಕೊಡಬೇಕೆಂದು ಕೇಳುತ್ತಾನೆ. ಆಗ ಹರಿಯಾಲದೇವಿ "ಬೇಡ ಮಗು. ಅವು ಬಹಳ ಕೆಟ್ಟವು. ಅವುಗಳಿಂದ ಆಟವಾಡಿದ ಅನೇಕ ರಾಜರು ಹಿಂದೆ ಕೆಟ್ಟುಹೋಗಿದ್ದಾರೆ" ಎಂದು ಬುದ್ಧಿ ಹೇಳಿದಳು.

ಆದರೂ ಕುಮಾರರಾಮ ಕೇಳಲಿಲ್ಲ. ಕೊನೆಗೆ ಹರಿಯಾಲದೇವಮ್ಮ "ಹಾಗಾದರೆ ನಿಮ್ಮ ತಂದೆಯನ್ನು ಕೇಳಿ ತೆಗೆದುಕೋ" ಎಂದು ಹೇಳುತ್ತಾಳೆ.

ಆದರಂತೆ ಕುಮಾರರಾಮ ಕೇಳಲಾಗಿ ಕಂಪಿಲಿರಾಯ ಚೆಂಡನ್ನು ಕೊಟ್ಟುಬಿಡುತ್ತಾನೆ.

ಆ ದಿನ ಊರಿನ ಜನರಲ್ಲೆಲ್ಲ ಒಂದು ರೀತಿಯ ಸಡಗರ. ಎಲ್ಲರಿಗೂ ರಾಜಕುಮಾರನ ಅದ್ಭುತ ಚೆಂಡಾಟವನ್ನು ನೋಡಿ ತಮ್ಮ ನೇತ್ರಗಳಿಗೆ ಆನಂದವನ್ನುಂಟುಮಾಡಿಕೊಳ್ಳ ಬೇಕೆಂದು ಆಸೆ.

ಪಟ್ಟಣದ ಜನರೆಲ್ಲರೂ ಒಂದು ಕಡೆ ಸೇರಿದ್ದಾರೆ. ಕುಮಾರರಾಮ ಕೈಯಲ್ಲಿ ಮುತ್ತಿನ ಚೆಂಡನ್ನು ಹಿಡಿದುಕೊಂಡು ರಾಜಬೀದಿಯಿಂದ ಬಂದ. ಅವನು ಬಂದ ತಕ್ಷಣ ಜನಜಂಗುಳಿ ಯೆಲ್ಲ "ಕುಮಾರರಾಮಾ ಕಿ ಜೈ" ಎಂದು ಹರ್ಷೋದ್ಗಾರ ಮಾಡಿದರು.

ಕುಮಾರರಾಮನು ನಗುಮುಖದಿಂದ ಬಯಲಿಗಿಳಿದ. ತುಂಬು ಯೌವನದ ಆ ವ್ಯಕ್ತಿ ರಂಗಕ್ಕಿಳಿದ ತಕ್ಷಣ, ಅವನ ಮರಿಯಾನೆಯ ನಡಿಗೆಯನ್ನು ನೋಡಿ ಜನಗಳೆಲ್ಲ ಗುಸುಗುಟ್ಟು ತ್ತಿದ್ದರೆ ರತ್ನಾಜಿಯ ಎದೆಯಲ್ಲಿ ಅದೊಂದು ರೀತಿಯ ಕಸಿವಿಸಿಯಾಗುತ್ತಿತ್ತು. ಅವಳು ಅಲ್ಲಿ ನಿಲ್ಲದೆ ಒಂದೇ ಓಟಕ್ಕೆ ಓಡಿ ಶಂಭುಲಿಂಗದ ಮುಂದೆ ಕೆಡೆದುಬಿದ್ದಳು. ಒಂದೇ ಸಮನೆ ಕಣ್ಣೀರು ಸುರಿಸುತ್ತ "ದೇವ, ನನ್ನ ಬಯಕೆ ಪೂರೈಸುವಂತೆ ಕುಮಾರರಾಮನ ಚೆಂಡು ಬಂದು ನನ್ನ ಮಹಡಿಯ ಮೇಲೆ ಬಿದ್ದರೆ ನನ್ನ ಸರ್ವ ಸಂಪತ್ತನ್ನೂ ನಿನಗೆ ಅರ್ಪಿಸುತ್ತೇನೆ" ಎಂದು ಬೇಡಿಕೊಳ್ಳುತ್ತಿದ್ದಳು.

ಈ ಕಡೆ ರಂಗಕ್ಕಿಳಿದ ವೀರರಾಮ ವೀರಗಾಸಿ ಕಟ್ಟಿ ಒಬ್ಬನೇ ಒಂದು ಕಡೆಗೂ, ಏಳು ಜನ ಪ್ರಸಿದ್ಧ ಜಟ್ಟಿಗಳು ಮತ್ತೊಂದು ಕಡೆಗೂ ನಿಂತು ಆಟವಾಡತೊಡಗಿದರು. ಕುಮಾರ ರಾಮನ ಒಂದು ಏಟಿಗೆ ಏಳು ಜನ ಜಟ್ಟಿಗಳೂ ಹಣ್ಣಾಗುತ್ತಿದ್ದರು.

ಆಟ ರಭಸದಿಂದ ಸಾಗಿದೆ. ಜನರೆಲ್ಲ ನೋಟದಲ್ಲಿ ಮೈಮರೆತಿದ್ದಾರೆ. ರತ್ನಾಜಿ ಪ್ರಾರ್ಥನೆಯಲ್ಲಿ ಮೈಮರೆತಿದ್ದಾಳೆ. ಕೊನೆಗೂ ಅವಳ ಬಯಕೆ ಈಡೇರಿತು.

ಕುಮಾರರಾಮ ಒಮ್ಮೆ ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ಬಲವಾಗಿ ಚೆಂಡನ್ನು ಎಸೆದ. ಏಳು ಜನ ಜಟ್ಟಿಗಳು ಆ ಚೆಂಡಿನ ರಭಸವನ್ನು ತಡೆಯಲಸಮರ್ಥರಾದರು. ಅವ

ರೆಲ್ಲರ ಕೈಯಿಂದ ಜಾರಿ ಪುಟ ನೆಗೆದ ಚೆಂಡು ರತ್ನಾಜಿಯ ಮಹಡಿಯ ಮೇಲೆ ಹೋಗಿ ಬಿತ್ತು. ಚಾತಕವಾಗಿ ಕಾದಿದ್ದ ರತ್ನಾಜಿ ತಕ್ಷಣ ಆ ಚೆಂಡನ್ನು ತೆಗೆದುಕೊಂಡು ತನ್ನ ಎದೆಯ ಮಧ್ಯೆ ಬಚ್ಚಿಟ್ಟುಕೊಂಡಳು.

ಏಳು ಜನ ಜಟ್ಟಿಗಳು ಬಂದು ಒಂದೇ ಸಮನೆ ಬೇಡಿದರೂ ರತ್ನಾಜಿ ಚಂಡನ್ನು ಕೊಡಲಿಲ್ಲ. ಕೊನೆಗೆ ಅವಳು ಜಟ್ಟಿಗಳನ್ನು ಕುರಿತು "ನಿಮಗೆ ಚೆಂಡು ಬೇಕಿದ್ದರೆ ನಿಮ್ಮ ಕುಮಾರರಾಮನನ್ನು ಕಳುಹಿಸಿ, ಕೊಡುತ್ತೇನೆ" ಎಂದು ಹೇಳಿದಳು.

ಇದನ್ನು ಕೇಳಿದ ಕುಮಾರರಾಮ ಸ್ವಲ್ಪ ಹೊತ್ತು ಯೋಚಿಸಿ ಕೊನೆಗೆ "ತಾಯಿಯ ಮನೆಗೆ ಮಗ ಹೋಗುವುದರಲ್ಲಿ ಅಭ್ಯಂತರವೇನೂ ಇಲ್ಲ" ಎಂದುಕೊಂಡು ರತ್ನಾಜಿಯ ಬಳಿಗೆ ಹೋಗಿ ಚೆಂಡನ್ನು ಬೇಡುತ್ತಾನೆ. ಅವನನ್ನು ನೋಡಿದ ರತ್ನಾಜಿ ಮುಗುಳ್ನಗೆಯಿಂದ, ಕೊನೆಗೂ ತನ್ನ ಬಯಕೆ ಪೂರ್ಣವಾಯಿತೆಂದು ಬಗೆದು, ತನ್ನ ಎದೆಯ ಮಧ್ಯದಲ್ಲಿದ್ದುದನ್ನು ತೋರಿಸಿ, "ಇಲ್ಲಿದೆ ತೆಗೆದುಕೋ" ಎಂದು ಹೇಳುತ್ತಾಳೆ. ಆಗ ಉಭಯ ಸಂಕಟದಿಂದ ವೀರವರ ಕುಮಾರರಾಮ ತನ್ನ ಬಾಯಿಂದ ಅದನ್ನು ತೆಗೆದುಕೊಳ್ಳಲು ಹೋಗುತ್ತಾನೆ.

ತನ್ನ ಊಹೆ ನಿರರ್ಥಕವಾಗುತ್ತಿರುವುದನ್ನು ನೋಡಿ ಸಹಿಸಲಾರದೆ ಸಿಟ್ಟಿಗೆದ್ದ ರತ್ನಾಜಿ ಅವನ ಕೆನ್ನೆಗೆ ಫಟೇರನೆ ಹೊಡೆದು "ಕುಮಾರರಾಮ, ನೀನು ಕೈಯಿಂದ ತೆಗೆದುಕೊಳ್ಳುತ್ತೀಯೆಂದು ನಾನು ತಿಳಿದುಕೊಂಡಿದ್ದೆ. ಹೇಡಿ. ಕೈಯಿಂದ ತೆಗೆದುಕೊಳ್ಳಲು ನಿನಗೆ ಶಕ್ತಿಯಿಲ್ಲವೆ ?" ಎಂದು ಹೀನಾಯವಾಗಿ ನಿಂದಿಸಿದಳು. ಆಗ ಕುಮಾರರಾಮ "ಅಮ್ಮಾ, ನೀವು, ನನಗೆ ಮಾತೃಸ್ವರೂಪಿ. ನನ್ನನ್ನು ಹಡೆದ ತಾಯಿ ಬೇರೆಯಲ್ಲ, ನೀವು ಬೇರೆಯಲ್ಲ. ಎಂದು ನಮ್ಮ ತಂದೆ ನಿಮ್ಮನ್ನು ಪರಿಗ್ರಹಿಸಿದನೋ ಅಂದೇ ನೀವು ನನಗೆ ಸಾಕ್ಷಾತ್ ತಾಯಿಯಾದಿರಿ. ತಾಯಿಯ ಮೊಲೆಗೆ ಬಾಯಿ ಹಾಕುವುದರಲ್ಲಿ ಈ ಕುಮಾರನದು ಏನು ತಪ್ಪಿದೆ ?" ಎಂದು ಕೇಳಿದನು. ಅದನ್ನು ಕೇಳಿ ನಿರಾಶಳಾದ ರಾಣಿ ತನ್ನ ಬಯಕೆಯನ್ನು ಮನಬಿಚ್ಚಿ ಹೇಳಿಬಿಡುತ್ತಾಳೆ. ಕುಮಾರರಾಮ ಅದಕ್ಕೆ ಒಪ್ಪದೆ ಪ್ರತಿಭಟಿಸುತ್ತಾನೆ.

ಕೆಣಕಿದ ಸರ್ಪಿಣಿಯಾದ ರತ್ನಾಜಿ "ಕುಮಾರರಾಮ, ಒಂದು ಗಂಟೆ ಹೊತ್ತು ನನ್ನ ಮನಃಸಂತೋಷಪಡಿಸು ಎಂದರೆ ನೀನು ಒಪ್ಪಲಿಲ್ಲ. ಈ ಅಪಮಾನಕ್ಕೆ ಪ್ರತಿಯಾಗಿ ನಿನ್ನ ತಲೆಯನ್ನು ತೆಗೆಸದಿದ್ದರೆ ನಾನು ಡಿಲ್ಲಿ ನವಾಬನ ಮಗಳು ರತ್ನಾಜಿಯಲ್ಲ" ಎಂದು ಹೇಳಿದಳು.

ಸಂಜೆ ರತ್ನಾಜಿಯ ಮನೆಗೆ ಕಂಪಿಲಿರಾಯ ಬರುವ ಹೊತ್ತಿಗೆ ಅವಳು ತನ್ನ ಉಗುರಿನಿಂದ ಕೈ, ಕಾಲು, ಮುಖವನ್ನೆಲ್ಲ ಗಾಯಮಾಡಿಕೊಂಡು ಅಳುತ್ತ ಮಲಗಿದ್ದಳು. ರಾಜ ಬಂದವನೇ ಇದನ್ನು ನೋಡಿ ಬೆರಗಾಗಿ "ಇದೇನಿದು ?" ಎಂದು ಕೇಳಿದ. ಆಗ ಸೋಗು ಮಾಡುತ್ತ "ನೋಡು, ನಿನ್ನ ಪ್ರೀತಿಯ ಮಗ ಕುಮಾರರಾಮನ ಕೆಲಸ. ಅವನು ಮನೆಗೆ ಬಂದು ಬಲಾತ್ಕಾರವಾಗಿ ನನ್ನ ಶೀಲಭಂಗಮಾಡಿ ಹೋದ. ನನಗೆ ದೊಡ್ಡ ಅವಮಾನವಾಗಿದೆ. ಇಂಥ ಅವಮಾನವನ್ನು ಸಹಿಸಿಕೊಂಡು ಜೀವಿಸಿರಲಾರೆ. ಇದನ್ನು ನಿಮಗೆ ತಿಳಿಸಿ ತಕ್ಷಣ ಆತ್ಮಹತ್ಯ ಮಾಡಿಕೊಳ್ಳಬೇಕೆಂದು ನಿರ್ಧರಿಸಿದ್ದೇನೆ. ನನ್ನ ಮಾನ ಹೋದರೆ ನಿಮ್ಮ ಮಾನ ಮರ್ಯಾದೆ ಹೋದಂತಲ್ಲವೆ ? ಮನೆಯಲ್ಲಿ ನಾಗರ ಹಾವಿಗೆ ಹಾಲೆರೆಯುತ್ತಿದ್ದೀರಿ. ನಾನೆಂದೆಂದಿಗೂ ಜೀವಿಸಿರಲಾರೆ. ನಾನು ಜೀವಿಸಿರಬೇಕೆಂಬ ಆಸೆ ನಿಮಗಿದ್ದರೆ ತಕ್ಷಣ ಅವನನ್ನು ಕೊಲ್ಲಿಸಿ ಅವನ ಶಿರವನ್ನು ತಂದು ನನಗೆ ತೋರಿಸಿ" ಎಂದು ನಾನಾ ವಿಧವಾಗಿ ನಟಿಸಿದಳು.

ಏನೂ ಅರಿಯದ ರಾಜನಿಗೆ ತನ್ನ ಮಗನ ಕೆಲಸ ನೋಡಿ ಬಹಳ ಕೋಪ ಬಂತು.

ಅವನು ಹೆಚ್ಚು ಯೋಚಿಸದೆ, ಕೋಪದ ಆವೇಶದಲ್ಲಿ ತನ್ನ ಸೋದರಮಾವನಾದ ಬಚ್ಚಣ್ಣನನ್ನು ಕರೆದು "ಈ ತಕ್ಷಣ ಕುಮಾರರಾಮನ ತಲೆಯನ್ನು ತೆಗೆದು ರತ್ನಾಜಿಗೆ ಕೊಡು" ಎಂದು ಆಜ್ಞಾಪಿಸಿದನು.

ನಿಜಾಂಶವನ್ನು ತಿಳಿದ ಬಚ್ಚಣ್ಣ "ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ಇಂಥ ಕಠಿಣ ಶಿಕ್ಷೆ ಬೇಡ" ಎಂದು ಏನೇನೋ ಹೇಳುತ್ತಾನೆ. ಆದರೆ ಕೋಪಾಂಧನಾದ ರಾಜನಿಗೆ ಒಂದೂ ಹಿಡಿಸುವುದಿಲ್ಲ. ಅವನ ಹಟದ ಮುಂದೆ ತನ್ನ ಮಾತು ನಡೆಯದಿದ್ದುದನ್ನು ನೋಡಿ, ಬಚ್ಚಣ್ಣ ಕುಮಾರರಾಮನನ್ನು ಕಡಿಯುವುದಕ್ಕೆಂದು ತೆಗೆದುಕೊಂಡು ದೂರದ ಕಾಡಿಗೆ ಹೋಗಿ, ಅಲ್ಲಿ ಅವನನ್ನು ನೆಲಮಾಳಿಗೆಯಲ್ಲಿ ಬಚ್ಚಿಡುತ್ತಾನೆ. ಅನಂತರ ಕಂಪಿಲಿರಾಯನ ದತ್ತು ಮಗ(ನೂ), ಯಾವಾಗಲೂ ಸೂಳೆಯ ಮನೆಯಲ್ಲಿಯೇ ಬಿದ್ದಿರುತ್ತಿದ್ದ (ವನೂ), ಕುಮಾರರಾಮನನ್ನು ಸಂಪೂರ್ಣವಾಗಿ ಹೋಲುತ್ತಿದ್ದ (ವನೂ), (ಆದ) ಹೋಲಿಕೆರಾಮನ ತಲೆಯನ್ನು ಕತ್ತರಿಸಿಕೊಂಡು ಬರುತ್ತಾನೆ. ರತ್ನಾಜಿಯ ಬಳಿಗೆ ಬಂದು "ಇದೋ ಕುಮಾರರಾಮನ ತಲೆ" ಎಂದು ಕೊಡುತ್ತಾನೆ.

ರತ್ನಾಜಿ ಅದನ್ನು ನೋಡಿ ನಗುತ್ತ ಆನಂದದ ಅಟ್ಟಹಾಸದಿಂದ ಆ ತಲೆಯನ್ನು ಕೈಯಲ್ಲಿ ಹಿಡಿದುಕೊಂಡು "ಕುಮಾರರಾಮ, ಒಂದು ಗಂಟೆ ಹೊತ್ತು ನನ್ನೊಡನೆ ಸುಖಿಸು ಎಂದರೆ ನೀನು ಕೇಳಲಿಲ್ಲ. ನೋಡು. ಅನ್ಯಾಯವಾಗಿ ನೀನು ಈಗ ತಲೆ ತೆಗೆಸಿಕೊಂಡೆ" ಎಂದು ಹೇಳಿಕೊಂಡು ಹಿಗ್ಗುತ್ತಾಳೆ.

ಇದ್ದಕ್ಕಿದ್ದಂತೆ ರತ್ನಾಜಿ ಆ ತಲೆಯನ್ನು ದೂರ ಹಿಡಿದು ದಿಟ್ಟಿಸುತ್ತಾಳೆ. ಅವಳ ಮನಸಿನಲ್ಲಿ ಏನೋ ಒಂದು ಸಂಶಯ ಮೊಳೆಯುತ್ತದೆ. ಕೂಡಲೆ ಬಚ್ಚಣ್ಣನನ್ನು ಕರೆದು "ಇದು ಕುಮಾರರಾಮನ ತಲೆಯಾಗಿ ಕಾಣುತ್ತಿಲ್ಲ. ಹೋಲಿಕೆ ರಾಮನ ತಲೆಯಾಗಿದೆಯಲ್ಲ" ಎಂದು ಕೇಳುತ್ತಾಳೆ. ಆಗ ಬಚ್ಚಣ್ಣ ಬಹಳ ಬುದ್ಧಿವಂತಿಕೆಯಿಂದ ಅದು ಕುಮಾರರಾಮನ ತಲೆ ಎಂದೇ ವಾದಿಸಿ ರತ್ನಾಜಿಯನ್ನು ಒಪ್ಪಿಸುತ್ತಾನೆ.

ಹತ್ತಾರು ತಿಂಗಳು ಕಳೆದುವು. "ಕುಮಾರರಾಮನ ತಲೆಯನ್ನು ರತ್ನಾಜಿ ತೆಗೆದಳು. ಅವನು ಇನ್ನಿಲ್ಲ" ಎಂಬ ಸುದ್ದಿ ದೇಶದಾದ್ಯಂತ ಹರಡಿತು. ಇದನ್ನು ಕೇಳಿ ಅಕ್ಕ ಪಕ್ಕದ ದೇಶದ ರಾಜರುಗಳಿಗೆ ಬಹಳ ಸಂತೋಷವಾಯಿತು. ಇಲ್ಲಿಯವರೆಗೂ ತಲೆಬಾಗದೆ ಇದ್ದ ಕಂಪಿಲಿ ರಾಜ್ಯವನ್ನು ಕೆಲವು ಗಂಟೆಗಳಲ್ಲೇ ಗೆದ್ದು ವಶಪಡಿಸಿಕೊಂಡು ಬರಬಹುದು ಎಂಬ ಆನಂದದಿಂದ ಅಕ್ಕ ಪಕ್ಕದ ರಾಜರೆಲ್ಲ ಒಟ್ಟಿಗೆ ಸೇರಿ ಕಂಪಿಲಿಯ ಮೇಲೆ ದಂಡೆತ್ತಿ ಬಂದರು.

ತನ್ನ ಮಗನ ಸಾವಿನ ಬೆಲೆ ಕಂಪಿಲಿರಾಯನಿಗೆ ಈಗ ತಿಳಿಯಿತು. ಕುಮಾರರಾಮನ ಸಾವಿನಿಂದ ರಾಜನಿಗೆ ಬಲದ ತೋಳೇ ಮುರಿದು ಹೋದಂತಾಗಿತ್ತು. ತನ್ನ ರಾಜ್ಯಕ್ಕೆ ಉಂಟಾದ ಪರಿಸ್ಥಿತಿಯನ್ನೇ ಕುರಿತು ಕಂಪಿಲಿರಾಯ ಬಹಳವಾಗಿ ಚಿಂತಿಸತೊಡಗಿದ. ವೀರನಂತೆ ಹೋರಾಡಿ ವೀರ ಸ್ವರ್ಗವನ್ನು ಸೇರುವುದೇ ಉಳಿದಿರುವ ಒಂದು ಮಾರ್ಗ ಎಂಬಂತೆ ತೋರಿತು.

ಆ ದಿನ ಸಾಯಂಕಾಲದ ಸಮಯ. ಅನೇಕ ರಾಜರು ಕಂಪಿಲಿ ಪಟ್ಟಣದ ಹೊರಗಡೆ ಬೀಡು ಬಿಟ್ಟಿದ್ದಾರೆ. ಆ ದೊಡ್ಡ ಬೀಡಾರದ ಒಂದು ಮೂಲೆಯಲ್ಲಿ, ಒಂದು ತಮಾಷೆ ನಡೆಯುತ್ತಿತ್ತು.

ಸೈನ್ಯದ ಅನೇಕ ಮುಖ್ಯಾಧಿಕಾರಿಗಳು ಸುಮ್ಮನಿರಲಾರದೆ ಮನರಂಜನೆ ಮತ್ತು ಕುತೂಹಲಕ್ಕಾಗಿ ಒಂದು ಕಾಳಗವೇರ್ಪಡಿಸಿದರು. "ಕುಮಾರರಾಮ ಬದುಕಿದ್ದಾನೆಯೇ ಅಥವಾ

ಇಲ್ಲವೆ ?" ಎನ್ನುವುದನ್ನು ಕಂಡುಹಿಡಿಯುವುದೇ ಈ ಕಾಳಗದ ಉದ್ದೇಶ. ಆದರಲ್ಲಿ ಕುಮಾರ ರಾಮನ ಪ್ರತೀಕವಾಗಿ ಅವನ ಹೆಸರು ಹೇಳಿ, ಒಂದು ಚಿಕ್ಕ ಬಡ ಟಗರನ್ನೂ, ತಮ್ಮೆಲ್ಲರ ಪರವಾಗಿ ಚೆನ್ನಾಗಿ ಕೊಬ್ಬಿದ ಒಂದು ದೊಡ್ಡ ಟಗರನ್ನೂ ಕಾಳಗಕ್ಕೆ ಬಿಟ್ಟರು. "ಜೈ ಕುಮಾರ ರಾಮು" ಎಂದ ತಕ್ಷಣ ಚಿಕ್ಕ ಬಡ ಟಗರು ರಭಸವಾಗಿ ಹೋಗಿ ಗುದ್ದಿತು. ಆ ನಿಮಿಷದಲ್ಲೇ ದೊಡ್ಡ ಟಗರು ನೆಲದ ಮೇಲೆ ಬಿದ್ದು ಸತ್ತಿತು. ಎಲ್ಲರೂ ಆಶ್ಚರ್ಯದಿಂದ ಮುಖಮುಖಗಳನ್ನು ನೋಡಿಕೊಂಡರು.

"ಕುಮಾರರಾಮು ನಿಜವಾಗಿಯೂ ಬದುಕಿದ್ದಾನೆ. ಆದ್ದರಿಂದ ಬಡ ಟಗರು ಗೆದ್ದಿತು" ಎಂದು ಕೆಲವರೆಂದರೆ, "ಛೇ! ಛೇ! ಎಲ್ಲಿಯಾದರೂ ಉಂಟೆ. ಆಕಸ್ಮಾತ್ ಮರ್ಮಸ್ಥಳಕ್ಕೆ ಏಟು ಬಿದ್ದದ್ದರಿಂದ ದೊಡ್ಡ ಟಗರು ಸತ್ತಿತು, ಅಷ್ಟೆ" ಎಂದು ಮತ್ತೆ ಕೆಲವರು ಹೇಳಿದರು.

ಮತ್ತೆ ಸಂಶಯಪರಿಹಾರಕ್ಕಾಗಿ ಎರಡು ಹುಂಜಗಳನ್ನು ತಂದರು. ಕುಮಾರರಾಮನ ಪ್ರತೀಕವಾಗಿ ಅವನ ಹೆಸರು ಹೇಳಿ ಒಂದು ಚಿಕ್ಕ ಹುಂಜವನ್ನೂ, ಉಳಿದ ಅಲ್ಲಿದ್ದ ಎಲ್ಲ ರಾಜರ ಪ್ರತೀಕವಾಗಿ ಅವರ ಹೆಸರು ಹೇಳಿ ಒಂದು ದೊಡ್ಡ ಹುಂಜವನ್ನೂ ತಂದು ಎರಡರ ಕಾಲಿಗೆ ಕತ್ತಿಕಟ್ಟಿ ಕಾಳಗಕ್ಕೆ ಬಿಟ್ಟರು.

ಕಾಳಗಕ್ಕೆ ಬಿಟ್ಟದ್ದೇ ತಡ, ಚಿಕ್ಕ ಹುಂಜ ದೊಡ್ಡ ಹುಂಜವನ್ನು ಒಂದೇ ಏಟಿಗೆ ಹೊಡೆದುರುಳಿಸಿತು. ಆಗ ಎಲ್ಲರ ಮನಸ್ಸಿನಲ್ಲಿ ಕುಮಾರರಾಮ ಬದುಕಿದ್ದಾನೆಂಬ ವಿಷಯವು ದೃಢವಾಗಿ ನೆಲಸಲಾರಂಭಿಸಿತು. ಆ ಸಮಯಕ್ಕೆ ಸರಿಯಾಗಿ ಗಗನಮಾರ್ಗದಲ್ಲಿ ಒಂದು ರೀತಿಯ ಶಬ್ದ ಕೇಳಿಸಿತು.

ಅರಸನ ಚಿಂತೆಯನ್ನು ನೋಡಿ "ಈ ಸಮಯದಲ್ಲಿ ಶತ್ರುಗಳ ಕೈಯಿಂದ ಕಂಪಿಲಿ ರಾಜ್ಯವನ್ನು ರಕ್ಷಿಸುವುದು ಕುಮಾರರಾಮನೊಬ್ಬನಿಂದ ಸಾಧ್ಯವೇ ಹೊರತು ಮತ್ತೆ ಯಾರಿಂದಲೂ ಸಾಧ್ಯವಿಲ್ಲ" ಎಂದು ಬಗೆದು ಬಚ್ಚಣ್ಣ ರೆಕ್ಕೆಯ ಕುದುರೆಯನ್ನು ತೆಗೆದು ಕೊಂಡು ಕುಮಾರರಾಮನನ್ನು ಕರೆತರುವುದಕ್ಕೆ ಹೋಗುತ್ತಾನೆ.

ಎಷ್ಟು ಹೊತ್ತು ಹುಡುಕಿದರೂ ನೆಲಮಾಳಿಗೆಯ ಸ್ಥಳ ಸಿಕ್ಕಲಿಲ್ಲ. ಬಹಳ ಕಾಲವಾಗಿದ್ದು ದರಿಂದ ಆ ಮಾಳಿಗೆ ಇದ್ದ ಜಾಗ ಬಚ್ಚಣ್ಣನಿಗೆ ಮರೆತುಹೋಗಿತ್ತು. ಅಲ್ಲದೆ, ಅಲ್ಲೆಲ್ಲ ವಿಪರೀತ ಹುಲ್ಲು ಬೆಳೆದಿತ್ತು. "ಎಂಥ ಕೆಲಸವಾಯಿತಲ್ಲ" ಎಂದು ಬಚ್ಚಣ್ಣ ಖಿನ್ನಮನಸ್ಕನಾಗಿ ಹುಡುಕು ತ್ತಿದ್ದಾಗ ಏಕಾಏಕಿ ರೆಕ್ಕೆಕುದುರೆ ಏಕೋ ಏನೋ ಕೆನೆಯಿತು. ನೋಡಲಾಗಿ ಅದು [ಕೆನೆಯುತ್ತ] ಮೇಲೆ ತನ್ನ ಕಾಲಿನ ಗೊರಸಿನಿಂದ ಕೆರೆಯುತ್ತಿತ್ತು. ಅದೇನಿರಬಹು ದೆಂದು ಬಚ್ಚಣ್ಣ ಆಶ್ಚರ್ಯದಿಂದ ಹೋಗಿ ನೋಡಿದ. ಅದೇ ನೆಲಮಾಳಿಗೆ ಇರುವ ಬಂಡೆ ಇದ್ದ ಜಾಗವಾಗಿತ್ತು. ಕುದುರೆಯ ತೀಕ್ಷ್ಣಬುದ್ಧಿಯನ್ನು ಬಹಳವಾಗಿ ಮೆಚ್ಚಿ ಕೊಂಡು ಕುಮಾರರಾಮನನ್ನು ಹೊರಗೆ ಕರೆದು ನೋಡಿದನು. ಅವನಲ್ಲಿ ಏನೂ ಬದಲಾವಣೆ ಗಳೇ ಆಗಿರಲಿಲ್ಲ. ಅದಕ್ಕೆ ಬದಲಾಗಿ ಅವನು ತಾನು ಸಂತೋಷವಾಗಿದ್ದ ಸಮಯದಲ್ಲಿದ್ದುದ ಕ್ಕಿಂತಲೂ ಹೆಚ್ಚು ರಾಜಕಳೆಯಿಂದ ಕೂಡಿ ಶೋಭಿಸುತ್ತಿದ್ದನು. ಕಾರಣ, ಅವನು ನೆಲಮಾಳಿಗೆ ಯಲ್ಲಿ ಜಟಂಗಿರಾಮನನ್ನು ಆರಾಧಿಸಿ ಆರು ತಿಂಗಳು ತಿಂದ ಆಹಾರ ತಿಂದಂತೆಯೇ ಇರುವ ಹಾಗೆಯೂ, ಇಟ್ಟ ವಿಭೂತಿ ಮತ್ತು ಗಂಧ ಇಟ್ಟಂತೆ ಇರುವಂತೆಯೂ ವರವನ್ನು ಪಡೆದು ಕೊಂಡಿದ್ದ.

ಅವನಿಗೆ ರಾಜ್ಯಕ್ಕೆ ಉಂಟಾಗಿರುವ ಆಪತ್ತನ್ನು ಸಂಪೂರ್ಣವಾಗಿ ವಿವರಿಸಿದ. ಕೂಡಲೆ

ಕುಮಾರರಾಮನಿಗೆ ವೀರಾವೇಶ ಉಕ್ಕಿಬಂತು. ಒಂದು ಗಳಿಗೆಯಲ್ಲಿಯೇ ಆ ಚಿಕ್ಕಪುಟ್ಟ ರಾಜರನ್ನೆಲ್ಲ ಕಡಿದು ಕೆಡಹುವ ಕೋಪದಿಂದ ಗಗನಕ್ಕೆ ಕುದುರೆಯನ್ನು ನೆಗೆಸಿದ. ಅವನು ಗಗನ ಮಾರ್ಗದಲ್ಲಿ ಬರುವ ಶಬ್ದವನ್ನು ಕೇಳಿದ ರಾಜರುಗಳ ದೇಹವೆಲ್ಲ ಕಂಪಿಸತೊಡಗಿತು. ಒಂದು ನಿಮಿಷದಲ್ಲಿಯೇ ಸಮಸ್ತ ಸೈನ್ಯವನ್ನು ಹೇಳಹೆಸರಿಲ್ಲದಂತೆ ಮಾಡಿ ಕುಮಾರರಾಮ ಬಂದು ತನ್ನ ತಂದೆ ಕಂಪಿಲರಾಯನಿಗೆ ವಂದಿಸಿದ.

ಹೋದ ಮಗ ತಿರುಗಿಬಂದುದನ್ನು ನೋಡಿ ಕಂಪಿಲರಾಯ ಆಶ್ಚರ್ಯ ಆನಂದಗಳ ಸಮೇತವಾಗಿ ಅವನನ್ನು ಮೆಚ್ಚಿ ಆಶೀರ್ವದಿಸಿದನು. ಅನಂತರ ಅವನು ಹಿಂತಿರುಗಿ ಬಂದ ರೀತಿಯನ್ನು ಕೇಳಿದನು. ಅವನ ಮಾತಿನಿಂದ ಅವನ ನಿರಪರಾಧಿತನವನ್ನೂ ರತ್ನಾಜಿಯ ಕೀಳು ಬಯಕೆಯನ್ನೂ ತಿಳಿದುಕೊಂಡ. ಆ ಕೂಡಲೆ ತನ್ನ ಇಂತಹ ಮಹಾಪರಾಕ್ರಮಶಾಲಿಯಾದ ಮತ್ತು ಇಂತಹ ಆಪತ್ತಿನ ಸಮಯದಲ್ಲಿ ಬಂದು ತನ್ನ ರಕ್ಷಣೆಯನ್ನು ಮಾಡಿದ ಮಗನ ಕೊಲೆಗೆ ಕಾರಣಳಾಗುತ್ತಿದ್ದ ರತ್ನಾಜಿಯ ಮೇಲೆ ಕೋಪಗೊಂಡು ಅವಳನ್ನು ತುಂಬ ಉಗ್ರವಾಗಿ ಶಿಕ್ಷಿಸಬೇಕೆಂದು ನಿಶ್ಚಯಿಸಿದನು.

ಮರುಕ್ಷಣದಲ್ಲಿಯೇ ಒಂದು ದೊಡ್ಡ ಸುಣ್ಣದ ಹಗೇವು ಸಿದ್ಧವಾಯಿತು. ರತ್ನಾಜಿ ಸೇಡಿನಿಂದ ಕೂಡಿದ ಮನಸ್ಸುಳ್ಳವಳಾಗಿ ಬಂದು ಹಗೇವಿನ ತುದಿಯಲ್ಲಿ ನಿಂತುಕೊಂಡಿದ್ದಾಳೆ. ಆಗ ಅವಳ ಸುಡುವಿಕೆಯನ್ನು ನೋಡಿ ಆನಂದಿಸುವುದಕ್ಕಾಗಿ ಎಲ್ಲ ಜನರಂತೆ ಕುಮಾರರಾಮನೂ ರಾಜನೊಡನೆ ಅಲ್ಲಿಗೆ ಬಂದಿದ್ದ. ಅವನನ್ನು ನೋಡಿದ ತಕ್ಷಣ ರತ್ನಾಜಿಯ ಕೋಪ ಕೆರಳಿತು. ಸೇಡು ಸೆಡೆಯಿತು ಸೇಡೇ ಸಾಕಾರಗೊಂಡ ವ್ಯಕ್ತಿಯಂತಾಗಿ ಅವಳು ಆ ಕ್ಷಣ ಕುಮಾರರಾಮನಿಗೆ "ಕುಮಾರರಾಮ! ನಿನ್ನ ತಲೆಯನ್ನು ತೆಗೆಸಿದ್ದುದಕ್ಕೆ ಈಗ ನನ್ನ ತಲೆಯನ್ನು ತೆಗೆಸುತ್ತಿರುವೆ. ಆಗಲಿ; ಡಿಲ್ಲಿಯಲ್ಲಿ ಕುದುರೆ ಕಿವಿಯಿಂದ ಇಮಾಂಬೂಬು ಆಗಿ ಹುಟ್ಟಿ, ನಿನ್ನ ತಲೆ ತೆಗೆಯದಿದ್ದರೆ ನಾನು ಡಿಲ್ಲಿ ನವಾಬನ ಮಗಳು ರತ್ನಾಜಿಯಲ್ಲ" ಎಂದು ಶಪಥತೊಟ್ಟು ಹೇಳಿದಳು. ಇದನ್ನು ಕೇಳಿದ ಕುಮಾರರಾಮ ಮುಗುಳ್ನಗೆಯನ್ನು ಬೀರಿದ.

ಅನೇಕ ವರ್ಷಗಳು ಉರುಳಿದುವು. ಒಂದು ಸಾರಿ ಕುಮಾರರಾಮ ಡಿಲ್ಲಿಯ ಮೇಲೆ ದಂಡೆತ್ತಿ ಹೋದ. ಸಹಜ ವೀರನಾದ ಕುಮಾರರಾಮ ಡಿಲ್ಲಿಯ ಸೈನ್ಯವನ್ನೆಲ್ಲ ನುಚ್ಚು ನುರಿ ಮಾಡಿ ಜಯದ ತುತ್ತತುದಿಯಲ್ಲಿದ್ದ. ಎಲ್ಲ ಯೋಧರೂ ನಾಶವಾದರೆಂದು ಕುಮಾರರಾಮ ನಿಟ್ಟುಸಿರು ಬಿಡುವ ವೇಳೆಗೆ ಯಾರೋ ಒಬ್ಬ ಯೋಧ ಇದ್ದಕ್ಕಿದ್ದಂತೆ ಅವನ ಎದುರಿಗೆ ಬಂದು ನಿಂತ. ಅವನನ್ನು ಒಂದೇ ಏಟಿಗೆ ಕತ್ತರಿಸಬೇಕೆಂದು ಕೋಪದಿಂದ ಕುಮಾರರಾಮ ತನ್ನ ಏಳು ಖಂಡುಗದ ಕತ್ತಿ ಎತ್ತಿದ. ಆಗ ಆ ವ್ಯಕ್ತಿ ತನ್ನ ಎದೆಯನ್ನು ಬಿಚ್ಚಿ ತನ್ನ ಸ್ತನಗಳನ್ನು ತೋರಿಸಿತು. ತಕ್ಷಣ ಆ ಯೋಧ ಕುದುರೆಯ ಕಿವಿಯಿಂದ ಹುಟ್ಟಿ ತನ್ನನ್ನು ಕೊಲ್ಲಲು ಬಂದ ಇಮಾಂಬೂಬು ಎಂಬುದೂ, ಅವಳು ಪುರುಷನ ವಸ್ತ್ರವನ್ನು ತೊಟ್ಟುಕೊಂಡಿರುವ ಸ್ತ್ರೀ ಎಂಬುದೂ ಕುಮಾರರಾಮನಿಗೆ ತಿಳಿಯಿತು. ಗಂಡುಗಲಿಯಾದ ತನ್ನಂಥ ವೀರನು ಎಂದೂ ಸ್ತ್ರೀಯರನ್ನು ಕೊಲ್ಲುವುದಿಲ್ಲ ಎಂಬ ಪ್ರತಿಜ್ಞೆಯನ್ನು ನೆನೆದು ತಕ್ಷಣ ತಾನು ಎತ್ತಿದ ಕತ್ತಿಯನ್ನು ಹಾಗೆಯೇ ಕೆಳಗಿಳಿಸಿದನು. ಅಲ್ಲದೆ, ಅವಳು ತನ್ನ ಮಾತೃಸ್ವರೂಪ ಎಂದು ಅವಳ ಮುಂದೆ ತಲೆಬಾಗಿದನು.

ಇದನ್ನು ಕಂಡ ಇಮಾಂಬೂಬುವಿನ ರೂಪದಲ್ಲಿದ್ದ ರತ್ನಾಜಿ ಅಟ್ಟಹಾಸದ ನಗುವನ್ನು ಬೀರಿ "ಕುಮಾರರಾಮ! ಈಗ ಏನು ಹೇಳುವೆ?" ಎಂದು ಹೇಳುತ್ತ ತನ್ನ ಕೈಯ ಕತ್ತಿಯಿಂದ,

ಅವನ ಬಾಗಿದ ಶಿರಕ್ಕೆ ಬಲವಾಗಿ ಒಂದು ಏಟನ್ನು ಹಾಕಿದಳು. ಆದರೆ ಅದು ಹರಿಯಲಿಲ್ಲ. ಮತ್ತೊಂದು ಏಟು, ಇನ್ನೂ ಒಂದು ಏಟು ಎಂದು ಐದಾರು ಬಲವಾದ ಏಟುಗಳನ್ನು ಹಾಕಿದರೂ ಕತ್ತಿ ಮೊಂಡಾಯಿತೇ ವಿನಾ ಕುಮಾರರಾಮನ ಶಿರ ಮಾತ್ರ ಸ್ವಲ್ಪವೂ ಹರಿಯಲಿಲ್ಲ.

ಇಮಾಂಬೂಬು ನಿಸ್ಸಹಾಯಕಳಾದಳು. ಏನು ಮಾಡಬೇಕೆಂಬುದೇ ತಿಳಿಯದೆ ದಿಗ್ಭ್ರಾಂತಳಾಗಿ ಅವಳು ನಿಂತಿರುವುದನ್ನು ಕುಮಾರರಾಮ ನೋಡಿದ. ಮುಗುಳ್ನಗೆಯನ್ನು ಬೀರುತ್ತ "ತಾಯೆ, ನಿನ್ನ ಕತ್ತಿ ಹರಿಯುವುದಿಲ್ಲ. ನನ್ನ ಕತ್ತಿಯನ್ನು ತೆಗೆದುಕೋ. ಇದರಿಂದ ನಿನ್ನ ಮನೋರಥವನ್ನು ತೀರಿಸಿಕೋ" ಎಂದು ತನ್ನ ಕೈಯಲ್ಲಿದ್ದ ಏಳು ಖಂಡುಗದ ಕತ್ತಿಯನ್ನು ಕೊಟ್ಟ.

ಅದನ್ನು ತೆಗೆದುಕೊಂಡು ಇನ್ನೂ ಮೆಲ್ಲಗೆ ಮುಟ್ಟಿಸುತ್ತಿದ್ದಂತೆಯೇ ಕುಮಾರರಾಮನ ಶಿರ ಇಬ್ಭಾಗವಾಯಿತು. ಅವನ ತಲೆ ಹಾರಿ ಹೋಗಿ ಕೋಟೆಯ ಮೇಲೆ ಕುಳಿತುಕೊಂಡಿತು. ತನ್ನನ್ನು ಏರುವ ವೀರರು ಇನ್ನಾರಿದ್ದಾರೆ ಎಂದು ರೆಕ್ಕೆಯಕುದುರೆ ಅವನ ದೇಹವನ್ನು ಹೊತ್ತುಕೊಂಡು ಸ್ವರ್ಗಕ್ಕೆ ಹೋಯಿತು.

ಕೋಟೆಯ ಮೇಲೆ ಕುಳಿತುಕೊಂಡಿದ್ದ ಕುಮಾರರಾಮನ ತಲೆ ಮಹಾಪ್ರಭೆಯನ್ನು ಬೀರುತ್ತ ನಿಮಿಷಕ್ಕೊಂದು ಸಾರಿ "ಭಲೆ! ಕುಮಾರರಾಮ!" ಎನ್ನುತ್ತಿತ್ತು. ಹಾಗೆ ಒಂದು ಸಾರಿ ಕೂಗಿದ ತಕ್ಷಣ ಕೋಟಿ ಸಂಖ್ಯೆಯ ಸೈನ್ಯ ಸುತ್ತ ಉರುಳುತ್ತಿತ್ತು.

ಹೀಗೆ ಡಿಲ್ಲಿಯ ಸೈನ್ಯವೆಲ್ಲ ಕುಮಾರರಾಮ ನಾಶಮಾಡುತ್ತಿದ್ದುದನ್ನು ನೋಡಿ, ಡಿಲ್ಲಿಯ ರಾಣಿ ಬೇರೆ ಉಪಾಯಗಾಣದೆ ಹರಿಯಾಲದೇವಮ್ಮನಿಗೆ "ನಿನ್ನ ಮಗ ನಮ್ಮ ದೇಶವನ್ನೆಲ್ಲ ನಾಶಮಾಡುತ್ತಿದ್ದಾನೆ. ಬಂದು ನಿನ್ನ ಮಗನನ್ನು ಕರೆದುಕೊಂಡು ಹೋಗು" ಎಂದು ವಿಜ್ಞಾಪನೆಯ ಪತ್ರವನ್ನು ಬರೆದು ಕಳಿಸಿದಳು.

ಅದರಂತೆ ಹರಿಯಾಲದೇವಮ್ಮ ಬಂದು ಮಗನ ಶಿರದ ಮುಂದೆ ನಿಂತು ಸೆರಗೊಡ್ಡಿ "ಬಾ, ಮಗನೆ, ಮನೆಗೆ ಹೋಗೋಣ. ಇದು ನಿಮ್ಮ ಚಿಕ್ಕಮ್ಮನ ತೌರುಮನೆ. ಅದನ್ನು ನೀನು ಹೀಗೆ ಹಾಳುಮಾಡಬಾರದು. ಬಾ, ಮನೆಗೆ ಹೋಗೋಣ. ಮನೆಯಲ್ಲಿ ನಿನ್ನನ್ನಿಟ್ಟು ಪೂಜಿಸುತ್ತೇನೆ" ಎಂದು ಬೇಡಿದಳು. ಆಗ ಕುಮಾರರಾಮ "ಕ್ಷಮಿಸು ತಾಯಿ, ನಾನು ಅಲ್ಲಿಗೆ ಬರುವುದಿಲ್ಲ. ಹೆಣ್ಣಿನ ಮುಖ ನೋಡುವುದಿಲ್ಲ. ನಾನು ನಿನ್ನ ಮಗನಾಗಿದ್ದು ನಿನಗೆ ಪ್ರತಿಯಾಡಬಾರದಾಗಿತ್ತು. ಆಡಿಬಿಟ್ಟಿದ್ದೇನೆ. ನಾನು ನಿನ್ನ ಮಗನಲ್ಲ. ತೆಗೆದುಕೋ ನೀನು ಕೊಟ್ಟ ಹಾಲು ಮತ್ತು ರಕ್ತ" ಎಂದು ಹೇಳಿ ಹಾಲನ್ನೂ ಮತ್ತು ರಕ್ತವನ್ನೂ ಕಾರಿದನು. (ಅವನು ಕಾರಿದ ಹಾಲು ಕಲಿಯುಗದಲ್ಲಿ ಪಾವನವಾದ ವಿಭೂತಿಯಾಗಿ ಪರಿಣಮಿಸಿತು. ಅವನು ಕಾರಿದ ರಕ್ತ ಕಲಿಯುಗದ ಕೆಮ್ಮಣ್ಣಾಗಿ ಪರಿಣಮಿಸಿತು.)

ಕೊನೆಗೆ ಕುಮಾರರಾಮ ತನ್ನ ತಾಯಿಯನ್ನು ಕುರಿತು "ತಾಯೆ! ನಾನು ನಿನ್ನ ಬಯಕೆಗೆ ವಿರುದ್ಧವಾಗಿ ಇಲ್ಲಿದ್ದು ಚಿಕ್ಕಮ್ಮನ ಮನೆಯನ್ನು ನಾಶಮಾಡುವುದೂ ಇಲ್ಲ. ನಿನ್ನ ಅರಮನೆಗೆ ಬಂದು ಹೆಂಗಸರ ಮುಖವನ್ನು ನೋಡುವುದೂ ಇಲ್ಲ. ಇಲ್ಲಿಂದ ಹೋಗಿ ಸೊಂಡೂರಿನ ಬಳಿ ನೆಲಸಿ, ಯಾರು ನನ್ನನ್ನು ಬಂದು ನೋಡುತ್ತಾರೆಯೋ ಅವರಿಗೆ ಅವರಂತೆಯೇ ಕಾಣುತ್ತೇನೆ" ಎಂದು ಹೇಳಿ ಅಂತರ್ಧಾನನಾದನು.

ಈಗಲೂ ಕೂಡ ಸೊಂಡೂರಿನ ಬಳಿಯಲ್ಲಿನ ಕಾಡಿನಲ್ಲಿ ಕುಮಾರರಾಮನ ಜಾತ್ರೆ ನಡೆಯುತ್ತದೆ. ಅಲ್ಲಿ ಒಂದು ಶಿಲೆಯಲ್ಲಿ ಕುಮಾರರಾಮ ಒಡೆದು ಮೂಡಿದ್ದಾನೆ. ಅಲ್ಲಿ ಪ್ರತಿ

ಅಧಿಕಮಾಸದಲ್ಲಿಯೂ ಒಂದು ಸಾರಿ ಜಾತ್ರೆಯಾಗುತ್ತದೆ. ಅಲ್ಲಿ ಪ್ರವೇಶಮಾಡುವವರು ಬಹಳ ಕಟ್ಟುನಿಟ್ಟಿನಿಂದ ಹೋಗಬೇಕು. ಕಾಲಿಗೆ ಪಾದರಕ್ಷೆಗಳನ್ನಾಗಲಿ, ಕಾಲಿಗೆ ಕಟ್ಟನ್ನಾಗಲಿ ಹಾಕಿಕೊಂಡು ಹೋಗಬಾರದು. ಮುಸಲ್ಮಾನರಿಗೆ ಈಗಲೂ ಅಲ್ಲಿ ಪ್ರವೇಶವಿಲ್ಲ. ಅಲ್ಲಿಗೆ ಹೋಗಿ ನೋಡಿದರೆ ಈಗಲೂ ಕೂಡ ಕುಮಾರರಾಮ ನೋಡಿದವರ ಕಣ್ಣಿಗೆ ಅವರಂತೆಯೇ ಕಾಣುತ್ತಾನೆ."

"ವಾಲ್ಮೀಕಿ ನಾಯಕುಲ ಜೀವನ ಚರಿತ್ರಮು" ಎಂಬ ತೆಲುಗು ಕೃತಿಯಲ್ಲಿ ಹೇಳಿರುವ "ಕುಮಾರ ರಾಮುನಿ ಚರಿತ್ರ" ಎಂಬ ಸಾಂಪ್ರದಾಯಿಕವಾದ ಒಂದು ಕಥೆಯನ್ನು ಮುಂದೆ ಸಂಗ್ರಹಿಸಿಕೊಡಲಾಗಿದೆ :—

(iv) "ವಿಜಯನಗರ ಸಾಮ್ರಾಜ್ಯದ ಆನೆಗೊಂದಿ ಸಂಸ್ಥಾನದಲ್ಲಿರುವ ಕಂಪ್ಲಿ ಪಟ್ಟಣವನ್ನು, ಪೂರ್ವದಲ್ಲಿ ಪಾಳೆಯಗಾರರ ವಂಶದಲ್ಲಿ ಹುಟ್ಟಿದ ನಲಬೋತುಲ ವಂಶದವನಾದ ಕಂಪ್ಲಿರಾಜನೆಂಬಾತನು ಪರಿಪಾಲಿಸುತ್ತಿದ್ದನು. ಇವನ ಆಸ್ಥಾನದಲ್ಲಿ ಸಕಲ ಕಲಾವಿದರಿಗೂ ಮನ್ನಣೆಯಿತ್ತು. ಪ್ರಜೆಗಳನ್ನು ತನ್ನ ಮಕ್ಕಳಂತೆಯೇ ಕಾಣುತ್ತ, ಎಲ್ಲರ ಪ್ರೀತಿಗೂ ಪಾತ್ರನಾಗಿದ್ದನು. ಪರಾಕ್ರಮಶಾಲಿಯೂ ಆಗಿದ್ದನು. ಈತನಿಗೆ ಸಂತತಿಯಿರಲಿಲ್ಲ. ಆದ್ದರಿಂದ ತುಂಬ ದುಃಖಗೊಂಡು ನಾನಾ ದೇವತೆಗಳನ್ನು ಪೂಜಿಸುತ್ತಿದ್ದನು. ಒಂದು ದಿನ, ಅರಣ್ಯದಲ್ಲಿ ಬೇಟೆಗೆ ಹೋಗಿರಲು, ಆಯಾಸಗೊಂಡು ನೀರನ್ನು ಹುಡುಕುತ್ತಿರಬೇಕಾದರೆ ಒಬ್ಬ ಮುನಿಗಳ ದರ್ಶನವಾಯಿತು. ರಾಜನು ಅವರಿಗೆ ನಮಸ್ಕರಿಸಿ, ಅವರ ಶುಶ್ರೂಷೆ ಮಾಡುತ್ತಿರಲು, ಅವರು ಯೋಗಸಮಾಧಿಯಿಂದ ಎಚ್ಚತ್ತರು. ರಾಜನ ಕುಶಲವೃತ್ತಾಂತವನ್ನು ವಿಚಾರಿಸಿದರು. ಸಂತಾನಾಪೇಕ್ಷೆಯಿಂದ ಹಂಬಲಿಸುತ್ತಿದ್ದ ರಾಜನಿಗೆ ಸಮಾಧಾನ ಹೇಳಿ, ತಾವು ತಪಸ್ಸು ಮಾಡುತ್ತಿದ್ದ ಮಾವಿನ ಗಿಡದಲ್ಲಿಯೇ ಬಿಟ್ಟಿದ್ದ ಹಣ್ಣೊಂದನ್ನು ಕಿತ್ತುಕೊಟ್ಟು, ಅದನ್ನು ಶುಭದಿನದಲ್ಲಿ ಪಟ್ಟಮಹಿಷಿ ತಿಂದರೆ, ಆಕೆಗೆ ಪರಾಕ್ರಮಶಾಲಿಯೂ, ಸುಂದರನೂ ಆದ ಕುಮಾರನು ಜನಿಸುವನೆಂದು ಹೇಳಿದರು. ಅದೇ ಮೇರೆಗೆ ರಾಜನು ಸಂತುಷ್ಟನಾಗಿ ತನ್ನ ಭಾರ್ಯೆಯಾದ ರತ್ನಮಾಂಬದೇವಿಗೆ ಆ ಫಲವನ್ನು ಕೊಟ್ಟನು. ಪಟ್ಟಣದವರಿಗೆಲ್ಲ ಈ ವಿಚಾರವನ್ನು ತಿಳಿಯಪಡಿಸಿದನು. ಮಹಾರಾಣಿ ಆ ಹಣ್ಣನ್ನು ಶುಭದಿನದಂದು ಭುಂಜಿಸಿ, ಅದರ ಮೇಲಿನ ಸಿಪ್ಪೆಯನ್ನು ತನ್ನ ದಾಸಿಗೆ ಕೊಟ್ಟಳು. ಕೆಲವು ಕಾಲದ ಬಳಿಕ ಇಬ್ಬರೂ ಏಕಕಾಲದಲ್ಲಿ ಗರ್ಭ ಧರಿಸಿ, ಒಂಬತ್ತು ತಿಂಗಳಾದ ಮೇಲೆ, ಇಬ್ಬರೂ ಪುತ್ರರನ್ನು ಪಡೆದರು. ಮಹಾರಾಜನಿಗೆ ಮಹದಾನಂದವಾಯಿತು. ಊರಿನವರನ್ನೆಲ್ಲ ಕರೆದು ಮಹೋತ್ಸವವನ್ನು ಏರ್ಪಡಿಸಿ, ಆ ಇಬ್ಬರು ಕುಮಾರರಲ್ಲಿ, ರಾಜಕುಮಾರನಿಗೆ ಕುಮಾರರಾಮನೆಂದೂ, ದಾಸಿಯ ಮಗುವಿಗೆ ಹೋಲಿಕೆರಾಮನೆಂದೂ ಹೆಸರಿಟ್ಟರು. ಅವರು ದಿನದಿನಕ್ಕೂ ಅತಿಶಯವಾಗಿ ಪ್ರವರ್ಧಮಾನಕ್ಕೆ ಬರುತ್ತಿದ್ದರು.

ಈ ಇಬ್ಬರು ಬಾಲಕರೂ ಒಟ್ಟಿಗೆ ಶಸ್ತ್ರಾಭ್ಯಾಸವನ್ನೂ ಶಾಸ್ತ್ರಾಭ್ಯಾಸವನ್ನೂ ಮಾಡಿ, ಎಲ್ಲರ ಆದರಕ್ಕೂ ಪಾತ್ರರಾದರು. ಕುಮಾರರಾಮನು ಸದಾಚಾರ ಸಂಪನ್ನನೆನಿಸಿಕೊಂಡು ತಂದೆ ತಾಯಿಗಳಿಗೆ ಸೇವೆ ಸಲ್ಲಿಸುತ್ತ, ತನ್ನ ತಂದೆಗೆ ಕಪ್ಪವನ್ನು ಕೊಡದೆ ಎದುರುಬಿದ್ದ ಸಾಮಂತ ರಾಜರನ್ನೂ, ಪಾಳೆಯಗಾರರನ್ನೂ ಯುದ್ಧ ಮಾಡಿ ಗೆದ್ದು ಹೆಸರುವಾಸಿಯಾದನು. ಚಿಕ್ಕವನಾದ ಹೋಲಿಕೆರಾಮನಾದರೋ ಹೀಗಿರಲಿಲ್ಲ. ಅವನು ದುರ್ವ್ಯಸನಿ ಮತ್ತು ದುರಾಚಾರಿಯಾದನು. ವೇಶ್ಯಾಲೋಲನಾಗಿದ್ದನು. ಈತನ ಕೆಟ್ಟ ಗುಣವನ್ನು ಕಂಡು ರಾಜನಿಗೆ ತುಂಬ ಸಂಕಟವಾಯಿತು. ಕುಮಾರರಾಮನಿಗೂ ಬಹಳ ನೋವಾಯಿತು. ಇಬ್ಬರು ಬಾಲ

ಕರೂ ಮುನಿಯಿತ್ತ ಫಲದಿಂದಲೇ ಹುಟ್ಟಿದವರಾದ್ದರಿಂದ ರಾಜನಿಗೆ ಅವರಿಬ್ಬರಲ್ಲಿ ಭೇದ ಭಾವವೇ ಇರಲಿಲ್ಲ. ತುಂಟ ರಾಮನನ್ನು ಕಂಡರೆ ಪ್ರೀತಿ ಮಿಗಿಲಾಗಿತ್ತು. ಇಬ್ಬರಿಗೂ ಮದುವೆ ಯಾಗುವ ವಯಸ್ಸು ಬಂದಿತು. ಹೋಲಿಕೆರಾಮನು ತಾನು ಮದುವೆಯಾಗುವುದಿಲ್ಲವೆಂದೂ, ತಾನು ವೇಶ್ಯೆಯನ್ನು ಮೆಚ್ಚಿರುವೆನೆಂದೂ, ಕುಮಾರರಾಮನಿಗೆ ಮಾತ್ರ ವಿವಾಹ ಮಾಡಿ, ರಾಜ್ಯಾಧಿಕಾರವನ್ನು ಕೊಟ್ಟು ಮನ್ನಿಸಬೇಕೆಂದೂ, ತಾನು ಆತನಿಗೆ ಸರ್ವದಾ ಸಹಾಯಕ ನಾಗಿರುತ್ತೇನೆಂದೂ ತಿಳಿಸಿದನು. ಮಹಾರಾಜನು ನಿರ್ವಾಹವಿಲ್ಲದೆ ಕುಮಾರರಾಮನೊಬ್ಬನಿಗೇ ಮದುವೆ ಮಾಡುವುದೆಂದು ನಿರ್ಧರಿಸಿದನು. ಕುಮಾರರಾಮನ ಭಾವಚಿತ್ರವನ್ನು ಸುತ್ತಮುತ್ತ ಲಿನ ರಾಜರುಗಳಿಗೆಲ್ಲ ಕಳಿಸಿಕೊಟ್ಟನು. ಅವರುಗಳು ತಮ್ಮತಮ್ಮ ರಾಜಕನ್ಯೆಯರ ಚಿತ್ರಪಟ ಗಳನ್ನು ಕಂಪ್ಲಿರಾಜನಿಗೆ ಕಳಿಸಿಕೊಟ್ಟರು. ಅವುಗಳನ್ನು ಕುಮಾರರಾಮನಿಗೆ ತೋರಿಸಲು ಆತನು ಸಾಮಂತ ರಾಜನೊಬ್ಬನ ಕುಮಾರಿಯಾದ ಚಿತ್ರಾವತಿಯೆಂಬ ಸುಂದರಿಯನ್ನು ಒಪ್ಪಿರುವುದಾಗಿ ತಂದೆಗೆ ತಿಳಿಸಿದನು. ಆ ಚಿತ್ರವನ್ನು ಕಂಡ ಕೂಡಲೆ ರಾಜನಿಗೆ ಆಶ್ಚರ್ಯವಾಗಿ ಅಂಥ ಹೆಣ್ಣನ್ನು ಹೆಂಡತಿಯಾಗಿ ಪಡೆಯುವವರೆ ಭಾಗ್ಯಶಾಲಿಗಳು ಎಂದು ಎಣಿಸಿದನು. ರಾಜನು ಚಿತ್ರಾವತಿಯ ತಂದೆಗೆ ತನ್ನ ಮಗನು ಒಪ್ಪಿರುವ ವೃತ್ತಾಂತವನ್ನು ತಿಳಿಸಿ, ಮದುವೆಗೆ ಎಲ್ಲ ಏರ್ಪಾಡುಗಳನ್ನೂ ಮಾಡುವಂತೆ ಸೂಚಿಸಿದನು. ಮದುವೆಯ ಮುಹೂರ್ತದ ವೇಳೆಗೆ ಕಂಪ್ಲಿರಾಜನು ತನ್ನ ಮಗನನ್ನು ಊರಿನಲ್ಲಿಯೇ ಬಿಟ್ಟು, ಕಾರಣಾಂತರದಿಂದ ಅವನು ಮದುವೆ ಯನ್ನು ನಿರಾಕರಿಸಿರುವೆನೆಂದೂ, ಆದರೆ, ಮದುವೆಯ ಏರ್ಪಾಡುಗಳು ವಿಫಲವಾಗಬಾರ ದೆಂದು ತಾನೇ ಬಂದಿರುವೆನೆಂದೂ ವಧುವಿಗೆ ಈ ವಿಷಯ ತಿಳಿಯಪಡಿಸದೆ ತನಗೇ ಮದುವೆ ಮಾಡಬೇಕೆಂದೂ ಹೇಳಿದನು. ಸಾಮಂತರಾಜನು ಕಂಪ್ಲಿ ರಾಜನಿಗೆ ಎದುರು ಹೇಳಲಾರದೆ, ಮಗಳಿಗೆ ಸಂದೇಹ ಬರದಂತೆ, ಕತ್ತಿಗೆ ತಾಳಿ ಕಟ್ಟುವಂತೆ ಮಾಡಿ, ಕಂಪ್ಲಿ ರಾಜನ ಅಪೇಕ್ಷೆ ಯನ್ನು ನೆರವೇರಿಸಿದನು. ಅನಂತರ ರಾಜನು ತನ್ನ ಚಿಕ್ಕ ಹೆಂಡತಿಯಾದ ಚಿತ್ರಾವತಿಯನ್ನು ಊರಿಗೆ ಕರೆದುಕೊಂಡು ಬಂದು, ಅವಳನ್ನು ಬೇರೆ ಒಂದು ಮಹಲಿನಲ್ಲಿಟ್ಟು, ಸರ್ವದಾ ಅಲ್ಲಿಯೇ ಕಾಲ ಕಳೆಯಲು ಆರಂಭಿಸಿದನು. ಪ್ರಜೆಗಳೂ, ಮಂತ್ರಿಗಳೂ ಪಟ್ಟದ ರಾಣಿಯೂ ಹೆದರಿ ಏನೂ ಮಾತಾಡದಂತಿದ್ದರು.

ಒಂದು ಬಾರಿ ರಾಜನು ಬೇಟೆಗಾಗಿ ಅರಣ್ಯಕ್ಕೆ ಹೊರಟನು. ಊರಿನಲ್ಲಿ ಕುಮಾರ ರಾಮನು ನಿಂತು, ತಂದೆಯ ರಾಜಕಾರ್ಯವನ್ನು ನೋಡಿಕೊಳ್ಳುತ್ತಿದ್ದನು. ಆಗ, ವೃದ್ಧ ಪ್ರಜೆಯೊಬ್ಬನು ಹಿಂದಿನ ಕಾಲದ ಮುತ್ತಿನ ಚೆಂಡೊಂದು ಅರಮನೆಯಲ್ಲಿ ನೆಲಮಾಳಿಗೆಯಲ್ಲಿದೆ ಯೆಂದೂ, ಅದನ್ನು ಎತ್ತಿ ಆಡಲು ಶಕ್ತರಾದವರು ಯಾರೂ ಇಲ್ಲದಿರಲು ಅದನ್ನು ಹಾಗೇ ಇಟ್ಟಿರುವರೆಂದೂ ತಿಳಿಸಿದನು. ಆ ಮಾತನ್ನು ಕೇಳಿ ರಾಮನಿಗೆ ತಾನು ಆಡಿ, ಪೂರ್ವಜರ ಹೆಸರನ್ನು ಉಳಿಸಬೇಕು ಎನ್ನಿಸಿತು. ತನ್ನ ಜೊತೆಯಲ್ಲಿ ಆಡಲು ಹೋಲಿಕೆರಾಮನು ಸಮರ್ಥ ನೆಂದು ತಿಳಿದು, ವೇಶ್ಯಾಗೃಹದಲ್ಲಿದ್ದ ಆತನನ್ನು ಬರಮಾಡಿಕೊಂಡು ಅವನೊಂದಿಗೆ ಎಲ್ಲ ವನ್ನೂ ಹೇಳಿದನು. ಇಬ್ಬರೂ ನೆಲಮಾಳಿಗೆಯ ಬಳಿಗೆ ಬಂದು, ಚೆಂಡಿಗೆ ತಕ್ಕ ಪೂಜೆ ಪುರ ಸ್ಕಾರಗಳನ್ನು ಮಾಡಿ ತೆಗೆದುಕೊಂಡು ಆಟವಾಡತೊಡಗಿದರು. ಊರಿನವರೆಲ್ಲ ನೋಡಿ ಆನಂದಿಸುತ್ತಿದ್ದರು. ಅಣ್ಣ ತಮ್ಮಂದಿರು ಲಗ್ಗೆಯಾಟ ಆಡುತ್ತಿರಬೇಕಾದರೆ ಅದು ಚಿಮ್ಮಿ, ಚಿತ್ರಾವತಿಯ ಮಹಲಿನಲ್ಲಿ ಹೋಗಿ ಬಿದ್ದಿತು. ಅವರೆಗೆ ರಾಜಕುಮಾರರ ಆಟವನ್ನು ಆಕೆಯೂ ನೋಡುತ್ತಿದ್ದಳು. ರಾಮನ ಚಿತ್ರಪಟವನ್ನು ಮೊದಲೇ ಕಂಡಿದ್ದ ಆಕೆಗೆ ಆತನನ್ನು ಪ್ರತ್ಯಕ್ಷ

ವಾಗಿ ಕಂಡ ಕೂಡಲೇ ಆತನ ಮೇಲೆ ವ್ಯಾಮೋಹವುಂಟಾಯಿತು. ಆತನನ್ನು ಹೇಗೆ ಸಂಧಿಸು ವುದೆಂದು ಆಲೋಚಿಸುತ್ತಿರಲು ಚೆಂಡು ಚಿಮ್ಮಿ ಬಂದು ಬಿದ್ದಿದ್ದು ಕೇಳಿಸಿತು. ಅದನ್ನು ತೆಗೆದುಕೊಂಡು ಹೋಗಲು ರಾಮನು ಬಂದೇ ಬರುವನೆಂದು ಹಿಗ್ಗಿದಳು. ಚೆಂಡನ್ನು ತೆಗೆದು ಕೊಂಡು, ರಾಮನು ಬಂದರೆ ತನ್ನ ಬಳಿಗೆ ಕಳಿಸಬೇಕೆಂದೂ ದಾಸಿಗೆ ಹೇಳಿ, ತಾನು ಹೋಗಿ ಶೃಂಗಾರ ಮಾಡಿಕೊಳ್ಳಲು ತೊಡಗಿದಳು. ಪಟ್ಟೆಮಂಚವನ್ನೂ ಅಲಂಕರಿಸಿ ರಾಮನನ್ನೇ ಎದುರುನೋಡುತ್ತಿದ್ದಳು. ಇತ್ತ ಚೆಂಡು ಹೋಗಿ ಚಿಕ್ಕಮ್ಮನ ಮನೆಯಲ್ಲಿ ಬಿದ್ದುದನ್ನು ಕಂಡು ಯಾರು ಹೋಗಿ ತೆಗೆದುಕೊಂಡು ಬರಬೇಕೆಂದು ಅಣ್ಣ ತಮ್ಮಂದಿರು ಆಲೋಚಿಸಲಾರಂಭಿಸಿ ದರು. ಹೋಲಿಕೆರಾಮನು ತಾನು ಹೋಗಿ ತರುವುದಾಗಿ ಹೇಳಿದನು. ಆದರೆ ಕುಮಾರ ರಾಮನು, ತಂದೆ ಊರಿನಲ್ಲಿ ಇಲ್ಲದಂದು, ಹೋಲಿಕೆರಾಮನು ಚಿಕ್ಕಮ್ಮನ ಮನೆಗೆ ಹೋದರೆ ಯಾವ ಕೆಡುಕು ಆದೀತೋ ಎಂದು ಯೋಚಿಸಿ, ಅವನನ್ನು ಕಳುಹಿಸಲೊಪ್ಪದೆ, ತಾನೇ ಹೊರಟನು. ರಾಮನು ಮಹಲಿಗೆ ಬಂದ ಕೂಡಲೆ ದಾಸಿಯರು ಆತನನ್ನು ಬರಮಾಡಿಕೊಂಡು ಚೆಂಡು ರಾಣಿಯ ಬಳಿ ಇದೆಯೆಂದು ಹೇಳಿ, ಅಲ್ಲಿಗೆ ಆತನನ್ನು ಕರೆದೊಯ್ದು, ತಾವು ಹಿಂತಿರು ಗಿದರು. ಚಿತ್ರಾವತಿ ರಾಮನನ್ನು ಅತ್ಯಂತ ಆದರದಿಂದ ಹಣ್ಣು ಹಂಪಲುಗಳನ್ನಿತ್ತು ಸತ್ಕರಿಸಿ ದಳು. ಅವೆಲ್ಲವೂ ಸಹಜವೆಂದು ಬಗೆದ ರಾಮನು, ಅನಂತರ "ಅಮ್ಮಾ ಚೆಂಡನ್ನು ಕೊಡು. ಇನ್ನು ತುಂಬ ತಡವಾದೀತು" ಎಂದು ಕೇಳಿದನು. ಚಿತ್ರಾವತಿ "ಮನೋಹರ! ನನ್ನನ್ನು ಹಾಗೆ ಕರೆಯಬೇಡ. ನಿನ್ನ ಭಾವಚಿತ್ರವನ್ನು ಕಂಡಂದು ನಾನು ನನ್ನ ಮನಸ್ಸನ್ನು ನಿನಗೆ ಅರ್ಪಿಸಿದೆ. ನೀನು ನನ್ನ ಆರಾಧ್ಯ ದೇವತೆಯಾಗುವೆಯೆಂದು ನಂಬಿದ್ದೆ. ಆದರೆ, ನಿಮ್ಮ ತಂದೆ ಮೋಸ ಮಾಡಿದರು. ನನ್ನ ಯೌವನವೆಲ್ಲ ಕಾಡುಪಾಲಿನ ಬೆಳುದಿಂಗಳಾಗಿದೆ. ಮನವಾರೆ ಪ್ರೀತಿಸುತ್ತಿರುವ ಯುವತಿಯನ್ನು ನಿರಾಕರಿಸಬಹುದೆ? ನಿನ್ನನ್ನೇ ಕುರಿತು ಹಂಬಲಿಸುತ್ತಿರುವ ನನಗೆ ಕ್ಷಣಕಾಲವಾದರೂ ಸುಖವನ್ನು ನೀಡಬಾರದೆ?" ಎಂದು ಅಂಗಲಾಚಿಕೊಂಡಳು. ಚಿಕ್ಕಮ್ಮನ ಮಾತುಗಳು ರಾಮನ ಕಿವಿಗಳಿಗೆ ಕರ್ಕಶವಾದುವು. ಆಕೆ ಮಾತೃಸ್ವರೂಪಿ ಯೆಂದೂ, ತಂದೆ ತಾಯಿಗಳಿಗೆ ಮಿಗಿಲಾದ ದೈವವಿಲ್ಲವೆಂದೂ, ಪಿತೃವಾಕ್ಯಪರಿಪಾಲನೆಗಾಗಿ ಧರ್ಮವ್ಯಾಧ, ಭೀಷ್ಮ, ಶ್ರೀರಾಮ, ಪರಶುರಾಮ, ಧ್ರುವ ಮೊದಲಾದವರು ಅಪಾರವಾದ ಸೇವೆಯಿಂದ ಹೆಸರುವಾಸಿಯಾಗಿದ್ದಾರೆಂದೂ ತಿಳಿಸಿದನು. "ತಾಯಿ! ನಮ್ಮ ತಂದೆ ನನಗೆ ದೇವತೆಯ ಸಮಾನ. ಆತನ ಹೆಂಡತಿಯಾದ ನೀನು ನನಗೆ ಮಾತೃದೇವತೆ. ನಿನ್ನ ಪಾದ ಪೂಜೆಯಿಂದ ನನ್ನ ಬದುಕು ಪಾವನವಾಗುತ್ತದೆ. ನನ್ನನ್ನು ಆಶೀರ್ವದಿಸಿ, ಚೆಂಡನ್ನು ಕೊಟ್ಟು ಕಳುಹಿಸು" ಎಂದು ಪ್ರಾರ್ಥಿಸಿದನು. ಆದರೂ ಚಿತ್ರಾವತಿ ಸುಮ್ಮನಿರದೆ, ತನ್ನ ಮೂಗು ನೇರಕ್ಕೇ ಅನೇಕ ಉದಾಹರಣೆಗಳನ್ನಿತ್ತಳು. ಆದರೂ ಆತನು ಒಪ್ಪದಿರಲು, ಮೈಮೇಲೆ ಬೀಳಲು ಹೊರಟಳು. ಕುಮಾರರಾಮನಿಗೆ ಕೋಪವುಂಟಾಯಿತು. "ಛೀ! ದುರ್ಮಾರ್ಗಿಯೆ! ನೀನು ಮಾನವಳಲ್ಲ. ಪಶುಗಳಿಗಿಂತ ಕೀಳು. ಇನ್ನೊಬ್ಬರಾಗಿದ್ದರೆ ಇಲ್ಲಿಯೇ ನನ್ನ ಖಡ್ಗಕ್ಕೆ ಬಲಿಯಾಗುತ್ತಿದ್ದರು. ನನ್ನ ತಾಯಿಯಾದ್ದರಿಂದ ನಾನು ಕಳಂಕ ಕಟ್ಟಿಕೊಳ್ಳಲು ಇಚ್ಛಿಸುವುದಿಲ್ಲ" ಎಂದು ಸಿಡಿದು ಬಿದ್ದು, ಚಿಕ್ಕಮ್ಮನನ್ನು ಕೆಡೆನೂಕಿ, ಹೊರಟನು. ಚಿತ್ರಾವತಿ ಸಿಂಹಿಣಿಯಂತೆ ಕೆರಳುತ್ತ "ನಿನ್ನನ್ನು ಏನು ಮಾಡಿಸುತ್ತೇನೆಯೋ ನೋಡುವೆಯಂತೆ! ತಂದೆ ಬಂದ ಮೇಲೆ ನಿನ್ನ ಪ್ರಾಣವನ್ನು ತೆಗೆಸುತ್ತೇನೆ. ಸ್ತ್ರೀ ನೆನೆದರೆ ಆಗದ ಕಾರ್ಯವಿಲ್ಲ" ಎಂದು ಕೂಗಿ ಹೇಳಿದಳು.

ಚಿತ್ರಾವತಿ, ಕಂಪ್ಲಿರಾಜನು ಹಿಂತಿರುಗಿ ಬರುವ ವೇಳೆಗೆ ಸರಿಯಾಗಿ, ಮಾಸಿದ ಬಟ್ಟೆ

ಯನ್ನುಟ್ಟು, ಬಿಕ್ಕಿಬಿಕ್ಕಿ ಅಳುತ್ತ, ಮೂಲೆಯಲ್ಲಿ ಬಿದ್ದಿದ್ದಳು. ಬೇಟೆಯನ್ನು ಮುಗಿಸಿಕೊಂಡು ಬಂದ ರಾಜನು, ನೇರವಾಗಿ ಚಿತ್ರಾವತಿಯ ಮನೆಗೆ ಹೋದನು. ಅವಳಿದ್ದ ಸ್ಥಿತಿಯನ್ನು ಕಂಡು ಆಶ್ಚರ್ಯಚಕಿತನಾಗಿ ಕಾರಣವೇನೆಂದು ಕೇಳಿದನು. ಆಗ ಆಕೆ ದುಃಖಿಸುತ್ತ "ನೀವು ಬೇಟೆಗೆ ಹೋದ ತರುವಾಯ ಕುಮಾರರಾಮ ಮತ್ತು ಹೋಲಿಕೆರಾಮರು ಚೆಂಡಾಟವಾಡುತ್ತಿದ್ದರು. ಅದು ಬಂದು ನನ್ನ ಮಾಡದಲ್ಲಿ ಬಿದ್ದಿತು. ಅನಂತರ ಚೆಂಡಿಗೋಸ್ಕರವಾಗಿ ಬಂದ ಕುಮಾರ ರಾಮನು ನನ್ನನ್ನು ಬಲಾತ್ಕರಿಸಿ, ಎಷ್ಟು ಹೇಳಿದರೂ ಕೇಳದೆ, ನನ್ನ ಶೀಲವನ್ನು ಭಂಗಮಾಡಿದ್ದಾನೆ. ಇನ್ನು ಮೇಲೆ, ನಾನು ನಿಮಗೆ ಸೊಸೆಯೇ ಹೊರತು, ಹೆಂಡತಿಯಲ್ಲ. ನನ್ನ ಮೈಮೇಲೆ ಆಗಿರುವ ಗಾಯಗಳನ್ನು ನೋಡಬಹುದು. ನಾನು ಸಾಯುತ್ತಿದ್ದೇನೆ. ನಾನು ಇನ್ನು ಬದುಕಿ ಪ್ರಯೋಜನವಿಲ್ಲ" ಎಂದು ಹೇಳಿದಳು. ರಾಜನಿಗೆ ಅಮಿತವಾದ ಕೋಪವುಂಟಾಯಿತು. ರಾಜ ಭಟರನ್ನು ಕರೆದು, ಮಾತಾಪಿತೃದ್ರೋಹಿಯಾದವನು ಈ ಪ್ರಪಂಚದಲ್ಲಿ ಇರಬಾರದೆಂದು ಜರೆದು, ಕುಮಾರರಾಮನನ್ನು ಕೂಡಲೆ ಬಂಧಿಸಿ, ಅವನನ್ನು ಅರಣ್ಯಕ್ಕೆ ಕರೆದೊಯ್ದು, ಕೈ ಕಾಲುಗಳನ್ನು ಕತ್ತರಿಸಿ ಬರಬೇಕೆಂಬುದಾಗಿ ಭಟರಿಗೆ ಅಪ್ಪಣೆ ಮಾಡಿದನು. ತಪ್ಪಿದರೆ, ಅವರಿಗೆ ಮರಣದಂಡನೆಯಾಗುವುದಾಗಿ ಬೆದರಿಸಿದನು. ಆ ಭಟರು ಕುಮಾರರಾಮನಲ್ಲಿಗೆ ಬಂದರು. ಅವನು ತನ್ನ ತಾಯಿಯ ಬಳಿಯಲ್ಲಿ ಕುಳಿತುಕೊಂಡು ಚಿಂತಾಕ್ರಾಂತನಾಗಿದ್ದನು. ರಾಜಾಜ್ಞೆಯ ಮೇರೆಗೆ ಅವನನ್ನು ಬಂಧಿಸಿ, ದೂತರು ಕರೆದೊಯ್ಯುತ್ತಿರಲು, ಪಟ್ಟಮಹಿಷಿಯೂ ಊರಿನವರೂ ಗೋಳಿಟ್ಟರು. ಕುಮಾರರಾಮನು ಸಮಾಧಾನ ಹೇಳುತ್ತ "ಅಯ್ಯಾ ಪ್ರತಿ ಮಾನವನಿಗೂ ಮರಣ ತಪ್ಪದು. ನನಗೆ ಈ ರೂಪದಲ್ಲಿ ದೇವರು ಮರಣವನ್ನು ಅನುಗ್ರಹಿಸಿದ್ದಾನೆ. ಇದು ನನ್ನ ಪುಣ್ಯ. ಇಷ್ಟು ಒಳ್ಳೆಯ ಸಾವು ಪ್ರಪಂಚದಲ್ಲಿ ಯಾರಿಗೂ ಬರದು. ತಂದೆಯ ಆಜ್ಞೆಯನ್ನು ಪಾಲಿಸುವುದು ಪುತ್ರನಾದವನ ಧರ್ಮ. ನನ್ನ ತಂದೆಯನ್ನು ದೂಷಿಸಬೇಡಿ. ನಮ್ಮ ಚಿಕ್ಕಮ್ಮನನ್ನೂ ದೂಷಿಸಬೇಡಿ. ಅವರು ನನ್ನ ದೇವತೆಗಳು. ಅವರನ್ನು ನೀವು ಪೂಜಿಸಿ. ನೀವು ದುಃಖಿಸಬಾರದು. ಎಲ್ಲಕ್ಕೂ ದೇವರಿದ್ದಾನೆ" ಎಂದು ನುಡಿದು ನಗುನಗುತ್ತ ಹೋಗುತ್ತಿದ್ದನು.

ಈ ವೃತ್ತಾಂತ ವೇಶ್ಯಾಗೃಹದಲ್ಲಿದ್ದ ಹೋಲಿಕೆರಾಮನಿಗೆ ತಿಳಿಯಲು ಅವನು ಕೂಡಲೆ ಉದ್ರಿಕ್ತವಾದ ಸಿಂಹದಂತೆ ಓಡಿಬಂದು, ಭಟರನ್ನು ಅಡ್ಡಗಟ್ಟಿ, ಬೆದರಿಸಿ, ತಮ್ಮ ತಂದೆಯನ್ನು ಮೊದಲು ಸಂಧಿಸಿ, ಕುಮಾರರಾಮನಿಗೆ ಪಟ್ಟಕಟ್ಟಬೇಕೆಂದು ಸಾರಿ ಹೇಳಿ, ಅಣ್ಣನನ್ನೂ ಕರೆದುಕೊಂಡು ತಂದೆಯ ಬಳಿಗೆ ಬಂದನು. ಹೋಲಿಕೆರಾಮನು ತಂದೆಯನ್ನು ಕುರಿತು "ಅಯ್ಯಾ, ನೀನೆಷ್ಟು ಅವಿವೇಕಿಯಾದೆ. ಅತ್ಯಂತ ಪರಿಶುದ್ಧನಾದ ನಮ್ಮ ಅಣ್ಣನಿಗೆ ಇಂಥ ದಂಡನೆಯನ್ನು ವಿಧಿಸಬಹುದೆ? ಈ ಪವಿತ್ರ ಮೂರ್ತಿ ಸತ್ತರೆ ದೇಶವೇ ಹಾಳಾಗುತ್ತದೆ. ಈ ಶಿಕ್ಷೆಯನ್ನು ನನಗೆ ವಿಧಿಸು. ಇಲ್ಲವೇ, ನಿಧಾನವಾಗಿ ವಿಚಾರಣೆ ಮಾಡು. ಚಿಕ್ಕಮ್ಮನ ಮಾತನ್ನು ಕೇಳದಿರು. ನಮ್ಮ ಅಣ್ಣನನ್ನು ಬಿಡದಿದ್ದಲ್ಲಿ ಇಗೋ ನಿನ್ನನ್ನು ಬಂಧಿಸುತ್ತೇನೆ" ಎಂದನು. ಹೋಲಿಕೆರಾಮನ ಮಾತುಗಳನ್ನು ಕೇಳಿ ರಾಜನು ಕುಪಿತನಾದನು. ಸೈನಿಕರನ್ನು ಕರೆದು ಅವನನ್ನು ಕೂಡಲೆ ಬಂಧಿಸುವಂತೆ ಆಜ್ಞಾಪಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಅಮಿತ ಪರಾಕ್ರಮಿಯಾದ ಹೋಲಿಕೆರಾಮನು ಎಲ್ಲರನ್ನೂ ಸದೆಬಡಿದನು. ಅನಂತರ ತನ್ನ ತಂದೆಯನ್ನೇ ಬಂಧಿಸಲು ಮುಂದೆ ನುಗ್ಗಿದನು. ಆಗ ಕುಮಾರರಾಮನು ಅಡ ಬಂದು "ತಮ್ಮಾ, ಕೋಪವನ್ನು ಸಾಕುಮಾಡು. ತಂದೆ ದೈವಸಮಾನ. ಆತನ ಆಜ್ಞೆಯನ್ನು

ಶಿರಸಾವಹಿಸುವುದು ಪವಿತ್ರವಾದ ವ್ರತಧರ್ಮ. ನಿನಗೆ ನನ್ನಲ್ಲಿ ಭಕ್ತಿಯಿದ್ದರೆ ತಂದೆಯ ಆಜ್ಞೆ
ಯನ್ನು ಪಾಲಿಸು. ಇಲ್ಲವೇ ನನ್ನನ್ನು ವಧಿಸು. ಇದು ನನ್ನ ಆಜ್ಞೆ" ಎಂದನು. ಅಣ್ಣನ ಮಾತು
ಗಳನ್ನು ಕೇಳಿ ಹೋಲಿಕೆರಾಮನಿಗೆ ದಿಕ್ಕು ತೋಚದಂತಾಯಿತು. ಶಾಂತನಾಗಿ "ಅಣ್ಣಾ,
ಕ್ಷಮಿಸು. ನಿನ್ನ ಪ್ರೇಮವನ್ನೂ, ನಿನ್ನ ಪವಿತ್ರತೆಯನ್ನೂ ನಾನು ಗುರುತಿಸಲಾರೆ. ಆದರೂ
ನಿನ್ನಂಥ ನ್ಯಾಯಮೂರ್ತಿಯ ಆಜ್ಞೆಯನ್ನು ಪಾಲಿಸುವುದು ನನ್ನ ಕರ್ತವ್ಯ. ತಂದೆಯ ಆಜ್ಞೆ
ಯನ್ನು ಪಾಲಿಸಿದರೆ, ನಿನ್ನ ಪ್ರಾಣಕ್ಕೆ ಕಂಟಕ ಬರುತ್ತದೆ. ನಿನ್ನನ್ನು ರಕ್ಷಿಸಬೇಕಾದರೆ ತಂದೆ
ಯನ್ನು ಬಂಧಿಸಬೇಕಾಗುತ್ತದೆ. ಆದ್ದರಿಂದ, ಈ ಉಭಯಸಂಕಟಕ್ಕಿಂತ, ನಿನ್ನ ಆಜ್ಞೆ
ಯಂತೆಯೇ ತಂದೆಯ ಅಪ್ಪಣೆಗೇ ಮನ್ನಣೆಯಿತ್ತು, ನಾನೂ ನಿನ್ನ ಜೊತೆಯಲ್ಲಿಯೇ ಸಾಯು
ತ್ತೇನೆ. ಅಣ್ಣಾ, ತಂದೆಗೆ ದ್ರೋಹ ಮಾಡಲಾರೆ" ಎಂದು ನಮ್ರತೆಯಿಂದ ಕತ್ತಿಯನ್ನು
ಕೆಳಗಿಟ್ಟನು. ಪಿತೃನಿಂದೆಯ ಪರಿಹಾರಕ್ಕೆ ಶಿರಶ್ಛೇದನವೇ ತಕ್ಕ ಪ್ರಾಯಶ್ಚಿತ್ತವೆಂದು ಬಗೆದು,
ತಂದೆಗೂ ನಮಸ್ಕರಿಸಿ, ಭಟರಿಗೆ ಸ್ವಾಧೀನನಾಗಿ ತನ್ನ ತಲೆಯನ್ನು ಕಡಿಯುವಂತೆ ಕೇಳಿ
ಕೊಂಡನು. ರಾಜಭಟರು ಕುಮಾರರಾಮನನ್ನು ಅರಣ್ಯಕ್ಕೆ ಕರೆದುಕೊಂಡು ಹೋಗಿ, ಅವನ
ಕೈಕಾಲುಗಳನ್ನು ಕತ್ತರಿಸಿ, ಹೋಲಿಕೆರಾಮನ ತಲೆಯನ್ನು ಕಡಿದರು.

ಕೈಕಾಲುಗಳಿಲ್ಲದ ರಾಮನು ಅರಣ್ಯದಲ್ಲಿ ಬಹಳ ಬಾಧೆಪಡುತ್ತಿದ್ದನು. ಸರ್ವದಾ ದೇವ
ರನ್ನು ಪ್ರಾರ್ಥಿಸುತ್ತಿದ್ದನು. ಪಟ್ಟಣದಲ್ಲಿ ಪಟ್ಟಮಹಿಷಿಯ ಸಂಕಟ ಹೇಳತೀರದು. ಚಿಕ್ಕ ರಾಣಿ
ಯೇನೋ ತನ್ನ ಹಟ ತೀರಿತೆಂದು ಹಿಗ್ಗುತ್ತಿದ್ದಳು. ರಾಜನಿಗೆ ಈ ವೇಳೆಗೆ ಸಂಕಟವುಂಟಾಗಿ,
ರಾಜಕಾರ್ಯದಲ್ಲಿ ಉದಾಸೀನನಾಗಿದ್ದನು. ಹೋಲಿಕೆರಾಮನ ತಲೆ ಮಾತ್ರ, ಕಡಿದ ಕೂಡಲೆ
ಕೆಳಕ್ಕೆ ಬೀಳದೆ, ನಗುನಗುತ್ತ ಮೇಲೆ ಚಿಮ್ಮಿ, ತಮ್ಮ ತಂದೆಗೆ ಸಂತಾನ ಫಲವನ್ನು ಕೊಟ್ಟಿದ್ದ
ಋಷಿಪುಂಗವನ ಪಾದಗಳ ಮೇಲೆ ಬಂದುಬಿದ್ದಿತು. ಋಷಿಪುಂಗವನು ಕಣ್ಣು ತೆರೆದು, ಅದನ್ನು
ಕೈಗೆ ತೆಗೆದುಕೊಳ್ಳಲು, ಅದು ತನ್ನ ಕತೆಯನ್ನೆಲ್ಲ ಹೇಳತೊಡಗಿತು. "ಮಹಾನುಭಾವ ! ನಾನು
ಕಂಪ್ಲಿರಾಜನ ಚಿಕ್ಕ ಮಗನಾದ ಹೋಲಿಕೆರಾಮ. ತಮ್ಮ ಹಸ್ತಸ್ಪರ್ಶದಿಂದ ನನಗೆ ಮರಳಿ
ಜ್ಞಾನೋದಯವಾಗಿದೆ. ತಮ್ಮ ವರಪ್ರಸಾದದಿಂದಲೇ ಇಲ್ಲಿ ಬಂದು ಬಿದ್ದೆ. ನಮ್ಮ ಅಣ್ಣನನ್ನು
ರಕ್ಷಿಸಿ, ನಮ್ಮ ಸತ್ಯವನ್ನು ನಮ್ಮ ತಂದೆಯ ಸಮ್ಮುಖದಲ್ಲಿ ರುಜುವಾತು ಮಾಡಬೇಕು ಇಲ್ಲ
ದಿದ್ದಲ್ಲಿ ಮುಂದೆ ಪ್ರಜೆಗಳು ನಮ್ಮನ್ನು ಮಾತೃದ್ರೋಹಿಗಳೆಂದೇ ಆಡಿಕೊಳ್ಳುತ್ತಾರೆ. ನಮ್ಮ
ವಂಶಕ್ಕೆ ಕಳಂಕ ಬರುತ್ತದೆ" ಎಂದು ವಿನಂತಿಮಾಡಿಕೊಂಡಿತು. ಮುನೀಂದ್ರನು ಎಲ್ಲವನ್ನೂ
ದಿವ್ಯದೃಷ್ಟಿಯಿಂದ ತಿಳಿದು, ಸತ್ಯವನ್ನು ರುಜುವಾತು ಮಾಡುವ ಸಲುವಾಗಿ, ಕುಮಾರರಾಮ
ನಿದ್ದ ಸ್ಥಳಕ್ಕೆ ಆ ತಲೆಯನ್ನು ತೆಗೆದುಕೊಂಡು ಬಂದನು. ಬಾಧೆಪಡುತ್ತ, ದೇವರನ್ನು
ಪ್ರಾರ್ಥಿಸುತ್ತಿದ್ದ ಕುಮಾರರಾಮನ ಮೇಲೆ ಮಂತ್ರೋದಕವನ್ನು ಚಿಮುಕಿಸಲು, ಆತನಿಗೆ
ಎಂದಿನಂತೆಯೇ ಕೈಕಾಲುಗಳು ಬಂದು, ಎದ್ದು ನಿಂತು, ನಮಸ್ಕರಿಸಿ, "ಮಹಾನುಭಾವ!
ತಾವು ನನ್ನ ಪಾಲಿನ ದೇವರು. ಸಾಮಾನ್ಯ ಮುನಿಗಳಲ್ಲ. ತಮ್ಮ ಋಣವನ್ನು ಹೇಗೆ ತೀರಿಸಲಿ?"
ಎಂದು ಕೇಳಿಕೊಂಡನು. ಅದಕ್ಕೆ ಮುನಿಗಳು "ವತ್ಸ ! ನೀನು ಚಿಂತಿಸಬೇಕಾಗಿಲ್ಲ. ನಿನ್ನ ಸತ್ಯವೇ
ನೆರವೇರಿಸುತ್ತದೆ ಇಲ್ಲಿ ನೋಡು. ಈ ಶಿರಸ್ಸು ಯಾರದು ?" ಎಂದು ಕೇಳಿದರು. ಕುಮಾರ
ರಾಮನು ಹೋಲಿಕೆರಾಮನ ತಲೆಯನ್ನು ಕಂಡು ದುಃಖಿಸಿ, ಹೃದಯಕ್ಕೆ ಅಪ್ಪಿಕೊಂಡು,
"ಮುನೀಶ್ವರ ! ನನಗೋಸ್ಕರವಾಗಿ, ಎಲ್ಲವನ್ನೂ ತ್ಯಾಗಮಾಡಿ, ತಂದೆಯ ಕೋಪಕ್ಕೆ ಗುರಿ
ಯಾಗಿ, ಪ್ರಾಣವನ್ನು ತೆತ್ತ, ನಿರ್ಮಲ ಸೋದರನಾದ, ನನ್ನ ತಮ್ಮನಾದ ಹೋಲಿಕೆರಾಮ !"

ಎಂದು ಕಣ್ಣೀರು ಕರೆದನು. ಮುನಿಪುಂಗವನು ಕುಮಾರರಾಮನಿಗೆ ಸಮಾಧಾನ ಹೇಳಿ, "ಅವನನ್ನು ಬದುಕಿಸಲು ಹೋಗೋಣ ಬಾ," ಎಂದು ಇಬ್ಬರೂ ವಧ್ಯಸ್ಥಾನದ ಬಳಿಗೆ ಬಂದರು. ಅಲ್ಲಿ ಬಿದ್ದಿದ್ದ ಮುಂಡಕ್ಕೆ ರುಂಡವನ್ನು ಇಟ್ಟು, ಮಂತ್ರೋದಕವನ್ನು ಪ್ರೋಕ್ಷಿಸಿದ ಕೂಡಲೇ ಹೋಲಿಕೆ ರಾಮನೂ ಬದುಕಿದನು. ಎದ್ದಕೂಡಲೇ, ಋಷಿಗೆ ನಮಸ್ಕರಿಸಿ, ಕುಮಾರರಾಮನನ್ನು ತಬ್ಬಿಕೊಂಡು, ಸಂತೋಷದಿಂದ "ಅಣ್ಣಾ, ಬದುಕಿದೆಯಾ, ನಿನ್ನನ್ನು ನೋಡುವ ಪುಣ್ಯ ಲಭಿಸದು ಎಂದೇ ಇದ್ದೆನು. ನಮ್ಮ ಸುದೈವದಿಂದ, ಋಷಿಪುಂಗವನ ಮಹಿಮೆಯಿಂದ ಬದುಕಿದೆವು. ಈತನ ಋಣವನ್ನು ಹೇಗೆ ತೀರಿಸುವುದು ?" ಎಂದು ಕೇಳಿದನು. ಮುನಿ ಅವರಿಬ್ಬರನ್ನೂ ಕರೆದುಕೊಂಡು, ಅವರ ಸತ್ಯವನ್ನು ಸಾರಿ ಹೇಳುವುದಕ್ಕಾಗಿ, ರಾಜನ ಬಳಿಗೆ ಬಂದನು. ಕುಮಾರರಾಮನೂ, ಹೋಲಿಕೆರಾಮನೂ ಋಷಿಗಳೊಂದಿಗೆ ಊರಿನಲ್ಲಿ ಬರುತ್ತಿರಲು, ಊರಿನವರೆಲ್ಲ ಆಶ್ಚರ್ಯಚಕಿತರಾಗಿ ಗುಂಪುಗೂಡಿದರು. ಮುನಿಗಳ ಆಗಮನವನ್ನು ಕಂಡು ಕಂಪ್ಲಿ ರಾಜನು, ಅವರನ್ನು ಕರೆತಂದು, ಸಿಂಹಾಸನದಲ್ಲಿ ಕೂಡಿಸಿ, ಪಾದಗಳನ್ನು ತೊಳೆದು, ಅವರ ಅನಿರೀಕ್ಷಿತ ಬರವಿಗಾಗಿ ಹಿಗ್ಗಿದನು. ಆಗ, ಅವರು, ಕುಮಾರರಿಬ್ಬರನ್ನು ತೋರಿಸುತ್ತ "ಅಯ್ಯಾ, ಇಗೋ, ನನ್ನ ವರದಿಂದ ಹುಟ್ಟಿದ ಈ ಇಬ್ಬರೂ ನಿರ್ಮಲರು, ಮಾತಾಪಿತೃಸೇವಕರು. ಹೆತ್ತ ಮಕ್ಕಳೆಂಬ ಕನಿಕರವಿಲ್ಲದೆ, ನೀನು ಸ್ತ್ರೀಲೋಲನಾಗಿ ಅವರನ್ನು ವಧಿಸಿ, ಕಳಂಕವನ್ನು ಕಟ್ಟಿಕೊಂಡೆ. ಎಲ್ಲವನ್ನೂ ತಿಳಿದ ನೀನೆ ಹೀಗೆ ಮಾಡಿದರೆ ಇತರರು ಏನಾಗಬೇಕು ? ನಿನ್ನ ಚಿಕ್ಕ ಹೆಂಡತಿಯ ಮಾತುಗಳನ್ನು ಕೇಳಿ ಮೋಸ ಹೋಗಿದ್ದೀಯೆ. ಕುಮಾರರಾಮನು ಮಾತಾಪಿತೃಗಳ ದ್ರೋಹಿಯಲ್ಲ. ಅವನು ಬದುಕಿ ಬಂದಿರುವುದೇ ಅವನ ಸತ್ಯಕ್ಕೆ ಸಾಕ್ಷಿ. ನಾನು ಎಲ್ಲವನ್ನೂ ಗ್ರಹಿಸಿದೆ. ನಿನ್ನ ಚಿಕ್ಕ ಹೆಂಡತಿ ಬಲವಂತ ಮಾಡಲು, ಅವನು ಒಪ್ಪದಿರಲು, ಅವನಿಗೆ ಈ ಗತಿ ಬರುವಂತೆ ಮಾಡಿದಳು. ಆತನಿಂದ ನಿನ್ನ ವಂಶದ ಕೀರ್ತಿ ಬೆಳೆಯುತ್ತದೆ. ಈ ಮಕ್ಕಳನ್ನು ತೆಗೆದುಕೋ" ಎಂದು ಹೇಳಿದನು. ರಾಜನಿಗೆ ಜ್ಞಾನೋದಯವಾಯಿತು. ತನ್ನ ತಪ್ಪನ್ನು ಒಪ್ಪಿಕೊಂಡನು. ಮಕ್ಕಳಲ್ಲಿಯೂ ಕ್ಷಮಾಪಣೆ ಬೇಡಿದನು. ತಾನಿನ್ನು ಅವರಿಗೆ ರಾಜ್ಯಾಧಿಕಾರವನ್ನು ಒಪ್ಪಿಸಿ, ಅಡವಿಗೆ ಹೋಗಿ ತಪಸ್ಸು ಮಾಡಿ ಪಾಪವನ್ನು ಹೋಗಲಾಡಿಸಿಕೊಳ್ಳಬೇಕೆಂದು ಭಾವಿಸಿದನು. ಆಗ ಅಣ್ಣ ತಮ್ಮಂದಿರು ತಮ್ಮ ತಂದೆಗೆ ಸಮಾಧಾನ ಹೇಳಿ, ಆತನ ದೆಸೆಯಿಂದ ತಮ್ಮ ಕೀರ್ತಿ ಮಿಗಿಲಾಯಿತೆಂದು ತಿಳಿಸಿದರು. ಮಕ್ಕಳು ಬದುಕಿಬಂದ ವೃತ್ತಾಂತವನ್ನು ಕೇಳಿ ರತ್ನಮಾಂಬಳಿಗೆ ಅತ್ಯಂತ ಆನಂದವಾಯಿತು.

ಅನಂತರ, ರಾಜನು, ಭಟರನ್ನು ಕರೆದು, ಚಿತ್ರಾವತಿಯನ್ನು ಬಂಧಿಸಿ, ಊರಿಗೆ ಉತ್ತರ ದಿಕ್ಕಿನಲ್ಲಿ ಹಳ್ಳವೊಂದನ್ನು ತೋಡಿ, ಅದರಲ್ಲಿ ಆಕೆಯನ್ನು ಇಟ್ಟು, ಸುಣ್ಣ ಕಲ್ಲನ್ನು ಹಾಕಿ, ನೀರು ಸುರಿದು, ಗುಳಿಯನ್ನು ಮುಚ್ಚಿ ಬನ್ನಿರೆಂದು ಆಜ್ಞಾಪಿಸಿದನು. ರಾಜಭಟರು ಅಂತೆಯೇ ಮಾಡಿದರು. ಪ್ರಜೆಗಳೆಲ್ಲರೂ ಕೇಳಿ ಸಂತೋಷಿಸಿದರು. ಮಹಾರಾಜನು, ಶುಭ ಮುಹೂರ್ತದಲ್ಲಿ ಕುಮಾರರಾಮನಿಗೆ ಅನುರೂಪಳಾದ ರಾಜಕನ್ಯೆಯೊಬ್ಬಳನ್ನು ತಂದು ಮದುವೆಮಾಡಿದನು. ರಾಜ್ಯವನ್ನು ಅವನಿಗೆ ಒಪ್ಪಿಸಿ, ಅಣ್ಣನಿಗೆ ಸಹಾಯಕನಾಗಿರುವಂತೆ ಹೋಲಿಕೆ ರಾಮನನ್ನು ಯುವರಾಜನನ್ನಾಗಿ ಮಾಡಿ, ತಾನು ಅರಣ್ಯಕ್ಕೆ ತಪಸ್ಸು ಮಾಡಲು ಹೊರಟುಹೋದನು. ಕುಮಾರರಾಮನು ಸತ್ಯ ಧರ್ಮಗಳಿಂದ ರಾಜ್ಯಭಾರ ಮಾಡುತ್ತ, ಪ್ರಜೆಗಳ ಪ್ರೀತ್ಯಾದರಗಳಿಗೆ ಪಾತ್ರನಾಗಿದ್ದನು. ತಮ್ಮನ ಸಹಾಯದಿಂದ ಅನೇಕ ದೇಶಗಳನ್ನು ಜಯಿಸಿ, ವೀರ ಸಿಂಹನೆನಿಸಿದನು.

ಇತ್ತ, ಹಳ್ಳದಲ್ಲಿ ಸಂಹರಿಸಲ್ಪಟ್ಟ ಚಿತ್ರಾವತಿ, ಕುಮಾರರಾಮನ ಮೇಲೆ ಹಗೆಯನ್ನು ತೀರಿಸಿಕೊಳ್ಳುವ ಉದ್ದೇಶದಿಂದ ಬಿಜಾಪುರದ ಸುಲ್ತಾನನ ಕುದುರೆಯ ಗರ್ಭದಲ್ಲಿ ಜನಿಸಿ ಬಂದಳು. ಸುಲ್ತಾನನು ಆ ಹೆಣ್ಣು ಮಗುವಿಗೆ ಲವಂಗಿ ಎಂಬುದಾಗಿ ಹೆಸರಿಟ್ಟು ಅತ್ಯಂತ ಪ್ರೀತಿಯಿಂದ ಬೆಳೆಸುತ್ತಿದ್ದನು. ಆಕೆ ದಿನ ದಿನಕ್ಕೂ ಪ್ರವರ್ಧಮಾನಳಾಗಿ; ವೀರೋಚಿತವಾದ ವಿದ್ಯಾಭ್ಯಾಸಗಳನ್ನು ಕಲಿತು ಸಾಹಸಿಯೆಂದು ಕೀರ್ತಿ ಪಡೆದಳು. ತನ್ನ ಕೋರಿಕೆಯನ್ನು ನೆರವೇರಿಸಬೇಕೆಂದು, ಸುಲ್ತಾನನ ಸೇನೆಗೆ ತಾನೇ ನಾಯಕಿಯಾಗಿ, ಕುಮಾರರಾಮನ ಪಟ್ಟಣದ ಮೇಲೆ ದಂಡೆತ್ತಿ ಹೊರಟಳು. ಉಭಯತ್ರರಿಗೂ ಬಿರುಸಾದ ಕಾಳಗವಾಗಿ ಸುಲ್ತಾನನ ಸೈನಿಕರು ಪಲಾಯನ ಸೂತ್ರವನ್ನು ಹಿಡಿದರು. ಆಗ ಲವಂಗಿ ಕುಮಾರರಾಮನ ಮುಂದೆ ನಿಂತು ವೀರಾವೇಶದಿಂದ ಹೋರ್‍ಾಡತೊಡಗಿದಳು. ಇದ್ದಕ್ಕಿದ್ದಂತೆಯೇ ಕುಮಾರರಾಮನ ಖಡ್ಗವು ಜಾರಿ ಕೆಳಕ್ಕೆ ಬಿತ್ತು. ಅದನ್ನು ತೆಗೆದುಕೊಳ್ಳಬೇಕೆಂದು ಕುಮಾರರಾಮನು ಕುದುರೆಯಿಂದ ಇಳಿಯುತ್ತಿರಲು, ಆಗ ಲವಂಗಿ ಲಂಘಿಸಿ, "ಕುಮಾರರಾಮ, ಈಗಲಾದರೂ ನನ್ನ ಕೋರಿಕೆಯನ್ನು ತೀರಿಸು, ಇಲ್ಲವೆ ನನ್ನ ಖಡ್ಗದಿಂದ ಈಗಲೇ ಸಂಹರಿಸುತ್ತೇನೆ" ಎಂದು ಹೇಳಿ, ತನ್ನ ಪುರುಷವೇಷವನ್ನು ಕಳೆದು, ತಾನು ಯಾರೆಂಬುದನ್ನು ಪ್ರಕಟಪಡಿಸಿದಳು, ಕುಮಾರರಾಮನಿಗೆ ಆಕೆ ಯಾರೆಂಬುದು ಗೊತ್ತಾಗಲು ಅವನು ಎರಡು ಕೈಗಳನ್ನೂ ಜೋಡಿಸಿ "ತಾಯಿ! ನೀನು ಎಷ್ಟು ಜನ್ಮಗಳು ಎತ್ತಿ ಬಂದರೂ ನನ್ನ ತಾಯಿಯೇ ಸರಿ. ನಿನ್ನನ್ನು ಮತ್ತೆ ನೋಡುವ ಅವಕಾಶ ದೊರೆತಿದ್ದು ನನ್ನ ಪುಣ್ಯವೇ ಸರಿ. ನಿನ್ನ ಕೋರಿಕೆಯನ್ನು ನಾನು ನಡೆಸಲಾರೆ. ಇನ್ನು ಯುದ್ಧವನ್ನೂ ಮಾಡಲಾರೆ. ನನ್ನ ತಾಯಿಯ ಮೇಲೆ ನಾನು ಕತ್ತಿಯನ್ನು ಎತ್ತುವುದಿಲ್ಲ. ನಿನಗೆ ರಾಜ್ಯ ಬೇಕೆಂದರೆ ಈಗಲೇ ಕೊಡುತ್ತೇನೆ. ನಿನ್ನ ಖಡ್ಗಕ್ಕೆ ನನ್ನ ಪ್ರಾಣವನ್ನಾದರೂ ಕೊಟ್ಟೇನೆಯೇ ಹೊರತು ನಿನ್ನ ಅಪೇಕ್ಷೆಯನ್ನು ಪೂರೈಸಲಾರೆ. ನಿನ್ನ ಕೈಯಲ್ಲಿ ಸತ್ತರೆ ನನಗೆ ಸ್ವರ್ಗ ಸಿಕ್ಕೀತು. ಇಗೋ, ನನ್ನ ತಲೆಯನ್ನು ಕಡಿ" ಎಂದು ವಿನಂತಿಮಾಡಿಕೊಂಡನು. ರಾಮನ ಮಾತೃಭಕ್ತಿಗೆ ತಲೆದೂಗಿ ಲವಂಗಿ, ತನ್ನ ಮನಸ್ಸನ್ನು ಬದಲಾಯಿಸಿ "ಅಯ್ಯಾ! ನಿಜವಾಗಿಯೂ ನೀನು ನನ್ನ ಪುತ್ರನೇ ಸರಿ. ನಿನ್ನ ಪವಿತ್ರತೆಯ ಅರಿವಾಯಿತು. ನಿನ್ನಂಥ ಮಗನನ್ನು ಪಡೆಯುವುದು ದುರ್ಲಭ. ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ನಿನ್ನ ಪಟ್ಟಣಕ್ಕೆ ಹೋಗಿ ಹಾಯಾಗಿ ರಾಜ್ಯವನ್ನು ಆಳಿಕೊಂಡಿರು" ಎಂದು ನುಡಿದು, ಬಿಜಾಪುರದ ಸುಲ್ತಾನನ ರಾಜ್ಯದಲ್ಲಿ ಕೊಂಚ ಭಾಗವನ್ನು ಕೊಟ್ಟು, ತಾನು ಆತನ ಖಡ್ಗದಿಂದ ತಿವಿದುಕೊಂಡು ರಣರಂಗದಲ್ಲಿಯೇ ಪ್ರಾಣತ್ಯಾಗಮಾಡಿದಳು. ಲವಂಗಿಯ ಸಾವನ್ನು ಕಂಡು ರಾಮನಿಗೆ ತುಂಬ ಸಂಕಟವಾಯಿತು. ಆಕೆಯ ಶವಕ್ಕೆ ತಕ್ಕ ಸಂಸ್ಕಾರವನ್ನು ಮಾಡಿ, ಪಟ್ಟಣವನ್ನು ಸೇರಿ ತಮ್ಮನೊಂದಿಗೆ ಸುಖವಾಗಿ ರಾಜ್ಯಭಾರಮಾಡಿಕೊಂಡಿದ್ದನು."[1]

### ಕಥೆಗಳ ಸಾರ

ಜನಜನಿತವಾದ ಈ ಕಥೆಗಳ ಕಾಲವನ್ನು ನಿಷ್ಕರ್ಷಿಸಲು ಸಾಧ್ಯವಿಲ್ಲವೆಂಬುದು ವಿದಿತವೇ ಆಗಿದೆ. ಆದರೆ

1. ತುಳುವಿನಲ್ಲಿಯೂ 'ಕೋಮಲ್‌ರಾಮ ಚರಿತ್ರೆ' ಎಂಬ ಒಂದು ಪಾಡ್ದನವಿದೆ. ಇದರಲ್ಲಿ ಕುಮಾರರಾಮನನ್ನು 'ಕೋಮಲ್‌ರಾಮ' ಎಂದು ಕರೆದಿರುತ್ತಾರೆ. ಉಳಿದ ಕಂಪಿಲ, ಹರಿಯಾಲದೇವಿ ಮತ್ತು ರತ್ನಾಜಿಯ ಹೆಸರುಗಳು ಹಾಗೆಯೇ ಇವೆ. ಚಿರಪರಿಚಿತವಾದ ಕುಮಾರರಾಮನ ಕಥೆಯಂತೆಯೇ ಇದೆ. ಇದರ ಕಥಾಸಂಗ್ರಹವನ್ನು ಕಳುಹಿಸಿ ಕೊಟ್ಟು ಈ ಹೊಸ ವಿಷಯವನ್ನು ನನಗೆ ತಿಳಿಸಿದ ಶ್ರೀಮಾನ್ ಅಮೃತ ಸೋಮೇಶ್ವರ ಅವರಿಗೆ ನಾನು ಕೃತಜ್ಞನಾಗಿದ್ದೇನೆ (ಶ್ರೀಯುತರ ಪತ್ರ ೧೬–೩–೧೯೬೧).

ಇವುಗಳ ಮಹತ್ವವನ್ನು ಮರೆಯುವಂತಿಲ್ಲ. ಕುಮಾರರಾಮನು ಒಬ್ಬ ಆದರ್ಶವೀರನೆಂಬ ಕಲ್ಪನೆ ಬಳಕೆಗೆ ಬಂದ ತರುವಾಯ ಇವು ಪ್ರಚಾರದಲ್ಲಿ ಬಂದಿರಬೇಕು. ಆತನನ್ನು ಕುರಿತ ಕನ್ನಡ ಕಾವ್ಯಗಳಲ್ಲಿ ಕಂಡುಬರದ ಅನೇಕ ಅಂಶಗಳು ಇವುಗಳಲ್ಲಿ ಅಡಕವಾಗಿರುವುದು ಗಮನಾರ್ಹವಾದುದು. ಆದ್ದರಿಂದ ಮೊದಲು ಒಂದೊಂದು ಕಥೆಯಲ್ಲಿಯೂ ವಿದಿತವಾಗುವ ಮುಖ್ಯಾಂಶಗಳನ್ನು ಸಮೀಕ್ಷಿಸಿ, ಅನಂತರ ಪರಸ್ಪರವಾಗಿ ತೋರಿಬರುವ ಸಾಮ್ಯ ವೈಷಮ್ಯಗಳನ್ನು ಪರಿಶೀಲಿಸಬಹುದು.

### (೧) ಮೊದಲನೆಯ ಕಥೆಯ ಮುಖ್ಯಾಂಶಗಳು :—

(i) ಕಂಪಿಲರಾಯನು ಹೊಸಮಲೆದುರ್ಗದಲ್ಲಿ ನೆಲಸಿರುತ್ತಾನೆ. ಈತನು ಕಾಸಿಗಿರಿ ಪಟ್ಟಣದ (ದೇವಗಿರಿಯ), ಕಾಸಿಸೇನ ಜಹಗೀರದಾರನ ಮಕ್ಕಳಲ್ಲಿ ಒಬ್ಬಳಾದ ಹರಿಯಾಲದೇವಿಯನ್ನು ಅನಿರೀಕ್ಷಿತವಾಗಿ ಮದುವೆಯಾಗುತ್ತಾನೆ. ಆಕೆಯ ತಮ್ಮನಾದ ಬೈಚಪ್ಪನನ್ನೇ ತನ್ನ ಮಂತ್ರಿಯಾಗಿ ನೇಮಿಸಿಕೊಳ್ಳುತ್ತಾನೆ.

(ii) ಮಹಾರಾಜನಿಗೆ ಮಕ್ಕಳಾಗದಿರಲು, ಜಟ್ಟಂಗಿ ರಾಮೇಶ್ವರ ಮತ್ತು ಏಳನೆಯ ಜಗದಂಬೆಯಿಂದ ಫಲಪ್ರಸಾದ ದೊರೆತು, ರಾಜದಂಪತಿಗಳು ಕುಮಾರರಾಮನೆಂಬ ಮಗನನ್ನು ಪಡೆಯುತ್ತಾರೆ. ಅದೇ ಪ್ರಸಾದದ ಉಚ್ಛಿಷ್ಟವನ್ನು ತಿಂದದ್ದರಿಂದ ಅರಮನೆಯ ಗೌಡಿತಿಯರಲ್ಲಿ ಒಬ್ಬಳಿಗೆ ಕಾಟಣ್ಣ ಮತ್ತ ಹೋಲಿಕೆ ರಾಮ ಎಂಬುದಾಗಿಯೂ ಮತ್ತೊಬ್ಬಳಿಗೆ ಚೆನ್ನಿಗರಾಮ ಎಂಬುದಾಗಿಯೂ ಮಕ್ಕಳಾಗುತ್ತಾರೆ. ಆ ಹಣ್ಣಿನ ಬೀಜವನ್ನು ತಿಂದದ್ದರಿಂದ ಒಬ್ಬ ಬ್ರಾಹ್ಮಣನ ಬಂಜೆ ಕುದುರೆಗೆ ಒಂದು ಕುದುರೆಮರಿಯೂ, ಕುರುಬನೊಬ್ಬನ ಕುರಿಗೆ ಒಂದು ಕುರಿಮರಿಯೂ ಹುಟ್ಟುತ್ತವೆ. ಬ್ರಾಹ್ಮಣನು ಕುದುರೆಮರಿಯನ್ನು ಓರುಗಲ್ಲು ಪಟ್ಟಣದಲ್ಲಿಯ ಎಪ್ಪತ್ತು ರಾಜನಿಗೆ ಮಾರಿಬಿಡುತ್ತಾನೆ.

(iii) ರಾಜನಿಗೆ ರತ್ನಾಜಿ ಎಂಬ ಹೆಂಡತಿಯೊಬ್ಬಳು ಇದ್ದಳು. ಈಕೆ ಗಡಿನಾಡಿನ ಪಟ್ಟಣದ ಆರಿಡೊಂಬರ ಮಗಳು. ರಾಜನು ಈಕೆಯನ್ನು ಪ್ರತ್ಯೇಕವಾದ ಮಹಲಿನಲ್ಲಿಟ್ಟಿದ್ದ. (ರಾಮನು ಚೆಂಡಿನಾಟವನ್ನು ಆಡಿ, ಈಕೆಯ ದುರಾಗ್ರಹದ ದೆಸೆಯಿಂದ ನೆಲಮಾಳಿಗೆಯನ್ನು ಸೇರಬೇಕಾಯಿತು. ಚೆನ್ನಿಗರಾಮನ ಮರಣ ಸಂಭವಿಸುತ್ತದೆ.) ರತ್ನಿ ಆತ್ಮಹತ್ಯ ಮಾಡಿಕೊಳ್ಳುತ್ತಾಳೆ.

(iv) ಸಾಮಂತನಾಗಿದ್ದ ಕಂಪಿಲನಿಗೂ ಡಿಳ್ಳಿಯ ಸುಲ್ತಾನನಿಗೂ ಯುದ್ಧ ಸಂಭವಿಸುತ್ತದೆ. ಸುಲ್ತಾನನ ಮಗಳಾದ ರತ್ನೋಜಿ ಎಂಬಾಕೆ ಯೋಧನಂತೆ ವೇಷಧರಿಸಿ, ಕಾದಾಡಿ, ಕುಮಾರರಾಮನ ರುಂಡವನ್ನು ಡಿಳ್ಳಿಗೆ ತೆಗೆದುಕೊಂಡು ಹೋಗುತ್ತಾಳೆ. ಅದನ್ನು ಅಗಸೆಬಾಗಿಲಿಗೆ ಕಟ್ಟಿ, ಅನಂತರ ಕುಮಾರ ಗುಂಡಪ್ಪನ ಮೂಲಕ ಹೊಸಮಲೆಗೆ ಹಿಂದಕ್ಕೆ ಕಳುಹಿಸಲು ಅದನ್ನು ಅಗ್ನಿಗೆ ಅರ್ಪಿಸಲಾಗುತ್ತದೆ. ಕುಮಾರನು ತಂದೆ (ದೇವರು) ಯನ್ನು ಸೇರುತ್ತಾನೆ.

(v) ಕಂಪಿಲನ ಸಮಕಾಲೀನನಾಗಿ ಚಂದ್ರಗುತ್ತಿ ಎಂಬಲ್ಲಿ ಜಗದಪ್ಪನೆಂಬುವನು ಆಳುತ್ತಿರುತ್ತಾನೆ. ಈತನ ಬಳಿ ಒಂದು ದೊಡ್ಡ ಭಲ್ಲೆಯವಿತ್ತು.

(vi) ಎಪ್ಪತ್ತುರಾಯನ ಮಂತ್ರಿಯ ಹೆಸರು ದೇವಿಶೆಟ್ಟಿ.

### (೨) ಎರಡನೆಯ ಕಥೆಯ ಮುಖ್ಯಾಂಶಗಳು :—

(i) ಕಂಪ್ಲಿಯ ರಾಜ ಧೀರ ಕಂಪಿಲರಾಯ. ಈತನು ಕುಂಪಟಾಲು ನಗರದಲ್ಲಿದ್ದನು. ಈತನು, ಅಡವಿಯ ಪಾಲಾಗಿದ್ದ ಕಾಶಿಗಿರಿ ಪಟ್ಟಣದ ಜಹಗೀರುದಾರನ ಮಗಳಾದ ಹರಿಯಾಲದೇವಿ ಎಂಬುವಳನ್ನು, ತಾನು ಬೇಟೆಗೆ ಹೋಗಿದ್ದಾಗ, ಅನಿರೀಕ್ಷಿತವಾಗಿ ಕಂಡು, ಮದುವೆಯಾಗುತ್ತಾನೆ. ಆಕೆಯ ತಮ್ಮನಾದ ಬೈಚಪ್ಪನೆಂಬುವನನ್ನೇ ತನ್ನ ಮಂತ್ರಿಯಾಗಿ ಮಾಡಿಕೊಳ್ಳುತ್ತಾನೆ.

(ii) ಬೇಟೆಗೆ ಹೋಗಿದ್ದಾಗ, ಒಂದು ಮೊಲವು ಎಲ್ಲರನ್ನೂ ಎದುರಿಸಿ ಹೋದದ್ದರಿಂದ, ಆ ಸ್ಥಳ ಬಹು ಪ್ರಶಸ್ತವಾದುದೆಂದು ಅರಿತು ಅಲ್ಲಿಯೇ ಒಂದು ಪಟ್ಟಣವನ್ನು ಕಟ್ಟಿಸುತ್ತಾನೆ.

(iii) ಕಂಪಿಲನಿಗೂ ಹರಿಯಾಲದೇವಿಗೂ ಬಹಳ ಕಾಲ ಮಕ್ಕಳಾಗದಿರಲು, ತಮ್ಮ ಕುಲದೇವರಾದ ಜಟ್ಟಂಗಿ ರಾಮೇಶ್ವರ ಮತ್ತು ಏಳನೆಯ ಜಗದಂಬೆಯ ಫಲಪ್ರಸಾದದಿಂದ ಒಂದು ಗಂಡುಮಗುವನ್ನು ಪಡೆಯುತ್ತಾರೆ. ಅವನೇ ಕುಮಾರರಾಮ. ಅದೇ ಹಣ್ಣಿನ ಉಳಿದ ಭಾಗವನ್ನು ತಿಂದ, ಮಹಾರಾಣಿಯ ಇಬ್ಬರು ದಾಸಿಯರಲ್ಲಿ ಒಬ್ಬಾಕೆಗೆ ಇಬ್ಬರು ಗಂಡು ಮಕ್ಕಳಾಗುವರು. ಒಬ್ಬನ ಹೆಸರು ಹೋಲಿಕೆರಾಮ ; ಇನ್ನೊಬ್ಬನ ಹೆಸರು ಕಾಟಣ್ಣ. ಮತ್ತೊಬ್ಬ ದಾಸಿಯ ಮಗನ ಹೆಸರು ಚೆನ್ನಿಗರಾಮ. ಅದೇ ಹಣ್ಣಿನ ಬಿತ್ತವನ್ನು ತಿಂದದ್ದರಿಂದ ಬ್ರಾಹ್ಮಣನೊಬ್ಬನ ಕುದುರೆಗೆ ಒಂದು ಕುದುರೆಮರಿಯೂ, ಕುರುಬನೊಬ್ಬನ ಕುರಿಗೆ ಒಂದು ಕುರಿಮರಿಯೂ ಹುಟ್ಟುತ್ತವೆ. ಕುದುರೆಮರಿಯ ಹೆಸರು ಬಲ್ಲ; ಕುರಿಮರಿಯ ಹೆಸರು ಎಳಗ. (ಒಳ್ಳೆಯ ಜಾತಿಯ ಕುದುರೆಗೆ ಬೊಲ್ಲನೆಂದೂ, ಕುರಿಯ ಮರಿಗೆ ಎಳಗ ಎಂದೂ ರೂಢನಾಮಗಳುಂಟು.) ಬ್ರಾಹ್ಮಣನು ಕುದುರೆಮರಿಯನ್ನು ಓರುಗಲ್ಲು ಪಟ್ಟಣದ ಎಪ್ಪತ್ತುರಾಜನಿಗೆ ಮಾರುವನು. ಎಳಗನು ಕುಮಾರರಾಮನ ವಾಹನವಾಗಿತ್ತು.

(iv) ಒಂದು ದಿನ ಹೊಸಮಲೆಗೆ ಗಡಿನಾಡು ಪಟ್ಟಣದಿಂದ ಒಬ್ಬ ಡೊಂಬರವನು ಆಟಕ್ಕೆಂದು ಬರುತ್ತಾನೆ. ಆತನಿಗೆ ರತ್ನ ಎಂಬ ಹೆಣ್ಣು ಮಗಳು ಇರುತ್ತಾಳೆ. ರಾಜನು ಆಕೆಯನ್ನು ಕಂಡು ಮೋಹಿಸುತ್ತಾನೆ. ಅವಳನ್ನು ಮದುವೆಯಾಗಬೇಕೆನ್ನಲು, ಆಕೆಯ ತಂದೆ ಮೊದಮೊದಲು ಸಮ್ಮತಿಸುವುದಿಲ್ಲ. ಅನಂತರ ಒಪ್ಪುತ್ತಾನೆ. ರಾಜನು ಅವಳನ್ನು ಬೇರೆಯಾಗಿ ಒಂದು ಮಹಲಿನಲ್ಲಿ ಇರಿಸುತ್ತಾನೆ.

(v) ಕಂಪಿಲನು ಸುಲ್ತಾನನ ಸಾಮಂತನಾಗಿರುತ್ತಾನೆ. ಕುಮಾರರಾಮನು ಹುಟ್ಟಿದ ಬಳಿಕ ಕಪ್ಪಕಾಣಿಕೆಗಳನ್ನು ಕಳಿಸಿರುವುದಿಲ್ಲ. ಸುಲ್ತಾನನು ತನ್ನ ಮಂತ್ರಿಯನ್ನು ಕಳಿಸುತ್ತಾನೆ. ಆತನು ಬಂದಾಗ ಕುಮಾರರಾಮ ಗರಡಿಯ ಮನೆಯಲ್ಲಿರುತ್ತಾನೆ. ಎಲ್ಲ ವಿಷಯವೂ ತಿಳಿದು ಬರಲು, ಕುಮಾರರಾಮನು ಸುಲ್ತಾನನನ್ನು ಲಕ್ಷಿಸದೆ, ಕಪ್ಪಕಾಣಿಕೆ ಕೊಡಲು ನಿರಾಕರಿಸಿ ಕಳುಹುತ್ತಾನೆ. ಈ ಕಾರಣದಿಂದ ಯುದ್ಧ ಸಂಭವಿಸಲು, ಕುಮಾರರಾಮನು ರಾಮೇಶ್ವರನ ಅನುಗ್ರಹದಿಂದ ಸುಲ್ತಾನನ ಕಡೆಯವರನ್ನು ಸೋಲಿಸಿ ಕಳಿಸುತ್ತಾನೆ.

(vi) ಚೆಂಡಿನಾಟದ ದೆಸೆಯಿಂದ ಕುಮಾರರಾಮನು ರತ್ನಾದೇವಿಯ ದುರಾಗ್ರಹಕ್ಕೆ ಗುರಿಯಾಗಬೇಕಾಗುತ್ತದೆ. ಬೇಟೆಯಿಂದ ಹಿಂತಿರುಗಿ ಬಂದ ಕಂಪಿಲನು ಹೆಂಡತಿಯ ಮಾತಿಗೆ ಕಿವಿಗೊಟ್ಟು ಮಂತ್ರಿಯನ್ನು ಕರೆಸಿ ಕೇಳುವನು. ಆತನು ಅದಕ್ಕೆ ಮರಣ ದಂಡನೆಯೇ ತಕ್ಕ ಶಿಕ್ಷೆಯೆಂದು ಸೂಚಿಸುವನು. ಅದೇ ಮೇಲೆಗೆ ಆಜ್ಞೆಮಾಡುವನು. ಕಟುಕರು ಕುಮಾರರಾಮನನ್ನು ಕರೆದುಕೊಂಡು ಹೋಗುತ್ತಿರಲು ಉಳಿದ ಮೂವರು ಬಾಲಕರು ಬಂದು, ಕಟುಕರಿಗೆ ಹಣವಿತ್ತು, ಕುಮಾರರಾಮನನ್ನು ಬಿಡಿಸಿಕೊಳ್ಳುತ್ತಾರೆ. ಚೆನ್ನಿಗರಾಮ ಬಲಿಯಾಗುತ್ತಾನೆ. ಕುಮಾರರಾಮನು ನೆಲಮಾಳಿಗೆಯನ್ನು ಸೇರುತ್ತಾನೆ. ಅಲ್ಲಿ ಎಲ್ಲಾ ವಿದ್ಯೆಗಳನ್ನೂ ಕಲಿಯುತ್ತಾನೆ.

**ಈ ಕಥೆ ಅಪೂರ್ಣವಾಗಿದೆ.**

### (೩) ಮೂರನೆಯ ಕಥೆಯ ಮುಖ್ಯಾಂಶಗಳು :—

(i) ಕಂಪಿಲಿ ಪಟ್ಟಣದ ದೊರೆ ಕಂಪಿಲರಾಯ. ಆತನ ಹೆಂಡತಿ ಹರಿಯಾಲದೇವಿ. ಇವರಿಗೆ ಅನೇಕ ವರ್ಷಗಳಾದರೂ ಮಕ್ಕಳಾಗಿರಲಿಲ್ಲ. ಆಗ ಜಟ್ಟಂಗಿ ರಾಮೇಶ್ವರನನ್ನು ಪೂಜಿಸಬೇಕೆಂದು ನಿರ್ಧರಿಸಿದ. ಗಂಡ ಹೆಂಡತಿಯರು ಜಟ್ಟಂಗಿ ರಾಮೇಶ್ವರನ ಬಳಿಗೆ ಬಂದರು. ಮಹಾರಾಣಿ ಉಗ್ರತಪಸ್ಸನ್ನು ಆಚರಿಸಿದಳು.

ದೇವರ ಅನುಗ್ರಹದಿಂದ ದೊರೆತ ಬಾಳೆ ಹಣ್ಣನ್ನು ತಿನ್ನಲು ತೇಜಸ್ವಿಯಾದ ಕುಮಾರನು ಹುಟ್ಟಿದನು. ಆತನೇ ಕುಮಾರರಾಮ.

(ii) ಕುಮಾರರಾಮನು ತುಂಬ ಪರಾಕ್ರಮಿ ಹಾಗೂ ತುಂಟ. ತನ್ನ ಜೊತೆಯ ಹುಡುಗರನ್ನು ತುಂಬ ಪೀಡಿಸುತ್ತಿದ್ದ. ಜನಗಳು ಬಂದು ದೂರಿದಾಗಲೆಲ್ಲ ಹರಿಯಾಲದೇವಿ ಸಮಾಧಾನ ಮಾಡಿ ಕಳುಹಿಸುತ್ತಿದ್ದಳು. ಆದರೆ ಬಾಲಕನು ಜಟ್ಟಂಗಿರಾಮೇಶ್ವರನ ಭಕ್ತ. ಪ್ರಾಣಿಗಳಲ್ಲಿ ತುಂಬ ದಯಾಳುವಾಗಿದ್ದನು. ಊರಿನ ಹುಡುಗರು ಒಂದು ದಿನ, ಇವನ ಕಣ್ಣಿಗೆ ಬೀಳದಂತೆ, ಜಟ್ಟಂಗಿರಾಮೇಶ್ವರನ ದೇವಾಲಯದ ಬಳಿ ಮರಕೋತಿ ಆಟ ಆಡುತ್ತಿದ್ದರು. ಆಗ ಅಲ್ಲಿಗೆ ಹೋಗಿ ಅವರಿಗೆಲ್ಲ ತುಂಬ ತೊಂದರೆಕೊಟ್ಟನು. ಮಹಾರಾಜನು ಇವನಿಗೆ ಮಲ್ಲವಿದ್ಯೆಯನ್ನು ಕಲಿಸಿದನು. ಈತನು ಜಟ್ಟಿಗಳನ್ನೂ ಮಿರಿಸಿದನು.

(iii) ಒಂದು ದಿನ, ಓರುಗಲ್ಲಿನ ದೇವತೆಗಳಾದ ಎಲ್ಲಮ್ಮ ಮತ್ತು ಶಂಭುಲಿಂಗರು ಕುಮಾರರಾಮನ ಕನಸಿನಲ್ಲಿ ತೋರಿಬಂದು, ತಮ್ಮ ಊರಿಗೆ ಬಂದು ಕೀರ್ತಿ ಪಡೆಯುವಂತೆ ಹೇಳುತ್ತಾರೆ. ರಾಮನು ಜಟ್ಟಂಗಿರಾಮನ ಆಶೀರ್ವಾದ ಪಡೆದು ಹೊರಡುತ್ತಾನೆ. ಹಂಪೆಗೆ ಹೋಗಿ ಲಿಂಗಪೂಜೆಯನ್ನು ಮಾಡುತ್ತಾನೆ. ಆಗ, ಓರುಗಲ್ಲನ್ನು ಗಣಪತಿರಾಯನು ಆಳುತ್ತಿರುತ್ತಾನೆ. ಊರಿನ ಸುತ್ತಲೂ ಒಂದು ಎಲೆ ತೋಟವಿರುತ್ತದೆ. ಅದಕ್ಕೆ ಕಂಚಿನಕೋಟೆ, ಕಬ್ಬಿಣದ ಬಾಗಿಲು, ವಜ್ರದ ಬೀಗವಿತ್ತು. ರಾಮನು ಛಂಗನೆ ನೆಗೆದು, ಆ ತೋಟದ ಒಳಕ್ಕೆ ಹಾರುವುದೇ ತಡ, ಅದು ನೆಲಸಮವಾಗುತ್ತದೆ. ಅಲ್ಲಿಯೇ ಗಿಡದಡಿಯಲ್ಲಿ ಮಲಗಿರಲು, ಬಿಸಿಲು ಬೀಳದಂತೆ ಆತನ ತಲೆಯ ಮೇಲೆ ಏಳು ಹೆಡೆ ಸರ್ಪವೊಂದು ಹೆಡೆಬಿಚ್ಚಿ ಆಡುತ್ತಿರುತ್ತದೆ. ಕಾವಲುಗಾರರು ಬಂದು, ತೋಟವೆಲ್ಲ ಹಾಳಾಗಿರುವುದನ್ನು ಕಂಡು, ನಡುಗಿ, ಅಲ್ಲಿಯೇ ಇದ್ದ ಕುಮಾರರಾಮನನ್ನು ಹಿಡಿಯುತ್ತಾರೆ. ಆತನನ್ನು ಬಂಧಿಸಿ ಕರೆದೊಯ್ಯುತ್ತಿರಲು, ಊರಿನ ಬಾಗಿಲು ಸಿಕ್ಕುತ್ತದೆ. ಅದರ ಮೇಲೆ ಒಂದು ದೊಡ್ಡ ರಣಭೇರಿ, ಏಳು ಖಂಡುಗದ ಒಂದು ಡಾಲು, ಮೂರು ಖಂಡುಗದ ಒಂದು ಬಾಕು ಇದ್ದುವು. ರಾಮನು ಅವುಗಳ ಅಡಿಯಲ್ಲಿ ಹೋಗಲು ಇಚ್ಛಿಸದೆ, ಕಾವಲುಗಾರರಿಂದ ತಪ್ಪಿಸಿಕೊಂಡು ಮೇಲಕ್ಕೆ ನೆಗೆದು, ಭೇರಿಯನ್ನು ಬಾರಿಸಿ ಡಾಲು ಬಾಕುಗಳನ್ನು ವಶಪಡಿಸಿಕೊಂಡು, ಊರಿನಲ್ಲಿ ಗಲಭೆಯೆಬ್ಬಿಸಿ, ಗಣಪತಿರಾಯನ ಮುಂದೆ ಬಂದು, ಆತನನ್ನು ಸಿಂಹಾಸನದಿಂದ ಕೆಳಕ್ಕೆ ಎಳೆದು ತಾನು ಅಲ್ಲಿ ಕುಳಿತುಕೊಳ್ಳುತ್ತಾನೆ. ಅನಂತರ ಅಲ್ಲಿಯೇ ಇದ್ದ ರೆಕ್ಕೆಯ ಕುದುರೆಯನ್ನೂ ವಶಪಡಿಸಿಕೊಂಡು, ಊರನ್ನೆಲ್ಲ ಹಾಳುಮಾಡಿ ತಮ್ಮ ಊರಿಗೆ ಬರುತ್ತಾನೆ. ರಾಜನು ಮಗನ ಶೌರ್ಯವನ್ನು ಕಂಡು ತಲೆದೂಗುತ್ತಾನೆ.

(iv) ಪ್ರಾಪ್ತ ವಯಸ್ಕನಾದ ರಾಮನಿಗೆ ಮದುವೆ ಮಾಡಬೇಕೆಂದು ನಿಶ್ಚಯಿಸಿ, ಅವನ ಭಾವಚಿತ್ರವನ್ನು ತೆಗೆದುಕೊಂಡು ರಾಜನು ನಾನಾ ದೇಶಗಳನ್ನು ಸುತ್ತುತ್ತ, ಕೊನೆಗೆ ಡಿಳ್ಳಿಯ ನವಾಬನ ಬಳಿಗೆ ಬರುತ್ತಾನೆ. ಆತನ ಮಗಳಾದ ರತ್ನಾಜಿಯನ್ನು ಕಂಡು ಕಂಪಿಲನೇ ಮೋಹಿಸುತ್ತಾನೆ. ಆದರೆ ಗುಟ್ಟನ್ನು ಬಿಟ್ಟುಕೊಡದೆ ರಾಮನ ಚಿತ್ರವನ್ನು ತೋರಿ, ತಮ್ಮ ಕಡೆ ಅದೇ ಪದ್ಧತಿಯೆಂದು ಹೇಳಿ, ಕತ್ತಿಗೆ ಧಾರೆ ಎರೆದು, ಆಕೆಯನ್ನು ಊರಿಗೆ ಕರೆತರುತ್ತಾನೆ. ಅವಳನ್ನು ಚಿತ್ರಾಂಗಿ ಎಂಬ ಬೇರೆ ಮಹಲಿನಲ್ಲಿಟ್ಟು ತಾನೇ ಸುಖಿಸಲಾರಂಭಿಸುವನು. ರತ್ನಾಜಿಗೆ ಇದು ಮನಸ್ಸಿನಲ್ಲಿಯೇ ಕೊರೆಯುತ್ತಿರುತ್ತದೆ. ರಾಮನನ್ನು ಎಂದಾದರೂ ಕಂಡು ಸುಖಿಸಬೇಕೆಂಬ ಹಂಬಲ ಮಿಡಿಯುತ್ತಿರುತ್ತದೆ. ಅರಮನೆಯ ನೆಲಮಾಳಿಗೆಯಲ್ಲಿದ್ದ ಬೆಳ್ಳಿಯ ಸೋರೆ, ಬಂಗಾರದ ಲಾಬು ಮತ್ತು ಮುತ್ತಿನ ಚೆಂಡುಗಳು ಅವನನ್ನು ಕನಸಿನಲ್ಲಿ ಕೂಗಿ ಕರೆದಂತೆ ಆಗುತ್ತವೆ. ಅವುಗಳನ್ನು ತಂದೆಯಿಂದಲೇ ಕೇಳಿ, ಪಡೆದು, ರತ್ನಾಜಿಯ ಮಹಲಿನ ಬಳಿಯಲ್ಲಿಯೇ, ತನ್ನ ಜೊತೆಗಾರರಾದ ಜಟ್ಟಿಗಳ ಜೊತೆಯಲ್ಲಿ ಆಡುತ್ತಿರುತ್ತಾನೆ. ಅದು ರತ್ನಾಜಿಯ ಮನೆಗೆ ಹೋಗಿ ಬೀಳುತ್ತದೆ. ಜಟ್ಟಿಗಳ ಕೈಗೆ ರತ್ನಾಜಿ ಕೊಡದಿರಲು, ರಾಮನೇ ಹೋಗುತ್ತಾನೆ. ಅದೇ ಸಮಯವೆಂದು ಬಗೆದು ರತ್ನಾಜಿ ತನ್ನ ಎದೆಯ ಬಳಿಯಲ್ಲಿರುವ ಚೆಂಡನ್ನು ತೆಗೆದುಕೋ ಎನ್ನಲು, ರಾಮನು ಕೈಯಿಂದ ಮುಟ್ಟದೆ, ಮಾತ್ರ

ಭಾವನೆಯಿಂದ ಕೂಡಿ, ಬಾಯಿಂದ ತೆಗೆದುಕೊಳ್ಳುತ್ತಾನೆ. ಅನಂತರ ಪರಸ್ಪರ ಮಾತುಕತೆಗಳು ನಡೆದು, ರತ್ನಾಜಿಯ ಕಾಮುಲಾಲಸೆಯನ್ನು ಖಂಡಿಸಿ, ಹೊರಕ್ಕೆ ಬರುತ್ತಾನೆ. ಆಗ ರತ್ನಾಜಿ ತನಗೆ ಆದ ಅಪಮಾನ ಕ್ಕಾಗಿ, ಅವನ ತಲೆಯನ್ನು ತೆಗೆಸುವುದಾಗಿ ಶಪಥಮಾಡುತ್ತಾಳೆ. ಆ ದಿನ ಸಂಜೆ, ಕಂಪಿಲನು ಬಂದಾಗ, ಎಂದಿನಂತಿರದೆ, ಕುಮಾರರಾಮನ ಮೇಲೆ ಅಪವಾದವನ್ನು ಹೊರಿಸಿ, ಆತನ ತಲೆಗೆ ಸಂಚಕಾರವನ್ನು ತರುತ್ತಾಳೆ. ರಾಜನು ಬಂಧುವಾದ ಬಚ್ಚಣ್ಣನನ್ನು ಕರೆದು, ಮಗನ ತಲೆಯನ್ನು ಕಡಿಯುವಂತೆ ಅಜ್ಞೆಮಾಡುತ್ತಾನೆ. ರಾಜಾಜ್ಞೆಯನ್ನು ಮೀರಲಾರದೆ ಆತನು ಕುಮಾರರಾಮನನ್ನು ನೆಲಮಾಳಿಗೆಯಲ್ಲಿ ಬಚ್ಚಿಟ್ಟು, ಕಂಪಿಲರಾಯನ ದತ್ತುಮಗನೂ, ವೇಶ್ಯಾಲಂಪಟನೂ ಆದ ಹೋಲಿಕೆರಾಮನ ತಲೆಯನ್ನು ತಂದು ರತ್ನಾಜಿಗೆ ಒಪ್ಪಿಸುತ್ತಾನೆ. ಆಕೆ ಅದನ್ನು ಕಂಡ ಕೂಡಲೆ ಹಿಗ್ಗಿದರೂ, ಅನಂತರ ಹೋಲಿಕೆರಾಮನ ತಲೆಯಿರಬಹುದೆಂದು ಶಂಕಿಸುತ್ತಾಳೆ. ಬಚ್ಚಣ್ಣನು ಬುದ್ಧಿವಂತಿಕೆಯಿಂದ ಅದು ಕುಮಾರರಾಮನ ತಲೆಯೆಂದು ಸಾಧಿಸುತ್ತಾನೆ.

(v) ಕುಮಾರರಾಮನು ಸತ್ತನೆಂಬ ಸುದ್ದಿಯನ್ನು ಕೇಳಿ ಕಂಪಿಲನ ಶತ್ರುಗಳೆಲ್ಲ ದಂಡೆತ್ತಿ ಬಂದರು. ಕೆಲವರಿಗೆ ಹಾಗೂ ಸಂಶಯ. ಟಗರು ಮತ್ತು ಹುಂಜಗಳ ಶಕುನ ನೋಡಲು, ಅವರ ಸಂದೇಹ ಬಲವಾಯಿತು. ಇತ್ತ ಕಂಪಿಲನಿಗೆ ತುಂಬ ಚಿಂತೆಯಾಯಿತು. ಬಚ್ಚಣ್ಣನಾದರೊ ರಾಮನ ರೆಕ್ಕೆಯ ಕುದುರೆಯನ್ನು ತೆಗೆದುಕೊಂಡು, ಅದರ ಸಹಾಯದಿಂದಲೇ ರಾಮನಿದ್ದ ನೆಲಮಾಳಿಗೆಯನ್ನು ಗುರುತಿಸಿ, ದೈವಾನುಗ್ರಹದಿಂದ ಸುರಕ್ಷಿತನಾಗಿದ್ದ ಆತನನ್ನು ಸಕಾಲಕ್ಕೆ ಕರೆತರುವನು. ಶತ್ರುಗಳು ಹಿಮ್ಮೆಟ್ಟುವರು. ಕಂಪಿಲನು ಮಗನನ್ನು ಮತ್ತೆ ಕಂಡು, ಅವನಿಂದ ವಾಸ್ತವವಾದ ವೃತ್ತಾಂತವನ್ನು ತಿಳಿಯುವನು. ರತ್ನಾಜಿಯ ಮೇಲೆ ಕುಪಿತನಾಗಿ ಆಕೆಯನ್ನು ಸುಣ್ಣದ ಹಗೇವಿನಲ್ಲಿಟ್ಟು ಕೊಲ್ಲಿಸುವನು. ಆಕೆ ಸಾಯುವಾಗ, ಅಲ್ಲಿಯೇ ನಿಂತಿದ್ದ ಕುಮಾರರಾಮನನ್ನು ಕಂಡು, ತಾನು ಡಿಳ್ಳಿಯಲ್ಲಿ ಕುದುರೆಯ ಕಿವಿಯಿಂದ ಇಮಾಂಬೂಬಿಯಾಗಿ ಹುಟ್ಟಿ, ಆತನ ತಲೆಯನ್ನು ಬಂದು ಕಡಿಯುವುದಾಗಿ ಪ್ರತೀಕಾರದ ಮಾತುಗಳನ್ನು ಆಡುವಳು.

(vi) ಕುಮಾರರಾಮನು ಡಿಳ್ಳಿಯ ಮೇಲೆ ದಂಡೆತ್ತಿ ಹೋಗಬೇಕಾಗುತ್ತದೆ. ಆ ಕಾಳಗದಲ್ಲಿ ರಾಮನು ವೀರಾವೇಶದಿಂದ ಹೋರಾಡುತ್ತಿರಬೇಕಾದರೆ, ಒಬ್ಬ ಯೋಧ ಈತನ ಎದುರಿಗೆ ಧಾವಿಸಿ ಬರುತ್ತಾನೆ. ರಾಮನು ತನ್ನ ಏಳು ಖಂಡುಗದ ಕತ್ತಿಯನ್ನು ಮೇಲಕ್ಕೆತ್ತಲು, ಆ ವ್ಯಕ್ತಿ ತನ್ನ ಸ್ತನಗಳನ್ನು ತೋರಿಸಲು ಆಕೆಯೇ ಇಮಾಂಬೂಬಿ ಎಂಬುದಾಗಿ ಗೊತ್ತಾಗುತ್ತದೆ. ರಾಮನು ಹೆಂಗಸನ್ನು ಕೊಲ್ಲದೆ ಹಿಂತೆಗೆಯುವನು. ಆಕೆ ತನ್ನಕತ್ತಿಯಿಂದ ಎಷ್ಟು ಹೊಡೆದರೂ ಆತನ ಶಿರ ಹರಿಯುವುದಿಲ್ಲ. ಆಗ ರಾಮನು ತನ್ನ ಕತ್ತಿಯನ್ನೇ ಕೊಡಲು ಅದನ್ನು ಮುಟ್ಟಿಸಿದ ಕೂಡಲೆ ಕುಮಾರರಾಮನ ತಲೆ ಕಡಿದು ಬೀಳುತ್ತದೆ. ಒಡೆಯ ಸತ್ತದ್ದನ್ನು ಕಂಡ ಕೂಡಲೆ ಆತನ ರೆಕ್ಕೆಯ ಕುದುರೆ ಗಗನಕ್ಕೆ ಹಾರುತ್ತದೆ.

(vii) ಕುಮಾರರಾಮನ ತಲೆ ಡಿಳ್ಳಿಯ ಕೋಟೆಯ ಮೇಲೆ ಹೋಗಿ ಕುಳಿತು, "ಭಲೆ! ಕುಮಾರ ರಾಮು!" ಎಂದು ಹೇಳಿದಂತೆಲ್ಲ ಕೋಟೆಗಟ್ಟಲೆ ಸೈನ್ಯ ಹತವಾಗುತ್ತಿತ್ತು. ಡಿಳ್ಳಿಯ ರಾಣಿ ಹೆದರಿ ಹರಿಯಾಲದೇವಿಗೆ ಹೇಳಿಕಳುಹಿಸುತ್ತಾಳೆ. ಅವಳು ಬಂದು ಮಗನನ್ನು ಕರೆಯಲು, ಆತನು ಚಿಕ್ಕಮ್ಮನ ಮನೆಗೂ ಕೇಡುಂಟುಮಾಡದೆ, ತಮ್ಮ ಊರಿನ ಹೆಂಗಸರನ್ನೂ ನೋಡಲು ಇಚ್ಛಿಸದೆ, ಸಂಡೂರಿನ ಬಳಿ ಹೋಗಿ ನೆಲಸುವುದಾಗಿ ತಾಯಿಗೆ ಹೇಳುವನು. ತಾಯಿಗೆ ಎದುರಾಡಿದ ತಪ್ಪಿಗಾಗಿ ಆಕೆ ತನಗೆ ಕೊಟ್ಟಿದ್ದ ಹಾಲನ್ನೂ ರಕ್ತವನ್ನೂ ಕಾರುವನು. ಆತನು ಕಾರಿದ ಹಾಲು ವಿಭೂತಿಯಾಯಿತು; ರಕ್ತ ಕೆಮ್ಮಣ್ಣಾಯಿತು.

**(೪) ನಾಲ್ಕನೆಯ ಕಥೆಯ ಮುಖ್ಯಾಂಶಗಳು :—**

(i) ವಿಜಯನಗರದ ಸಾಮ್ರಾಜ್ಯಕ್ಕೆ ಸೇರಿದ ಆನೆಗೊಂದಿ ಸಂಸ್ಥಾನದಲ್ಲಿರುವ ಕಂಪ್ಲಿ ಪಟ್ಟಣವನ್ನು

ಪಾಳೆಯಗಾರ ವಂಶದ ನಲಬೋತುಲಕುಲದ ಕಂಪ್ಲಿರಾಜನು ಆಳುತ್ತಿರುತ್ತಾನೆ. ಆತನಿಗೆ ಮಕ್ಕಳಿರಲಿಲ್ಲ. ಅರಣ್ಯಕ್ಕೆ ಬೇಟೆಗಾಗಿ ಹೋಗಿದ್ದಾಗ, ಮುನಿಗಳೊಬ್ಬರ ದರ್ಶನವಾಗಿ ಅವರಿಂದ ಮಂತ್ರಯುಕ್ತವಾದ ಒಂದು ಮಾವಿನ ಹಣ್ಣನ್ನು ಪಡೆಯುತ್ತಾನೆ. ಅದನ್ನು ತಂದು ತನ್ನ ಪತ್ನಿಯಾದ ರತ್ನಮಾಂಬಳಿಗೆ ಕೊಡುವನು. ಆಕೆ ಹಣ್ಣನ್ನು ತಿಂದು, ಸಿಪ್ಪೆಯನ್ನು ದಾಸಿಗೆ ಕೊಡುವಳು. ಇಬ್ಬರಿಗೂ ಏಕಕಾಲದಲ್ಲಿಯೇ ಗಂಡು ಮಕ್ಕಳಾಗುವರು. ರಾಜಕುಮಾರನಿಗೆ ಕುಮಾರರಾಮನೆಂದೂ ದಾಸಿಯ ಮಗನಿಗೆ ಹೋಲಿಕೆರಾಮನೆಂದೂ ಹೆಸರಿಡುವರು.

(ii) ಇಬ್ಬರೂ ಒಟ್ಟಿಗೇ ವಿದ್ಯಾಭ್ಯಾಸಮಾಡುತ್ತಾರೆ. ಚಿಕ್ಕಂದಿನಲ್ಲಿಯೇ ತಮ್ಮ ತಂದೆಗೆ ಕಪ್ಪವನ್ನು ಕೊಡದೆ ಎದುರುಬಿದ್ದ ಸಾಮಂತರಾಜರನ್ನು ಗೆದ್ದು ಬರುತ್ತಾರೆ. ಕುಮಾರರಾಮನು ಸದಾಚಾರ ಸಂಪನ್ನ; ಹೋಲಿಕೆರಾಮನು ದುರ್ವ್ಯಸನಿ, ವೇಶ್ಯಾಲೋಲ. ಇಬ್ಬರಿಗೂ ರಾಜನು ಮದುವೆಮಾಡಬೇಕೆಂದಿರಲು, ಹೋಲಿಕೆರಾಮನು ತನಗೆ ಮದುವೆ ಬೇಡವೆಂದು ನಿರಾಕರಿಸುವನು. ಮಹಾರಾಜನು ರಾಮನ ಭಾವಚಿತ್ರವನ್ನು ಸುತ್ತಮುತ್ತಲಿನ ದೇಶಗಳಿಗೆ ಕಳುಹಿಸುವನು. ಅವರು ತಮ್ಮ ತಮ್ಮ ಕನ್ಯೆಯರ ಚಿತ್ರಗಳನ್ನು ಕಳುಹಿಸುವರು. ಅವರಲ್ಲಿ ಕುಮಾರರಾಮನು ಸಾಮಂತರಾಜಪುತ್ರಿಯಾದ ಚಿತ್ರಾವತಿ ಎಂಬುವಳನ್ನು ಒಪ್ಪುವನು. ಕಂಪಿಲನಿಗೂ ಆಕೆಯಲ್ಲಿಯೇ ಅನುರಾಗವುಂಟಾಗುವುದು. ಮಗನಿಗೆ ಮೋಸಮಾಡಿ, ಕತ್ತಿಗೇ ತಾಳಿಕಟ್ಟುವಂತೆ ಏರ್ಪಡಿಸಿ, ಆಕೆಯನ್ನು ಕರೆತಂದು, ಬೇರೆ ಒಂದು ಮಹಲಿನಲ್ಲಿಡುವನು.

(iii) ರಾಜನು ಬೇಟೆಗಾಗಿ ಹೊರಟಿರಲು. ರಾಜ್ಯಾಡಳಿತವನ್ನು ಕುಮಾರರಾಮನೇ ನೋಡುತ್ತಾ ಇರುವನು. ಆಗ ವೃದ್ಧಪ್ರಜೆಯೊಬ್ಬನು ಮುತ್ತಿನ ಚೆಂಡಿನ ಸುದ್ದಿಯನ್ನು ರಾಮನಿಗೆ ತಿಳಿಸುವನು. ರಾಮನು ತನ್ನ ತಮ್ಮನಾದ ಹೋಲಿಕೆರಾಮನಿಗೂ ಹೇಳಿಕಳುಹಿಸಿ, ನೆಲಮಾಳಿಗೆಯಲ್ಲಿದ್ದ ಚೆಂಡನ್ನು ತಂದು ಇಬ್ಬರೂ ಆಡುವರು. ಅದು ಚಿತ್ರಾವತಿಯ ಮಹಲಿಗೆ ಹೋಗಿ ಬೀಳುವುದು. ರಾಮನ ಚಿತ್ರಪಟವನ್ನು ಕಂಡಂದಿನಿಂದ ಆತನನ್ನು ಕಾಣಬೇಕೆಂದು ಹಂಬಲಿಸುತ್ತಿದ್ದ ಚಿತ್ರಾವತಿಗೆ ಆಗ ತುಂಬ ಸಂತೋಷವಾಗುವುದು. ಕುಮಾರರಾಮನು ಹೋಲಿಕೆರಾಮನನ್ನು ಚಿಕ್ಕಮ್ಮನ ಮನೆಗೆ ಕಳುಹಿಸಲು ಇಚ್ಛಿಸದೆ, ತಾನೇ ಬರುವನು. ಚಿತ್ರಾವತಿ ತನ್ನ ಮನಸ್ಸಿನ ಹಂಬಲವನ್ನು ವ್ಯಕ್ತಪಡಿಸುವಳು. ರಾಮನು ಛೀಮಾರಿ ಮಾಡಿ ಬರುವನು. ಚಿತ್ರಾವತಿ ಕೆರಳುವಳು.

(iv) ಕಂಪಿಲನು ಬೇಟೆಯಿಂದ ಹಿಂತಿರುಗಿ ಬಂದ ಮೇಲೆ, ಚಿತ್ರಾವತಿ ರಾಮನ ಮೇಲೆ ಅಪವಾದವನ್ನು ಹೊರಿಸುವಳು. ಮಹಾರಾಜನು ರಾಜಭಟರನ್ನು ಕರೆದು, ರಾಮನ ಕೈಕಾಲುಗಳನ್ನು ಕತ್ತರಿಸಿ ಬರಬೇಕೆಂದು ಆಜ್ಞಾಪಿಸುವನು. ಜನಗಳು ಗೋಳಾಡಲು, ರಾಮನು ಅವರೆಲ್ಲರಿಗೂ ಸಮಾಧಾನ ಹೇಳುವನು. ಈ ಸುದ್ದಿಯನ್ನು ತಿಳಿದ ಕೂಡಲೆ, ಹೋಲಿಕೆರಾಮನು ಓಡಿಬಂದು, ಅಣ್ಣನನ್ನು ಬಿಡಿಸಿಕೊಂಡು, ತಂದೆಯ ಬಳಿಗೆ ಬಂದು, ಖಂಡಿಸಿ, ಆತನನ್ನು ಬಂಧಿಸಲು ಮುನ್ನುಗ್ಗುವನು. ರಾಮನ ಕೈಕಾಲುಗಳನ್ನು ಕಡಿದ ಬಳಿಕ, ಹೋಲಿಕೆರಾಮನ ತಲೆಯನ್ನು ಕಡಿಯುವರು.

(v) ಹೋಲಿಕೆರಾಮನ ತಲೆ ಹಾರಿಬಂದು, ಆ ಕುಮಾರರ ಜನನಕ್ಕೆ ಕಾರಣರಾದ ಮುನಿಗಳ ಪಾದದ ಮೇಲೆ ಬೀಳುವುದು. ಋಷಿಗಳು ಅದರಿಂದ, ಆ ಕುಮಾರರಿಗೆ ಒದಗಿರುವ ಸಂಕಟವನ್ನು ತಿಳಿದು, ಮೊದಲು ಕುಮಾರರಾಮನಿದ್ದ ಎಡೆಗೂ, ಅನಂತರ ಹೋಲಿಕೆರಾಮನ ಮುಂಡವಿದ್ದ ಎಡೆಗೂ ಬಂದು, ಅವರಿಬ್ಬರನ್ನೂ ಬದುಕಿಸಿಕೊಂಡು ರಾಜನ ಬಳಿಗೆ ಬರುವರು. ರಾಜನಿಗೆ ವಿವೇಕ ಹೇಳುವರು. ರಾಜನು ತನ್ನ ತಪ್ಪನ್ನು ಒಪ್ಪಿಕೊಳ್ಳುವನು. ರತ್ನಮಾಂಬಳಿಗೆ ತನ್ನ ಮಗ ಬದುಕಿದ್ದನ್ನು ಕೇಳಿ ಸಂತೋಷವಾಗುವುದು.

(vi) ಚಿತ್ರಾವತಿಯನ್ನು ಸುಣ್ಣದ ಹಗೇವಿನಲ್ಲಿ ಹಾಕಿ ಸಾಯಿಸುವರು. ರಾಜನು ತಪಸ್ಸಿಗಾಗಿ ಅರಣ್ಯಕ್ಕೆ ಹೋಗುವನು.

(vii) ಚಿತ್ರಾವತಿ, ಕುಮಾರರಾಮನ ಮೇಲೆ ಹಗೆ ತೀರಿಸಿಕೊಳ್ಳಬೇಕೆಂದು ಬಿಜಾಪುರದ ಸುಲ್ತಾನನ ಕುದುರೆಯ ಗರ್ಭದಲ್ಲಿ ಜನಿಸುವಳು. ಆಕೆ ಲವಂಗಿ ಎಂಬ ಹೆಸರಿನಿಂದ ತುಂಬ ಪ್ರಸಿದ್ಧಳಾದ ಯೋಧಳಾಗುತ್ತಾಳೆ. ಸುಲ್ತಾನನ ದಂಡು ಕುಮಾರರಾಮನ ಮೇಲೆ ದಾಳಿ ಮಾಡಲು ಬರುವುದು. ಆಗ ಲವಂಗಿ ಪುರುಷ ವೇಷವನ್ನು ಧರಿಸಿ ಹೋರಾಡುತ್ತಿರಲು, ರಾಮನ ಖಡ್ಗ ಕೆಳಕ್ಕೆ ಬೀಳುವುದು. ಆಗ ಆಕೆ ತಾನು ಯಾರು ಎಂಬುದನ್ನು ಪ್ರಕಟಪಡಿಸುವಳು. ರಾಮನು ತಾಯಿಯ ಮೇಲೆ ಕತ್ತಿ ಎತ್ತಲು ಹಿಂತೆಗೆದು, ತಾನೇ ಆಕೆಯ ಕತ್ತಿಗೆ ತಲೆಗೊಟ್ಟು ಸಾಯುವುದಾಗಿ ತಲೆ ಬಗ್ಗಿಸುವನು. ಲವಂಗಿಯ ಮನಸ್ಸು ಬದಲಾಯಿಸುವುದು. ರಾಮನ ಮಾತೃಭಕ್ತಿಗೆ ಮೆಚ್ಚಿ, ಆತನ ಖಡ್ಗದಿಂದ ತಾನೇ ಸಾಯುವಳು. ರಾಮನು ಅವಳಿಗೆ ತಕ್ಕ ಸಂಸ್ಕಾರವನ್ನು ಮಾಡುವನು. ತಮ್ಮನೊಂದಿಗೆ ಸುಖವಾಗಿ ರಾಜ್ಯಭಾರಮಾಡಿಕೊಂಡಿರುತ್ತಾನೆ.



## ಪರಸ್ಪರ ಸಾಮ್ಯವೈಷಮ್ಯಗಳು

(i) ಕಂಪಿಲನೆಂಬ ಮಹಾರಾಜನಿಗೆ ಕುಮಾರರಾಮನೆಂಬ ಮಗನು ಫಲಪ್ರಸಾದದಿಂದ ಹುಟ್ಟುತ್ತಾನೆ. ನಾಲ್ಕನೆಯ ಕಥೆಯಲ್ಲಿ ರಾಣಿಯ ಹೆಸರು ರತ್ನಮಾಂಬ ಎಂಬುದಾಗಿ ಬರುತ್ತದೆ. ಉಳಿದ ಮೂರು ಕಥೆಗಳಲ್ಲಿ ಹರಿಯಾಲದೇವಿ ಎಂಬುದಾಗಿಯೇ ಇದೆ.

(ii) ಮಹಾರಾಣಿಯ ದಾಸಿಯ ಹೊಟ್ಟೆಯಲ್ಲಿಯೂ ಮಕ್ಕಳಾಗುತ್ತವೆ. ಮೊದಲಿನ ಎರಡು ಕಥೆಗಳಲ್ಲಿ ಒಬ್ಬ ದಾಸಿಗೆ ಹೋಲಿಕೆರಾಮ, ಕಾಟಣ್ಣ ಎಂಬುವರೂ, ಇನ್ನೊಬ್ಬ ದಾಸಿಗೆ ಚೆನ್ನಿಗರಾಮ ಎಂಬುವನೂ ಹುಟ್ಟುತ್ತಾರೆ. ಮೂರನೆಯ ಕಥೆಯಲ್ಲಿ ಹೋಲಿಕೆರಾಮ ಒಬ್ಬ ದತ್ತುಮಗ. ನಾಲ್ಕನೆಯ ಕಥೆಯಲ್ಲಿ ಹೋಲಿಕೆರಾಮನೊಬ್ಬನೇ ದಾಸಿಯ ಮಗನಾಗಿ ಹುಟ್ಟುತ್ತಾನೆ.

(iii) ಮೊದಲಿನ ಎರಡು ಕಥೆಗಳಲ್ಲಿ ಹರಿಯಾಲದೇವಿ ಬ್ರಾಹ್ಮಣನೊಬ್ಬನ ಮಗಳೆಂದೂ, ಬೈಚಪ್ಪನು ಆಕೆಯ ಸಹೋದರನೆಂದೂ ನಿರೂಪಿಸಿದೆ. ಮೂರನೆಯ ಕಥೆಯಲ್ಲಿ ಅವನನ್ನು ಕಂಪಿಲನ ಸೋದರಮಾವನೆಂದು ಸೂಚಿಸಿ, ಬಚ್ಚಣ್ಣನೆಂದು ಕರೆಯಲಾಗಿದೆ.

(iv) ವರಪ್ರಸಾದವನ್ನು ಭುಂಜಿಸಿದುದರಿಂದಲೇ ಬಂಜೆಯಾಗಿದ್ದ ಕುದುರೆಯೊಂದು ಬಲ್ಲ (ಬೊಲ್ಲ) ನೆಂಬ ಮರಿಯನ್ನೂ ಕುರಿಯೊಂದು ಎಳಗನೆಂಬ ಮರಿಯನ್ನೂ ಪಡೆಯುತ್ತವೆ. ಮೊದಲಿನ ಎರಡು ಕಥೆಗಳಲ್ಲಿ, ಎಪ್ಪತ್ತುರಾಜನೆಂಬುವನು ಆ ಕುದುರೆಯನ್ನು ಪಡೆಯುತ್ತಾನೆ. ಆತನ ಮಂತ್ರಿಯೇ ದೇವಿಶೆಟ್ಟಿಯ ಲಿಂಗ.

(v) ಓರುಗಲ್ಲಿನ ಪ್ರಕರಣ ಮೂರನೆಯ ಕಥೆಯಲ್ಲಿ ಮಾತ್ರ ಬರುತ್ತದೆ. ಆಗಲೇ ಕುಮಾರರಾಮನಿಗೆ ರೆಕ್ಕೆಯ ಕುದುರೆ ಲಭಿಸುವುದು.

(vi) ಮೊದಲಿನ ಮೂರು ಕಥೆಗಳಲ್ಲಿಯೂ ಕಂಪಿಲನ ಕಿರಿಯ ರಾಣಿಯನ್ನು ರತ್ನಾಜಿಯೆಂದೇ ಕರೆಯಲಾಗಿದೆ. ನಾಲ್ಕನೆಯದರಲ್ಲಿ ಮಾತ್ರ ಆಕೆಯನ್ನು ಚಿತ್ರಾವತಿ ಎಂದು ಕರೆದಿದೆ. ಈಕೆ ಡೊಂಬರವಳೆಂದು ಮೊದಲಿನ ಎರಡು ಕಥೆಗಳಲ್ಲಿ ಬರುತ್ತದೆ. ಡಿಲ್ಲಿಯ ನವಾಬನ ಮಗಳೆಂದು ಮೂರನೆಯ ಕಥೆಯಲ್ಲಿಯೂ ಸಾಮಂತ ರಾಜನ ಮಗಳೆಂದು ನಾಲ್ಕನೆಯ ಕಥೆಯಲ್ಲಿಯೂ ಹೇಳಿದೆ. ರಾಜನು ರಾಮನಿಗೆಂದು ಹೇಳಿ ಈಕೆಯನ್ನು ತಾನು ಮದುವೆಯಾದನೆಂದು ಕಡೆಯ ಎರಡು ಕಥೆಗಳಲ್ಲಿಯೂ ಬರುತ್ತದೆ. ಈಕೆಯ ದೆಸೆಯಿಂದ ಕುಮಾರರಾಮನು ರಾಜನ ದುರಾಗ್ರಹಕ್ಕೆ ಗುರಿಯಾಗುತ್ತಾನೆ. ಮೊದಲನೆಯ ಮೂರು ಕಥೆಗಳಲ್ಲಿಯೂ ರಾಮನನ್ನು ನೆಲಮಾಳಿಗೆಯಲ್ಲಿ ಬಚ್ಚಿಟ್ಟಂತೆ ಬರುತ್ತದೆ. ನಾಲ್ಕನೆಯ ಕಥೆಯಲ್ಲಿ ಅವನು ಕೈಕಾಲುಗಳನ್ನು ಕಳೆದುಕೊಂಡು ಬಾಧೆಪಡುತ್ತಿರುತ್ತಾನೆ. ಎರಡು ಮತ್ತು ನಾಲ್ಕನೆಯ ಕಥೆಗಳಲ್ಲಿ ರಾಮನನ್ನು ಹಿಡಿದೊಯ್ಯುವವರು ರಾಜಭಟರು.

(vii) ಕಾಟಣ್ಣ, ಹೋಲಿಕೆರಾಮ ಮತ್ತು ಚೆನ್ನಿಗರಾಮರು ರಾಮನ ಒಡನಾಡಿಗಳು. ಒಂದು ಮತ್ತು ಎರಡರಲ್ಲಿ ಚೆನ್ನಿಗರಾಮನ ಬಲಿಯಾದರೆ, ಮೂರು ಮತ್ತು ನಾಲ್ಕರಲ್ಲಿ ಹೋಲಿಕೆರಾಮನ ಬಲಿಯಾಗುತ್ತದೆ.

(viii) ಮೊದಲಿನ ಮೂರು ಕಥೆಗಳಲ್ಲಿ ಡಿಳ್ಳಿಯ ಸುಲ್ತಾನನಿಗೂ ಕಂಪಿಲನಿಗೂ ವಿರಸವುಂಟಾದರೆ, ನಾಲ್ಕನೆಯದರಲ್ಲಿ ಬಿಜಾಪುರದ ಸುಲ್ತಾನಿಗೂ ಕುಮಾರರಾಮನಿಗೂ ಕದನವುಂಟಾಗುತ್ತದೆ. ಮೊದಲನೆಯ ಕಥೆಯಲ್ಲಿ ರತ್ನೋಜಿ ಎಂಬುವಳು ಸುಲ್ತಾನನ ಮಗಳೆಂದೂ, ಆಕೆಯೇ ರಾಮನ ತಲೆಯನ್ನು ಕಡಿಯುವ ಳೆಂದೂ ನಿರೂಪಿಸಿದೆ. ಮೂರನೆಯ ಕಥೆಯಲ್ಲಿ ಹಗೆ ಹೊತ್ತ ರತ್ನಾಜಿ ಇಮಾಂಬೂಬಿ ಎಂಬುದಾಗಿಯೂ, ನಾಲ್ಕನೆಯ ಕಥೆಯಲ್ಲಿ ಲವಂಗಿ ಎಂಬುದಾಗಿಯೂ ಪುನರ್ಜನ್ಮ ತಾಳಿ ಬರುತ್ತಾಳೆ. ಈ ಎರಡರಲ್ಲಿಯೂ ಈಕೆ ಕುದುರೆಯ ಮೂಲಕ ಹುಟ್ಟಿ ಬರುವಳು. ಲವಂಗಿ ಕಟ್ಟಕಡೆಯಲ್ಲಿ ಪಶ್ಚಾತ್ತಾಪಪಟ್ಟು ಪರಿವರ್ತನೆಯಾಗು ತ್ತಾಳೆ.

(ix) ನಾಲ್ಕನೆಯದರಲ್ಲಿ ಕುಮಾರರಾಮನು ಜೀವಂತನಾಗಿರುತ್ತಾನೆ.

## ೨. ಯಕ್ಷಗಾನಗಳು

ಕುಮಾರರಾಮನ ಕಥೆಯನ್ನು ಕುರಿತು ಕನ್ನಡದಲ್ಲಿ ಯಕ್ಷಗಾನಗಳು ರಚಿತವಾಗಿವೆ. ಇವುಗಳನ್ನು ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಆದಿಕರ್ಣಾಟಕರು ಈಗಲೂ ಆಡುತ್ತಾರೆಂಬುದಾಗಿ ದಿ|| ಹುಲ್ಲೂರು ಶ್ರೀನಿವಾಸ ಜೋಯಿಸರು ತಮ್ಮ ಪುಸ್ತಕದಲ್ಲಿ ಸೂಚಿಸಿರುತ್ತಾರೆ.[1] ಪ್ರಕೃತದಲ್ಲಿ ಈ ಯಕ್ಷಗಾನಗಳಲ್ಲಿ ವಿದಿತ ವಾಗುವ ಕಥಾಭಾಗವನ್ನು ಇಲ್ಲಿ ಸಂಗ್ರಹಿಸಲಾಗಿದೆ.

"ಕೌಮಾರರಾಮನ ನಾಟಕವು" ಎಂಬ ಒಂದು ಯಕ್ಷಗಾನವನ್ನು ಶ್ರೀ. ರಾಮಶಾಸ್ತ್ರಿ ಎಂಬುವರು ಬರೆದಿರುತ್ತಾರೆ. ೧೯೩೧ರಲ್ಲಿ ಇದು ಎರಡನೆಯ ಬಾರಿ ಮುದ್ರಿತವಾಗಿದೆ. ಇಲ್ಲಿನ ಕಥೆ ಹೀಗಿದೆ :—

> "ಈಶ್ವರನು ಕೈಲಾಸದಲ್ಲಿ ಓಲಗದಲ್ಲಿರಬೇಕಾದರೆ ನರ ರುಂಡವೊಂದು ಬಂದು ಅವನ ರುಂಡಮಾಲೆಯನ್ನು ಸೇರುತ್ತದೆ. ಪಾರ್ವತಿ ಅದು ಯಾರದೆಂದು ಕೇಳಲು, ಆಗ ಪರಮೇಶ್ವರನು ಅವನ ಚರಿತ್ರೆಯನ್ನು ತಿಳಿಸುತ್ತಾನೆ. ಅದೇ ಕುಮಾರರಾಮನ ಕಥೆ.
>
> ಕಂಪಿಲನು ಸಿಂಹಾಸನಾರೂಢನಾಗಿ, ತನ್ನ ಮಂತ್ರಿಯನ್ನು ಕುರಿತು, ಕುಶಲವನ್ನು ವಿಚಾರಿಸುತ್ತಾನೆ. ಆತನು "ಹೊಳೆಹೊಳೆವ ನಿನ್ನ ರಾಜಧಾನಿಯಾದ ಈ ಮಳಯಾಳ ದೇಶಕ್ಕೆ ಶಿರೋಭೂಷಣವೆನಿಸುವ ಕುಂಮಟಪುರದ ವೈಭವವು ಅಮರಾವತಿಯನ್ನು ಅಣಕಿಸುವುದು" ಎಂದು ವಿನಂತಿ ಮಾಡಿ, ಕಂಪಿಲನ ಮನೆತನವನ್ನು ಕುರಿತು ಕೊಂಡಾಡುವನು. "ರಾಜಾಧಿರಾಜ ಕಲಭ ಕಂಠೀರವ ಗಂಡುಗಲಿ ಗಂಡನೆಂಬ ಬಿರುದಾಂಕಿತನಾದ ಸಿಂಗಭೂಪತಿಯವರ ಪಟ್ಟದರಸಿ ಯಾದ ಗಜರಾಜದೇವಿಯ ಗರ್ಭಸುಧಾಬ್ಧಿಯಲ್ಲಿ ಸಂಭೂತ ಸುಧಾಧಾಮ" ಎಂದು ಪ್ರಶಂಸಿಸು ವನು. ಆಪ್ತಮಂತ್ರಿಯಾದ ಬೈಚನು ಕಾಣದಿರಲು "ವೀರಾಧಿವೀರನೆಂದೆನ್ನಿಸುವ ಪುಳಿಂದ ದೇಶಾಧ್ಯಕ್ಷನಾಗಿಯೂ, ಅಷ್ಟಮಂತ್ರಿಗಳಲ್ಲಿ ಶ್ರೇಷ್ಠನೆಂದೆನ್ನಿಸುವ ಭಾವನಾದ ಬೈಚೇಂದ್ರನು ಈವರೆವಿಗೂ ಈ ಆಸ್ಥಾನವಂ ಸಾರದಿರಲು ಕಾರಣವೇನು?" ಎಂದು ಕೇಳುವನು. ಈ ವೇಳೆಗೆ ಬೈಚೇಂದ್ರನೂ ಬರುವನು. ಬೈಚೇಂದ್ರನು ರಾಜನನ್ನು ಕುರಿತು "ಕಂಪಿಲ ಭೂಪನೆ! ಸೊಂಪಿನ ಭಾವನೆ!" ಎಂದು ಸಂಬೋಧಿಸಿ, ತಾನು ಮಾಡಬೇಕಾಗಿರುವ ಕಾರ್ಯವೇನೆಂದು

---

1. ಗಂಡುಗಲಿ ಕುಮಾರರಾಮ, ಎರಡನೆಯ ಮುದ್ರಣ, ೧೯೫೫, ಪುಟ ೧೨೪.

ವಿಚಾರಿಸುವನು. ಮಹಾರಾಜನು ಕ್ರೂರಮೃಗಗಳ ಬೇಟೆಗಾಗಿ ಹೋಗಬೇಕೆನ್ನಲು ಸಮಸ್ತವೂ ಸಿದ್ಧವಾಗಿರುವುದಾಗಿ ಮಂತ್ರಿ ತಿಳಿಸುವನು. ಬೇಟೆಗೆ ರಾಮುನನ್ನೂ ಬರುವಂತೆ ಅಪ್ಪಣೆಮಾಡಿ, ತಾನು ರತ್ನಾಜಿ (ರತ್ನಾಂಗಿ ಎಂದೂ ಹೇಳಿದೆ)ಯನ್ನು ನೋಡಿಕೊಂಡು ಬರಲು ತೆರಳುವನು. ರಾಮುನೂ ಕಾಟಣ್ಣನೂ ಬೇಟೆಗೆಂದು ಹೊರಡುವ ಹೊತ್ತಿಗೆ ಹಂಗಪಕ್ಷಿ ಅಡ್ಡಲಾಗಲು ಅಪಶಕುನವೆಂದು ಬಗೆದು, ಅವರು ಊರಿನಲ್ಲಿಯೇ ಉಳಿಯುವರು.

ಬೇಸರ ಪರಿಹಾರಾರ್ಥವಾಗಿ ರಾಮುನು ಚೆಂಡಾಟವಾಡಲು ನಿಶ್ಚಯಿಸಿ, ಚೆಂಡನ್ನು ಕೇಳಲೆಂದು ತಾಯಿಯ ಬಳಿಗೆ ಬರುವನು. ರಾಜನು ಬೇಟೆಗೆ ಹೋದದ್ದರಿಂದ ಖಿನ್ನಳಾಗಿದ್ದ ಹರಿಯಾಲಮ್ಮನು, ರಾಮುನೂ ಕಾಟನೂ ಬಂದದ್ದನ್ನು ಕೇಳಿ ಸಂತೋಷಗೊಳ್ಳುವಳು. ರಾಮುನು ತಾನು ಬೇಟೆಗೆ ಹೋಗಲಾರದೆ ಇದ್ದುದನ್ನು ತಿಳಿಸಿ, ಸಿಂಗಭೂಪಾಲನ ಕಾಲದಲ್ಲಿ ಸ್ವಾತಿ ಮಳೆಯಿಂದ ಹುಟ್ಟಿದ ಮುತ್ತಿನ ಚೆಂಡನ್ನು ಕೊಡಬೇಕೆಂದು ಬೇಡಿಕೊಳ್ಳುವನು. ಹರಿಯಾಲಮ್ಮನು ಹೆದರಿ, ಆ ಚೆಂಡು ಅತ್ಯಂತ ಹಾನಿಕರವಾದುದೆಂದೂ, ಸಿಂಗಭೂಪಾಲನೂ ಅದನ್ನು ಆಡಿ ಕೆಟ್ಟನೆಂದೂ, ರಾಜರು ಸಪ್ತವ್ಯಸನಗಳಿಂದ ದೂರರಾಗಿ, ಗರಳಪುರಿಕ್ಷೇತ್ರವಾಸನನ್ನು ಸ್ಮರಿಸಿ ಸುಖಿಸಬೇಕೆಂದೂ ಬಗೆಬಗೆಯಾಗಿ ಹಿತೋಕ್ತಿಗಳನ್ನು ಹೇಳುವಳು. ರಾಮುನು ಯಾವ ಮಾತನ್ನೂ ಆಲಿಸುವುದಿಲ್ಲ. ಯಾರಾದರೂ ಹಿರಿಯರು ಮಗನಿಗೆ ಬುದ್ಧಿ ಹೇಳಬಾರದೆ ಎಂಬುದಾಗಿ ಹರಿಯಾಲಾಂಬೆ ಮರುಗುವಳು. ಕುಮಾರರಾಮನು, ಚೆಂಡನ್ನು ಕೊಡದಿದ್ದರೆ ಪ್ರಾಣತ್ಯಾಗ ಮಾಡುವುದಾಗಿ ಹೇಳಲು, ನಿರ್ವಾಹವಿಲ್ಲದೆ ಹರಿಯಾಲಮ್ಮನು ಅದನ್ನು ಕೊಟ್ಟು ಕಳುಹಿಸುವಳು. ಚೆಂಡನ್ನು ತಂದ ರಾಮುನಿಗೆ ಕಾಟಣ್ಣನು ಅದು ವಾಸ್ತವವಾಗಿ ವಿಪತ್ಕಾರಕವೆಂದು ತಿಳಿಸುವನು. ಇಂಥ ವ್ಯಸನಾದಿಗಳಿಗೆ ಸಿಕ್ಕಿ, ಕೃತಯುಗದಲ್ಲಿ ಕಾರ್ತವೀರ್ಯನೂ, ತ್ರೇತಾಯುಗದಲ್ಲಿ ರಾವಣಾದಿಗಳೂ ದ್ವಾಪರಯುಗದಲ್ಲಿ ದುರ್ಯೋಧನಾದಿಗಳೂ ನಾಶವಾದರೆನ್ನಲು, ರಾಮುನು ಕರ್ಮಗತಿ ಮೀರಲು ಯಾರಿಂದಲೂ ಶಕ್ಯವಿಲ್ಲವೆಂದು ಹೇಳಿ ಚೆಂಡಾಟವನ್ನು ಆಡಿಯೇ ತೀರಬೇಕೆನ್ನುವನು. ತಮ್ಮನ ಸಲುವಾಗಿ ಕಾಟಣ್ಣನು ಸಮ್ಮತಿಸುವನು. ರತ್ನಾಜಿಯ ಸೌಧದ ಬಳಿಯಲ್ಲಿಯೇ ಅಣ್ಣ ತಮ್ಮಂದಿರ ಆಟ ಏರ್ಪಡುವುದು.

ಇತ್ತ, ರತ್ನಾಜಿ ಅಲಂಕೃತಳಾಗಿ, ಕಂಪಿಲನು ಇನ್ನೂ ಬೇಟೆಯಿಂದ ಬಾರದೆ ಇರುವ ವಿರಹದಲ್ಲಿ ಪರಿತಪಿಸುತ್ತಿರಲು, ಚೆಂಡಿನ ಶಬ್ದ ಕೇಳುವುದು. ಸಂಗಾಯಿ ಹೊರಗಡೆ ನೋಡಿಕೊಂಡು ಬಂದು, ನಿಜವಾದ ಸುದ್ದಿಯನ್ನು ತಿಳಿಸಲು, ಕುಮಾರರ ಚೆಂಡಾಟವನ್ನು ನೋಡಲು ಅಪೇಕ್ಷಿಸಿ, ಸಖಿಯೊಂದಿಗೆ ಮಹಡಿಗೆ ಬರುವಳು. ಕೂಡಲೆ ರಾಮುನನ್ನು ಕಂಡು ಪರವಶಳಾಗುವಳು. ಸಂಗಾಯಿಗೆ ತನ್ನ ದುಃಖವನ್ನು ತಿಳಿಸಲು, ಆಕೆ ಗೌರೀದೇವಿಯನ್ನು ಆರಾಧಿಸಿ, ಆಕೆಯ ಅನುಗ್ರಹವನ್ನು ಪಡೆಯುವಂತೆ ಸೂಚಿಸುವಳು. ರತ್ನಾಂಗಿ ಅಂತೆಯೇ ಮಾಡಲು ದೇವಿ ಪ್ರತ್ಯಕ್ಷಳಾದಳು. ರಾಮುನನ್ನು ಕೂಡಲನುಕೂಲವಾಗುವಂತೆ, ಆತನಾಡುವ ಚೆಂಡು ತನ್ನ ಕೈಗೆ ಬಂದು ಬೀಳುವ ಹಾಗೆ ಅನುಗ್ರಹಿಸಬೇಕೆಂದು ಬೇಡಿಕೊಂಡಳು. ದೇವಿಯ ಬಲಭಾಗದಿಂದ ಮಂದಾರಕುಸುಮಮಾಲೆ ಬೀಳುವುದು. ಸಖಿ ಒಡತಿಗೆ ಸಮಾಧಾನ ಹೇಳುವಳು.

ಸ್ವಲ್ಪ ಹೊತ್ತಿನಲ್ಲಿಯೇ ಚೆಂಡು ಚಿಮ್ಮಿ ರತ್ನಾಜಿಯ ಮನೆಗೆ ಹೋಗಿ ಬೀಳುವುದು. ರಾಮುನು ಚೆಂಡು ಎಲ್ಲಿ ಬಿದ್ದಿತೆಂದು ವ್ಯಾಕುಲಪಡುತ್ತಿರಲು, ಕಂಚುಕಿ ಅದು ರತ್ನಾಜಿಯ ಮನೆಯಲ್ಲಿ ಬಿದ್ದಿತೆಂದು ತಿಳಿಸಿ, ಅದನ್ನು ತಾವು ಯಾರೂ ತರಲಾರೆವೆಂದು ವಿಜ್ಞಾಪಿಸಿಕೊಳ್ಳುವನು. ಅನಂತರ ರಾಮುನು ಕಾಟಣ್ಣನಿಗೆ ಹೋಗಿ ತರಬೇಕೆಂದು ಹೇಳುವನು. ಕಾಟಣ್ಣನು

ಹಿಂತೆಗೆಯುವನು. ತಂದೆ ಊರಿನಲ್ಲಿ ಇಲ್ಲದ ಸಮಯದಲ್ಲಿ ರತ್ನಾಜಿಯ ಮನೆಗೆ ಹೇಗೆ ಹೋಗುವುದೆಂದೂ, ಹೆಂಗಸರ ಮನಸ್ಸು ಬಹು ಶಂಕಾಸ್ಪದವೆಂದೂ, ಹರಿಯಾಲದೇವಿ ಈಗಾಗಲೇ ಚೆಂಡಿನ ದೆಸೆಯಿಂದ ಆಗಿರುವ ಅನಾಹುತವನ್ನು ಹೇಳಿ ಎಚ್ಚರಿಸಿರುವಳೆಂದೂ ಕಾರಣಗಳನ್ನು ಹೇಳುವನು. ರಾಮನು ತಾಯಿಯ ಮನೆಗೆ ಹೋಗಲು ಹಾಗೆಲ್ಲ ಶಂಕಿಸಬಾರದೆಂದೂ, ಹಾಗೇನಾದರೂ ಕೇಡುಂಟಾದರೆ ತಾನು ಆತನಿಗೆ ನೆರವಾಗಿರುವೆನೆಂದೂ ಹೇಳುವನು. ಕಾಟಣ್ಣನು ರಾಮನ ಮಾತನ್ನು ಮೀರಲಾರದೆಯೂ, ಹಣೆಯ ಬರಹವನ್ನು ತಪ್ಪಿಸಲು ಅಸಾಧ್ಯವೆಂದೂ ಬಗೆದು ರತ್ನಾಜಿಯ ಮನೆಗೆ ಹೊರಡುವನು. ಕಾಟಣ್ಣನನ್ನು ರತ್ನಾಜಿ ಉಪಚರಿಸಿ, ಬಂದ ಕಾರ್ಯವೇನೆಂದು ಕೇಳುವಳು. ಆತನು "ಎಲ್ಸೆ ತಾಯಿ! ಕುಮಾರರಾಮನು ವಿನೋದಾರ್ಥವಾಗಿ ಆಡುತ್ತಿದ್ದ ಚೆಂಡು ಹಾರಿಬಂದು ತಮ್ಮ ಮನೆಯಲ್ಲಿ ಬಿದ್ದಿದೆ. ಅದನ್ನು ಕೊಟ್ಟು ಕಳುಹಿಸು" ಎಂದು ಬೇಡುವನು. ಈ ವೇಳೆಗೆ ಸಂಗಾಯಿ ಓಡಿಬಂದು, ಮುತ್ತಿನ ಚೆಂಡು ಆಕೆಯ ಸದನಾಂಗಣದಲ್ಲಿರುವ ಚಂಪಕವೃಕ್ಷಕ್ಕೆ ಸಿಕ್ಕಿಕೊಂಡಿದೆಯೆಂದೂ, ಅದನ್ನು ತಾನು ತರಲು ಸಾಧ್ಯವಿಲ್ಲವೆಂದೂ ಒಡತಿಗೆ ತಿಳಿಸುವಳು. ಉಪಾಯಚತುರಳಾದ ರತ್ನಾಜಿ ಕಾಟಣ್ಣನನ್ನು ಕುರಿತು, ಆ ವೃಕ್ಷವು ಒಬ್ಬ ದೇವತೆಯ ವಾಸಸ್ಥಾನವೆಂದೂ, ಅದನ್ನು ಯಾರೂ ಮುಟ್ಟಲಾಗದೆಂದೂ, ಯಾರು ಆ ವೃಕ್ಷದಿಂದ ಪ್ರಯೋಜನವನ್ನು ಪಡೆಯುತ್ತಾರೆಯೋ ಅವರಿಂದ ಮಾತ್ರವೇ ಅದನ್ನು ಪಡೆಯಲು ಸಾಧ್ಯವೆಂದೂ ಹೇಳಿ, ರಾಮನನ್ನೇ ಹೋಗಿ ಕಳುಹಿಸುವಂತೆ ಸೂಚಿಸುವಳು. ಕಾಟಣ್ಣನು ನಿರಾಶನಾಗಿ ಹಿಂತಿರುಗುವನು. ಕಾಟಣ್ಣನಿಂದ ಎಲ್ಲ ವೃತ್ತಾಂತವನ್ನೂ ಕೇಳಿ ತಿಳಿದ ರಾಮನು ಏನೋ ವಿಪತ್ತು ತನಗಾಗಿ ಕಾದಿದೆಯೆಂದು ಬಗೆಯುವನು. ಅನಂತರ, ರಾಮನು ಕಾಟನಿಗೆ ಧೈರ್ಯ ಹೇಳಿ, ತಾನೇ ರತ್ನಾಜಿಯ ಮನೆಗೆ ಬರುವನು. ರಾಮನನ್ನು ಕಂಡಕೂಡಲೆ ರತ್ನಾಜಿಯ ಹೃದಯ ಹಿಗ್ಗಿತು. ಆತನನ್ನು ಬಗೆಬಗೆಯಾಗಿ ಸತ್ಕರಿಸಿ, ಆತನನ್ನು ಕೂಡಿ ಸುಖಪಡಬೇಕೆಂಬ ಬಯಕೆಯನ್ನು ಪ್ರಕಟಪಡಿಸುವಳು. ರಾಮನು ಆ ಮಾತುಗಳನ್ನು ಕೇಳಿ, ಅವುಗಳು ತಾಯಿಯಾದವಳಿಗೆ ಸಲ್ಲದೆಂದೂ, ತನಗಾಗಿ ಗೆಳೆಯರು ಕಾದಿರುವರೆಂದೂ, ವಿನಯಪೂರ್ವಕವಾಗಿ ಹೇಳುವನು. ರತ್ನಾಂಗಿ ತನ್ನ ಕಾಮಾತುರವನ್ನೇ ಮುಂದೊಡ್ಡುವಳು. ರಾಮನು ಪತಿವ್ರತಾ ಧರ್ಮವನ್ನು ಕುರಿತು, ಇಂದ್ರನ ನೆಳಲನ್ನು ನೀರಿನಲ್ಲಿ ಕಂಡಮಾತ್ರದಿಂದಲೇ ರೇಣುಕೆ ಅಪವಾದಕ್ಕೆ ಗುರಿಯಾದ ಪ್ರಸಂಗವನ್ನು ಉದಾಹರಿಸಿ ತಾಯಿಯನ್ನು ಎಚ್ಚರಿಸುವನು. ರತ್ನಾಂಗಿ ಯಾವ ಮಾತಿಗೂ ಸಮ್ಮತಿಸದೆ ತನ್ನ ಮೂಗಿನ ನೇರಕ್ಕೇ ಮಾತನಾಡುವಳು. ವಿಶ್ವಾಮಿತ್ರನಂಥ ಮಹಾತಪಸ್ವಿಯೂ ಸ್ತ್ರೀಸಂಗವನ್ನು ತ್ಯಜಿಸಲಾರದೆ ಹೋದನೆಂದೂ, ಅಹಲ್ಯೆ, ತಾರಾದೇವಿ, ಮಂಡೋದರಿ (ಶಂಕರನನ್ನು ಮೋಹಿಸಿದಳು), ದ್ರೌಪದಿ ಮೊದಲಾದವರು ಪರಪುರುಷರಿಗೆ ಆಸೆಪಟ್ಟವರೆಂದೂ ವಾದಿಸಿ, ರಾಮನನ್ನು ಮತ್ತೆ ಮತ್ತೆ ಬಲಾತ್ಕರಿಸುವಳು. ಮತ್ತೆ ಕುಮಾರರಾಮನು ತಾಯಿಯಾದವಳು ಅಜ್ಞಾನದಿಂದಲಾದರೂ ಮಗನನ್ನು ಹಾಗೆ ನೋಡುವುದು ಸಲ್ಲದೆಂದೂ, ಆ ಮಾತುಗಳು ನನಗೆ ಕರ್ಕಶವಾಗಿದೆಯೆಂದೂ ಹೇಳುವನು. ರತ್ನಾಂಗಿ "ದುರ್ಬಲರು ತರುಣಿಯರನ್ನು ತಣಿಸಲಾರದೆ, ಪರನಾರಿಯರನ್ನು ಕೂಡಿದರೆ ಪಾಪವೆಂದು ನೆಪ ಹೇಳುವರು. ನಾನು ಕಾಮನ ತಾಪವನ್ನು ತಾಳಲಾರೆ. ನೀನು ನನ್ನನ್ನು ಸಂತೋಷಗೊಳಿಸದಿದ್ದರೆ ನಾರೀವ್ಯಥೆಗೆ ಗುರಿಯಾಗುವುದು ನಿಶ್ಚಯ" ಎಂದು ವಿತಂಡವಾದವನ್ನು ಹೂಡಿ, ಕಟುವಾಗಿ ನುಡಿಯುವಳು. ಈ ಮಾತುಗಳನ್ನು ಕೇಳುತ್ತ ರಾಮನಿಗೆ ತುಂಬ ದುಃಖವಾಗುವುದು. "ತಂದೆಯಾದ ಕಂಪಿಲನಿಗೆ ಇದು ತಿಳಿದರೆ ಏನು ಗತಿ ?"

ಎಂದು ಸಂಕಟಪಡುವನು. ರತ್ನಾಂಗಿ "ಯಜ್ಞಮಾಡಿ ಸುರಲೋಕಕ್ಕೆ ತೆರಳಿದ ಮುನಿಗಳೇ ಮೊದಲಾದವರು ರಂಭಾದಿ ಅಪ್ಸರ ಸ್ತ್ರೀಯರ ಸಹವಾಸದಲ್ಲಿ ಸುಖಿಸುವರು. ರತಿಸುಖವೇ ಪರಮ ಸುಖವೆಂದು ಶಾಸ್ತ್ರಗಳೂ ಹೇಳುವುವು. ಇದಲ್ಲದೆ ಕಂಪಿಲನು, ತೀರ ಮುದುಕ. ಅವನಿಂದ ನಿನಗೆ ಯಾವ ಕೇಡೂ ಆಗದಂತೆ, ಅವನ ತಲೆಯನ್ನೇ ಕಡಿಸುವೆನು. ನೀನೇ ಶತ್ರುಬಾಧೆಯಿಲ್ಲದೆ ಆಳಿಕೊಂಡಿರಬಹುದು" ಎಂದು ಹೇಳುವಳು. ಈ ಮಾತುಗಳನ್ನು ಕೇಳಿದ ಕುಮಾರ ರಾಮನಿಗೆ ಕೋಪ ಎಲ್ಲೆ ಮೀರುವುದು. ಆಕೆಯನ್ನು ಬಹಿರಂಗವಾಗಿ ಛೀಮಾರಿ ಮಾಡಿ, ಚೆಂಡಿಲ್ಲದಿದ್ದರೂ ಚಿಂತೆಯಿಲ್ಲವೆಂದು ಹೇಳುತ್ತ ಅಲ್ಲಿಂದ ಹೊರಟುಬರುವನು.

ರತ್ನಾಂಗಿಯೂ ಹತಾಶಳಾಗಿ ಸಂಗಿಯಲ್ಲಿ ಮೊರೆಯಿಡುವಳು. ಈ ಸುದ್ದಿ ಕಂಪಿಲನಿಗೆ ತಿಳಿದರೆ ನನ್ನ ತಲೆಯೇ ಹೋಗುವುದೆಂದು ಬಗೆದು, ಕಾಮನನ್ನು ಬೈದು, ರಾಮನೇ ತನ್ನನ್ನು ಬಲಾತ್ಕರಿಸಿದನೆಂದು ದೂರು ಹೇಳಿ, ಅವನ ತಲೆಯನ್ನು ತೆಗೆಸುವೆನೆಂದು ಯೋಚಿಸುವಳು. ಸಂಗಾಯಿಯೂ ಈ ಮಾತಿಗೆ ತಲೆದೂಗುವಳು.

ಕಂಪಿಲನು ಬೇಟೆ ಮುಗಿಸಿಕೊಂಡು ಬಂದು ಕುಳಿತಿರಲು ಆತನ ಎಡಗಣ್ಣು ಅದುರಿ ಅಪಶಕುನವಾಗುವುದು. ಮಂತ್ರಿ ಬೇಟೆಯ ಆಯಾಸದಿಂದ ಹಾಗೆ ಆಗಿರಬಹುದೆಂದು ಸಮಾಧಾನ ಹೇಳುವನು. ಅಷ್ಟು ಹೊತ್ತಿಗೆ ಸಂಗಾಯಿ ಬಂದು, ರತ್ನಾಜಿ ಕಂಪಿಲನನ್ನು ಕಾಣದೆ ವಿರಹದಿಂದ ಬೇಯುತ್ತಿರುವಳೆಂದೂ, ರಾಜನ ಆಗಮನವನ್ನೇ ನಿರೀಕ್ಷಿಸುತ್ತಿರುವಳೆಂದೂ ತಿಳಿಸುವಳು. ಆಗ, ಕಂಪಿಲನಿಗೆ ಬೇಟೆಯಿಂದ ಹಿಂತಿರುಗಿದ ತನ್ನನ್ನು ರತ್ನಾಜಿ ಏಕೆ ಆರತಿ ಮಾಡಿ ಎದುರುಗೊಳ್ಳಲಿಲ್ಲವೆಂದು ವೇದ್ಯವಾಗುವುದು. ರಾಜನು ಕೂಡಲೇ ಬಂದು, ಅಸ್ತವ್ಯಸ್ತವಾಗಿದ್ದ ಅರಸಿಯನ್ನು ಕಂಡು ಕಾರಣವೇನೆಂದು ಕೇಳುವನು. ರತ್ನಾಂಗಿ ರಾಜನನ್ನು ಕುರಿತು "ಎಲೈ ವಲ್ಲಭನೇ ! ನನಗೆ ಆದ ಅವಮಾನವನ್ನು ಹೇಳಲಾರೆ. ನಿನ್ನ ಮಗನಾದ ರಾಮನು ಮುತ್ತಿನ ಚೆಂಡಿನ ನೆವದಿಂದ ನನ್ನ ಮನೆಯನ್ನು ಪ್ರವೇಶಿಸಿ, ತಾಯಿಯೆಂಬ ಭಾವನೆಯನ್ನೇ ಮರೆತು, ನನ್ನನ್ನು ಪೀಡಿಸಿ ಸುಖಿಸಿದನು. ನನ್ನ ಪಾತಿವ್ರತ್ಯ ಭಂಗವಾಯಿತು. ಮಾನ ಹೋದ ಮೇಲೆ ಇನ್ನು ಬದುಕಿದ್ದು ಪ್ರಯೋಜನವೇನು ?" ಎಂದು ಉತ್ತರವೀಯುವಳು. ಕಂಪಿಲನು ಈ ಮಾತನ್ನು ಒಡನೆಯೇ ನಂಬುವುದಿಲ್ಲ. ದೈವಾನುಗ್ರಹದಿಂದ ಹುಟ್ಟಿದ ಆತನು ಪರನಾರಿ ಸಹೋದರನೆಂದು ಚೆನ್ನಾಗಿ ಬಲ್ಲ. ಆದ್ದರಿಂದ, ಕಿರಿಯ ಹೆಂಡತಿ ಮಾತನ್ನು ಮರೆಸುತ್ತಿದ್ದಾಳೆಂದು ಭಾವಿಸುವನು. ರಾಣಿ ಮಗನೆಂಬ ಅಭಿಮಾನದಿಂದ ಅಪರಾಧಿಯನ್ನು ಶಿಕ್ಷಿಸದೆ ಇರುವುದು ತರವಲ್ಲವೆಂದು ವಾದಿಸುವಳು. ರಾಜನ ಮನಸ್ಸು ಕದಲದಿರಲು, ಆಕೆ ತಾನು ಇಬ್ಬರಿಗೂ ಸೆರಗೊಡ್ಡಿ ಬದುಕಿರಲಾರೆನೆಂದೂ, ರಾಜನಿಗೆ ಮಗನೇ ಹೆಚ್ಚಾದುದರಿಂದ ತನ್ನನ್ನೇ ಕೊಂದು ಹಾಕುವುದು ಲೇಸೆಂದೂ, ದೇವರೇ ತನ್ನನ್ನು ಕಾಪಾಡಬೇಕೆಂದೂ ನಿಷ್ಠುರವಾಗಿ ನುಡಿಯುವಳು. "ಎಲೈ ರಾಜನೆ ! ಅಭಿಮಾನಕ್ಕೆ ಸಿಕ್ಕಿಬೀಳದೆ, ನಿನ್ನ ಮಗನ ತಲೆಯನ್ನಾದರೂ ಕಡಿ, ಇಲ್ಲವೇ ನನ್ನ ತಲೆಯನ್ನಾದರೂ ಕಡಿ. ನಾನಂತೂ ಇಂತು ಬದುಕಿರಲಾರೆ" ಎಂದು ಕಠಿನವಾಗಿ ಕಡ್ಡಿಮುರಿದಂತೆ ಮಾತನಾಡುವಳು.

ಕಂಪಿಲನು ಚಿಂತಾಕ್ರಾಂತನಾಗಿ ಕುಳಿತಿರಲು, ಬೈಚಪ್ಪನು ಬರುವನು. ರಾಜನ ಖಿನ್ನ ಮುಖವನ್ನು ಕಂಡು ಕಾರಣವೇನೆಂದು ಕೇಳುವನು. ರಾಜನು ತನ್ನ ಉಭಯಸಂಕಟವನ್ನು ಹೇಗೆ ಹೇಳುವುದೆಂದು ಪರಿತಪಿಸಿ, ಕಡೆಗೆ ರಾಮನ ಮೇಲೆ ಬಂದಿರುವ ಅಪವಾದವನ್ನು ನಿರೂಪಿಸುವನು. ಮಂತ್ರಿ ರಾಮನು ಅಂಥವನಲ್ಲವೆನ್ನುವನು. ರಾಜನು ಬಂಧುಬಳಗವೆಂದು

ಭಾವಿಸಿ, ನ್ಯಾಯವನ್ನು ಮುಚ್ಚಿಡಬಾರದೆಂದು ಹೇಳಿ, ಮಗನ ತಲೆಯನ್ನು ಕಡಿಯುವಂತೆ ಆಜ್ಞಾಪಿಸುವನು. ಮಂತ್ರಿಯಾದ ಬೈಚಪ್ಪನು ಎಷ್ಟು ಹೇಳಿದರೂ ಕೇಳುವುದಿಲ್ಲ. ರಾಜನ ಆಜ್ಞೆಯೆಂದು ಶಿರಸಾವಹಿಸಿ ಮಂತ್ರಿ ಹೊರಟುಬರುವನು. ಬೈಚೇಂದ್ರನನ್ನು ಕಂಡು ರಾಮನು ಮಾತನಾಡಿಸಲು, ಆತನು ಮೌನದಿಂದಿರುವನು. ಮಾವನ ವರ್ತನೆ ಅರ್ಥವಾಗದೆ, ರಾಮನು ಕಾರಣವನ್ನು ವಿಚಾರಿಸಲು, ಆಗ ಆತನು ರಾಮನ ಮೇಲಿನ ಅಪವಾದವನ್ನು ಹೇಳಿ, ಸಹೋದರಿಯ ಮಗನಾದ ಆತನನ್ನು ಕೊಲ್ಲುವುದು ಹೇಗೆ ಎಂದು ದುಃಖಿಸುವನು. ಕುಮಾರ ರಾಮನು ನಿಜವಾದ ವೃತ್ತಾಂತವನ್ನು ಬೈಚಪ್ಪನಿಗೆ ತಿಳಿಸಿ, ತಂದೆಯ ಆಜ್ಞೆಯಾಗಿರುವ ಪ್ರಯುಕ್ತ ಅದನ್ನು ಅನುಭವಿಸದೆ ಮಾರ್ಗವಿಲ್ಲವೆಂದು ಹೇಳಿ, ತನ್ನ ತಲೆಯನ್ನು ಕೂಡಲೆ ಕಡಿಯಬಹುದೆಂದು ಹೇಳುವನು. ಈ ವೃತ್ತಾಂತವನ್ನು ಕೇಳಿದ ಹರಿಯಾಲದೇವಿ ಅಣ್ಣನಾದ ಬೈಚೇಂದ್ರನ ಬಳಿಗೆ ಬರುವಳು. ರಾಜನು ಪಾಪಿ ರತ್ನಾಂಗಿಯ ಮಾತನ್ನು ಕೇಳಿ, ಎಂಥ ಆಜ್ಞೆಯನ್ನು ಮಾಡಿದನೆಂದೂ, ಅಂಥ ಮಗನನ್ನು ಕಳೆದುಕೊಂಡು ತಾನು ಬಾಳುವುದಾದರೂ ಹೇಗೆಂದೂ, ಎಲ್ಲಕ್ಕಿಂತಲೂ ಮುಂಚಿತವಾಗಿ ತನ್ನ ತಲೆಯನ್ನೇ ತೆಗೆಯಬೇಕೆಂದೂ ಅಣ್ಣನಲ್ಲಿ ಮೊರೆಯಿಡುವಳು. ಬೈಚೇಂದ್ರನು "ಎಲೈ ತಂಗಿ, ಕಂಪಿಲನ ಮನಸ್ಸು ಈ ರೀತಿ ಭ್ರಾಂತ ವಾಗಿರಬೇಕಾದರೆ ನಾವು ಮಾಡುವುದೇನು ? ನಮ್ಮ ಸುಖಕ್ಕೆ ಇನ್ನು ಸಂಚಕಾರ ಬಂದ ಹಾಗಾ ಯಿತು. ನಾನು ತಾನೆ ಹೇಗೆ ಈ ಆಜ್ಞೆಯನ್ನು ನೆರವೇರಿಸಲಿ ? ನನ್ನ ತಲೆಯನ್ನೇ ಕಡಿದು ಕೊಳ್ಳುವಂತೆ ಆಜ್ಞಾಪಿಸಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು" ಎಂದು ವ್ಯಥೆಪಡುವನು.

ಈ ವೇಳೆಗೆ ಚೋರರಾಮನೆಂಬುವನು ಬಂದು ತಾನು ರಾಮನ ಬಾಲ್ಯಮಿತ್ರನೆಂದೂ, ರಾಮನಿಂದ ಲೋಕಕ್ಕೆ ಉಪಕಾರವಾದೀತೆಂದೂ, ಆದ್ದರಿಂದ ತನ್ನ ತಲೆಯನ್ನು ಕಡಿದು, ಕಂಪಿಲನಿಗೆ ತೋರಿಸಿ, ಕುಮಾರರಾಮನನ್ನು ಉಳಿಸಬೇಕೆಂದೂ, ಬೈಚೇಂದ್ರನನ್ನು ಕೇಳಿ ಕೊಳ್ಳುವನು. ವೃದ್ಧ ತಂದೆತಾಯಿಗಳೂ, ಸಂಸಾರವೂ ಉಳ್ಳ ಆ ತರುಣನನ್ನು ಹೇಗೆ ಸಂಹರಿ ಸುವುದೆಂದು ಮಂತ್ರಿ ಹಿಂತೆಗೆದು, ಆತನ ತ್ಯಾಗಬುದ್ಧಿಯನ್ನು ಮೆಚ್ಚುವನು. ಆತನು ಹಾಗೆ ಸಾಯುವುದು ಸೂಕ್ತವಲ್ಲವೆಂದು ಬೈಚೇಂದ್ರನು ಹೇಳಲು, ಚೋರರಾಮನು "ರಾಮನು ಜೀವಿಸಿದ್ದರೆ ಲೋಕಕ್ಕೇ ಮಹೋಪಕಾರವಾಗುವುದು. ತನ್ನಂತಹ ಹುಲುಮಾನವ ಸತ್ತರೆ ಏನೂ ನಷ್ಟವಿಲ್ಲ. ಪರೋಪಕಾರವೇ ತನಗೆ ಶ್ರೇಯಸ್ಕರ" ಎಂದು ಪುನಃ ನುಡಿದು, ಹೆಂಡತಿಯ ಬಳಿಗೆ ಬಂದು ತನ್ನ ನಿರ್ಧಾರವನ್ನು ತಿಳಿಸಿ, ವೃದ್ಧರಾದ ಅತ್ತೆ ಮಾವಂದಿರನ್ನೂ ಮಕ್ಕಳನ್ನೂ ನೋಡಿಕೊಂಡಿರಬೇಕೆಂದು ಹೇಳುವನು. ಪತಿಯ ಮಾತನ್ನು ಕೇಳಿ ಆಕೆಗೆ ಸಂಕಟವಾಗುವುದು. ಗಂಡನ ಆಣತಿಯೆಂದು ಬಗೆದು ಒಡಂಬಡುವಳು. ಚೋರರಾಮನು ತನ್ನ ಸ್ನೇಹಿತನ ಸಲುವಾಗಿ ಪ್ರಾಣತ್ಯಾಗ ಮಾಡುವನು. ಬೈಚೇಂದ್ರನು ರಾಮನನ್ನು ನೆಲಮಾಳಿಗೆಯಲ್ಲಿ ಬಚ್ಚಿಡುವನು. ಚೋರರಾಮನ ತಲೆಯನ್ನು ತಂದು ಕಂಪಿಲನಿಗೆ ತೋರಿಸುವನು.

ಬೈಚೇಂದ್ರನು ತಲೆಯನ್ನು ತೋರಿಸುವುದೇ ತಡ ಕಂಪಿಲನಿಗೆ ದುಃಖವುಂಟಾಗುವುದು. ಆತ್ಮನಿಂದನೆ ಮಾಡಿಕೊಳ್ಳುವನು. ದಿನದಿನಕ್ಕೂ ಕೊರಗಿ ಕೃಶನಾಗುವನು. ಇದನ್ನು ಕಂಡ ಬೈಚೇಂದ್ರನು ರಾಜನ ಬಳಿಗೆ ಬಂದು, ಸಿದ್ಧೇಶ್ವರಾಲಯದಲ್ಲಿ ಒಬ್ಬ ಸಿದ್ಧಪುರುಷನು ಬಂದು ತಂಗಿರುವನೆಂದೂ, ಆತನ ಮೂಲಕ ಇಷ್ಟಾರ್ಥವನ್ನು ಕೇಳಿ ಪಡೆಯಬಹುದೆಂದೂ ಸೂಚಿಸು ವನು. ರಾಜನು ಸಮ್ಮತಿಸಲು, ಮಂತ್ರಿ ಒಬ್ಬ ಮನುಷ್ಯನಿಗೆ ಸಿದ್ಧನ ವೇಷವನ್ನು ಹಾಕಿಸಿ, ರಾಜನಲ್ಲಿಗೆ ಕರೆತರುವನು. ಮ್ಲಾನವದನನಾದ ರಾಜನನ್ನು ಕಂಡು, ಆತನು ದುಃಖಕ್ಕೆ

ಕಾರಣವೇನೆನ್ನಲು, ರಾಜನು ಪುತ್ರಶೋಕವನ್ನು ವಿವರಿಸಿ, ಆತನನ್ನು ಮರಳಿ ಪಡೆಯುವ ಬಗೆ ಹೇಗೆಂದು ಕೇಳುವನು. ಆಗ ಆ ಸಿದ್ಧಪುರುಷನು, ರಾಮನು ಸಾಮಾನ್ಯ ಮಾನವನಲ್ಲ ವೆಂದೂ, ಅವನು ವನಶಿರನಾಮಕ ಯಕ್ಷನೆಂದೂ ಹೇಳಿ, ಅವನ ಪೂರ್ವಕಥೆಯನ್ನು ಈ ಕೆಳಗೆ ಕಂಡಂತೆ ವಿವರಿಸುವನು.

"ಎಲೈ ರಾಜೇಂದ್ರನೇ ಕೇಳು. ಕೈಲಾಸದೊಳು ಮಹಾದೇವನು ಸಂಧ್ಯಾಕಾಲದ ತಾಂಡವೋತ್ಸವದೊಳು ಮೆರೆಯುತ್ತಿರಲು, ಸೇವಾರ್ಥವಾಗಿ ನೆರೆದಿದ್ದ ಸಮಸ್ತ ಸುರಾಸುರ ಸಮೂಹದಲ್ಲಿ ವನಶಿರನೆಂಬೊರ್ವ ಯಕ್ಷರಾಜನು ನಂದೀಶನನ್ನು ನೋಡಿ ಹಾಸ್ಯ ಮಾಡಿದ್ದ ಕ್ಕಾಗಿ, ಕೋಪಾಕ್ರಾಂತನಾದ ನಂದೀಶನು ನರರ ಬಸುರೊಳು ಮೂರು ಬಾರಿ ಪುಟ್ಟಿ ಹೆಣ್ಣಿನ ಮೂಲಕವಾಗಿ ಮರಣವನ್ನು ಹೊಂದುವಂತೆ ಆ ಯಕ್ಷನನ್ನು ಶಪಿಸಿದನು. ಶಾಪಭೀತನಾಗಿ ಯಕ್ಷನು ದುಃಖಿಸುತ್ತಿರೆ ಪರಮ ಕರುಣಾಕರನಾದ ಚಂದ್ರಚೂಡನು ಕಂಡು, ಕಡೆಯ ಜನ್ಮದಲ್ಲಿ ಹೆಣ್ಣಿನ ಮೂಲಕವಾಗಿಮರಣಮಾಂತರೂ, ಪುನರಪಿ ಜನಿಸಿ ಚಿರಕಾಲಂ ರಾಜ್ಯಮಂ ಪೊರೆ ಯುತ್ತ ಸಕಲ ಸುಖಂಗಳಂ ತಾಳಿ, ಕಡೆಯೊಳು ನನ್ನ ಬಳಿಗೈದಿ ಮುಮುಕ್ಷುವಾಗುವೆ. ದುಃಖಿಸ ದಿರೆಂದು ಸಂತೈಸಿ ಕಳುಹಿದನು. ಈ ಯಕ್ಷನು ಮೊದಲನೆಯ ಜನ್ಮದೊಳು ಸಾರಂಗಧರನಾಗಿಯೂ ಎರಡನೆಯ ಜನ್ಮದೊಳು ಕರೀಭಂಟನೆಂಬ ಕೃಷ್ಣ ಶೂರನಾಗಿಯೂ, ಈಗ ನಿನ್ನ ಕುಮಾರನಾದ ರಾಮನಾಗಿಯೂ ಜನಿಸಿರುವನು. ಕೆಲಕಾಲದೊಳು ಶತ್ರುರಾಯರು ನಿನ್ನ ಮೇಲೆ ದಂಡೆತ್ತಿ ಬರುವರು. ಆಗ ಪುತ್ರಸಂಜೀವಿನಿಯೆಂಬ ವ್ರತವನ್ನು ಆಚರಿಸಿ ಚಂದ್ರಮೌಳಿಯನ್ನು ಸಂತೋಷಗೊಳಿಸಲು ನಿನ್ನ ಕುಮಾರನು ಜೀವಿಸಿ ಬಂದು ಶತ್ರುನಿಗ್ರಹಮಂ ಗೈದು ರಾಜ್ಯಾಭಿ ಷಿಕ್ತನಾಗಿ ಬಾಳುವನು. ಇದರೊಳು ಸಂದೇಹವಿಲ್ಲವಾಗಿ ಮರುಕವಂ ತೊರೆದು ಸುಖಿಸೈ ರಾಜ! ನಾವಾದರೋ ಹೊರಡುವೆವು."

ಸಿದ್ಧವರೇಣ್ಯನು ತೆರಳುವನು. ರಾಮನು ಸಕಾಲದಲ್ಲಿ ಬರುವನೆಂಬ ಭರವಸೆಯಿಂದ ಕೂಡಿ, ಕಂಪಿಲನೂ ಹರಿಯಾಲದೇವಿಯೂ ಚಿಂತೆಯನ್ನು ತೊರೆಯುವರು.

"ಕುಮಾರರಾಮನ ಕಥೆ" ಎಂಬ ಮತ್ತೊಂದು ಯಕ್ಷಗಾನದಲ್ಲಿಯೂ ಕಥೆಯ ಮುಖ್ಯಾಂಶಗಳೆಲ್ಲ ಇದೇ ರೀತಿಯಾಗಿ ಬರುತ್ತವೆ. ಗ್ರಂಥದಲ್ಲಿ ಕವಿಯ ಹೆಸರು ಉಕ್ತವಾಗಿಲ್ಲ. ಲೇಖಕನು "ಮಾಂಬಳ್ಳಿಪುರದಲ್ಲಿ ಸ್ಥಿರದಿ ನೆಲಸಿದ ದೇವ ಯನ್ನನು ತ್ವರಿತದಿಂದಲಿ ಪೊರೆಯೊ ವೈದೇಶ (ಪು. ೨)" ಎಂಬುದಾಗಿ ಪ್ರಾರ್ಥಿಸು ತ್ತಾನೆ. ಆದ್ದರಿಂದ ಈತನು ಯಳಂದೂರಿನ ಬಳಿಯಲ್ಲಿರುವ ಮಾಂಬಳ್ಳಿಯವನಿರಬಹುದೆಂದು ಊಹಿಸ ಬಹುದು. ಶ್ರೀ|| ಹುಲ್ಲೂರು ಶ್ರೀನಿವಾಸ ಜೋಯಿಸರು "ಯಕ್ಷಗಾನ ಮಾತುಸಹಿತ ಮೂಡ್ಲುಪಾಯ ಕುಮಾರರಾಮನ ಕಥೆ ಎಂಬ ಗ್ರಂಥವು ಯಳಂದೂರು ತಾಲ್ಲೂಕು ಹ(ಅ ?)ಗರ ಮಾಂಬಳ್ಳಿಯ ನಾಗಪ್ಪಶೆಟ್ಟಿ ರಿಂದ ರಚಿಸಲ್ಪಟ್ಟು ಎಂ. ಆರ್. ವೆಂಕಟಾಚಲಶೆಟ್ಟರು, ಬೆಂಗಳೂರು ಇವರಿಂದ ಪ್ರಕಟಿಸಲ್ಪಟ್ಟಿದೆ" ಎಂದು ಹೇಳಿರುತ್ತಾರೆ.[1] ನಾನು ನೋಡಿರುವ ಪ್ರತಿಯ ಅಟ್ಟೆ ಹೋಗಿರುವುದರಿಂದ, ಈ ಅಂಶ ಮೇಲೆ ಸೂಚಿಸಿರುವ ಗ್ರಂಥಕ್ಕೆ ಅನ್ವಯಿಸಬಹುದು; ಇಲ್ಲವೇ ಅದು ಬೇರೊಂದು ಕೃತಿಯಿರಬಹುದು. ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಮೂಡಲಪಾಯ ಎಂಬ ಬಯಲಾಟವನ್ನು ಪ್ರಸ್ತಾಪಿಸುತ್ತ ಡಾ|| ಬಿ.ಎಸ್. ಗದ್ದಗಿಮಠ, ಎಂ.ಎ., ಪಿ.ಎಚ್.ಡಿ., ಅವರು, "ಸತ್ಯೇಂದ್ರಚೋಳ, ಕರಿಕಾಲಚೋಳ, ಕಲ್ಯಾಣಬಸವ, ಕುಮಾರರಾಮ ಇವೇ ಮೊದಲಾದ ಕಥೆಗಳು ಐತಿಹಾಸಿಕವಿದ್ದು ಪೂರ್ವ ಕರ್ನಾಟಕ ಭಾಗಗಳಿಗೆ ಸಂಭವಿಸಿದುವುಗಳು. ಇವು

1. ಗಂಡುಗಲಿ ಕುಮಾರರಾಮ, ಪ್ರಥಮ ಮುದ್ರಣ, ೧೯೪೧, ಪು. ೪೨.

ಗಳನ್ನು ಬರೆದವರು ಪೂರ್ವ ಕರ್ನಾಟಕದ ಜನಪದ ಕವಿಗಳೆಂದೇ ಹೇಳಬಹುದು. ಕುಮಾರರಾಮನ ಆಟವನ್ನು ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಬೈಲಹೊಂಗಲದಲ್ಲಿ ನೋಡಿದ ಶ್ರೀ. ದೊಡ್ಡ ಭಾವೆಪ್ಪ ಮೂಗಿ ಅವರು ಆ ಕಥೆಯನ್ನು ಬಲು ವಿಮರ್ಶಿಸಿ ಹೇಳುತ್ತಾರೆ. ಆ ಕಥೆಯ ಒಂದು ಪ್ರತಿಯು ಅವರಲ್ಲಿದೆ" ಎಂದು ಹೇಳುತ್ತಾರೆ.[1] ಶ್ರೀಯುತರನ್ನು ಕೇಳಿದ್ದರಲ್ಲಿ, ಮೇಲೆ ಸೂಚಿಸಿರುವ ಕೃತಿ ಹಸ್ತಪ್ರತಿ ಎಂಬುದಾಗಿ ತಿಳಿದು ಬಂದಿತು[2]. ಡಾ॥ ಕೆ. ಎಂ. ಕೃಷ್ಣರಾವ್, ಎಂ.ಎ , ಪಿ.ಎಚ್.ಡಿ., ಅವರು ತಮ್ಮ "ಯಕ್ಷಗಾನ ಸಾಹಿತ್ಯ" ಎಂಬ ಕೃತಿಯಲ್ಲಿ, ಮೇಲೆ ಸೂಚಿಸಲಾಗಿರುವ ಅನಿಶ್ಚಯ ಕರ್ತೃವಿನ "ಕುಮಾರರಾಮನ ಕಥೆ" ಯನ್ನೇ ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಟ್ಟಿರುತ್ತಾರೆ.[3] ಶ್ರೀ. ಶಿವರಾಮ ಕಾರಂತರು ತಮ್ಮ "ಯಕ್ಷಗಾನ ಬಯಲಾಟ" ಎಂಬ ಗ್ರಂಥದಲ್ಲಿ ಈ ಬಗ್ಗೆ ಏನನ್ನೂ ಹೇಳದೆ ಇರುವುದನ್ನು ನೋಡಿದರೆ, ದಕ್ಷಿಣ ಕರ್ನಾಟಕದಲ್ಲಿ ಈ ಕಥೆ ಬಳಕೆಯಲ್ಲಿಲ್ಲವೆಂದು ಕಾಣುತ್ತದೆ. ಶ್ರೀ ರಾಮಚಂದ್ರಭಟ್ಟ, ಹಾಸಣಗಿ ಅವರು ತಮ್ಮ "ಯಕ್ಷ ನಾಟಕಗಳು" ಎಂಬ ಪುಸ್ತಕದಲ್ಲಿ ಕೊಟ್ಟಿರುವ ನಾಟಕಗಳ ಪಟ್ಟಿಯಲ್ಲಿಯೂ ಕುಮಾರರಾಮನಿಗೆ ಸಂಬಂಧಿಸಿದ ಯಾವ ಕೃತಿಯೂ ಕಂಡುಬರುವುದಿಲ್ಲ. ಆದ್ದರಿಂದ, ಈ ನಾಟಕ ಕರ್ನಾಟಕದ ಕೆಲವು ಕಡೆಗಳಲ್ಲಿ ಮಾತ್ರ ಬಳಕೆಯಲ್ಲಿದ್ದಿರಬಹುದೆಂದು ಊಹಿಸಬಹುದು.[4]

## ಯಕ್ಷಗಾನಗಳ ಮುಖ್ಯಾಂಶಗಳು

(i) ಕುಮ್ಮಟಪುರವೆಂಬುದು ಮಳ(ಲ ?)ಯಾಳ ದೇಶದಲ್ಲಿ ಅಮರಾವತಿಯಂತೆ ವಿರಾಜಿಸುತ್ತಿತ್ತು ಎಂದು ಹೇಳಲಾಗಿದೆ.

(ii) ಕಂಪಿಲನು ಸಿಂಗಭೂಪತಿ ಮತ್ತು ಗಜರಾಜದೇವಿಯರ ಮಗನೆಂದು ತಿಳಿದುಬರುತ್ತದೆ. ಈತನ ಪಟ್ಟಮಹಿಷಿಯನ್ನು ಹರಿಯಾಲಮ್ಮ, ಹರಿಯಾಲಾಂಬೆ ಎಂದು ಕರೆಯಲಾಗಿದೆ. ಇವರ ಮಗನೇ ಕುಮಾರರಾಮ.

(iii) ರಾಜನ ಕಿರಿಯ ಹೆಂಡತಿಯೇ ರತ್ನಾಜಿ. ಈಕೆಯನ್ನು ರತ್ನಾಂಗಿ ಎಂಬುದಾಗಿಯೂ ಕರೆದಿರುವುದುಂಟು. ಎಂದಿನಂತೆಯೇ ಈಕೆಯ ದುಷ್ಟಬುದ್ಧಿಯಿಂದಲೇ ಕುಮಾರರಾಮನಿಗೆ ಕಷ್ಟಪ್ರಾಪ್ತವಾಗುತ್ತದೆ.

(iv) ಕುಮಾರರಾಮನ ಬಾಲ್ಯಮಿತ್ರನಾದ ಚೋರರಾಮನು ಸಕಾಲದಲ್ಲಿ ಬಂದು, ಕುಮಾರರಾಮನ ಸಲುವಾಗಿ ತನ್ನ ತಲೆಯನ್ನು ತಾನಾಗಿಯೇ ಕೊಡುತ್ತಾನೆ.

(v) ಬೈಚಪ್ಪನನ್ನು ಹರಿಯಾಲಮ್ಮನ ಅಣ್ಣನೆಂದು ಕರೆದಿದೆ. ಆತನೇ ರಾಜನ ಆಪ್ತಮಂತ್ರಿ ಮತ್ತು ಆಪ್ತಬಂಧು.

(vi) ಅಪವಾದಕ್ಕೆ ಗುರಿಯಾಗಿದ್ದ ಕುಮಾರರಾಮನನ್ನು ಕೊಲ್ಲಲು ಕಂಪಿಲನು ಮೊದಮೊದಲು ಹಿಂತೆಗೆಯುತ್ತಾನೆ. ಕಿರಿಯ ಹೆಂಡತಿಯ ಮಾತನ್ನು ನಂಬಿ, ನ್ಯಾಯಕ್ಕೆ ಕಟ್ಟುಬಿದ್ದು, ನಿರ್ವಾಹವಿಲ್ಲದೆ ಆ ಕ್ರೂರಕಾರ್ಯಕ್ಕೆ ಆಜ್ಞೆ ಮಾಡುತ್ತಾನೆ.

---

1. ಕ. ಸಾ. ಪ. ಪ. ಸಂಪುಟ ೪೨, ಸಂಚಿಕೆ ೨, ಪು. ೫೧.
2. ಶ್ರೀಯುತರ ಪತ್ರ, ತಾ॥ ೨೩–೮–೧೯೫೮.
3. ಪು. ೪೩–೫೨.
4. ರೆವರೆಂಡ್ ಎಫ್. ಕಿಟ್ಟೆಲ್ ಅವರು ಕನ್ನಡ ಸಾಹಿತ್ಯವನ್ನು ಕುರಿತ ತಮ್ಮ ಇಂಗ್ಲೀಷ್ ಪ್ರಬಂಧದಲ್ಲಿ "ಕೊಮಾರರಾಮ ಕಥ" ಎಂಬ ಒಂದು ಯಕ್ಷಗಾನವನ್ನು ಸೂಚಿಸಿರುತ್ತಾರೆ (ನಾಗವರ್ಮನ ಕನ್ನಡ ಛಂದಸ್ಸು, ಇಂಗ್ಲಿಷ್ ಪೀಠಿಕೆ, ಪು. Lxxix, 1874).

(vii) ಸಿದ್ಧಪುರುಷನ ಸೃಷ್ಟಿ ತುಂಬ ನವೀನವಾದುದು. **ಈತನ ಮೂಲಕ,** ಕುಮಾರರಾಮನು ವನಶಿರನೆಂಬ ಯಕ್ಷನೊಬ್ಬನೆಂದೂ, ಆತನು ನಂದೀಶನಿಂದ ಶಾಪಕ್ಕೆ ಗುರಿಯಾಗಿ, ಒಂದನೆಯ ಜನ್ಮದಲ್ಲಿ ಸಾರಂಗಧರನಾಗಿಯೂ, ಎರಡನೆಯ ಜನ್ಮದಲ್ಲಿ ಕರೀಭಂಟನಾಗಿಯೂ, ಪ್ರಕೃತದಲ್ಲಿ ಕುಮಾರರಾಮನಾಗಿಯೂ ಜನ್ಮವೆತ್ತಿ ಬಂದಿರುವನೆಂದು ವಿದಿತವಾಗುತ್ತದೆ.

(viii) ಕುಮಾರರಾಮನ ಮರಣಾನಂತರ ಅವನ ರುಂಡವು ಈಶ್ವರನ ರುಂಡಮಾಲೆಗೆ ಬಂದು ಕೂಡಲು, ಆಗ ಆ ಸೋಜಿಗವನ್ನು ಪ್ರಶ್ನಿಸಿದ ಪಾರ್ವತಿಗೆ ಈಶ್ವರನು ಹೇಳಿದ ಕಥೆಯೇ ಕುಮಾರರಾಮನ ಪ್ರಸಂಗಕ್ಕೆ ತಳಹದಿಯಾಗಿರುತ್ತದೆ.

(ix) ಕಾಟಣ್ಣನ ಹೆಸರೂ ಉಕ್ತವಾಗಿದೆ. ಅವನನ್ನು ಕಂಪಿಲರಾಯನ ಮತ್ತೊಬ್ಬ ಹೆಂಡತಿಯಾದ ಹಂಪಾಜಿಯ ಮಗನೆಂದು ಹೇಳಲಾಗಿದೆ.

(x) ಯುದ್ಧ ಪ್ರಸಂಗಗಳು ಯಾವುದೂ ಇಲ್ಲದೆ ರತ್ನಾಜಿಯ ಪ್ರಸಂಗಕ್ಕೇ ಪ್ರಾಧಾನ್ಯವನ್ನು ಕೊಡಲಾಗಿದೆ.

## ೩. ತೆಲುಗಿನ "ಕುಮಾರರಾಮುನಿ ಕಥೆ" ಯ ಸಾರಾಂಶ

ಮದರಾಸು ಸರ್ಕಾರದ ಪ್ರಾಚ್ಯ ಪುಸ್ತಕ ಭಂಡಾರದವರು ಪ್ರಕಟಿಸಿರುವ "ಕುಮಾರರಾಮುನಿ ಕಥ" ಎಂಬ ತೆಲುಗು ಗ್ರಂಥದ ಆಧಾರದ ಮೇಲೆ ಈ ಕಥಾಸಂಗ್ರಹವನ್ನು ಮಾಡಲಾಗಿದೆ. ಈ ಕೃತಿಯನ್ನು ಬರೆದ ಕವಿಯ ಹೆಸರು ಈವರೆಗೆ ತಿಳಿದು ಬಂದಿಲ್ಲ. ಇದನ್ನು ಪರಿಷ್ಕರಿಸಿರುವ ಡಾ|| ಎ. ವೆಂಕಟರಮಣಯ್ಯನವರು ಇದರ ಕಾಲ ಕ್ರಿ. ಶ. ೧೯ ನೆಯ ಶತಮಾನದ ಪೂರ್ವಾರ್ಧವಿರಬಹುದು ಎಂದು ಹೇಳುತ್ತಾರೆ.[1]

> "ಆನೆಗೊಂದಿಯಲ್ಲಿ ವಸವಲ್ಲಿ ಎಂಬ ದುರ್ಗವಿದೆ. ಅದರ ಗ್ರಾಮದೇವತೆ ಕಂಪಿಲಿ ಗಂಗಾವತಿ. ಆ ದುರ್ಗವನ್ನು ವೀರಕುಂಭಿಣಿ ರಾಜನು ಆಳುತ್ತಿದ್ದನು. ಆತನ ಹೆಂಡತಿ ಅರಿಯಾಲದೇವಿ. ಮಂತ್ರಿ ಅಭೋಜ ಪಂತುಲು. ಆತನ ಸಭೆಯಲ್ಲಿ ಶೂರರೆನಿಸಿದ್ದ ನಾಲ್ಕು ಮಂದಿ ಸರದಾರರಿದ್ದರು. ಅರಿಯಾಲದೇವಿಗೆ ಬಹಳ ದಿನಗಳಾದರೂ ಮಕ್ಕಳಾಗಲಿಲ್ಲ. ಆಕೆ ರಾಜನ ಸಮ್ಮತಿ ಪಡೆದು ಶ್ರೀರಾಮರ ಬೆಟ್ಟಕ್ಕೆ ಹೋಗಿ ತಪಸ್ಸು ಮಾಡಿದಳು. ತಾನು ಹೋಗುವಾಗ ತನ್ನ ತವರು ಮನೆಯವರು ತನಗಾಗಿ ಕೊಟ್ಟಿದ್ದ ಸಂಗ ಅಥವಾ ನೀಲವೇಣಿ ಎಂಬ ದಾಸಿಯನ್ನು ಕರೆದೊಯ್ಯಲಿಲ್ಲ. ಆಕೆಗೆ ಬಹಳ ದುಃಖವಾಯಿತು. ಅರಿಯಾಲದೇವಿ ತಪಸ್ಸು ಮಾಡಲು ಶ್ರೀರಾಮರು ಪ್ರತ್ಯಕ್ಷರಾಗಿ, ಒಂದು ಬಾಳೆಯ ಹಣ್ಣನ್ನು ಕೊಟ್ಟರು. ಮಹಾರಾಣಿ ಅದನ್ನು ಶುಭಮುಹೂರ್ತದಲ್ಲಿ ತಿಂದು, ಸಿಪ್ಪೆಯನ್ನು ಅಲ್ಲಿಯೇ ಬಿಸುಟಳು. ಅದನ್ನು ನೀಲವೇಣಿ ತಿಂದಳು. ಆ ಪರಿಣಾಮವಾಗಿ ಒಡತಿಯೂ ದಾಸಿಯೂ ಏಕಕಾಲದಲ್ಲಿ ಗರ್ಭವತಿಯರಾದರು. ಅರಿಯಾಲದೇವಿಗೆ ಒಬ್ಬ ಕುಮಾರನು ಜನಿಸಿದ. ವೀರಕುಂಭಿಣಿ ರಾಜನು ಬ್ರಾಹ್ಮಣರನ್ನು ಕರೆಸಿ, ಆತನ ಯೋಗವನ್ನು ವಿಚಾರಿಸಲು, ಅವರು, ಕುಮಾರನು ಶುಭಮುಹೂರ್ತದಲ್ಲಿ ಹುಟ್ಟಿರುವನೆಂದು ತಿಳಿಸಿದರು. ಮಗುವಿಗೆ ಕುಮಾರರಾಮನೆಂದು ಹೆಸರಿಟ್ಟರು. ಅದೇ ಸಮಯದಲ್ಲಿ ಕಚೇರಿಯಲ್ಲಿದ್ದ ಸರದಾರರು ಪರಸ್ಪರ ಕಾದಾಡಿದರು. ಆ ಸಂದರ್ಭದಲ್ಲಿ ಅನೇಕರು ಹತರಾದರು. ರಾಜನಿಗೆ ಬ್ರಾಹ್ಮಣರು ಹೇಳಿದ ಜ್ಯೋತಿಷ್ಯದಲ್ಲಿ ಅಪನಂಬಿಕೆಯುಂಟಾಯಿತು. ಆಗ, ಅವರನ್ನು ಮತ್ತೆ ಕರೆಸಿ ಕೇಳಲು, ಎಂದಿನಂತೆಯೇ ಅವರು

---

1. ಉಪೋದ್ಘಾತಮು, ಪುಟ ii.

ರಾಜಕುಮಾರನ ಲಕ್ಷಣಗಳಲ್ಲಿ ಯಾವ ದೋಷವೂ ಇಲ್ಲವೆಂದೂ, ಆದರೆ, ಅದೇ ಗಳಿಗೆಯಲ್ಲಿ ಜನಿಸಿದ ಬೇರೆ ಯಾರೋ ದುರ್ಮಾರ್ಗಿಯಿಂದ ಹೀಗಾಗಿದೆಯೆಂದೂ ತಿಳಿಸಿದರು. ಅನಂತರ ರಾಜನು ಹುಡುಕಿಸಿ ನೋಡಲಾಗಿ, ದಾಸಿಯೂ ಒಬ್ಬ ಮಗನನ್ನು ಹೆತ್ತಿರುವುದು ಗೊತ್ತಾಯಿತು. ಮಹಾರಾಜನು ಆ ಮಗುವನ್ನು ಕೊಲ್ಲಬೇಕೆಂದು ಆಜ್ಞೆ ಮಾಡಿದನು. ದಾಸಿ ದಿಕ್ಕುಗೆಟ್ಟು, ಬ್ರಾಹ್ಮಣರನ್ನು ಕಂಡು ತನ್ನ ಮಗನನ್ನು ಉಳಿಸಿಕೊಡಬೇಕೆಂದು ಬೇಡಿದಳು. ಆಗ ಅವರು ಮಹಾರಾಜನನ್ನು ಕುರಿತು "ಮಹಾಪ್ರಭು, ಹಸುಗೂಸನ್ನು ಕೊಲ್ಲುವುದು ಯುಕ್ತವಲ್ಲ, ಇವನು ನಾಲ್ಕು ವರ್ಷಗಳು ತಂದೆ ತಾಯಿಯರ ಪೋಷಣೆಯಲ್ಲಿಯೂ ಅನಂತರ ನಾಲ್ಕು ವರ್ಷಗಳು ಗುರುಗಳ ಆಶ್ರಯದಲ್ಲಿಯೂ ಆ ತರುವಾಯ ನಾಲ್ಕು ವರ್ಷಗಳು ಜಟ್ಟಿಗಳ ಆಶ್ರಯದಲ್ಲಿಯೂ ಬೆಳೆಯಲಿ. ಅಂದಿಗೆ ಅವನ ದುರ್ಗುಣಗಳೆಲ್ಲ ಹೋದೀತು. ಈಗ ಮಗುವನ್ನು ಕೊಂದರೆ ಶಿಶುಹತ್ಯೆ ತಟ್ಟುತ್ತದೆ" ಎಂದು ಹೇಳಿ, ಒದಗಿದ್ದ ತೊಂದರೆಯನ್ನು ಪರಿಹರಿಸಿದರು. ಮಹಾರಾಜನು ಆ ಇಬ್ಬರು ಮಕ್ಕಳೂ ಒಂದೇ ತೊಟ್ಟಿಲಿನಲ್ಲಿ ಬೆಳೆಯುವಂತೆ ವ್ಯವಸ್ಥೆ ಮಾಡಿದನು. ಆ ಹುಡುಗನಿಗೆ ಹೋಲಿಕೆರಾಮನೆಂದು ಹೆಸರಿಟ್ಟರು.

ಕುಮಾರರಾಮನೂ ಹೋಲಿಕೆರಾಮನೂ ಅಣ್ಣತಮ್ಮಂದಿರಂತೆಯೇ ಬೆಳೆದರು. ನಾಲ್ಕು ವರ್ಷಗಳು ತುಂಬಿದುವು. ಅಣ್ಣತಮ್ಮಂದಿರು ಊರಿನ ಹುಡುಗರೊಂದಿಗೆ ಆಟವಾಡುತ್ತಿದ್ದರು. ಹೋಲಿಕೆರಾಮನ ಹಾವಳಿ ಹೇಳತೀರದು. ಊರಿನ ಮಕ್ಕಳನ್ನು ಹಿಂಸಿಸಿ, ಕೊಂದುಬಿಡುತ್ತಿದ್ದನು. ಆಗ ರಾಜನು ಅಡವಿಯಲ್ಲಿ ಒಂದು ಶಾಲೆಯನ್ನು ಕಟ್ಟಿಸಿ, ಅಲ್ಲಿ ಅವರಿಗೆ ಪಾಠ ಹೇಳಲು ಒಬ್ಬ ಬ್ರಾಹ್ಮಣನನ್ನು ನೇಮಕಮಾಡಿದನು. ಅವರಿಬ್ಬರು ಹನ್ನೆರಡು ವರ್ಷಗಳಲ್ಲಿ ಕಲಿಯುವ ವಿದ್ಯೆಯನ್ನು ಕೇವಲ ಹನ್ನೆರಡು ಗಳಿಗೆಗಳಲ್ಲಿಯೇ ಕಲಿಯುತ್ತಿದ್ದರು. ಆದರೆ ಬ್ರಾಹ್ಮಣನ ಜೀವನಾಧಾರವನ್ನು ತಪ್ಪಿಸಲು ಇಚ್ಛಿಸದೆ ಕಲಿತಿದ್ದನ್ನೇ ಇನ್ನೂ ಆರು ತಿಂಗಳು ಕಲಿಯುತ್ತ ಕಾಲ ಕಳೆಯಲಾರಂಭಿಸಿದರು. ಒಂದು ದಿನ, ಹೋಲಿಕೆರಾಮನು ಬ್ರಾಹ್ಮಣನ ಮಡಿಚೀಲವನ್ನೇ ಕದ್ದನು. ಅದರಲ್ಲಿ ಆತ ವಿಭೂತಿ, ಜಪಮಾಲಿಕೆ ಮತ್ತು ಅಮೂಲ್ಯವಾದ ಒಂದು ಪುಸ್ತಕವನ್ನು ಇಟ್ಟುಕೊಂಡಿದ್ದನು. ಎಲ್ಲಕ್ಕಿಂತಲೂ ಪುಸ್ತಕ ಹೋದದ್ದು ಬ್ರಾಹ್ಮಣನಿಗೆ ದೊಡ್ಡ ನಷ್ಟವಾಗಿತ್ತು. ಅನಂತರ, ಆ ಬಾಲಕರನ್ನು ರಾಜನಿಗೆ ಒಪ್ಪಿಸಿ, ತನ್ನ ಸಂಭಾವನೆಯನ್ನು ತೆಗೆದುಕೊಂಡು ಮತ್ತೆ ತನ್ನ ಅಮೂಲ್ಯವಾದ ಇತರ ವಸ್ತುಗಳನ್ನು ಪಡೆಯಲು ದ್ವೀಪಾಂತರಕ್ಕೆ ಹೊರಟನು.

ಎಂದಿನಂತೆಯೇ ಹೋಲಿಕೆರಾಮನು ಹುಡುಗರನ್ನು ಪೀಡಿಸಲು ತೊಡಗಿದನು. ಮಹಾರಾಜನು ಕೆಲವು ಜಟ್ಟಿಗಳನ್ನು ಕರೆದು, ಅವರಿಬ್ಬರಿಗೂ ಮಲ್ಲವಿದ್ಯೆಯನ್ನು ಕಲಿಸಲು ಅಡವಿಯಲ್ಲಿದ್ದ ಶಾಲೆಯನ್ನೇ ಗರಡಿಯನ್ನಾಗಿ ಪರಿವರ್ತಿಸಿ ಕಳುಹಿಸಿದನು. ಬಾಲಕರು ಅಂಗಸಾಧನೆಯನ್ನು ಕಲಿಯತೊಡಗಿದರು. ಹನ್ನೆರಡು ವರ್ಷಗಳಲ್ಲಿ ಕಲಿಯುವ ವಿದ್ಯೆಯನ್ನು ಹನ್ನೆರಡು ಗಳಿಗೆಗಳಲ್ಲಿಯೇ ಕಲಿತರು. ಆ ಜಟ್ಟಿಗಳ ಸಲುವಾಗಿ ಇನ್ನೂ ಆರು ತಿಂಗಳು ಕಲಿತಿದ್ದನ್ನೇ ಕಲಿಯುತ್ತಿದ್ದರು. ಒಂದು ದಿನ ಮಧ್ಯಾಹ್ನ ಕುಮಾರರಾಮನು ಮಲಗಿರಲು, ಹೋಲಿಕೆರಾಮನು ಆ ಜಟ್ಟಿಗಳನ್ನು ಕರೆದು ಇಪ್ಪತ್ತುನಾಲ್ಕು ಮೊಳದ ಅಳತೆಗೋಲಿನಿಂದ ಅವರೆಲ್ಲರನ್ನೂ ಹೊಡೆದು ಸಂಹರಿಸಿದನು. ಅನಂತರ ಏನೂ ತಿಳಿಯದವನಂತೆ ಕುಮಾರರಾಮನ ಪಕ್ಕದಲ್ಲಿ ಮಲಗಿಕೊಂಡು ಕಳ್ಳಗೊರಕೆಯನ್ನು ಹಾಕುತ್ತಿದ್ದನು. ಕುಮಾರರಾಮನು ಎದ್ದು, ಸತ್ತು ಬಿದ್ದಿದ್ದ ಜಟ್ಟಿಗಳನ್ನು ಕಂಡು, ಹೋಲಿಕೆರಾಮನನ್ನು ಕೇಳಿದನು. ಆತನು ತನಗೇನೂ

ತಿಳಿಯದೆಂದು ಉತ್ತರವಿತ್ತನು. ಆಗ ಕುಮಾರರಾಮನು ಪಾತಾಳಗಂಗೆಯಿಂದ ನೀರು ತಂದು, ಅವರ ಮೇಲೆ ಪ್ರೋಕ್ಷಿಸಲು, ಎಲ್ಲರೂ ಬದುಕಿದರು. ಆಗ ಹೋಲಿಕೆರಾಮನು ತಾನು ಮಾಡಿದ್ದನ್ನು ಒಪ್ಪಿಕೊಂಡನು. ಈ ಮಧ್ಯೆ, ಹೋಲಿಕೆರಾಮನು ತನ್ನ ಗುರುಗಳ ಪುಸ್ತಕವನ್ನು ಒಂದು ದಿನ ಬಿಚ್ಚಿ ನೋಡಲು, ಆದರಲ್ಲಿ ಒಂದು ಸೋಜಿಗವು ಅವನಿಗೆ ತೋರಿಬಂದಿತು. ವೀರಕುಂಭಿಣಿ ಮಹಾರಾಜನು ಕಂಪಿಲಿ ಗಂಗಾವತಿ ಪಟ್ಟಣಕ್ಕೆ ಹೋಗಿ, ಅಲ್ಲಿ ಮದ್ದಳೆ ವೀರಸಾನಿಯ ಮಗಳು ಮಲಸಾನಿಯನ್ನು ಕಂಡು ಮೋಹಿಸಿ, ಅವಳನ್ನು ಕರೆತಂದು ವಸವಲ್ಲಿ ದುರ್ಗದಲ್ಲಿಟ್ಟು ಮದುವೆಯಾಗಲು ಶುಭಮುಹೂರ್ತವನ್ನು ಎದುರುನೋಡುತ್ತಿರುವುದು ತಿಳಿದುಬಂದಿತು. ಮತ್ತೊಂದು ದಿನ, ಜಟ್ಟಿಗಳ ಕಾದಾಟದ ಘಟನೆಯ ಬಳಿಕ, ಕುಮಾರರಾಮನು ನಿದ್ರಿಸುತ್ತಿದ್ದ ಸಮಯವನ್ನು ನೋಡಿಕೊಂಡು ಹೋಲಿಕೆರಾಮನು ಊರಿನೆಡೆಗೆ ಬಂದು, ರಾತ್ರಿಯಲ್ಲಿ ಗುಗ್ಗಿಳ್ಳ ಪೋಲಿಸೆಟ್ಟಿಯ ಮನೆಗೆ ನುಗ್ಗಿ, ಬೇಕುಬೇಕಾದ ಸಾಮಾನುಗಳನ್ನು ಕದ್ದು, ಎಲ್ಲವನ್ನೂ ಮಲಸಾನಿಯ ಮುಂದೆ ಸುರಿದು, ತನ್ನನ್ನು ಮೆಚ್ಚುವಂತೆ ಕೇಳಿಕೊಂಡನು. ಮಲಸಾನಿ ಮಾಯಗಾತಿ. ಹೋಲಿಕೆರಾಮನ ಆಸೆಯನ್ನು ನೆರವೇರಿಸುವಳಂತೆ ನಟಿಸುತ್ತ, ರಾತ್ರಿಯನ್ನೆಲ್ಲ ಕಳೆದಳು. ಹೋಲಿಕೆರಾಮನು ಮರುದಿನ ಬರುವುದಾಗಿ ಹೇಳಿ ಹೊರಟುಬಂದನು.

ಪುನಃ, ಮಾರನೆಯ ದಿನ ಮಧ್ಯಾಹ್ನ, ಕುಮಾರರಾಮನ ಮುಂದೆ, ತನ್ನ ತಾಯಿಯನ್ನು ನೋಡಬೇಕೆಂದು ನೆವಹೇಳಿ, ಹೋಲಿಕೆರಾಮನು ಊರಿಗೆ ಹೊರಟುಬಂದನು. ಅಲ್ಲಿ, ಒಂದು ಬಾವಿಯ ಬಳಿ ಅವಿತುಕೊಂಡಿದ್ದನು. ಆಗ, ನೀರಿಗಾಗಿ ಬಂದಿದ್ದ ದಾಸಿಯರು, ಹಿಂದಿನ ರಾತ್ರಿ ಗುಗ್ಗಿಳ್ಳ ಪೋಲಿಸೆಟ್ಟಿಯ ಮನೆಯಲ್ಲಿ ಕಳ್ಳತನವಾಯಿತೆಂದೂ, ಆ ಕಳ್ಳನನ್ನು ಹಿಡಿಯಲು ರಾಜನ ಸರದಾರರು ತಾವೇ ಕಾವಲು ಕಾಯುತ್ತಿರುವರೆಂದೂ ಮಾತನಾಡಿಕೊಳ್ಳುತ್ತಿರುವುದು ಕೇಳಿಬಂದಿತು. ಕತ್ತಲಾಗಿ ಪಟ್ಟಣವು ನಿಶ್ಶಬ್ದವಾಗಲು, ಹೋಲಿಕೆರಾಮನು ಅರಮನೆಯನ್ನೇ ಪ್ರವೇಶಿಸಿ, ಮಲಗಿ ನಿದ್ರಿಸುತ್ತಿದ್ದ ಮಹಾರಾಣಿಯ ಒಡವೆಗಳನ್ನೂ, ಮಹಾರಾಜನ ವಸ್ತ್ರವನ್ನೂ ಅಪಹರಿಸಿಕೊಂಡು ಮಲಸಾನಿಯ ಮನೆಗೆ ಬಂದನು. ಮಾರನೆಯ ದಿನ ಹೋಲಿಕೆರಾಮನು ಮತ್ತೆ ಬರುವೆನೆಂದು ಹೆದರಿ ಆಕೆ, ಮಹಲಿನ ಹಿತ್ತಲಿನಲ್ಲಿ ಕತ್ತಲೆಯಲ್ಲಿ ತಲೆಮರೆಸಿಕೊಂಡಿದ್ದಳು. ಹೋಲಿಕೆರಾಮನು ಹೇಗೋ ಪತ್ತೆಮಾಡಿ, ಆಕೆಯ ಬಳಿಗೆ ಬಂದು ತಾನು ತಂದಿದ್ದ ಆಭರಣಗಳನ್ನು ಅವಳ ಮುಂದೆ ಸುರಿದನು. ಆಕೆಗೆ ಭಯವಾಯಿತು. ಅವು ಪಟ್ಟಮಹಿಷಿಯ ಆಭರಣಗಳಾಗಿದ್ದುವು. ರಾಜನಿಗೆ ತಿಳಿದರೆ ತನ್ನ ತಲೆಯೇ ಹೋದೀತೆಂದು ಭಯಪಟ್ಟು ಆತ್ಮರಕ್ಷಣೆಯ ಮಾರ್ಗವನ್ನು ಆಲೋಚಿಸಿದಳು. ತನ್ನ ದಾಸಿಯೊಬ್ಬಳನ್ನು ಕರೆದು ಗುಟ್ಟಾಗಿ ಅರಿಯಾಲದೇವಿಗೆ ಹೇಳಿಕಳುಹಿಸಿದಳು. ಸೆಟ್ಟಿಯ ಮನೆಯಲ್ಲಿ ಕದ್ದ ಕಳ್ಳನು ತನ್ನ ಮನೆಗೆ ಬಂದಿರುವನೆಂದೂ, ಅವನನ್ನು ಹಿಡಿಯಲು ಅದೇ ತಕ್ಕ ಸಮಯವೆಂದೂ ತಿಳಿಸುವಂತೆ ಹೇಳಿದ್ದಳು. ದಾದಿಯರು ಅರಿಯಾಲದೇವಿಯನ್ನು ಎಬ್ಬಿಸಿ ಹೇಳಲು, ಆಗ ಆಕೆ ತನ್ನ ಮೈಮೇಲಿನ ಆಭರಣಗಳೂ, ಮಹಾರಾಜನ ವಸ್ತ್ರಾದಿಗಳೂ ಅಪಹೃತವಾಗಿರುವುದನ್ನು ಕಂಡಳು. ರಾಜನನ್ನೂ ಎಬ್ಬಿಸಿ ತಿಳಿಸಿದಳು. ಕೂಡಲೆ, ರಾಜನು ಭಟರನ್ನು ಕರೆದು ಆಜ್ಞಾಪಿಸಲು, ಅವರು ಮಲಸಾನಿಯ ಮನೆಯನ್ನೇ ಮುತ್ತಿದರು. ಹೋಲಿಕೆರಾಮನು ಎಲ್ಲರನ್ನೂ ಸದೆಬಡಿದು, ಕದ್ದು ತಂದಿದ್ದ ಪದಾರ್ಥವನ್ನು ಗಂಟುಕಟ್ಟಿ, ಅದರ ಮೇಲೆ ಮಲಸಾನಿಯನ್ನು ಕೂಡಿಸಿಕೊಂಡು ಹೊರಟನು. ರಾಜನು ಹೋಲಿಕೆರಾಮನನ್ನು ಹಿಡಿದು ತಂದವರಿಗೆ ಮೂರು ಗ್ರಾಮಗಳನ್ನು ಜಹಗೀರು ಕೊಡುವುದಾಗಿ ಪ್ರಕಟಿಸಿದನು. ಆಗ ಜಟ್ಟಿಗಳು ಬಂದು, ಚಾತುರ್ಯ

ದಿಂದ ಅವನನ್ನು ಹಿಡಿದರು. ರಾಜನು ಅವನನ್ನು ವಧಿಸುವಂತೆ ಆಜ್ಞಾಪಿಸಿದನು. ಕಟುಕರು ಕುಮಾರರಾಮುನ ಸಮ್ಮುಖದಲ್ಲಿ, ಅರಣ್ಯದಲ್ಲಿ ಕಡಿಯುವುದಾಗಿ ಅಲ್ಲಿಗೆ ಆತನನ್ನು ಕರೆದೊಯ್ದರು. ಅಲ್ಲಿ ಕುಮಾರರಾಮುನಿಗೆ ಹೋಲಿಕೆರಾಮುನ ಮೇಲೆ ಕರುಣೆಯುಂಟಾಗಿ, ಅವನನ್ನು ಬಚ್ಚಿಟ್ಟು ಅವನಿಗೆ ತಕ್ಕ ಏರ್ಪಾಡುಗಳನ್ನು ಮಾಡಿದನು. ಅನಂತರ, ಅಡವಿಯಲ್ಲಿದ್ದ ಮೇಕೆಯೊಂದನ್ನು ಕೊಂದು, ಅದರ ಕಣ್ಣಿನ ರಕ್ತವನ್ನೇ ಹೋಲಿಕೆರಾಮುನ ರಕ್ತವೆಂದು ರಾಜನಿಗೆ ತೋರಿಸುವಂತೆ ಕಟುಕರಿಗೆ ಹೇಳಿದನು. ಅವರು ಹಾಗೆಯೇ ಮಾಡಿದರು. ಮಹಾರಾಜನು ಸಂತೋಷಗೊಂಡು, ಅವರಿಗೆ ಮೂರು ಗ್ರಾಮಗಳನ್ನು ಬಳುವಳಿಯಾಗಿ ಕೊಟ್ಟನು.

ಹೋಲಿಕೆರಾಮುನ ಮರಣಾನಂತರ, ಕುಮಾರರಾಮುನು ಕಾಡಿನಲ್ಲಿರಬೇಕಾದ ಅಗತ್ಯವಿಲ್ಲವೆಂದು ವೀರಕುಂಭಿಣಿ ಮಹಾರಾಜನು ಭಾವಿಸಿ, ಅವನನ್ನು ಊರಿಗೆ ಬರುವಂತೆ ಹೇಳಿ ಕಳುಹಿಸಿದನು. ಆತನು ಬರುತ್ತಿರಬೇಕಾದರೆ, ವಸವಲ್ಲಿದುರ್ಗದ ಬಳಿ ಮದಸಿದ ಆನೆಯೊಂದು ಅಡ್ಡಲಾಯಿತು. ಅದನ್ನು ಕುಮಾರರಾಮುನು ಕೊಂದನು. ಮಾವಟಿಗನು ಆ ಸಂಗತಿಯನ್ನು ರಾಜನಿಗೆ ತಿಳಿಸಲು ಅವನು ಕುಪಿತನಾದನು. ಕುಮಾರರಾಮುನು ಅಸಮಾಧಾನಗೊಂಡು, ರಾಜನ ಮುಖವನ್ನು ನೋಡುವುದಿಲ್ಲವೆಂದು ನುಡಿದು ದೇಶಾಂತರ ಹೊರಟನು. ಅಲ್ಲಿಂದ ಹೊರಟವನೇ ಎರ್ರಭೂಪತಿರಾಜನ ಪಟ್ಟಣಕ್ಕೆ ಹೋಗಿ, ಅವನನ್ನು ಜಯಿಸಿ, ಆತನು ಡಿಳ್ಳಿಗೆ ಬದಲು ವಸವಲ್ಲಿದುರ್ಗಕ್ಕೆ ಕಂದಾಯ ಸಲ್ಲಿಸುವಂತೆ ಮಾಡಿದನು. ಅನಂತರ, ಸುಲ್ತಾನ್ ಭೂಪತಿ ಸಿಂಗು ರಾಜಧಾನಿಗೆ ಹೋಗಿ, ಅವನನ್ನೂ ಗೆದ್ದು, ವಸವಲ್ಲಿದುರ್ಗಕ್ಕೆ ಕಂದಾಯ ಸಲ್ಲಿಸುವಂತೆ ಮಾಡಿದನು. ತರುವಾಯ ಓರುಗಲ್ಲಿಗೆ ಹೋದನು. ಪ್ರತಾಪರುದ್ರನು ಕುಮಾರರಾಮುನನ್ನು ಕಂಡು ಸತ್ಕರಿಸಲು ಅವನೂ ಸಹ ವಸವಲ್ಲಿದುರ್ಗಕ್ಕೆ ಕಂದಾಯ ತೆರುವಂತೆ ನಿಯಮಿಸಿದನು. ಬಳಿಕ, ಮೂವರು ರಾಜರನ್ನೂ ಕೂಡಿಕೊಂಡು ವಸವಲ್ಲಿದುರ್ಗದ ಕಡೆಗೆ ಹೊರಟನು. ಸೈನಿಕರು ಮುಂದಾಗಿ ತೆರಳಿ, ಊರಿನ ಸುತ್ತಲೂ ಬೀಡುಬಿಟ್ಟಿರಲು, ವೀರಕುಂಭಿಣಿ ರಾಜನಿಗೆ ಬಹಳ ಭಯವಾಯಿತು. ಅಪಾರವಾದ ಪಾಳೆಯವನ್ನು ಕಂಡು ಬೆದರಿದನು. ಹೋಲಿಕರಾಮುನೋ ಸತ್ತಿದ್ದಾನೆ. ಕುಮಾರರಾಮುನು ದೇಶಾಂತರ ಹೋಗಿದ್ದಾನೆ. ಶತ್ರುಗಳನ್ನು ಹಿಮ್ಮೆಟ್ಟಿಸುವುದು ಹೇಗೆಂಬುದಾಗಿ ಚಿಂತಿಸಿದನು. ಆಗ, ಹೋಲಿಕೆರಾಮುನನ್ನು ಕರೆದೊಯ್ದ ಜಟ್ಟಿಗಳು ರಾಜನ ಬಳಿಗೆ ಬಂದು, ತಾವು ಸಂಜೀವಿನಿ ಮಂತ್ರವನ್ನು ಬಲ್ಲವರೆಂದೂ, ಬೇಕಿದ್ದಲ್ಲಿ ಹೋಲಿಕೆರಾಮುನನ್ನು ಬದುಕಿಸಿ ತರುವೆನೆಂದೂ ತಿಳಿಸಿದರು. ರಾಜನು ಸಂತುಷ್ಟನಾಗಿ, ಹಾಗೇನಾದರೂ ಅವರು ಹೋಲಿಕೆರಾಮುನನ್ನು ಕರೆತಂದರೆ, ಅವನಿಗೆ ರಾಜ್ಯಾಧಿಕಾರವನ್ನು ಒಪ್ಪಿಸುವುದಾಗಿ ಹೇಳಿದನು.

ಜಟ್ಟಿಗಳು ಗರಡಿಗೆ ಬಂದು, ಹೋಲಿಕೆರಾಮುನಿಗೆ ಎಲ್ಲವನ್ನೂ ವಿಶದಪಡಿಸಿ, ಅವನನ್ನು ವಸವಲ್ಲಿದುರ್ಗಕ್ಕೆ ಕರೆತಂದರು. ವೀರಕುಂಭಿಣಿರಾಜನು ಅವನಿಗೆ ರಾಜ್ಯವನ್ನು ಒಪ್ಪಿಸಿಕೊಟ್ಟು, ಊರನ್ನು ಶತ್ರುಗಳ ಕೈಯಿಂದ ರಕ್ಷಿಸಬೇಕೆಂದು ಕೋರಿದನು. ಹೋಲಿಕೆರಾಮುನು ಮಾರನೆಯ ದಿನ, ಬೀಡುಬಿಟ್ಟಿದ್ದ ಸೈನ್ಯದ ಮೇಲೆ ಬೀಳಲು, ಅವರು ಭಯಚಕಿತರಾದರು. ಯುದ್ಧಕ್ಕಾಗಿ ಬಂದಿರಲಿಲ್ಲವಾದ್ದರಿಂದ, ಅವರು ಕೂಡಲೆ ಕುಮಾರರಾಮುನಿಗೆ ಸುದ್ದಿಯನ್ನು ತಿಳಿಸಿದರು. ರಾಮುನು ತನ್ನ ಮುದ್ರೆಯುಂಗರವನ್ನು ಹೋಲಿಕೆರಾಮುನಿಗೆ ಕಳುಹಿಸಿಕೊಟ್ಟನು. ಅದನ್ನು ಕಂಡೊಡನೆಯೇ ಹೋಲಿಕೆರಾಮುನು ಕುದುರೆಯಿಂದಿಳಿದು ಕುಮಾರರಾಮುನಲ್ಲಿಗೆ ಹೋಗಿ ಅವನ ಪಾದಗಳ ಮೇಲೆ ಬಿದ್ದನು. ಕುಮಾರರಾಮುನು, ಮೂವರು ರಾಜರೂ ವೀರ ಕುಂಭಿಣಿ

ರಾಯನಿಗೆ ಕಂದಾಯವನ್ನು ಸಲ್ಲಿಸಲು ಬಂದಿದ್ದಾರೆಂದು ತಿಳಿಸಿದನು. ಮಹಾರಾಜನು ಅವರನ್ನು ಬರಮಾಡಿಕೊಂಡು ಸತ್ಕರಿಸಿ ಬೀಳ್ಕೊಟ್ಟನು. ಹುಡುಗರಿಗೆ ವಿವಾಹ ಪ್ರಯತ್ನವನ್ನು ಮಾಡತೊಡಗಿದನು.

ಎರ್ರಭೂಪತಿಯಿಂದ ಕಪ್ಪವು ಬಾರದಿರಲು, ಡಿಳ್ಳಿಯ ಸುಲ್ತಾನನು ಕುಪಿತನಾದನು. ವಸವಲ್ಲಿದುರ್ಗಕ್ಕೆ ತಾನು ಕಂದಾಯವನ್ನು ಸಲ್ಲಿಸಿರುವುದಾಗಿ ಹೇಳಿ, ಸುಲ್ತಾನನ ಭಟರಿಗೆ ಭತ್ಯವನ್ನೂ ಕೊಡದೆ ಎರ್ರಭೂಪತಿ ಅವರನ್ನು ಅಟ್ಟಿದನು. ಕ್ರೋಧಪರವಶನಾದ ಸುಲ್ತಾನನು, ಹನ್ನೆರಡು ಸಾವಿರ ಯೋಧರನ್ನು ಕೊಟ್ಟು ಹಸನಲ್ಲಿಖಾನನ್ನು ವಸವಲ್ಲಿದುರ್ಗವನ್ನು ಮುತ್ತಿ, ತನ್ನ ಜವಿಾನ್ದಾರರನ್ನು ಹಿಡಿದು ತರುವಂತೆ ನೇಮಿಸಿದನು. ಹಸನಲ್ಲಿ, ಪಾದಷಹನ ಆಜ್ಞೆಯಂತೆಯೇ ದಂಡೆತ್ತಿ ಬಂದು ವಸವಲ್ಲಿಯನ್ನು ಮುತ್ತಿದನು. ಆದರೆ ಕುಮಾರರಾಮನ ದಾಳಿಯನ್ನು ತಡೆಯಲಾರದೆ, ಹಸನಲ್ಲಿಖಾನನು ಡಿಳ್ಳಿಗೆ ಹಿಂತಿರುಗಿದನು. ಕುಮಾರರಾಮನೂ ಹೋಲಿಕೆರಾಮನೂ ಅವನನ್ನು ಡಿಳ್ಳಿಯತನಕ ಅಟ್ಟಿಕೊಂಡು ಹೋದರು. ಅನಂತರ ಎರ್ರಭೂಪತಿಯ ಪಟ್ಟಣದ ಉತ್ತರ ಭಾಗದಲ್ಲಿದ್ದ ಒಂದು ವನದಲ್ಲಿ ಕೆರೆಯ ಬಳಿ ತಂಗಿ, ಸ್ನಾನ ಮಾಡಿ, ಭೋಜನಮಾಡತೊಡಗಿದರು. ಆಗ ಸೀತಾದೇವಿ ಶ್ರೀರಾಮನನ್ನು ಕುರಿತು ಆ ಇಬ್ಬರು ಹಾಗೇಕೆ ಜನಕ್ಷಯ ಮಾಡುತ್ತಿದ್ದಾರೆಂದು ಕೇಳಿದಳು. ಆಗ ಶ್ರೀರಾಮನು ಸದ್ಯದಲ್ಲಿಯೇ ಅವರನ್ನು ಕರೆತರಿಸುವುದಾಗಿ ಹೇಳಿ, ಆಂಜನೇಯನನ್ನು ನೇಮಿಸಿದನು.

ಅಪಮಾನಿತರಾದ ಮುಸಲ್ಮಾನರು, ಡಿಳ್ಳಿ ಕೋಟೆಯಿಂದ ಮತ್ತೆ ಹೊರಟು, ಹಸನಲ್ಲಿ, ಷುಖುರುಲ್ಲಾ ಖಾನರ ನೇತೃತ್ವದಲ್ಲಿ ಎರ್ರಭೂಪತಿಯ ಪಟ್ಟಣದ ಬಳಿ ಬೀಡುಬಿಟ್ಟಿದ್ದ ಕುಮಾರರಾಮ ಮತ್ತು ಹೋಲಿಕೆರಾಮರ ಮೇಲೆ ಬಿದ್ದರು. ಆ ಯುದ್ಧದಲ್ಲಿ ಅಣ್ಣತಮ್ಮಂದಿರಿಬ್ಬರೂ ಹತರಾದರು. ಅವರಿಬ್ಬರ ಜೀವಗಳೂ ಪುಷ್ಪಕ ವಿಮಾನದಲ್ಲಿ ಕೈಲಾಸದತ್ತ ಸಾಗಿದವು. ಪಾಚ್ಛಾವು ಅದನ್ನು ಕಂಡು, ಆಶ್ಚರ್ಯಪಟ್ಟು ಸಲಾಮು ಮಾಡಿದನು. ವೀರಕುಂಭಿಣಿ ಮಹಾರಾಜನನ್ನು ಬರಮಾಡಿಕೊಂಡು "ಮಹಾರಾಜ, ವಸವಲ್ಲಿ ಭೂಮಿಯನ್ನೆಲ್ಲ ನಿನಗೇ ಜಹಗೀರಾಗಿ ಕೊಟ್ಟಿರುತ್ತೇನೆ. ನೀನೇ ಆಳಿಕೊಂಡಿರು" ಎಂದನು. ವೀರಕುಂಭಿಣಿ ಮಹಾರಾಜನು ವಸವಲ್ಲಿ ದುರ್ಗಕ್ಕೆ ಬಂದು, ಮಕ್ಕಳಿಗೆ, ದಿನ, ವಾರಗಳನ್ನು ಮಾಡಿ, ದಾನ ಧರ್ಮಗಳನ್ನು ನೆರವೇರಿಸಿ, ಸುಖವಾಗಿ ರಾಜ್ಯಭಾರ ಮಾಡಿಕೊಂಡಿದ್ದನು."

## "ಕುಮಾರರಾಮುನಿ ಕಥೆ"ಯ ಮುಖ್ಯಾಂಶಗಳು

(i) ಆನೆಗೊಂದಿಯಲ್ಲಿನ ವಸವಲ್ಲಿ ಎಂಬ ದುರ್ಗದಲ್ಲಿ ವೀರ ಕುಂಭಿಣಿರಾಯನು ರಾಜ್ಯವಾಳುತ್ತಿರುತ್ತಾನೆ. ಮಹಾರಾಣಿ ಅರಿಯಾಲದೇವಿಯ ತಪಃಪ್ರಭಾವದಿಂದ ಆತನಿಗೆ ಕುಮಾರರಾಮನೆಂಬ ಮಗನೂ, ಆಕೆಯ ದಾಸಿಗೆ ಹೋಲಿಕೆರಾಮನೆಂಬ ಮಗನೂ ಹುಟ್ಟುತ್ತಾರೆ. ಈತನ ಮಂತ್ರಿಯ ಹೆಸರು ಅಭೋಜು ಪಂತಲು.

(ii) ಹೋಲಿಕೆರಾಮನು ಬಾಲ್ಯದಲ್ಲಿ ಬಹಳ ತುಂಟನಾಗಿದ್ದ. ಆದ್ದರಿಂದ ರಾಜನು ಇಬ್ಬರು ಮಕ್ಕಳನ್ನೂ ಅಡವಿಯಲ್ಲಿಟ್ಟು ವಿದ್ಯಾಭ್ಯಾಸ ಮಾಡಿಸುವನು. ಆದರೂ ಹೋಲಿಕೆರಾಮನು ಶುದ್ಧ ಕಳ್ಳ. ಗುರುಗಳ ಕೈಚೀಲವನ್ನು ಕದಿಯುತ್ತಾನೆ. ಜಟ್ಟಿಗಳನ್ನು ಸಂಹರಿಸುತ್ತಾನೆ. ಗುಗ್ಗಿಳ್ಳ ಪೋಲಿಸೆಟ್ಟಿಯ ಮನೆಯ ಪದಾರ್ಥ

ಗಳನ್ನೂ, ಕಡೆಗೆ ಮಹಾರಾಣಿ ಮತ್ತು ಮಹಾರಾಜರ ವಸ್ತ್ರಾಭರಣಗಳನ್ನೂ ಅಪಹರಿಸುತ್ತಾನೆ. ವೇಶ್ಯಾ ಲಂಪಟ. ಮಲಸಾನಿಯ ಮನೆಯನ್ನು ಪ್ರವೇಶಿಸಿ, ಸಿಕ್ಕಿಬೀಳುತ್ತಾನೆ.

(iii) ಕುಮಾರರಾಮ ಮತ್ತು ಹೋಲಿಕೆರಾಮರ ಪ್ರೀತಿ ವಿಶ್ವಾಸಗಳು ಅತಿಶಯವಾದುವು. ರಾಜಾಜ್ಞೆಯ ಮೇರೆಗೆ ಶಿರಶ್ಛೇದನಕ್ಕೆ ಗುರಿಯಾಗುವವನು ಹೋಲಿಕೆರಾಮ. ಆದರೆ, ಅವನನ್ನು ಕುಮಾರ ರಾಮನು ಉಪಾಯದಿಂದ ಬಿಡಿಸುವನು. ತಲೆಮರೆಸಿಕೊಂಡು ಇರುವವನು ಹೋಲಿಕೆರಾಮ. ಸಕಾಲದಲ್ಲಿ ಬಿಡುಗಡೆಯಾಗುತ್ತದೆ.

(iv) ಕಾರಣಾಂತರದಿಂದ ಕುಮಾರರಾಮನಿಗೂ ಅವನ ತಂದೆಗೂ ಅಸಮಾಧಾನವಾಗುತ್ತದೆ. ಕುಮಾರರಾಮನು ನಿಷ್ಠುರದಿಂದ ತಂದೆಗೆ ಮುಖ ತೋರಿಸದೆ ದೇಶಾಂತರ ಹೋಗುತ್ತಾನೆ. ಆದರೆ, ಡಿಳ್ಳಿಯ ಸುಲ್ತಾನನಿಗೆ ಕಪ್ಪ ಕೊಡುತ್ತಿದ್ದವರೆಲ್ಲ ವೀರಕುಂಭಿಣಿ ರಾಜನಿಗೆ ಕಪ್ಪ ಕೊಡುವಂತೆ ಎಲ್ಲರನ್ನೂ ಗೆಲ್ಲುತ್ತಾನೆ. ಕಡೆಗೆ ಎರಡನೆಯ ಬಾರಿ ಸುಲ್ತಾನನ ಕಡೆಯವರೊಂದಿಗೆ ಆದ ಯುದ್ಧದಲ್ಲಿ ಈ ತರುಣ ವೀರರು ಹತರಾಗುತ್ತಾರೆ.

## ತೆಲುಗು ಕಥೆಯ ವೈಶಿಷ್ಟ್ಯ

(i) ಕಥಾದೃಷ್ಟಿಯಿಂದ ಮಾತ್ರವೇ ನೋಡಿದ್ದಲ್ಲಿ ಇದು ಹೋಲಿಕೆರಾಮನ ಪ್ರಾಶಸ್ತ್ಯಕ್ಕೆ ವಿಶೇಷ ಗಮನವಿತ್ತಿರುವಂತಿದೆ. ಆತನ ವರ್ತನೆಯನ್ನು ನೋಡಿದರೆ ಕನ್ನಡದ ಚೋರರಾಮನನ್ನು ಹೋಲುತ್ತಾನೆ. ಜನಜನಿತವಾದ ಕಥೆಗಳಲ್ಲಿ ಒಂದಾದ ನಾಲ್ಕನೆಯ ಕಥೆಯ ಹೋಲಿಕೆರಾಮನ ನೆನಪೂ ಆಗುವುದು. (ಎರಡೂ ತೆಲುಗಿನ ರಚನೆಗಳು.) ಡಾ|| ಎನ್. ವೆಂಕಟರಮಣಯ್ಯನವರು ಈತನನ್ನು ಕಾಟನಿಗೆ ಹೋಲಿಸಬಹುದು ಎನ್ನುತ್ತಾರೆ.[1] ಆದರೆ, ಅವರೇ ಗಮನಿಸಿರುವಂತೆ, ಈ ಸಾಮ್ಯ ಅಷ್ಟು ಸಮಂಜಸವಾಗುವುದಿಲ್ಲ. ಏಕೆಂದರೆ, ಕಾಟಣ್ಣ ಸ್ವಭಾವತಃ ಸಾಧು. ಕುಮಾರರಾಮನಂತೆಯೇ ಸದ್ಗುಣಿ ಮತ್ತು ಸಾಹಸಿ.

(ii) ತೆಲುಗು ಕಥೆಯಲ್ಲಿ ರತ್ನಾಜಿಯನ್ನು ಹೋಲುವ ಪಾತ್ರವನ್ನಾಗಲಿ, ಅವಳಿಗೆ ಸಂಬಂಧಿಸಿದಂತಹ ಪ್ರಸಂಗವನ್ನಾಗಲಿ ಕಾಣದಿರುವುದು ಗಮನಾರ್ಹವಾದ ಸಂಗತಿ.

(iii) ವೀರಕುಂಭಿಣಿ ರಾಜನು ತಂದು ಇಟ್ಟುಕೊಂಡಿದ್ದ ಗಣಿಕೆ ಮಲಸಾನಿಯ ಸೃಷ್ಟಿ ವಿಶಿಷ್ಟ ವಾಗಿದೆ. ಈಕೆಯನ್ನೇ ರತ್ನಾಜಿಯ ಪಾತ್ರದೊಂದಿಗೆ ಹೋಲಿಸಬಹುದು ಎಂದು ಡಾ|| ಎನ್. ವೆಂಕಟ ರಮಣಯ್ಯನವರು ಸೂಚಿಸಿರುತ್ತಾರೆ.[2] ಆದರೆ, ಇದನ್ನು ಒಪ್ಪುವಂತಿಲ್ಲ. ಈಕೆ ರಾಜನಲ್ಲಿ ಅನುರಕ್ತಳಾಗಿ ಬಂದಿದ್ದಾಳೆ. ಹೋಲಿಕೆರಾಮನನ್ನು ಹತ್ತಿರ ಸೇರಿಸದಿರುವುದೇ ಇದಕ್ಕೆ ಸಾಕ್ಷಿ. ಈಕೆ ಆತನನ್ನು ಹಿಡಿದು ಕೊಟ್ಟಿದ್ದೂ ಉಚಿತವೇ ಸರಿ.

(iv) ಕುಮಾರರಾಮನು ತನ್ನ ತಂದೆಗೆ ಕಪ್ಪ ಕೊಡುವಂತೆ ಇತರ ರಾಜರನ್ನು ಗೆಲ್ಲುವುದೂ, ಸುಲ್ತಾನನೊಂದಿಗೆ ಯುದ್ಧ ಮಾಡುವುದೂ ಕನ್ನಡದ ಕಥಾಭಾಗದೊಂದಿಗೆ ಹೋಲುತ್ತವೆ.

(v) ಜನಜನಿತವಾದ ಕಥೆಗಳಲ್ಲಿ ಕಂಡುಬರುವ ಇಮಾಂಬೂಬಿ ಇಲ್ಲವೇ ಲವಂಗಿಯನ್ನು ಹೋಲುವ ಪಾತ್ರವಾಗಲಿ, ಘಟನೆಯಾಗಲಿ ಇಲ್ಲ. ಅಂತೆಯೇ ಮಾತಂಗಿಯ ಪ್ರಕರಣಕ್ಕೆ ಸದೃಶವಾದ ಸನ್ನಿವೇಶಕ್ಕೂ ಅವಕಾಶವಿಲ್ಲ.

---

1. "ಕುಮಾರರಾಮುನಿ ಕಥ", ಉಪೋದ್ಘಾತಮು, ಪುಟ ೧೫.
2. ಅದೇ, ಪುಟ ೧೫.

## ೪. ಇತ್ತೀಚಿನ ಕೆಲವು ಕೃತಿಗಳು

ಕುಮಾರರಾಮನ ಕಥೆ ಎಂದೆಂದಿಗೂ ಜನಪ್ರಿಯವಾಗಿದೆಯೆಂಬುದಕ್ಕೆ, ಈ ವಿಷಯವನ್ನು ಕುರಿತು ಮೇಲಿಂದ ಮೇಲೆ ಗ್ರಂಥಗಳು ಬರುತ್ತಿರುವುದೇ ಸಾಕ್ಷಿ. ಇದರ ಇತಿಹಾಸದ ಮಹತ್ವದಲ್ಲಿ ಆಸಕ್ತರಾಗಿದ್ದ ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ೧೯೪೧ ರಲ್ಲಿ "ಗಂಡುಗಲಿ ಕುಮಾರರಾಮ."[1] ಎಂಬ ಕೃತಿಯನ್ನೂ, ೧೯೫೫ ರಲ್ಲಿ ಮತ್ತಷ್ಟು ವಿವರಗಳೊಡನೆ ಅದೇ ಹೆಸರಿನ ಇನ್ನೊಂದು ಪುಸ್ತಕವನ್ನೂ (ರಸಿಕ ರಂಜಿನಿ ಪ್ರಕಾಶನ ಸಂಸ್ಥೆ, ಅರಸೀಕೆರೆ) ಪ್ರಕಟಿಸಿರುತ್ತಾರೆ. ಶ್ರೀ. ಆಲೂರು ವೆಂಕಟರಾಯರು "ರಣರಂಗ ಸಿಂಗನಾದ ಕುಮಾರರಾಮ"[2] ಎಂಬ ಒಂದು ಪ್ರಬಂಧವನ್ನು ಬರೆದಿರುತ್ತಾರೆ. ಗದುಗಿನ ಶ್ರೀ. ಹುಯಿಲುಗೋಳುನಾರಾಯಣರಾಯರು ಕುಮಾರರಾಮನನ್ನು ಕುರಿತು ಒಂದು ನಾಟಕವನ್ನು ಬರೆದಿರುವುದಾಗಿ ತಿಳಿದುಬರುತ್ತದೆ.[3] ಶ್ರೀ. ವಸುದೇವ್‌ಭೂಪಾಲಂ ಅವರು "ಕುಮ್ಮಟ ವಲ್ಲಭ" ಎಂಬ ನಾಟಕವನ್ನು ಇತ್ತೀಚೆಗೆ ಪ್ರಕಟಿಸಿರುತ್ತಾರೆ. ಶ್ರೀ. ವರದರಾಜ ಹುಯಿಲುಗೋಳ ಅವರು "ರತ್ನಾಜಿ"[4] ಎಂಬ ಬಾನುಲಿಯ ನಾಟಕವೊಂದನ್ನು ರಚಿಸಿರುತ್ತಾರೆ. ಪಂಡಿತ ಸಿ. ಆರ್. ಹೊಸಳ್ಳಯ್ಯ ಎಂಬುವರು ತಮ್ಮ "ಅಮರ ಕೀರ್ತಿ" ಎಂಬ ಪುಸ್ತಕದಲ್ಲಿ "ಕುಮಾರರಾಮ" ಎಂಬುದಾಗಿ ಒಟ್ಟು ಕಥೆಯನ್ನು ಸಂಗ್ರಹವಾಗಿ ಬರೆದಿರುತ್ತಾರೆ. ಈ ಕ್ಷೇತ್ರದಲ್ಲಿ ವಿಶೇಷವಾಗಿ ಶ್ರಮಿಸಿರುವ ಶ್ರೀ. ಎಂ.ಎಚ್. ರಾಮಶರ್ಮರು "ರಣಧೀರ ರಾಮನಾಥ" ಎಂಬ ಒಂದು ಗ್ರಂಥವನ್ನು ಇತ್ತೀಚೆಗೆ ಪ್ರಕಟಿಸಿರುತ್ತಾರೆ. ಶ್ರೀ ದೇಸಾಯಿ ಪಾಂಡುರಂಗರಾಯರು "ನಾಗರ ಮರಿ" ಎಂಬ ತಮ್ಮ ಚಾರಿತ್ರಿಕ ಕಥಾಸಂಗ್ರಹದಲ್ಲಿ, ಸಂಗೂರಿನ ಶಾಸನವನ್ನು ಅವಲಂಬಿಸಿ "ಕಂಪಿಲ ಕುಮಾರ" ಎಂಬ ಸ್ವಾರಸ್ಯವಾದ ಸಣ್ಣಕಥೆಯೊಂದನ್ನು ರಚಿಸಿರುತ್ತಾರೆ. ಇವುಗಳಲ್ಲದೆ ಕುಮಾರರಾಮನ ಕಥೆ ಮತ್ತು ವಿಷಯ ಮಹತ್ವಕ್ಕೆ ಸಂಬಂಧಿಸಿದಂತೆ ಅನೇಕ ಲೇಖನಗಳು ಬಿಡಿಬಿಡಿಯಾಗಿ ಪ್ರಕಟವಾಗಿವೆ. ಇವುಗಳ ಪಟ್ಟಿಯನ್ನು ಪ್ರತ್ಯೇಕವಾಗಿ ಕೊಡಲಾಗಿದೆ[5] (ಅನುಬಂಧ ೯).

---

1. ಮಿಂಚಿನಬಳ್ಳಿ ಗ್ರಂಥಮಾಲೆ, ಧಾರವಾಡ.
2. ಕರ್ನಾಟಕ ವೀರರತ್ನಗಳು, ಮೊದಲನೆಯ ಮುದ್ರಣ, ಪು. ೯೧–೯೯.
3. ಶ್ರೀಯುತರ ಪತ್ರ, ೯–೧೨–೧೯೫೬.
4. "ಅಮೃತಮತಿ"–ಐದು ಏಕಾಂಕಗಳುಳ್ಳ ಪುಸ್ತಕ.
5. ಈ ಪ್ರಬಂಧವನ್ನು ಬರೆದ ತರುವಾಯ ಇನ್ನೂ ಕೆಲವು ಕೃತಿಗಳು ಪ್ರಕಟವಾಗಿವೆ:
   - (i) ಮುತ್ತಿನಹಾರ (ಸಣ್ಣ ಕಥೆ)—ಶ್ರೀ "ಶ್ರೀಸ್ವಾಮಿ", ನಡೆದು ಬಂದ ದಾರಿ–ಸಂ. ೨, ಪು. ೯೭೧–೧೦೦೦. (೧೯೬೦)
   - (ii) ಕಡುಗಲಿ ಕುಮಾರರಾಮ (ಜೀವನ ಚಿತ್ರಣ)–ಶ್ರೀ. ದೇಜಗೌ (೧೯೬೧)
   - (iii) ಕನ್ನಡಿಗರ ಕಾಳರಾತ್ರಿ (ಕಾದಂಬರಿ)–ಶ್ರೀ. ಶ್ರೀನಿವಾಸರಾವ್ ಕೊರಟಿ (೧೯೬೧)
   - (iv) ಕುಮ್ಮಟ ಕೇಸರಿ (ನಂಜುಂಡನ ಕೃತಿಯ ಸಾರ)–ಶ್ರೀ. ಜಿ. ವರದರಾಜರಾವ್ (೧೯೬೩)
   - (v) ಕಂಪಿಲರಾಯಲು (ತೆಲುಗು)–ಮೂಲ: ಶ್ರೀ. ಕೊರಟಿ ಶ್ರೀನಿವಾಸರಾವ್
     ಅನು: ಶ್ರೀಯುತರುಗಳಾದ ಶ್ರೀನಿವಾಸಪುರಂ ರಾಮಾಚಾರ್ಯಲು, ಶ್ರೀನಿವಾಸಪುರಂ ನರಸಿಂಹಾಚಾರ್ಯಲು, ಡಾಕ್ಟರ್ ಎಸ್. ಶೇಷಾಚಾರ್ಲು (೧೯೬೩)
   - (vi) ನಂಜುಂಡ ಕವಿ (ಕವಿ, ಕಾವ್ಯ ವಿಮರ್ಶೆ)–ಶ್ರೀ. ಡಿ. ಜವರೇಗೌಡ (೧೯೬೪)

## ಕಥೆಗಳಿಗೂ ಕಾವ್ಯಗಳಿಗೂ ಇರುವ ಹೋಲಿಕೆಗಳು

ಕುಮಾರರಾಮನನ್ನು ಕುರಿತ ಕಾವ್ಯಗಳಿಗೆ ಆಧಾರವಾವುದು ಎನ್ನುವುದು ಇಂದಿಗೂ ವಿದ್ವಾಂಸರನ್ನು ಬಾಧಿಸುತ್ತಿರುವ ಪ್ರಶ್ನೆಯೇ ಸರಿ. ಜನಜನಿತವಾದ ಕಥೆಗಳಲ್ಲಿಯೂ ಎಷ್ಟು ರೀತಿಯಲ್ಲಿ ಅಂತರಗಳೂ ಸಾಮ್ಯಗಳೂ ಇವೆ ಎಂಬುದನ್ನು ಹಿಂದೆ ಪರಿಶೀಲಿಸಿದ್ದಾಯಿತು. ಸಂಡೂರಿನ ಸುತ್ತಮುತ್ತಲಿನ ಕಥೆಗಳಿಗೂ, ರಾಯದುರ್ಗ, ಆದವಾನಿಗಳ ಕಡೆ ಬಳಕೆಯಿರುವ ಕಥೆಗಳಿಗೂ ಹಲವಾರು ವ್ಯತ್ಯಾಸಗಳು ವಿದಿತವಾಗುತ್ತವೆ. ಕನ್ನಡದ ಯಕ್ಷಗಾನಗಳು ಮತ್ತು ತೆಲುಗಿನ ಕುಮಾರರಾಮನ ಕಥೆ ಬಹುಮಟ್ಟಿಗೆ ಪಾಮರ ಸಾಹಿತ್ಯದ ಲಕ್ಷಣಗಳನ್ನೇ ಒಳಗೊಂಡಿರುವುದರಿಂದ ಅವುಗಳನ್ನೂ ಇವುಗಳೊಂದಿಗೇ ಸೇರಿಸಿದ್ದಾಯಿತು. ಈಗ ಈ ಎಲ್ಲ ರಚನೆಗಳಿಗೂ, ಕನ್ನಡದ ಕಾವ್ಯಗಳಿಗೂ ಇರುವ ಹೋಲಿಕೆಗಳನ್ನು ನೋಡಬಹುದು.

(i) **ಕುಮಾರರಾಮನ ತಂದೆತಾಯಿಗಳು**: ಕಂಪಿಲರಾಯ ಮತ್ತು ಹರಿಯಾಲದೇವಿಯರು ಕುಮಾರರಾಮನ ತಂದೆತಾಯಿಗಳೆಂಬ ಅಂಶದಲ್ಲಿ ಕಥೆಗಳಿಗೂ ಕಾವ್ಯಗಳಿಗೂ ಯಾವ ಅಂತರವೂ ಇಲ್ಲ. ನಾಲ್ಕನೆಯ ಕಥೆಯೊಂದರಲ್ಲಿ ಮಾತ್ರ ಪಟ್ಟಮಹಿಷಿಯನ್ನು ರತ್ನಮಾಂಬ ಎಂಬುದಾಗಿ ಹೇಳಿದೆ. ದೈವಾನುಗ್ರಹದಿಂದ ಹುಟ್ಟಿದ ವೀರನಿವನು ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಹರಿಯಾಲದೇವಿ ಕಂಪಿಲನನ್ನು ಮದುವೆಯಾಗುವ ಪ್ರಸಂಗ ಸ್ವಲ್ಪ ವಿಚಾರಣೀಯವಾಗಿದೆ. ಸಂಡೂರಿನ ಎರಡು ಕಥೆಗಳಲ್ಲಿಯೂ ಈಕೆ ಕಾಶೀರಾಜನೆಂಬ ಬ್ರಾಹ್ಮಣನೊಬ್ಬನ ಮಗಳೆಂದೂ, ಬೈಚಪ್ಪನು ಈಕೆಯ ತಮ್ಮನೆಂದೂ ಹೇಳಿದೆ. ಯಕ್ಷಗಾನಗಳಲ್ಲಿಯೂ ಬೈಚಪ್ಪನನ್ನು ಹರಿಯಾಲದೇವಿಯ ಸಹೋದರನೆಂದು ಸ್ವೀಕರಿಸಲಾಗಿದೆ. "ಗಂಗ ೨"ರಲ್ಲಿ ಬರುವ ಕಂಪಿಲರಾಯನು ಆರೆಯ ಚಾರಾಮರಾಯನ ಮಗಳಾದ ಹರಿಯಾಲದೇವಿಯನ್ನು ಮದುವೆಯಾದನೆಂಬ ಸುದ್ದಿ ಇದನ್ನು ಹೋಲುತ್ತದೆ. ಬೈಚಪ್ಪನು ಹರಿಯಮ್ಮನ ಬಂಧುವೆಂಬ ಅಂಶವನ್ನು ಮಹಲಿಂಗಸ್ವಾಮಿ ಪರೋಕ್ಷವಾಗಿ ಸೂಚಿಸುತ್ತಾನೆ.

(ii) **ಕಾಟಣ್ಣ ಮತ್ತು ಕಳ್ಳರಾಮ**: ಕಥೆಗಳಲ್ಲಿ ಕುಮಾರರಾಮನೊಂದಿಗೆ ಅದೇ ಅಂಶೀಯರಾದ ಕಾಟಣ್ಣ, ಹೋಲಿಕೆರಾಮ ಮತ್ತು ಚೆನ್ನಿಗರಾಮ ಎಂಬುವರು ಹುಟ್ಟಿದರೆಂದು ಹೇಳಿದೆ. ಜನಜನಿತವಾದ ಕಥೆಗಳಲ್ಲಿ ಕಳ್ಳರಾಮ ಎಂಬ ಹೆಸರನ್ನು ಕೇಳದಿರುವುದು ಕುತೂಹಲಕಾರಿಯಾಗಿದೆ. ಆದರೆ ಯಕ್ಷಗಾನಗಳಲ್ಲಿ ಚೋರರಾಮನ ಹೆಸರು ಉಕ್ತವಾಗಿದೆ. ಕಾವ್ಯಗಳಲ್ಲಿ ಕಳ್ಳರಾಮನ ಪ್ರಸಂಗವನ್ನು ಗಂಗ ಮತ್ತು ಮಹಲಿಂಗಸ್ವಾಮಿಯರು ಮಾತ್ರವೇ ನಿರೂಪಿಸಿರುತ್ತಾರೆ. ಮಹಲಿಂಗಸ್ವಾಮಿಯಲ್ಲಿ ಕಳ್ಳರಾಮನ ಪೂರ್ವವೃತ್ತಾಂತವೂ ಬರುತ್ತದೆ. ಈತನು ದಾಸೀಪುತ್ರ ಹಾಗೂ ದುರ್ಮಾರ್ಗಿ. ಆದರೆ, ಕುಮಾರರಾಮನ ಸಲುವಾಗಿ ಬೈಚಪ್ಪನು ಕೇಳಿದ ಕೂಡಲೆ ತನ್ನ ತಲೆಯನ್ನು ಸಂತೋಷದಿಂದ ಕೊಡುವನು. ಕಥೆಗಳಲ್ಲಿ ಈ ಅಂಶ ಸ್ವಲ್ಪ ಅದಲುಬದಲಾಗಿದೆ. ಇಲ್ಲಿ ಹೋಲಿಕೆರಾಮನು ದುರ್ಮಾರ್ಗಿ. ಆದರೆ ರಾಮನೆಂದರೆ ಇವನಿಗೆ ಪಂಚಪ್ರಾಣ. ರಾಮನ ತಲೆಗೆ ಬದಲಾಗಿ ಒಮ್ಮೆ ಚೆನ್ನಿಗರಾಮನ ತಲೆಯೂ ಮತ್ತೊಮ್ಮೆ ಹೋಲಿಕೆರಾಮನ ತಲೆಯೂ ಕೊಟ್ಟಂತೆ ವರ್ಣಿತವಾಗಿದೆ. ಮೂರನೆಯ ಕಥೆಯಲ್ಲಿ ಹೋಲಿಕೆರಾಮನನ್ನು ಕಂಪಿಲನ ದತ್ತುಪುತ್ರನೆಂದು ಹೇಳಿದೆ. ಚೆನ್ನಿಗರಾಮನಿಗೆ ಸಂವಾದಿಯಾದ ಯಾವ ಪಾತ್ರವೂ ಕಾವ್ಯಗಳಲ್ಲಿ ಕಾಣುವುದಿಲ್ಲ. (ಕುಮಾರರಾಮನನ್ನೇ ಅನೇಕ ಸಂದರ್ಭಗಳಲ್ಲಿ ಚೆನ್ನಿಗರಾಮ ಎಂದು ಕರೆಯುವುದುಂಟು.) ನಂಜುಂಡನಲ್ಲಿ ಮಾತ್ರ ಅಣ್ಣ ಭೈರವನೆಂಬ ಮತ್ತೊಬ್ಬ ಯುವರಾಜನ ಹೆಸರನ್ನು ಹೇಳಿದೆ. ಆದರೆ, ಕಳ್ಳರಾಮ ಅಥವಾ ಹೋಲಿಕೆರಾಮರ ಸುದ್ದಿಯಿಲ್ಲ. ಕಾಟಣ್ಣನ ವೃತ್ತಾಂತವೂ ಬಹಳ ಸ್ವಾರಸ್ಯವಾಗಿದೆ. ಕಥೆಗಳಲ್ಲಿ ಈತನಿಗೆ ದಾಸಿಯ ಪುತ್ರನ ಪಟ್ಟ ಕಟ್ಟಲಾಗಿದೆ. ಯಕ್ಷಗಾನದಲ್ಲಿ ಕಂಪಿಲನ ರಾಣಿಯಾದ ಹಂಪಾಜಿಯ ಮಗನೆಂದು ಬರುತ್ತದೆ. ಗಂಗನ ಪ್ರತಿಯೊಂದರಲ್ಲಿ ಈತನು ಕಂಪಿಲನ ರಾಣಿಯಾದ ಹಂಪಾಜಿಯ ಮಗನೆಂದು ಸೂಚಿಸಿದೆ (ಗಂ. ೧,

ಸಂ. i, ಪ. ೪೬). ಹರಿಯಮ್ಮನಿಗೇ ಕಾಟಣ್ಣ ಮತ್ತು ಕುಮಾರರಾಮರೆಂಬ ಮಕ್ಕಳಿದ್ದರು ಎಂದು ಇನ್ನೊಂದು ಪ್ರತಿಯಲ್ಲಿ ಉಲ್ಲೇಖಿತವಾಗಿದೆ (ಗಂಗ ೪, ಸಂ. i, ಪ. ೧೫೬–೧೫೭). ಕಾಟಣ್ಣನು ಯಾರೋ ಬಡದಂಪತಿಗಳ ಕೂಸೆಂದು ಮತ್ತೊಂದು ಕಡೆ ಬರುತ್ತದೆ (ಗಂಗ ೫, ಸಂ ii, ಪ. ೩೬–೪೪). ಮಹಲಿಂಗಸ್ವಾಮಿಯ ಕೃತಿಯಲ್ಲಿ ಈತನು ಅರಣ್ಯದಲ್ಲಿ ಅನಾಥ ಶಿಶುವಾಗಿ ರಾಜದಂಪತಿಗಳಿಗೆ ದೊರೆಯುತ್ತಾನೆ (ಸಂ. i, ಪ. ೫೯–೧೧೦.). ಕವಿ ಈತನ ಪೂರ್ವವೃತ್ತಾಂತವನ್ನು ಕಟ್ಟಕಡೆಯಲ್ಲಿಯೂ ಸೂಕ್ಷ್ಮವಾಗಿ ಸೂಚಿಸುತ್ತಾನೆ (ಸಂ. xix, ಪ. ೧೦೫).

(iii) **ರತ್ನಾಜಿಯ ವಿಷಯ :** ಕಥೆಗಳಲ್ಲಿ ಈಕೆಗೆ ತುಂಬ ಪ್ರಾಶಸ್ತ್ಯ ದೊರೆತಿದೆ. ಕಾವ್ಯಗಳಲ್ಲಿಯೂ ಸಹ ಸರಿಸಮನಾದ ಸ್ಥಾನವೇ ಲಭಿಸಿದೆ. ಈಕೆ ಡೊಂಬರವಳೆಂದೂ, ರಾಜನು ಈಕೆಯನ್ನು ಕಂಡು ಮೋಹಿಸಿ ಮದುವೆಯಾದನೆಂದೂ ಕಥೆಗಳಲ್ಲಿ ನಿರೂಪಿಸಿರುವಂತೆಯೇ ಮಹಲಿಂಗಸ್ವಾಮಿ ಈ ಪ್ರಕರಣವನ್ನು ಅತ್ಯಂತ ರಮಣೀಯವಾಗಿ ಚಿತ್ರಿಸಿರುತ್ತಾನೆ. ಈಕೆಯನ್ನು ನವಾಬನ ಮಗಳೆಂದು ಮೊದಲನೆಯ ಕಥೆಯಲ್ಲಿ ಹೇಳಿದೆಯಷ್ಟೆ. ಇದಕ್ಕೆ ಕಾವ್ಯದಲ್ಲಿ ಅವಕಾಶವಿಲ್ಲ. ಕಾರಣ, ಈ ಸ್ಥಾನ ರಾಮನನ್ನು ಪ್ರೇಮಿಸಿದ ಸುಲ್ತಾನನ ಮಗಳಿಗೆ ಮೀಸಲಾಗಿದೆ. ಆದರೆ, ಕಂಪಿಲನು ರಾಮನಿಗೆಂದು ಹೇಳಿ ರತ್ನಿಯನ್ನು ತಾನು ಮದುವೆಯಾದನೆಂಬ ಒಂದು ವಿಚಾರಕ್ಕೆ ಕಾವ್ಯದಲ್ಲಿಯೂ ಮಾನ್ಯತೆ ಸಿಕ್ಕಿದೆ. ಕುಮಾರರಾಮನೊಂದಿಗೆ ಈ ವಿಷಯವನ್ನು ರತ್ನಿಯೇ ಹೇಳಿಕೊಳ್ಳುತ್ತಾಳೆ. ಆಕೆ ರಾಮನ ಸೋದರತ್ತೆಯ ಮಗಳೆಂಬುದಾಗಿ ಅವಳ ಬಾಯಲ್ಲಿಯೇ ಕವಿ ಹೇಳಿಸಿರುತ್ತಾನೆ (ಗಂ. ೪, ಸಂ. iv, ಪ. ೨೨೧). ನಂಜುಂಡನಾದರೋ ಈಕೆಗೆ ಸೂರ್ಯವಂಶದ ರಾಜಕನ್ಯೆಯ ಸ್ಥಾನವನ್ನು ದಯಪಾಲಿಸಿರುತ್ತಾನೆ. ನಾಲ್ಕನೆಯ ಕಥೆಯಲ್ಲಿ ಸೂಚಿಸಿರುವಂತೆ ಚಿತ್ರಾವತಿ ಎಂಬ ಹೆಸರಿನ ಪಲ್ಲಟ ಮಾತ್ರ ಕಂಡುಬರುವುದಿಲ್ಲ.

(iv) **ಚೆಂಡಿನಾಟ :** ಜನಜನಿತವಾದ ಕಥೆಗಳಲ್ಲಿ ಈ ಸನ್ನಿವೇಶಕ್ಕೆ ತಕ್ಕ ಸ್ಥಾನ ದೊರೆತಿದೆ. ಕಾವ್ಯಗಳಲ್ಲಿಯೂ ಈ ಪ್ರಸಂಗವನ್ನು ಒಂದೇ ಬಗೆಯಾಗಿ ಚಿತ್ರಿಸಿರುತ್ತಾರೆ. ರಾಮನ ಪೂರ್ವ ವಂಶೀಯರ ಚೆಂಡು ಎಂಬ ಭಾವನೆ ಎಲ್ಲದರಲ್ಲಿಯೂ ಇದೆ. ಕಥೆಗಳ ಪೈಕಿ, ಒಂದರಲ್ಲಿ ಆ ಚೆಂಡು ರಾಮನಿಗಾಗಿ ಹಂಬಲಿಸುತ್ತಿದ್ದಂತೆಯೂ, ಮತ್ತೊಂದರಲ್ಲಿ ವೃದ್ಧ ಪ್ರಜೆಯೊಬ್ಬನು ಹೇಳಿದಂತೆಯೂ ಬರುತ್ತದೆ. ಗಂಗನಲ್ಲಿ ಕಾಟಣ್ಣ ಅದನ್ನು ರಾಮನಿಗೆ ತಿಳಿಸಿದಂತೆ ಇದೆ. ಅದನ್ನು ಆಡಲು ಕಥೆಗಳಲ್ಲಿ ಹೋಲಿಕೆರಾಮ ಇಲ್ಲವೇ ಜಟ್ಟಿಗಳು ಬಂದರೆ ಕಾವ್ಯಗಳಲ್ಲಿ ಉದ್ದಕ್ಕೂ ಕಾಟಣ್ಣ ಮತ್ತು ಇತರರು ಬರುತ್ತಾರೆ. ಚೆಂಡು ರತ್ನಾಜಿಯ ಮನೆಗೆ ಹೋಗಿ ಬೀಳಲು ಕಾಟಣ್ಣ ಮತ್ತು ರಾಮರ ಸರದಿ ಕಾವ್ಯಗಳಲ್ಲಿ ಬರುತ್ತದೆ. ಕಾಟಣ್ಣನ ತರುವಾಯ ಹಡಪದ ಬಲ್ಲುಗನನ್ನೂ ರಾಮನು ಕಳುಹಿಸುವುದುಂಟು. ಕಥೆಗಳಲ್ಲಿ ಒಂದರಲ್ಲಿ (ನಾಲ್ಕನೆಯದು) ರಾಮನು ಉದ್ದೇಶಪೂರ್ವಕವಾಗಿ ಹೋಲಿಕೆರಾಮನನ್ನು ಕಳುಹಿಸದಿರುವುದು ಗಮನಾರ್ಹ. ರಾಮನು ರತ್ನಾಜಿಯ ಕುಟಿಲಕ್ಕೆ ಒಳಗಾಗದೆ ಆಕೆಯ ಆಗ್ರಹಕ್ಕೆ ಗುರಿಯಾಗುವ ಭಾಗ ಪೂರ್ಣವಾಗಿ ಸದೃಶವಾಗಿದೆ.

(v) **ಕುಮಾರರಾಮನಿಗೆ ಶಿಕ್ಷೆ:** ಕಂಪಿಲನು ಹೆಂಡತಿಯ ಮಾತಿಗೆ ಕಿವಿಗೊಟ್ಟು ರಾಮನಿಗೆ ಶಿಕ್ಷೆ ವಿಧಿಸುವುದು ಒಂದೇ ತೆರನಾಗಿದೆ. ಕಥೆಗಳಲ್ಲಿ ಬೈಚಪ್ಪನ ಬದಲು ರಾಜಭಟರೂ, ಕಟುಕರೂ ಕುಮಾರರಾಮನನ್ನು ಕರೆದೊಯ್ದುರೆಂದು ಬರುವುದುಂಟು. ಕಾವ್ಯದಲ್ಲಿ ಇದಕ್ಕೆ ಅವಕಾಶವಿಲ್ಲ. ನೆಲಮಾಳಿಗೆಯಲ್ಲಿ ಬಚ್ಚಿಡುವುದರಲ್ಲಿಯೂ ವ್ಯತ್ಯಾಸವಿಲ್ಲ. ಆದರೆ, ನಾಲ್ಕನೆಯ ಕಥೆಯಲ್ಲಿ ಇರುವಂತೆ ರಾಮನ ಕೈಕಾಲುಗಳನ್ನು ಕಡಿಯುವ ಪ್ರಸಂಗ ಮಾತ್ರ ಎಲ್ಲಿಯೂ ಬರುವುದಿಲ್ಲ.

(vi) **ಮುಹಮ್ಮದೀಯರ ದಂಡಯಾತ್ರೆ :** ರಾಮನ ಮರಣವನ್ನು ಕೇಳಿದ ಕಂಪಿಲನ ಶತ್ರುಗಳು ದಂಡೆತ್ತಿ ಬರುವ ಅಂಶವು ಸಮಾನವಾಗಿದೆ. ಇದರಲ್ಲಿ ಡಿಳ್ಳಿಯ ಸುಲ್ತಾನನಿಗೆ ಅಗ್ರಸ್ಥಾನ ದೊರೆತಿರುವುದೂ

ಗಮನಾರ್ಹ. ಒಂದು ಕಥೆಯಲ್ಲಿ ಮಾತ್ರ (ನಾಲ್ಕನೆಯದು) ಬಿಜಾಪುರದ ಸುಲ್ತಾನನೆಂದು ಹೇಳಿದೆ. ಮೂರನೆಯ ಕಥೆಯಲ್ಲಿ ಸೈನ್ಯಾಧಿಕಾರಿಗಳು ರಾಮನ ಮರಣ ವಾರ್ತೆಯನ್ನು ನಂಬದೆ ಟಗರು ಮತ್ತು ಹುಂಜಗಳ ಶಕುನವನ್ನು ನೋಡುವ ಸನ್ನಿವೇಶ ಗಂಗ ಮತ್ತು ಮಹಲಿಂಗಸ್ವಾಮಿಯವರ ಕೃತಿಗಳನ್ನು ಪೂರ್ಣವಾಗಿ ಹೋಲುತ್ತದೆ. ಸಕಾಲದಲ್ಲಿ ರೆಕ್ಕೆ ಕುದುರೆಯ ಮೇಲೆ ರಾಮನು ಬರುವ ಸಂದರ್ಭ ಕಾವ್ಯದಲ್ಲಿ ಬೊಲ್ಲನನ್ನು ಏರಿ ರಾಮನು ಬರುವ ಸನ್ನಿವೇಶವನ್ನೇ ಹೋಲುತ್ತದೆ. ಶತ್ರುಗಳ ಸಂಹಾರದಷ್ಟೇ ರತ್ನಾಜಿಯ ಅಂತ್ಯವೂ ಬಹು ಮುಖ್ಯವಾದುದು. ಮೊದಲನೆಯ ಕಥೆಯಲ್ಲಿ ಆಕೆ ಆತ್ಮಹತ್ಯ ಮಾಡಿಕೊಳ್ಳುತ್ತಾಳೆ. ಮೂರು ಮತ್ತು ನಾಲ್ಕರಲ್ಲಿ ಆಕೆಯನ್ನು ಸುಣ್ಣದ ಹಗೇವಿಗೆ ದೂಡುವರು. ಕಾವ್ಯಗಳಲ್ಲಿ ಆತ್ಮಹತ್ಯಕ್ಕೆ ಪ್ರಾಧಾನ್ಯ ದೊರೆತಿದ್ದರೂ ಸತ್ತವಳನ್ನು ಹಳ್ಳಕ್ಕೆ ಎಳೆದು ಹಾಕಿ ಎಂಬ ಕಂಪಿಲನ ಮಾತು ಗಂಗ ಮತ್ತು ಮಹಲಿಂಗಸ್ವಾಮಿಗಳಲ್ಲಿ ಬರುವುದು ಗಮನಿಸಬೇಕಾದದ್ದು.

(vii) **ಓರುಗಲ್ಲಿನ ಪ್ರಸಂಗ :** ಓರುಗಲ್ಲಿನ ಪ್ರಕರಣ ಗಂಗ ಮತ್ತು ಮಹಲಿಂಗಸ್ವಾಮಿಗಳಲ್ಲಿ ಬೊಲ್ಲನನ್ನು ತರುವುದಕ್ಕಾಗಿ ನಿರ್ಮಿತವಾಗಿದೆಯಷ್ಟೆ. ಆಗ ದೇವಿಶೆಟ್ಟಿ ಎಂಬುವನ ಸ್ನೇಹ ರಾಮನಿಗೆ ಲಭಿಸುತ್ತದೆ. ನಂಜುಂಡ ಇದನ್ನು ಬಿಟ್ಟಿರುತ್ತಾನೆ. ಮೂರನೆಯ ಕಥೆಯಲ್ಲಿ ಕುಮಾರರಾಮನು ಓರುಗಲ್ಲನ್ನು ಪ್ರವೇಶಿಸಿ ರೆಕ್ಕೆ ಕುದುರೆಯನ್ನು ತರುವ ಸಾಹಸಕಾರ್ಯ ಪೂರ್ತಿಯಾಗಿ ಇದನ್ನೇ ಹೋಲುತ್ತದೆ.

(viii) **ಜಗದಪ್ಪನ ಘಟನೆ :** ಚಂದ್ರಗುತ್ತಿ ಎಂಬಲ್ಲಿ ಜಗದಪ್ಪನೆಂಬುವನು ಆಳುತ್ತಿದ್ದನು ಎಂಬ ವಿಚಾರ, ಗಂಗನ ಪ್ರತಿಗಳಲ್ಲಿ ಬರುವ ಗುತ್ತಿಯ ಜಗತಾಪಿ (ಜಗದಪ್ಪ) ಯನ್ನೇ ಹೋಲುತ್ತದೆ. ಸುಲ್ತಾನನ ಕಡೆಯವರು ಬಂದು ಕಂಪಿಲನನ್ನು ಕಪ್ಪವನ್ನು ಕೊಡು ಎಂಬುದಾಗಿ ಪೀಡಿಸಲು ರಾಮನು ಅವರನ್ನು ಹಿಂದಟ್ಟುವ ಪ್ರಕರಣ ಗಂಗನಲ್ಲಿ ಬರುವ ಎರಡು ಸನ್ನಿವೇಶಗಳನ್ನು ಹೋಲುತ್ತವೆ. ಸುಪ್ರಸಿದ್ಧವಾದ ಪಾದುಕೆಯ ಪ್ರಸಂಗ ಒಂದು ; ಜಗತಾಪಿಯ ಆಳುಗಳು ಕಂಪಿಲನನ್ನು ಅಡ್ಡಗಟ್ಟಲು ರಾಮನು ಅವರನ್ನು ಅವಮಾನ ಮಾಡಿ ಕಳುಹಿಸುವುದು ಇನ್ನೊಂದು.

(ix) **ಮಾತಂಗಿಯ ಪ್ರಸಂಗ :** ಮೂರು ಮತ್ತು ನಾಲ್ಕನೆಯ ಕಥೆಗಳಲ್ಲಿ ಸತ್ತ ರತ್ನಾಜಿಯೇ ಮತ್ತೆ ಅವತಾರವೆತ್ತಿ ಬಂದು (ಇಮಾಂಬೂಬಿ ಅಥವಾ ಲವಂಗಿ) ರಾಮನ ಮೇಲೆ ಕೈ ಮಾಡುವಳೆಂದು ಹೇಳಿದೆ. ಈ ಅಂಶವನ್ನು ಮಹಲಿಂಗಸ್ವಾಮಿಯಲ್ಲಿ ನಾವು ಸ್ಪಷ್ಟವಾಗಿ ಕಾಣಬಹುದು. "ಗಂಗ ಳ"ರಲ್ಲಿಯೂ ಇದು ಬರುತ್ತದೆ. ಮೂರನೆಯ ಕಥೆಯಲ್ಲಿ ಕುಮಾರರಾಮನು ತನ್ನ ಕತ್ತಿಯನ್ನೇ ಕೊಟ್ಟು ತಲೆ ಕಡಿಸಿಕೊಳ್ಳುವ ಘಟನೆ ಗಂಗನ ಪ್ರತಿಯೊಂದರಲ್ಲಿ (ಗಂ. ಳ, ಸಂ. vii, ಪ. ೪೦೮) ಕುಮಾರರಾಮನು ತನ್ನ ತಲೆಯನ್ನು ಕತ್ತರಿಸಿ ಕೊಡುವುದನ್ನು ಹೋಲುತ್ತದೆ. ನಂಜುಂಡನಲ್ಲಿ ಕೃತಕರಾಮನು ಹೀಗೆ ಮಾಡಿದನೆಂದು ವರ್ಣಿತವಾಗಿದೆ. ಲವಂಗಿಯ ಮನಸ್ಸು ಪರಿವರ್ತಿತವಾಯಿತೆಂಬ ಅಂಶ, ಮಹಲಿಂಗಸ್ವಾಮಿಯ ಮಾತಂಗಿಯ ವರ್ತನೆಯನ್ನು ಹೋಲುತ್ತದೆ. ಆಕೆ ರಾಮನ ಸೇವೆ ಮಾಡಿಕೊಂಡಿರುವುದಾಗಿ ಹೇಳಿ ಅಗ್ನಿಪ್ರವೇಶ ಮಾಡುತ್ತಾಳೆ. ನಂಜುಂಡನಲ್ಲಿಯಾದರೋ ಹತಳಾದ ರತ್ನಾಜಿ, ಮತ್ತೆ ಊರ್ವಶಿಯಾಗಿ ಸುರಲೋಕವನ್ನು ಸೇರಿದ ಬಳಿಕ, ಆಕೆ "ರಾಮನ ಕೀರ್ತಿತರುಣಿಯ ಪೊತ್ತಾಡಿಸುವ ವರಧಾತ್ರಿಯಾದಳು (ಸಂ. xl, ಪ. ೧೧೮)" ಎಂದು ಚಿತ್ರಿತವಾಗಿದೆ.

(x) **ರುಂಡದ ಮಹತ್ವ ;** ಮೊದಲನೆಯ ಕಥೆಯಲ್ಲಿ ಕುಮಾರರಾಮನ ತಲೆಯನ್ನು ರತ್ನೋಜಿ ತೆಗೆದುಕೊಂಡು ಹೋಗಲು, ಅದನ್ನು ಅಗಸೆಯ ಬಾಗಿಲಿಗೆ ಕಟ್ಟಿ, ಅನಂತರ ಕುಮಾರಗುಂಡಪ್ಪನ ಮೂಲಕ ಹೊಸಮಲೆಗೆ ಹಿಂತಿರುಗಿಸುವರು. ಮೂರನೆಯ ಕಥೆಯಲ್ಲಿ ಅದು ಡಿಳ್ಳಿಯ ಕೋಟೆಯ ಮೇಲೆ ಕುಳಿತು ಹಾವಳಿ ಮಾಡುವುದಾಗಿ ಬರುತ್ತದೆ. ಗಂಗ ಮತ್ತು ಮಹಲಿಂಗಸ್ವಾಮಿಯವರಲ್ಲಿ ಇದೇ ರೀತಿಯಾಗಿ ನಿರೂಪಿತ

ವಾಗಿದೆ. ರೂಪಿದೇವಯ್ಯನೆಂಬುವನು, ಡಿಳ್ಳಿಯಲ್ಲಿ ಹಾವಳಿ ಮಾಡುತ್ತಿದ್ದ ಕುಮಾರರಾಮನ ರುಂಡವನ್ನು ಸುಲ್ತಾನನ ಅಪೇಕ್ಷೆಯಂತೆ ಮರಳಿ ಊರಿಗೆ ತರುತ್ತಾನೆ. ಅನಂತರ ಅದು ಲಿಂಗವಾಗುತ್ತದೆ.

## ಈ ರಚನೆಗಳಲ್ಲಿ ಕಾಣದಿರುವ ಪ್ರಮುಖಾಂಶಗಳು

(i) ಕುಮಾರರಾಮ ಮತ್ತು ರತ್ನಾಜಿಯರು ಅರ್ಜುನ ಮತ್ತು ಉರ್ವಶಿಯರ ಅಂಶವೆಂಬ ಅವತಾರದ ಕಲ್ಪನೆ ಎಲ್ಲಿಯೂ ಬರುವುದಿಲ್ಲ. ಯಕ್ಷಗಾನದಲ್ಲಿ ಮಾತ್ರ ಕುಮಾರರಾಮನು ನಂದೀಶನ ಶಾಪದಿಂದ ಎರಡು ಜನ್ಮಗಳನ್ನು ಎತ್ತಿ, ಕಳೆದು, ಪ್ರಕೃತದಲ್ಲಿ ಮೂರನೆಯ ಜನ್ಮವನ್ನು ಎತ್ತಿ ಬಂದಿದ್ದಾನೆಂಬುದಾಗಿ ತಿಳಿದು ಬರುತ್ತದೆ.

(ii) ಕಂಪಿಲನನ್ನು ಸುಲ್ತಾನನ ಸಾಮಂತ ಎಂದು ಹೇಳಿರುವುದರಿಂದ ವಿರಸಕ್ಕೆ ಕಾರಣವಾದ ಬಾದೂರನ ಪಲಾಯನದ ವೃತ್ತಾಂತವಿಲ್ಲ.

(iii) ಶೂಲದ ಹಬ್ಬದ ಪ್ರಕರಣವಿಲ್ಲ.

(iv) ಸುಲ್ತಾನನ ಮಗಳ ಅಮರವಾದ ಪ್ರೇಮದ ಪ್ರಸ್ತಾಪವಿಲ್ಲ.

(v) ತೆಲುಗರ ದ್ರೋಹದ ಪ್ರಸ್ತಾಪವೂ ಇಲ್ಲ.

(vi) ಯಕ್ಷಗಾನದಲ್ಲಿ ಮಾತ್ರ ಕುಮ್ಮಟಪುರದ ಹೆಸರಿದೆ. ಎರಡನೆಯ ಕಥೆಯಲ್ಲಿ ಕುಂಪಟಾಲು ಎಂದು ಇದೆ.

# ೮. ಜನಪದ ಸಾಹಿತ್ಯ

ಕುಮಾರರಾಮನನ್ನು ಕುರಿತು ಜನಜನಿತವಾದ ಕೆಲವು ಕಥೆಗಳನ್ನು ನೋಡಿದೆವಷ್ಟೆ. ಇದೇ ರೀತಿಯಾಗಿ ಕುಮಾರರಾಮನ ಬಗ್ಗೆ ಜನರಲ್ಲಿ ಬಳಕೆಯಲ್ಲಿರುವ ಕೆಲವು ನಾಣ್ಣುಡಿಗಳನ್ನೂ, ಜನಪದಗೀತೆಗಳನ್ನೂ ಇಲ್ಲಿ ವಿಚಾರಮಾಡಿದೆ. ಹಳ್ಳಿಯ ಜನಕ್ಕೆ ಕುಮಾರರಾಮನೆಂದರೆ ಸಾಹಸ, ಸೌಂದರ್ಯ ಮತ್ತು ಪರದಾರ ಸೋದರತ್ವಗಳ ಪ್ರತೀಕ. ಆತನನ್ನು ಅವರು "ಕೊಮರಾಮ" ಎಂದು ಕರೆಯುವುದು ಪದ್ಧತಿ. ಆದ್ದರಿಂದಲೇ ಆತನನ್ನು ಕುರಿತು ವಿಚಾರಮಾಡಿರುವ ಡಾ|| ಬಿ. ಎಸ್. ಗದ್ದಗಿಮಠ, ಅವರು ತಮ್ಮ ಮಹಾಪ್ರಬಂಧದಲ್ಲಿ "ಕೊಮರಾಮ" ಎಂಬುದಾಗಿಯೇ ಅಧ್ಯಾಯಕ್ಕೆ ಹೆಸರಿತ್ತಿರುವರು.[1] ಜನರು ಅಪ್ರತಿಮ ಸಾಹಸಿಯನ್ನು ಸಂಬೋಧಿಸುವಾಗ "ಏನು ಈ ಮಗ ಕೊಮರಾಮ ಆಗ್ಯಾನ" ಎಂದು ಹೇಳುವುದುಂಟು. ತುಂಬ ಸ್ಫುರದ್ರೂಪಿಯಾಗಿರುವವನನ್ನು ಕಂಡಾಗಲೂ "ಕೊಮರಾಮ" ಎನ್ನುತ್ತಾರೆ. ಕೆಲವು ವೇಳೆ ಬಡಾಯಿಕೊಚ್ಚಿಕೊಳ್ಳುವನನ್ನೂ ಸಹ "ಮಹಾ ಕುಮಾರರಾಮ ಬಂದ" ಎಂದು ಹೀಯಾಳಿಸುತ್ತಾರಂತೆ.[2] (ಹಾಳಾದ ಪಟ್ಟಣವನ್ನು ಕಂಡಾಗ "ಕಂಪಿಲರಾಯನ ಪಟ್ಟಣವಾಯಿತಲ್ಲ" ಎಂದು ಹೇಳುವುದೂ ಉಂಟಂತೆ.) ಮುಖ್ಯವಾಗಿ ಇವುಗಳನ್ನೆಲ್ಲ ಪರಿಶೀಲಿಸಿದರೆ, ಕುಮಾರರಾಮನು ಎಷ್ಟು ಜನಪ್ರಿಯನಾದ ವ್ಯಕ್ತಿ ಎನ್ನುವುದು ವಿದಿತವಾಗುತ್ತದೆ.

ಜನರ ಮನಸ್ಸನ್ನು ಸೆಳೆಯುವ ಸದ್ಗುಣಗಳನ್ನು ಒಳಗೊಂಡ ಕುಮಾರರಾಮನನ್ನು ಕುರಿತು ಜನಪದ ಗೀತೆಗಳು ರಚನೆಯಾಗುವುದೇನೂ ಆಶ್ಚರ್ಯವಲ್ಲ. ಇಂಥ ಕೆಲವು ಗೀತೆಗಳನ್ನು ಡಾ|| ಬಿ. ಎಸ್. ಗದ್ದಗಿ ಮಠ, ಅವರು ಸಂಪಾದಿಸಿರುತ್ತಾರೆ. ಅವರು ಪ್ರಕಟಿಸಿರುವ "ಜನತಾಗೀತಗಳು" ಎಂಬ ಸಂಕಲನದಲ್ಲಿ "ಕಂಪಲಿ" (ಪು. ೨೪) ಮತ್ತು "ಕರ್ನಾಟಕ ಕಂದ" (ಕುಮಾರರಾಮ) (ಪು. ೬೭) ಎಂಬ ಎರಡು ಗೀತೆಗಳಿವೆ, "ಕುಮಾರರಾಮನ ದುಂದುಮೆ" ಎಂಬ ಮತ್ತೊಂದು ಗೀತೆ ಈಗ ತಾನೆ ಪ್ರಕಟವಾಗಿದೆ.[3] ಇವುಗಳಲ್ಲದೆ. "ಜಗ್ಗ ಹಲಿಗೆಯ ಜಾಣಜಾಣೆಯ ಹಾಡು" ಎಂಬ ವಿಧಾನದಲ್ಲಿ "ಹರಲಿ ರಾಮನ ಕಥೆಯ ಕೇಳ ಕನ್ನಡ ಕಡುಜಾಣೆ" ಎಂಬ ಪಲ್ಲವಿಯಿಂದ ಮೊದಲಾಗುವ ಮತ್ತೊಂದು ರಚನೆಯೂ ಇದೆಯಂತೆ. "ಚೆನ್ನಿಂಗರಾಮನ ಹಾಡುಗಬ್ಬ" ಎಂಬುದರಲ್ಲಿ "ಕುಮಾರರಾಮನ ಚೆಲುವಿಕೆ, ನೀತಿ, ಅವನಿಗೆ ಬಂದ ಹರಲಿ, ಪರಾಕ್ರಮ, ಬೊಲ್ಲ ಕುದುರೆಯ ಸವಾರಿ, ಮೊದಲಾದುವುಗಳು . . . . ಮುಖ್ಯ ಘಟನೆಗಳಾಗಿವೆ" ಎಂಬುದಾಗಿ ಡಾ|| ಬಿ. ಎಸ್. ಗದ್ದಗಿ ಮಠ, ಅವರ ಮೂಲಕ ತಿಳಿದುಬರುತ್ತದೆ.[4] ಈ ಇತರ ಕೃತಿಗಳು ಪ್ರಕಟವಾಗುವವರೆಗೆ ಹೆಚ್ಚಿಗೆ ಏನನ್ನೂ ಹೇಳುವಂತಿಲ್ಲ.

ಪ್ರಕೃತದಲ್ಲಿ ಪ್ರಕಟವಾಗಿರುವ "ಕರ್ನಾಟಕ ಕಂದ" (ಕುಮಾರರಾಮ) ಎಂಬ ಕೃತಿಯನ್ನು ಸ್ವಲ್ಪ ಮಟ್ಟಿಗೆ ಪರಿಶೀಲಿಸಬಹುದು. "ಹರಲೀಯ ಕೊಡಲಾರೆ ಕರನಾಡ ಕಂದ್ಯಗ" ಎಂಬ ಪಲ್ಲವಿಯಲ್ಲಿ ಕುಮಾರ ರಾಮನ ಮೇಲೆ ಬಂದ ಹಾದರದ ಅಪವಾದವನ್ನು ಸೂಚಿಸಲಾಗಿದೆ. ಆತನನ್ನು ಕಂಡು ರತ್ನಾಜಿ ಮೋಹಿಸಿದ್ದನ್ನೂ, ಆತ ಸಮ್ಮತಿಸದೆ ಹೋಗಲು, ರಾಜನಿಗೆ ದೂರು ಹೇಳಿ, ಅವನ ತಲೆ ಕಡಿಯುವಂತೆ ಆಜ್ಞೆ ಮಾಡಿ

---

1. " ಕನ್ನಡ ಜಾನಪದ ಗೀತೆಗಳು ", ಹಸ್ತಪ್ರತಿ, ಪು. ೩೨೪-೩೫೩. ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಕಟಿಸಿರುವ ಶ್ರೀಯುತರ ಗ್ರಂಥದಲ್ಲಿ ಈ ಅಧ್ಯಾಯವನ್ನು ಬಿಟ್ಟಿರುತ್ತಾರೆ.

2. ಗಂಡುಗಲಿ ಕುಮಾರರಾಮ, ೧೯೪೧, ಮುನ್ನುಡಿ, ಪು. ೫.

3. ಪ್ರಬುದ್ಧ ಕರ್ಣಾಟಕ, ಸಂ. xli, ಸಂ. ೨ ಮತ್ತು ೩. (ಪ್ರತ್ಯೇಕವಾಗಿ ಪುಸ್ತಕವೂ ದೊರೆಯುತ್ತದೆ.)

4. ಶ್ರೀಯುತರ ಪತ್ರ, ೧೨-೯-೧೯೫೮.

ದ್ದನ್ನೂ ಈ ಗೀತೆಯಲ್ಲಿ ಪ್ರಸ್ತಾವಿಸಲಾಗಿದೆ. ಕುಮಾರರಾಮನ ಕಥೆಯಲ್ಲಿ ಈ ಭಾಗಕ್ಕೆ ದೊರೆತಿರುವಷ್ಟು ಪ್ರಾಶಸ್ತ್ಯ ಬೇರೆ ಯಾವ ಭಾಗಕ್ಕೂ ದೊರೆತಿಲ್ಲವೆಂದು ಈಗಾಗಲೆ ಹೇಳಿರುತ್ತೇವೆ. ಅವನ ಸಾಹಸ ಕಾರ್ಯಗಳನ್ನು ಕುರಿತು ಗೀತೆಯ ಪ್ರಾರಂಭದಲ್ಲಿಯೇ "ಹರಲೀಯ ಕೊಡಲಾರೆ ಕರನಾಟ ಕಂದಗ ವರಬೊಲ್ಲ ತಂದ ಕೊಮರಾಗ, ರಣದಾಗ, ತುರುಕರ ಗೆದ್ದ ವೀರಾಗ" ಎಂಬುದಾಗಿ ಹೇಳಿದೆ. ಅನಂತರ "ಕಥೆಯ ಕೇಳಿರಿ ಜನರೆ, ಮತಿಯಿಟ್ಟು ತೂಗುತಲಿ ಸುತಗ ಮನಸಿಟ್ಟ ಕಲಿಯುಗದ ಮಲತಾಯಿ ಬತವ ಹಾಡೇವ ನಿಜಗತೆಯ" ಎಂದು ಗೀತೆಯು ತಿರುಳನ್ನು ಪರಿಚಯಮಾಡಿಕೊಟ್ಟಿದೆ. "ಹಿರಿಯರಸಿ ಹರಿಯಾಲಿ, ಕಿರಿಯರಸಿ ರತ್ನಾಲಿ ಅರಸ ಕಂಪಿಲರಾಯನಿಗೆ ಕೊಮರಾಮ ಆರಸ ಮಗನಾದ ಹೆಸರಾತು" ಎಂದು ಮುಖ್ಯ ವ್ಯಕ್ತಿಗಳ ಪರಿಚಯವಾಗುತ್ತದೆ. ಕುಮಾರರಾಮನ ರೂಪಕ್ಕೆ ಮರುಳಾದ ರತ್ನಾಜಿ ಮನಸ್ಸಿನಲ್ಲಿಯೇ ಮರುಗುತ್ತಿರಲು ಚೆಂಡಿನಾಟದ ಪ್ರಸಂಗ ನಡೆಯುತ್ತದೆ. ಆಕೆಯ ಬಳಿಗೆ ಚೆಂಡು ಹೋಗಿ ಬೀಳಲು ಅವಳ ಮನಸ್ಸು ಅರಳುತ್ತದೆ. "ಸಮಯ ಕಾಯುವ ಕಳ್ಳ ತಮವ ದೊರಕಿಸಿದ್ದಾಂಗ ಕೊಮರಾಮ ಚೆಂಡ ಆಡುದಕ, ಪುಟಪುಟದು ಚಮಕಿಸಿ ಚೆಂಡು ಒಳಮನಿಗೆ" ಎಂಬ ವರ್ಣನೆ ಈ ಭಾವವನ್ನು ಸಹಜವಾಗಿ ಚಿತ್ರಿಸುತ್ತದೆ. ರಾಮನು ಚೆಂಡನ್ನು ಕೇಳಲು ಹೋಗುತ್ತಾನೆ. ಆಗ ಅವಳು "ಕಾಮ ನೀ ಕೊಮರಾಮ, ಕಾಮಿಸಿದೆ ನಾ ನೋಡಿ, ಕಾಮಾಟ ಕೂಡಿ ನೀನಾದೊ, ಮನದೊರೆಯೆ ಪ್ರೇಮ ನಿನ ಮ್ಯಾಲೆ ಕೈ ಮುಗಿದೆ" ಎಂದು ಗೋಗರೆಯುವಳು. ಪರದಾರ ಸೋದರನಾದ ರಾಮನು "ತಾಯೆ, ತಂದೆಯ ಸತಿಯೆ, ನಾಯಿ ಮಾಡುವ ಕೆಲಸ ಮಾಯೆ ನಿನಗ್ಯಾಕ ನನಮ್ಯಾಲೆ. ಹಡದವ್ವ ಹೇಯ ಇಲ್ಲೇನ ನಿನಗೇಟ" ಎಂದು ಹೇಸಿ ಎಚ್ಚರಿಸುವನು. ಕಾಮಾಂಧಳಾದ ರತ್ನಿಗೆ ಆ ಮಾತು ಹಿಡಿಸುವುದಿಲ್ಲ. ಕೂಡಲೆ "ಕಾಯ ಕಾಮನ ಗುಡಿಯೊ, ಹೇಯ ಮಾಡಲುಬೇಡ ತಾಯೆಂಬ ನುಡಿಯು ಬೇಡೆನಗೊ, ಕೊಮರಾಮ ಬಾಯೆನಗ ಕಾಮ ಕೈಕೊಟ್ಟ" ಎಂದು ಉತ್ತರವಿತ್ತು ಪ್ರಚೋದಿಸುವಳು. ರಾಮನಿಗೆ ಅಲ್ಲಿರಲಾಗದೆ, "ಹೇಸಿ ಕೈಕೊಸರಿ ಹೊರ ಹೋದ." ರತ್ನಿ ರಣಮಾರಿಯಾಗುವಳು. "ಅರಸ ಹೋದವ ಬರಲಿ, ಹರಲೀಯ ನಾ ಕೊಡುವೆ, ಅರಚಣಕ ರಾಮ ತಲೆ ಹೊಡಿಸಿ ಹಾಕಿಸುವ ಹರಕೆ ನಾ ಹೊತ್ತೆ ದೇವರಿಗೆ" ಎಂದು ಪ್ರತಿಜ್ಞೆ ಮಾಡುವಳು. ಬೇಟೆಗೆ ಹೋಗಿದ್ದ ಕಂಪಿಲನು ಹಿಂತಿರುಗಿ ಬರಲು "ನಮಿಸಿದೆನು, ಕೇಳದಲೆ ಕೊಮರಾಮ ಕೈಹಿಡಿದ ಧುಮಕೀಯ ಮಾಡಿ ಕಾಮಿಸಿದ, ರಕ್ಕಸನ ಗಮನಿಸ್ದೆ ಕರೆಸಿ ತಲೆ ಹೊಡಿಸು" ಎಂದು ದೂರು ಹೇಳುವಳು. ವ್ಯಾಮೋಹಗ್ರಸ್ತನಾದ ಕಂಪಿಲನು ನಿಜವೃತ್ತಾಂತವನ್ನು ತಿಳಿಯದೆ, ಕುಮಾರರಾಮನ ಶಿರಶ್ಛೇದನ ಮಾಡುವಂತೆ ಆಜ್ಞೆ ಮಾಡುವನು. ಕುಮಾರರಾಮನು ಪ್ರತಿ ಆಡದೆ "ಸಾದು ಶಿವನೆಂದು ತಲೆಗೊಟ್ಟ." ಹರಿಯಾಲದೇವಿ ಅತ್ತತ್ತು ಮಂತ್ರಿ ಬೈಚಪ್ಪನೊಂದಿಗೆ ಹೇಳಿಕೊಂಡು ಕೂಗಿಡುವಳು. ಒಟ್ಟನಲ್ಲಿ, ಈ ಕವಿತೆಯಲ್ಲಿ ಕುಮಾರರಾಮನಿಗೆ ಉಂಟಾದ ಆಪವಾದದ ಚಿತ್ರವನ್ನು ಮಾತ್ರ ವರ್ಣಿಸಿದೆ. ಆರಿಸಿಕೊಂಡಿರುವ ಕಥಾಭಾಗವನ್ನು ಸಾಕಾದಷ್ಟು ಪರಿಣಾಮಕಾರಿಯಾಗಿ ನಿರೂಪಿಸಲಾಗಿದೆ.

ಮೇಲೆ ಹೇಳಿರುವ ಸಂಕಲನದಲ್ಲಿಯೇ ಇರುವ "ಕಂಪಲಿ" ಎಂಬ ಮತ್ತೊಂದು ಗೀತೆಯಲ್ಲಿ ಕುಮಾರರಾಮನಿಗೆ ಸಂಬಂಧಿಸಿದ ಇನ್ನು ಕೆಲವು ವಿಷಯಗಳು ಅಡಕವಾಗಿವೆ. ಕಂಪಿಲರಾಯನಿಗೂ ತುರುಕರಿಗೂ ನಡೆದ ಕದನದ ವೃತ್ತಾಂತವಿದೆ. "ಬೈಚಪ್ಪ ಲಿಂಗಯ್ಯ ಹೆಚ್ಚಿನ ಮಂತ್ರಿಗಳು ರೊಚ್ಚಿನ ಕತ್ತಿ ರಣ ಕಟ್ಟಿ ತುರುಕರು ಹುಚ್ಚೆದ್ದು ಓಡಿ ರಣಬಿಟ್ಟು" ಎಂಬ ಚರಣದಲ್ಲಿ ಮೊದಲು ಮೊದಲು ತುರುಕರು ಸೋತು ಹಿಮ್ಮೆಟ್ಟಿದ್ದನ್ನು ಹೇಳಲಾಗಿದೆ. ಅನಂತರ ಮಾತಂಗಿ ಬರುವ ಸುದ್ದಿಯನ್ನು "ಕೊಂಕಣದ ಮಾತಂಗಿ, ಬಿಂಕಮಾದರ ಹುಡುಗಿ ಕೊಂಕಗುಣ ಹೆಣ್ಣು ತುರುಕರಿಗೆ ಮನಸೋತು ವುಂಕಿ ಹಾಕ್ಯಾಳೊ ಕಂಪಲಿಗೊ" ಎಂಬಲ್ಲಿ ಸೂಚಿಸಿದೆ. ಈ ಯುದ್ಧದಲ್ಲಿ ಕುಮಾರರಾಮನು ಸಾಯುತ್ತಾನಷ್ಟೆ. ಆದ್ದರಿಂದ "ರಾಮರಾಯನು ಬಿದ್ದ, ನಾಮ ನಿರ್ನಾಮಾತೊ ಧೂಮಧಾಮಾತೊ ಕಂಪಲಿಯೊ ನಾರೇರ ಹೋಮಕೊಂಡಾತೊ ಕಿಚ್ಚಾತೊ"

ಎಂದು ಹೇಳಲಾಗಿದೆ. ಅಲ್ಲದೆ, ರಾಮನೊಂದಿಗೆ ಪ್ರಾಣವನ್ನು ತೆತ್ತ ಕಾಟಣ್ಣನನ್ನು ಕುರಿತು "ಒಡೆಯಾಗ ಕಾಳಗದಿ ಕಾದು ರಣಕಾದ" ಎಂಬುದಾಗಿಯೂ, ಅಂತೆಯೇ ಒಡೆಯನಿಗೆ ತನ್ನ ಅಸುವನ್ನು ಅರ್ಪಿಸಿದ ದೇವಿಶೆಟ್ಟಿ ಲಿಂಗನನ್ನು ಕುರಿತು "ಜಂಪಿಲ್ದ ಮಡಿದ ರಣದಾಗೊ" ಎಂಬುದಾಗಿಯೂ ಸ್ಮರಣೆಯ ಮಾತುಗಳು ಬರುತ್ತವೆ. ಆದರೆ, ಈ ಗೀತೆಯಲ್ಲಿ ಬರುವ "ಕಂಪಿಲಿರಾಯಗ ಹಂಪಿ ವಿರುಪನ ಶಾಪ ದಂಪತಿಗೆ ಬಂತೊ ವನವಾಸೊ, ಕಂಪಿಲಿಯು ಸಿಂಪಾಗಿ ಸಿಡಿದು ಹಾಳಾತೊ" ಎಂಬ ಮಾತುಗಳು ಯಾವುದೋ ಶಾಪವನ್ನು ಕುರಿತು ಹೇಳುತ್ತವೆ. ಈ ಪೂರ್ವವೃತ್ತಾಂತವೇನೋ ತಿಳಿಯದು !

ಡಾ|| ಬಿ. ಎಸ್. ಗದ್ದಗಿ ಮಠ, ಅವರ ಸಂಗ್ರಹದಲ್ಲಿ "ಕುಮಾರರಾಮನ ದುಂದುಮೆ" ಎಂಬ ಕೃತಿ ಅತ್ಯಂತ ದೀರ್ಘವೂ, ಸ್ವಾರಸ್ಯವೂ ಆದದ್ದು. ಇದನ್ನು ಗೋಕಾವಿಯ "ಗುರುವರಸಿದ್ಧ ಸೇವಕನು" ಮಾಲಿಂಗಪುರದಲ್ಲಿ ರಾಮನ ಆಟವನ್ನು ಕಂಡು ತಾನು ಬರೆದುದಾಗಿ ಹೇಳಿಕೊಂಡಿದ್ದಾನೆ. ಈ ರಚನೆಯ ಆರಂಭವೇ ತುಂಬ ಸೋಜಿಗವಾಗಿದೆ. ರಾಮನ ಕೂಡ ದಾಸಿಯ ಹೊಟ್ಟೆಯಲ್ಲಿ ಹುಟ್ಟಿದ ಹೋಲಿಕೆರಾಮನ ಹೆಂಡತಿಯಾದ ಪದ್ಮಿನಿ ಬಾಣಂತಿಯಾಗಿರಬೇಕಾದರೆ, ಆಕೆಯ ಸಖಿಯರು, ಕುಮಾರರಾಮನಿಗೆ ಬಂದ ಅಪವಾದದ ಪರಿಯನ್ನೂ, ಆತನ ತಲೆಗೆ ಬದಲಾಗಿ ಹೋಲಿಕೆರಾಮನು ತನ್ನ ತಲೆಯನ್ನು ಕೊಟ್ಟ ಪ್ರಸಂಗವನ್ನೂ ತಿಳಿಸುವರು. ಅದನ್ನು ಕೇಳಿ, ಗಂಡನನ್ನು ಕಳೆದುಕೊಂಡ ಆಕೆಗೆ ಸಹಿಸಲಾರದಷ್ಟು ದುಃಖವುಂಟಾಗಿ, ಅತ್ತು ಕರೆದು, ಬೈಚಪ್ಪನ ಬಳಿಗೆ ಬಂದು, ತನ್ನನ್ನೂ ತನ್ನ ಕೂಸನ್ನೂ ಹಾಗೆಯೇ ಸಂಹರಿಸಬೇಕೆಂದು ಕೇಳಿಕೊಳ್ಳುವಳು. ಮಂತ್ರಿ ಆಕೆಗೆ ಸಮಾಧಾನ ಹೇಳಿ, ಅಭಯವನ್ನು ನೀಡುವನು. ಈ ವಸ್ತುವಿನ ನಿರೂಪಣೆಯಲ್ಲಿ ಕುಮಾರರಾಮ ಮತ್ತು ಹೋಲಿಕೆರಾಮರ ಜನನ, ಬೊಲ್ಲನ ಹುಟ್ಟು, ರತ್ನಿ ಕುಮಾರರಾಮನನ್ನು ಕಂಡು ಕಾಮಪೀಡಿತಳಾಗಿ ಆತನ ಮೇಲೆ ಅಪವಾದ ಹೊರಿಸಿದ್ದು, ಹೋಲಿಕೆರಾಮನು ವಧ್ಯಸ್ಥಾನಕ್ಕೆ ಬಂದು ತನ್ನ ತಲೆಯನ್ನು ತೆತ್ತಿದ್ದು, ಪದ್ಮಿನಿಯ ಪ್ರಲಾಪ ಮುಂತಾದ ಕಥಾಭಾಗಗಳೆಲ್ಲ ಬರುತ್ತವೆ. ಹರಿಯಾಲದೇವಿ ಬೈಚಪ್ಪನ ತಂಗಿಯೆಂದೂ, ಕುಮಾರರಾಮನು ಅವನ ಸೋದರಳಿಯನೆಂದೂ ಸ್ಪಷ್ಟವಾಗಿದೆ. ಹೋಲಿಕೆ ರಾಮನ ವೃತ್ತಾಂತ ಕನ್ನಡ ಕಾವ್ಯಗಳಲ್ಲಿ ಕಂಡುಬರುವುದಿಲ್ಲ. ಜನಜನಿತವಾದ ಕಥೆಗಳಲ್ಲಿಯೂ, ತೆಲುಗಿನ ಕೃತಿಯಲ್ಲಿಯೂ ತೋರಿಬರುತ್ತದೆ.

ಪ್ರಕೃತ ದುಂದುಮೆಯಲ್ಲಿ ೧೩೧ ಪದ್ಯಗಳಿವೆ. ಒಂದೊಂದು ಪದ್ಯದಲ್ಲಿಯೂ ಆರು ಇಲ್ಲವೇ ಒಂಬತ್ತು ಚರಣಗಳಿವೆ. ಇಲ್ಲಿ ನಿರೂಪಿತವಾಗಿರುವ ಕಥೆ ಹೀಗೆ ಸಾಗುತ್ತದೆ: "ಕುಮ್ಮಟ ನಗರದ ಅರಸು ಕಂಪಿಲರಾಯ, ಆತನ ಪಟ್ಟದ ರಾಣಿ ಹರಿಯಾಲಮ್ಮ, ಮೋಹದ ರಾಣಿ ರತ್ನಿ, ಮಂತ್ರಿ ಬೈಚಪ್ಪ. 'ಮುನಿಪುಂಗ[ವ] ಜಂಗಮ'ನೊಬ್ಬನು ಕೊಟ್ಟ ಫಲಪ್ರಸಾದದಿಂದ (ಇದು ಜನಜನಿತವಾದ ಕಥೆಗಳಲ್ಲಿ ಕಂಡುಬರುತ್ತದೆ.) ಹರಿಯಾಲಮ್ಮನ ಹೊಟ್ಟೆಯಲ್ಲಿ 'ಕೊಮುರಾಮ'ನೂ, ದಾಸಿಯ ಹೊಟ್ಟೆಯಲ್ಲಿ 'ಹೋಲ್ಕಿರಾಮ'ನೂ ಹುಟ್ಟುವರು. ಅಲ್ಲದೆ, ಆ ಹಣ್ಣಿನ ಬೀಜವನ್ನು ತಿಂದ ಕತ್ತೆಯೊಂದರ ಹೊಟ್ಟೆಯಲ್ಲಿ 'ಬೊಲ್ಲ' ಎಂಬ ಕುದುರೆಯೂ ಹುಟ್ಟುವುದು. ಬೈಚಪ್ಪನ ಮಗಳಾದ ರಾಮಲದೇವಿಯನ್ನು (ಗಂಗನ ಕಾವ್ಯದಲ್ಲಿ ಈಕೆಯನ್ನು ಜಗತಾಪಿಯ ಮಗಳೆಂದು ಹೇಳಿದೆ.) ಕುಮಾರರಾಮನಿಗೆ ಕೊಟ್ಟು ಮದುವೆಯಾಗುವುದು. ಹೋಲಿಕೆರಾಮನ ಹೆಂಡತಿ ಪದ್ಮಿನಿಗೆ ಗಂಡುಮಗುವೊಂದು ಹುಟ್ಟಿ, ಆಕೆ ಮೂರು ತಿಂಗಳ ಬಾಣಂತಿಯಾಗಿರುವಳು. ಆಕೆಯನ್ನು ಸಖಿಯರು ನಾನಾ ರೀತಿಯಲ್ಲಿ ಆರೈಕೆ ಮಾಡುವರು. (ಕವಿ ಬಾಣಂತಿಯ ಚಿತ್ರವನ್ನು ತುಂಬ ಸಹಜವಾಗಿ ನಿರೂಪಿಸುತ್ತಾನೆ.) ಈ ಸಖಿಯರು ಮಾತಿಗೆ ಮಾತು ಆಡುತ್ತ ಕುಮಾರರಾಮನಿಗೆ ಒದಗಿದ ವಿಪತ್ತನ್ನು ಸೂಚಿಸುವರು.

ಕುಮಾರರಾಮನು ಕಾಟಣ್ಣನೊಂದಿಗೆ ನೀರಾಟವಾಡಿ ತಾಯಿಯ ಬಳಿಗೆ ಹೋಗಿ ಚೆಂಡನ್ನು ಕೇಳುವನು. ಆಕೆ ನಾನಾ ರೀತಿಯಲ್ಲಿ ಬುದ್ಧಿವಾದವನ್ನು ಹೇಳಿ "ಇದುವೆ ಜಗಲಿಗಿಟ್ಟು ಪೂಜೆಯಾಗುವ ಚೆಂಡು,

ಮಗ ರಾಮು, ತಗಿ ಬೇಡ ಇದರ ಹಾದಿ ನಗ್ಗೇಡು" ಎಂದು ತಿಳಿಸುವಳು. ಆದರ ಕಥೆಯನ್ನೆಲ್ಲ ವಿಸ್ತಾರವಾಗಿ ಹೇಳುವಳು. ಮಗನ ಹಟಕ್ಕೆ ಸೋತು ನಿರ್ವಾಹವಿಲ್ಲದೆ ಕೊಡುವಳು. ಅದನ್ನು ತೆಗೆದುಕೊಂಡು ಬಂದು ರತ್ನಿಯ ಅರಮನೆಯ ಸಮೀಪದಲ್ಲಿಯೇ ಆಡತೊಡಗುವನು. ಸಂಗಾಯಿಯ ಮೂಲಕ ರತ್ನಿ ಅಲ್ಲಿ ಆಟವಾಡು ತ್ತಿದ್ದವರನ್ನೆಲ್ಲ ಕೇಳಿ ತಿಳಿಯುವಳು. ರಾಮನ ಹೆಸರನ್ನು ಕೇಳಿದಾಗ ಆಕೆ "ಹರಿಯಾಲಿ ಮಗನೇನ ಸರಿಸವತಿ ನನಗಾಕಿ ಕರತಂದು ತೋರ ನನಗೇನ" ಎಂದು ಗೋಗರೆಯುವಳು. "ಹಿಂಡದೇವರನ ಭಜಿಸಿದಳು." ಅಮರ ಗುಂಡ ಮಲ್ಲೇಶ, ವಿರೂಪಾಕ್ಷ ಮೊದಲಾದವರಲ್ಲಿ "ಈಗ ಚೆಂಡು ನಮ್ಮನೆಯೊಳು ಕಂಡದ್ದು ಆದರೆ ದಿಂಡರಕಿ ಹಾಕಿ ಕೈಮುಗಿವೆ ನಾನು" ಎಂದು ಪ್ರಾರ್ಥಿಸಿಕೊಳ್ಳುವಳು. ಅವಳ ಅಪೇಕ್ಷೆಯಂತೆಯೇ ರಾಮನು ಹೊಡೆದ ಚೆಂಡು ಹಾರಿ ಬಂದು ನಡುಮನೆಯಲ್ಲಿ ಬೀಳುವುದು. ಆಕೆಗೆ ಚೆಂಡು ಲಭಿಸಿದಂತಾಯಿತು. ಕಾಟಣ್ಣ ಬಂದು ಚೆಂಡನ್ನು ಕೇಳಲು "ಬರಬಾರದೇತಕ ವರರಾಮನಿಲ್ಲಿಗೆ ತಿರಿಗ್ಹೋಗಿ ಕಳುಹು ಆವನಿತ್ತ" ಎಂದು ಉತ್ತರವಿತ್ತು ಕಳುಹಿಸುವಳು. ಕಡೆಗೆ ಕುಮಾರರಾಮನು ರತ್ನಿಯ ಬಳಿಗೆ ಬಂದು "ಕೊಡು ತಾಯಿ ಕಂತುಕವ" ಎಂದು ಬೇಡಿದನು. ಮೋಹಾಂಧಳಾದ ಆಕೆ, ಅವನ ಮುಖವನ್ನು ಕಂಡೊಡನೆಯೇ ಪರವಶಳಾಗಿ "ಕಾಮು ತಡೆಯ ಲಾರದೆ ಬಿಡದೆ ಮೋಹಿಸುತ ಕೂಡ ಬಾ" ಎಂದು ಕೈಹಿಡಿದು ಸೆಳೆಯುವಳು. ರಾಮನಿಗೆ ದಿಕ್ಕು ತೋಚದೆ "ಎರಡು ಕಣ್ಣಿಗಳ ಮುಚ್ಚಿ ಹರಹರೆನ್ನುತ....ಥರಥರ ನಡುಗಿ ಬಿದ್ದನು." ಮಾತುಕತೆಗಳು ಸಾಗುವುವು. ರಾಮನು ಆಕೆಯನ್ನು ತಿರಸ್ಕರಿಸಿ, "ಕೊಸರಿ ಕೈ ಚಂಡ ಕಸಗೊಂಡು" ಹೊರಟುಬರುವನು. ರತ್ನಿ "ಛಲದಿ ರಾಮನ ಕೊಲಿಸಿ ಎಳೆಸಿ ಗೋರಿಗೆ ಹಾಕಿ ಗೆಲಿಸಿಕೊಂಬುವೆ ಬತವನು" ಎಂದು ಹಟತೊಡುವಳು. ಬೇಟೆ ಯಿಂದ ಹಿಂತಿರುಗಿ ಬಂದ ಕಂಪಿಲನಿಗೆ ರಾಮನ ಮೇಲೆ ದೂರು ಹೇಳುವಳು. ಆತನು ಬೈಚಪ್ಪನನ್ನು ಕರೆಸಿ ಕುಮಾರರಾಮನ ತಲೆಯನ್ನು ಕಡಿಯುವಂತೆ ಆಜ್ಞಾಪಿಸುವನು. "ತಿಳಿಯೆಲೆ ಮಂತ್ರೀಶ ಆಳಿಯ ನೆಂಬುತ ಪ್ರಾಣತು (ಉ ?) ಳಿ ಸದಿರೀ ಚಣಕ ಕೇಳ್ನಾನು ಕೊನೆಗೆ ಎಳೆಸಿ ನಿನ್ನಯ ತಲೆಯ ಹೊಡಿಸು ವೆನು" ಎಂದು ನಿಷ್ಠುರವಾಗಿಯೂ ಹೇಳುವನು.

ಬೈಚಪ್ಪನು ರಾಜಾಜ್ಞೆಯ ಮೇರೆಗೆ ರಾಮನನ್ನು ಬಹಿರಂಗವಾಗಿ ವಧ್ಯಸ್ಥಾನಕ್ಕೆ ಕರೆದೊಯ್ಯುವನು. ಹರಿಯಮ್ಮನು ಓಡಿಬಂದು ಗೋಳಿಡುವಳು; ಮಡದಿ ರಾಮಲದೇವಿ ಬಂದು ಎದೆಎದೆ ಹೊಡೆದುಕೊಂಡು "ಗುಣರನ್ನನೆ, ಮೋಹನನೆ, ಸಂಪನ್ನನೆ ಹೊಡೆದು ಮುಂದಕಡಿ ಇಡು" ಎನ್ನುವಳು. ಬಂದ ಬಂದವರೆಲ್ಲ ಕಣ್ಣೀರು ಸುರಿಸುವರು. ಅಚಲಿತಚಿತ್ತನಾದ ಕುಮಾರರಾಮನು "ನೆರೆದ ಜನರಿಗೆಲ್ಲ ಕರಮುಗಿದು......... ಶಿರಬಾಗಿ ಕೈಮುಗಿದು ನುಡಿದು ಬ್ರಹ್ಮ ಬರೆದಂತಾಗಲಿ ಚಿಂತಿಸಿ ಫಲವೇನು, ಪಾಪವಿರದೆ ಶಿರವು ಪೋಗುವು ದೇನು" ಎಂದು ಹೇಳಿ ತೆರಳುವನು. ಅಡವಿಯಲ್ಲಿ ರಾಮನನ್ನು ಕೊಲ್ಲುವ ಹೊತ್ತಿಗೆ ಸರಿಯಾಗಿ ಹೋಲಿಕೆ ರಾಮನು ಓಡಿಬಂದು ಅಡ್ಡಹಾಕುವನು. ರಾಮನಿಂದ ಎಲ್ಲವನ್ನೂ ಕೇಳಿ, "ಹಿರಿಯಣ್ಣಾ ನಿನಗಿಂತ ಹರಲಿಯ ಸರಿಯೇನು" ಎಂದು ಸಂಕಟಪಟ್ಟು, ತನ್ನ ತಲೆಯನ್ನು ತೆರುವುದಾಗಿ ಮುಂದೆ ಬರುವನು. ರಾಮನು ಬೇಡ ಬೇಡವೆಂದರೂ ಕೇಳದೆ, ಪರೋಪಕಾರ ಮಾಡಿದವರ ಸಂಗತಿಗಳನ್ನೆಲ್ಲ ಹೇಳಿ, ಕಡೆಗೂ ರಾಮಲಿಂಗನ ಆಣೆಯಿಟ್ಟು ತನ್ನ ತಲೆಯನ್ನು ಒಪ್ಪಿಸುವನು.

ಇತ್ತ, ಹೋಲಿಕೆರಾಮನು ಸತ್ತ ಸುದ್ದಿಯನ್ನು ಕೇಳಿದ ಒಡನೆಯೆ ಪದ್ಮಿನಿಯ ಸಂಕಟ ಹೇಳತೀರದು. ಆಕೆ ಒಂದೇ ಸಮನಾಗಿ ದುಃಖಿಸುವಳು. ಹಿಂದಿನದನ್ನೆಲ್ಲ ನೆನಸಿಕೊಳ್ಳುವಳು. ಕಂಗೆಟ್ಟು, ಕೂಸನ್ನು ನೋಡಿ ದಾಗ ಕರುಳನ್ನು ಹಿಂಡಿದಂತಾಗಿ ಯಾತನೆಪಡುವಳು. ಹಿಂದಿನ ದಿನ ತನಗೆ ಬಿದ್ದಿದ್ದ ದುಃಸ್ವಪ್ನವನ್ನೂ, ಹೋಲಿಕೆರಾಮನು ಮನೆಬಿಟ್ಟು ಹೊರಟಾಗ ಆದ ಅಪಶಕುನಗಳನ್ನೂ ನೆನೆಯುವಳು. ಕವಿ ಈ ಚಿತ್ರವನ್ನು ಹೃದಯ ಕರಗುವಂತೆ ವರ್ಣಿಸಿರುತ್ತಾನೆ. ಆ ಅತೀವ ಯಾತನೆಯಲ್ಲಿ ಕೈಗೂಸನ್ನೂ ಒತ್ತಟ್ಟಿಗೆ ಇಡುವಳು. ಕಡೆಗೆ, ಆಕೆ ಬೈಚಪ್ಪನ ಬಳಿಗೆ ಬಂದು ತನ್ನ ದುಃಖವನ್ನು ತೋಡಿಕೊಳ್ಳುವಳು. ಆತನ ಸಮಾಧಾನೋಕ್ತಿ ಗಳನ್ನು ಕೇಳಿ ತನ್ನ ದುಃಖವನ್ನು ನುಂಗಿಕೊಳ್ಳಬೇಕಾಗುವುದು.

ಈ ಕೃತಿಯ ಪೂರ್ವಾರ್ಧದಲ್ಲಿ ಕುಮಾರರಾಮನಿಗೆ ಸಂಬಂಧಪಟ್ಟ ವಿವರಗಳೂ, ಉತ್ತರಾರ್ಧದಲ್ಲಿ ಹೋಲಿಕೆರಾಮನ ತ್ಯಾಗ, ಪದ್ಮಿನಿಯ ದುರ್ದೆಸೆಗಳೂ ಮನಸ್ಸನ್ನು ಸೆಳೆಯುವಂತೆ ಚಿತ್ರಿತವಾಗಿವೆ. ಕಾವ್ಯಗಳಲ್ಲಿ ಕಾಣುವ ಕಳ್ಳಭಂಟರಾಮನ ಪಾತ್ರಕ್ಕೆ ಬದಲಾಗಿ ಇಲ್ಲಿ ಹೋಲಿಕೆರಾಮನ ಪಾತ್ರ ಸೃಷ್ಟಿಯಾಗಿದೆ. ಕವಿ, ಯುದ್ಧ ಮೊದಲಾದ ಇತರ ವಿವರಗಳನ್ನು ಸೂಚಿಸದೆ, ರತ್ನಾಜಿಯ ಪ್ರಸಂಗಕ್ಕೇ ಪ್ರಾಧಾನ್ಯವಿತ್ತಿರುವುದು ಗಮನಿಸಬೇಕಾದ ಸಂಗತಿ. ನಾವು ಪರಿಶೀಲಿಸಿದ ಯಕ್ಷಗಾನಗಳಲ್ಲಿ ಚೋರರಾಮನ ಪ್ರಸಂಗ ಇಲ್ಲಿನಂತೆಯೇ ಬರುತ್ತದೆ. ಆದರೆ ಇಲ್ಲಿ ಕಾಣುವ ಇತರ ವಿವರಗಳಿಲ್ಲ. ಪ್ರಕೃತದಲ್ಲಿ ಈ ಕವಿ "ರಾಮನ ಆಟ"ವನ್ನು ನೋಡಿ ಬರೆದುದಾಗಿ ಹೇಳಿರುವುದರಿಂದ, ಇದು ಉತ್ತರ ಕರ್ನಾಟಕದಲ್ಲಿ ಪ್ರಚಾರದಲ್ಲಿದ್ದಿರಬಹುದಾದ ಯಾವುದೋ ಒಂದು ಬಯಲಾಟದ ಅನುಕರಣೆ ಇರಬಹುದು. ಅಂತೂ, ಜನಸಾಮಾನ್ಯರಲ್ಲಿ ಕುಮಾರರಾಮನ ಕಥೆ ಎಷ್ಟು ಮುಖವಾಗಿ ಬೆಳೆದು ಬೆಳಗುತ್ತಿದೆಯೆಂಬುದು ತುಂಬ ಸೋಜಿಗವಾದ ವೃತ್ತಾಂತವೇ ಸರಿ. ಈ ದೀರ್ಘವಾದ ದುಂದುಮೆ ಬಹುಮಟ್ಟಿಗೆ ಕಾವ್ಯದ ಸರಣಿಯನ್ನೂ ಸ್ವಾರಸ್ಯವನ್ನೂ ಪಡೆದಿದ್ದು ತನ್ನ ಗುರಿಯನ್ನು ಸಾಧಿಸಿದೆ ಎನ್ನಬಹುದು.

ಇನ್ನೊಂದು ಜನಪದ ಗೀತೆಯಲ್ಲಿ (ಸಂಡೂರಿನ ಬಳಿ ಸಂಗ್ರಹಿಸಿದ್ದು; ಅಪೂರ್ಣ-) ಹರಿಯಾಲಿಗೆ ಬಹಳ ದಿನಗಳವರೆಗೆ ಮಕ್ಕಳಾಗದಿರಲು, ಪ್ರಧಾನಿ ದೇವರ ಅನುಗ್ರಹವನ್ನು ದೊರಕಿಸಿಕೊಡುವ ಸಂಗತಿಯಿದೆ. ಇದು ಅಪೂರ್ಣವಾಗಿರುವುದರಿಂದ, ಕೆಲವು ಮುಖ್ಯಾಂಶಗಳ್ನು ಮಾತ್ರ ಇಲ್ಲಿ ಹೇಳಬಹುದು. "ಸಕ್ಕರಿಸವಿಯಂತೆ ಮಧುರ ಮಾವಿನಹಣ್ಣು ಸಕ್ಕರಿಗಿಂತ ರುಚಿಯಂತೆ, ಸಕ್ಕರಿಗಿಂತ ರುಚಿಯಂತೆ ರಾಮನ ಕಥೆಯು ಸಕ್ಕರಿಯುಂಗೆ ಕೇಳುವರು || ಬಾಲರಾಮನ ಕಥೆಯ ಕೇಳಿದಂಥವರಿಗೆ ಬಹಳ ಪುಣ್ಯ ಬರಬೇಕು, ಧೀರರಾಮನ ಕಥೆಯ ಕೇಳಿದಂಥವರಿಗೆ ಕೋಟಿ ಪುಣ್ಯವು ಬರಬೇಕು ||" ಎಂಬುದಾಗಿ ಇದು ಮೊದಲಾಗುವುದು. (ಈ ಪದ್ಯಗಳ ಪ್ರಾರಂಭ ಗಂಗನ ಕೃತಿಯನ್ನು ನೆನಪಿಗೆ ತರುತ್ತದೆ.) ಹರಿಯಾಲಿಗೆ ಮಕ್ಕಳಾಗದಿರಲು, ಜೋಯಿಸರನ್ನು ಕರೆಸುವರು. ಅವರನ್ನು ಕುರಿತು ರಾಜನು "ಇದ್ದು ಮಾತಿಂಗೆ ಇದ್ದ ಹಾಗೆ ಹೇಳಿದರೆ ಮಾನ್ಯವು ಕೊಡತೀನಿ" ಎನ್ನುವನು. ಜೋಯಿಸರು "ಹೊತ್ತಿಗಿ ತಗದಾರ, ಒಂದನೇ ಫಲನೆಯ್ತೆ ಕಂಪಿಲ ನೀನು ನೋಡಪ್ಪ, ಏಳ್ನೂರು ಒಡ್ಡರಿರೆ ಕರಸಪ್ಪ ಕಂಪಿಲ ನಿಮ್ಮೂರ ಒಳಗೆ ನೋಡಪ್ಪ, ಹಳೆಯ ಕೋಟ್ಯಾಗೆ ಈಶ್ವರ ದೇವರೈದಾನೆ ಭೂಮ್ಯಾಗೆ" ಎಂದು ಶಕುನ ಹೇಳುವರು. ಅದೇ ಮೇರೆಗೆ ಒಡ್ಡರನ್ನು ಕರೆಸಿ ಅಗೆಸಲು "ಮೂರನೆ ವರ್ಷದಾಗೆ ಈಶ್ವರದೇವರು ಬೈಲಿಗೆ ಬಿದ್ದಾನೆ." ಅನಂತರ, ಭಾವಿ ತೋಡಿ, ಹಂದರ ಕಟ್ಟಿ, ಅನ್ನಛತ್ರ ಏರ್ಪಡಿಸಿ, ಬೇಕಾದ ಹಾಗೆ ದಾನ ಧರ್ಮಗಳನ್ನಿತ್ತು, ಗುಡಿಕಟ್ಟಿ ಈಶ್ವರನಿಗೆ ಬೆಳ್ಳಿ ಬಂಗಾರಗಳನ್ನು ಹಾಕಿದರು. ಮೂರು ತಿಂಗಳುಗಳು ಕಳೆದುವು. ಆದರೂ ಹರಿಯಮ್ಮನಿಗೆ ಮಕ್ಕಳಾಗಲಿಲ್ಲ. ಆಗ ಪ್ರಧಾನಿ "ಕಂಚಿನ ಕಂಬ ನಿಲ್ಲಿಸ್ಯಾನಿ." "ಆವಾಗ ನೋಡಣ್ಣ ಈಶ್ವರ ದೇವರು ಪ್ರಧಾನಿಯ ಕೈಹಿಡಿದಾನು." ಪ್ರಧಾನಿ "ಬೇಕಾದಷ್ಟು ಖರ್ಚು ಮಾಡಿದೆ. ಈಶ್ವರನೇ ನೀನು ಫಲ ಕೊಡಲಿಲ್ಲ ಹರಿಯಾಮ್ಮಗೆ" ಎಂದು ಮೊರೆಯಿಡುವನು. ಆಗ ಈಶ್ವರ ದೇವರು "ಫಲ ಕೊಡಲಿಕ್ಕೆ ನನಗೆ ಸ್ವತಂತ್ರವಿಲ್ಲ. ಮಹದೇವನ ಹತ್ತಿರ ಹೋಗಿಬರುವೆನೆಂದನು." ಮಹದೇವನ ಆಗಮನವಾಯಿತು. (ಇಲ್ಲಿನ ಅಭಿಪ್ರಾಯ ಸ್ಪಷ್ಟವಾಗಿಲ್ಲ.) ಅನಂತರ ಆತನಿತ್ತ ವರಪ್ರಸಾದದಿಂದ [ಕುಮಾರರಾಮ], ಕಳ್ಳಭಂಟ ರಾಮ, ಬೊಲ್ಲ ಮೊದಲಾದವರ ಜನನವಾಗುವುದು. ಹರಿಯಾಲ ದೇವಿಗೆ ದೈವಾನುಗ್ರಹದಿಂದ ಮಗನು ಹುಟ್ಟುವುದೇ ಈ ಗೀತೆಯ ಮುಖ್ಯವಸ್ತು. ಗೀತೆಯ ಕೊನೆಯ ಭಾಗ ದೊರೆಯದೆ ಇರುವುದರಿಂದ ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ. ಹರಿಯಾಲದೇವಿಯ ತಮ್ಮ ಸಂಗಮರಾಯನೆಂಬುವನು ಪ್ರಧಾನಿಯಾಗಿದ್ದನೆಂದು ಹೇಳಲಾಗಿದೆ. ಬಲ್ಲಪ್ಪ ಎಂಬ ದಂಡನಾಯಕನಿದ್ದನೆಂದು ಹೇಳಿದೆ.

ನನ್ನ ಮಿತ್ರರಾದ ಡಾ|| ಬಿ. ಎಸ್. ಗದ್ದಗಿಮಠ, ಅವರು ಕಳುಹಿಸಿಕೊಟ್ಟ ಶಿವಶರಣೆ ಶಾವಂತ್ರಿದೇವಿ ಅವರಿಂದ ರಚಿತವಾದ "ಚೆನ್ನಿಂಗರಾಮನ ಹಾಡುಗಬ್ಬ"ದ ಕೆಲವು ಪ್ರಸಂಗಗಳು ಹೀಗೆ ಸಾಗುತ್ತವೆ. ಇದು

ತ್ರಿಪದಿಯ ಧಾಟಿಯಲ್ಲಿದೆ. ಚೆಂಡಾಟದ ವರ್ಣನೆಯಲ್ಲಿ "ಚಿನ್ನ ಮುತ್ತಿನ ಚೆಂಡ ಗುನ್ನಿ ರತ್ನಾಲಿ ಕೊಂಡ | ಗುನ್ನೆ ಮಾಡ್ಯಾಳೊ ಶಿವಶಿವ | ಸೋ| ಹರಲಿಗೆ| ಕನ್ನೆ ಕೊಮರಾಮ ಈಡಾದ ||ಸೋ|| (ಸೋಬಾನೆ ಪದ)" ಎಂದು ಹೇಳಿದೆ. ಚೆಂಡನ್ನು ಕೇಳಲು ಬಂದ ರಾಮನನ್ನು ಕಂಡು ಮರುಳಾದ ರತ್ನಿಯ ಸ್ಥಿತಿ ಹೀಗಿದೆ: "ಕಾಮ ಚೆನ್ನಿಂಗರಾಮ ಭೀಮ ಚೆನ್ನಿಂಗರಾಮ| ಹೇಮಗಿರಿ ಕಾಮ ಒಳಬಂದ |ಕೋ| ನಿಂತಾನ| ಕಾಮಿ ರತ್ನಾಲಿ ಬೆವರಾಗಿ ||ಕೋ|| (ಕೋಲಾಟದ ಪದ)." ರತ್ನಾಜಿ ರಾಜನಲ್ಲಿ ದೂರು ಹೇಳುವ ಚಿತ್ರ ಬಹು ಸ್ವಾರಸ್ಯವಾಗಿದೆ. ಕಪಟಿಯಾದ ಆಕೆ "ಅಯ್ಯೊ ಶಿವನ| ಯಾರಿಗೆ ದೂರಾಲೆ ||ಪ||" ಎಂದು ಪ್ರಾರಂಭಿಸಿ, ಕಂಪಿಲನ ಮುಂದೆ "ಕೇಳೊ ಕಂಪಿಲರಾಯ ಗೋಳು ಮಾಡಿದ ರಾಮ | ಹೇಳ್ಲೀಳಾಕ ಬುದ್ಧಿ ಕಳಕೊಂಡ |ಅ| ಕಾಮೇರಿ | ಮೂಳ ಮಾಡಿಟ್ಟ ನನ ಗುಣಕ ||ಅ||, ಸೊಕ್ಕಿದೆಕ್ಕಲಗೂಡ ಬೆಕ್ಕು ಕಾದಾಡಿದಂಗ |ಸಿಕ್ಕು ಹಲುಬಿದೆ ತೆಕ್ಯಾಗ| ಅ |ಕಂಪಿಲರಾಯ| ಬಿಕ್ಕಿ ನಿನ ನೆನಸಿ ಕೈಮುಗಿದೆ ||ಅ||, ಕಾಮ ತುಂಬಿದ ರಾಮ ಭೀಮ ಮದವೇರಿ ಬಂದ | ಧೂಮಧೂಮಾತೊ ನನ ಮನಕ| ಅ |ಕಂಪಿಲರಾಯ| ರಾಮನ ಸೀಳಿ ನನ ಸಲಹೊ ||ಅ||" ಎಂದು ಹಲವು ಬಗೆಯಾಗಿ ಹೇಳಿಕೊಳ್ಳುವಳು.

ಜಾನಪದ ಗೀತೆಗಳ ಸುಪ್ರಸಿದ್ಧ ಸಂಕಲನಕಾರರೂ ನನ್ನ ತರುಣ ಮಿತ್ರರೂ ಆದ ಶ್ರೀ. ಕ. ರಾ. ಕೃ. ಅವರು "ಕುಮಾರರಾಮ" ಎಂಬ ಮತ್ತೊಂದು ಗೀತೆಯನ್ನು ನನ್ನ ಗಮನಕ್ಕೆ ತಂದಿರುತ್ತಾರೆ. ಡೊಂಬತಿಯಾದ ರತ್ನಾಜಿಯ ಆಟವನ್ನು ಕಂಡು ಕಂಪಿಲರಾಯನು ಮರುಳಾಗುವ ಘಟನೆಯಿಂದ ಈ ರಚನೆ ಮೊದಲಾಗುತ್ತದೆ. ಕಂಪಿಲನು "ಪಟ್ಟದ ಹೆಂಡತಿ ಹೆತ್ತ ತಾಯಿ ಸಮನೆಂದು" ರತ್ನಿಯ ತಂದೆಗೆ ಬರೆದು ಕೊಟ್ಟು ಆಕೆಯನ್ನು ಮದುವೆಯಾಗುತ್ತಾನೆ. ಇದರಿಂದ ಪಟ್ಟದರಸಿಯಾಗಿದ್ದ ಹರಿಯಮ್ಮನಿಗೆ ಕಷ್ಟ ಒದಗುತ್ತದೆ. ಬಂಜೆಯಾಗಿದ್ದ ಆಕೆ ಕೇವಲ ದೈವಾನುಗ್ರಹದಿಂದ ಗರ್ಭಿಣಿಯಾಗಲು ಅಪವಾದವುಂಟಾಗುತ್ತದೆ. ಆ ತಪ್ಪಿಗಾಗಿ ಹರಿಯಮ್ಮನ ತಲೆ ಕಡಿಯುವಂತೆ ಆಜ್ಞೆಯಾಗುತ್ತದೆ. ಆ ಕೆಲಸಕ್ಕೆ ನೇಮಕವಾಗಿದ್ದ ಚೆನ್ನಮಲ್ಲನು ಕತ್ತಿ ಬೀಸಲು, ಅದರಿಂದ ಹರಿಯಮ್ಮನ ಒಂದು ಕೂದಲು ಸಹ ಕೊಂಕುವುದಿಲ್ಲ. ಆತನು ನಿರುಪಾಯನಾಗಿ, ಸುರಹೊನ್ನೆಯ ರಸವನ್ನು ತಂದು ರತ್ನಿಯ ಹಣೆಗೆ ಹರಿಯಮ್ಮನ ರಕ್ತವೆಂದು ಬಳಿದು ಸುಮ್ಮನಾಗುತ್ತಾನೆ. ಇತ್ತ, ಹರಿಯಮ್ಮನ ಹೊಟ್ಟೆಯಲ್ಲಿ ಹುಟ್ಟುವ ವರಪುತ್ರನೇ ಕುಮಾರರಾಮ! ಕಾಡಿನಲ್ಲಿಯೇ ಹುಟ್ಟಿ, ಕಾಡಿನಲ್ಲಿಯೇ ಬೆಳೆದು, ಅವನು ಕಡುಗಲಿಯಾಗುತ್ತಾನೆ. ಅಸಾಧ್ಯ ತುಂಟನೂ ಆಗಿರುತ್ತಾನೆ. ಈ ಹುಡುಗನಿಗೆ ಮುತ್ತು ಹವಳಗಳಿಂದ ಮಾಡಿದ ಚೆಂಡನ್ನು ಆಡಬೇಕೆಂದು ಆಸೆಯಾಗುತ್ತದೆ. ಹರಿಯಮ್ಮನು ಬೆದರಿ "ನೀ ಮುತ್ತಿನ ಚೆಂಡು ಆಡಬೇಡ ರಾಮಣ್ಣ, ಅರಿವೆಯ ಚೆಂಡು ಅರುವತ್ತು ಹೊಲಿಸೇನು" ಎಂದು ಬುದ್ಧಿ ಹೇಳುತ್ತಾಳೆ. ಆ ಮಾತಿಗೆ ಮಗನು "ಅರಿವೆ ಚೆಂಡಾಡೋಕೆ ಹರದಿಯ ಮಗನೇನೆ ಹವಳದ ಹರಿಚೆಂಡು ಕೊಡು ನಮಗೆ" ಎಂದು ಹಟ ಹಿಡಿಯುತ್ತಾನೆ. ಅನಂತರ ಕುಮಾರ ರಾಮನು ತನ್ನ ಗೆಳೆಯರೊಂದಿಗೆ ಆಡುತ್ತಿದ್ದ ಚೆಂಡು, ರತ್ನಾಜಿಯ ಮನೆಗೆ ಹೋಗಿ ಬೀಳುತ್ತದೆ. ರತ್ನಾಜಿಗೂ ರಾಮನಿಗೂ ಮಾತುಕತೆಗಳಾಗುತ್ತವೆ. ಕಡೆಗೆ, ಆಕೆಯ ಎದೆಯ ಬಳಿಯಲ್ಲಿ ಬಚ್ಚಿಟ್ಟುಕೊಂಡಿದ್ದ ಚೆಂಡನ್ನು, ರಾಮನು ಕೈಯಿಂದ ಮುಟ್ಟಿದರೆ ಪಾಪವಾದೀತೆಂದು ಬಗೆದು "ಬಾಯಲಿ ಚೆಂಡ ಕಚ್ಚಿಕೊಂಡು" ಹೊರಗೆ ಬರುತ್ತಾನೆ. (ಈ ನಿರೂಪಣೆ ಜನಜನಿತವಾದ ಮೂರನೆಯ ಕಥೆಯಲ್ಲಿ ಬರುವ ಸಂದರ್ಭವನ್ನು ಹೋಲುತ್ತದೆ.) ಅಸಂತುಷ್ಟಳೂ ಕುಪಿತಳೂ ಆದ ರತ್ನಾಜಿ ಕಂಪಿಲರಾಯನಿಗೆ ರಾಮನ ಮೇಲೆ ದೂರು ಹೇಳುತ್ತಾಳೆ. ಈ ಕಥನ ಗೀತೆ ಇಲ್ಲಿಗೆ ಅಪೂರ್ಣವಾಗಿದೆ. ನಾಲ್ಕುನಾಲ್ಕು ಪಾದಗಳುಳ್ಳ ಪದ್ಯಗಳಿಂದ ಕೂಡಿರುವ ಈ ಗೀತ (ಒಮ್ಮೊಮ್ಮೆ ಮೂರು ಚರಣಗಳಿರುವುದೂ ಉಂಟು) ಬಹು ತ್ವರಿತವಾಗಿ ಸಾಗುತ್ತದೆ. ಹರಿಯಮ್ಮನ ಕಷ್ಟ, ಕುಮಾರರಾಮನ ಮಹಿಮೆಗಳ ಕಡೆಗೆ ಹೆಚ್ಚು ಗಮನವನ್ನು ಸೆಳೆಯುತ್ತದೆ.[1]

---

1. ಇದೇ ಗೀತದ 'ಹರಿಪಲ ದೇವಿ' ಎಂಬ ಮತ್ತೊಂದು ಪಾಠವನ್ನು ಶ್ರೀ. ಕ. ರಾ. ಕೃ. ಅವರ 'ಗುಡ್ಡಾಗಡಿನ ಹಾಡ್ಗತೆಗಳು' ಎಂಬ ಸಂಕಲನದಲ್ಲಿ ನೋಡಬಹುದು (ಪು. ೫೩).

ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕು ದೊಡ್ಡಪಾಲನಹಳ್ಳಿಯಲ್ಲಿ ಕುಮಾರರಾಮನ ಗುಡಿಯೊಂದು ಇರುವುದಾಗಿ ತಿಳಿದುಬರುತ್ತದೆ. ಅಲ್ಲಿ ಕುಮಾರರಾಮನನ್ನು ಕುರಿತು ಅನೇಕ ಪದಗಳು ಪ್ರಚಾರದಲ್ಲಿವೆ. ಅವನ ಸಾಹಸಗಳನ್ನು ಚಿತ್ರಿಸುವ ಕೆಲವು ಪದಗಳನ್ನು ನನ್ನ ಸ್ನೇಹಿತರಾದ ಶ್ರೀಮಾನ್ ಸಮೇತನಹಳ್ಳಿ ರಾಮರಾಯರು ನನಗಾಗಿ ಸಂಗ್ರಹಿಸಿ ಕೊಟ್ಟಿರುತ್ತಾರೆ. ಅವರ ಸಂಕಲನದ ಒಂದು ಭಾಗದಲ್ಲಿ ಕುಮಾರರಾಮನ ತೇಜಿಯ ವರ್ಣನೆ ಈ ರೀತಿಯಿದೆ.

ಎದ್ದಾನು ರಾಮಯ್ಯ ಎಳವಿಾಸೆ ತಿರುವುತ್ತ
ಗಗ್ಗರ ಬೀಟಾರ ನಡಸುತ್ತ—ಜಟ್ಟೇರ
ಕಾಳಗಕ್ಕೆ ಹೊರಟಾನು ||

ಅಂಗೈಲಿ ಆಡಾವೆ ಮುಂಗೈಲಿ ಕುಣಿದಾವೆ
ರಂಗುಮಾಣಿಕವೆ ನಿಮ ತೇಜಿ—ರಾಮಯ್ಯ
ರಂಗಳಿಸುತಾವೆ ಜಗಳಕ್ಕೆ ||

ಮಾತಿಗೆ ಮಾತು ಲೋಕನಾಳುತಾವೆ
ಲೋಕಪಾಲಕರ ನಡೆಮುಂದೆ–ರಾಮಯ್ಯ
ಚೆನ್ನ ತಟ್ಯಾನೆ ಕುದುರೇಗೆ ||

ಧೀರಣ್ಣ ರಾಮ ನೀಲ ತೇಜಿನೇರಿ
ನೀರಾಗೆ ಮೈಯ ತೊಳೆದಾನೆ–ರಾಮಯ್ಯ
ದೇವೇಂದ್ರಾಗೆ ವಾಲೆ ಬರೆದಾನೆ ||

ದೇವೇಂದ್ರ ವಾಲೆ ಏನೆಂದು ಬರೆದಾನು
ಕಡಿವಾಣ ಬಿಳಿಯೋಲೆ ಕಳುವೆಂದು–ರಾಮಯ್ಯ
ಬಾಣದ ಕೊನೆಗೆ ವಾಲೆ ಬರೆದಾನು ||

ನರಲೋಕದ ವಾಲೆ ದೇವಲೋಕಕೆ ಬಂತು
ಯಾವ ತಾಯೊ(ಯ್ದು ?) ಡೆದ ಶಿಶುವೆಂದು–ದೇವೇಂದ್ರ
ಕಡಿವಾಣ ಬಿಳಿಯೋಲೆ ಕಳಿಸ್ಯಾನು ||

* * * *

ಎಪ್ಪತ್ತು ರಾಯನ ಬೊಲ್ಲ ಸಿಕ್ಕೀತು ರಾಮಯ್ಯಗೆ
ಅವರಪ್ಪ ಕಂಪೂಲಿ ರಾಮಯ್ಯಗೆ–ಸಿಕ್ಕೀತು
ಶಿವನ ಸೆಡೆಮಂಚ ||

ಕುಮಾರರಾಮನಂಥ ಕಡುಗಲಿಗೆ ತಕ್ಕಂಥ ತೇಜಿಯ ವರ್ಣನೆ ಈ ಗೀತದಲ್ಲಿ ಬರುತ್ತದೆ. ಅದು ಉಕ್ಕನ್ನು ತಿಂದು ಬೆಳೆದ ತೇಜಿ. ಕವಿಗಳು ಕುಮಾರರಾಮನ ಅಶ್ವವನ್ನು ದಿವ್ಯಾಶ್ವವೆಂದೂ, ಅದು ಅತ್ಯಂತ ಸೋಜಿಗವಾಗಿ ಹುಟ್ಟಿ ಬಂದುದೆಂದೂ, ಅದರ ಹೆಸರು ಬೊಲ್ಲನೆಂದೂ ಹೇಳಿರುತ್ತಾರೆ. ರಣರಂಗದಲ್ಲಿ ಅದ್ದು ಮಾಡಿದ ಹಾವಳಿಯನ್ನು ಬಹು ಮನೋಜ್ಞವಾಗಿ ಚಿತ್ರಿಸಿರುತ್ತಾರೆ. ಜಾನಪದ ಕವಿಗಳ ಗಮನವೂ ಇತ್ತ ಹರಿದಿರುವುದು ಸಹಜವೇ ಸರಿ.

ಇಲ್ಲೇ ಪ್ರಚಲಿತವಾಗಿರುವ ಇನ್ನೊಂದು ಪದದಲ್ಲಿ ರಾಮಯ್ಯನ ಕತ್ತಿಯ ವಿಚಾರ, ಹರಿಯಮ್ಮನ ಹಿರಿಮೆ ಗರಿಮೆಗಳು ವೇದ್ಯವಾಗುತ್ತವೆ.

ಕೋಳಿ ಕೂಗ್ಯಾವು ಕುಂಬಾಳದ್ಹೊವೀಗೆ
ಬೆಟ್ಟ ಕೂಗ್ಯಾವು ಬಿದಿರೀಗೆ–ರಾಮಯ್ಯನ
ಕತ್ತಿ ಕೂಗ್ಯಾತು ಜಗಳಾಕ ||

ಕುದುರೆ ಕುಣಿದಾವ ಕಣಿಗಲೇರಿ ವ್ಯಾಲೆ
ನೀರು ಕುಣಿದಾತು ಕೊಳದಲ್ಲಿ–ರಾಮಯ್ಯನ
ಕತ್ತಿ ಕೂಗ್ಯಾತು ರಣದಲ್ಲಿ ||

*        *        *        *

ಮೊದಲೆ ನೆನೆದೇವು ಮದನ ಸುವಾರಿಯ
ಮದಗದಿಂದಾಸೆ ಮಧುರೇಯ–ಹರಿಯಮ್ಮನ
ಮೊದಲೆ ಸೊಲ್ಲಾಗಿ ನೆನೆದೇವು.

*        *        *        *

ತಾಯಿ ಹರಿಯಮ್ಮ ಪುತ್ರನಲ್ಲಿ ಪಡೆದಾಳು
ಚಿಕ್ಕ ಗುಡ್ಡದ ಕಣಿವೇಯ–ಕೂತುಕೊಂಡು
ಶೋಕ ಮಾಡ್ಯಾಳು ಶಿವನೀಗೆ ||

ರಾಯ ದುರ್ಗದ ಹೆಣ್ಣೆ ರಾಯರಾಡೋ ಚೆಂಡೆ
ನೀರಿಗ್ಯಾಕೆ ಬಂದೆ ಹರಿಯಮ್ಮ–ನಿನ ಕಂಡು
ದೊರೆಗಳು ಲೆಕ್ಕ ಮರೆತಾರು ||

ಉತ್ತರಿಗದ ಹೆಣ್ಣೆ ಉತ್ತಮರಾಡೋ ಚೆಂಡೆ
ಹಟ್ಟಿಗ್ಯಾಕೆ ಬಂದೆ ಹರಿಯಮ್ಮ–ನಿನ ಕಂಡು
ಸೆಟ್ಟಿಗಾರ ಲೆಕ್ಕ ಮರೆತಾನು ||

ಬಾಗಿಲು ತಡೆದಾವು ಬಗ್ಗಿ ಬಾರೆ ಹರಿಯಮ್ಮ
ಭಗವಂತ ಕಾಣೆ ನಿನ್ನ ಮಗ–ರಾಮಯ್ಯ
ಬಾಕಲೀಗೆ ಮುತ್ತ ಬಿಗಿಸವ್ನೆ ||

ಹೊಸಲು ತಡೆದಾವು ಕುಸಿದು ಬಾರೆ ಹರಿಯಮ್ಮ
ಕುಸಿದು ಬಾರೆ ಹರಿಯಮ್ಮ–ಹೊಸಲೀಗೆ
ಕುಶಲವ ಬಿಗಿಸ್ಯಾನು ||

ಕುಮಾರರಾಮನ ಮಹಿಮಾತಿಶಯಗಳನ್ನು ದಿನಗಟ್ಟಲೆ ಹಾಡುವ ಪದ್ಧತಿ ಇಂದಿಗೂ ನಡೆದುಕೊಂಡು ಬರುತ್ತಿರಬೇಕಾದರೆ, ಈ ವೀರನ ಕೊಂಡಾಟಕ್ಕೆ ಕೊನೆ ಮೊದಲಿಲ್ಲ.[1]

---

1. ಮೇಲೆ ಹೇಳಿದ ಅಪ್ರಕಟಿತ ರಚನೆಗಳನ್ನು ಬಳಸಿಕೊಳ್ಳಲು ಅನುಮತಿಯಿತ್ತ ಮೂವರು ಮಿತ್ರರಿಗೂ ನನ್ನ ವಂದನೆಗಳು.

ಕರ್ಣಾಟಕದ ಕೆಲವು ಕಡೆಗಳಲ್ಲಿ "ಜೋಕುಮಾರ" ಎಂಬ ಹೆಸರೊಂದು ಕೇಳಿಬರುತ್ತದೆ. ಶ್ರೀ. ನಾ. ಶ್ರೀ. ರಾಜಪುರೋಹಿತರು "ಗಂಡುಗಲಿ ಕುಮಾರರಾಮ" ಎಂಬ ತಮ್ಮ ಲೇಖನವೊಂದರಲ್ಲಿ[1] "ಉತ್ತರ ಕರ್ನಾಟಕದಲ್ಲಿ ಬಾರಿಕೇರ ಜಾತಿಯ (ಎಂದರೆ ಗಂಗೆ ಮಕ್ಕಳು) ಜನರು ಪ್ರತಿವರ್ಷ ಭಾದ್ರಪದ ಶುದ್ಧ ಅಷ್ಟಮಿ, ಎಂದರೆ ಜ್ಯೇಷ್ಠಾಷ್ಟಮಿಯ ದಿವಸ ಜೋಕುಮಾರನು ಹುಟ್ಟಿದನೆಂದು ಸಮಾರಂಭವನ್ನು ಮಾಡಿ, ಅದೇ ಭಾದ್ರಪದ ಮಾಸದ ಹುಣ್ಣಿಮೆಯ ದಿವಸ ಈ ಜೋಕುಮಾರನನ್ನು ಮಾದಿಗರಿಂದ ಕಬ್ಬಿಣದ ಉಳಿಯಿಯಿಂದ ಕೊಲ್ಲಿಸುವ ಸಮಾರಂಭವನ್ನು ನೆರವೇರಿಸಿರುತ್ತಾರೆ. ಈ ಸಂಪ್ರದಾಯದಲ್ಲಿ ಜೋಕುಮಾರನನ್ನು ಮಾದಿಗರಿಂದಲೇ ಕೊಲ್ಲಿಸುವುದನ್ನು ನೋಡಿದರೆ ಕುಮಾರರಾಮನನ್ನು ಮಾತಂಗಿಯೆಂಬ ಮಾದಿಗಗಿತ್ತಿಯು ಕೊಂದ ಕಥೆಯು ನೆನಪಿಗೆ ಬರುತ್ತದೆ. ಅಥ ಏವ ಈ ಜೋಕುಮಾರನ ಸಮಾರಂಭವು ಈ ಕುಮಾರರಾಮನ ಸ್ಮಾರಕೋತ್ಸವವಾಗಿರಬಹುದೆಂದು ತೋರುತ್ತದೆ. ಆದ್ದರಿಂದ, ಈ ಕುಮಾರರಾಮನು ಬಾರಿಕೇರ ಜಾತಿಯವನು ಆಗಿರಬಹುದೆಂದು ಊಹಿಸಬೇಕಾಗದೆ. ಪೂವಾಲಿ ಕುಲವೆಂದರೆ ಬಾರಿಕೇರ ಜಾತಿಯೇ ಹೇಗೆ?" ಎಂದು ಬರೆದಿರುತ್ತಾರೆ. ಈ ಅಭಿಪ್ರಾಯ ವಿಚಾರಾರ್ಹವಾದುದು. ಪ್ರಕೃತದಲ್ಲಿ ದೊರೆತಿರುವ ಇತರ ಸಾಧನ ಸಂಪತ್ತಿನಿಂದ ಇಲ್ಲಿ ಇದನ್ನು ಪರಿಶೀಲಿಸಬಹುದು.

ಜೋಕುಮಾರನಿಗೆ ಸಂಬಂಧಿಸಿದ ಸಂಪ್ರದಾಯ ಎಷ್ಟು ಹಿಂದಿನದೆನ್ನುವುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಆದರೆ, ಅವನನ್ನು ಕುರಿತು ಕನ್ನಡದ ಪ್ರಾಚೀನ ಗ್ರಂಥಗಳಲ್ಲಿಯೂ, ಜನಪದ ಸಾಹಿತ್ಯದಲ್ಲಿಯೂ ಉಲ್ಲೇಖಗಳು ಕಂಡುಬರುವುದು ಗಮನಾರ್ಹವಾದುದು. ಕ್ರಿ.ಶ. ೧೦೪೯ಕ್ಕೆ ಸೇರಿದ ಶ್ರೀಧರಾಚಾರ್ಯರ "ಜಾತಕ ತಿಲಕ"ದಲ್ಲಿ "ಭವನಾಂತದೊಳ್ ಸುಧಾಸಂಭವನಿರೆ, ಕಾಣದಿರೆ ಸೌಮ್ಯರಿಂ ಪಾಪಗಣಾ। ನವ ಪಂಚಮದೊಳ್ ಪುಟ್ಟಿದ ಕುವರಂ ಜೋಣರ (ಜೋಕೋರ?)ನಂತೆ ಪಲವುದೆವಸಮಿರಂ (vi, ೭)" ಎಂಬ ಪದ್ಯ ಬರುತ್ತದೆ. ಮದರಾಸಿನ ಮುದ್ರಣದ ಪ್ರತಿಯಲ್ಲಿ ಸೂಚಿಸಿರುವ "ಜೋಕೋರ" ಎಂಬ ಮೇಲಿನ ಪಾಠಾಂತರ ಜೋಕುಮಾರನನ್ನೇ ಉದ್ದೇಶಿಸಿರುವಂತಿದೆ. ಅವನ ಅಲ್ಪಾಯುಷ್ಯವನ್ನು ಕುರಿತು ಈ ಪದ್ಯದಲ್ಲಿ ಹೇಳಿರುವಂತಿದೆ. (ಸಂಪಾದಕರು "ಜೋಣರ" ಎಂಬ ಪಾಠವನ್ನು ಸ್ವೀಕರಿಸಿರುತ್ತಾರೆ. "ಜೋಕೋರ" ಎಂಬ ಮಾತನ್ನು ಇಟ್ಟುಕೊಂಡರೆ ಛಂದಸ್ಸಿನ ದೃಷ್ಟಿಯಿಂದ ದೋಷವಾದೀತೆಂದು ಹೀಗೆ ಮಾಡಿರಬಹುದು. ಈಗಲೂ, ಕಂದಪದ್ಯದ ಆರನೆಯ ಗಣದ ನಿಯಮಕ್ಕೆ ಭಂಗ ಬಂದಿದೆ. ಆದ್ದರಿಂದ, ಈ ಸಾಲನ್ನು "ಕುವರಂ ಜೋಕೋರನಂತೆ ಪಲದೆವಸಮಿರಂ" ಎಂದು ಇಟ್ಟುಕೊಂಡರೆ ಛಂದೋನಿಯಮ ಮತ್ತು ಅರ್ಥಗಳು ಸರಿ ಹೋಗುತ್ತವೆ ಎನ್ನುವುದನ್ನು ಗಮನಿಸಬಹುದು.)[2] ಕ್ರಿ.ಶ. ಸು. ೧೧೭೦ಕ್ಕೆ ಸೇರಿದ ನೇಮಿಚಂದ್ರನ "ನೇಮಿನಾಥ

---

1. "ಕರ್ಮವೀರ", ತಾ॥ ೨–೨–೧೯೮೨.

2. ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದವರು ಇತ್ತೀಚೆಗೆ ಪ್ರಕಟಿಸಿರುವ (೧೯೫೫) "ಜಾತಕ ತಿಲಕ"ದಲ್ಲಿ ಜೋಕುಮಾರನನ್ನು ಕುರಿತ ಪದ್ಯವು ಈ ರೀತಿ ಇದೆ: "ಭವನಾಂತದೊಳ್ ಸುಧಾಸಂಭವನಿರೆ ಕಾಣದಿರೆ ಸೌಮ್ಯರಿರೆ ಪಾಪಗಣಂ ನವಪಂಚಮದೊಳ್ ಪುಟ್ಟಿದ ಕುವರಂ ಜೋಕುವರನಂತೆ ಪಲದಿವಸಮಿರಂ (vi, ೭)." ಈ ಪಾಠವು ಮದರಾಸಿನ ಪ್ರತಿಯ ಸಂದೇಹವನ್ನು ನಿವಾರಿಸುತ್ತದೆ.

ಮೈಸೂರಿನ ಪ್ರತಿಯಲ್ಲಿ ಜೋಕುಮಾರನ ಕಥೆಯನ್ನೂ ಕೊಟ್ಟಿರುತ್ತಾರೆ. ಈತನು ಸಪ್ತ ಋಷಿಗಳ ಸೇವಕನಾದ ಜೋಕನೆಂಬುವನು ಭೂಲೋಕಪರ್ಯಟನೆಗಾಗಿ ಬಂದಾಗ ಮಾರಿಯನ್ನು ಕಂಡು ಮೋಹಗೊಂಡಿದ್ದರಿಂದ ಹುಟ್ಟಿದ ಮಗನೆಂದೂ, ಅತಿ ಕಾಮುಕನಾಗಿದ್ದುದರಿಂದ ಹುಟ್ಟಿದ ಏಳು ದಿನಗಳಲ್ಲಿಯೇ ಆಗಸರಿಂದ ಹತನಾದನೆಂದೂ, ಜೋಕಕುಮಾರನೆಂಬ ಹೆಸರೇ ಜೋಕುಮಾರನೆಂಬುದಾಗಿ ಬಳಕೆಗೆ ಬಂದಿತೆಂದೂ ತಿಳಿದುಬರುತ್ತದೆ (ಅಡಿ ಟಿಪ್ಪಣಿ, ಪು. ೩೯೮).

ಇದೇ ಸಂಪಾದಕರು ಬ್ರಹ್ಮಶಿವನ (ಕ್ರಿ.ಶ. ಸು. ೧೧೦೦?) "ಸಮಯಪರೀಕ್ಷೆ"ಯಲ್ಲಿ ಜೋಕುಮಾರನನ್ನು ಕುರಿತು ಬರೆದಿರುವ ಪದ್ಯವನ್ನೂ ಉದ್ಧರಿಸಿರುತ್ತಾರೆ. "ದೇವತೆ ಪೆಜಿರನದೆಂತುಂ ಕಾವಳ್ಗಡ ತನ್ನ ಪೆರ್ಮಗಂ ಜೋಕೋರಂ ಸಾವಾಗ ಕಾಯಲಾಱದ ಕೇವಿಲು (?) ಪೇಳ್ಪೆಱರ್ಗೆ ಮಾಡಲಾರ್ಪಳೆ ಸುಖಮಂ (ix, ೧೧೦)."

ಪುರಾಣ"ದಲ್ಲಿ "....ಬಲಿ ಜೋಕಾಱನಂತಿರೇೞು ದಿವಸದರಸುತನಮಂ ಬೇಡಿ ಪಡೆದಂ....(ಆ.vi, ೧೯ ಗ)" ಎಂಬುದಾಗಿ ಬರುತ್ತದೆ. ಬಂಧುವರ್ಮನ (ಕ್ರಿ.ಶ. ಸು. ೧೨೦೦) "ಜೀವಸಂಬೋಧನಂ" ಎಂಬ ಕೃತಿಯಲ್ಲಿ, ಮನುಷ್ಯನ ಬದುಕನ್ನು ಕುರಿತು ಹೇಳುವ ಸಂದರ್ಭದಲ್ಲಿ "ಮುನ್ನೆ ಕಟ್ಟಿದೊಂದವಧಿಯನೆಯ್ದೆ ನಿಟ್ಟಿಸಿರಲಾಗದ ಮಾನಸವಾೞ್ಕೆಗ ನಾಡೆ ಜೋಕುವರನ ಬಾೞ್ಕೆ ಲೇಸು ಗಡಮೇಕದು ನಿಟ್ಟಿಸಲಪ್ಪ ದೂಸಱಿಂ (ಅಧ್ರುವಾನುಪ್ರೇಕ್ಷೆ, ಪ. ೭)" ಎಂಬುದಾಗಿ ಜೋಕುಮಾರನ ಪ್ರಸ್ತಾಪ ಬರುತ್ತದೆ. ಕ್ರಿ.ಶ. ಸು. ೧೨೦೫ಕ್ಕೆ ಸೇರಿದ ಪಾರ್ಶ್ವಪಂಡಿತನ "ಪಾರ್ಶ್ವನಾಥ ಪುರಾಣ"ದಲ್ಲಿ "ಜೋಕುವರಂ ನೆಗೞ್ದಂ ಸುರಲೋಕ ವಿರುದ್ಧಮನೆ ಕಮಠನವನಿಂದಧಿಕಂ। ಲೋಕವಿರುದ್ಧಮುಮಂ ಸುರಲೋಕವಿರುದ್ಧಮುಮನಿರದೆ ನೆಗೞ್ವುದಱಿಂದಂ (ಪಾ.ಪು., iii, ೬೫)" ಎಂಬ ಪದ್ಯದಲ್ಲಿ ಈತನ ಪುಂಡಾಟವನ್ನು ಕುರಿತು ಹೇಳಲಾಗಿದೆ. ಇವುಗಳನ್ನು ಪರಿಶೀಲಿಸಿದರೆ, ಜೋಕುಮಾರನ ಅಲ್ಪಾಯುಸ್ಸು ಮತ್ತು ತುಂಟತನಗಳು ಸುಪ್ರಸಿದ್ಧವಾದ ಸಂಗತಿಯಾಗಿದ್ದುವು ಎಂದು ತೋರಿಬರುತ್ತದೆ.[1]

ಜನಪದ ಸಾಹಿತ್ಯದಲ್ಲಿ ಇವನ ಜೀವನವೃತ್ತಾಂತವನ್ನು ಚಿತ್ರಿಸುವ ಪದ್ಯಗಳು ಇಂದಿಗೂ ಪ್ರಚಾರದಲ್ಲಿವೆ. ಡಾ|| ಬಿ. ಎಸ್. ಗದ್ದಗಿಮಠ, ಅವರ ಸಂಕಲನದಲ್ಲಿ ಒಂದು ಪದ್ಯವಿದೆ ("ಜನತಾ ಗೀತೆಗಳು". ಪು. ೭). "ಜೋಕುಮಾರ ಹುಟ್ಟಲಿ ಲೋಕವು ಬೆಳೆಯಲಿ ಆಕಳ ಹಾಲ ಕರೆಯಲಿ। ಹರಿಯಾಗ ಕಾತೆದ್ದು ಮಸರು ಕಡೆಯಲಿ ||" ಎಂದು ಆರಂಭವಾಗುತ್ತದೆ. ಇವನು ಮಳೆತರುವ ದೇವತೆಯೆಂದು ಜನರಲ್ಲಿ ನಂಬಿಕೆ. ಇವನ ಆಗಮನವಾಗುವುದೇ ತಡ ಮಳೆ ಮೊದಲಾಗುವುದಂತೆ. ಅದಕ್ಕಾಗಿಯೇ "ಅಡ್ಡಡ್ಡ ಮಳೆಬಡಿದ ದೊಡ್ಡ ದೊಡ್ಡ ಕೆರೆ ತುಂಬಿ ಗುಡ್ಡಗಳೆಲ್ಲ ಹೈನಾಗಿ। ಗೌಡ್ಸರ ಸೆಡ್ಡಿಯ ವ್ಯಾಲೆ ಸಿರಿಬಂದು" ಎಂದು ಹೇಳಿದೆ. ಈತನ ಅಲ್ಪಾಯುಷ್ಯವನ್ನು ಕುರಿತು "ಹುಟ್ಟಿದೇಳು ದಿವಸದಲಿ ಪಟ್ಟಣವ ತಿರುಗ್ಯಾನ ದಿಟ್ಣಾದೇವಿ ನಿನ ಮಗನ। ಕೊಮರಾಗ ಕೊಟ್ರಿವ್ವೇಳು ದಿನಗಳ" ಎಂದು ಸೂಚಿಸಿದೆ. ಆದರೆ, ಆ ಏಳು ದಿನಗಳಲ್ಲಿಯೇ ಇವನು ಅಸಾಧ್ಯ ಪುಂಡನಾಗಿ ಮೆರೆದನಂತೆ. ಅತಿ ಕಾಮುಕನಾದ ಈತನು ಊರಿನ ಹೆಂಗಸರಿಗೆ ಕಂಟಕವಾದನಂತೆ. ಆದ್ದರಿಂದ "ಪುಂಡನ ಪುಂಡಾಟ್ಕ ಹಿಂಡ ಮಂದಿ ಕೂಡ್ಯಾರ ಕಂಡಲಿ ಕಲ್ಲೀಗೆ ಬಡಿದಾರ। ರಾತ್ರ್ಯಾಗ ಆಗಸರ ಕಲ್ಲಾಗ ತುರಿಕ್ಯಾರ" ಎಂದು ಹೇಳಲಾಗಿದೆ. ಹೀಗೆ ಇವನ ಬದುಕು ದುರಂತವಾದರೂ, ಕಡೆಯಲ್ಲಿ ಇವನಿಂದ ಮಳೆಬೆಳೆಗಳಿಗೆ ಉಪಕಾರವಾಗಲು ಇವನ ಸ್ಮರಣೆಯ ದಿನವನ್ನು ವರ್ಷಕ್ಕೆ ಒಮ್ಮೆ ಆಗಸರು ಇಂದಿಗೂ ಆಚರಿಸುತ್ತಾರೆ. ಜೋಕುಮಾರನ ಹಾವಳಿಯನ್ನು ಚಿತ್ರಿಸುವ ಅನೇಕ ಅಶ್ಲೀಲವಾದ ಪದಗಳೂ ಉಂಟು. ಅವುಗಳನ್ನು ಕೇಳಿ ತಿಳಿಯಬೇಕೇ ವಿನಾ ಬರೆಯುವಂತಿಲ್ಲ. ಈ ಸಂಪ್ರದಾಯವನ್ನು ಕುರಿತು ಡಾ|| ಬಿ.ಎಸ್. ಗದ್ದಗಿಮಠ, ಅವರು "ಜೋಕುಮಾರನು ಕನ್ನಡಿಗರ ಸಂಪ್ರದಾಯ. ಒಕ್ಕಲಿಗನು ಜೋಕುಮಾರನ ಪೂಜೆಯನ್ನು ಮಣ್ಣಪೂಜೆಯೆಂದು ನಂಬುತ್ತಾನೆ. ಜೋಕುಮಾರನು ವಿಷ್ಣಾದೇವಿಯ ಮಗನೆಂದೂ, ಅಷ್ಟಮಿಯ ಕೊಡದಲ್ಲಿ ಜನಿಸಿದನೆಂದೂ ಜೋಕುಮಾರನ ಹಾಡಿನಲ್ಲಿ ಬರುವುದು. ಜೋಕುಮಾರನ ಅಳಕ ಅಂಬಲಿಯೇ ಒಕ್ಕಲಿಗನು ತನ್ನ ಬೆಳಸಿಗೆ ಒಗೆಯುವ ಮೊದಲನೆಯ ಚೆರಗ"[2] ಎಂದು ಬರೆದಿರುತ್ತಾರೆ. ಜೋಕುಮಾರನು ಕುಮಾರಸ್ವಾಮಿಯ ಅವತಾರವೆಂದೂ, ಆತನು ಮದುವೆಯಿಲ್ಲದೆ ಇರಲು, ತಾಯಿ ಯಾರನ್ನು ಮದುವೆಯಾಗುವೆ ಎನ್ನಲು, ಆಕೆಯಂತೆಯೇ ಇರುವವಳು ದೊರೆತರೆ ಆಗುವೆ

---

1. ಈ ಪ್ರಾಚೀನ ಪ್ರಯೋಗಗಳ ಕಡೆಗೆ ನನ್ನ ಗಮನವನ್ನು ಸೆಳೆದ ಪ್ರೊ. ಡಿ. ಎಲ್. ನರಸಿಂಹಾಚಾರ್ ಅವರಿಗೆ ನಾನು ಋಣಿಯಾಗಿದ್ದೇನೆ.

2. "ಜನತಾಗೀತೆಗಳು" ಮೊದಲ ಮಾತು, ಪು. ೧೭.

ನೆಂದು ಹೇಳಲು, ಅವನ ತಲೆ ಕಡಿದುಬಿತ್ತೆಂಬುದಾಗಿ ಮತ್ತೊಂದು ಜನಜನಿತವಾದ ಕಥೆಯೂ ಉಂಟು.[1]

ಈ ವಿವರಗಳನ್ನು ಪರಿಶೀಲಿಸಿದರೆ ಜೋಕುಮಾರನಿಗೂ ಕುಮಾರರಾಮನಿಗೂ ಏನೇನೂ ಸಂಬಂಧ ವಿಲ್ಲವೆಂಬುದು ಸ್ವಯಂವಿದಿತವಾಗುತ್ತದೆ. ಕುಮಾರರಾಮನ ಹೆಸರು ಕಂಪಿಲರಾಯನಿಂದ ಇತ್ತೀಚೆಗೆ, ಎಂದರೆ ಕ್ರಿ.ಶ. ೧೪ ನೆಯ ಶತಮಾನದ ತರುವಾಯ ಕೇಳಿಬರಬಹುದಾದದ್ದು. ಜೋಕುಮಾರನ ಹೆಸರಾದರೋ ಕ್ರಿ.ಶ. ೧೧ ನೆಯ ಶತಮಾನದ ವೇಳೆಗಾಗಲೇ ಉದ್ಗ್ರಂಥಗಳಲ್ಲಿ ಕಾಣಿಸಿಕೊಳ್ಳಲು ಮೊದಲಾಗಿದೆ. ಕುಮಾರರಾಮನು ಪರದಾರಸೋದರತ್ವಕ್ಕೆ ಹೆಸರುವಾಸಿಯಾದವನು. ಜೋಕುಮಾರನ ನಡತೆ ಇದಕ್ಕೆ ತೀರ ವಿರುದ್ಧವಾದುದು. ಜನಪದ ಕಥೆಗಳಲ್ಲಿ ಹಲಕೆಲವು ವ್ಯತ್ಯಾಸಗಳು ಕಂಡುಬರುವಂತೆ ಈ ಸಂಪ್ರದಾಯದ ಆಚರಣೆಯಲ್ಲಿಯೂ ಅಂತರವಿರಬಹುದು. ಶ್ರೀ. ರಾಜಪುರೋಹಿತರು ಪ್ರಸ್ತಾಪಿಸಿರುವ ಜೋಕುಮಾರನನ್ನು ಮಾದಿಗರಿಂದ ಕೊಲ್ಲಿಸುವ ಪದ್ಧತಿ ಪ್ರಾದೇಶಿಕವಿರಬಹುದು. ಇದಲ್ಲದೆ ಅವನ ಹೇಯವರ್ತನೆಗೆ ತಕ್ಕಂತೆ ಈ ರೀತಿಯಾದ ಅಸಹ್ಯಕರವಾದ ಸಾವನ್ನು ವಿಧಿಸಿರಬಹುದು. ಕಡೆಯದಾಗಿ ಜೋಕುಮಾರನ ಹಬ್ಬ ಭಾದ್ರಪದದಲ್ಲಿ ಬರುತ್ತದೆ. ಗಣಪತಿ ಭೂಲೋಕವನ್ನೆಲ್ಲ ಸುತ್ತಿ ಕೈಲಾಸಕ್ಕೆ ಹಿಂತಿರುಗಿ ಎಲ್ಲರೂ ಕುಶಲವಾಗಿದ್ದಾರೆಂದು ವರದಿ ಮಾಡಿದನಂತೆ. ಆಗ, ಇದನ್ನು ಖಂಡಿಸಿ, ಜೋಕುಮಾರನು ಜನ್ಮವೆತ್ತಿ ಬಂದು ಜನರ ಹಾಹಾಕಾರವನ್ನು ಕಂಡು ಮಳೆಯುಂಟು ಮಾಡಿದನಂತೆ.[2] ಕುಮಾರರಾಮನ ಉತ್ಸವವಾದರೋ ವೈಶಾಖ ಶುಕ್ಲ ಹುಣ್ಣಿಮೆಯ ದಿನ ನಡೆಯುತ್ತದೆ.[3] ಈ ಅಂಶಗಳ ಆಧಾರದ ಮೇಲೆ, ಜೋಕುಮಾರ ಮತ್ತು ಕುಮಾರರಾಮರಿಬ್ಬರೂ ಬೇರೆ ಬೇರೆ ಎಂಬುದಾಗಿ ಖಚಿತವಾಗುತ್ತದೆ.

ಕುಮಾರರಾಮನಿಗೆ ಜನಪದ ಸಾಹಿತ್ಯದಲ್ಲಿ ದೊರೆತಿರುವ ಸ್ಥಾನ ಗಣನೀಯವಾದುದು. ನಂಜುಂಡ, ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿಗಳು ತಮ್ಮ ಕಾವ್ಯವಸ್ತುವನ್ನು ಸೂಚಿಸುವಲ್ಲಿ, ಅದು ನರಕೃತಿಯೆಂದು ತೆಗಳಬೇಡಿ ಎಂಬುದಾಗಿ ಹೇಳಿಕೊಳ್ಳುವಾಗ, ಅದು ಜನಸಾಮಾನ್ಯರ ವಸ್ತುವಾಗಿದ್ದುದರಿಂದ ತಮಗೆ ಮನ್ನಣೆ ಕೊಡಲಾರರೆಂದು ಭಾವಿಸಿ ಅಳುಕಿದಂತಿದೆ. ನಂಜುಂಡನು "ಇದು ಪುಣ್ಯಕಥೆಯಲ್ಲ, ಪುರಾಣೋಕ್ತವಲ್ಲ ಇದು ಚರಿತೆಯಲ್ಲ" ಎಂದು ಆಕ್ಷೇಪವೆತ್ತುವವರನ್ನು ಕಂಡು ನುಡಿಯಬೇಕಾದರೆ, ಅವನ ಕಾಲಕ್ಕಾಗಲೇ ಕುಮಾರರಾಮನ ಕಥೆ ಐತಿಹ್ಯವಾಗಿ ಪರಿಣಮಿಸಿ, ಅದನ್ನು ಆರಿಸಿಕೊಳ್ಳುವಾಗ ಅವನ ಮನಸ್ಸೂ ಶಂಕೆಪಟ್ಟಿರುವಂತಿದೆ. ಆದ್ದರಿಂದ, ಕುಮಾರರಾಮನ ಕಥೆ ಜನಪದ ಸಾಹಿತ್ಯದಲ್ಲಿ ಬೀಜರೂಪದಲ್ಲಿ ಹುದುಗಿದ್ದು, ವೀರನೊಬ್ಬನ ಕತೆಯಾಗಿ ಮೆರೆದು, ಕಡೆಗೆ ಕವಿಗಳ ಚಿತ್ತವನ್ನು ಸೆಳೆದು, ದೊಡ್ಡದಾಗಿ ಬೆಳೆದು ಈವರೆಗೆ ಉಳಿದುಬಂದಿದೆ ಎನ್ನಬಹುದು.

---

1. ಡಾ॥ ಎಂ. ಚಿದಾನಂದಮೂರ್ತಿಗಳು ಇತ್ತೀಚೆಗೆ 'ಜೋಕುಮಾರ' ಎಂಬ ಲೇಖನವನ್ನು ಬರೆದಿರುತ್ತಾರೆ. ಅಲ್ಲಿ ಈತನನ್ನು ಕುರಿತು ಆಚರಣೆಯಲ್ಲಿರುವ ಸಂಪ್ರದಾಯಗಳನ್ನೂ ಪ್ರಚಲಿತವಾಗಿರುವ ಜಾನಪದ ಗೀತಗಳನ್ನೂ ಪರಿಚಯಮಾಡಿಕೊಳ್ಳಬಹುದು (ಪ್ರಬುದ್ಧ ಕರ್ಣಾಟಕ, xlvi, ೪, ಪು. ೩–೨೨).

2. ಈ ವಿಷಯವನ್ನು ಶ್ರೀ. ದ. ರಾ. ಬೇಂದ್ರೆ, ಅವರಿಂದ ಕೇಳಿ ತಿಳಿದಿದ್ದು.

3. QJMS., Vol. xx, No. 4, P. 268.

# ೯. ಕೈಫಿಯತ್ತುಗಳು

ಮದರಾಸಿನ ಪ್ರಾಚ್ಯ ಪುಸ್ತಕಭಂಡಾರದಲ್ಲಿ ಕುಮಾರರಾಮನನ್ನು ಕುರಿತ ಕೆಲವು ಕೈಫಿಯತ್ತುಗಳಿವೆ.[1] ಅವುಗಳು ಯಾವುವೆಂದರೆ :—

(i) ತಾಲ್ಲೂಕು ಕಂಪಲಿ ಕೈಫಿಯತ್ತು (M. 146)
(ii) ಕಂಪಲಿರಾಯನ ಮಗ ಕುಮಾರರಾಮನ ಆದಿವೃತ್ತಾಂತ (M. 146)
(iii) ಕುಮಾರರಾಮನ ಕತೆ (ಭಟ್ಟರಹಳ್ಳಿಯ ಕೈಫಿಯತ್ತು) (D. 1798)
(iv) ಕಂಪ್ಲಿ ಗುತ್ತಿ ಮುಂತಾದ ಕೈಫಿಯತ್ತು (D. 1837)
(v) ಸೊಂಡೂರು ಕೈಫಿಯತ್ತು (M. 110)
(vi) ಕುಮಾರರಾಮಗೆ ಭಟ್ಟರು ಹೊಗಳುವಂಥ ಭಟ್ಟಂಗಿನಿ (M. 369)

ಈ ಕೈಫಿಯತ್ತುಗಳು ಸಾಮಾನ್ಯವಾಗಿ ಆಯಾ ಸ್ಥಳದ ಮಹಿಮೆಯನ್ನು ವಿವರಿಸುತ್ತವೆ. ಕುಮಾರರಾಮನ ಜೀವನಕ್ಕೆ ಸಂಬಂಧಪಟ್ಟಂತೆ ಹಲವಾರು ಅಂಶಗಳು ಈ ಮೂಲಕ ವಿದಿತವಾಗುತ್ತವೆ. ಕಾಲದ ದೃಷ್ಟಿಯಿಂದ ಈ ರಚನೆಗಳು ಇತ್ತೀಚಿನದಾದರೂ, ಜನರಲ್ಲಿ ವಾಡಿಕೆಯಾಗಿರುವ ಭಾವನೆಗಳನ್ನು ತಿಳಿಯಲು ತುಂಬ ಸಹಾಯಕವಾಗಿವೆ.[2] ಇವುಗಳಲ್ಲಿ ಪರಸ್ಪರ ಸಾಮ್ಯಗಳೂ, ಒಂದೆರಡು ಎಡೆಗಳಲ್ಲಿ ವ್ಯತ್ಯಾಸಗಳೂ ಕಂಡುಬರುತ್ತವೆ. ಇವುಗಳಲ್ಲಿ ವಿದಿತವಾಗುವ ಮುಖ್ಯಾಂಶಗಳನ್ನು ಹೀಗೆ ಸಂಗ್ರಹಿಸಬಹುದು :—

> "(ಮುಮ್ಮಡಿ) ಸಿಂಗನೆಂಬಾತನು ತನ್ನ ದಾಯಾದಿಗಳ ಕಾಟವನ್ನು ತಡೆಯಲಾರದೆ, ರಾಜ್ಯವನ್ನೆಲ್ಲ ಅವರಿಗೆ ಹಂಚಿಕೊಟ್ಟು ತಾನು ದೇವಗಿರಿಯ ರಾಮದೇವರಾಯನನ್ನು ಆಶ್ರಯಿಸಿದನು. ಅಲ್ಲಿ, ಒಂದು ದಿನ ಬೇಟೆಗೆ ಹೋಗಿರುವಾಗ ಹೇಮಮಯವಾದ ಉಡವೊಂದು ಹುತ್ತವನ್ನು ಪ್ರವೇಶಿಸಿತು. ಸಿಂಗನು ಆ ಹುತ್ತವನ್ನು ಬೆದಕಿ ನೋಡಲು ಅವನಿಗೆ ಕೊಪ್ಪರಿಗೆ ಹಣ ದೊರಕಿತು. ಸಿಂಗನು ತನ್ನ ರಾಜನ ಅಪ್ಪಣೆಯನ್ನು ಪಡೆದು ಒಂದು ಊರನ್ನು (ಹಾನೆಯ) ನಿರ್ಮಿಸಿದನು. ಅನಂತರ ಮತ್ತೊಂದು ದಿನ ರಾಜನೊಂದಿಗೆ ಬೇಟೆಗೆ ಹೋಗಿರುವಾಗ, ಸಿಂಹವೊಂದು ಎದುರಾಗಲು ಅದನ್ನು ಸಂಹರಿಸಿದನು. ರಾಜನು ಅವನ ಪರಾಕ್ರಮಕ್ಕೆ ಮೆಚ್ಚಿ ಸಿಂಗನಿಗೆ "ಮುಮ್ಮಡಿ" ಎಂಬ ಬಿರುದನ್ನು ದಯಪಾಲಿಸಿದನು. ಮುಮ್ಮಡಿ ಸಿಂಗನಿಗೆ ಕಂಪಿಲಿ ಸೋಮೇಶ್ವರನ ವರಪ್ರಸಾದದಿಂದ ಒಬ್ಬ ಮಗನು ಹುಟ್ಟಿದನು. ಈತನೇ ಕಂಪಿಲರಾಯ. ಈತನೂ ಒಂದು ದಿನ ಒಂದು ಹುಲಿಯನ್ನು ಕೆಚ್ಚಿನಿಂದ ಸಂಹರಿಸಿದ್ದರಿಂದ ಇವನಿಗೆ ರಾಮದೇವರಾಯನು "ಹೆಬ್ಬುಲಿ ಕಂಪಿಲರಾಯ ಸಹಸ್ರರಾಯರ ಗಂಡ" ಎಂಬ ಬಿರುದಾವಳಿ

---

1. "An Alphabetical Index of Kannada Manuscripts-Mackenzie's Collection" ನೋಡಿ.

2. "Stepping further, we come to another class of sources which outweigh the other categories by their number and volume...These are the local Kaifiyats or the village chronicles compiled at a later date. Their information is generally based on second traditions, unverified reports and other miscellaneous stuff. But they have their own place in the scheme of historical studies."—From "Jainism in South India, P. 11", By Dr. P. B. Desai.

ಯನ್ನು ದಯಪಾಲಿಸಿದನು. ಸುರುತಾಳನು ದೇವಗಿರಿಯ ಮೇಲೆ ದಂಡೆತ್ತಿ ಬಂದು ರಾಮ ದೇವರಾಯನನ್ನು ವಶಪಡಿಸಿಕೊಳ್ಳಲು, ನೆಲೆಗಾಣದೆ ಮುಮ್ಮಡಿ ಸಿಂಗನು ಮತ್ತೆ ತನ್ನ ಮಲೆ ಪಂಕ್ತಿ ದೇಶಕ್ಕೆ ತೆರಳಿದನು. ಆಗ ರಾಯದುರ್ಗದಲ್ಲಿ ರಾಮದೇವರಾಯನ ಸಂಬಂಧಿಯಾದ ಮಲ್ಲದೇವರಾಯನು ರಾಜ್ಯವಾಳುತ್ತಿದ್ದನು. ಆತನು ಮುಮ್ಮಡಿ ಸಿಂಗನಿಗೆ ಆತನ ಹಿಂದಿನ ದಳವಾರಿಕೆಯನ್ನು ಕೊಟ್ಟು ಸತ್ಕರಿಸಿದನು. ಕೆಲವು ಕಾಲವಾದ ಮೇಲೆ ಮಲ್ಲದೇವರಾಯನು ಮೃತಿ ಹೊಂದಲು ಆತನ ಸೋದರಳಿಯನಾದ ಮಲ್ಲನೆಂಬುವನು ಸಿಂಹಾಸನವನ್ನು ಏರಿದನು. ಸಿಂಗನು ಇದನ್ನು ಸಹಿಸಲಾರದೆ ಆತನನ್ನು ಸಂಹರಿಸಿ ತಾನೇ ರಾಜನಾದನು. ಇಲ್ಲಿಂದ ಮುಂದೆ ಮುಮ್ಮಡಿ ಸಿಂಗನ ಸ್ವತಂತ್ರ ಆಧಿಪತ್ಯ ಮೊದಲಾಯಿತು. ಈತನು ರಾಯದುರ್ಗದ ಸೆಟ್ಟಿಯ ಮಗನಾದ ಬೈಚಪ್ಪನೆಂಬುವನನ್ನು ಮಂತ್ರಿಯನ್ನಾಗಿ ನೇಮಿಸಿಕೊಂಡನು. ಕಂಪಿಲರಾಯನಿಗೆ ಕನಕಗಿರಿಯ ಗುಜ್ಜಲ ಹರಿಯಾಲದೇವಿಯನ್ನು ಕೊಟ್ಟು ಮದುವೆಯಾಯಿತು.

ಕಂಪಿಲರಾಯನಿಗೆ ಐದು ಜನ ಹೆಂಡತಿಯರು. ಅವರಲ್ಲಿ ಪಟ್ಟದರಸಿಯೇ ಹರಿಯಾಲದೇವಿ. ಆಕೆಗೆ ಬಹಳ ಕಾಲದವರೆಗೆ ಮಕ್ಕಳೇ ಇಲ್ಲದಿರಲು ಆಕೆ ತನ್ನ ಸವತಿಯೊಬ್ಬಳ ಮಗನಾದ ಕಾಟಣ್ಣನನ್ನು ಸಾಕುತ್ತಿದ್ದಳು. ಕಡೆಗೆ ಜಟ್ಟಂಗಿರಾಮೇಶನ ಕೃಪೆಯಿಂದ ಆಕೆಗೂ ಒಬ್ಬ ಮಗನಾದನು. ಇವನೇ ಕುಮಾರರಾಮ. ಮುಮ್ಮಡಿ ಸಿಂಗನ ಮರಣಾನಂತರ ಕಂಪಿಲರಾಯನು ರಾಯದುರ್ಗದಿಂದ ಬೇಟೆಯಾಡುತ್ತ ಬರುತ್ತಿರುವಾಗ ಸೊಂಡೂರಿನ ಬಳಿ ಪ್ರಶಸ್ತವಾದ ಒಂದು ಎಡೆಯಲ್ಲಿ ನೆಲೆಸಿ ಹೊಸಮಲೆದುರ್ಗವನ್ನು ನಿರ್ಮಿಸಿದನು. ಇದಕ್ಕೆ ರಾಮನದುರ್ಗವೆಂದೂ ಹೆಸರುಂಟು. ಈ ವೇಳೆಗೆ ಕುಮಾರರಾಮನು ಯುವಕನಾಗಿದ್ದುದರಿಂದ ದಿನದಿನಕ್ಕೂ ಅವನ ಮಹಿಮೆ ಹೆಚ್ಚಾಗಿ ಬೆಳೆಯಿತು. ಈ ಕುಮಾರನು ತಂದೆಯ ಅನುಮತಿಯನ್ನು ಪಡೆದು ಮಂತ್ರಿ ಬೈಚಪ್ಪನೊಂದಿಗೆ ತೆರಳಿ, ತೊರೆಗಲ್ಲು, ಬಾದಾವಿ, ಹಾನುಗಲ್ಲು ನಿಡುಗಲ್ಲು, ಪೆನಗೊಂಡೆ ಮುಂತಾದ ಸ್ಥಳಗಳ ಪಾಳೆಯಗಾರರನ್ನು ಗೆದ್ದು ಬಂದನು. ಸುರುತಾಳ ಬಲ್ಲಾಳರಿಬ್ಬರನ್ನು ಮಾತ್ರ ಬಿಟ್ಟು ಉಳಿದವರಿಂದ ಕಪ್ಪವನ್ನು ತಂದನು. ಈ ಮಧ್ಯೆ, ಗುತ್ತಿಯ ಜಗತಾಪಿ ಕಂಪಿಲನ ಮೇಲೆ ದಂಡೆತ್ತಿ ಬರಲು, ಹನ್ನೆರಡು ವರ್ಷದ ರಾಮನು ಅವನನ್ನೂ ಸೋಲಿಸಿದನು. ಅನಂತರ ರಾಮನಿಗೂ ಕಂಪಿಲನಿಗೂ ಭಿನ್ನಾಭಿಪ್ರಾಯವುಂಟಾಗಿ, ಹಟತೊಟ್ಟು ಓರುಗಲ್ಲಿಗೆ ಹೋಗಿ, ಪ್ರತಾಪರುದ್ರನ ಕುಮಾರನಾದ ಯಪ್ಪತ್ತಿರಾಜನ ಬೊಲ್ಲನನ್ನು ತಂದನು. ಈ ಸಂದರ್ಭದಲ್ಲಿ ರಾಮನಿಗೆ ದೇವಿಶೆಟ್ಟಿಯ ಸ್ನೇಹವಾಯಿತು.

ಹೀಗೆ ರಾಮನಿಗೆ ವಿಜಯ ಪರಂಪರೆಗಳು ಆದ ಬಳಿಕ, ಬೊಲ್ಲನನ್ನು ತರುವಂದು ತಾನು ಗುಂಡುಬ್ರಹ್ಮಯ್ಯನಿಗೆ ಹರಕೆ ಹೊತ್ತಿದ್ದ ಮೇರೆಗೆ ಶೂಲದ ಹಬ್ಬವನ್ನು ಆಚರಿಸಿದನು. ಈ ಸಂದರ್ಭದಲ್ಲಿಯೇ ಕಂಪಿಲರಾಯನ ಕಿರಿಯ ಹೆಂಡತಿಯಾದ ರತ್ನಾಜಿ ರಾಮನನ್ನು ಕಂಡು ವ್ಯಾಮೋಹಗ್ರಸ್ತಳಾದಳು. ತರುವಾಯ ಬೇರೊಂದು ದಿನ ಕುಮಾರರಾಮನು ಬೇಟೆಯಾಡುತ್ತಿರುವಾಗ ತುಂಗಭದ್ರಾನದಿಯ ಉತ್ತರದಲ್ಲಿದ್ದ ಕುಮ್ಮಟ ಎಂಬ ಗ್ರಾಮಕ್ಕೆ ಬಂದನು. ಅಲ್ಲಿ ಕೆಲವು ಜೈನರು ವಾಸಿಸುತ್ತಿದ್ದರು. ಅವರು ಕುಮಾರರಾಮನನ್ನು ಸತ್ಕರಿಸಿ ಊಟವಿಕ್ಕಿದರು. ಕುಮಾರರಾಮನು ಎದ್ದು ಹೋದ ಬಳಿಕ, ಅವನು ಊಟಮಾಡಿದ್ದ ಎಡೆಗೆ ಪ್ರಾಯಶ್ಚಿತ್ತ ಮಾಡಿದರು. ಇದನ್ನು ಕೇಳಿ ಕುಮಾರರಾಮನಿಗೆ ಸಿಟ್ಟು ಬಂದಿತು. ತಾನು ಅದೇ ಸ್ಥಳದಲ್ಲಿ ಕುರಿ ಕೋಣಗಳನ್ನು ಕಡಿಯಲು, ಅಲ್ಲಿದ್ದ ಜೈನರು ತಮ್ಮ ಅಹಿಂಸಾವ್ರತಕ್ಕೆ ಭಂಗವುಂಟಾಯಿತೆಂದು ಬಗೆದು, ಆ ಸ್ಥಳವನ್ನು ಬಿಟ್ಟು ಕೊಪ್ಪಳಕ್ಕೆ ಹೋಗಿ ನೆಲಸಿದರು. ಇತ್ತ

ಕುಮಾರರಾಮನು ಆ ಪ್ರದೇಶ ಏಳು ಗುಡ್ಡಗಳ ಮಧ್ಯೆ ಇದ್ದುದನ್ನು ಕಂಡು ಅಲ್ಲಿ ಬಲವಾದ ಒಂದು ಕೋಟೆಯನ್ನು ಕಟ್ಟಿಸಿದನು. ಇದೇ ಕುಮ್ಮಟದುರ್ಗ. ಕುಮಾರರಾಮನು ತಾನು ಕಟ್ಟಿಸಿದ ದುರ್ಗಕ್ಕೆ ತಂದೆಯನ್ನು ಬರಮಾಡಿಕೊಂಡು ಸನ್ಮಾನಿಸಿದನು.

ಒಮ್ಮೆ ಕಂಪಿಲರಾಯನು ಬೇಟೆಗೆ ಹೊರಟನು. ರಾಮನು ಕಾರಣಾಂತರದಿಂದ ತಂದೆಯ ಜೊತೆಯಲ್ಲಿ ಹೋಗದೆ, ಹಂಪೆಯ ಹೊಳೆಯಲ್ಲಿ ತನ್ನ ಮನ್ನೆಯರೊಂದಿಗೆ ನೀರಾಟ ವಾಡಲು ತೊಡಗಿದನು. ಅನಂತರ ತಾಯಿಯಾದ ಹರಿಯಾಲದೇವಿಯನ್ನು ಕೇಳಿ, ಆಕೆ ಎಷ್ಟು ಹೇಳಿದರೂ ಸಮ್ಮತಿಸದೆ, ಹಟಮಾಡಿ ಮುತ್ತಿನ ಚೆಂಡನ್ನು ಪಡೆದನು. ಆ ಚೆಂಡು ರತ್ನಿಯ ಮನೆಗೆ ಹೋಗಿ ಬಿದ್ದಿತು. ಕಾಟಣ್ಣ ಮತ್ತು ತನ್ನ ಮನ್ನೆಯರನ್ನು ಕಳುಹಿಸಲು ಆಕೆ ಕೊಡದೆ ಹೋದಳು. ರಾಮನೇ ಹೋಗಬೇಕಾಗಿ ಬಂದಿತು. ಆಗ ಆತನು ತಂದಿದ್ದ ಗಿಳಿಯೇ ಅವನನ್ನು ಎಚ್ಚರಿಸಿತು. ಆದರೂ ನಿರ್ವಾಹವಿಲ್ಲದೆ, ಹೋಗಿ, ರತ್ನಾಜಿಯ ಕುಟಿಲತನಕ್ಕೆ ಒಳಗಾಗದೆ, ಆಕೆಯನ್ನು ತಿರಸ್ಕರಿಸಿ ಬಂದನು. ಅನಂತರ ಆಕೆಯ ದೂರನ್ನು ನಂಬಿ ಕಂಪಿಲರಾಯನು ರಾಮನ ತಲೆಯನ್ನು ಕಡಿದು ತರುವಂತೆ ಬೈಚಪ್ಪನಿಗೆ ಆಜ್ಞೆಮಾಡಿದನು. ಬುದ್ಧಿವಂತನಾದ ಬೈಚಪ್ಪನು ರಾಮನನ್ನು ಕುಮ್ಮಟದ ಬಳಿಯ ಜಟ್ಟಂಗೀಶ್ವರನ ಗುಡಿಯ ಸಮೀಪದಲ್ಲಿದ್ದ ನೆಲಮಾಳಿಗೆಯಲ್ಲಿ ಬಚ್ಚಿಟ್ಟನು. ಅವನೊಂದಿಗೆ ಆತನ ಇತರ ಸ್ನೇಹಿತರು ಮತ್ತು ಸತಿಯರನ್ನೂ ಇರಿಸಿದನು. ಇತ್ತ ಕಳ್ಳಭಂಟರಾಮನ ತಲೆಯನ್ನು ತಂದು ರತ್ನಾಜಿಗೆ ತೋರಿಸಿದನು. ಈ ವೃತ್ತಾಂತವನ್ನು ಕೇಳಿದ ಸುರುತಾಳ ನೇಮಿಯನ್ನು ಕಳುಹಿಸಿದನು. ಅವನಿಗೆ ಶಂಕೆಯಿದ್ದರೂ, ಸುಲ್ತಾನನ ಆಜ್ಞೆಯನ್ನು ನಿರಾಕರಿಸದೆ ಧಂಡೆತ್ತಿ ಬಂದು ಕುಮ್ಮಟವನ್ನು ಮುತ್ತಿದನು. ಅನಂತರ ಬೈಚಪ್ಪನು ಬಚ್ಚಿಟ್ಟಿದ್ದ ರಾಮನನ್ನು ಸಕಾಲದಲ್ಲಿ ಕರೆದುಕೊಂಡು ಬಂದು ತುರುಕರನ್ನು ಹಿಮ್ಮೆಟ್ಟಿಸಿದನು. ರತ್ನಿ ಆತ್ಮಹತ್ಯ ಮಾಡಿಕೊಂಡಳು. ಕಟ್ಟಿಕಡೆಗೆ ಮಾತಂಗಿ ದಂಡೆತ್ತಿ ಬಂದಳು. ತೆಲುಗರು ಪಿತೂರಿ ನಡೆಸಿದರು. ಕುಮಾರರಾಮನಿಗೂ ಆಕೆಗೂ ಯುದ್ಧ ಸಂಭವಿಸಿತು. ಆಕೆ ಹೆಂಗಸೆಂದೂ, ಅಲ್ಪಜಾತಿಯವಳೆಂದೂ ಹಿಂತೆಗೆದನು. ಅನಂತರ ಆಕೆ ಪುರುಷವೇಷ ಹಾಕಿಕೊಂಡು ಬಂದು ಮತ್ತೆ ನಿಂತಳು. ಆಗ ಕುಮಾರರಾಮನು ಅವಳ ಮೂಗುತಿಯನ್ನು ಕಂಡು ಹಿಂತೆಗೆದನು. ಅದೇ ಸಮಯವೆಂದರಿತು ಆಕೆ ಅವನ ಮೇಲೆ ಬಾಣವನ್ನು ಬಿಟ್ಟು ಆತನ ತಲೆಯನ್ನು ಕತ್ತರಿಸಿದಳು. ಅನಂತರ ಅದನ್ನು ಸುಲ್ತಾನನಿಗೆ ಕಳುಹಿಸಿದಳು. ಡಿಳ್ಳಿಯಲ್ಲಿ ಆತಂಕ ವುಂಟಾಗಲು ಸುಲ್ತಾನನು ಪುನಃ ಅದನ್ನು ಕಂಪಿಲನಿಗೇ ಕೊಟ್ಟುಕಳುಹಿಸಿದನು. ಕುಮಾರರಾಮನ ಹೊಗಳುಭಟ್ಟರಾದ ಗೋಪಾಲಯ್ಯ, ಗೋವಿಂದಯ್ಯ ಮತ್ತು ರೂಪಿದೇವಯ್ಯ ಅವರಿಗೆ ಕಂಪಿಲನು ಒಂದು ಸುವರ್ಣ ಶಿರಸ್ಸನ್ನು ಮಾಡಿಸಿಕೊಟ್ಟನು. ಅವರು ಕುಮಾರರಾಮನು ತಮಗೆ ಬಳುವಳಿಯಾಗಿ ಕೊಟ್ಟಿದ್ದ ಭಟ್ಟರಹಳ್ಳಿಯಲ್ಲಿ ಅದನ್ನು ಪೂಜಿಸುತ್ತಿದ್ದರು. ಆದರೆ, ಆ ಸುವರ್ಣ ಶಿರಸ್ಸು ಮುಂದೆ ಶಿಲೆಯಾಗಿ ಪರಿಣಮಿಸಿತು. ಅದು ಹೊಸಮಲೆದುರ್ಗದಲ್ಲಿ ಇದೆಯೆಂದು ಪ್ರತೀತಿ."

ಮೇಲೆ ನಿರೂಪಿಸಿರುವ ಕಥಾಸಾರಾಂಶ ಒಟ್ಟಿನಲ್ಲಿ ನಾವು ನೋಡಿದ ಕಾವ್ಯಗಳನ್ನೇ ಅನುಸರಿಸಿದೆ ಎನ್ನಬಹುದು. ಅದರಲ್ಲಿಯೂ ಮುಖ್ಯವಾಗಿ ಗಂಗನ ನಿರೂಪಣೆಯನ್ನೇ ಹೋಲುತ್ತಿರುವುದು ಗಮನಾರ್ಹವಾದುದು. ಇದರಿಂದ ಜನಸಾಮಾನ್ಯರಿಗೆ ಪರಿಚಿತವಾಗಿರುವ ಕೃತಿ ಯಾವುದಿರಬಹುದೆಂದೂ ವ್ಯಕ್ತವಾಗುವುದು. ಈ ಕೈಫಿಯತ್ತುಗಳಿಂದ ಇತರ ಕೆಲವು ಮುಖ್ಯಾಂಶಗಳು ತಿಳಿದುಬರುವುವು :—

(i) ಕುಮ್ಮಟದುರ್ಗದ ಸ್ಥಳನಿರ್ದೇಶನ ಇಲ್ಲಿ ಸ್ಪಷ್ಟವಾಗಿ ತಿಳಿದುಬರುತ್ತದೆ.

ಕುಮಾರರಾಮನು "ತುಂಗಭದ್ರಾ ದಾಟಿ ಮೊಗಲಾಯಿ ಸೀಮಿ ಯಂಮಿಗುಡ್ಡಕ್ಕೆ ಹರಿದಾರಿ ಯಿಾ ಸ್ಥಳಕ್ಕೆ ಆಯಿದು ಹರಿದಾರಿ ಗುಂಮಟಿ ಯಂಬೊದ್ದು ಗಡಾ ಕಟ್ಟಿಸಿ ಯಿಾ ದೇಶ ರಾಜಧಾನಿ ಮಾಡಿಕೊಂಡು ಯಿದ್ದಾನು"[1] ಎಂಬ ವಾಕ್ಯ ತುಂಬ ಮುಖ್ಯವಾದದ್ದು. ಇದು ಕುಮ್ಮಟ ದುರ್ಗದ ಬಗ್ಗೆ ಇದ್ದ ಸಂದೇಹವನ್ನು ನಿವಾರಿಸುತ್ತದೆ. ಅಲ್ಲದೆ, ಈಗಿನ ವಿದ್ವಾಂಸರ ನಿರ್ಣಯಕ್ಕೂ ಬೆಂಬಲವೀಯುತ್ತದೆ. ಇಂತೆಯೇ ಈ ದುರ್ಗದಲ್ಲಿ ಒಂದು ಕಾಲದಲ್ಲಿ ಜೈನರು ನೆಲಸಿದ್ದರೆಂದೂ, ಕುಮಾರರಾಮನು ಅವರನ್ನು ಓಡಿಸಿ ತಾನು ಅಲ್ಲಿ ದುರ್ಗವನ್ನು ಕಟ್ಟಿಸಿದನೆಂದೂ ಒಂದು ವೃತ್ತಾಂತ ಅಡಕವಾಗಿದೆ.[2] ಈ ಸಂಗತಿ ಧಾರವಾಡದಲ್ಲಿರುವ ಪಾಂಚಾಳ ಗಂಗನ ಕೃತಿಯ ೬೩೭ನೆಯ ಸಂಖ್ಯೆಯ ಪ್ರತಿಯಲ್ಲಿ ಕಂಡುಬರುತ್ತದೆ (vii, ೧೬–೨೮).

(ii) ಹೊಸಮಲೆದುರ್ಗದ ವಿಚಾರವನ್ನು ಇಲ್ಲಿ ಮತ್ತಷ್ಟು ಖಚಿತವಾಗಿ ತಿಳಿಯಬಹುದು. ಸೊಂಡೂರಿನ ಕೈಫಿಯತ್ತಿನಲ್ಲಿ ಈ ಪ್ರದೇಶದ ಚತುಸ್ಸೀಮೆಗಳನ್ನು ಕೊಟ್ಟಿದೆ.[3] ಅಲ್ಲದೆ "ಯಿಾ ಹೊಸಮಲೆದುರ್ಗಕ್ಕೆ ರಾಮುನದುರ್ಗ ಯಂದು ಹೊಸಮಲೆದುರ್ಗಾ ಯಂದು ಯರಡು ಹೆಸರು ಜನರು ಆಡುತ್ತಾ ಯಿಧಾರೆ"[4] ಎಂಬ ವಾಕ್ಯವಂತೂ ನಮ್ಮ ಸಂದೇಹವನ್ನು ಹೋಗಲಾಡಿಸುತ್ತದೆ. ಇತ್ತೀಚಿನ ರಾಮಘಡದ ಶಿಲಾಶಾಸನಗಳು ಇದಕ್ಕೆ ಪೋಷಕವಾಗುತ್ತವೆ.[5]

(iii) ರಾಮನನ್ನು ಕುರಿತ ಬಿರುದಾವಳಿಯಲ್ಲಿ ಅವನ ಮಹಿಮೆಗಳೆಲ್ಲ ಪ್ರಕಟವಾಗುತ್ತವೆ. ಅಲ್ಲದೆ, ಆತನು ತನ್ನನ್ನು ಹೊಗಳುತ್ತಿದ್ದ ಸುಪ್ರಸಿದ್ಧ ಭಟ್ಟಂಗಿಗಳಾದ ಗೋಪಾಲಯ್ಯ, ಗೋವಿಂದಯ್ಯ, ರೂಪಿದೇವಯ್ಯ ಎನ್ನುವವರಿಗೆ "ಕಾಟಗೊಂಡನ ಹಳ್ಳಿ" ಎಂಬ ಗ್ರಾಮವನ್ನು "ಭಟ್ಟರಹಳ್ಳಿ" ಎಂದು ಕರೆದು ಅವರಿಗೆ ಉಂಬಳಿ ಕೊಟ್ಟ ವೃತ್ತಾಂತ ಕುತೂಹಲಕಾರಿಯಾಗಿದೆ.[6] ಇಂದಿಗೂ ಇದೇ ಹೆಸರಿದೆ. ಗಂಗನ ಹಲವು ಪ್ರತಿಗಳಲ್ಲಿ ರೂಪಿದೇವಯ್ಯನ ಪ್ರಸಂಗ ಬಂದಿರುವ ಮುಖ್ಯೋದ್ದೇಶ ಈ ಮೂಲಕ ಅರ್ಥವತ್ತಾಗುತ್ತದೆ. ಇದಲ್ಲದೆ ಭಟ್ಟರಹಳ್ಳಿಯ ಊರಬಾಗಿಲ ಬಳಿಯಲ್ಲಿ ಒಂದು ಶಿಲಾಶಾಸನವುಂಟು.[7] ಅಲ್ಲಿ ಒಬ್ಬ ವೀರನ ಪ್ರತಾಪವನ್ನು ಹೇಳಿದೆ. ಅದರ ಸಮಿಾಪದಲ್ಲಿ ಮತ್ತೊಂದು ಕಲ್ಲಿನ ಮೇಲೆ ಒಂದು ಕತ್ತೆಯ ಚಿತ್ರವಿದೆ. ಇದರ ಬಗ್ಗೆ ಈ ರೀತಿ ಒಂದು ಹೇಳಿಕೆ ಇದೆಯಂತೆ. "ಯಿಾ ಶಾಸನಕೆ ಸಮೀಪದಲ್ಲು ವಂದು ಕಲ್ಲಿನ ಮ್ಯಾಲೆ ಗಾರ್ದವ ರುಪ ಕಡದು ಯಿಥೆ ಯಿಾ ಗ್ರಾಮುದಲ್ಲು ಯಿದ್ದ ಭಟ್ಟರು ಹೆಳೊ[ದು] ಯನಂದರೆ ನಮಗೆ ಕೊಮಾರರಾಮನು ಕೊಟ್ಟ ವುಂಮಳಿ ಗ್ರಾಮುದ ಧರ್ಮ್ಮಕೆ ಕೆಡೆಶಿದವರು ಕತ್ತಿ ........ ತಿಂದವರು ಕಲ್ಲಿನ ಮ್ಯಾಲೆ ಕತ್ತಿ ರುಪ ಕಡದು ಯಿಧಾರೆ ಯಂದು ಹೆಳುಥಾರೆ.[8]

---

1. M. 146, P. 109.
2. M. 146, P. 174–175; M. 110, P. 85 b.
3. M. 110, P. 81–81 b.
4. M. 110, P. 91.
5. ARSIE., 1943-44 and 1944–45, Pp. 16–17.
6. D. 1798, p. 123.
7. M. 262/D. 1861, Pp. 52 b–53.
8. M. 262, p. 53.

(iv) ಕುಮ್ಮಟದುರ್ಗದ ಮೇಲೆ ಬೊಲ್ಲನ ಹೆಜ್ಜೆಯ ಗುರುತು ಇರುವ ವೃತ್ತಾಂತವನ್ನೂ[1] ಕುರುಗೋಡಿನ ಬಳಿ ರಾಮನು ತನ್ನ ಈಟಿಯನ್ನು ಇಟ್ಟ ಸ್ಥಳವನ್ನು "ಗೆಜ್ಜದ ಗುಂಡು" ಎಂದು ಕರೆಯುವುದನ್ನೂ[2] ಪರಿಚಯ ಮಾಡಿಕೊಡಲಾಗಿದೆ. ಇದಲ್ಲದೆ ರಾಮನು ಆರು ತಿಂಗಳ ಕಾಲ ಅಜ್ಞಾತವಾಸದಲ್ಲಿದ್ದಾಗ ಅವನನ್ನು ದ್ವಾರಾವತಿದುರ್ಗದಲ್ಲಿದ್ದ ಬಾಲಸಂಗಮನಾಥ ನೆಂಬುವನು ಕಾಪಾಡಿದನೆಂದೂ[3] ಆಗ ಬೊಲ್ಲನನ್ನು ಕಟ್ಟಿಹಾಕಿದ್ದ ಸ್ಥಳಕ್ಕೆ "ಬೋಲನ ದುರ್ಗ" ಎಂದು ಹೆಸರಾಯಿತೆಂದೂ[4] ಆ ಸಮಯದಲ್ಲಿ ಗೋಪ್ಯವಾಗಿ ರಾಮನಿಗೆ ಹಾಲು ಮೊಸರುಗಳನ್ನಿತ್ತು ಸಲಹಿದ ಗೋಪಾಲಕರಿಗೆ ರಾಮನು "ರಾಂಪುರ" ಎಂಬ ಗ್ರಾಮವನ್ನು ಕಟ್ಟಿಸಿಕೊಟ್ಟನೆಂದೂ[5] ಈ ಕೈಫಿಯತ್ತುಗಳಲ್ಲಿ ಹೇಳಿದೆ. ಇವುಗಳೆಲ್ಲ ರಾಮನ ಬಗ್ಗೆ ಜನರಿಗೆ ಇರುವ ಆದರವನ್ನು ಪ್ರಕಟಪಡಿಸುತ್ತವೆ.

(v) ರಾಮದೇವರಾಯನ ವೃತ್ತಾಂತಕ್ಕೆ ಅಗ್ರಸ್ಥಾನ ಲಭಿಸಿದೆ.

ಈ ಕೈಫಿಯತ್ತುಗಳಲ್ಲಿ ಕೆಲವು ಮುಖ್ಯಾಂಶಗಳು ಅಡಕವಾಗಿಲ್ಲ. ಅವು ಯಾವುವೆಂದರೆ :—

(i) ಈ ಕೈಫಿಯತ್ತುಗಳಲ್ಲಿ ಕುಮಾರರಾಮನನ್ನು ಜಟ್ಟಂಗಿರಾಮನ ವರಪ್ರಸಾದದಿಂದ ಹುಟ್ಟಿದವನೆಂದು ಹೇಳಿದೆಯೇ ವಿನಾ ಆತನು ಅರ್ಜುನನ ಇಲ್ಲವೇ ಪರಶುರಾಮನ ಅವತಾರ ವೆಂದು ಎಲ್ಲಿಯೂ ಹೇಳಿಲ್ಲ. ಹೀಗೆಯೇ ರತ್ನಾಜಿಯನ್ನು ಊರ್ವಶಿಯ ಅವತಾರವೆಂದೂ ಉಲ್ಲೇಖಿಸಿಲ್ಲ. ಮಾತಂಗಿಯ ವಿಚಾರವಾಗಿಯೂ ಹೆಚ್ಚಿನ ಅಂಶವೇನೂ ಇಲ್ಲ.

(ii) ಪಾದುಕೆಯ ಪ್ರಸಂಗವನ್ನೂ ಸಹ ನಾವು ಈ ಕೈಫಿಯತ್ತುಗಳಲ್ಲಿ ಕಾಣುವುದಿಲ್ಲ.

(iii) ಯುದ್ಧಗಳ ಪೈಕಿ, ಬಲ್ಲಾಳನ ಯುದ್ಧ, ಕರಿಪತಿ ಕಪಿಲೇಶ್ವರನ ಯುದ್ಧ, ನೇಮಿಯ ಮೊದಲನೆಯ ಕಾಳಗ, ಬಾದೂರನ ಪಲಾಯನದ ವಿವರ, ಹುಳಿಯಾರು ಮಾರ ಭೂಪಾಲನ ಯುದ್ಧದ ವಿವರ ಮೊದಲಾದುವು ಕಂಡುಬರುವುದಿಲ್ಲ.

(iv) ಹರಿಹರ ಬುಕ್ಕರ ಪೂರ್ವವೃತ್ತಾಂತವೂ ಇಲ್ಲ. ಆದರೆ ಕಂಪಿಲರಾಯನ ಅನಂತರ ವಿಜಯನಗರದ ಸ್ಥಾಪನೆಯಾಯಿತೆಂಬ ಅಂಶ ಬರುತ್ತದೆ.[6]

---

1. D. 1798, P. 121.
2. Ibid. P. 122.
3. D. 1837, P. 4.
4. Ibid. P. 5.
5. Ibid. P. 6.
6. M. 146, Pp. 110-114; M. 110, p. 91.

(v) ಕೆಲವು ಕೈಫಿಯತ್ತುಗಳಲ್ಲಿ[1] ಸೂಚಿಸಿರುವ ಕುಮಾರರಾಮನ ವಂಶಾವಳಿ ಹೀಗಿದೆ :—

ಖಂಡೆಯರಾಯ (?)
|
ಖಂಡೆಯರಾಯ
|
ಮುತ್ತಿನ ಮುಮ್ಮಡಿರಾಯ
|
ನರಸಿಂಗರಾಯ
|
ಕೋವಿನ ತಿಮ್ಮನಾಯಕ
|
ಹೆಬ್ಬುಲಿ ಕಂಪಿಲರಾಯ
|
ಕುಮಾರರಾಮ

ಆದರೆ, ಇತರ ಕೈಫಿಯತ್ತುಗಳಲ್ಲಿ, ಮುಮ್ಮಡಿ ಸಿಂಗನ ಮಗ ಕಂಪಿಲರಾಯನೆಂದೂ, ಆತನ ಮಗನೇ ಕುಮಾರರಾಮನೆಂದೂ ಸ್ಪಷ್ಟವಾಗಿದೆ.

1. D. 1798, Pp. 119–120 ; M. 369, P. 81.

# ೧೦. ಚರಿತ್ರಾಂಶಗಳು

ಕುಮಾರರಾಮನ ಸಾಂಗತ್ಯಗಳನ್ನು ಅವಲೋಕಿಸುತ್ತ, ವಿಲಿಯಂ ಟೈಲರ್ ಎಂಬುವರು, ಇಲ್ಲಿನ ಕಥಾವಸ್ತುವಿನಲ್ಲಿ ಚರಿತ್ರಾಂಶಗಳು ಹೆಚ್ಚಾಗಿದ್ದರೂ, ಅವು ಅತಿಶಯೋಕ್ತಿಯಿಂದ ಕೂಡಿ ನಿಜಾಂಶಗಳಿಗೆ ಭಂಗ ವುಂಟಾಗಿದೆಯೆಂದು ಅಭಿಪ್ರಾಯಪಡುತ್ತಾರೆ.[1] ನಂಜುಂಡಕವಿಯ ಕೃತಿಯ ಪರಿಚಯಮಾಡಿಕೊಡುತ್ತ ಡಾ|| ಎಂ. ಹೆಚ್. ಕೃಷ್ಣ ಅವರು, "ಈ ಕಾವ್ಯ ಐತಿಹಾಸಿಕ ದೃಷ್ಟಿಯಿಂದ ಅತ್ಯಂತ ಅಮೂಲ್ಯವಾದದ್ದು. ೧೪ನೆಯ ಶತಮಾನದ ಪ್ರಾರಂಭದಲ್ಲಿನ ದಕ್ಷಿಣಾಪಥದ ರಾಜಕೀಯ ಪರಿಸ್ಥಿತಿಯನ್ನು ಕುರಿತು ಇದರಲ್ಲಿ ಹೇಳಿರುವ ಸಂಗತಿಗಳು, ನ್ಯೂನಿಜ್ ಮತ್ತು ಫೆರಿಸ್ಟಾ ಅವರ ನಿರೂಪಣೆಯೊಂದಿಗೆ ಬೆರಗಾಗುವಮಟ್ಟಿಗೆ ಸರಿ ಹೋಗುತ್ತವೆ" ಎಂದು ಹೇಳಿರುತ್ತಾರೆ.[2] ಶ್ರೀ. ಎಂ. ಹೆಚ್. ರಾಮಶರ್ಮ ಅವರು, ನಂಜುಂಡ ಮತ್ತು ಗಂಗನ ಕೃತಿಗಳಲ್ಲಿ ವಿದಿತವಾಗುವ ಐತಿಹಾಸಿಕ ವಿಷಯಗಳನ್ನು ಸಾಧ್ಯವಾದಷ್ಟುಮಟ್ಟಿಗೆ ಗುರುತಿಸಲು ಪ್ರಯತ್ನಿಸಿರುತ್ತಾರೆ.[3] ಮದರಾಸಿನ ಡಾ|| ಎನ್. ವೆಂಕಟರಮಣಯ್ಯ ಅವರು ತಮ್ಮ ಇಂಗ್ಲಿಷ್ ಗ್ರಂಥಗಳಲ್ಲಿ[4] ಕುಮಾರರಾಮನ ಸಾಂಗತ್ಯಗಳಲ್ಲಿ ಕಂಡುಬರುವ ಅನೇಕ ಚರಿತ್ರಾಂಶಗಳನ್ನು ವಿಮರ್ಶಿಸಿರುತ್ತಾರೆ. ಇತ್ತೀಚೆಗೆ ಇವರ ಸಂಪಾದಕತ್ವದಲ್ಲಿಯೇ ಪ್ರಕಟವಾಗಿರುವ ಮತ್ತೊಂದು ಗ್ರಂಥದಲ್ಲಿಯೂ,[5] ತೆಲುಗಿನ "ಕುಮಾರರಾಮುನಿ ಕಥ" ಎಂಬ ಕೃತಿಯ ಪೀಠಿಕಾಭಾಗದಲ್ಲಿಯೂ ಈ ಬಗ್ಗೆ ಮತ್ತಷ್ಟು ವಿಚಾರ ಮಾಡಿರುತ್ತಾರೆ. ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ತಮ್ಮ "ಗಂಡುಗಲಿ ಕುಮಾರರಾಮ" ಎಂಬ ಪುಸ್ತಕದಲ್ಲಿ ಮಾತ್ರವಲ್ಲದೆ, ಬಿಡಿಬಿಡಿಯಾಗಿ ತಮ್ಮ ಅನೇಕ ಲೇಖನಗಳಲ್ಲಿ ಈ ವಿಚಾರವನ್ನು ಕುರಿತು ಮೇಲಿಂದ ಮೇಲೆ ಸಂಶೋಧನೆ ಮಾಡಿ ಬರೆದಿರುತ್ತಾರೆ. ಈ ರೀತಿಯಾಗಿ ಇತಿಹಾಸಜ್ಞರ ಗಮನವನ್ನೂ ಸೆಳೆದಿರುವ ಈ ಕೃತಿಗಳಲ್ಲಿ ಅಡಕವಾಗಿರುವ ಚರಿತ್ರೆಯ ಸ್ವರೂಪವನ್ನು ಇತರ ಪ್ರಮಾಣಗಳನ್ನು ಅವಲಂಬಿಸಿ ಇಲ್ಲಿ ವಿಚಾರ ಮಾಡಿದೆ.

ಶಿಲಾಶಾಸನಗಳು, ತಾಮ್ರದ ಫಲಕಗಳು, ಸಮಕಾಲೀನ ಇಲ್ಲವೇ ಇತ್ತೀಚಿನ ಪ್ರವಾಸಿಗರ ಲೇಖನಾದಿಗಳು, ಗ್ರಂಥಗಳು, ಕೈಫಿಯತ್ತುಗಳು ಇವೇ ಮೊದಲಾದುವು ಚರಿತ್ರೆಯ ವ್ಯಾಸಂಗಕ್ಕೆ ಸಹಾಯಕವಾಗಬಲ್ಲ ಇತರ ಸಾಧನಗಳು. ಕುಮಾರರಾಮನ ಕಥಾವಸ್ತುವಿನಲ್ಲಿ ಹುದುಗಿರುವ ಚರಿತ್ರಾಂಶವನ್ನು ಈ ಸಾಧನಗಳ ಸಹಾಯದಿಂದ ವಿವೇಚಿಸಬಹುದು. ಇಲ್ಲಿ ಉಕ್ತವಾಗಿರುವ ಮುಖ್ಯ ಸ್ಥಳಗಳು, ಘಟನೆಗಳು ಮತ್ತು ವ್ಯಕ್ತಿಗಳನ್ನು ಕುರಿತು ದೊರೆಯುವ ಐತಿಹಾಸಿಕ ಆಧಾರಗಳನ್ನು ಮುಂದೆ ಸಂಕ್ಷಿಪ್ತವಾಗಿ ಪರಿಚಯಮಾಡಿಕೊಡಲಾಗಿದೆ.

---

1. It has more of an historical character than I was disposed to assign to it, but so much mixed up with hyperbole as to injure its value as a whole. *A catalogue Raisonnee of Oriental Manuscripts*, Vol. III, 1862, p. 238.

2. "...the poem is remarkably valuable as a historical work. The facts mentioned in it about the political condition of the Dekhan in the early part of the 14th century are corroborated to a surprising extent by the evidence of Nuniz and Ferista." MAR, 1929, p. 37.

3. QJMS, Vol. xx, Nos. 2 & 3; Supplement, October, 1929.

4. Kampili and Vijayanagara ಮತ್ತು The Early Muslim Expansion in South India.

5. Further Sources of Vijayanagara History, Vol. I.

## ಮುಖ್ಯ ಸ್ಥಳಗಳು

ಕುಮಾರರಾಮನ ಕಥೆಯಲ್ಲಿ ಅನೇಕ ಊರಿನ ಹೆಸರುಗಳು ಬರುತ್ತವೆ. ಇವುಗಳೆಲ್ಲ ಕಥೆಗೆ ಒಂದಲ್ಲ ಒಂದು ರೀತಿಯಲ್ಲಿ ವಾಸ್ತವಿಕತೆಯನ್ನು ಉಂಟುಮಾಡುತ್ತವೆ. ಪ್ರಮುಖವಾದ ಕೆಲವು ಹೆಸರುಗಳು ವಿದ್ವಾಂಸರಿಗೆ ಸಾಕಾದಷ್ಟು ಸಂದೇಹಗಳನ್ನು ಉಂಟುಮಾಡಿವೆ. ಕುಮ್ಮಟ, ಹೊಸದುರ್ಗ, ಹೊಸಮಲೆ(ದುರ್ಗ) ಎಂಬುವು ಕಥೆಯಲ್ಲಿ ಪುನಃ ಪುನಃ ಬರುತ್ತವೆ. ಈ ಪ್ರದೇಶಗಳನ್ನು ನಿರ್ದೇಶಿಸಲು ವಿದ್ವಾಂಸರು ಬಹು ಪ್ರಯಾಸಪಟ್ಟಿರುತ್ತಾರೆ.

ನ್ಯೂನಿಜ್ ಎಂಬ ವಿದೇಶೀಯ ಪ್ರವಾಸಿ ವಿಜಯನಗರದ ಪ್ರಾರಂಭ ದೆಸೆಯನ್ನು ಕುರಿತು ಹೇಳುವಲ್ಲಿ, ಡೆಹಲಿಯ ಸುಲ್ತಾನನು ಆನೆಗೊಂದಿಗೆ ಮುತ್ತಿಗೆ ಹಾಕಿದಾಗ ಅಲ್ಲಿಯ ಒಡೆಯನಾದ ಕಂಪಿಲನು ವೀರಾವೇಶದಿಂದ ಪ್ರತಿಭಟಿಸಿ, ಕಡೆಗೆ "ಕ್ರಿನಮಟ"(Crynamata) ಎಂಬ ಎಡೆಯಲ್ಲಿ ರಕ್ಷಣೆಗಾಗಿ ತೆರಳಿ, ಅಲ್ಲಿ ನಿರ್ವಹಿಸಲಾರದೆ ಪ್ರಾಣವನ್ನೇ ತೆತ್ತನೆಂಬುದಾಗಿ ಸೂಚಿಸಿರುತ್ತಾನೆ.[1] ಇರ್ಬಟೊಟನೆಂಬ ಮತ್ತೊಬ್ಬ ಪ್ರವಾಸಿ ಇದೇ ಘಟನೆಯನ್ನು ಚಿತ್ರಿಸುವಾಗ, ಸ್ಥಳದ ಹೆಸರನ್ನು ಹೇಳದಿದ್ದರೂ ಕಂಪಿಲನು ಅಭೇದ್ಯವಾದ ಬೆಟ್ಟಗುಡ್ಡಗಳ ಮಧ್ಯೆ ತನ್ನ ಪ್ರದೇಶಗಳನ್ನು ಪಡೆದಿದ್ದನೆಂದು ತಿಳಿಸಿರುತ್ತಾನೆ.[2] ಈ ಸಂದರ್ಭಗಳಲ್ಲಿ ಉಕ್ತನಾಗಿರುವ ಮಹಾರಾಜನು ಕಂಪಿಲನೆಂದು ವಿದ್ವಾಂಸರು ಒಪ್ಪಿದ್ದರೂ, ಇಲ್ಲಿ ಹೇಳಿರುವ "ಕ್ರಿನಮಟ" (Crynamata) ಎಂಬ ಸ್ಥಳ ಯಾವುದು ಎನ್ನುವುದರ ಬಗ್ಗೆ ಭಿನ್ನಾಭಿಪ್ರಾಯಗಳು ಉಂಟಾಗಿದ್ದುವು. ಆರ್. ಸಿವೆಲ್ ಅವರೇ ಈ ಹೆಸರಿನ ಎಡೆಯನ್ನು ಗುರುತಿಸುವುದು ಕಷ್ಟವಾಗಿದೆ ಎಂದಿರುತ್ತಾರೆ.[3] ಶ್ರೀ. ಬಿ. ಸೂರ್ಯನಾರಾಯಣ ರಾಯರು ಇದು ಆನೆಗೊಂದಿಯ ಕೋಟೆಯ ಶ್ರೇಣಿಗೋ, ಇಲ್ಲವೇ ಅಲ್ಲೇ ಇರುವ ವಾಲಿಯ ಭಂಡಾರದ ಭಾಗಕ್ಕೋ ಅನ್ವಯಿಸುತ್ತದೆ ಎಂದು ಭಾವಿಸಿದ್ದರು.[4] ಪ್ರೊ|| ಎಸ್. ವಿ. ವೆಂಕಟೇಶ್ವರ ಐಯರ್ ಅವರು, ಆರ್. ಸಿವೆಲ್ ಅವರ ಸೂಚನೆಯನ್ನು ಅವಲಂಬಿಸಿ ಇದು ಶೃಂಗಮಠವೆಂಬ ಪ್ರದೇಶವಿರಬೇಕೆಂದು ವಾದಿಸಿರುತ್ತಾರೆ.[5] ಅನಂತರ ಶ್ರೀ. ಎಂ. ಎಚ್. ರಾಮಶರ್ಮರು ಕುಮಾರರಾಮನ ಕಥೆಯಲ್ಲಿ ಉಕ್ತವಾಗಿರುವ ಕುಮ್ಮಟದುರ್ಗವೂ "ಕ್ರಿನಮಟವೂ" ಒಂದೇ ಎಂಬುದಾಗಿ ಗುರುತಿಸಿ, ರಾಯಚೂರು ಜಿಲ್ಲೆ ಗಂಗಾವತಿ ತಾಲ್ಲೂಕಿನಲ್ಲಿರುವ ಈ ದುರ್ಗವನ್ನು ಕುರಿತು ಚಿತ್ರ ಸಮೇತವಾಗಿ ಅಮೂಲ್ಯವಾದ ಎರಡು ಲೇಖನಗಳನ್ನು ಪ್ರಕಟಿಸಿದರು.[6]

ಕುಮ್ಮಟದುರ್ಗ ತುಂಗಭದ್ರಾನದಿಗೆ ಉತ್ತರದಲ್ಲಿ ಆನೆಗೊಂದಿಗೆ ಎಂಟು ಮೈಲಿ ದೂರದಲ್ಲಿರುವ ಒಂದು

---

1. A Forgotten Empire, p. 281, Indian Edition, June 1962.

2. Foreign Notices of South India, p. 216.

3. "...I have not been able to identify this name. It is possible that the first syllable represents the word "Sri" and that the whole may have been a special appellation of the fortress or citadel on the rocky heights above the town of Anegundi." A Forgotten Empire, Indian Edition, June 1962, p. 281, F.N. No. 2.

4. The Never to be Forgotten Empire, p. 5, F.N.

5. "Bearing in mind the topography of Crynamata as described by Nuniz and the claim of abbots of Sringeri to be regarded as the founders of the prosperity of Vijayanagar I see no objection to the identification of Crynamata with Sringa Matha. Sewell himself considered it possible that the first syllable represents the word Sri. Sringa Matha is on the rocky heights above the Tungabhadra..." *New Light on the Beginnings of Vijayanagar*, *Mysore University Journal*, 1943, p. 221.

6. QJMS, Vol. xx, No. 1, pp. 5-14 ; No. 4, pp. 261-270.

ಗುಡ್ಡಗಾಡಿನ ಪ್ರದೇಶ. ಇಲ್ಲಿ ಹಳೆಯ ಕುಮ್ಮಟ ಮತ್ತು ಹೊಸ ಕುಮ್ಮಟ ಎಂಬ ಎರಡು ಭಾಗಗಳುಂಟು. ಹೊಸಕುಮ್ಮಟದ ಬಹುಭಾಗ ಬಲಿಷ್ಠವಾದ ಕೋಟೆಯಾಗಿದೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಇಂದಿಗೂ ಈ ಸ್ಥಳದಲ್ಲಿ ವರ್ಷಕ್ಕೊಂದು ಬಾರಿ ಕುಮಾರರಾಮನ ಜಾತ್ರೆ ನಡೆಯುವುದಲ್ಲದೆ, ಆತನ ಜೀವನವೃತ್ತಾಂತಕ್ಕೆ ಸಂಬಂಧಿಸಿದಂತೆ ಅನೇಕ ಹೆಸರುಗಳುಳ್ಳ ಎಡೆಗಳಿವೆ. ಜಟ್ಟಂಗಿರಾಮೇಶ್ವರ ದೇವಸ್ಥಾನ, ರಾಮಪ್ಪನ ದೊಣೆ, ಕಾಟಪ್ಪನಗುಡ್ಡ, ಬೊಲ್ಲನ ಗುಂಡು, ಬಾದೂರನ ಬಂಡೆ, ಮಾದಿಗ ಹಂಪಯ್ಯನ ಗುಡ್ಡ ಮುಂತಾದ ಹೆಸರುಗಳು ಇಂದಿಗೂ ಆ ವೀರನ ಸ್ಮರಣೆಯನ್ನು ತರುತ್ತವೆ.

ಕರ್ಣಾಟಕ ಚರಿತ್ರೆಯಲ್ಲಿ ಕುಮ್ಮಟದುರ್ಗಕ್ಕೆ ವಿಶಿಷ್ಟವಾದ ಸ್ಥಾನವಿದೆ. ಇದನ್ನು ಹೊಯ್ಸಳ ವಿಷ್ಣುವರ್ಧನನು ಗೆದ್ದಿದ್ದನೆಂಬುದಕ್ಕೆ ಶಾಸನಾಧಾರವಿದೆ.[1] ಎರಡನೆಯ ವೀರಬಲ್ಲಾಳನೂ ಸಹ ಈ ಕೋಟೆಯನ್ನು ಜಯಿಸಿದ್ದನೆಂಬುದಾಗಿ ತಿಳಿದುಬರುತ್ತದೆ.[2] ಇದನ್ನು ಕುಮಾರರಾಮನೇ ನಿರ್ಮಿಸಿದನೆಂದು ಸಾಂಗತ್ಯದಲ್ಲಿ ಹೇಳಿದ್ದರೂ, ಬಹಳ ಹಿಂದೆಯೇ ಮುಮ್ಮಡಿಸಿಂಗನ ಆಳ್ವಿಕೆಗೆ ಒಳಪಟ್ಟಿತ್ತೆಂದು ಲಕ್ಷ್ಮೇಶ್ವರದ ಒಂದು ಶಾಸನದ ಮೂಲಕ ವ್ಯಕ್ತವಾಗುತ್ತದೆ.[3]

ವಿರೂಪಾಕ್ಷ ಪಂಡಿತನ "ಚೆನ್ನಬಸವ ಪುರಾಣ"ದಲ್ಲಿ ರಾಮನಾಥ ಮತ್ತು ಕುಮ್ಮಟ ದುರ್ಗಗಳ ಹೆಸರು ಒಟ್ಟಿಗೆ ಕಂಡುಬರುತ್ತವೆ. (ಮುಂತೆ ಹೊಸಮಲೆಯಲ್ಲಿ ಕಂಪಿಲನೆನಿಪ್ಪ ಭೂ।ಕಾಂತನಿಹನವನ ಸುಕುಮಾರಕಂ ರಾಮನಾ।ಥಂ ತನಗೆ ಕುಮ್ಮಟವೆನಿಪ್ಪ ದುರ್ಗವನಿರದೆ ಕಟ್ಟಿಸುವನರ್ತಿಯಿಂದೆ ||೨೨||; ಅಲ್ಲಿ ತಾನಿರುತೆ ಸುತ್ತಣ ಭೂಮಿಪಾಲಕರ| ನೆಲ್ಲರಂ ಗೆಲ್ದು ಹೊಗಳಿಸಿಕೊಳಲದಂ ಕೇಳ್ದು| ದಿಳ್ಳಿಯಿಂದಿರದೆ ಲಕ್ಕದ ಮೇಲೆ ತೊಂಬತಾರ್ಸಾವಿರಂ ಕುದುರೆ ಸಹಿತ || ಬಲ್ಲಿದ ಸುಖಾನರಾ ಕುಮ್ಮಟಕೆ ದಾಳಿಯಂ | ನಿಲ್ಲದೈತಂದು ತಾವಿರ್ವರುಂ ಕಾದಿ ಬಳಿಕಲ್ಲಿಯೇ ಬಯಲಪ್ಪರಾಗಲಾ ಕುಮ್ಮಟಂ ಹಾಳಪ್ಪುದೇನೆಂಬೆನು ||೭೮||, ಸಂಧಿ, lxii). "ಸಿರುಮನ ಸಾಂಗತ್ಯ"ವಲ್ಲಿ ಬೂದಿಹಾಳನ್ನು ವರ್ಣಿಸುವಾಗ "ಯಿದು ರಾವಣನಿಹ ಲಂಕೆಯೊ ಭಾವಿಸೆ| ಯಿದು ರಾಮನಿಹ ಕುಮ್ಮಟವೊ ಯಿದು ವೈಂ ನೃಪರೆದೆದಲ್ಲಣವೆನಿಸುವು। ದಿದಕೆ ಸಾಟಿಯೆ ಮಿಕ್ಕ ನಗರ|| (ಸಂ. i, ಪ. ೨೪)" ಎಂಬ ಮಾತುಗಳು ಬರುತ್ತವೆ. ಗಂಗನ ಕೃತಿಯನ್ನು ಶ್ರೀ. ರಾ. ನರಸಿಂಹಾಚಾರ್ಯರು "ಕುಮಟರಾಮನ ಸಾಂಗತ್ಯ" ಎಂದು ಕರೆದಿರುವುದೂ ಗಮನಾರ್ಹವಾದುದು. ಸಂಡೂರಿನ ಕೈಫಿಯತ್ತಿನ ಮೂಲಕ ತಿಳಿದುಬರುವ ಕುಮ್ಮಟದುರ್ಗದ ಪ್ರಸ್ತಾಪವನ್ನು ಈಗಾಗಲೆ ಪರಿಚಯಮಾಡಿಕೊಡಲಾಗಿದೆ. ಪುರಾತನವಾದ ಈ ಕುಮ್ಮಟದುರ್ಗವನ್ನು ಕುಮಾರರಾಮನು ವಶಪಡಿಸಿಕೊಂಡ ತರುವಾಯ ಹೊಸದಾಗಿ ನಿರ್ಮಿಸಿದ ಮೇಲ್ಭಾಗವನ್ನು ಹೊಸದುರ್ಗವೆಂದೋ ಇಲ್ಲವೇ, ಶ್ರೀ. ಎಂ. ಎಚ್. ರಾಮಶರ್ಮ ಅವರು ಅಭಿಪ್ರಾಯಪಡುವಂತೆ[4] ಹೊಸ ಕುಮ್ಮಟವೆಂದೋ ಕರೆದಿರಬಹುದು.

ಹೊಸಮಲೆದುರ್ಗವೆಂಬುದು ಮತ್ತೊಂದು ಪ್ರಮುಖವಾದ ಸ್ಥಳ. ಈ ದುರ್ಗವನ್ನು ಕಂಪಿಲನೇ ಕಟ್ಟಿಸಿದನೆಂದೂ, ಕಡೆಯಲ್ಲಿ ಆತನೂ ಆತನ ಪರಿವಾರದವರೂ ಇದರಲ್ಲಿ ಆಶ್ರಯವನ್ನು ಪಡೆದರೆಂದೂ ಕಾವ್ಯಗಳಲ್ಲಿ ಹೇಳಿದೆ. ಅನೇಕ ಸಂದರ್ಭಗಳಲ್ಲಿ ಹೊಸದುರ್ಗ ಮತ್ತು ಹೊಸಮಲೆದುರ್ಗಗಳನ್ನು ಒಂದೇ ಎಂದು ಚಿತ್ರಿಸಿರುವುದುಂಟು. ಆದರೆ ಕವಿ ನಂಜುಂಡನು ಇದು ಹಂಪೆಯ ದಕ್ಷಿಣಭಾಗದಲ್ಲಿದೆಯೆಂಬುದಾಗಿ ವರ್ಣಿಸಿರುವನು. ಈ ಎಡೆಯೂ ಸಹ ಇತ್ತೀಚಿನವರೆಗೆ ಅನಿಶ್ಚಯವಾಗಿಯೇ ಇತ್ತು. ಡಾ|| ಎನ್. ವೆಂಕಟರಮಣಯ್ಯನವರು ಹೊಸದುರ್ಗ ಮತ್ತು ಹೊಸಮಲೆದುರ್ಗಗಳು ಒಂದೇ ಎಂಬುದಾಗಿ ತಿಳಿದುದಲ್ಲದೆ,

---

1. Ec, IV, Mys. Nag. 70, 1178 A.D.
2. Ec, II, S.B., 335 (130), 1195 A.D.; M.A.R, 1937, No. 26, 1196 A.D.
3. B.K. No. 23 of 1935-36, SII, Vol. xx, No. 222, P. 271.
4. QJMS, xx, No. 4, P. 264.

ಅವುಗಳು ಆನೆಗೊಂದಿಯೇ ಇರಬಹುದೆಂದೂ ಎಣಿಸಿರುವುದುಂಟು.[1] ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಇದು ಸಂಡೂರಿನ ಸುತ್ತಮುತ್ತಲಿನ ಪ್ರದೇಶವಿರಬಹುದೆಂದು ಶಂಕಿಸಿ, ಅಲ್ಲಿನ ಅಧಿಕಾರಿಯ ಮೂಲಕ ವಿವರವನ್ನು ಪಡೆದು ಈ ಸಂದೇಹವನ್ನು ನಿವಾರಿಸಿರುತ್ತಾರೆ.[2] ಈ ಹೊಸಮಲೆಗೇ ರಾಮನದುರ್ಗ ಎಂಬ ಹೆಸರೂ ಇತ್ತೆಂದು ಕೈಫಿಯತ್ತಿನ ಮೂಲಕ ತಿಳಿದು ಬರುತ್ತದೆ.[3] ಶ್ರೀ. ಡಬ್ಲ್ಯು ಫ್ರಾನ್ಸಿಸ್ ಎಂಬುವರು ಈ ಪ್ರದೇಶವನ್ನು ಪರಿಚಯಮಾಡಿಕೊಡುತ್ತ, ಇಲ್ಲಿ ಪಾಳುಕೋಟೆಯ ಚಿಹ್ನೆಗಳಿವೆಯೆಂದೂ, ಇದನ್ನು ಕುಮಾರ ರಾಮನೆಂಬ ಪಾಳೆಯಗಾರನು ಕಟ್ಟಿಸಿದನೆಂದು ಪ್ರತೀತಿ ಇರುವುದಾಗಿಯೂ, ಇಲ್ಲಿರುವ ರಾಮಸ್ವಾಮಿಯ ದೇವಸ್ಥಾನದ ಬಳಿ ಶಾಸನವಿರುವುದಾಗಿಯೂ ಬರೆದಿರುತ್ತಾರೆ.[4] ಇಂಡಿಯಾ ಸರ್ಕಾರದವರು ಇತ್ತೀಚೆಗೆ ಸಂಶೋಧನೆ ನಡೆಸಿ, ಇಲ್ಲಿ ದೊರೆತ ಎರಡು ಶಾಸನಗಳನ್ನು ಕುರಿತು ವರದಿಮಾಡುತ್ತಾರೆ.[5] ಒಂದರಲ್ಲಿ ಹೊಸ ಮಲೆಯದುರ್ಗದ ಮುಮ್ಮಡಿಸಿಂಗನ ಮಗನಾದ ಖಂಡೆಯರಾಯ ಕಂಪಿಲರಾಯನ ಪಟ್ಟದ ರಾಣಿಯಾದ ವೀರಗುಜ್ಜಲ ಹರಿಹರದೇವಿಯ ಪುತ್ರ ಹೊಸಮಲೆಯ ರಾಮನಾಥ ಒಡೆಯರ ಭಕ್ತೆಯಾದ ಗೋಪಾಯಿ, ಆಕೆಯ ತಮ್ಮ ರಾಮಣ ಮತ್ತು ಇತರರು ಕೂಡಿ ಹೊಸಮಲೆದುರ್ಗದಲ್ಲಿ, ರಾಮನಾಥ ದೇವರ ಗುಡಿಯನ್ನು ಕಟ್ಟಿಸಿದ ಸಂಗತಿ ಉಕ್ತವಾಗಿದೆ.[6] ಇನ್ನೊಂದರಲ್ಲಿ, ಕಂಪಿಲನಿಗೂ ಬಲ್ಲಾಳರಾಯನಿಗೂ ಯುದ್ಧ ನಡೆದಾಗ ಕುದುರೆ ದಂಡಿನ ಬಯಿಚಯ್ಯನು ಸತ್ತ ಸುದ್ದಿಯಿದೆ.[7] ಈ ಎರಡು ಶಾಸನಗಳೂ ಕುಮಾರರಾಮನ ಮನೆತನಕ್ಕೆ ನೇರವಾಗಿ ಸಂಬಂಧಿಸಿರುವುದಲ್ಲದೆ, ಅನಿಶ್ಚಿತವಾಗಿದ್ದ ಮೇಲ್ಕಂಡ ಎಡೆಯೇ ಹೊಸಮಲೆದುರ್ಗವೆಂಬುದು ಈ ಮೂಲಕ ದೃಢವಾಗುತ್ತದೆ.

ಶ್ರೀ. ಎಂ. ಎಚ್. ರಾಮಶರ್ಮರು, ಕುಮ್ಮಟದುರ್ಗದ ಪರಿಚಯವನ್ನು ಮಾಡಿಕೊಟ್ಟಿರುವಂತೆಯೇ ಹೊಸಮಲೆದುರ್ಗದ ವಿವರಣೆಯನ್ನೂ ಇತ್ತೀಚೆಗೆ ಪ್ರಕಟಿಸಿರುತ್ತಾರೆ.[8] ಇಲ್ಲಿಯೂ ಕುಮಾರರಾಮನ ಜೀವನಕ್ಕೆ ಸಂಬಂಧಿಸಿದಂತೆ, ಬೊಲ್ಲನ ಬಂಡೆ, ಕಾಟಣ್ಣನ ಕೂಪ, ಗದ್ದಿಗೆ ಕಲ್ಲು, ಟಗರಿನ ಬೈಲು, ಕುಮಾರರಾಮನ ದಟ್ಟಿ, ಮಾದಿಗ ಹಂಪಯ್ಯನ ಕಲ್ಲು ಮುಂತಾದ ಹಲವಾರು ಸ್ಮಾರಕಗಳಿರುವುದಾಗಿ ತಿಳಿದುಬರುತ್ತವೆ.[9]

---

1. "Hosdurg appear to be identical with Hosamaledurga...." "Hosamaledurga which Kampila built at the Muraneya Sndhi must be regarded as no other place than Anegundi" FSVH, Vol, I, p. 18.

2. ಶರಣಸಾಹಿತ್ಯ, ಸಂಪುಟ vi, 1943-44, p. 328, F.N. ("It appears there is in the forest a place known as Hosamale and there are traces of a ruined fort. I got this information from one of the old residents there (Sandur town) who is prepared to show the spot to you"–Vidyadhikari, State Secretariat, Sandur State, dated 28-9-1940.)

3. M. 110, ಸೊಂಡೂರು ಕೈಫಿಯತ್ತು, ಪು. ೯೧.
4. Bellary Gazetteer, p. 323.
5. ARSIE, pp. 16-17, p. 65 ; 1943-45.
6. Ibid. No. 76 of 1943-44.
7. Ibid. No. 75 of 1943-44.
8. ರಣಧೀರ ರಾಮನಾಥ, ಪು. ೮೧–೮೮.

9. ೨೨–೪–೧೯೬೧ ರಂದು ಈ ಐತಿಹಾಸಿಕ ಸ್ಥಳವನ್ನು ನೋಡುವ ಸದವಕಾಶ ನನಗೂ ಉಂಟಾಯಿತು. ಅಲ್ಲಿಯೇ ವಾಸಮಾಡುತ್ತಿದ್ದ ಶ್ರೀ. ಇಗ್ನೇಶಪ್ಪ ಅವರ ಮೂಲಕ ಸ್ಥಳೀಯ ಐತಿಹ್ಯವನ್ನು ಕೇಳಿ ತಿಳಿದುಕೊಂಡಿರುತ್ತೇನೆ. ಕುಮಾರರಾಮನಿಗೆ ಸಂಬಂಧಿಸಿದ ಶಿಲಾಶಾಸನವನ್ನು ಕಂಡು ಸಂತೋಷವಾಯಿತು. ಈ ಪ್ರವಾಸದಲ್ಲಿ ನನ್ನೊಂದಿಗೆ ಬಂದು ನೆರವನ್ನು ನೀಡಿದ ಸಂಡೂರಿನ ಶ್ರೀ. ವಿ. ಶರಣಪ್ಪ ಮತ್ತು ಬಳ್ಳಾರಿಯ ಶ್ರೀ. ಪಿ. ನರಸಿಂಗ ಅವರಿಗೆ ನನ್ನ ವಂದನೆಗಳು.

ಆದ್ದರಿಂದ, ಶ್ರೀ. ಜೆ. ಡಿ. ಎಂ. ಡೆರ್ರೆಟ್ ಅವರು ಊಹಿಸಿರುವಂತೆ ಹೊಸಮಲೆದುರ್ಗ ಮತ್ತು ಕುಮ್ಮಟ ದುರ್ಗಗಳು ಒಂದೇ ಆಗಲಾರವು.[1] ಕುಮ್ಮಟದುರ್ಗ ತುಂಗಭದ್ರಾನದಿಯ ಉತ್ತರದಲ್ಲೂ ಹೊಸಮಲೆದುರ್ಗ ದಕ್ಷಿಣದಲ್ಲೂ ಇರುವುದು ಸ್ಪಷ್ಟವಾಗುತ್ತದೆ. (ಈ ಎರಡು ದುರ್ಗಗಳಿಗೂ ಸುಮಾರು ಇಪ್ಪತ್ತು ಮೈಲಿಗಳಷ್ಟು ಅಂತರವಿರುವುದಾಗಿ ತಿಳಿದುಬರುತ್ತದೆ.[2]) ಕುಮ್ಮಟದುರ್ಗದ ಪತನದೊಂದಿಗೆ ಕಂಪಿಲನ ಮನೆತನವೂ ಕೊನೆ ಗಂಡಿತೆಂದು ಇತಿಹಾಸದಲ್ಲಿ ಉಕ್ತವಾಗಿರುವುದರಿಂದ ಕಡೆಗಾಲದಲ್ಲಿ ಕಂಪಿಲನೂ ಅವನ ಪರಿವಾರದವರೂ ಕುಮ್ಮಟದುರ್ಗದಲ್ಲಿಯೇ ಬಲವಾಗಿದ್ದ ಸ್ಥಳದಲ್ಲಿ ಆಶ್ರಯ ಪಡೆದಿದ್ದಿರಬೇಕು. ಇಸಾಮಿ ಕಂಪಿಲನು ದುರ್ಗದ ಮೇಲುಭಾಗದಿಂದ ಇಳಿದು ಬಂದು ಬಹಾಉದ್ದೀನನನ್ನು ಕಳುಹಿಸಿಕೊಟ್ಟನೆಂದು ವರ್ಣಿಸಿರುವುದರಿಂದ[3] ಕುಮ್ಮಟದುರ್ಗದ ಮೇಲುಭಾಗವೇ (ಮೇಲುಕೋಟೆ) ಹೊಸದುರ್ಗವಾಗಿರಬೇಕು. ಇದರಿಂದ ಹೊಸದುರ್ಗ ಮತ್ತು ಹೊಸಮಲೆದುರ್ಗಗಳೂ ಬೇರೆ ಬೇರೆಯೆಂದು ವಿಶದವಾಗುತ್ತದೆ.

ದೊರವದಿ(ಡಿ) ಎಂಬ ಪ್ರದೇಶವು ಮುಮ್ಮಡಿ ಸಿಂಗನ ಕಾಲದಿಂದಲೂ ಈ ಮನೆತನದವರಿಗೆ ಮುಖ್ಯಸ್ಥಳವಾಗಿದ್ದಂತಿದೆ.[4] ಕಂಪಿಲನೂ ಇಲ್ಲಿ ನೆಲಸಿದ್ದಂತೆ ಉಕ್ತವಾಗಿದೆ.[5] ಕುಮಾರರಾಮನ ಸಾಂಗತ್ಯಗಳಲ್ಲಿ ಎಲ್ಲಿಯೂ ಈ ಹೆಸರನ್ನು ಹೇಳಿಲ್ಲ. ಇದು ಯಾವ ಸ್ಥಳವಿರಬಹುದು ಎಂಬುದರ ಬಗ್ಗೆ ಭಿನ್ನಾಭಿಪ್ರಾಯ ಗಳಿವೆ. ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಬಳ್ಳಾರಿಜಿಲ್ಲೆಯಲ್ಲಿರುವ "ದಾರೋಜಿ"ಯೇ ಈ ಎಡೆಯೆಂದು ತಿಳಿಸುತ್ತಾರೆ.[6] ಡಾ॥ ಎನ್. ವೆಂಕಟರಮಣಯ್ಯನವರು ರಾಯಚೂರು ಜಿಲ್ಲೆ, ಗಂಗಾವತಿ ತಾಲ್ಲೂಕಿನಲ್ಲಿರುವ ದೊರವಡಿ ಎಂಬ ಊರಿರಬೇಕೆಂದು ಭಾವಿಸುತ್ತಾರೆ.[7] ದೊರವದಿ ಎಂಬ ನಾಡಿನಲ್ಲಿ ಪಂಪಾ ತೀರ್ಥವಿರುವುದಾಗಿಯೂ, ಕುರುಗೋಡು ಮತ್ತು ದೊರವದಿಗಳು ಬಲ್ಲಕುಂದಕ್ಕೆ ಸೇರಿದುದಾಗಿಯೂ ಒಂದು ಶಾಸನದಲ್ಲಿ ಹೇಳಿದೆ.[8] ಇಮ್ಮಡಿ ಬಲ್ಲಾಳನು ಗೆದ್ದ ದುರ್ಗಗಳ ಪಟ್ಟಿಯಲ್ಲಿ ದೊರವದಿ ಮತ್ತು ಕುರುಗೋಡು ಗಳು ಸೇರಿವೆ.[9] ಕುರುಗೋಡಿನಲ್ಲಿ ಫಣಿವಂಶಸ್ಥರು ನೆಲಸಿದ್ದರೆಂದೂ, ಕ್ರಿ. ಶ. ೧೧ನೆಯ ಶತಮಾನದಿಂದ ಇದು ಸುಪ್ರಸಿದ್ಧವಾದ ರಾಜಧಾನಿಯಾಗಿತ್ತೆಂದೂ, ಹೊಯ್ಸಳ ಸೋಮೇಶ್ವರನ ನೆಲೆವೀಡೂ ಆಗಿತ್ತೆಂದೂ ಡಾ॥ ಬಿ. ಎ. ಸಾಲೆತೊರೆ ಅವರು ತೋರಿಸಿಕೊಟ್ಟಿರುತ್ತಾರೆ.[10] ದಾರೋಜಿಗೆ ಸಂಬಂಧಿಸಿದ ಕೈಫಿಯತ್ತುಗಳಲ್ಲಿ, ಇದಕ್ಕೆ ಪೂರ್ವದಲ್ಲಿ "ದ್ವಾರಾವತಿ" ಎಂಬ ಹೆಸರಿತ್ತೆಂದೂ, ಮುಸಲ್ಮಾನರು ಆಕ್ರಮಿಸಿದ ಕಾಲದಲ್ಲಿ ಇಲ್ಲಿ ದೊಡ್ಡ ಕೆರೆಯನ್ನು ಕಟ್ಟಿಸಿದ್ದರಿಂದ ಇದಕ್ಕೆ "ದರಿಯಾ ತಲಾಊ" (ತಾಲಾಬ್?) ಎಂಬ ಹೊಸ ಹೆಸರು ಮೊದಲಾಗಿ, ಕಾಲಕ್ರಮೇಣ "ದರೋದಿ" ಎಂಬ ಹೆಸರು ರೂಢಿಗೆ ಬಂತೆಂದೂ ಹೇಳಲಾಗಿದೆ.[11] ಈ ಹಿನ್ನೆಲೆ ಯಲ್ಲಿ ಪರಿಶೀಲಿಸಿದ್ದೇ ಆದರೆ "ದೊರವದಿ" ಎಂಬುದು ಹಂಪೆಯ ಹತ್ತಿರವಿರುವ "ದಾರೋಜಿ"ಯೇ ಆಗಿರ ಬಹುದೆಂದು ತೋರುತ್ತದೆ.

---

1. The Hoysalas, P. 159.
2. ರಣಧೀರ ರಾಮನಾಥ, ಪು. ೯.
3. FSVH, Vol. iii, PP. 3-4.
4. MAR, 1935, No. 39 ; EC, VII, Part I, Channagiri, 24.
5. EC, VIII, Part II, Nagar 19.
6. ಪ್ರಕ. ಸಂ. xxv, ಸಂ .೧, ಪು. ೩೭-೪೦.
7. FSVH, Vol. i, P. 18.
8. SII, Vol. ix, No. 260.
9. EC, V, Part II. Channarayapatna, 179 ; EC, XI, Davanagere, 25.
10. Social and Political life in Vijayanagar Empire, Part I, P. 116.
11. M. 351, ಕಂಪಿಲಿ ತಾಲ್ಲೂಕಿನಲ್ಲಿ ಸೇರಿ(ದ) ದರೋಜಿ ಗ್ರಾಮದ ಕೈಫಿಯತ್ತು, ಪು. ೯೬ ; D. 1837, ಕಂಪ್ಲಿ, ಗುತ್ತಿ ಮುಂತಾದ ಕೈಫಿಯತ್ತು, ಪು. ೮.

ಕಂಪಿಲಿ ಎಂಬುದು ಮತ್ತೊಂದು ಐತಿಹಾಸಿಕ ಸ್ಥಳ. ಕ್ರಿ. ಶ. ೮ನೆಯ ಶತಮಾನದಿಂದಲೂ ಅನೇಕರಿಗೆ ಇದು ರಾಜಧಾನಿಯಾಗಿದ್ದ ಪಟ್ಟಣ. ಆದರೆ, ಕಂಪಿಲನ ಕಾಲದಲ್ಲಿ ಇದು ಆತನಿಗೆ ರಾಜಧಾನಿಯಾಗಿತ್ತೆನ್ನಲು ಯಾವ ಆಧಾರವೂ ಇಲ್ಲ. ಆತನು ಕಂಪಿಲಿ ಸೋಮೇಶ್ವರನ ಅನುಗ್ರಹದಿಂದ ಹುಟ್ಟಿದವನೆಂದು ವರ್ಣಿತವಾಗಿರುವುದರಿಂದ ರಾಜನಿಗೆ ಕಂಪಿಲರಾಯನೆಂದೂ, ಆತನ ರಾಜ್ಯಕ್ಕೆ ಕಂಪಿಲಿ ರಾಜ್ಯವೆಂದೂ ಹೆಸರಾಗಿರಬೇಕು. ಆದರೆ, ಕಂಪಿಲಿ ಮತ್ತು ಆನೆಗೊಂದಿಗಳು ಈ ರಾಜ್ಯಕ್ಕೆ ಸೇರಿದ ಪ್ರಮುಖ ಸ್ಥಳಗಳೆನ್ನಲು ಅಡ್ಡಿಯಿಲ್ಲ. ಕವಿ ನಂಜುಂಡನು ಕಂಪಿಲರಾಯನ ಸೈನ್ಯ ಆನೆಗೊಂದಿಯಿಂದ ಹೊರಟು ಬಂದು ಬಲ್ಲಾಳನನ್ನು ಎದುರಿಸಿತೆಂಬುದಾಗಿ ವರ್ಣಿಸಿದ್ದಾನೆ (xi, ೬೮).

ಇವುಗಳಲ್ಲದೆ, ಕಾವ್ಯಗಳಲ್ಲಿ ಉಕ್ತವಾಗಿರುವ ದೇವಗಿರಿ, ಹಳೆಯಬೀಡು, ಓರುಗಲ್ಲು, ಗುತ್ತಿ, ಡಿಳ್ಳಿ ಮೊದಲಾದುವು ಇಂದಿಗೂ ಪ್ರಸಿದ್ಧವಾದ ಸ್ಥಳಗಳಾಗಿವೆ.

ಪ್ರತಿಯೊಂದು ದಂಡಯಾತ್ರೆಯನ್ನು ವಿವರಿಸುವಾಗಲೂ ಕವಿಗಳು ಅನೇಕ ಊರಿನ ಹೆಸರುಗಳನ್ನು ಹೇಳಿರುವರು. ಇವುಗಳು ಏಕರೀತಿಯಾಗಿಲ್ಲ. ಆದರೆ, ಇವು ಕಾವ್ಯಕ್ಕೆ ಸ್ಥಳೀಯ ವಾತಾವರಣವನ್ನೂ ವಾಸ್ತವಿಕತೆಯನ್ನೂ ಉಂಟುಮಾಡಿವೆ.

## ಘಟನೆಗಳು

ಕುಮಾರರಾಮನ ಸಾಂಗತ್ಯಗಳಲ್ಲಿ ಅನೇಕ ರಾಜಕೀಯ ಸಂಗತಿಗಳು ನಿರೂಪಿತವಾಗಿವೆ. ಕುಮಾರರಾಮನ ನೇತೃತ್ವದಲ್ಲಿ ಹಲವಾರು ಯುದ್ಧಗಳು ನಡೆದಿವೆ. ನಾನಾ ಕಾರಣಗಳಿಂದ ಉಂಟಾಗಿರುವ ಈ ಕಲಹಗಳಲ್ಲಿ ಸಂದರ್ಭೋಚಿತವಾಗಿ ಗೆಲುವು ಸೋಲುಗಳು ಸಂಭವಿಸಿವೆ. ಈ ಘಟನೆಗಳು ಎಷ್ಟರಮಟ್ಟಿಗೆ ಐತಿಹಾಸಿಕ ಪ್ರಮಾಣಕ್ಕೆ ಅನುಸಾರವಾಗಿವೆ ಎನ್ನುವುದನ್ನು ಇಲ್ಲಿ ವಿಚಾರಮಾಡಲಾಗಿದೆ.

**ರಾಜ್ಯಾರಂಭ :** ಕುಮಾರರಾಮನ ತಾತನಾದ ಮುಮ್ಮಡಿ ಸಿಂಗನೇ ಈ ಪೀಳಿಗೆಯಲ್ಲಿ ಸುಪ್ರಸಿದ್ಧನಾದ ಮೊದಲನೆಯ ರಾಜ. ಮಹಲಿಂಗಸ್ವಾಮಿ ವೀರ ಕಸ್ತೂರಿನಾಯ್ಕನೆಂಬಾತನೇ ಪ್ರಾರಂಭದವನೆಂದು ಹೇಳಿದ್ದರೂ, ಇದನ್ನು ಸಮರ್ಥಿಸಲು ಈವರೆಗೂ ಬೇರೆ ಯಾವ ಐತಿಹಾಸಿಕ ಪ್ರಮಾಣವೂ ಲಭಿಸಿಲ್ಲ. ಮುಮ್ಮಡಿ ಸಿಂಗನು ದಾಯಾದಿಗಳ ಕಾಟವನ್ನು ತಡೆಯಲಾರದೆ ದೇವಗಿರಿಯ ರಾಮದೇವರಾಯನ ಆಶ್ರಯವನ್ನು ಪಡೆದನೆಂದೂ ಮುಸಲ್ಮಾನರಿಂದ ಆ ರಾಜನ ಪ್ರಾಬಲ್ಯ ಕೊನೆಗಾಣಲು ಮತ್ತೆ ರಾಯದುರ್ಗಕ್ಕೆ ಬಂದು, ಅಲ್ಲಿಯ ಮಲ್ಲಿದೇವನ ಅನಂತರ ತಾನೇ ಪಟ್ಟಕ್ಕೆ ಬಂದನೆಂದೂ ಗಂಗನ ಕೆಲವು ಪ್ರತಿಗಳಲ್ಲಿ ಬರುತ್ತವೆ (ಗಂ. ೫, i, ii ; ಡಿ. ೯೧೧).

ಪಾಂಚಾಳ ಗಂಗನ ಈ ಹೇಳಿಕೆಯನ್ನು ಅವಲಂಬಿಸಿ, ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ರಾಯದುರ್ಗದ ಮಲ್ಲಿದೇವನೂ, ನಿಡುಗಲ್ಲಿನ ಚೋಳವಂಶಕ್ಕೆ ಸೇರಿದ ಮಲ್ಲಿದೇವನೂ ಒಬ್ಬನೇ ಎಂದು ಭಾವಿಸಿ, ಆ ವಂಶದ ಕಡೆಯ ಅರಸಾದ ಮಲ್ಲಿದೇವನ ಅನಂತರ ಮುಮ್ಮಡಿ ಸಿಂಗನು ಪಟ್ಟಕ್ಕೆ ಬಂದಿರಬೇಕೆಂದು ಅಭಿಪ್ರಾಯಪಡುತ್ತಾರೆ.[1] ಈ ಹೇಳಿಕೆ ಕಾಲದ ದೃಷ್ಟಿಯಿಂದ ಅಸಮರ್ಪಕವಾಗಿದೆ. ನಿಡುಗಲ್ಲಿನ ಮಲ್ಲಿದೇವನ ಕಾಲ ಕ್ರಿ. ಶ. ೧೧೧೮ ರಿಂದ ೧೧೯೭ ರವರೆಗಾದರೆ,[2] ದೇವಗಿರಿಯ ರಾಮದೇವರಾಯನ ಕಾಲ ಕ್ರಿ. ಶ. ೧೨೭೧ ರಿಂದ ೧೩೦೯ ರವರೆಗೆ ಆಗುತ್ತದೆ. ಅಲ್ಲದೆ, ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಭಾವಿಸಿರುವಂತೆ ಮಲ್ಲಿದೇವನು ನಿಡುಗಲ್ಲ ಚೋಳರ ಕಡೆಯ ಅರಸಾಗದೆ, ಆತನ ತರುವಾಯ ಇನ್ನು ನಾಲ್ಕು

---

1. ಶರಣಸಾಹಿತ್ಯ, ಸಂ. vi, ಸಂ. ೬. ಪು. ೧೦೨–೧೦೩.
2. Mys. Gaz. Vol. II, Part II, P. 1274.

ಜನರು ರಾಜ್ಯವಾಳುತ್ತಾರೆ.[1] ನಿಡುಗಲ್ಲಿನ ಚೋಳರಿಗೂ ಹೊಯ್ಸಳರಿಗೂ ವಿಷ್ಣುವರ್ಧನನ ಕಾಲದಿಂದಲೂ ದ್ವೇಷವಿತ್ತು. ಇಮ್ಮಡಿ ಇರುಂಗೋಳನು ಕ್ರಿ. ಶ. ೧೨೭೬ ರಲ್ಲಿ ದೇವಗಿರಿಯ ಯಾದವರ ಪಕ್ಷವನ್ನು ವಹಿಸಿ ದೋರಸಮುದ್ರದ ಮೇಲೆ ದಂಡೆತ್ತಿ ಹೋದಂತೆ ಬೇಲೂರಿನ ಶಾಸನಗಳಲ್ಲಿ ವರ್ಣಿತವಾಗಿದೆ.[2] ಕಡೆಗೆ ಹೊಯ್ಸಳ ಮುಮ್ಮಡಿ ನರಸಿಂಹನು ಕ್ರಿ. ಶ. ೧೨೮೫ರಲ್ಲಿ ನಿಡುಗಲ್ಲಿನ ಕೋಟೆಯನ್ನು ನಾಶಮಾಡಿದನೆಂದು ವ್ಯಕ್ತವಾಗುತ್ತದೆ.[3] ಆದ್ದರಿಂದ, ನಿಡುಗಲ್ಲಿನ ಚೋಳರ ಅಂತ್ಯದಲ್ಲಿ ಮುಮ್ಮಡಿ ಸಿಂಗನು ಪಾತ್ರವಹಿಸಿದ್ದನೆಂದು ಹೇಳಲು ಯಾವ ಆಧಾರವೂ ಇಲ್ಲ. ಗಂಗನು ಹೇಳಿರುವ ಮಲ್ಲಿದೇವನು ಇತ್ತೀಚಿನವನಾದ ಬೇರೆ ಯಾರೋ ಇರಬಹುದು.

ರಾಮದೇವರಾಯನೂ ಮುಮ್ಮಡಿ ಸಿಂಗನೂ ಸಮಕಾಲೀನರೆಂಬುದಾಗಿ ಶಾಸನಗಳಿಂದ ತಿಳಿದುಬಂದರೂ ಇವರಿಬ್ಬರಿಗೂ ಯುದ್ಧ ನಡೆದ ಸಂಗತಿಗಳು ಉಕ್ತವಾಗಿರುವುವೇ ವಿನಾ ಪರಸ್ಪರ ಸ್ನೇಹದ ವಿಚಾರವಿಲ್ಲ. ರಾಮದೇವರಾಯನ ದಂಡಾಧಿಪತಿಗಳಾದ ಶ್ರೀವೀರಚವುಂಡರಸನು ಕ್ರಿ. ಶ. ೧೨೮೦ ರಲ್ಲೂ, ಕನ್ನರದೇವನು ಕ್ರಿ. ಶ. ೧೨೮೨/೮೩ ರಲ್ಲೂ ದೊರವದಿಯಲ್ಲಿದ್ದ ಮುಮ್ಮಡಿ ಸಿಂಗನ ಮೇಲೆ ದಂಡೆತ್ತಿ ಬಂದಂತೆ ತಿಳಿದು ಬರುತ್ತವೆ.[4] ಆದ್ದರಿಂದ ಮುಮ್ಮಡಿ ಸಿಂಗನು ಎಂದು ರಾಮದೇವರಾಯನ ಆಶ್ರಿತನಾದನೆಂದು ಹೇಳುವುದು ಕಷ್ಟ. ಅವನ ಮಗನಾದ ಕಂಪಿಲದೇವನನ್ನು ಕ್ರಿ.ಶ. ೧೩೦೩ ರಲ್ಲಿಯೇ ಸೇವುಣ(ರಣ?) ನಾಯ್ಕನೆಂಬುದಾಗಿ (ಶಾಸನದಲ್ಲಿ ಸೇವುಣರಣಿಯನಾಯ್ಕ ಎಂದಿದೆ. ಅಣಿ = ಸೈನ್ಯ ; ಅಣಿಯನಾಯ್ಕ = ಪಡೆವಳ ಎಂದು ಇರಬಹುದೆ ?) ಕರೆದಿರುವುದನ್ನು ನೋಡುತ್ತೇವೆ.[5] ಬಹುಶಃ ಈ ವೇಳೆಗೆ ಈ ಮನೆತನದವರು ಯಾದವರ ಆಶ್ರಯವನ್ನು ಗಳಿಸಿ, ಅವರ ಪತನಾನಂತರ ಸ್ವತಂತ್ರವಾಗಿ ರಾಜ್ಯವನ್ನು ನಿರ್ಮಿಸಿಕೊಂಡಿರಬಹುದು.

**ಬಲ್ಲಾಳನೊಂದಿಗೆ ಯುದ್ಧ :** ಮುಮ್ಮಡಿ ಸಿಂಗನ ಕಾಲದಿಂದಲೇ ಈ ವಂಶೀಯರಿಗೆ ಹೊಯ್ಸಳರೊಂದಿಗೆ ದ್ವೇಷವಿದ್ದಂತೆ ವ್ಯಕ್ತವಾಗುತ್ತದೆ. ಏಕೆಂದರೆ, ಕ್ರಿ.ಶ. ೧೨೮೧ರಲ್ಲಿ ಮುಮ್ಮಡಿ ಸಿಂಗನು ಹೊಯ್ಸಳರ ಆಧಿಪತ್ಯಕ್ಕೆ ಸೇರಿದ್ದ [ಬೆ]ಮ್ಮಲೂರ ಕಲ್ಲಿಂಗೆ, ಎಂದರೆ, ಇಂದಿನ ಚಿತ್ರದುರ್ಗದ ಮೇಲೆ ದಂಡೆತ್ತಿ ಬಂದಂತೆ ತಿಳಿದುಬರುತ್ತದೆ.[6] ಇದೇ ಮುಮ್ಮಡಿ ಸಿಂಗನು ವೇತಂಡುಕಲ್ಲು ಎಂಬಲ್ಲಿ ಸಂಗ್ಯೆಯನಾಯಕನೊಂದಿಗೆ ಯುದ್ಧ ಮಾಡಿದನೆಂಬುದಾಗಿ ಹೊಳಲ್ಕೆರೆ ತಾಲ್ಲೂಕು ಲೋಕದವೊಳಲು ಗ್ರಾಮದಲ್ಲಿರುವ ಶಾಸನವೊಂದರಲ್ಲಿ ಕಂಡು ಬರುತ್ತದೆ.[7] ಈ ಎಡೆಯೂ ಹೊಯ್ಸಳರ ಆಧಿಪತ್ಯಕ್ಕೆ ಸೇರಿದ್ದಿತು.

ಕಂಪಿಲನ ಕಾಲಕ್ಕೆ ಈ ದ್ವೇಷಕ್ಕೆ ಮತ್ತಷ್ಟು ಪುಟವಿಕ್ಕಿದಂತಾಯಿತು. ಮೊದಮೊದಲು, ಕಂಪಿಲನು ದೇವಗಿರಿಯ ರಾಮದೇವರಾಯನ ರಣನಾಯಕನಾಗಿದ್ದುಕೊಂಡು, ಅವನ ಪರವಾಗಿ ಹೊಯ್ಸಳರ ಮೇಲೆ ಯುದ್ಧಮಾಡಿರುವಂತೆ ವಿದಿತವಾಗುತ್ತದೆ. ಕ್ರಿ. ಶ. ೧೩೦೩ರಲ್ಲಿ ಸೇವುಣರ ರಣನಾಯ್ಕನಾದ ಕಂಪಿಲನಿಗೂ, ಹೊಯ್ಸಳ ಮುಮ್ಮಡಿ ಬಲ್ಲಾಳನ ಮೈದುನನೂ ಚಿತ್ರದುರ್ಗದ ಮಾಂಡಲಿಕನೂ ಆದ ಸೋಮೆಯ ದಣ್ಣಾಯಕನಿಗೂ ಹೊಳಲ್ಕೆರೆಯ ಬಳಿ ಯುದ್ಧ ನಡೆದುದಾಗಿ ಒಂದು ವೀರಗಲ್ಲಿನಲ್ಲಿ ಉಕ್ತವಾಗಿದೆ[8]. ಕ್ರಿ.ಶ. ೧೩೨೦

1. EC, XII, Intro. P. 7; Historical Inscriptions of Southern India, by Robert Sewell, p. 369.
2. EC, V, Belur, Nos. 164 and 165.
3. Mys. Gaz. Vol. II, Part II, P. 1275 and P. 1393.
4. EC, VII, Part I, Channagiri, 24 ; MAR, 1935, No. 39.
5. EC, XV, Holenarasipur, 83, Supplement to Hassan District.
6. EC, XI, Hiriyur, 86.
7. EC, XI, Holalkere, 37.
8. EC, XV, Holenarasipur, 83, Supplement to Hassan District.

ರಲ್ಲಿ ಹೊಯ್ಸಳ ವೀರಬಲ್ಲಾಳನು ಕಂಪಿಲನ ನೆಲೆಯಾದ ದೊರವದಿಯ ಮೇಲೆ ದಂಡೆತ್ತಿ ಬಂದಂತೆಯೂ ಆ ಕದನದಲ್ಲಿ ಬಲ್ಲಾಳನ ಸೇನಾಧಿಪತಿಯಾದ ಕೂರುಕನಾಯಕನು ಹತನಾದಂತೆಯೂ ಗೊತ್ತಾಗುತ್ತದೆ[1]. ಕ್ರಿ.ಶ. ೧೩೨೩(?)ರಲ್ಲಿ ಬಲ್ಲಾಳನಿಗೂ ಕಂಪಿಲನಿಗೂ ಯುದ್ಧ ಸಂಭವಿಸಿದುದಾಗಿ ಇತ್ತೀಚೆಗೆ ರಾಮಘಟ್ಟದ ಬಳಿ ದೊರೆತಿರುವ ಶಾಸನದಿಂದ ವ್ಯಕ್ತವಾಗುತ್ತದೆ.[2] ಕ್ರಿ. ಶ. ೧೩೨೫ರಲ್ಲಿ ಕಂಪಿಲದೇವನಿಗೂ ಬಲ್ಲಾಳನ ಮಹಾ ಪ್ರಧಾನರಾದ ಬೇಚೆಯ ದಣ್ಣಾಯಕ ಮತ್ತು ಸಿಂಗೆಯ ದಣ್ಣಾಯಕರಿಗೂ ಕಾಳಗವಾಯಿತೆಂಬುದಾಗಿ ಅಸ್ಪಷ್ಟವಾದ ಒಂದು ಶಾಸನವಿದೆ.[3] ಬಳ್ಳಾರಿ ಜಿಲ್ಲೆಯಲ್ಲಿರುವ ಸಿರಗುಪ್ಪೆಯ ಬಳಿ ಕಂಪಿಲದೇವನಿಗೂ ವೀರಬಲ್ಲಾಳನಿಗೂ ದೊಡ್ಡ ಕಾಳಗ ನಡೆದುದಾಗಿ ಇನ್ನೊಂದು ಶಾಸನದಲ್ಲಿ ಉಕ್ತವಾಗಿದೆ[4]. ಈ ಶಾಸನಾಧಾರಗಳನ್ನು ಗಮನಿಸಿದರೆ ಕಂಪಿಲನಿಗೂ ವೀರಬಲ್ಲಾಳನಿಗೂ ಇದ್ದ ಬದ್ಧವೈರವು ವೇದ್ಯವಾಗುತ್ತದೆ. ಮೇಲ್ಕಂಡ ಕಾಳಗಗಳಲ್ಲಿ ಕಂಪಿಲನ ಕೈ ಮೇಲಾಗಿರುವುದೂ ಗಮನಾರ್ಹವಾದುದು. ಆದ್ದರಿಂದ, ಕುಮಾರರಾಮನ ಸಾಂಗತ್ಯಗಳಲ್ಲಿ ಚಿತ್ರಿತವಾಗಿರುವ ಈ ಯುದ್ಧ ಪ್ರಸಂಗಕ್ಕೆ ತಕ್ಕಮಟ್ಟಿಗೆ ಆಧಾರವಿದೆ ಎನ್ನಬಹುದು.

ಈ ಯುದ್ಧಕ್ಕೆ ಕಾವ್ಯಗಳಲ್ಲಿ ಹೇಳಿರುವ ಕಾರಣಗಳು ಒಂದೇ ರೀತಿಯಾಗಿಲ್ಲ. ನಂಜುಂಡನಲ್ಲಿ, ಕುಮಾರರಾಮನು ಹುಳಿಯೇರಿನ ಮೇಲೆ ದಂಡೆತ್ತಿ ಹೋಗಿ ಅಲ್ಲಿನ ಅಧಿಪತಿಯನ್ನು ಸೋಲಿಸಿದುದೇ ಕಾರಣವೆಂದು ಚಿತ್ರಿತವಾಗಿದೆ. ಪಾಂಚಾಳ ಗಂಗನಲ್ಲಿ, ಮೊದಲನೆಯ ಬಾರಿ ಸೋತ ನೇಮಿ ಬಲ್ಲಾಳನನ್ನು ಎತ್ತಿಕಟ್ಟಿದನೆಂದು ಹೇಳಲಾಗಿದೆ. ಮಹಲಿಂಗಸ್ವಾಮಿಯಾದರೋ, ಹಳೆಯಬೀಡಿನ ಬಲ್ಲಾಳನು ಬಾಕಿ ಕೊಡಬೇಕಾಗಿದ್ದ ಕಪ್ಪವನ್ನು ವಸೂಲುಮಾಡಲೆಂದೇ ಕುಮಾರರಾಮನು ಹಳೆಯಬೀಡಿಗೇ ಮುತ್ತಿಗೆ ಹಾಕಿದನೆಂದು ನಿರೂಪಿಸಿರುತ್ತಾನೆ. ಈ ಮೂವರಲ್ಲಿ, ಮಹಲಿಂಗಸ್ವಾಮಿಯ ಅಭಿಪ್ರಾಯ ತೀರ ಅತಿಶಯೋಕ್ತಿಯೆಂದು ಕೈಬಿಡಬಹುದು. ಪಾಂಚಾಳ ಗಂಗನ ಸೂಚನೆಯೂ ಚರ್ಚಾಸ್ಪದವಾಗಿದೆ. ಬಾದೂರನ ಪಲಾಯನದ ಅನಂತರವೇ ಮಹಮ್ಮದೀಯರು ಮೇಲಿಂದ ಮೇಲೆ ಕುಮ್ಮಟದ ಮೇಲೆ ದಾಳಿ ಮಾಡಿರುವಂತೆ ತೋರಿಬರುತ್ತದೆ. ಈ ವೇಳೆಗೆ, ಎಂದರೆ, ಕ್ರಿ.ಶ. ೧೩೨೭ಕ್ಕಿಂತಲೂ ಮುಂಚಿತವಾಗಿಯೇ ಹೊಯ್ಸಳರಿಗೂ ಕಂಪಿಲನಿಗೂ ವೈರವಿದ್ದುದಾಗಿ ಸ್ಪಷ್ಟವಾಗುವುದರಿಂದ ಗಂಗನು ಹೇಳಿರುವ ಕಾರಣವೂ ಸಮಂಜಸವೆನ್ನಿಸುವುದಿಲ್ಲ. ಆದ್ದರಿಂದ, ಹೊಯ್ಸಳರ ಸಾಮಂತನಾಗಿದ್ದ ಹುಳಿಯೇರಿನ ಅಧಿಪತಿಯ ಮೇಲೆ ಕೈಮಾಡಿದುದೇ ಕಾರಣವಾಯಿತೆಂಬ ನಂಜುಂಡನ ನಿರೂಪಣೆಯೇ ಹೆಚ್ಚು ಸಹಜವಾಗಿದೆ. ಕಂಪಿಲನಿಗೂ ಸೋಮದಣ್ಣಾಯಕನಿಗೂ ಯುದ್ಧವಾದಂತೆ ಶಾಸನವೊಂದರಲ್ಲಿ ಹೇಳಿರುವಂತೆಯೇ, ನಂಜುಂಡನು ಬಲ್ಲಾಳನ ಪಕ್ಷದಲ್ಲಿ ಸೋಮದಂಡಾಧಿಪನೆಂಬಾತನು ಇದ್ದನೆಂದು ಹೇಳಿರುತ್ತಾನೆ (xii, ೪೩). ಕವಿ ಯಾವ ಯುದ್ಧವನ್ನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದನೆಂಬುದನ್ನು ಹೇಳುವುದಕ್ಕಾಗದಿದ್ದರೂ, ಈ ರಾಜರಿಬ್ಬರ ಕಲಹದ ಸ್ಥೂಲಕಲ್ಪನೆ ಇಲ್ಲಿ ಆಗಿರುತ್ತದೆ. ಮದರಾಸಿನಲ್ಲಿರುವ ನಂಜುಂಡನ ಒಂದು ಪ್ರತಿಗೆ "ಬಲ್ಲಾಳರಾಯನ ಯುದ್ಧ" ಎಂದು ಹೆಸರಿರುವುದನ್ನು ನೋಡಿದರೆ[5] ಈ ಘಟನೆಗೆ ಎಷ್ಟು ಪ್ರಾಶಸ್ತ್ಯ ದೊರತಿದೆಯೆಂಬುದು ಸ್ಪಷ್ಟವಾಗುತ್ತದೆ.

**ಓರುಗಲ್ಲಿನ ಯುದ್ಧ** : ಕುಮಾರರಾಮನ ಕಥೆಯಲ್ಲಿ, ಅತ್ಯಂತ ಮುಖ್ಯವಾದ ಘಟನೆಗಳಲ್ಲಿ ಪ್ರತಾಪರುದ್ರನಿಗೂ ಕಂಪಿಲನಿಗೂ ನಡೆದ ಯುದ್ಧವೂ ಒಂದು. ಇದನ್ನು ಮೂರು ಜನ ಕವಿಗಳೂ ತಕ್ಕಮಟ್ಟಿಗೆ

---

1. EC, VIII, Part ii, Nagar, 19.
2. ARSIE, 1943-45, No. 75 of 1943-44.
3. EC, XII, Tiptur, 24.
4. MAR, 1923, No. 121.
5. An Alphabetical Index of Kanarese Manuscripts, Sl. No. 733, Ms. No. 19-2-14 ; ಕುಮಾರರಾಮುನಿ ಕಥ, ಉಪೋದ್ಘಾತಮು, ಪು. viii.

ಉಜ್ವಲವಾಗಿಯೇ ಚಿತ್ರಿಸಿರುತ್ತಾರೆ. ಓರುಗಲ್ಲಿನ ಪ್ರತಾಪರುದ್ರನು ಕಂಪಿಲನ ಸಮಕಾಲೀನನೆಂಬುದೇನೋ ಸರಿ (ಕ್ರಿ.ಶ. ೧೨೯೬–೧೩೨೩). ಮಲ್ಲಿಕ್ ಕಾಫರನು ಕ್ರಿ.ಶ. ೧೩೦೯ ರಲ್ಲಿ ಪ್ರತಾಪರುದ್ರನೊಂದಿಗೆ ಯುದ್ಧ ನಡೆಸಿ, ಆತನನ್ನು ದೆಹಲಿಯ ಸಾಮಂತನನ್ನಾಗಿ ಮಾಡಿದ್ದನು. ಇತ್ತ ಕಂಪಿಲನ ಮೇಲ್ಮೆಯನ್ನು ಸಹಿಸಲಾರದೆ ಪ್ರತಾಪರುದ್ರನು ಕುಮ್ಮಟದ ಮೇಲೆ ದಂಡೆತ್ತಿ ಬಂದಿರಬಹುದು. ಶ್ರೀನಾಥನ "ಭೀಮೇಶ್ವರ ಪುರಾಣ"ದಲ್ಲಿ ಪ್ರತಾಪರುದ್ರನ ಮಂತ್ರಿಯಾದ ಬೆಂಡಪೂಡಿ ಅನ್ನಾಮಾತ್ಯ ಎಂಬಾತನನ್ನು ಕುಮ್ಮಟೋದ್ಯಾನವನ್ನು ಕೆಡಿಸಿದವನೆಂಬುದಾಗಿ ಹೇಳಲಾಗಿದೆ.[1] ಹೀಗೆಯೇ ಪ್ರತಾಪರುದ್ರನ ಸಾಮಂತನಾದ ಕೊಟಕಂಟಿ ರಾಘವ ಎಂಬಾತನು ಕಂಪಿಲರಾಯನ ಸೈನ್ಯದ ತೇಜವನ್ನು ಅಡಗಿಸಿದನೆಂದು "ದ್ವಿಪಾದ ಬಾಲ ಭಾಗವತ"ದಲ್ಲಿ ವರ್ಣಿತವಾಗಿದೆ.[2] ಈ ಎರಡು ಹೇಳಿಕೆಗಳಲ್ಲಿಯೂ ಕಂಪಿಲನು ಪರಾಜಿತನಾದನೆಂದು ವಿಶದವಾಗುತ್ತದೆ. ಕುಮಾರರಾಮನ ಸಾಂಗತ್ಯಗಳಲ್ಲಿ, ಈ ಘಟನೆ ನಂಜುಂಡನಲ್ಲಿ ಒಂದು ಬಗೆಯಾಗಿಯೂ, ಗಂಗ ಮತ್ತು ಮಹಲಿಂಗಸ್ವಾಮಿಗಳಲ್ಲಿ ಬೇರೊಂದು ತೆರನಾಗಿಯೂ ನಿರೂಪಿತವಾಗಿದೆ.

ನಂಜುಂಡನ ಕೃತಿಯಲ್ಲಿ, ಕುಮಾರರಾಮನು "ನವಲಕ್ಕ ತೆಲುಗರ ಗಂಡ" ಎಂಬ ಬಿರುದನ್ನು ಧರಿಸಿದ್ದನ್ನು ಕೇಳಿ ವೀರರುದ್ರನು ಸಿಂಗಮನಾಯಕ, ಪದ್ಮನಾಯಕರೊಂದಿಗೆ[3] ದಂಡೆತ್ತಿ ಬಂದಂತೆಯೂ, ಕಡೆಯಲ್ಲಿ ಕಂಪಿಲನ ಪಕ್ಷಕ್ಕೇ ಜಯವಾಗಲು, ಕುಮಾರರಾಮನು ಶತ್ರುಗಳೊಂದಿಗೆ ವೈರವನ್ನು ಬೆಳಸಲಿಚ್ಛಿಸದೆ, ಕುದುರೆಗಳನ್ನು ಉಡುಗೊರೆಯಾಗಿ ಕೊಟ್ಟು ಸ್ನೇಹಮಾಡಿಕೊಂಡನೆಂದೂ ವರ್ಣಿತವಾಗಿದೆ. ಈ ವಿಷಯವನ್ನು ಪ್ರಸ್ತಾವಮಾಡುತ್ತ ಡಾ|| ಎಂ. ರಾಮರಾಯರು, ಕುಮಾರರಾಮನು ವೀರರುದ್ರನಲ್ಲಿಗೆ ಬಂದು ಬಲ್ಲಾಳನನ್ನು ಸದೆಬಡಿಯಲು ಸಹಾಯವನ್ನು ಕೋರಿದನೆಂದೂ, ವೀರರುದ್ರನು ಒಪ್ಪದೆ ಹೋಗಲು ಆಗ ತೆಲುಗರಿಗೆ ಮನನೋಯುವಂತೆ ಆತನು ತನ್ನ ಬಿರುದುಗಳನ್ನು ಮೆರೆಸಿದನೆಂದೂ, ಆ ಕಾರಣದಿಂದ ಪರಸ್ಪರ ಯುದ್ಧವಾಯಿತೆಂದೂ ಸೂಚಿಸಿರುವರು.[4] ಈ ವೃತ್ತಾಂತವನ್ನೇ ಹೋಲುವಂತೆ ಶ್ರೀ. ಎಸ್. ಆರ್. ಕೂಡ್ಲಿಗಿ ಅವರೂ ತಮ್ಮ ಗಂಗನ ಕಥಾಸಂಗ್ರಹದಲ್ಲಿ ನಿರೂಪಿಸಿರುತ್ತಾರೆ.[5] ಈ ಯುದ್ಧದಲ್ಲಿ ಸಂಧಿಯ ಪ್ರಸ್ತಾಪ ಬಂದಿರುವುದರಿಂದ ಕುಮಾರರಾಮನಿಗೆ ಸೋಲಾಗಿರಬೇಕೆಂದು ಡಾ|| ಎಂ. ರಾಮರಾಯರ ಅಭಿಪ್ರಾಯ. ಯುದ್ಧಕ್ಕೆ ಇಲ್ಲಿ ಸೂಚಿಸಿರುವ ಕಾರಣ ನಾನು ಪರಿಶೀಲಿಸಿರುವ ನಂಜುಂಡನ ಹಾಗೂ ಗಂಗನ ಪ್ರತಿಗಳಲ್ಲಿ ಎಲ್ಲಿಯೂ ಕಂಡುಬಂದಿಲ್ಲ.

ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿಗಳ ರಚನೆಗಳಲ್ಲಿ ಈ ಸಂದರ್ಭವನ್ನು ಕುಮಾರರಾಮನು ಬೊಲ್ಲನನ್ನು ಅಪಹರಿಸಿ ತಂದ ಘಟನೆಗಾಗಿ ಬಳಸಿಕೊಳ್ಳಲಾಗಿದೆ. ದೇವಿಶೆಟ್ಟಿಲಿಂಗನ ಸ್ನೇಹ, ಗುಂಡು ಬ್ರಹ್ಮಯ್ಯನ ಮಹಿಮೆ ಮೊದಲಾದುವು ಇಲ್ಲಿ ಹೆಣೆದುಕೊಂಡು ಬರುತ್ತವೆ. ಮಹಲಿಂಗಸ್ವಾಮಿಯಲ್ಲಿ, ಹರಿಹರದೇವಿ ಓರುಗಲ್ಲಿಗೆ ಹೊರಟು ನಿಂತಿದ್ದ ಮಗನನ್ನು ಕುರಿತು ಅದು ಕಂಪಿಲನಿಗೂ ಅಸಾಧ್ಯವಾಗಿ ಪರಿಣಮಿಸಿದ ದುರ್ಗವೆಂದೂ ರಾಜನು ಆ ಕಡೆ ತಲೆಯಿಟ್ಟು ಮಲಗುವುದಿಲ್ಲವೆಂದೂ ಆತಂಕಪಡುವಳು (vii, ೭೮). ಈ ಮಾತನ್ನು ನೋಡಿದರೆ, ಒಮ್ಮೆ ಕಂಪಿಲನು ದಂಡೆತ್ತಿ ಹೋಗಿ ವಿಫಲನಾಗಿ, ಎರಡನೆಯ

---

1. .... ವಿಘಟಿತ ಕುಮ್ಮಟೋದ್ಯಾನುಡನಗ ವಿಶ್ವಲೋಕ ಪ್ರಶಸ್ತುಡೈ ವಿನುತಿಕೆಕ್ಕೆನತುಲ ಬಲಸಿರಿ ಪೋಲಯಯನ್ನ ಶೌರಿ.

2. FSVH, Vol. ii, P. 1.

3. ಇಲ್ಲಿ ಉಕ್ತವಾಗಿರುವ ಸಿಂಗಮನಾಯಕನೇ (xiv, 20.) ರೇಚರ್ಲ ಸಿಂಗಮನಾಯಕನಿರಬೇಕೆಂದು ಡಾ|| ಎಂ. ರಾಮರಾಯರು ಸೂಚಿಸಿರುತ್ತಾರೆ (The Kakaltiyas of Warangal, p. 100).

4. The Kakatiyas of Warangal, P. 94.

5. ಜಯಕರ್ನಾಟಕ, ೧೯೪೨, ಜೂನ್, ಪು. ೨೫೩–೫೫.

ಬಾರಿ ಕುಮಾರರಾಮನು ಪಣತೊಟ್ಟು ಹೊರಟಿರುವಂತೆ ತೋರುತ್ತದೆ.[1] ಅಂತೂ ಈ ಯುದ್ಧದ ಸತ್ಯಾಂಶವನ್ನು ನಿರ್ಣಯಿಸಲು ಈವರೆಗೆ ಬೇರೆ ಯಾವ ಬಗೆಯಾದ ಬಲವತ್ತರವಾದ ಪ್ರಮಾಣವೂ ಲಭಿಸಿಲ್ಲ. ಆಗಿನ ಕಾಲದ ಸ್ಥಿತಿಯನ್ನು ನೋಡಿದಲ್ಲಿ ಕ್ರಮಕ್ರಮವಾಗಿ ತಲೆಯೆತ್ತುತ್ತಿದ್ದ ಕಂಪಿಲರಾಯನಿಗೂ ಕಾಕತೀಯ ಪ್ರತಾಪರುದ್ರನಿಗೂ ಸಣ್ಣಪುಟ್ಟ ಕಲಹಗಳು ಆಗುತ್ತಿದ್ದಿರಬಹುದು. ಕಂಪಿಲಿರಾಜ್ಯದ ಗಡಿಯಲ್ಲಿಯೇ ತೆಲುಂಗಾಣ್ಯವೂ ಇದ್ದದ್ದರಿಂದ ಇದು ಅಸಂಭವವೇನಲ್ಲ. ಪ್ರಕೃತದಲ್ಲಿ ಕಾವ್ಯಗಳಲ್ಲಿ ವರ್ಣಿತವಾಗಿರುವ ಯುದ್ಧ ಕ್ರಿ. ಶ. ಸು. ೧೩೧೯ರಲ್ಲಿ ನಡೆದಿರಬಹುದೆಂದು ಇತಿಹಾಸಕಾರರು ಊಹಿಸಿರುತ್ತಾರೆ.[2]

ಇದೇ ಸಂದರ್ಭದಲ್ಲಿ, ಕನ್ನಡ ಕವಿಗಳು ಪ್ರತಾಪರುದ್ರನನ್ನು ಕುರಿತು ಹೇಳಿರುವ ಇನ್ನೂ ಎರಡು ಸಂಗತಿಗಳನ್ನು ವಿಚಾರಿಸಬಹುದು. ನಂಜುಂಡನು, ಸುಲ್ತಾನನು ಕೈಸೆರೆಯಾದ ಪ್ರತಾಪರುದ್ರನನ್ನು ಡಿಳ್ಳಿಗೆ ಕರೆತರಿಸಿ ಸೆರೆಮನೆಯಲ್ಲಿಡಲು, ಅಲ್ಲಿ ಆ ರಾಜನು ಕಾಲವಾದನೆಂದು ಹೇಳಿರುತ್ತಾನೆ (xvii, ೧೦೬–೧೨೫). ಈ ಘಟನೆ ಕ್ರಿ. ಶ. ೧೩೨೩ ರಲ್ಲಿ ಮಹಮ್ಮದೀಯರು ಓರುಗಲ್ಲನ್ನು ಸಂಪೂರ್ಣವಾಗಿ ವಶಪಡಿಸಿಕೊಂಡ ಸಂದರ್ಭವನ್ನು ಕುರಿತುದಾಗಿದೆ. ಪ್ರತಾಪರುದ್ರನ ಮರಣದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಆತನು ಸೆರೆಯಿಂದ ಬಿಡುಗಡೆಯಾಗಿ ಕೆಲವು ಕಾಲದ ಮೇಲೆ ದೈವಾಧೀನನಾದನೆಂದೂ, ಹಾಗಲ್ಲದೆ, ಡಿಳ್ಳಿಗೆ ಹೋಗುವ ದಾರಿಯಲ್ಲೇ ಸತ್ತನೆಂದೂ, ಎರಡು ರೀತಿಯಾದ ಅಭಿಪ್ರಾಯಗಳುಂಟು.[3] ಆದ್ದರಿಂದ, ನಂಜುಂಡನ ಈ ಹೇಳಿಕೆಗೆ ಆಧಾರವಿಲ್ಲದಿಲ್ಲ.

ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿಗಳು ಪ್ರತಾಪರುದ್ರನಿಗೆ ಯಪ್ಪತ್ತುರಾಯ(ಯಪ್ಪತ್ತುರಾಜ) ಎಂಬ ಮಗನಿದ್ದನೆಂದೂ, ಕುಮಾರರಾಮನು ಈತನೊಂದಿಗೆ ಯುದ್ಧಮಾಡಿ ಈತನನ್ನು ಕೈಸೆರೆ ಹಿಡಿದನೆಂದೂ ವರ್ಣಿಸಿರುತ್ತಾರೆ. ಇತಿಹಾಸಕಾರರು ಪ್ರತಾಪರುದ್ರನಿಗೆ ಸಂತತಿಯಿಲ್ಲವೆಂದೂ ಆತನ ಅನಂತರ ಕಾಕತೀಯ ವಂಶವು ಕೊನೆಗಂಡಿತೆಂದೂ ಹೇಳಿರುತ್ತಾರೆ.[4] ಆದರೆ, "ಪ್ರತಾಪರುದ್ರಚರಿತಮು" ಎಂಬ ಗ್ರಂಥದಲ್ಲಿ ರಾಜನಿಗೆ ವೀರಭದ್ರ ಮತ್ತು ವಿರೂಪಾಕ್ಷ ಎಂಬ ಇಬ್ಬರು ಮಕ್ಕಳಿದ್ದರೆಂಬುದಾಗಿ ತಿಳಿಸಲಾಗಿದೆ.[5] ಬಹುಶಃ, ಕನ್ನಡ ಕವಿಗಳು ಇಲ್ಲಿ ಪ್ರತೀತಿಯನ್ನೇ ಅವಲಂಬಿಸಿರುವಂತೆ ತೋರುತ್ತದೆ.

**ಕರಿಪತಿ ಕಪಿಲೇಶ್ವರನ ಯುದ್ಧ :** ಕಂಪಿಲ ಮತ್ತು ಕುಮಾರರಾಮರ ಪ್ರಾಬಲ್ಯವನ್ನು ಸಹಿಸಲಾರದೆ ಕರಿಪತಿ ಕಪಿಲೇಶ್ವರನು ತನ್ನ ಷೋಡಶ ಪಾತ್ರೆಗಳೊಂದಿಗೆ ಕುಮ್ಮಟದ ಮೇಲೆ ದಂಡೆತ್ತಿ ಬಂದ ಪ್ರಸಂಗ ನಂಜುಂಡನಲ್ಲಿ ಮಾತ್ರವೇ ಬರುತ್ತದೆ. ಒರಿಸ್ಸಾದೇಶದಲ್ಲಿ ಕಪಿಲೇಂದ್ರ ದೇವನೆಂಬುವನು ಕ್ರಿ. ಶ. ೧೪೫೨ ರಿಂದ ೧೪೭೯ ರವರೆಗೆ ಆಳಿದನೆಂಬುದಾಗಿ ಒಬ್ಬ ವಿದ್ವಾಂಸರು ಅಭಿಪ್ರಾಯಪಟ್ಟರೆ[6] ಮತ್ತೊಬ್ಬರು ಕ್ರಿ.ಶ. ೧೪೩೫ರಿಂದ ೧೪೬೬ರವರೆಗೆ ರಾಜ್ಯವಾಳಿದಂತೆ ತಿಳಿಸುತ್ತಾರೆ.[7] ಶ್ರೀ. ಎ. ಕೆ. ಮಜುಂದಾರರು ಈತನ

---

1. ಹೀಗೆ ಈ ಇಬ್ಬರು ರಾಜರಿಗೂ ಪರಸ್ಪರ ವೈರವೇ ಎದ್ದು ಕಾಣುತ್ತಿರುವಾಗ, ಶ್ರೀ. ಎಸ್. ಜಿ. ನರಸಿಂಹಚಾರ್ ಅವರು, ಕುಮಾರರಾಮನು "ಓರುಗಲ್ಲು ರಾಜಧಾನಿಯಲ್ಲಿ ಆಗ ಆಳುತ್ತಿದ್ದ ಪ್ರತಾಪರುದ್ರದೇವನ ಪಡೆಯಲ್ಲಿ ಸೈನ್ಯಾಧಿಕಾರಿಯಾಗಿದ್ದುಕೊಂಡು ದೊರೆಯ ಪ್ರೀತಿಗೆ ಪಾತ್ರನಾಗಿ ರಾಜ್ಯವನ್ನು ನಾಲ್ಕು ಕಡೆಯಲ್ಲಿಯೂ ಹೆಚ್ಚಿಸುತ್ತಿದ್ದನು" (ಪದ್ಯಸಾರ, ಭಾಗ ೧, ಪು. ೧೪, ೧೯೦೩) ಎಂದು ಯಾವ ಆಧಾರದ ಮೇಲೆ ಹೇಳಿದ್ದಾರೆಯೋ ತಿಳಿಯದು.

2. The Kakatiyas of Warngal, P. 94 ; FSVH, vol. i, P. 16.
3. Ibid, P. 26 ; 108.
4. Ibid, P. 22 B.
5. Ibid, P. 32 A.
6. A History of Orissa, by W. W. Hunter, Vol. 1, p. 201.
7. The History of Orissa, by Sri. H. Mahtab, pp. 83-86 .

ಕಾಲವನ್ನು ಕ್ರಿ. ಶ. ೧೪೩೪-೬೭ ಎಂಬುದಾಗಿ ನಿರ್ದೇಶಿಸಿರುತ್ತಾರೆ.[1] ಹೇಗಾದರೂ ಸರಿಯೆ, ಈತನು ಕಂಪಿಲನ ಸಮಕಾಲೀನನಲ್ಲವಾದ್ದರಿಂದ, ಡಾ|| ಎಂ. ವೆಂಕಟರಮಣಯ್ಯ ಅವರು ಅಭಿಪ್ರಾಯಪಡುವಂತೆ[2] ಈ ಘಟನೆಯೇ ಅಸಂಭವವೆಂದು ವ್ಯಕ್ತವಾಗುತ್ತದೆ. ಶ್ರೀ. ಎಂ.ಎಚ್. ರಾಮಶರ್ಮರು, ಸ್ಟರ್ಲಿಂಗ್ ವಿರಚಿತ ರಾಜವಂಶಾವಳಿಯನ್ನು ಅವಲಂಬಿಸಿ, ಕ್ರಿ. ಶ. ೧೩೯೯-೧೩೩೦ ರವರೆಗೆ ಆಳಿದ ಕೇಸರಿ ಕಪಿಲ ನರಸಿಂಗನೇ ಈತನಿರಬಹುದೆಂದು ಹೇಳುವರು.[3] ಆದರೆ, ಇತ್ತೀಚಿನ ಸಂಶೋಧನೆಯು ನೇರೆಗೆ, ಕುಮ್ಮಟವು ಕ್ರಿ.ಶ. ೧೩೨೭ರ ವೇಳೆಗೇ ಪತನವಾಯಿತೆಂದು ತಿಳಿದುಬರುವುದರಿಂದ ಈ ಊಹೆಯೂ ಅಸಂಭವವಾಗುತ್ತದೆ. ಒಟ್ಟಿನಲ್ಲಿ ಈ ಯುದ್ಧವು ಚಾರಿತ್ರಿಕ ದೃಷ್ಟಿಯಿಂದ ಅಸಾಧುವೆಂದೂ, ನಂಜುಂಡನು ಸಮಕಾಲೀನವಾದ ಘಟನೆಯೊಂದನ್ನು ಗಮನಿಸಿ ಈ ಅಪ್ರಕೃತ ಸಂದರ್ಭವನ್ನು ತಂದು ಸೇರಿಸಿರಬಹುದೆಂದೂ ಈ ವೊದಲೇ ಸೂಚಿಸಿರುತ್ತದೆ (ಪು. ೨೩).

**ಹುಳಿಯೂರಿನ ಯುದ್ಧ :** ನಂಜುಂಡನೂ ಪಾಂಚಾಳ ಗಂಗನೂ ಪ್ರಸ್ತಾವಿಸಿರುವ ಈ ಯುದ್ಧವನ್ನು ಕುರಿತು ದೊರೆಯುವ ಐತಿಹಾಸಿಕ ಆಧಾರಗಳು ಅತ್ಯಲ್ಪವಾಗಿರುವುವಲ್ಲದೆ ಅವೂ ಬಲವಾಗಿಲ್ಲ. ಹಿರಿಯೂರಿನ ಯರಬಳ್ಳಿ ಶಾಸನದಲ್ಲಿ "ಕಂಬಲದೇವನು ಹುಳಿಎಱನಿಱಿದು ಹೋಹಲಿ" ಎಂಬ ವಾಕ್ಯವಿದೆ[4]. ಈ ಶಾಸನದಲ್ಲಿ ಶಕವರ್ಷವನ್ನು ಹೇಳದೆ "ಕ್ರೋಧನ ಸಂವತ್ಸರದ ಭಾದ್ರಪದ ಶು. ೧೦ ಆ[ದಿತ್ಯವಾರ]ದಂದು" ಎಂದು ಮಾತ್ರ ಹೇಳಿರುವುದರಿಂದ ವರ್ಷದ ವಿಷಯದಲ್ಲಿ ಭಿನ್ನಾಭಿಪ್ರಾಯವುಂಟಾಗಿದೆ. ಮಾನ್ಯ ಬಿ. ಎಲ್. ರೈಸ್ ಅವರು ಕ್ರಿ. ಶ. ೧೨೦೫ ಎಂದೂ[5] ಶ್ರೀ. ಹುಲ್ಲೂರು ಶ್ರೀನಿವಾಸಜೋಯಿಸರು ಕ್ರಿ. ಶ. ೧೩೨೫ ಎಂದೂ[6] ಸೂಚಿಸಿರುತ್ತಾರೆ. ಈ ಎರಡು ವರ್ಷಗಳೂ ಕ್ರೋಧನ ಸಂವತ್ಸರವೇ ಆದರೂ ಶಾಸನದಲ್ಲಿ ಉಕ್ತವಾಗಿರುವ ತಿಥಿಗೂ, ವಾರಕ್ಕೂ ಸರಿಹೊಂದಿಬರುವುದಿಲ್ಲವಾದ್ದರಿಂದ ವಿಷಯ ಸಂದಿಗ್ಧವಾಗಿಯೇ ಉಳಿಯುತ್ತದೆ.

ಹುಳಿಯೂರಿನ ಅಧಿಪತಿಯನ್ನು ಪಾಂಚಾಳಗಂಗನು ಮಾರಭೂಪಾಲನೆಂದು ಕರೆದಿರುವನಷ್ಟೆ. ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ನಂದನ ಹೊಸೂರು ತಾಮ್ರಶಾಸನದಲ್ಲಿ ಉಕ್ತವಾಗಿರುವ "ಹುಳಿಯಱ ಮಾರಣಗಉಡ"[7] ಎಂಬಾತನೇ ಈತನಿರಬೇಕೆಂದು ಭಾವಿಸಿರುತ್ತಾರೆ.[8] ಇದು ಕೂಟಶಾಸನವೆಂದು ತಿರಸ್ಕೃತವಾಗಿರುವುದಲ್ಲದೆ, ಕಾಲವೂ ಸಹ ಅನಿಶ್ಚಯವಾಗಿ ಪರಿಣಮಿಸಿದೆ. "ಶಾಲಿವಾಹನ ಶಕವರುಷ ೧೨೩೨ನೆಯ ಅಂಗಿರಸ ಸಂವತ್ಸರದ ವೈಶಾಖ ಶುದ್ಧ ೫ ಸೋಮವಾರ" ಎಂದು ಹೇಳಿದ್ದರೂ ಅದು "ಸಾಧಾರಣ" ಸಂವತ್ಸರವೋ, ಇಲ್ಲವೇ "ಶಕವರ್ಷ ೧೨೫೪"ನೆಯದೋ ಆಗಬೇಕಾಗುತ್ತದೆಯೆಂದು ಶಾಸನದ ವರದಿಕಾರರು ಹೇಳಿರುತ್ತಾರೆ.[9] ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಈ ಶಾಸನದ ಕಾಲ ಶಕವರ್ಷ ೧೨೫೪ ಇರಬೇಕೆಂದು ಗ್ರಹಿಸಿ, ಇಲ್ಲಿ ಉಕ್ತವಾಗಿರುವ ಮಾರಣಗಉಡನು ಮುಮ್ಮಡಿ ವೀರಬಲ್ಲಾಳನ ಸಮಕಾಲೀನನೆಂದು ಭಾವಿಸಿ, ಈತನೇ ಕಾವ್ಯದಲ್ಲಿ ಉಕ್ತನಾಗಿರುವ ಮಾರಭೂಪಾಲನೆಂದು ನಿರ್ಣಯಿಸಿರುತ್ತಾರೆ.

---

1. The Delhi Sultanate, Orissa, p. 365-367 ; p. 836.
2. ಕುಮಾರರಾಮುನಿ ಕಥ, ಉಪೋದ್ಘಾತಮು, ಪು. xxv.
3. QJMS, Vol. xx, p. 96, F.N.
4. EC, XI, Hiriyur, 16.
5. EC, XI, Hiriyur 16, English Translation.
6. ವಿಚಾರವಾಹಿನಿ, ಸಂಪುಟ, ii, ಪು. ೩೩೨.
7. MAR, 1931, No. 1, *l*. 88
8. ವಿಚಾರವಾಹಿನಿ, ಸಂ. ii, ಪು. ೩೨೭-೩೩೨.
9. MAR, 1931, p. 98.

ಕ್ರಿ.ಶ. ೧೩೨೫ರಲ್ಲಿ (೧೨೪೭ನೆಯ ಕ್ರೋಧನ ಸಂವತ್ಸರದ ಶ್ರಾವಣ ಶುದ್ಧ ಬೃ[ಹಸ್ಪತಿವಾರ]) ಕಂಪಿಲ ದೇವನಿಗೂ ಬಲ್ಲಾಳನ ಕಡೆಯವರಿಗೂ ನಡೆದ ಯುದ್ಧವನ್ನು ಕುರಿತು ತಿಪಟೂರಿನ ಕಡಸೂರು ಗ್ರಾಮದಲ್ಲಿ ಒಂದು ಶಾಸನವಿದೆ.[1] ಈ ಶಾಸನ ತುಂಬ ಅಸ್ಪಷ್ಟವಾಗಿರುವುದರಿಂದ ಕಾಳಗದ ಫಲಿತಾಂಶದ ಬಗ್ಗೆ ಸಂದೇಹ ವ್ಯಂಟಾಗಿದೆ. ಡಾ|| ಬಿ. ಎ. ಸಾಲೆತೊರೆ ಅವರು, ಈ ಕಾಳಗದಲ್ಲಿ ಕಂಪಿಲನು ಮಡಿದನೆಂದು ಅಭಿಪ್ರಾಯ ಪಡುತ್ತಾರೆ.[2] ಬಿ. ಎಲ್. ರೈಸ್ ಅವರೂ ಹಾಗೆಯೇ ಅನುವಾದ ಮಾಡಿರುತ್ತಾರೆ.[3] ಆದರೆ, ಕಂಪಿಲನು ಕುಮ್ಮಟದ ಕಾಳಗದಲ್ಲಿ ಮುಸಲ್ಮಾನರೊಂದಿಗೆ ಹೋರಾಡಿ ಸತ್ತನೆಂದು ಮುಸಲ್ಮಾನ (ಬಾರ್ನಿ, ಇಬ್ಬನ್ ಬಟೂಟ, ಇಸಾಮಿ, ಫೆರಿಸ್ತಾ) ಮತ್ತು ವಿದೇಶೀಯ (ನ್ಯೂನಿಜ್) ಚರಿತ್ರೆಕಾರರು ಚಿತ್ರಿಸಿರುತ್ತಾರೆ. ಪ್ರಕೃತ ಕಾವ್ಯಗಳೂ ಈ ಅಭಿಪ್ರಾಯಕ್ಕೆ ಪೋಷಕವಾಗಿವೆ.[4] ಆದ್ದರಿಂದ ಕಡಸೂರಿನ ಕಾಳಗದಲ್ಲಿ ಕಂಪಿಲನು ಸಾಯದೆ, ಹಾಗೆ ಕಾದಾಡಿ ಹಿಂತಿರುಗುತ್ತಿರುವಾಗ ಹುಳಿಯಾರಿನ ಪ್ರಸಂಗ ನಡೆದಿದ್ದರೂ ನಡೆದಿರಬಹುದು. (ಮೇಲೆ ಹೇಳಿರುವ ಎರಡು ಶಾಸನಗಳೂ ಒಂದೇ ಕ್ರೋಧನ ವರ್ಷಕ್ಕೆ ಸೇರಿದುವುಗಳೆಂದು ಭಾವಿಸಿದರೆ, ಅವುಗಳಲ್ಲಿ ಉಕ್ತವಾಗಿರುವ ಘಟನೆಗಳಿಗೆ ಒಂದು ತಿಂಗಳ ಅಂತರವಿರುವುದು ಕಂಡುಬರುತ್ತದೆ.)

ಈ ಯುದ್ಧ ಜಾಯಿಲಗಳ ಸಲುವಾಗಿ ನಡೆಯಿತೆಂದು ನಂಜುಂಡನು ಹೇಳಿದ್ದರೆ, ಮಾರಭೂಪಾಲನ ಅಸೂಯೆಯೇ ನಿಮಿತ್ತವಾಯಿತೆಂದು ಪಾಂಚಾಳ ಗಂಗನು ತಿಳಿಸುತ್ತಾನೆ. ಐತಿಹಾಸಿಕ ದೃಷ್ಟಿಯಿಂದ ಹೇಳುವುದಾದರೆ, ಹುಳಿಯಾರಿನ ಒಡೆಯನು ಹೊಯ್ಸಳನ ಸಾಮಂತನಾಗಿದ್ದುದೇ ಕಲಹಕ್ಕೆ ಸಾಕಾಗುತ್ತದೆ.

ನಂಜುಂಡನ ಪ್ರತಿಗಳಲ್ಲಿ "ಹುಳಿಹೇರು." "ಹುಳಿಯೆಱ" ಎಂಬುದಾಗಿ ಈ ಸ್ಥಳದ ಹೆಸರನ್ನು ನಿರ್ದೇಶಿಸಿದೆ. ಶಾಸನಗಳಲ್ಲಿ "ಹುಳಿಯಱ"[5] "ಹುಳಿಯೆಱ"[6] "ಹುಳಿಎಱ"[7] ಎಂಬ ರೂಪಗಳು ಕಂಡು ಬರುತ್ತವೆ.

**ಗುತ್ತಿಯ ಕಾಳಗ:** ಈ ಪ್ರಸಂಗವನ್ನು ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿಗಳು ನಿರೂಪಿಸಿರುತ್ತಾರೆ. ಗಂಗನಲ್ಲಿ ರಾಜನ ಹೆಸರು ಜಗತಾಪಿ ಎಂದೂ ಮಹಲಿಂಗಸ್ವಾಮಿಯಲ್ಲಿ ಕಸ್ತೂರಿ ಚಾಮಯ್ಯ ಎಂದೂ ಉಕ್ತವಾಗಿದೆ. ನಂಜುಂಡನು ಈ ಸಂದರ್ಭವನ್ನು ಬಿಟ್ಟಿದ್ದರೂ ಶೂಲದ ಹಬ್ಬಕ್ಕೆ ಬಂದಿದ್ದ ಪಾಳೆಯಗಾರರಲ್ಲಿ ಗುತ್ತಿಯ ಕಾಚಯ್ಯ ಎಂಬುವನಿದ್ದನೆಂದು ಹೇಳಿರುತ್ತಾನೆ (xxi, ೮೨). ಜಗತಾಪಿ ಎಂಬುದು ಬಿರುದಾಗಿರಬೇಕೆಂದೂ, ಈತನ ಹೆಸರು ಕಾಚಯ್ಯನೆಂದೂ ಶ್ರೀ. ಎಂ. ಎಚ್. ರಾಮಶರ್ಮರು ಅಭಿಪ್ರಾಯ

---

1. EC, XII Tiptur, 24.
2. VSCV, p. 151.
3. EC XII, Tiptur, 24, Eng. Translation.
4. ಲಕ್ಷ್ಮೇಶ್ವರದ ಶಾಸನವೊಂದರಲ್ಲಿ (BK, 21 of 1935-36, EI, XXIII, p. 184) ಕಂಪಿಲ ಮತ್ತು ಸಿಡಿಲ ಬೊಮ್ಮರ ಮರಣಕ್ಕಾಗಿ ಪುರಜನರು ಮರುಗಿದರೆಂದೂ ಹೇಳಿರುವುದಲ್ಲದೆ, "ಡಿಳ್ಳಿ"ಯ ಹೆಸರನ್ನೂ ಸೂಚಿಸಿರುತ್ತದೆ. ಲಿಪಿಯ ಲಕ್ಷಣಕ್ಕನುಗುಣವಾಗಿ ಇದು ಸುಮಾರು ೧೪ನೆಯ ಶತಮಾನಕ್ಕೆ ಸೇರಿದುದಾಗಿ ತಿಳಿದು ಬರುವುದರಿಂದ ಇದು ಕ್ರಿ. ಶ. ೧೩೨೭ರಲ್ಲಿ ನಡೆದ ಕಂಪಿಲನ ಕಡೆಯ ಕಾಳಗವನ್ನೇ ಕುರಿತುದಾಗಿರಬೇಕೆಂದು ಶ್ರೀ. ಆರ್. ಎಸ್. ಪಂಚಮುಖಿ ಅವರು ಅಭಿಪ್ರಾಯಪಡುತ್ತಾರೆ (EI. XXIII, pp. 184-185). ಇತ್ತೀಚೆಗೆ ಈ ಶಾಸನದ ಪಾಠ ಪ್ರಕಟವಾಗಿದೆ (SII, Vol. XX, 1965, pp. 331-32). ಇದರಲ್ಲಿ ಕೊಟ್ಟಿರುವ ವಿವರಗಳು ಅಪೂರ್ಣವಾಗಿರುವುದಲ್ಲದೆ, ಶಾಸನದ ವರದಿಕಾರರು ಇದು ಸುಮಾರು ೧೨ನೆಯ ಶತಮಾನದ ಲಿಪಿಯಲ್ಲಿ ರಚಿತವಾಗಿದೆಯೆಂದು ತಿಳಿಸಿರುತ್ತಾರೆ. ಆದ್ದರಿಂದ ಈ ಶಾಸನವನ್ನು ಅವಲಂಬಿಸಿ ಏನನ್ನೂ ಹೇಳುವಂತಿಲ್ಲ.
5. MAR, 1931, No. 1, *l*. 88 ; EC, XI, Hiriyur, 87, lines, 8, 12, 29.
6. MAR, 1931, No. 1, *l*. 90.
7. EC, XI, Hiriyur, 16, *l*. 8 ; EC, XII, Chicknayakana halli, 4, *l*. 13.

ಪಡುತ್ತಾರೆ.[1] ಇದೇ ಲೇಖಕರು, ಹಿಂದೆ, ಪಾಂಚಾಳ ಗಂಗನ ಕೃತಿಯನ್ನು ಪರಿಚಯಮಾಡಿಕೊಡುತ್ತ ಕಂಪಿಲನಿಗೆ ಸಮಕಾಲೀನನಾಗಿ ಗುತ್ತಿಯಲ್ಲಿ ಜಗತಾಪಿ ಎಂಬ ಯಾವ ದೊರೆಯೂ ಇದ್ದಂತೆ ಕಂಡುಬರುವುದಿಲ್ಲವೆಂದೂ ಕ್ರಿ. ಶ. ೧೪೯೭ರ ವೇಳೆಗೆ ಶಾಸನದಲ್ಲಿ ಈ ಹೆಸರಿನ ಒಬ್ಬ ರಾಜನ ಪರಿಚಯವಾಗುವುದೆಂದೂ ಹೇಳಿದ್ದರು.[2] ಡಾ|| ಎನ್. ವೆಂಕಟರಮಣಯ್ಯನವರು ಗುತ್ತಿಯಲ್ಲಿ ತೆಲುಗು ಚೋಳರ ಪ್ರಮುಖನಾದ ಜಗತಾಪಿ ಗಾಂಗೇಯದೇವನೆಂಬುವನು ಈ ಕಾಲದಲ್ಲಿ ಆಳುತ್ತಿದ್ದನೆಂದೂ, ರಾಮದೇವರಾಯನ ಮರಣಾನಂತರ, ಈತನು ಮುಮ್ಮಡಿ ಸಿಂಗನೊಂದಿಗೆ ಕೂಡಿ ರಾಯದುರ್ಗದ ಮಲ್ಲಿದೇವನನ್ನು ಸಂಹರಿಸಿದನೆಂದೂ ತಿಳಿಸುತ್ತಾರೆ.[3] ಈ ಸಂಗತಿ ಗಂಗನ ಕೆಲವು ಪ್ರತಿಗಳಲ್ಲಿ (ಗಂ. ೫ ; ಡಿ. ೯೧೧) ಬರುವ ರಾಯದುರ್ಗದ ಮಲ್ಲಿದೇವನ ಸಂಹಾರದ ಘಟನೆಯನ್ನೇ ಹೋಲುವುದರಿಂದ, ಆ ಕಾರ್ಯದಲ್ಲಿ ಜಗತಾಪಿ ಗಾಂಗೇಯದೇವನು ಮುಮ್ಮಡಿ ಸಿಂಗನಿಗೆ ಬೆಂಬಲವಾಗಿದ್ದಿರಬಹುದು. ಕಾವ್ಯದಲ್ಲಿ ಈ ಸ್ನೇಹವನ್ನು ಸೂಚಿಸುವುದಕ್ಕೆ ಬದಲಾಗಿ, ಪೊಗದಿಯ ವಿಷಯದಲ್ಲಿ ಕಂಪಿಲನಿಗೂ ಜಗತಾಪಿಗೂ ಯುದ್ಧ ನಡೆಯಿತೆಂದು ಬರುತ್ತದೆ (ಗಂ. ೨, ಗಂ. ೩, ಗಂ. ೪). ಆದ್ದರಿಂದ ಮುಮ್ಮಡಿ ಸಿಂಗನ ಕಾಲದಲ್ಲಿದ್ದ ಸ್ನೇಹವು ಕಂಪಿಲನ ಕಾಲಕ್ಕೆ ಇಳಿಮುಖವಾಗಿದ್ದಿರಬೇಕು. ಕುಮಾರರಾಮನ ನೆರವಿನಿಂದ ಪ್ರಾಬಲ್ಯಕ್ಕೆ ಬರುತ್ತಿದ್ದ ಕಂಪಿಲನನ್ನು ಕಂಡು ಜಗತಾಪಿಗೆ ಅಸೂಯೆಯಾಗಿರಬೇಕು. ಗಂಗನ ಒಂದು ಪ್ರತಿಯಲ್ಲಿ, ಈತನು ಸುಲ್ತಾನರ ಪಕ್ಷವನ್ನು ವಹಿಸಿ, ಕಂಪಿಲನ ಮೇಲೆ ದಂಡೆತ್ತಿ ಬಂದನೆಂದೂ, ಕಡೆಗೆ ಸೋಲಾಗಲು, ಕುಮಾರರಾಮನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿ ಸಂಧಿಮಾಡಿಕೊಂಡನೆಂದೂ ಬರುತ್ತದೆ (ಗಂ. ೪). ಮುಖ್ಯವಾಗಿ, ಗುತ್ತಿಯ ಜಗತಾಪಿ, ಮುಮ್ಮಡಿಸಿಂಗ ಮತ್ತು ಕಂಪಿಲರಾಯರ ಸಮಕಾಲೀನನಾಗಿದ್ದಿರಬೇಕೆಂದು ತೋರುತ್ತದೆ.

**ಬಾದೂರನ ಪಲಾಯನ:** ಕುಮಾರರಾಮನ ಕಥೆಯಲ್ಲಿ ಬರುವ ಬಾದೂರನ ಪಲಾಯನ ಐತಿಹಾಸಿಕ ದೃಷ್ಟಿಯಿಂದ ಅತ್ಯಂತ ಮಹತ್ವವಾದುದು. ಕುಮ್ಮಟದುರ್ಗದ ಪತನವಾದ ಕೆಲವು ವರ್ಷಗಳಲ್ಲಿಯೇ ಭರತಖಂಡಕ್ಕೆ ಪ್ರವಾಸಿಯಾಗಿ ಬಂದ ಇಬ್ನ್‌ಬಟೂಟನು ಈ ಸಂಗತಿಯನ್ನು ಚಿತ್ರಿಸಿರುತ್ತಾನೆ.[4] ಮಹಮದ್‌ಬಿನ್‌ತೊಗಲಕನು ಸಿಂಹಾಸನವನ್ನೇರಲು, ಪ್ರಾಂತಾಧಿಕಾರಿಯೂ, ಆತನ ಬಂಧುವೂ ಆದ ಬಹಾಉದ್ದೀನ್ ಘುಸ್ತಾಫ್ ಎಂಬಾತನು ಅಸಹನೆಯಿಂದ ದಂಗೆಯೆದ್ದನು. ಸುಲ್ತಾನನು ಮಲ್ಲಿಕ್ ಮಜೀರ್ ಮತ್ತು ಖ್ವಾಜಾಜಹಾನ್ ಎಂಬುವರ ನೇತೃತ್ವದಲ್ಲಿ ಆತನ ಮೇಲೆ ಸೇನೆಯನ್ನು ಕೊಟ್ಟು ಕಳುಹಿಸಿದನು. ಪರಾಜಿತನಾದ ಬಹಾಉದ್ದೀನನು ಕಂಪಿಲರಾಯನನ್ನು ಮರೆಹೊಕ್ಕನು. ಮುಸಲ್ಮಾನರು ಅಲ್ಲಿಯೂ ಆತನನ್ನು ಬೆನ್ನಟ್ಟಿದರು. ಹಿಂದೂರಾಜನು ಶತ್ರುಗಳನ್ನು ಪ್ರತಿಭಟಿಸಿ, ಹತಾಶನಾಗಲು, ತನ್ನನ್ನು ಮರೆಹೊಕ್ಕಿ ಬಂದವನನ್ನು ಇನ್ನೊಬ್ಬನಲ್ಲಿಗೆ ಕಳುಹಿಸಿ, ತಾನು ಕಟ್ಟಕಡೆಯತನಕ ಯುದ್ಧಮಾಡಿ ಹತನಾದನು. ಮಹಮ್ಮದೀಯ ಸೇನೆ ಬಹಾಉದ್ದೀನನನ್ನು ಅಲ್ಲಿಗೂ ಬಿಡಲಿಲ್ಲ. ಬಹಾಉದ್ದೀನನಿಗೆ ಆಶ್ರಯವಿತ್ತಿದ್ದ ರಾಜನು ನಿರ್ವಾಹವಿಲ್ಲದೆ ಆತನನ್ನು ಶತ್ರುಗಳ ವಶಕ್ಕೆ ಒಪ್ಪಿಸಿಕೊಟ್ಟನು. ಬಹಾಉದ್ದೀನನನ್ನು ಚಿತ್ರಹಿಂಸೆ ಪಡಿಸಿ, ಆತನ ಮಾಂಸವನ್ನು ಆತನ ಹೆಂಡತಿ ಮಕ್ಕಳಿಗೆ ಹಂಚಿದರು.—ಈ ವಿವರಣೆಯಲ್ಲಿ ಉಕ್ತನಾಗಿರುವ ಬಹಾಉದ್ದೀನನೇ ಕುಮಾರರಾಮನ ಕಥೆಯಲ್ಲಿನ ಬಾದೂರಖಾನ.

ಮತ್ತೊಬ್ಬ ಪ್ರಾಚೀನ ಮುಸಲ್ಮಾನ ಇತಿಹಾಸಕಾರನಾದ (ಈತನ ತಾತ ಮಹಮ್ಮದ್ ಬಿನ್ ತೊಗಲಕ್ಕನ ಸಮಕಾಲೀನ) ಇಸಾಮಿಯ ಬರವಣಿಗೆಯಲ್ಲಿಯೂ ಇದೇ ಅಂಶಗಳು ಉಕ್ತವಾಗಿರುವುವಲ್ಲದೆ

---

1. ರಣಧೀರ ರಾಮನಾಥ, ಪು. ೧೩.
2. Q JMS, Supplement, Oct. 1929, P. 3.
3. EMESI, P. 74.
4. Foreign Notices of South India, pp. 216–217.

ಕೆಲವು ವಿಷಯಗಳು ಮತ್ತಷ್ಟು ಖಚಿತವಾಗುತ್ತವೆ. ಈತನು ಕುಮ್ಮಟದುರ್ಗದ ಹೆಸರನ್ನು ಸ್ಪಷ್ಟವಾಗಿ ಹೇಳಿರುತ್ತಾನೆ. ಪರಿಸ್ಥಿತಿ ವಿಷಮವಾಗಲು ಕಂಪಿಲನು ಮೇಲುದುರ್ಗದಿಂದ ಇಳಿದು ಬಂದು, ಬಹಾಉದ್ದೀನನನ್ನು ಆತನ ಸಂಸಾರದೊಂದಿಗೆ ಬೇರೆಯ ಕಡೆಗೆ ಕಳುಹಿಸಿದನೆಂದೂ ತಿಳಿಸಿರುತ್ತಾನೆ. ಅನತಿಕಾಲದಲ್ಲಿಯೇ ಮುಸಲ್ಮಾನರು ಮೂರು ಬಾರಿ ದಂಡೆತ್ತಿ ಬಂದರೆಂದು ಹೇಳಿರುವುದೂ, ಕಂಪಿಲನ ತಲೆಯನ್ನು ಸೇನಾಧಿಪತಿ ಸುಲ್ತಾನನ ಬಳಿಗೆ ಕಳುಹಿಸುವುದೂ ಗಮನಾರ್ಹವಾದ ಸಂಗತಿಗಳು.[1]

ಮಹಮ್ಮದ್ ಬಿನ್ ತೊಗಲಕ್ಕನ ಸಮಕಾಲೀನನಾದ ಬಾರ್ನಿ, ಸುಲ್ತಾನನು ಗೆದ್ದ ರಾಜ್ಯಗಳಲ್ಲಿ ಕಂಪಿಲಿಯ ಹೆಸರನ್ನೂ ಹೇಳಿರುತ್ತಾನೆ.[2] ವಿಜಯನಗರಕ್ಕೆ ಪ್ರವಾಸಿಯಾಗಿ ಬಂದಿದ್ದ ನ್ಯೂನಿಜನು, ಮಹಮ್ಮದೀಯರು ಕಂಪಿಲನ ಮೇಲೆ ನಡೆಸಿದ ಈ ದಾಳಿಯನ್ನು ಚಿತ್ರಿಸಿರುತ್ತಾನೆ.[3] ಫೆರಿಸ್ತಾ ಎಂಬಾತನೂ ಇದರ ವಿವರಗಳನ್ನು ಕೊಟ್ಟಿರುತ್ತಾನೆ.[4] ಈತನು ಎಲ್ಲರಿಗಿಂತಲೂ ಇತ್ತೀಚಿನವನಾದ್ದರಿಂದ ಈತನ ಬರವಣಿಗೆಯಲ್ಲಿ ಕೆಲವು ಅಸಂಗತಿಗಳೂ ಇರುವುದುಂಟು.

ಕುಮ್ಮಟದುರ್ಗದ ಪತನ ಎಂದು ನಡೆಯಿತೆಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಶ್ರೀ. ಎಸ್. ವಿ. ವೆಂಕಟೇಶ್ವರ ಐಯರ್ ಅವರು ಕ್ರಿ. ಶ. ೧೩೩೩ ಎಂದೂ,[5] ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಕ್ರಿ.ಶ. ೧೩೩೪ ಎಂದೂ,[6] ಡಾ|| ಎನ್. ವೆಂಕಟರಮಣಯ್ಯ ಅವರು ಕ್ರಿ.ಶ. ೧೩೨೬ ಎಂದೂ[7] ಅಭಿಪ್ರಾಯಪಡುತ್ತಾರೆ. ಶ್ರೀ. ಎಸ್.ವಿ. ವೆಂಕಟೇಶ್ವರ ಐಯರ್ ಅವರು, ಬಹಾಉದ್ದೀನನ ಮರಣದಂಡನೆ ಕ್ರಿ. ಶ. ೧೩೩೩ ರಲ್ಲಿ ಆಗಿರಬೇಕೆಂದೂ, ಆ ಕಾಲಕ್ಕೆ ಸ್ವಲ್ಪ ಮುಂಚಿತವಾಗಿ ಕಂಪಿಲರಾಯನ ಮರಣ ಸಂಭವಿಸಿರಬೇಕೆಂದೂ ಸೂಚಿಸಿರುತ್ತಾರೆ. ಶ್ರೀ. ಹುಲ್ಲೂರು ಶ್ರೀನಿವಾಸಜೋಯಿಸರು ಶ್ರೀ. ಎಸ್. ವಿ. ವೆಂಕಟೇಶ್ವರ ಐಯರ್ ಅವರ ಈ ಸಲಹೆಯ ಜೊತೆಗೆ, ನ್ಯೂನಿಜನು ಮಹಮ್ಮದೀಯರಿಗೂ ಕಂಪಿಲನಿಗೂ ೧೨ ವರ್ಷಗಳಿಂದ ವೈಮನಸ್ಯವಿದ್ದಿತೆಂದು ಹೇಳುವುದನ್ನು ಅವಲಂಬಿಸಿ, ಓರುಗಲ್ಲಿನ ಪತನಾನಂತರ, ಎಂದರೆ ಕ್ರಿ.ಶ. ೧೩೨೨ ರಿಂದ ಈಚೆಗೆ ಕ್ರಿ.ಶ. ೧೩೩೪ ರ ವೇಳೆಗೆ ಈ ಘಟನೆ ನಡೆದಿರಬೇಕೆಂದು ಅಭಿಪ್ರಾಯಪಡುತ್ತಾರೆ. ಮೈಸೂರು ಗೆಜೆಟಿಯರಿನ ಸಂಪಾದಕರು, ಇದು ವಿಜಯನಗರದ ಸ್ಥಾಪನೆಗೆ ಪೂರ್ವಭಾವಿಯಾಗಿ ನಡೆದ ಘಟನೆಯಾದ್ದರಿಂದ ಕ್ರಿ. ಶ. ೧೩೩೪ ರಲ್ಲಿಯೇ ನಡೆದಿರಬಹುದೆಂದು ಭಾವಿಸಿರುತ್ತಾರೆ.[8] ಮಾನ್ಯ ಆರ್. ಸಿವೆಲ್ ಅವರೂ ಹೀಗೆಯೇ ಊಹಿಸಿರುತ್ತಾರೆ.[9] ಡಾ|| ಎನ್. ವೆಂಕಟರಮಣಯ್ಯನವರು, ಮಹಮ್ಮದ್ ಬಿನ್ ತೊಗಲಕ್ಕನು ಪಟ್ಟಕ್ಕೆ ಬಂದ ಬಳಿಕ ಬಹಾಉದ್ದೀನನು ದಂಗೆಯೆದ್ದು ಕಂಪಿಲನ ಆಶ್ರಯವನ್ನು ಕೋರಿಬಂದುದೇ ಈ ಘಟನೆಗೆ ಮುಖ್ಯ ಕಾರಣವಾದುದರಿಂದ, ಇದು ಕ್ರಿ. ಶ. ೧೩೨೬ ರಲ್ಲಿಯೇ ನಡೆದಿರಬೇಕೆಂದು ಎಣಿಸುತ್ತಾರೆ. ವಾಸ್ತವವಾಗಿ ಇದೇ ಸಾಧುವೆನ್ನಿಸುತ್ತದೆ. ಎಲ್ಲಕ್ಕಿಂತಲೂ, ಈ ಸಂದರ್ಭ ಅತ್ಯಂತ ಮುಂಚಿತವೂ ನಿಕಟ ಸಂಪರ್ಕವುಳ್ಳದೂ ಆಗಿರುವುದರಿಂದ ಹೀಗೆ ಹೇಳಲು ಅವಕಾಶವಿದೆ. ಇದಲ್ಲದೆ ಮಲ್ಲಿಕ್‌ಕಾಫರನು ಕ್ರಿ. ಶ. ೧೩೧೪ ರಲ್ಲಿ ದೇವಗಿರಿಯನ್ನು ಸ್ವಾಧೀನಪಡಿಸಿಕೊಂಡ ಬಳಿಕ, ಒಂದು ಬಾರಿ ಕುಮ್ಮಟಕ್ಕೂ ಮುತ್ತಿಗೆ

1. FSVH, Vol. iii, PP. 2-4.
2. The History of India, Elliot and Dowson, 2nd Edn. 1953, P. 160.
3. A Forgotten Empire, P. 281-83, Indian Edition, June 1962.
4. History of the Raise of the Mahomedan Power in India, Vol. I, PP. 418-419, by John Briggss.
5. Mysore University Journal, 1923, P. 233.
6. ಗಂಡುಗಲಿ ಕುಮಾರರಾಮು, ೧೯೪೧, ಪು. ३४.
7. FSVH, Vol. i, P. 18.
8. Vol. II, Part III, PP. 1428-29.
9. A Forgotten Empire, P. 16, Indian Edition, June 1962.

ಹಾಕಿದ್ದನೆಂದು ಇಸಾಮಿಯು ಬರಹದ ಮೂಲಕ ವಿದಿತವಾಗುತ್ತದೆ.[1] ಆದ್ದರಿಂದ, ಅಂದಿನಿಂದ ೧೨ ವರ್ಷಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೂ ಈ ಘಟನೆ ಕ್ರಿ. ಶ. ೧೩೨೬ ರ ವೇಳೆಗೆ ಆಗಿರುವುದು ಅಸಂಭವವೇನೂ ಅಲ್ಲ. ಆದ್ದರಿಂದ ಬಹುಮಟ್ಟಿಗೆ ಈ ಘಟನೆ ಕ್ರಿ. ಶ. ಸುಮಾರು ೧೩೨೭ ರ ವೇಳೆಗೆ ನಡೆದು ಕೊನೆಗೊಂಡಿರಬಹುದೆಂದು ಭಾವಿಸಬಹುದು.

ಬಾದೂರನ ಪಲಾಯನ ಮತ್ತು ಕುಮ್ಮಟದುರ್ಗದ ಪತನಗಳ ಕಾಲಾವಧಿ ನಿಗದಿಯಾದ ಮೇಲೆ, ಈ ಬಗ್ಗೆ ಇನ್ನೂ ಅನೇಕರ ಆಕ್ಷೇಪಗಳು ತಾವಾಗಿಯೇ ಪರಿಹಾರವಾಗುತ್ತವೆ. ಇಲ್ಲಿ ಬರುವ ಯುದ್ಧವು ಬಹಮನಿ ಸುಲ್ತಾನರ ಕಾಲಕ್ಕೆ ಸೇರಿದುದಾಗಿರಬೇಕೆಂದು ಶ್ರೀ. ರಾಜಪುರೋಹಿತರು ವಾದಿಸಿರುವುದುಂಟು.[2] ಶ್ರೀ. ವೆಂಕಟರಂಗೋ ಕಟ್ಟಿ ಅವರ "ಮುಂಬೈ-ಕರ್ನಾಟಕ ಗೆಜೆಟಿಯರ್" ಎಂಬ ಪುಸ್ತಕದಲ್ಲಿಯೂ ಹೀಗೆಯೇ ಭಾವಿಸಿರುವುದುಂಟು.[3] ಆದರೆ, ಬಹಮನಿ ಸುಲ್ತಾನರ ಆಳ್ವಿಕೆಯೇ ಕ್ರಿ. ಶ. ೧೩೪೭ ರಿಂದ ಮೊದಲಾಗುವುದರಿಂದ ಈ ಘಟನೆಗೂ ಅವರಿಗೂ ಸಂಬಂಧವೇ ಇಲ್ಲ. ನಂಜುಂಡನು ಸುಲ್ತಾನನನ್ನು ಅಲ್ಲಾವುದ್ದೀನ್ ಎಂಬುದಾಗಿ ಐದು ಕಡೆಗಳಲ್ಲಿ ಹೇಳಿರುವುದಲ್ಲದೆ (xvii, ೧೬ ; xviii, ೬೧ ; xxx, ೨೫; xli, ೧೯ ; xliii, ೫೬), ಮಲ್ಲಿಕ್‌ಕಾಫರನ ದಂಡಯಾತ್ರೆಯನ್ನೇ ಮನಸ್ಸಿನಲ್ಲಿಟ್ಟುಕೊಂಡು ನೇಮಿಯ ದಂಡಯಾತ್ರೆಯನ್ನು ಚಿತ್ರಿಸಿರುವಂತಿದೆ. ಬಾದೂರನ ಪಲಾಯನದ ಪ್ರಸಂಗವು ಮಹಮ್ಮದ್‌ಬಿನ್ ತೊಗಲಕ್ಕನ ಕಾಲಕ್ಕೆ ಸೇರಿದುದರಿಂದ ಅಲ್ಲಾವುದ್ದೀನನ ಹೆಸರನ್ನು ಹೇಳುವುದರಲ್ಲಿ ಯಾವ ಔಚಿತ್ಯವೂ ಇಲ್ಲ. ದಕ್ಷಿಣದೇಶದ ಮೇಲೆ ದಾಳಿ ನಡೆಸಿದವರಲ್ಲಿ ಮಲ್ಲಿಕ್‌ಕಾಫರನು ಅಗ್ರಗಣ್ಯನಾಗಿರುವುದರಿಂದ, ಕವಿ ಅದರಿಂದ ಪ್ರಭಾವಿತನಾಗಿ ಆತನ ಹಾವಳಿಯನ್ನು ಚಿತ್ರಿಸಿರಬಹುದು.

ಬಹಾಉದ್ದೀನನ ಪಲಾಯನಕ್ಕೆ ಸುಲ್ತಾನನಿಗೂ ಆತನಿಗೂ ಇದ್ದ ಪರಸ್ಪರ ವೈಷಮ್ಯವೇ ಮುಖ್ಯ ಕಾರಣವೆಂದು ಇತಿಹಾಸದಿಂದ ವ್ಯಕ್ತವಾಗುತ್ತದೆ. ಕುಮಾರರಾಮನ ಕಥೆಯಲ್ಲಾದರೋ ಒಬ್ಬೊಬ್ಬ ಕವಿಯೂ ಒಂದೊಂದು ರೀತಿಯಾದ ಕಾರಣವನ್ನು ಕೊಟ್ಟಿರುತ್ತಾನೆ. ನಂಜುಂಡನಲ್ಲಿ ಸುಲ್ತಾನನ ಮಲ್ಲುಕರ ಪಿತೂರಿಯ ಪರಿಣಾಮವಾಗಿ ಬಾದೂರನು ದೇಶಭ್ರಷ್ಟನಾಗಿ ಬರುತ್ತಾನೆ. ಗಂಗನಲ್ಲಿ ಮಾಡಬಾರದ ತಪ್ಪನ್ನು ಮಾಡಿ ಬಂದನೆಂದು ಹೇಳಿದೆ. ಮಹಲಿಂಗಸ್ವಾಮಿ ಬಾದೂರನು ಕಂಪಿಲನೊಂದಿಗೆ ಸ್ನೇಹಮಾಡಿಕೊಂಡುದೇ ಸುಲ್ತಾನನ ಆಗ್ರಹಕ್ಕೆ ಕಾರಣವಾಯಿತೆಂದು ತಿಳಿಸಿರುತ್ತಾನೆ. ಬಾದೂರನ ಅಂತ್ಯವೂ ಸಹ ಹೀಗೆಯೇ ರೂಪಾಂತರ ಹೊಂದಿರುತ್ತದೆ. ನಂಜುಂಡನಲ್ಲಿ ಆತನು ರಣರಂಗದಲ್ಲಿಯೇ ಸಾಯುತ್ತಾನೆ. ಪಾಂಚಾಳಗಂಗನ ಒಂದು ಪ್ರತಿಯಲ್ಲಿ (ಗಂ. ೪) ಆತನು ಸತ್ತನೆಂದು ಬರುತ್ತದೆ. ಮಹಲಿಂಗಸ್ವಾಮಿಯಲ್ಲಿ ಆತನ ಮರಣದ ವೃತ್ತಾಂತವನ್ನು ತಿಳಿಸಿಲ್ಲ. ಈ ವಿಷಯ ಪಲ್ಲಟಗಳು ಹೇಗೇ ಇರಲಿ, ಪ್ರಮುಖವಾದ ಐತಿಹಾಸಿಕ ಘಟನೆಯೊಂದು ತಪ್ಪದೆ ಎಲ್ಲ ಕೃತಿಗಳಲ್ಲಿಯೂ ಉಳಿದು ಬಂದಿರುವುದು ಗಮನಾರ್ಹವಾದ ಸಂಗತಿ.[4]

ಕಾವ್ಯಗಳಲ್ಲಿ ನೇಮಿಯೆಂಬುವನು ಮೂರು ಬಾರಿ ಕುಮ್ಮಟದ ಮೇಲೆ ದಂಡೆತ್ತಿ ಬಂದಂತೆ ಹೇಳಿದೆಯಷ್ಟೆ. ಈ ಮೂರು ಸಲವೂ ಬಂದಾತನು ಒಬ್ಬನೋ, ಇಲ್ಲವೆ ಬೇರೆ ಬೇರೆಯೋ ಎಂದು ಸಂದೇಹವಾಗುವುದು ಸಹಜ. ಅಲ್ಲದೆ, ಈ ದಂಡೆಯಾತ್ರೆಗಳಿಗೆ ಒಟ್ಟು ಎಷ್ಟು ಕಾಲ ಹಿಡಿಸಿರಬಹುದು ಎಂಬುದೂ ಸ್ವಾಭಾವಿಕವಾದ ಪ್ರಶ್ನೆ. ಇಸಾಮಿ ಮೊದಲನೆಯ ಬಾರಿ ಮಲ್ಲಿಕ್‌ರುಕ್ನುದೀನ್, ಎರಡನೆಯ ಬಾರಿ ಕುತುಬ್

---

1. FSVH. Vol. iii, PP. 1–2.
2. ಗಂಡುಗಲಿ ಕುಮಾರರಾಮ: ಕರ್ಮವೀರ, ೨–೨–೧೯೪೨.
3. ಪು. ೫೫೬.
4. ಈ ಘಟನೆಯ ಮಹತ್ವ ಮತ್ತು ವಿವರವನ್ನು ಶ್ರೀ. ಆರ್.ಸಿ. ಮಜುಂದಾರರು ಮಾಡಿರುವ ಮತ್ತೊಂದು ಅವಲೋಕನದಲ್ಲಿಯೂ ನೋಡಬಹುದು (The Delhi Sultanate, P. 61–62).

ಉಲ್‌ಮುಲ್ಕ್,' ಮೂರನೆಯ ಬಾರಿ ಮಲ್ಲಿಕ್ ಝಾದಾ ಎಂಬುವರು ಬಂದರೆಂದು ಸ್ಪಷ್ಟಪಡಿಸಿರುತ್ತಾನೆ.[1] ಫೆರಿಸ್ತಾ ಎಂಬಾತನು ಖ್ವಾಜಾಜಹರ್ ಎಂಬಾತನು ಮೇಲಿಂದ ಮೇಲೆ ದಂಡೆತ್ತಿ ಬಂದನೆಂದು ನಿರೂಪಿಸಿರುತ್ತಾನೆ[2]. ಮಲ್ಲಿಕ್‌ಝಾದಾ ಎಂಬಾತನಿಗೇ ಖ್ವಾಜಾಜಹರ್ ಎಂಬ ಮತ್ತೊಂದು ಹೆಸರೂ ಇದ್ದಿತೆಂದು ತಿಳಿದು ಬರುವುದರಿಂದ,[3] ಕಡೆಯ ಬಾರಿ ವಿಜಯಶಾಲಿಯಾದ ಈತನ ಹೆಸರೇ ಹಿಂದಿನ ಎರಡು ಪ್ರಸಂಗಗಳಿಗೂ ಅನ್ವಯವಾಗಿದ್ದಿರಬಹುದು. ಕೊನೆಯ ಸಲ ಸುಲ್ತಾನನು ದೇವಗಿರಿಗೆ ಬಂದು ನಿಂತು, ಈ ಮುತ್ತಿಗೆಯಲ್ಲಿ ಆಸಕ್ತಿ ವಹಿಸಿದನೆಂದು ಕಂಡುಬರುತ್ತದೆ. ಆದ್ದರಿಂದ, ಸೋತ ದಳಪತಿಯನ್ನೇ ಪುನಃ ಪುನಃ ಕಳುಹಿಸದೆ, ಒಂದೊಂದು ಸಂದರ್ಭದಲ್ಲಿಯೂ ಬೇರೆ ಬೇರೆಯವರೇ ಬಂದಿರುವುದು ಸಹಜವೆನ್ನಿಸುತ್ತದೆ. ಕಾವ್ಯದ ದೃಷ್ಟಿಯಿಂದ ಈ ವಿವರಗಳು ಅನಗತ್ಯ. ಕಾಲನೇಮಿ ಸ್ವರೂಪನೆಂಬ ಅರ್ಥದಲ್ಲಿ ಈ ಮಹಮ್ಮದೀಯ ಸೇನಾಧಿಪತಿಗಳನ್ನು ಇಲ್ಲಿ ನೇಮಿ ಎಂದು ಕರೆದಿರಬಹುದು.

ಸುಲ್ತಾನನ ಸೇನೆಯನ್ನು ಕಂಪಿಲನ ಸೈನ್ಯ ಅನೇಕ ವರ್ಷಗಳ ಕಾಲ ಪ್ರತಿಭಟಿಸಿ ನಿಂತಿತೆಂಬುದಾಗಿ ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಅಭಿಪ್ರಾಯಪಡುತ್ತಾರೆ.[4] ಆದರೆ ಕಂಪಿಲನು ಎಷ್ಟೇ ಬಲಿಷ್ಠನಾಗಿರಲಿ, ರಾಮದೇವರಾಯ, ಪ್ರತಾಪರುದ್ರ, ಮುಮ್ಮಡಿ ಬಲ್ಲಾಳರನ್ನು ಗೆದ್ದ ಮಹಮ್ಮದೀಯ ಸೇನೆಯನ್ನು ವರ್ಷಗಟ್ಟಲೆ ಎದುರಿಸುವುದು ಕಷ್ಟವೇ ಸರಿ. ಪ್ರಕೃತದಲ್ಲಿ, ಕುಮ್ಮಟದುರ್ಗವು ಸಹಜವಾಗಿ ಅಭೇದ್ಯವಾಗಿದ್ದುದರಿಂದ ಕೆಲವು ತಿಂಗಳ ಕಾಲ ಕಂಪಿಲನು ಶತ್ರುವನ್ನು ತಡೆಗಟ್ಟಲು ಸಾಧ್ಯವಾಗಿದ್ದಿರಬಹುದು. ಅಲ್ಲದೆ, ಬಂಧುವೂ, ದ್ರೋಹಿಯೂ ಆದ ಬಹಾಉದ್ದೀನನನ್ನು ಸುಲ್ತಾನನು ದೀರ್ಘಕಾಲ ಶತ್ರುವಿನ ಆಶ್ರಯದಲ್ಲಿ ಬಿಟ್ಟಿರುವ ಸಂಭವವೂ ಕಡಮೆ. ಆದ್ದರಿಂದ, ಈ ಮೂರು ಕಾಳಗಗಳೂ ಒಂದೇ ವರ್ಷದ ಅವಧಿಯಲ್ಲಿ ನಡೆದಿರಬೇಕೆಂದು ಡಾ|| ಎಸ್. ವೆಂಕಟರಮಣಯ್ಯನವರು ಹೇಳಿರುವುದೇ ಉಚಿತವಾಗಿದೆ.[5]

## ವ್ಯಕ್ತಿಗಳು

ಈವರೆಗೆ ಮಾಡಿರುವ ಪರಿಶೀಲನೆಯಿಂದಲೇ ಕುಮಾರರಾಮನ ಕಥೆಯಲ್ಲಿ ಬರುವ ಯಾವ ಯಾವ ಪಾತ್ರಗಳು ಐತಿಹಾಸಿಕ ವ್ಯಕ್ತಿಗಳೆಂಬುದು ಸ್ಪವಿದಿತವಾಗುತ್ತವೆ. ಮುಮ್ಮಡಿಸಿಂಗ, ಕಂಪಿಲ, ಬಲ್ಲಾಳ, ಪ್ರತಾಪರುದ್ರ, ಜಗತಾಪಿ, ಸುಲ್ತಾನ, ಬಾದೂರಖಾನ ಮೊದಲಾದವರು ಪ್ರಮುಖರಾಗಿದ್ದಾರೆ. ಆದರೆ, ಮುಖ್ಯ ಕಥಾನಾಯಕನಾದ ಕುಮಾರರಾಮ, ಸಚಿವೋತ್ತಮನಾದ ಬೈಚಪ್ಪ ಇವರನ್ನು ಕುರಿತು ಚರಿತ್ರಕಾರರು ಏನೂ ಹೇಳದಿರುವುದರಿಂದ, ಪ್ರತ್ಯೇಕವಾಗಿ ವಿಚಾರಮಾಡಬೇಕಾಗುತ್ತದೆ.

**ಕುಮಾರರಾಮ :** ಕುಮ್ಮಟದ ಕಾಳಗವನ್ನು ವರ್ಣಿಸುವ ನ್ಯೂನಿಜನು ಆ ಯುದ್ಧದಲ್ಲಿ ಸತ್ತ ರಾಜನನ್ನು (ಕಂಪಿಲನನ್ನು) ಜನಗಳು ಇಂದಿಗೂ ದೇವತೆಯೆಂದು ಪೂಜಿಸುತ್ತಾರೆಂದು ಹೇಳಿರುತ್ತಾನೆ.[6] ಕುಮಾರರಾಮನಿಗೆ ಇಂದಿಗೂ ಸಲ್ಲುತ್ತಿರುವ ಪೂಜೆ ಪ್ರಶಸ್ತಿಗಳನ್ನು ನೋಡಿದರೆ, ನ್ಯೂನಿಜನ ಈ ಮಾತು ಕಂಪಿಲನಿಗಿಂತಲೂ ಕುಮಾರರಾಮನಿಗೇ ಅನ್ವಯಿಸುವಂತಿದೆ. ಕನ್ನಡ ಕವಿಗಳು ತಾವು ಬರೆಯುತ್ತಿರುವುದನ್ನು

---

1. FSVH, Vol. iii, PP. 2-3.
2. Briggs, Ferishta, P. 419.
3. EMESI, P- 136, F. N.
4. ಗಂಡುಗಲಿ ಕುಮಾರರಾಮ, ೧೯೪೧, ಪು. ೩೫.
5. Kampili and Vijayanagara, P. 3.
6. "... Amongst themselves they still worship this king as a saint" A Forgotten Empire, P. 283, Indian Edition, June 1962.

ನರಕೃತಿಯೆಂದು ಆಕ್ಷೇಪಿಸಬಾರದೆಂದೂ ತಮ್ಮ ಕಥಾನಾಯಕನು ಶುಚಿತೆ ವೀರತೆಗಳಿಂದ ಮಹಿಮಾಪುರುಷನಾದವನೆಂದೂ ಹೇಳಿರುವುದನ್ನು ಗಮನಿಸಿದರೆ,[1] ಈತನು ಐತಿಹಾಸಿಕ ಪುರುಷನೆನ್ನುವುದು ಸ್ಪಷ್ಟವಾಗುತ್ತದೆ.

"ಚೆನ್ನಬಸವ ಪುರಾಣದಲ್ಲಿ" ಕಂಪಿಲನ ಮಗ ರಾಮನಾಥನೆಂದೂ[2], "ಕೆಳದಿನೃಪವಿಜಯ"ದಲ್ಲಿ ಕಂಪಿಲರಾಯನ ಮಗ ಕುಮಾರರಾಮನೆಂದೂ[3] ಸ್ಪಷ್ಟವಾಗಿ ಹೇಳಿದೆ. ಹಂಪೆಯಲ್ಲಿಯೂ[4], ಜಟ್ಟಂಗಿ ರಾಮೇಶ್ವರನ ಗುಡಿಯಲ್ಲಿಯೂ[5] "ಕುಮಾರರಾಮನ ಗರಡಿ ಮನೆ" ಎಂಬುದಾಗಿ ಸ್ಮರಣಾರ್ಥವಾದ ಪ್ರದೇಶಗಳಿರುವುದು ಈತನ ಮಹಿಮೆಯನ್ನು ಪ್ರಕಟಪಡಿಸುತ್ತವೆ. ಅನತಿ ಕಾಲದಲ್ಲಿಯೇ ಈತನು ದೈವಾಂಶಸಂಭೂತನೆಂಬ ಭಾವನೆ ಬೆಳೆದುದರಿಂದ ಈತನ ಹೆಸರಿನ ದೇವಾಲಯಗಳೂ, ವಿಗ್ರಹಗಳೂ ಹಾನುಗಲ್ಲಿನ ಮೂಡೂರು, ಮಲ್ಲುಗಂದ ಮತ್ತು ಶಿರಗೋಡ ಗ್ರಾಮಗಳಲ್ಲಿಯೂ[6] ಕೊರಟಗೆರೆ ತಾಲ್ಲೂಕು ದೊಡ್ಡಪಾಲನಹಳ್ಳಿ, ಸಿದ್ದಾಪುರ ತಾಲ್ಲೂಕು ಬೇಡಕಣಿ೯ ಇವೇ ಮೊದಲಾದ ನಾನಾಭಾಗಗಳಲ್ಲಿಯೂ ಕಂಡುಬರುತ್ತವೆ. ಕುಮಾರರಾಮನನ್ನು ಕುರಿತು ಒಂದು ಬಿರುದಾವಳಿಯೂ ಜನರಲ್ಲಿ ಬಳಕೆಯಲ್ಲಿದ್ದಂತೆ ತೋರುತ್ತದೆ. ಏಕೆಂದರೆ "ಕೊಮಾರರಾಮಗೆ ಭಟ್ಟರು ಹೊಗಳುವಂಥಾ ಭಟಾಂಗಿನಿ" ಎಂಬ ಬರೆಹವಿದೆ[7]. ಇದರಲ್ಲಿ ಕುಮಾರರಾಮನ ವಂಶಾವಳಿ, ಈತನು ಸಾಧಿಸಿದ ವಿಜಯಪರಂಪರೆ ಮೊದಲಾದವುಗಳನ್ನು ಗದ್ಯದಲ್ಲಿ ಹೇಳಿದೆ. ನಂಜುಂಡನಲ್ಲಿ, ತೆಲುಗಿನ ಭಟ್ಟಂಗಿಗಳು ಕುಮಾರರಾಮನನ್ನು ಹೊಗಳಿರುವ ವಚನಭಾಗವೂ ಇದೇ ರೀತಿಯಾದುದು (xiv, ೧೩೨ ವಚನ). ಕುಮ್ಮಟದುರ್ಗದಲ್ಲಂತೂ ಇಂದಿಗೂ ಈತನ ಜಾತ್ರೆ ನಡೆಯುತ್ತದೆ.

ಕುಮಾರರಾಮನು ಐತಿಹಾಸಿಕ ವ್ಯಕ್ತಿಯೆಂಬುದನ್ನು ನಿರ್ಣಯಿಸಲು ಈವರೆಗೆ ಲಭಿಸಿರುವ ಕೆಲವು ಶಾಸನಗಳು ತುಂಬ ಸಹಾಯಕವಾಗುತ್ತವೆ. ಹಾವೇರಿಯ ಬಳಿ ಸಂಗೂರು ಎಂಬಲ್ಲಿ ಗ್ರಾಮದ ಬಾಗಿಲಲ್ಲಿರುವ ಶಿಲಾಶಾಸನವೇ ಸದ್ಯದಲ್ಲಿ ಅತ್ಯಂತ ಪ್ರಾಚೀನವಾದದ್ದು. ಇದರ ಕಾಲ ಕ್ರಿ. ಶ. ೧೮೦೭. ಈ ಶಾಸನದ ಮೇಲ್ಭಾಗದಲ್ಲಿ ಕುದುರೆಯನ್ನೇರಿದ ವೀರನೊಬ್ಬನ ಚಿತ್ರವಿದೆ. ಇದರಲ್ಲಿ "ಚಂಗಾಪುರದಲು ಕಂಪಿಲರಾಯನ ಬಾಹತ್ತರ ವಿನಿಯೋಗಾಧಿಪತಿ (ನಿಯೋಗಿಾಧಿಪತಿ ?) ಪತಿಕಾರ್ಯಧುರಂಧರನುಮಪ್ಪ ಬೈಚವೆಗ್ಗಡೆಯ ಮೊಮ್ಮ ಸೇನಾಧಿಪತಿ ಸಂಗಮನ ಕುಮಾರ ಮಾದರಸು ಕುಮಾರರಾಮನಾಥ ದೇವರ ಪ್ರತಿಷ್ಠೆಯ

---

1. ಇದು ಪುಣ್ಯಕಥೆಯಲ್ಲಿದು ಪೂರ್ವಚರಿತವಲ್ಲಿದು ಪುರಾಣದೊಳುಕ್ತವಲ್ಲ ।
ಇದನೆಂತಾಲಿಪೆನೆಂಬ ಸಜ್ಜನ ಕೇಳಿದಕುಸುರುವೆನುತ್ತರವನು ॥
ಆವಕುಲದಲಿ ಪುಟ್ಟಲಿ ಪರವೆಂಗಳ ಭಾವಿಸನಾವನವನಿಗೆ ।
ದೇವರು ಸರಿಯಲ್ಲ ನರಪಶುಗಳ ಬಲು ಡಾವಣಿಯವನೆ ಕೇಳವನು ॥ (ನಂಜುಂಡ)
ನರಕೃತಿಯನು ಕೇಳಿ ಫಲವಿಲ್ಲವೆನುತಲಿ ಬರಿದೆ ಸಂದೇಹಿಸಬೇಡ ।
ಪರನಾರಿಯ ಸಹೋದರ ರಾಮನಾಥನ ಪರಿ ಕೇಳಲು ಮುಕ್ತಿಯಹುದು ॥ (ಪಾಂಚಾಳಗಂಗ)
ನರಕೃತಿಯನು ಕೇಳಿ ಫಲವಿಲ್ಲಯೆನಬೇಡಿ ಹರನ ಮೂಲದಲಿ ಜನಿಸಿದರ ।
ನರಕಾರ್ಯವಿಲ್ಲರೆ ಮರದೊಳು ಜನಿಸುವರಾರು ಸುರಕೋಟಿ ಶರಣ ಸಂತತಿಯ ॥
(ಮಹಲಿಂಗಸ್ವಾಮಿ)
2. ಕಾಂಡ v, ಸಂಧಿ ೯, ಪ. ೭೭.
3. ಸಂ. ix, ಪ. ೩೦.
4. ಕರ್ಣಾಟಕ ಜನಜೀವನ, ಪು. ೧೦೫.
5. MAR, 1930, p. 29.
6. ಕರ್ನಾಟಕದ ಪ್ರಥಮ ಸ್ವಾತಂತ್ರ್ಯವೀರ ಕುಮಾರರಾಮ : ಕರ್ಮವೀರ, ೧೦–೧–೧೯೬೦.
7. Mack. Collection M. 369.

ಶಕವರ್ಷ ೧೩೨೯ ನೆಯ ಸರ್ವ [ಜಿ] ತು ಸಂವತ್ಸರದ ಆಶ್ವಯುಜ ಸುದ್ದ ೧೦ ಆದಿತ್ಯವಾರದಲು ಮಾಡಿಸಿದರು" ಎಂಬುದಾಗಿ ಹೇಳಿದೆ.[1] ಇದು ಕುಮಾರರಾಮನನ್ನು ಕುರಿತಿದ್ದು ಎಂಬುದಾಗಿ ಸ್ಪಷ್ಟವಾಗಿ ವ್ಯಕ್ತವಾಗುತ್ತವೆ. ಏಕೆಂದರೆ ಇಲ್ಲಿ ಐತಿಹಾಸಿಕ ವ್ಯಕ್ತಿಯಾದ ಕಂಪಿಲರಾಯನ ಹೆಸರೂ ಮತ್ತು ಆತನ ಆಪ್ತಸಚಿವನಾದ ಬೈಚಪ್ಪನ ಹೆಸರೂ ಒಟ್ಟಿಗೇ ಕಂಡುಬರುತ್ತವೆ. ಕ್ರಿ. ಶ. ೧೪೩೨ ಕ್ಕೆ ಸೇರಿದ, ತೀರ್ಥಹಳ್ಳಿಯ ಶಾಸನವೊಂದರಲ್ಲಿ "ಬೊಂಮರಸನ ಹೆಗ್ಗಡೆಯರ ಮಗ ಪುಟ್ಟಗಡೆ ದಳವನೂ ಮುಱಿದು ಆ ರಣದೊಳಗೆ ಕುಮಾರರಾಮನಾಥನ ಪ್ರತಾಪವಾಗಿ ಅಂಬುಗೂಡಾಗಿ" ಸತ್ತನೆಂದು ವರ್ಣಿತವಾಗಿದೆ.[2] ಇಲ್ಲಿ, ಕುಮಾರರಾಮನ ಪೌರುಷವು ಹೇಗೆ ಆದರ್ಶಪ್ರಾಯವಾಯಿತೆಂಬುದು ವ್ಯಕ್ತವಾಗುತ್ತದೆ. ಸಂಡೂರಿನ ರಾಮಘಡದಲ್ಲಿ ಇತ್ತೀಚೆಗೆ ದೊರೆತಿರುವ ಒಂದು ಶಾಸನದಲ್ಲಿ ಕುಮಾರರಾಮನ ವಂಶಾವಳಿಯ ವಿವರಗಳು ಸ್ಪಷ್ಟವಾಗಿ ಗೋಚರವಾಗುತ್ತವೆ. ರಾಮನಾಥನ ಭಕ್ತರಾದ ಗೋಪಾಯಿ, ಆಕೆಯ ತಮ್ಮ ರಾಮಣ ಮತ್ತು ಇತರರು ಸೇರಿ ಹೊಸಮಲೆದುರ್ಗದಲ್ಲಿ ರಾಮನಾಥ ದೇವರ ಗುಡಿಯನ್ನು ಕಟ್ಟಿಸಿದಾಗ ಈ ಶಾಸನವನ್ನು ಹಾಕಿಸಿದುದಾಗಿ ತಿಳಿದುಬರುತ್ತದೆ. ಇದರ ಕಾಲ ಕ್ರಿ. ಶ. ೧೫೨೮.[3] ಈ ಶಾಸನದ ಮೇರೆಗೆ ಕುಮಾರರಾಮನ ವಂಶಾವಳಿ ಹೀಗಿದೆ:—

ಮುಮ್ಮಡಿ ಸಿಂಗ
|
ಖಂಡೆಯರಾಯ ಕಂಪಿಲರಾಯ
ವೀರಗುಜ್ಜಲ ಹರಿಹರದೇವಿ (ಪಟ್ಟಮಹಿಷಿ)
|
ಹೊಸಮಲೆಯ ರಾಮನಾಥ ಒಡೆಯ

ಈ ಶಾಸನ ಮತ್ತು ಸಂಗೂರಿನ ಶಾಸನಗಳು ವಿಜಯದಶಮಿಯಂದು ಪ್ರತಿಷ್ಠೆಯಾಗಿರುವುದನ್ನು ಶ್ರೀ. ದೇಸಾಯಿ ಪಾಂಡುರಂಗರಾಯರು ಒತ್ತಿ ಹೇಳಿರುತ್ತಾರೆ.[4] ಇದರ ಮಹತ್ವವೇನೋ ತಿಳಿಯದು. ಮುಖ್ಯವಾಗಿ, ಈ ವಂಶಾವಳಿ ಕಾವ್ಯದಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಸಮರ್ಥಿಸುವುದಲ್ಲದೆ, ಇತರ ಒಂದೆರಡು ಸಂದೇಹಗಳನ್ನು ನಿವಾರಿಸುತ್ತದೆ. ಹರಿಹರದ ಒಂದು ಶಾಸನದಲ್ಲಿ ಮುಮ್ಮಡಿ ಸಿಂಗನ ಮಗನಾದ ಖಂಡೆಯರಾಯನು ಆ ಊರನ್ನು ಜೀರ್ಣೋದ್ಧಾರ ಮಾಡಿ ಬ್ರಾಹ್ಮಣರಿಗೆ ದಾನಮಾಡಿದ ಸಂಗತಿ ಬರುತ್ತದೆ.[5] ಈ ಶಾಸನದಲ್ಲಿ ಹೇಳಿರುವ ಖಂಡೆಯರಾಯನು, ಮುಮ್ಮಡಿ ಸಿಂಗನ ಮತ್ತೊಬ್ಬ ಮಗನಿರಬೇಕೆಂದು ಡಾ|| ಎನ್. ವೆಂಕಟರಮಣಯ್ಯನವರು ಭಾವಿಸಿರುತ್ತಾರೆ.[6] ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರೂ ಮೊದಮೊದಲು ಹೀಗೆಯೇ ಎಣಿಸಿದ್ದರು.[7] ಅನಂತರ ಇದು ಒಬ್ಬನ ಹೆಸರೇ ಇರಬೇಕೆಂದು ಅಭಿಪ್ರಾಯವನ್ನು ಬದಲಾಯಿಸಿಕೊಂಡಿರುತ್ತಾರೆ.[8] ಪ್ರಕೃತ ಶಾಸನದಲ್ಲಿ ಈ ಎರಡೂ ಒಬ್ಬನನ್ನೇ ಕುರಿತುದೆಂದು ಸ್ಪಷ್ಟವಾಗುತ್ತದೆ. ಇಲ್ಲಿ ಹೇಳಿರುವ "ಖಂಡೆಯರಾಯ" ಎಂಬುದು ಕಂಪಿಲನ ಬಿರುದಿರಬೇಕೆಂದು ಶ್ರೀ. ದೇಸಾಯಿ

---

1. EI, XXIII, P. 185.
2. EC, VIII, Part II. Tirthahally, 23.
3. ARSIE, 1943-45, No. 76 of 1943-44.
4. ಕರ್ಮವೀರ, ೧೦–೧–೧೯೬೦.
5. EC. XI, Davanagere, 26.
6. FSVH, Vol. i, P. 11.
7. ಗಂಡುಗಲಿ ಕುಮಾರರಾಮ, ೧೯೪೧, ಪು. ೩೯.
8. ಶರಣ ಸಾಹಿತ್ಯ, ಸಂ. vi, ೧೯೪೩–೪೪. ಪು. ೩೩೬.

ಪಾಂಡುರಂಗರಾಯರು ಊಹಿಸುವುದು ಸಹಜವಾಗಿ ತೋರುತ್ತದೆ.[1] ಶ್ರೀ. ಸಿ. ಹಯವದನರಾಯರು ವಿಜಯನಗರದ ಮೊದಲನೆಯ ವಂಶಾವಳಿಗೆ ಸೇರಿದ ಕಂಪನ ಮಗನೇ ಕುಮಾರರಾಮನಿರಬೇಕೆಂದು ಸೂಚಿಸಿರುತ್ತಾರೆ.[2] ಪ್ರಕೃತ ವಂಶಾವಳಿಯ ಆಧಾರದಿಂದ ಈ ಅಭಿಪ್ರಾಯಕ್ಕೆ ಸ್ವಲ್ಪವೂ ಅವಕಾಶವಿಲ್ಲವೆಂದು ಸ್ಪಷ್ಟವಾಗುತ್ತದೆ. ಇವುಗಳಲ್ಲದೆ, ಈ ಶಾಸನವು ಕೃಷ್ಣದೇವರಾಯನ ಆಳ್ವಿಕೆಗೆ ಸೇರಿದುದಾಗಿರುವುದರಿಂದ ಆ ಕಾಲದಲ್ಲಿ ಜನರಿಗೆ ಕುಮಾರರಾಮನಲ್ಲಿದ್ದ ಭಕ್ತಿಯೂ ವಿದಿತವಾಗುತ್ತದೆ.

ಹಂಪೆಯಲ್ಲಿ ಪ್ರಸನ್ನ ವಿರೂಪಾಕ್ಷದೇವಾಲಯದ ಬಳಿ ಕಂಪಿಲನಿಗೆ ಸಂಬಂಧಿಸಿದ ಒಂದು ಶಾಸನವಿದೆ. ಇದರಲ್ಲಿ " ಶ್ರೀ ಸಂಗಮೇಶ್ವರದೇವರ ದಿವ್ಯಶ್ರೀಪಾದಪದ್ಮಾರಾಧಕರುಮಪ್ಪ ಮುಮ್ಮಡಿ ಸಿಂಗೆಯನಾಯಕನ ಕೊಮಾರ ವೀರಕಂಪಿಲಿದೇವನು ತಮ್ಮ ತಾಯಿ ಮಾದನಾಯಕಿತಿ ಸಿಂಗೆಯನ(ನಾ?)ಯಕ ಪರಮೆಯನ (ನಾ?)ಯಕ ಇಂತು ಮೂವರ ಲಿಂಗ ಪ್ರತಿಷ್ಠೆಯ ಮಾಡಿಸಿದ ಶಿವಾಲ್ಯ "ಎಂದು ಹೇಳಿದೆ.[3] ಇದರಲ್ಲಿ ಉಕ್ತನಾಗಿರುವ ಪರಮೆಯನಾಯಕನು ಯಾರೋ ತಿಳಿಯದು. ಶ್ರೀ. ಆರ್.ಎಸ್. ಪಂಚಮುಖಿ ಅವರು ಈತನು ಈ ವಂಶದ ಹಿರಿಯನಿರಬಹುದೆ ಎಂದು ಶಂಕಿಸಿ, ಈ ಕೆಳಗೆ ಕಂಡಂತೆ ವಂಶಾವಳಿಯನ್ನು ಸೂಚಿಸಿರುತ್ತಾರೆ.[4]

ಪೆರುಮೆಯನಾಯಕ (?)
|
ಮುಮ್ಮಡಿ ಸಿಂಗೆಯನಾಯಕ
ಮಾದನಾಯಕಿತಿ
|
ವೀರಕಂಪಿಲದೇವ
|
ಕುಮಾರರಾಮನಾಥ

ಎಲ್ಲರಿಗಿಂತಲೂ ಕಡೆಯಲ್ಲಿ ಉಕ್ತವಾಗಿರುವ ಹೆಸರನ್ನು ಹೀಗೆ ಮೂಲಪುರುಷನೆಂದು ಊಹಿಸಲು ಆಧಾರ ಸಾಲದು. ಆದರೆ, ಈ ಶಾಸನದಲ್ಲಿ ಕಂಪಿಲನ ತಾಯಿಯ ಹೆಸರು ಮಾದನಾಯಕಿತಿ ಎಂದು ತಿಳಿದು ಬರುವುದು ಹೊಸ ಸಂಗತಿ. ಶಾಸನದ ಕಾಲ ಉಕ್ತವಾಗಿಲ್ಲ.

ಆನೆಗೊಂದಿಗೆ ದಕ್ಷಿಣದಲ್ಲಿ ತುಂಗಭದ್ರಾನದಿಯ ದಂಡೆಯ ಮೇಲೆ ಕಂಪಿಲಿದೇಶದ ಒಡೆಯನಾದ ಕುಮಾರಕಂಪಿಲಿಭೂಪಾಲನೆಂದು ಉಕ್ತವಾಗಿರುವ ಒಂದು ಶಾಸನವಿರುವುದಾಗಿ ತಿಳಿದುಬರುತ್ತದೆ.[5] ಈ ಶಾಸನದ ಕಾಲ ಕ್ರಿ. ಶ. ೧೩೮೨. ಬಹುಶಃ, ಈ ಶಾಸನವನ್ನು ಕಂಪಿಲನ ಸ್ಮರಣಾರ್ಥವಾಗಿ ನಿರ್ಮಿಸಿರಬಹುದು.

ಮೇಲೆ ಹೇಳಿದ ಶಾಸನಗಳ ಆಧಾರದಿಂದ ಕುಮಾರರಾಮನ ವಂಶಾವಳಿಯನ್ನು ಹೀಗೆ ನಿರೂಪಿಸ ಬಹುದು :–

ಮುಮ್ಮಡಿ ಸಿಂಗೆಯನಾಯಕ–ಮಾದನಾಯಕಿತಿ
|
ಖಂಡೆಯರಾಯ ಕಂಪಿಲರಾಯ–ವೀರಗುಜ್ಜಲ ಹರಿಹರದೇವಿ
|
ರಾಮನಾಥ ಒಡೆಯ

1. ಕರ್ಮವೀರ, ೧೦–೧–೧೯೬೦.
2. Mys. Gaz. Vol. II, Part III, P. 1916.
3. FSVH, Vol. ii, p. 1
4. EI, xxiii, p.185.
5. Inscriptions of the Madras Presidency, Vol. I, P. 301, Ed. V. Rangacharya.

ಹೀಗೆ ಕುಮಾರರಾಮನು ಐತಿಹಾಸಿಕ ವ್ಯಕ್ತಿಯೆನಿಸಿದ್ದರೂ ಚರಿತ್ರಕಾರರು ಈತನ ಹೆಸರನ್ನು ಹೇಳದಿರುವುದು ಸೋಜಿಗವೇ ಸರಿ. ಕಂಪಿಲನ ಕಾಲದಲ್ಲಿ ಕುಮಾರರಾಮನು ಯುವರಾಜನಾಗಿದ್ದುದರಿಂದ ಈತನ ಹೆಸರನ್ನು ಹೇಳದೆ ಬಿಟ್ಟಿರಬಹುದು. ಇತ್ತೀಚಿನ "ತಜ್‌ಕರಾತುಲ್ ಅವಲಿಯಾ" ಎಂಬ ಉರ್ದು ಗ್ರಂಥವೊಂದರಲ್ಲಿ ಕುಮಾರರಾಮನ ಹೆಸರನ್ನು ಹೇಳಿರುವುದಾಗಿ ಶ್ರೀ. ಕಪಟರಾಳ ಕೃಷ್ಣರಾಯರು ನನಗೆ ತಿಳಿಸಿರುತ್ತಾರೆ.[1] ಫ್ರಾನ್ಸಿಸ್ ಬುಕಾನನ್ ಎಂಬ ವಿದೇಶೀಯ ಪ್ರವಾಸಿ ತನ್ನ ಗ್ರಂಥದಲ್ಲಿ ಕುಮಾರರಾಮನ ಶಿರಚ್ಛೇದನದ ಸಂಗತಿಯನ್ನು ಪ್ರಾಸಂಗಿಕವಾಗಿ ಹೇಳಿರುತ್ತಾನೆ.[2] ಇವುಗಳು ಹೇಗೇ ಇರಲಿ, ಕುಮಾರರಾಮನಿಗೆ ಚರಿತ್ರೆಯಲ್ಲಿ ಲಭಿಸದೆ ಹೋದ ಸ್ಥಾನ, ಜನಗಳ ಆಚರಣೆಯಲ್ಲಿಯೂ, ಕನ್ನಡ ಕಾವ್ಯಗಳಲ್ಲಿಯೂ ಇಮ್ಮಡಿಯಾಗಿ ದೊರೆತಿದೆ.

**ಬೈಚಪ್ಪ** : ಕುಮಾರರಾಮನ ಕಥೆಯಲ್ಲಿ ಮಂತ್ರಿಯಾದ ಬೈಚಪ್ಪನಿಗೆ ವಿಶಿಷ್ಟವಾದ ಸ್ಥಾನವಿದೆ. ಸಂಗೂರಿನ ಶಾಸನದಲ್ಲಿ ಉಲ್ಲೇಖಿತವಾಗಿರುವ "ಪತಿಕಾರ್ಯಧುರಂಧರನುಮಪ್ಪ ಬೈಚವೆಗ್ಗಡೆ" ಎಂಬುದು ಈತನನ್ನೇ ಕುರಿತುದಾಗಿರಬೇಕು. ಆ ಶಾಸನವನ್ನು ಪ್ರತಿಷ್ಠಿಸಿದಾತನು ಈತನ ಮೊಮ್ಮಗನೇ ಇರಬೇಕು. ರಾಮಘಡದ ಶಾಸನದಲ್ಲಿ ಕ್ರಿ.ಶ. ೧೩೨೩ರಲ್ಲಿ ಬಲ್ಲಾಳನಿಗೂ ಕಂಪಿಲನಿಗೂ ನಡೆದ ಯುದ್ಧದಲ್ಲಿ "ಕುದುರೆ ದಂಡಿನ ಬಯಿಚಯ್ಯನೆಂಬುವನು" ಸತ್ತನೆಂದು ಹೇಳಲಾಗಿದೆ. ಆದರೆ, ಈತನೂ ಮಂತ್ರಿ ಬೈಚಪ್ಪನೂ ನಾಮಸಾದೃಶ್ಯದಿಂದ ಒಬ್ಬನೇ ಎಂದು ಹೇಳಲು ಆಧಾರವಿಲ್ಲವೆಂದು ಶಾಸನದ ವರದಿಕಾರರು ಹೇಳಿರುವ ಮಾತು ಒಪ್ಪತಕ್ಕದ್ದೇ ಸರಿ.[3]

ಶ್ರೀ. ಕಪಟರಾಳ ಕೃಷ್ಣರಾಯರು ಮತ್ತು ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಈ ಬೈಚಪ್ಪನು ಯಾರಿರಬಹುದೆಂದು ಸ್ವಲ್ಪಮಟ್ಟಿಗೆ ವಿಚಾರಮಾಡಿರುತ್ತಾರೆ. ಶ್ರೀ. ಕಪಟರಾಳ ಕೃಷ್ಣರಾಯರು "....ಬಮ್ಮರಸನ ಚೋಳನ ಮಂತ್ರಿಯು ಬೀಚನು. ಈ ಬೀಚನು ಚತುರ್ಥಕುಲದವನು. ಬಮ್ಮನ ಅಪ್ಪಣೆಯಂತೆ ಇವನು ನಿಡುಗಲ್ಲು ಹಾನೆಯ ದುರ್ಗಗಳನ್ನು ಕ್ಷಣದಲ್ಲಿ ಕಟ್ಟಿಸಿದನು. ಗಣೇಶನ ಮಂತ್ರಿಯೂ ಬೀಚನೆ ಆಗಿದ್ದು ನಿಡುಗಲ್ಲಿನಲ್ಲಿರುತ್ತಿದ್ದನು. ಈ ಬೀಚನಿಗೆ ಕುಮ್ಮಟದ ಬೀಚ ಎಂದು ಶಾಸನದಲ್ಲಿ ಕರೆಯಲಾಗಿದೆ. ಇದರಿಂದ ಇವನು ಕುಮ್ಮಟದ ಒಡೆಯನಾಗಿದ್ದಿರಬಹುದು. ಈ ಕುಮ್ಮಟದುರ್ಗವು ಚೋಳರಸರ ಅಧೀನದಲ್ಲಿ ಸೀಗೆನಾಡಿನಲ್ಲಿದ್ದಿತು"[4] ಎಂದು ತಿಳಿಸಿ, ಈ ಬೀಚನೇ ಕಂಪಿಲನ ಬಳಿಯಿದ್ದ ಬೈಚಪ್ಪನೆಂದು ಗ್ರಹಿಸಿರುತ್ತಾರೆ. ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರೂ ಇದೇ ಅಭಿಪ್ರಾಯವನ್ನೆ ಸಮರ್ಥಿಸುವುದಲ್ಲದೆ, ಮಲ್ಲಿದೇವನ ಮಂತ್ರಿಯಾದ ಬೈಚಪ್ಪನು, ಆತನ ಅನಂತರ ಮುಮ್ಮಡಿಸಿಂಗನ ಬಳಿಯಲ್ಲಿ ನಿಂತನೆಂದೂ, ಈತನೇ ವಿಜಯನಗರದ ಸ್ಥಾಪಕರಾದ ಹರಿಹರ ಬುಕ್ಕರಿಗೂ ಮುಂದೆ ಮಂತ್ರಿಯಾದನೆಂದೂ ಹೇಳಿರುತ್ತಾರೆ.[5]

ಈ ಇಬ್ಬರು ವಿದ್ವಾಂಸರ ಅಭಿಪ್ರಾಯಗಳನ್ನೂ ಸ್ವಲ್ಪಮಟ್ಟಿಗೆ ಪರಿಶೀಲಿಸಬಹುದು. ನಿಡುಗಲ್ಲು ಚೋಳರ ಆಶ್ರಯದಲ್ಲಿದ್ದ ಮಂತ್ರಿ ಬೀಚನೆಂಬುವನು ಅತ್ಯಂತ ಪ್ರಸಿದ್ಧನಾದವನು. ಈ ಹೆಸರನ್ನುಳ್ಳ ಎರಡು ಶಾಸನಗಳಿವೆ (Ec. xi, Molakalmuru, 20 ; Ec. xii, Pavagada, 53). ಮೊಳಕಾಲ್ಮುರು ಶಾಸನದಲ್ಲಿ (ಕ್ರಿ.ಶ. ೧೨೭೮ ?) ಬೀಚನೆಂಬಾತನು ಮಲ್ಲಿದೇವನ ಮಗನೂ, ನಿಡುಗಲ್ಲಿನ ಚೋಳರಲ್ಲಿ[6] ಎಂಟನೆಯ ತಲೆ

1. ಶ್ರೀಯುತರ ಪತ್ರ ೩–೯–೧೯೫೯.
2. "Travels" Vol. II, p. 281.
3. ARSIE, 1943–45, p. 65.
4. ಕಂಪಿಲರಾಯನೂ ಅವನ ಸ್ಥಾನಮಾನವೂ : ಶರಣ ಸಾಹಿತ್ಯ, ಸಂ. iv, ಸಂ. ೫ ಮತ್ತು ೬, ಪು. ೧೭೨.
5. ಶರಣ ಸಾಹಿತ್ಯ, ಸಂ. vi, ಸಂ. ೬, ಪು. ೧೦೩ ; ಗಂಡುಗಲಿ ಕುಮಾರರಾಮ, ೧೯೪೧, ಪು. ೪೨–೪೩.
6. ನಿಡುಗಲ್ಲಿನ ಚೋಳರ ವಂಶಾವಳಿಯಲ್ಲಿ ಹಲವು ತೊಡಕುಗಳಿರುವುದಾಗಿ ತಿಳಿದುಬರುತ್ತದೆ. ಇದರ ಸ್ಥೂಲ ಸ್ವರೂಪವನ್ನು ಬಿ. ಎಲ್. ರೈಸ್ (Ec. xii, Tumkur Dist. Intro. pp. 7–9) ಮತ್ತು ಆರ್. ಡಬ್ಲ್ಯು. ಸಿವೆಲ್ (Historical Inscriptions of Southern India, p. 369.) ಅವರ ಕೃತಿಗಳಲ್ಲಿ ನೋಡಬಹುದು.

ಯವನೂ ಆದ ಬ್ರಹ್ಮನ (ಎರಡನೆಯ ಬ್ರಹ್ಮ) ಬಳಿಯಲ್ಲಿ ಮಂತ್ರಿಯಾಗಿದ್ದನೆಂದೂ, ಹಾನೆಯ ಮತ್ತು ನಿಡುಗಲ್ಲಿನ ಕೋಟೆಗಳ ನಿರ್ಮಾಣದಲ್ಲಿ ಈತನು ಮುಖ್ಯ ಪಾತ್ರವನ್ನು ವಹಿಸಿದ್ದನೆಂದೂ ತಿಳಿದುಬರುತ್ತದೆ. ಪಾವಗಡದ ಶಾಸನದಲ್ಲಿ (ಕ್ರಿ.ಶ. ೧೨೫೨) ಬೈಚ ಚಮೂಪತಿ ಎನ್ನುವವನು ಬೊಮ್ಮನ (ಮೂರನೆಯ ಬ್ರಹ್ಮ) ಮಗನೂ ನಿಡುಗಲ್ಲಿನ ಚೋಳರಲ್ಲಿ ಹನ್ನೊಂದನೆಯ ತಲೆಯವನೂ ಆದ ಗಣೇಶ್ವರನಲ್ಲಿ ಮಂತ್ರಿಯಾಗಿದ್ದನೆಂದು ಗೊತ್ತಾಗುತ್ತದೆ.[1] ಹಾನೆಯ ಮತ್ತು ನಿಡುಗಲ್ಲು ದುರ್ಗಗಳನ್ನು ಕಟ್ಟಿಸಿದ ಬ್ರಹ್ಮನೂ ಗಣೇಶ್ವರನ ತಂದೆಯಾದ ಬೊಮ್ಮನೂ ಬೇರೆಬೇರೆ ಎನ್ನುವುದು ಇಲ್ಲಿ ಗಮನಿಸಬೇಕಾದ ಸಂಗತಿ. ಈ ವಂಶಾವಳಿಯಲ್ಲಿ ಒಂಬತ್ತನೆಯನಾದ ಎರಡನೆಯ ಇರುಂಗೋಳನಿಗೆ ಬೀಚ ಅಥವಾ ಬೈಚನೆಂಬ ಮಂತ್ರಿ ಇದ್ದನೋ ಇಲ್ಲವೋ ತಿಳಿಯದು. ಬೇರೆ ಬೇರೆ ಕಾಲಕ್ಕೆ ಸೇರಿದ ಈ ಶಾಸನಗಳಲ್ಲಿ ಉಕ್ತರಾಗಿರುವ ಮಂತ್ರಿಗಳು ಒಬ್ಬನೇ ಎನ್ನುವುದಕ್ಕೆ ಈ ಅಂತರ ವಿಚ್ಛಿತ್ತಿ ಅಡ್ಡಿಯಾಗಿರುವುದಲ್ಲದೆ, ಇತರ ಆಧಾರವಾವುದೂ ಇಲ್ಲ.

ಮೊಳಕಾಲ್ಮುರು ಶಾಸನದಲ್ಲಿ 'ಮಂತ್ರಿ ಬೀಚ'ನನ್ನು 'ಕಂಪಟದ ಬೀಚ'[2] ಎಂಬುದಾಗಿ ಕರೆದಿದೆಯೇ ವಿನಾ ಶ್ರೀ. ಕಪಟರಾಳ ಕೃಷ್ಣರಾಯರು ನಿರ್ದೇಶಿಸಿರುವಂತೆ 'ಕುಮ್ಮಟದ ಬೀಚ' ಎಂದು ಹೇಳಿಲ್ಲ. ಈತನ ಪಿತಾಮಹನನ್ನು "ಚತುರ್ಥವಂಶ ಮಣಿದೀಪಂ"[3] ಎಂಬುದಾಗಿಯೂ ಈತನನ್ನು "ಜಿನಪೂಜಾರತಂ"[4] ಎಂಬುದಾಗಿಯೂ ಕೊಂಡಾಡಲಾಗಿದೆ. ಆದ್ದರಿಂದ ಮಂತ್ರಿ ಬೀಚನ ಪೂರ್ವಿಕರು ಚತುರ್ಥಕುಲದವರಾಗಿದ್ದು ಅನಂತರ ಜೈನಮತವನ್ನು ಸ್ವೀಕರಿಸಿದ್ದಿರಬಹುದು. ಒಂದು ಪಕ್ಷ, ಹಾನೆಯ ಮತ್ತು ನಿಡುಗಲ್ಲಿನ ದುರ್ಗಗಳನ್ನು ಕಟ್ಟಿಸಿದ ಬೀಚನೇ ಕುಮ್ಮಟವನ್ನೂ ನಿರ್ಮಿಸಿದ್ದಲ್ಲಿ ಈ ಎರಡು ದುರ್ಗಗಳ ಹೆಸರಿನೊಂದಿಗೆ ಕುಮ್ಮಟದ ಹೆಸರೂ ಕೂಡಿ ಬರುತ್ತಿತ್ತು. ಪಾಂಚಾಳಗಂಗನ ಕೆಲವು ಪ್ರತಿಗಳಲ್ಲಿ (ಗಂ. ೫; ಡಿ. ೯೧೧) ಬೈಚಪ್ಪನನ್ನು ಶೆಟ್ಟಿಯೆಂಬುದಾಗಿ ಹೇಳಿದ್ದರೆ, ನಂಜುಂಡನ ಕೃತಿಯಲ್ಲಿ ಈತನು ಇಂದ್ರಾರಾಧಕನಾಗಿ ಕಂಡುಬರುತ್ತಾನೆ. ನಂಜುಂಡ ಕವಿ ಒಮ್ಮೆ ಈತನನ್ನು ವ್ಯಂಗ್ಯವಾಗಿ ಶೂದ್ರನೆಂದು ತೆಗಳಿರುವುದೂ ಉಂಟು (xxxvii, ೮೩-೮೬). ಆದರೆ ಇದು ಪ್ರಾಸಂಗಿಕವಾಗಿ ಬರುವ ಒಂದು ಆಕ್ಷೇಪಣೆಯ ಮಾತು ಎನ್ನುವುದನ್ನು ಮರೆಯುವಂತಿಲ್ಲ. ಈ ಧಾರ್ಮಿಕ ಸಾದೃಶ್ಯದಿಂದ ಈ ಇಬ್ಬರು ವ್ಯಕ್ತಿಗಳೂ ಒಬ್ಬನೇ ಇರಬಹುದೆ ಎನ್ನಿಸಿದರೂ ಇದು ಬಲವಾದ ಪ್ರಮಾಣವಾಗಲಾರದು. ಏಕೆಂದರೆ, ಒಂದೇ ಧರ್ಮಕ್ಕೆ ಸೇರಿದ ಒಂದೇ ಹೆಸರಿನ ಬೇರೆ ಬೇರೆ ವ್ಯಕ್ತಿಗಳಿರುವುದು ಸಾಮಾನ್ಯವಾದ ಸಂಗತಿ. ಆದ್ದರಿಂದ ನಿಡುಗಲ್ಲಿನ ಚೋಳರ ಮಂತ್ರಿಯಾದ ಬೀಚನೂ ಕಂಪಿಲನ ಮಂತ್ರಿಯಾದ ಬೈಚಪ್ಪನೂ ಒಬ್ಬನೇ ಎಂದು ಹೇಳುವುದಕ್ಕೆ ದೃಢವಾದ ಯಾವ ಐತಿಹಾಸಿಕ ಆಧಾರವೂ ಇಲ್ಲ.

---

1. ಈ ಶಾಸನ ಸಂಸ್ಕೃತದಲ್ಲಿರುವುದರಿಂದ ಪಾಠದಲ್ಲಿ ಸ್ವಲ್ಪ ಕ್ಲೇಶವಿರುವಂತಿದೆ. ಇದು ಗಣೇಶ್ವರನ ಕಾಲದ ಶಾಸನವಾದರೂ ಬೈಚಚಮೂಪತಿಯನ್ನು "ವೀರಬ್ರಹ್ಮ ನೃಪಾಳಪಾಲ್ಯಪೃತನಾ ಕೂಪಾರರಾಕಾಶಶಿ" ಎಂದು ಕರೆದಿರುವುದರ ಔಚಿತ್ಯವೇನೋ ತಿಳಿಯದು. ಇಂಗ್ಲಿಷ್ ಅನುವಾದದಲ್ಲಿ "From him was born Vira-Bomma whose son was Ganesa, who had for his minister Baicha" ಎಂದೂ "The moon to the ocean Vira Brahma's army was Bayicha chamupati" ಎಂದೂ ಉಭಯರಿಗೂ ಅನ್ವಯಿಸುವಂತೆ ಹೇಳಲಾಗಿದೆ. (EC, xii, Eng. Trans. P. 125) ಶಾಸನದ ಕಾಲವನ್ನನುಸರಿಸಿ, ಬೈಚ ಚಮೂಪತಿಯನ್ನು ಗಣೇಶ್ವರನ ಮಂತ್ರಿಯೆಂಬುದಾಗಿ ಇಲ್ಲಿ ಸ್ವೀಕರಿಸಿದೆ. ಈ ಮೂರನೆಯ ಬೊಮ್ಮನಿಗೆ ತ್ರಿಪುರಾಂತಕನೆಂಬ ಮಗನೊಬ್ಬನಿದ್ದನೆಂದೂ (Si. 34) ತಿಳಿದುಬರುತ್ತದೆ.
2. Ec, xi, Molk. 20, *l.* 40.
3. Ibid, *l.* 20
4. Ibid, *l.* 27

ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಈತನನ್ನು ಮಲ್ಲಿದೇವನ ಮಂತ್ರಿಯೆಂದು ಹೇಳಿರುವುದಕ್ಕೂ ಆಧಾರವಿಲ್ಲ. ಆತನ ಶಾಸನವೊಂದರಲ್ಲಿ ತಂತ್ರಪಾಲನಾಮನೆಂಬ ಹೆಸರಿನ ಮಂತ್ರಿಯು ಖ್ಯಾತಿ ಉಕ್ತನಾಗಿದೆ.[1] ಇದಲ್ಲದೆ ಶ್ರೀಯುತರು ಭಾವಿಸುವಂತೆ ಮಲ್ಲಿದೇವನು ಈ ವಂಶದ ಕಡೆಯ ಅರಸನೂ ಆಗುವುದಿಲ್ಲ. ಅವನ ತರುವಾಯ ಇನ್ನೂ ನಾಲ್ಕು ಮಂದಿ ಪಟ್ಟಕ್ಕೆ ಬಂದುದಾಗಿ ತಿಳಿದುಬರುತ್ತದೆ.[2] ಕಂಪಿಲನ ಮಂತ್ರಿ ಬೈಚಪ್ಪನೂ ಹರಿಹರ ಬುಕ್ಕರ ಮಂತ್ರಿಯಾದ ಬೈಚೆಯ ದಣ್ಣಾಯಕನೂ ಒಬ್ಬನೇ ಎಂದು ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಹೇಳುವ ವಿಚಾರವೂ ಹೀಗೆಯೇ ವಾದಗ್ರಸ್ತವಾದುದು. ಕಂಪಿಲನ ಬಳಿಯಲ್ಲಿದ್ದ ಹರಿಹರ ಬುಕ್ಕರೇ ವಿಜಯನಗರದ ಸ್ಥಾಪಕರೆಂಬ ಪಕ್ಷವನ್ನು ವಹಿಸಿ ಶ್ರೀ. ಶ್ರೀನಿವಾಸ ಜೋಯಿಸರು ತಮ್ಮ ಈ ಅಭಿಪ್ರಾಯವನ್ನು ಮಂಡಿಸಿರುವಂತಿದೆ. ಇಲ್ಲಿ, ಮುಖ್ಯ ವಿಷಯವೇ ಚರ್ಚಾಸ್ಪದವಾಗಿರುವಾಗ ಈ ಅಭಿಪ್ರಾಯವನ್ನು ಒಪ್ಪುವುದು ಕಷ್ಟವಾದೀತು. ಅಲ್ಲದೆ, ಒಬ್ಬನೇ ವ್ಯಕ್ತಿ ಒಟ್ಟು ಮೂರು ರಾಜವಂಶಗಳಿಗೂ ಸಚಿವನಾಗುವನೆಂಬುದು ಕಾಲದ ದೃಷ್ಟಿಯಿಂದಲೂ ಸಮ್ಮತವಾಗಲಾರದು. ಆದ್ದರಿಂದ, ಸೂಕ್ತವಾದ ಸಾಕ್ಷ್ಯಗಳು ದೊರೆಯುವತನಕ ಬೈಚಪ್ಪನ ಇತರ ವಿಚಾರಗಳ ಇತ್ಯರ್ಥಕ್ಕೆ ಹೋಗದೆ, ಸಂಗೂರಿನ ಶಾಸನವನ್ನು ಅವಲಂಬಿಸಿ ಕಂಪಿಲನ ಮಂತ್ರಿಯೂ ಇತರರಂತೆಯೇ ಒಬ್ಬ ಐತಿಹಾಸಿಕ ವ್ಯಕ್ತಿಯೆಂದು ಮಾತ್ರ ಸದ್ಯದಲ್ಲಿ ಪರಿಗಣಿಸಬಹುದು.

**ಮುಂಗುಲಿರಾಯ :** ಮೂರು ಕಾವ್ಯಗಳಲ್ಲಿಯೂ ಉಕ್ತನಾಗಿರುವ ಮುಂಗುಲಿರಾಯನು ಯಾರು ಎಂಬುದು ಇಂದಿಗೂ ಅನಿಶ್ಚಯವಾಗಿ ಉಳಿದಿದೆ. ನಂಜುಂಡನಲ್ಲಿ ಈತನು ಸುಲ್ತಾನನ ಸಾಮಂತನಾಗಿದ್ದನೆಂದು ತಿಳಿದುಬರುತ್ತದೆ. ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಗಳಲ್ಲಿ ಕುಮಾರರಾಮನ ಕುದುರೆಯಾದ ಬೊಲ್ಲ ಈತನ ಅರಮನೆಯಲ್ಲಿ ಜನಿಸಿತೆಂದೂ, ಅದು ಕೆಟ್ಟಗಳಿಗೆಯಲ್ಲಿ ಹುಟ್ಟಿದ್ದರಿಂದ ಈತನು ಅದನ್ನು ಸುಲ್ತಾನನಿಗೆ ಒಪ್ಪಿಸಿದನೆಂದೂ, ತರುವಾಯ ಅದು ಪ್ರತಾಪರುದ್ರನ ಮಗನಾದ ಯಪ್ಪತ್ತುರಾಯನಿಗೆ ಲಭಿಸಿತೆಂದೂ, ಆತನಿಂದ ಕುಮಾರರಾಮನು ಅದನ್ನು ಅಪಹರಿಸಿ ತಂದನೆಂದೂ ಚಿತ್ರಿತವಾಗಿದೆ. ವೆಂಕಟಗಿರಿ ಜಮೀನ್‌ದಾರನ ವಂಶಕ್ಕೆ ಸೇರಿದ ಸಿಂಗರಾಯನೇ ಈತನಿರಬೇಕೆಂದು ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು ಅಭಿಪ್ರಾಯಪಡುತ್ತಾರೆ.[3] ಸೂಕ್ತವಾದ ಆಧಾರಗಳಾವುದೂ ಕಂಡುಬಂದಿಲ್ಲವಾದ್ದರಿಂದ ಪ್ರಕೃತದಲ್ಲಿ ಈ ಬಗ್ಗೆ ಏನನ್ನೂ ಹೇಳುವಂತಿಲ್ಲ.

**ಭಂಡಾರಿ ಹರಿಹರ ಮತ್ತು ಭಂಡಾರಿ ಬುಕ್ಕ :** ನಂಜುಂಡನು ಶೂಲದ ಹಬ್ಬಕ್ಕೆ ಬಂದಿದ್ದವರಲ್ಲಿ ಭಂಡಾರಿ ಹರಿಹರ ಮತ್ತು ಭಂಡಾರಿ ಬುಕ್ಕಣ್ಣ ಎಂಬುವರು ಇದ್ದರೆಂದು ತಿಳಿಸುತ್ತಾನೆ (xxi, ೯೭, ೯೮) ಪಾಂಚಾಳಗಂಗನಲ್ಲಿ ಈ ಉಲ್ಲೇಖ ಬೇರೊಂದು ರೀತಿಯಾಗಿದೆ. ರತ್ನಿಯ ದೂರನ್ನು ಕೇಳಿ ಕುಪಿತನಾದ ಕಂಪಿಲನು ಬೈಚಪ್ಪನನ್ನು ಕರೆತರಲು ಭಂಡಾರಿ ಬುಕ್ಕರಾಯನಿಗೆ ಆಜ್ಞಾಪಿಸುವನು (ಗಂ. ೧, v, ೧೯೩-೧೯೫; ಗಂ. ೨, xviii, ೮೫ ; ಗಂ. ೪, iv, ३೪३, ३೪೮, ३೪೯, ३೫೨).[4] ಮಹಲಿಂಗಸ್ವಾಮಿಯಲ್ಲಿಯೂ ಬೈಚಪ್ಪನನ್ನು ಬರಮಾಡಿಕೊಳ್ಳಲೆಂದು ಕಂಪಿಲನು ಭಂಡಾರಿ ಬುಕ್ಕನನ್ನು ಕೊಟ್ಟುಕಳುಹಿಸಿದನೆಂದು ಉಕ್ತವಾಗಿದೆ (xiii, ೮೫). ಕ್ರಿ ಶ. ಸುಮಾರು ೧೬ನೆಯ ಶತಮಾನಕ್ಕೆ ಸೇರಿದ "ವಿದ್ಯಾರಣ್ಯ ಕಾಲಜ್ಞಾನ"

---

1. EC. xii, Pavagada, 43.
2. EC, xii, Sira, 60 and Pavagada, 53.
3. ಗಂಡುಗಲಿ ಕುಮಾರರಾಮ, ೧೯೪೩, ಪು. ೨೦, ಅಡಿ ಟಿಪ್ಪಣಿ.
4. ಒಂದು ಪ್ರತಿಯಲ್ಲಿ ನಂಜುಂಡನ ಪದ್ಯವೇ ಕೂಡಿಕೊಂಡು ಶೂಲದ ಹಬ್ಬದಲ್ಲಿ ಭಂಡಾರಿ ಹರಿಹರನು ಇದ್ದನೆಂದು ಹೇಳಿದೆ (ಗಂ. ३, xvii, ೧೪೭).

ಎಂಬ ಗ್ರಂಥದಲ್ಲಿ, ಓರುಗಲ್ಲಿನ ಪ್ರತಾಪರುದ್ರನ ಬಳಿಯಲ್ಲಿ ಕೋಶಾಧಿಕಾರಿಗಳಾಗಿದ್ದ ಹರಿಹರ ಬುಕ್ಕ ಎಂಬ ಸಹೋದರರು, ಆ ಪಟ್ಟಣವು ಮುಸಲ್ಮಾನರ ದಾಳಿಗೊಳಗಾದ ಮೇಲೆ, ರಾಮನಾಥನ ಬಳಿಗೆ ಬಂದು ಕೋಶಾಧಿಕಾರಿಗಳಾಗಿ ನಿಂತರೆಂದೂ, ಆ ರಾಜನೂ ಮುಸಲ್ಮಾನರಿಂದ ಹತನಾದ ಬಳಿಕ, ಡಿಳ್ಳಿಗೆ ಕೈಸೆರೆಯಾಗಿ ಹೋದರೆಂದೂ, ತರುವಾಯ ಇವರೇ ವಿಜಯನಗರದ ಸ್ಥಾಪನೆಗೆ ಕಾರಣರಾದರೆಂದೂ ವರ್ಣಿತವಾಗಿದೆ.[1] ಮುಖ್ಯವಾಗಿ, ಈ ಹೇಳಿಕೆಯನ್ನು ಅವಲಂಬಿಸಿ, ಕುಮಾರರಾಮನ ಸಾಂಗತ್ಯಗಳಲ್ಲಿ ಹೇಳಿರುವ ಭಂಡಾರಿ ಹರಿಹರ ಮತ್ತು ಭಂಡಾರಿ ಬುಕ್ಕರು ಅವರೇ ಎಂದು ಒಪ್ಪಿಕೊಂಡು ಕಂಪಿಲರಾಜ್ಯದ ಅನಂತರ ಇವರಿಂದ ವಿಜಯನಗರ ರಾಜ್ಯ ನಿರ್ಮಾಣವಾಯಿತೆಂದು ಡಾ|| ಎ. ವೆಂಕಟರಮಣಯ್ಯ[2], ಶ್ರೀ. ಎಂ.ಎಚ್. ರಾಮಶರ್ಮ[3], ಶ್ರೀ. ಹುಲ್ಲೂರು ಶ್ರೀನಿವಾಸಜೋಯಿಸರು[4], ಶ್ರೀ. ಎನ್. ದಕ್ಷಿಣಾಮೂರ್ತಿ[5] ಮೊದಲಾದವರು ಅಭಿಪ್ರಾಯಪಡುತ್ತಾರೆ. ಶ್ರೀ. ಆರ್. ಎಸ್. ಪಂಚಮುಖಿಯವರೂ ಈ ಅಭಿಪ್ರಾಯವನ್ನು ಸಮ್ಮತಿಸಿರುತ್ತಾರೆ.[6] ಆದರೆ, ಈ ವಾದವನ್ನು ಡಾ|| ಬಿ. ಎ. ಸಾಲೆತೊರೆ[7], ಶ್ರೀ. ದೇಸಾಯಿಪಾಂಡುರಂಗರಾವ್[8] ಮುಂತಾದವರು ಒಪ್ಪುವುದಿಲ್ಲ. ವಾಸ್ತವವಾಗಿ ವಿಚಾರಿಸಿ ನೋಡಿದರೆ, ಈ ಕನ್ನಡ ಕಾವ್ಯಗಳಲ್ಲಿ ಇವರ ವಿಚಾರ ತಿಳಿದುಬರುವುದು ಅತ್ಯಲ್ಪ. ಇವರ ಹೆಸರಿನೊಂದಿಗೆ ಬಳಸಿರುವ "ಭಂಡಾರಿ" ಎಂಬ ವಿಶೇಷಣವೊಂದನ್ನು ಬಿಟ್ಟರೆ ಹೆಚ್ಚು ಸಂಗತಿಗಳಾವುವೂ ಇಲ್ಲಿ ಕಂಡುಬರುವುದಿಲ್ಲ. "ವಿದ್ಯಾರಣ್ಯ ಕಾಲಜ್ಞಾನ"ದಲ್ಲಿನ ಒಂದೆರಡು ಘಟನೆಗಳಾದರೂ ಕನ್ನಡ ಕವಿಗಳ ಗಮನವನ್ನೂ ಸೆಳೆದಿದ್ದರೆ, ಈ ವ್ಯಕ್ತಿಗಳ ಪರಸ್ಪರ ಸಂಬಂಧವನ್ನಾದರೂ ದೃಢವಾಗಿ ಹೇಳಬಹುದಾಗಿತ್ತು. ಈ ರಚನೆಗಳಲ್ಲಿ ಯಾರೊಬ್ಬರೂ ಇವರನ್ನು ಸಂಗಮನ ಮಕ್ಕಳೆಂದು ಹೇಳದಿರುವುದೇ ಈ ಸಂಬಂಧ ನಿರ್ಣಯಕ್ಕೆ ದೊಡ್ಡ ತೊಡಕಾಗಿದೆ (ಇಬ್ಬನ್ ಬಟೂಟನು ಮಹಮ್ಮದೀಯರಿಗೆ ಕೈಸೆರೆಯಾದ ಹನ್ನೊಂದು ಜನರನ್ನೂ ಕಂಪಿಲನ ಮಕ್ಕಳೆಂದು ಹೇಳಿದರೆ,[9] ನ್ಯೂನಿಜನು ಅಳಿದುಳಿದ ಆರು ಮಂದಿಯಲ್ಲಿ ಕಂಪಿಲನ ಬಂಧುಗಳಾರೂ ಇರಲಿಲ್ಲವೆಂದು ತಿಳಿಸುತ್ತಾನೆ.[10] ಬಾರ್ನಿ ಕನ್ಯಾನಾಯಕನ ಬಂಧುವೊಬ್ಬನು ಈ ರಾಜ್ಯಕ್ರಾಂತಿಗೆ ಕಾರಣನೆನ್ನುತ್ತಾನೆ.[11]) ಇದಲ್ಲದೆ, ಕನ್ನಡ ಮತ್ತು ತೆಲುಗು ಕೃತಿಗಳಲ್ಲಿ ಉಲ್ಲೇಖವಾಗಿರುವಂತೆ ಪ್ರತಾಪರುದ್ರನಿಗೂ ಕುಮಾರರಾಮನ ಮನೆತನಕ್ಕೂ ವೈರವೇ ಕುದಿಯುತ್ತಿರಬೇಕಾದರೆ, ಅಲ್ಲಿನ ಆಸ್ಥಾನದಲ್ಲಿದ್ದವರಿಗೆ ಕಂಪಿಲನ ಆಶ್ರಯ ದೊರೆಯುವ ವಿಷಯವೂ ಸಹ ಚರ್ಚಾಸ್ಪದವಾದುದೇ ಸರಿ. ಈ ಸಮಸ್ಯೆಗಳು ಪರಿಹಾರವಾದದ್ದೇ ಆದರೆ, ವಿಜಯನಗರದ ಸ್ಥಾಪನೆಯಲ್ಲಿ ಈ ವ್ಯಕ್ತಿಗಳ ಪಾತ್ರವೇನು ಎನ್ನುವುದನ್ನು ನಿರ್ಣಯಿಸಲು ಸಾಧ್ಯವಾದೀತು.

**ಭಾವಸಂಗಮ :** ಕುಮಾರರಾಮನ ಭಾವನಾದ ಭಾವಸಂಗಮನೂ, ವಿಜಯನಗರದ ಮೊದಲ ವಂಶೀಯನಾದ ಸಂಗಮನೂ ಒಬ್ಬನೇ ಇರಬಹುದೆಂದು ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರು

---

1. FSVH, Vol. ii, PP. 14–17.
2. EMESI. PP. 181–191 ; JOR, XII, Part I, P. 17–29.
3. QJMS, Supplement, October, 1929. P. 9 ; JBHS, Vol. II, No. 2, P. 208.
4. ಗಂಡುಗಲಿ ಕುಮಾರರಾಮ, ೧೯೪೧, ಪು. ೪೪–೪೫.
5. Founders of Vijayanagar, PP. 57–58 (Thesis for M.A. 1933–34 ; Mysore University).
6. Archeology of Karnatak, PP. 24–25.
7. SPLVE. Vol. I, Intro. P. 33.
8. ಅಪಪ್ರಚಾರಕ್ಕೆ ಆಹುತಿಯಾದ ವಿಜಯನಗರ: ಕರ್ಮವೀರ, ೨೧–೯–೧೯೫೮
9. Foreign Notices of South India, P. 217.
10. A Forgotten Empire, Indian Edition, June 1962, P. 285.
11. Elliot and Dowson, 1953, P. 170.

ಭಾವಿಸಿರುತ್ತಾರೆ.[1] ಈ ಅಭಿಪ್ರಾಯವನ್ನು ಈ ಮೊದಲೇ ಶ್ರೀ. ಎಸ್. ಶ್ರೀಕಂಠಯ್ಯನವರು ನಿರಾಕರಿಸಿ ಈ ಬಗ್ಗೆ ಇರುವ ಸಂದೇಹಗಳನ್ನು ನಮ್ಮ ಮುಂದೆ ಇಟ್ಟಿರುತ್ತಾರೆ. ವಿಜಯನಗರದ ಸಂಗಮನನ್ನು ಎಲ್ಲಿಯೂ ಭಾವಸಂಗಮನೆಂದು ನಿರ್ದೇಶಿಸದೆ ಇರುವುದೂ ಆತನ ಹೆಂಡತಿಯರಲ್ಲಿ ಕುಮಾರರಾಮನ ಸಹೋದರಿಯಾದ ಮಾರಮ್ಮ ಎಂಬಾಕೆಯ ಹೆಸರನ್ನು ಕಾಣದಿರುವುದೂ, ಪ್ರಕೃತ ಭಾವಸಂಗಮನೂ ವಿಜಯನಗರದ ಮೂಲ ಪುರುಷನಾದ ಸಂಗಮನೂ ಒಬ್ಬನೇ ಎಂದು ಹೇಳಲು ಅವಕಾಶವಿಲ್ಲವೆನ್ನುತ್ತಾರೆ.[2] ಮೂರು ಕಾವ್ಯಗಳಲ್ಲಿಯೂ ಹರಿಹರ ಮತ್ತು ಬುಕ್ಕರಂತೆಯೇ ಭಾವಸಂಗಮನ ಹೆಸರನ್ನು ಹೇಳಿರುವುದೊಂದನ್ನು ಬಿಟ್ಟರೆ ಹೆಚ್ಚು ವಿಚಾರಗಳೇನೂ ತಿಳಿದುಬರುವುದಿಲ್ಲ.

ಈವರೆಗೆ ವಿಚಾರಮಾಡಿದ ಪ್ರಮುಖವ್ಯಕ್ತಿಗಳಲ್ಲದೆ, ಕಾವ್ಯಗಳಲ್ಲಿ ಶೂಲದ ಹಬ್ಬ, ಚೆಂಡಾಟ ಮತ್ತು ಇತರ ಸಂದರ್ಭಗಳಲ್ಲಿ, ಹಲವಾರು ನಾಯಕರ ಹೆಸರುಗಳು ಬರುತ್ತವೆ. ಬಹುಶಃ ಅವರಲ್ಲಿ ಕೆಲವರಾದರೂ ನಮ್ಮ ನಾಡಿನ ಪಾಳೆಯಗಾರರ ಪೀಳಿಗೆಗೆ ಸೇರಿರುವಂತೆ ತೋರುತ್ತದೆ. ಕಂಪಿಲನ ಕಾಲಕ್ಕೆ ಸೇರಿದ ಪಾಳೆಯಗಾರರ ಚರಿತ್ರೆಯನ್ನು ಬರೆಯುವವರಿಗೆ ಈ ವಿವರಗಳು ಸಹಾಯಕವಾಗಬಲ್ಲವು. ಸ್ಥಳನಾಮಗಳ ನಿರ್ದೇಶನದಿಂದ ಕಾವ್ಯಕ್ಕೆ ಹೇಗೆ ಪ್ರಾದೇಶಿಕತೆಯುಂಟಾಗಿದೆಯೋ ಹಾಗೆಯೇ ಈ ಅಂಕಿತನಾಮಗಳ ಉಲ್ಲೇಖನದಿಂದ ಕಾವ್ಯಕ್ಕೆ ಐತಿಹಾಸಿಕ ವಾತಾವರಣವು ಲಭಿಸಿದೆ.

ಕೇವಲ ಐತಿಹಾಸಿಕ ದೃಷ್ಟಿಯಿಂದ ನಂಜುಂಡ, ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಗಳ ಕೃತಿಗಳನ್ನು ಬೆಲೆ ಕಟ್ಟಲು ತೊಡಗಿದರೆ, ಯಾವುದೊಂದೂ ಪ್ರಧಾನವಾಗಿ ಪ್ರಮಾಣವಾಗಲಾರದು. ಮುಖ್ಯ ಘಟನೆಗಳು ನಡೆದ ಕಾಲಕ್ಕೂ ಈ ಕಾವ್ಯಗಳು ರಚನೆಯಾದ ಕಾಲಕ್ಕೂ ಅನೇಕ ವರ್ಷಗಳ ಅಂತರವಿರುವುದರಿಂದ ಹೀಗಾಗಿರುವುದು ಸ್ವಾಭಾವಿಕ. ಇದಲ್ಲದೆ, ಕವಿಗಳು ದೈವಾಂಶಸಂಭೂತನಾದ ಕುಮಾರರಾಮನ ಪಾತ್ರವನ್ನು ಚಿತ್ರಿಸಲು ತೊಡಗಿರುವರೇ ಹೊರತು ವಾಸ್ತವಿಕವಾಗಿ ಐತಿಹಾಸಿಕ ವೀರನನ್ನಲ್ಲ. ಆದರೆ, ಒಬ್ಬೊಬ್ಬ ಕವಿಯೂ ಜನಜನಿತವಾದ ಸಂಗತಿಗಳನ್ನು ಸಂಗ್ರಹಿಸಿರುವುದರಿಂದ ಆಯಾ ಕಾಲಕ್ಕನುಗುಣವಾಗಿ ಚರಿತ್ರಾಂಶಗಳು ಹುದುಗಿಕೊಂಡಿವೆ. ನಂಜುಂಡ ಮತ್ತು ಪಾಂಚಾಳ ಗಂಗರಲ್ಲಿ ಸ್ಥೂಲವಾದ ಐತಿಹಾಸಿಕ ಹಿನ್ನೆಲೆಯೊಂದು ನಿರ್ಮಾಣವಾಗಿರುವುದು ವ್ಯಕ್ತವಾಗುತ್ತದೆ. ಮಹಲಿಂಗಸ್ವಾಮಿಯಲ್ಲಿ ಇತಿಹಾಸದ ನೆರಳು ಮಾತ್ರ ಬಿದ್ದಿರುತ್ತದೆ. ಕಂಪಿಲನ ರಾಜ್ಯಭಾರ, ರಾಜ್ಯವಿಸ್ತಾರ, ಶತ್ರುವಿಚಾರ, ಕುಮಾರರಾಮನ ಕೀರ್ತಿ, ಕುಮ್ಮಟದುರ್ಗದ ಇತಿಹಾಸ–ಈ ಅಂಶಗಳಿಗೆ ಸಂಬಂಧಿಸಿದಂತೆ ಸಮಗ್ರವಾದ ಇತರ ಆಧಾರಗಳಾವುದೂ ಇಲ್ಲದಿರುವುದರಿಂದ ಈ ಕಾವ್ಯಗಳು ಚರಿತ್ರಕಾರರಿಗೆ ಉಪಯುಕ್ತವಾಗಬಲ್ಲವು. ವಿಜಯನಗರಕ್ಕೆ ಪೂರ್ವದಲ್ಲಿದ್ದ ಕನ್ನಡ ನಾಡಿನ ರಾಜಕೀಯ ಸ್ಥಿತಿಯ ಪ್ರತಿಬಿಂಬವನ್ನು ಈ ಕೃತಿಗಳಲ್ಲಿ ಕಾಣಬಹುದು. ಚರಿತ್ರಕಾರನು ಐತಿಹ್ಯದಿಂದ ಇತಿಹಾಸದ ಎಳೆಯನ್ನು ಬಿಡಿಸಿ ಸತ್ಯವನ್ನು ಕಂಡುಕೊಳ್ಳಬೇಕಾಗುತ್ತದೆ.

---

1. ಗಂಡುಗಲಿ ಕುಮಾರರಾಮ, ೧೯೪೧, ಪು. ೪೩–೪೪, ೪೬.

2. Sangama married Sarada (Rice, Mys. Ins. 227 ; Ec, V, Bl. 3), Malambika (Ec, x, Gd. 46, Mb. 158), Manambika, Gaurambika, Galambika, Kamambika, Kamayi, Kamakshi.

None of the inscriptions, all of which, except one, which are found in Mysore, refer to Maramma. Likewise, Sangama is called by many names formed from Sangama but never by the appellation of Bhava Sangama (Founders of Vijayanagara, P. 77).

## ಇತಿಹಾಸ ಮತ್ತು ಐತಿಹ್ಯ

ಐತಿಹಾಸಿಕ ವಸ್ತು ಹೇಗೆ ಐತಿಹ್ಯವಾಗಿ ಮಾರ್ಪಡುತ್ತದೆಯೆಂಬುದನ್ನು ಕುಮಾರರಾಮನ ಕೃತಿಗಳಲ್ಲಿನ ಕೆಲವು ನಿದರ್ಶನಗಳ ಮೂಲಕ ತೋರಿಸಿಕೊಡಬಹುದು. ಕುಮಾರರಾಮನ ಕಥೆಯನ್ನು ಕವಿಗಳು ಬಳಸಿಕೊಳ್ಳುವ ಕಾಲಕ್ಕಾಗಲೇ ಅದು ಜನರ ಮನಸ್ಸನ್ನು ಸೆಳೆಯುವ ಒಬ್ಬ ಮಹಿಮಾಪುರುಷನ ಕಥಾನಕವಾಗಿತ್ತೆಂದು ಸ್ಪಷ್ಟವಾಗುತ್ತದೆ. ಆತನನ್ನು ಕುರಿತು ದೊರೆತಿರುವ ಶಾಸನಗಳ ಕಾಲಕ್ಕಾಗಲೇ (ಎಂದರೆ, ಕ್ರಿ.ಶ. ೧೪೦೭ ಮತ್ತು ಕ್ರಿ.ಶ. ೧೫೨೮ರ ವೇಳೆಗಾಗಲೇ) ಅವನು ದೈವಾಂಶಸಂಭೂತನೆಂಬ ಭಾವನೆ ಮೂಡಿರುವುದು ಕಾಣುತ್ತದೆ. ಇದಲ್ಲದೆ, ಕೃಷ್ಣದೇವರಾಯ ಮತ್ತು ಅಚ್ಯುತದೇವರಾಯರ ಸಮಕಾಲೀನನಾದ ನ್ಯೂನಿಜನು ಕಂಪಿಲನನ್ನು ಕುರಿತು "ಜನರು ಈ ಮಹಾರಾಜನನ್ನು ಈಗಲೂ ಒಬ್ಬ ದೇವತೆಯೆಂದು ಪೂಜಿಸುತ್ತಾರೆ" ಎಂದು ಹೇಳಿರುವುದೂ ಅತ್ಯಂತ ಗಮನಾರ್ಹವಾದುದು.[1] ಆತನ ಕಾಲಕ್ಕಾಗಲೆ ಕುಮಾರರಾಮನಿಗೆ ಸಂಬಂಧಿಸಿದ ವೃತ್ತಾಂತಕ್ಕೆ ಈ ಅಸಾಮಾನ್ಯ ಗುಣವು ಸಾಕಷ್ಟು ಮಿಗಿಲಾಗಿ ಕೂಡಿಕೊಂಡಂತಿದೆ. ಇದರ ಜೊತೆಗೆ ಆ ವೇಳೆಗೆ ಈ ಸಂಗತಿಗೆ ಪ್ರಾಶಸ್ತ್ಯ ಬರಲು ಇನ್ನೂ ಒಂದು ಕಾರಣವಿರಬಹುದು. ವಿಜಯನಗರದ ಉಚ್ಛ್ರಾಯ ಕಾಲದಲ್ಲಿ ಅದರ ಹಿಂದಿನ ಇತಿಹಾಸವು ಜನರಿಗೆ ಬಹಳ ಅಚ್ಚುಮೆಚ್ಚಾಗಿ ಪರಿಣಮಿಸಿರಬೇಕು. ಮಹಮ್ಮದೀಯರ ದಾಳಿಯನ್ನು ಪ್ರತಿಭಟಿಸಿದ ಕಂಪಿಲನ ಮನೆತನದ ಕಥೆ, ಆತನು ಸಂಸಾರಸಮೇತನಾಗಿ ಪ್ರಾಣವನ್ನು ಅರ್ಪಿಸಿದ ಘಟನೆ, ಆತನ ಆಸ್ಥಾನದಲ್ಲಿಯೇ ಇದ್ದ ಹರಿಹರ ಬುಕ್ಕರೆಂಬುವರೇ ವಿಜಯನಗರದ ಸ್ಥಾಪನೆಗೆ ಕಾರಣರಾಗಿರಬಹುದೆಂಬ ಭಾವನೆ ("ವಿದ್ಯಾರಣ್ಯಕಾಲಜ್ಞಾನ" "ಪಿತಾಮಹ ಸಂಹಿತೆ"ಗಳು ರಚನೆಯಾದ ಕಾಲವದು) ಇವೇ ಮೊದಲಾದುವು ಕೂಡಿಕೊಂಡು ಈ ವಸ್ತುವಿಗೆ ವಿಶೇಷತೆ ಲಭಿಸಿರಬಹುದು. ಇದರೊಂದಿಗೆ, ಕಂಪಿಲನು ಬೇಡರ ಜಾತಿಯವನೆಂದು ಕಾವ್ಯದಿಂದ ವಿದಿತವಾಗುತ್ತದೆ. ಸಾಹಸ ಸಾಮರ್ಥ್ಯಗಳಿಗೆ ಹೆಸರುವಾಸಿಯಾದ ಈ ಜನಾಂಗದವರಿಗೆ ತಮ್ಮ ನಾಯಕನೊಬ್ಬನು ದೇವರ ಅವತಾರವೆಂಬ ಭಾವನೆ ಈ ವೇಳೆಗೆ ಬೆಳೆದು ಬಂದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಕಂಪಿಲನನ್ನು ಸೋಮೇಶ್ವರನ ವರಪ್ರಸಾದದಿಂದ ಹುಟ್ಟಿದವನೆಂದು ಭಾವಿಸಿದ ಜನತೆಗೆ, ಚಿಕ್ಕ ವಯಸ್ಸಿನಲ್ಲಿಯೇ ತನ್ನ ಬದುಕನ್ನು ನಾಡಿಗಾಗಿ ಧಾರೆಯೆರೆದ ಕುಮಾರರಾಮನನ್ನು ಜಟ್ಟಂಗಿ ರಾಮೇಶ್ವರನ ವರಪುತ್ರನೆಂದು ನಂಬುವುದು ಹೆಚ್ಚಲ್ಲ. ಇವುಗಳ ಜೊತೆಗೇ ರತ್ನಾಜಿಯ ಪ್ರಸಂಗವೊಂದು ಹೊಸೆದುಕೊಂಡು ಕುಮಾರರಾಮನ ವೃತ್ತಾಂತ ಕೇವಲ ಕಥೆಯೋ ಕೌತುಕವೋ ಎನ್ನುವಂತೆ ಪರಿಣಮಿಸಿರುವುದನ್ನು ಕಾಣಬಹುದು. ಹೀಗೆ ಕ್ಷಣಕ್ಷಣಕ್ಕೂ ಕಾಲಿಲ್ಲದೆ ಬೆಳೆಯುವ ಕಥೆಯಲ್ಲಿ ಕೆಲವು ಚರಿತ್ರಾಂಶಗಳು ಹೇಗೆ ಬದಲಾವಣೆಯಾಗಿರಬಹುದು ಎನ್ನುವುದನ್ನು ಇಲ್ಲಿ ಪರಿಶೀಲಿಸಲಾಗಿದೆ.

ಬಾಬಮ್ಮನ ಮದುವೆಯ ವೃತ್ತಾಂತ ನಂಜುಂಡನಲ್ಲಿ ವಿಶಿಷ್ಟ ರೀತಿಯಲ್ಲಿ ಬರುತ್ತದೆ. ಸುಲ್ತಾನನ ಮಗಳು ಕುಮಾರರಾಮನ ರೂಪಕ್ಕೂ ಪ್ರತಾಪಕ್ಕೂ ಮರುಳಾಗಿ ಆತನನ್ನು ಮದುವೆಯಾಗಲು ಅಪೇಕ್ಷಿಸುವಳಷ್ಟೆ. ತಂದೆ ತನ್ನ ಮಗಳ ಇಷ್ಟಾರ್ಥವನ್ನು ನೆರವೇರಿಸುವ ಸಲುವಾಗಿ ಕಂಪಿಲನ ಬಳಿಗೆ ವಜೀರರನ್ನು ಕಳುಹಿಸಿ ತನಗೆ ಸೇರಿದ್ದ ಕೆಲವು ಊರುಗಳನ್ನೂ ಸಹ ಬಳುವಳಿಯಾಗಿ ಕೊಡುವುದಾಗಿ ತಿಳಿಸುವನು. ಕಂಪಿಲನು ಈ ಕೋರಿಕೆಯಲ್ಲಿ ಏನೋ ಒಳಸಂಚು ಇರಬೇಕೆಂದು ಎಣಿಸಿ, ನಿರಾಕರಿಸುವನು. ಇದು ಸುಲ್ತಾನನ ಆಗ್ರಹವನ್ನು ಕೆರಳಿಸುವುದು. ಮುಂದೆ ವಿರಸಕ್ಕೂ ಕಾರಣವಾಯಿತೆಂದು ಕಾವ್ಯದಲ್ಲಿ ಬರುತ್ತದೆ. ಹಿಂದೂ ಮುಸ್ಲಿಮರು ಪರಸ್ಪರ ವೈಷಮ್ಯವನ್ನು ಮಸೆಯುತ್ತಿರುವ ಆ ಕಾಲದಲ್ಲಿ ಹೀಗೆ ವಿಶ್ವಾಸಪೂರ್ವಕವಾಗಿ ಸಂಬಂಧ

---

1. A Forgotten Empire, R. Sewell, Indian Edition, 1962, p. 83.

ವನ್ನು ಬೆಳಸುವ ಅಪೇಕ್ಷೆಯೇ ಅಸಂಭವವೆನ್ನಿಸುತ್ತದೆ. ಇದಲ್ಲದೆ, ಕುಮಾರರಾಮನ ಕಾಲಕ್ಕೆ ಡಿಳ್ಳಿಯ ಸುಲ್ತಾನನಾಗಿದ್ದ ಮುಹಮ್ಮದ್ ಬಿನ್ ತೊಗಲಕನಿಗೆ ಸಂತತಿಯೇ ಇಲ್ಲವೆಂದ ಮೇಲೆ ಮಗಳನ್ನು ಕೊಟ್ಟು ಮದುವೆ ಮಾಡುವ ಪ್ರಸಂಗವಾದರೂ ಎಲ್ಲಿಯದು ಎಂದು ಡಾ|| ಎನ್. ವೆಂಕಟರಮಣಯ್ಯನವರು ಈ ಸಂಗತಿಯನ್ನು ಖಂಡಿಸಿರುತ್ತಾರೆ.[1] ಈ ವಿಷಯಗಳು ಹೇಗಾದರೂ ಇರಲಿ. ಈ ನಿರೂಪಣೆಯನ್ನು ನಾವು ಬೇರೊಂದು ದೃಷ್ಟಿಯಿಂದ ವಿಚಾರಮಾಡಬೇಕಾಗುತ್ತದೆ. ಇದು ಕುಮಾರರಾಮನ ಸಾಹಸಾದಿಗಳು ಡಿಳ್ಳಿಯವರೆಗೂ ವ್ಯಾಪಿಸಿ ಶತ್ರುಗಳ ಮನಸ್ಸನ್ನೂ ಸೆಳೆಯಿತು ಎನ್ನುವುದರ ಸಂಕೇತವಿರಬಹುದು. ಇಲ್ಲವೇ ಅನುರಾಗವು ಜಾತಿ ಮತಗಳನ್ನು ಮೀರಿದ್ದು ಎಂಬ ಭಾವನೆಯನ್ನು ಪ್ರತಿಪಾದಿಸುವುದೇ ಇದರ ಉದ್ದೇಶವಿರಬಹುದು. ಸುಲ್ತಾನನ ಮಗಳು ಮೇಲುಕೋಟೆಯ ಚೆಲುವರಾಯಸ್ವಾಮಿಯನ್ನು ಮೆಚ್ಚಿ ಮದುವೆಯಾದಳೆಂದು ಚಿತ್ರಿಸುವ "ವರನಂದೀ ಕಲ್ಯಾಣ" ದ ಕಥೆಯಂತೆಯೇ ಇದೂ ಒಂದು ಪ್ರಯತ್ನವಿರಬಹುದು. ಅಲ್ಲಾವುದ್ದೀನನ ಕಾಲದಲ್ಲಿಯೇ ಕ್ರಿ. ಶ. ಸುಮಾರು ೧೩೧೧ ರಲ್ಲಿ ಮಲ್ಲಿಕ್‌ಕಾಫರನು ಕುಮ್ಮಟವನ್ನು ಮುತ್ತಿ, ಒಂದು ವಾರದ ಕಾಲ ಇದ್ದು, ಕಾರಣಾಂತರದಿಂದ ಹಿಂದಿರುಗಿದನೆಂದು ಇಸಾಮಿಯ ಮೂಲಕ ತಿಳಿದು ಬರುತ್ತದೆ[2] ಈ ಸಂದರ್ಭವೇ ಬಣ್ಣ ಬದಲಾಯಿಸಿ ಈ ರೀತಿ ಸ್ನೇಹಸೂಚಕವಾದ ಪ್ರಯತ್ನದಂತೆ ವರ್ಣಿತವಾಗಿರಬಹುದು. ಹೀಗೆಯೇ, ಕಂಪಿಲನನ್ನು ಸಾಮೋಪಾಯದಿಂದಲೇ ಒಲಿಸಿಕೊಳ್ಳುವುದಕ್ಕೆ ಮಾಡಿರಬಹುದಾದ ಯಾವುದೋ ಒಂದು ಸನ್ನಾಹವೇ ಗಂಗನ ಕೆಲವು ಪ್ರತಿಗಳಲ್ಲಿ ಪಾದುಕೆಯ ಪ್ರಸಂಗದಂತೆ ಪರಿವರ್ತನೆಯಾಗಿರಬಹುದು. ಈ ಘಟನೆಗಳು ಬಾದೂರನ ಪ್ರಕರಣಕ್ಕೆ ಮುಂಚೆಯೇ ಬರುವುದರಿಂದ ಹೀಗೆ ಊಹಿಸಲು ಸಾಧ್ಯವಿದೆ.

ಓರುಗಲ್ಲಿನ ಯುದ್ಧಕ್ಕೆ ಗಂಗನಲ್ಲಿಯೂ ಮಹಲಿಂಗಸ್ವಾಮಿಯಲ್ಲಿಯೂ ಕೊಟ್ಟಿರುವ ಕಾರಣ ಸ್ವಲ್ಪ ವಿಚಿತ್ರವೆನ್ನಿಸುವುದುಂಟು. ಪ್ರತಾಪರುದ್ರನ ಬಳಿಯಲ್ಲಿದ್ದ ಬೊಲ್ಲನೆಂಬ ಕುದುರೆಯನ್ನು ಅಪಹರಿಸುವ ಸಲುವಾಗಿ ಓರುಗಲ್ಲಿನ ಮೇಲೆ ಕುಮಾರರಾಮನು ದಂಡೆತ್ತಿ ಹೋದನೆಂದು ಹೇಳಿದೆ. ಈ ಗಾಳಿ ನಂಜುಂಡನ ಕೃತಿಯ ಮೇಲೂ ಬೀಸದೆ ಇಲ್ಲ. ಅಲ್ಲಿ ಜಾಯಿಲಗಳ ಸಲುವಾಗಿ ಹುಳಿಯೇರಿನ ಮೇಲೆ ದಂಡೆತ್ತಿ ಹೋದನೆಂಬುದಾಗಿ ಬರುತ್ತದೆ. ಈ ಕಾರಣಗಳನ್ನು ಐತಿಹಾಸಿಕವೆಂದು ಭಾವಿಸಲಾಗದಿದ್ದರೂ, ಇವುಗಳ ಮುಖ್ಯೋದ್ದೇಶವೇನು ಎನ್ನುವುದನ್ನು ಗ್ರಹಿಸಬಹುದು. ಕುಮಾರರಾಮನಂಥ ಗಂಡುಗಲಿಗೆ, ತನ್ನ ಸಾಹಸ ಚಾತುರ್ಯಗಳಿಂದ ಗಳಿಸಿದ ಕುದುರೆಯೇ ಹೆಚ್ಚು. ಆದ್ದರಿಂದ, ಅಸಾಧ್ಯವಾದ ವಸ್ತುವನ್ನು ತಾನಾಗಿ ಪಂಥ ತೊಟ್ಟು, ಹೋರಾಡಿ ಗೆದ್ದು ತರುವುದು ಅವನ ಬಾಹುಬಲಕ್ಕೆ ಒಂದು ಭೂಷಣ. ಈ ಉದ್ದೇಶಸಾಧನೆಗಾಗಿಯೇ ಕಾವ್ಯದಲ್ಲಿ ಬೊಲ್ಲನ ಪ್ರಸಂಗವನ್ನು ನಿರೂಪಿಸಿದೆಯೆಂಬುದಾಗಿ ಹೇಳಬಹುದು. ಕುಮಾರರಾಮನು ಕುದುರೆಯನ್ನು ಪಡೆಯುವ ವಿಧಾನ ನಂಜುಂಡನಲ್ಲಿಯೂ ಸಾಹಸದ ಪ್ರತೀಕವಾಗಿಯೇ ಬಂದಿದೆ. ಆತನು ಗೋವೆಯ ವರ್ತಕರ ಬಳಿಯಲ್ಲಿದ್ದ, ಯಾರಿಗೂ ಸಗ್ಗದ ಒಂದು ಕುದುರೆಯನ್ನು ಪಳಗಿಸಿದನೆಂದು ತಿಳಿದುಬರುತ್ತದೆ. ಪಾಂಚಾಳ ಗಂಗನೂ ಮಹಲಿಂಗಸ್ವಾಮಿಯೂ ಈ ಅಭಿಪ್ರಾಯವನ್ನೇ ಸ್ವಲ್ಪ ಮಾರ್ಪಡಿಸಿ, ಮುಂಗುಲಿರಾಯನ ಬಳಿಯಲ್ಲಿದ್ದ ಬೊಲ್ಲನನ್ನು ಸುಲ್ತಾನನೂ ಸಹ ಇಟ್ಟುಕೊಳ್ಳದೆ ಹೋಗಲು, ಅದನ್ನು ಯಪ್ಪತ್ತುರಾಯನು ತಂದು ಸಾಕತೊಡಗಿದನೆಂದೂ, ಅನಂತರ ಅದು ಕುಮಾರರಾಮನಿಗೆ ಸ್ವಲಭಿಸಿತೆಂದೂ ಹೇಳಿರುತ್ತಾರೆ. ಪಾಶ್ಚಾತ್ಯ ದೇಶಗಳ "ವೀರ ಕಾವ್ಯ" ವನ್ನು ಕುರಿತು ಸಿ.ಎಂ. ಬೌರಾ

1. ಕುಮಾರರಾಮುನಿ ಕಥ, ಉಪೋದ್ಘಾತಮು, ಪು. xxiv.
2. FSVH. Vol. iii, PP. 1-2.

ಅವರು ಬರೆದಿರುವ ಕೆಲವು ಮಾತುಗಳು ಇಂಥ ಘಟನೆಯೊಂದರ ಮಹತ್ವವನ್ನು ನಮಗೆ ಮತ್ತಷ್ಟು ವಿಶದ ಮಾಡಿಕೊಡಬಲ್ಲವು :—

> "ವೀರನ ದೋಣಿಗಿಂತಲೂ ಪ್ರಮುಖವಾದದ್ದು, ಪ್ರಾಯಶಃ ಆತನ ಕವಚಕ್ಕಿಂತಲೂ ಮುಖ್ಯವಾದದ್ದೆಂದರೆ ಆತನ ಕುದುರೆ. ಬೇರಾವ ಪ್ರಾಣಿಯೂ ಅದರಷ್ಟು ತಾಂತ್ರಿಕ ಅಥವಾ ನಿರ್ದಿಷ್ಟ ಜ್ಞಾನದತ್ತ ಗಮನ ಸೆಳೆಯುವುದಿಲ್ಲ. ಇಲ್ಲವೇ ಅಷ್ಟು ಗಾಢವಾದ ಒಲವನ್ನೂ ಮೆಚ್ಚುಗೆಯನ್ನೂ ಉಂಟುಮಾಡುವುದಿಲ್ಲ. ವೀರಕಥಾನಕಗಳನ್ನು ಬರೆಯುವ ಕವಿಗಳು ಕುದುರೆಗಳ ವಿಷಯವನ್ನು ಬಲ್ಲರು. ಮತ್ತು ಪರಿಣತರಿಗೆ ತಕ್ಕಂತೆ ಅವುಗಳನ್ನು ಮೆಚ್ಚಿ ವ್ಯಾಸಂಗಮಾಡುತ್ತಾರೆ. ಸಾಹಸ ಸ್ವಭಾವವುಳ್ಳ ಸಮಾಜಗಳಲ್ಲಿ ಕುದುರೆಗೆ ಒಂದಕ್ಕಿಂತಲೂ ಹೆಚ್ಚಾದ ಕೆಲಸವುಂಟು. ಮೊಟ್ಟಮೊದಲನೆಯದಾಗಿ ಅದು ಒಂದು ನಿಧಿ. ಒಬ್ಬ ಮನುಷ್ಯನ ಬಳಿಯಲ್ಲಿರುವ ಜಾತ್ಯಶ್ವಗಳ ಸಂಖ್ಯೆಗೆ ಅನುಗುಣವಾಗಿ ಆತನನ್ನು ಗೌರವಿಸುವುದುಂಟು. ಆದ್ದರಿಂದ ಆತನಿಗೆ ಅದೊಂದು ಹೆಮ್ಮೆಯೇ ಸರಿ. ಕುದುರೆ ಸವಾರಿಯನ್ನು ಇನ್ನೂ ಗೌರವಾರ್ಹವಾದ ಕೆಲಸವೆಂದು ಭಾವಿಸಿದ್ದೇ ಆದರೆ, ಸೂರೆ ಮಾಡುವ ವಸ್ತುಗಳಲ್ಲಿ ಕುದುರೆಗಳಿಗೆ ಅಗ್ರಸ್ಥಾನ ಸಲ್ಲುತ್ತವೆ. ಎರಡನೆಯದಾಗಿ, ಯುದ್ಧದಲ್ಲಿ ಕುದುರೆ ಬಹು ಅಮೂಲ್ಯವಾದದ್ದು ; ಅದು ವೀರನ ಅತ್ಯಂತ ಆಪ್ತಸ್ನೇಹಿತ. ಅನೇಕ ವೇಳೆ ಆತನನ್ನು ವಿಷಮ ಸಂದರ್ಭಗಳಿಂದ ಪಾರು ಮಾಡಿ ಆತನ ಶತ್ರುಗಳನ್ನು ಜಯಿಸಲು ಹೇಳಲಸಾಧ್ಯವಾದ ಸೇವೆ ಸಲ್ಲಿಸುತ್ತದೆ."[1]

ಇದಕ್ಕೆ ಉದಾಹರಣೆಯಾಗಿ "ಅಬುಜೆಯ್ಡ್" (Abuzeyd) ಎಂಬುವನ ಸಾಹಸವನ್ನು ಚಿತ್ರಿಸುವ "ಅಶ್ವಾಪಹಾರ" (The stealing of a Mare) ಎಂಬ ಕೃತಿಯನ್ನು ಕುರಿತ ಅವರ ವಿಮರ್ಶೆಯನ್ನು ಗಮನಿಸಬಹುದು :—

> "ಆತನೊಬ್ಬ ಅಜೇಯನಾದ ಕ್ರಿಯಾಶಾಲಿ. ಯಾರೂ ಅವನನ್ನು ಬಹಿರಂಗವಾಗಿ ಯುದ್ಧದಲ್ಲಿ ಎದುರಿಸಲಾರರು. ಈ ಕೆಲಸಕ್ಕೆ, ಎಂದರೆ ಸುರಕ್ಷಿತವಾಗಿ ಕಾವಲಿಟ್ಟಿದ್ದ ಕುದುರೆಯನ್ನು ಅಪಹರಿಸುವುದಕ್ಕೆ ಚಾತುರ್ಯವೊಂದೇ ಸಾಧ್ಯವಾದ ಮಾರ್ಗ- ಅದನ್ನು ನಿರ್ವಹಿಸುವುದು ಅತ್ಯಂತ ಅಪಾಯಕಾರಿಯಾದುದರಿಂದ ಅದು ಉಚಿತವೂ ಆಗಿತ್ತು. ಒಂದು ವೇಳೆ ತಿಳಿದಿದ್ದೇ ಆದರೆ ಸಾವು ಖಂಡಿತ. ಅಬುಜೆಯ್ದನು ತಾನು ಯುದ್ಧರಂಗದಲ್ಲಿ ಪ್ರದರ್ಶಿಸಿದಂತೆಯೇ ಅತ್ಯಂತ ಧೈರ್ಯೋತ್ಸಾಹದಿಂದಲೂ ಸಾಹಸಪ್ರಿಯತೆಯಿಂದಲೂ ತಂತ್ರಕ್ಕೆ

---

1. More important than a hero's boat and perhaps more important even than his armour, is his horse. No animal invites so technical or so discriminating a knowledge or excites a stronger affection and admiration. Heroic poets know about horses and study them with professional appreciation. In heroic societies the horse has more than one function. It is in the first place an article of wealth. A man is known by the quantity and quality of his horses and is naturally proud of them. If raiding is still an honourable pursuit horses are among the first objects of loot. In the second place, the horse is invaluable in war–the heroe's most trusted friend, which may often save him in dangerous situations and provide inestimable service in overcoming his enemies (Heroic Poetry : Chapter IV, p. 157).

> ಕೈಹಾಕುತ್ತಾನೆ ಮತ್ತು ಉನ್ನತವಾದ ಆತನ ಮೋಸಗಾರಿಕೆಯೂ ಸಹ ಕೇವಲ ಆತನ ಪೌರುಷದ ಪರಾಕಾಷ್ಠೆಯ ಮತ್ತೊಂದು ನಿದರ್ಶನವೇ ಸರಿ."[1]

ಈ ಹಿನ್ನೆಲೆಯಲ್ಲಿ ಪರಿಶೀಲಿಸಿದರೆ, ಶತ್ರುವನ್ನು ರಣರಂಗದಲ್ಲಿ ಪ್ರತ್ಯಕ್ಷವಾಗಿ ಎದುರಿಸಿ ಬೊಲ್ಲನನ್ನು ಸ್ವಾಧೀನಪಡಿಸಿಕೊಂಡ ಕುಮಾರರಾಮನ ಸಾಹಸವೆಷ್ಟು ಎಂಬುದು ವಿದಿತವಾಗುತ್ತದೆ. ಕಥೆಗಳಲ್ಲಿಯೂ ಜನಪದ ಸಾಹಿತ್ಯದಲ್ಲಿಯೂ ಈ ಘಟನೆಗೆ ದೊರೆತಿರುವ ಮನ್ನಣೆ ಎಷ್ಟು ಉಚಿತವೆಂದು ಸ್ಪಷ್ಟವಾಗುತ್ತದೆ.

ಈ ಬೊಲ್ಲನ ಘಟನೆಯೊಂದಿಗೆ ಪಾಂಚಾಳ ಗಂಗನಲ್ಲಿಯೂ, ಮಹಲಿಂಗಸ್ವಾಮಿಯಲ್ಲಿಯೂ ಬರುವ ಗುಂಡುಬ್ರಹ್ಮಯ್ಯನ ವೃತ್ತಾಂತ ಮತ್ತೊಂದು ಐತಿಹ್ಯದ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತದೆ. ಕುಮಾರರಾಮನು ಓರುಗಲ್ಲಿಗೆ ತೆರಳುವ ದಾರಿಯಲ್ಲಿ ಗುಂಡುಬ್ರಹ್ಮಯ್ಯನ ದೇವಾಲಯದಲ್ಲಿ ತಂಗಿದ್ದು, ಆ ಶಿವಶರಣನ ಅನುಗ್ರಹವನ್ನು ಪಡೆದು ತನ್ನ ಕೆಲಸದಲ್ಲಿ ಜಯಶೀಲನಾಗುತ್ತಾನೆ. ಅನಂತರ ಆ ದೇವರಿಗೆ ತನ್ನ ಹರಕೆಯನ್ನೂ ಸಲ್ಲಿಸುತ್ತಾನೆ. ಈ ಗುಂಡುಬ್ರಹ್ಮಯ್ಯನ ಮಹಿಮೆಯ ಕಥೆ ಈ ವೇಳೆಗಾಗಲೆ ಎಷ್ಟು ಪ್ರಿಯವಾಗಿತ್ತೋ ಏನೋ! ಈತನು ಒಬ್ಬ ಶಿವಭಕ್ತನೆಂದೂ ಈತನ ಪರೀಕ್ಷಾರ್ಥವಾಗಿ ಈಶ್ವರನೂ ನಾರದನೂ ವೇಷಮರೆಸಿಕೊಂಡು, ಗಣಪತಿರಾಯನ ಅರಮನೆಯಲ್ಲಿ ಕಳ್ಳತನಮಾಡಿ ತಮ್ಮ ಭಕ್ತನನ್ನು ಮರೆಹೊಕ್ಕರೆಂದೂ ಆಗ ಗುಂಡುಬ್ರಹ್ಮಯ್ಯನು ಆಶ್ರಿತರನ್ನು ಬಿಟ್ಟುಕೊಡದೆ ತಾನೇ ಶೂಲಕ್ಕೆ ಏರಿದನೆಂದೂ ಪ್ರತೀತಿ.[2] ಕಳ್ಳತನದಿಂದಲೋ ಕಲಿತನದಿಂದಲೋ ಕುದುರೆಯನ್ನು ತರಲು ಹೊರಟ ಕುಮಾರರಾಮನು ಈ ಶಿವಭಕ್ತನ ಅನುಗ್ರಹವನ್ನು ಕೋರಿದನೆಂದು ಸೂಚಿಸುವುದು ಕಥೆಗೆ ಹೊಂದಿಕೊಂಡು ಬಂದಿದೆ.

ವೀರರುದ್ರನನ್ನು ಕುರಿತು ನಂಜುಂಡನು ಒಂದು ಕಡೆ "ಅಯೋನಿ ಸಂಭೂತ(xv, ೯)"ನೆಂದೂ, ಇನ್ನೊಂದು ಕಡೆ "ಕುಂಬಳಕಾಯನೊಡೆದು ಹುಟ್ಟಿದ ರಾಯ(xvii, ೧೧೮)" ಎಂದೂ ಕರೆದಿರುತ್ತಾನೆ.

---

1. He is a formidable man of action, whom no one can withstand in open fight but for this particular task, the theft of a carefully guarded mare, craft is the only possible means, and justifiable because the undertaking is extremely hazardous, and discovery means death. Abuzeyd enters into his plot with all the bold spirit and love of adventure which he shows on the battlefield and the high level of his cunning is merely another example of his heroic superiority (Heroic Poetry: Chapter III, P. 101).

2. ಕನ್ನಡದಲ್ಲಿ "ಗುಂಡುಬ್ರಹ್ಮಯ್ಯಗಳ ಸುಳ್ವಿ" ಎಂಬ ಒಂದು ಕೃತಿ ತ್ರಿಪದಿಯಲ್ಲಿ ರಚಿತವಾಗಿದೆ. ಇದರ ಹಸ್ತಪ್ರತಿಗಳು ಮೈಸೂರು (ಕೆ. ಬಿ. ೩೫೧) ಮತ್ತು ಮದರಾಸಿನ (D. 716-D. 719, DCKM, Vol. iv, PP. 1040-1044) ಪ್ರಾಚ್ಯ ಪುಸ್ತಕ ಭಂಡಾರಗಳಲ್ಲಿವೆ.

ಟಿಪ್ಪಣಿ: ಈತನನ್ನು ಗುಂಡಬ್ರಹ್ಮಯ್ಯ ಗುಂಡಬೊಮ್ಮಯ್ಯ ಎಂಬುದಾಗಿಯೂ ಕರೆದಿರುವುದುಂಟು. ಪದ್ಮಣಾಂಕನ "ಪದ್ಮರಾಜಪುರಾಣ" (xiii ೯), ವಿರೂಪಾಕ್ಷ ಪಂಡಿತನ "ಚೆನ್ನಬಸವಪುರಾಣ" (lvii, ೨೭), ದೇವ ಕವಿಯ "ಮರುಳಸಿದ್ಧ ಕಾವ್ಯ" (i, ೧; iv, ೪೦)ಗಳಲ್ಲಿ ಈತನ ವಿಚಾರವು ಪ್ರಾಸಂಗಿಕವಾಗಿ ಬರುತ್ತದೆ. "ಚೆನ್ನ ಬಸವಪುರಾಣದಲ್ಲಿ" ಬಿಜ್ಜಳನನ್ನು ಸಂಹರಿಸಿದ ಶರಣರೇ ಗುಂಡಯ್ಯ ಬೊಮ್ಮಯ್ಯಗಳಾಗಿ ಜನಿಸಿ, ಪ್ರಾಯಶ್ಚಿತ್ತಾರ್ಥ ವಾಗಿ ಶೂಲಕ್ಕೇರಿ ಮಹಿಮಾನ್ವಿತರಾದರೆಂದು ನಿರೂಪಿಸಿದೆ (lxii, ೨೬-೨೭). "ಮರುಳಸಿದ್ಧ ಕಾವ್ಯ"ದಲ್ಲಿಯೂ ಗುಂಡಯ್ಯ, ಬೊಮ್ಮಯ್ಯ ಎಂಬ ಎರಡು ಹೆಸರುಗಳಿರುವುದೂ ಉಂಟು (iv, ೪೦). "ಗುಂಡುಬ್ರಹ್ಮಯ್ಯಗಳ ಸುಳ್ವಿ", ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಗಳ ಕೃತಿಗಳಲ್ಲಿ ಈ ಹೆಸರು ಒಬ್ಬನನ್ನೇ ಕುರಿತುದಾಗಿದೆ. ಈತನ ಕಥೆಯಲ್ಲಿ ಬರುವ ಕಾಕತೀಯ ಗಣಪತಿರಾಯನ ಕಾಲವನ್ನು ಅವಲಂಬಿಸಿ (ಕ್ರಿ.ಶ. ೧೧೯೮-೧೨೬೨) ಈ ಶಿವಭಕ್ತನು ಆ ಮಹಾರಾಜನ ಸಮಕಾಲೀನನಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. (ಗಿರಿಜಾಕಲ್ಯಾಣ ಮಹಾಪ್ರಬಂಧ (ಸಂಗ್ರಹ), ಪೀಠಿಕೆ, ಪು. xi, ೧೯೫೩; ಸಂ. ಶ್ರೀ. ಎಚ್. ದೇವೀರಪ್ಪ, ಎಂ.ಎ. ಮತ್ತು ಶ್ರೀ. ಡಿ. ಜವರೇಗೌಡ, ಎಂ.ಎ.)

ಗಂಗನ ಕೆಲವು ಪ್ರತಿಗಳಲ್ಲಿಯೂ (ಗಂ. ೩, ix, ೧೧೦ ; ಗಂ. ೫, v, ೫೦) ಈ ಅಭಿಪ್ರಾಯ ಕಂಡುಬರುತ್ತದೆ. ಕಾಕತೀಯರನ್ನು ಕುರಿತು ತೆಲುಗಿನಲ್ಲಿ ಪ್ರಚಾರದಲ್ಲಿರುವ ಒಂದು ಕಥೆಯನ್ನೇ ಕನ್ನಡ ಕವಿಗಳು ಇಲ್ಲಿ ಬಳಸಿಕೊಂಡಿರುತ್ತಾರೆ.[1]

ಬಾದೂರನ ಪ್ರಸಂಗ ಎಂಥ ಮುಖ್ಯವಾದ ಐತಿಹಾಸಿಕ ಘಟನೆಯೆನ್ನುವುದನ್ನು ಅರಿತಿರುತ್ತೇವೆ. ಇಂಥ ಸಂದರ್ಭವನ್ನು ನಂಜುಂಡನು ಒಂದು ಐತಿಹ್ಯದಂತೆ ಚಿತ್ರಿಸಿರುತ್ತಾನೆ. ಮುಂಗುಲಿರಾಯನು ಕೊಟ್ಟು ಕಳುಹಿಸಿದ್ದ ಬಿಲ್ಲನ್ನು ಹೆದೆಯೇರಿಸಿದುದೇ ಅವನ ಪಾಲಿಗೆ ಪಾಶವಾಗುತ್ತದೆ. ಮಲ್ಲುಕರ ಅಸೂಯೆಯಿಂದ ವಂಚಿತನಾಗುತ್ತಾನೆ. ತಾನಾಗಿಯೇ ದೇಶಭ್ರಷ್ಟನಾಗಬೇಕಾಗುತ್ತದೆ. ಉಳಿದಿಬ್ಬರು ಕವಿಗಳಲ್ಲಿ ಬಹುಮಟ್ಟಿಗೆ ನೈಜವಾಗಿ ವರ್ಣಿತವಾಗಿರುವ ಈ ಸನ್ನಿವೇಶ ನಂಜುಂಡನಲ್ಲಿ ಪೌರಾಣಿಕ ವೃತ್ತಾಂತವೋ ಎನ್ನುವಂತಿದೆ. ಕವಿ ಈ ಸಂದರ್ಭದಲ್ಲಿ ಬಳಸಿರುವ ಉಪಮಾನಗಳನ್ನೂ, ಅನುಸರಿಸಿರುವ ಕಥಾಸಂವಿಧಾನವನ್ನೂ ಗಮನಿಸಿದರೆ ಆತನು ಅಜ್ಞಾತವೇಷದಲ್ಲಿದ್ದ ಅರ್ಜುನನು ಮತ್ಸ್ಯಯಂತ್ರಕ್ಕೆ ಹೆದೆಯೇರಿಸಿದ ಘಟನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಇದನ್ನು ಬರೆದಿರುವಂತೆ ವ್ಯಕ್ತವಾಗುತ್ತದೆ.

ಕುಮಾರರಾಮನ ಕಥೆಯಲ್ಲಿ ಪ್ರಬಲವಾದ ಪಾತ್ರವಹಿಸಿರುವ ಅವತಾರದ ಕಲ್ಪನೆ ಒಟ್ಟು ಕೃತಿಯನ್ನೇ ಒಂದು ಐತಿಹ್ಯವನ್ನಾಗಿ ಮಾಡಿದೆ. ಈ ಮಾರ್ಪಾಟಿನ ಭರದಲ್ಲಿ ಕುಮಾರರಾಮನಿಗೆ ಮಾತ್ರವಲ್ಲದೆ ಇತರರಿಗೂ ಈ ದೈವಾಂಶದ ಕಲ್ಪನೆ ವ್ಯಾಪಿಸಿರುವುದನ್ನು ಕಾಣುತ್ತೇವೆ. ಈ ಮೊದಲೇ ತಿಳಿಸಿರುವಂತೆ ಈ ಅವತಾರದ ಭಾವನೆ ಗಂಗನಿಗಿಂತಲೂ ನಂಜುಂಡನಲ್ಲಿ ತುಂಬ ವಿಸ್ತಾರವಾಗಿಯೂ ಗಾಢವಾಗಿಯೂ ಚಿತ್ರಿತವಾಗಿದೆ. ಮಹಲಿಂಗಸ್ವಾಮಿಯಲ್ಲಿ ಹೊಸದೊಂದು ಮಾರ್ಗವನ್ನೇ ಹಿಡಿದಿದೆ. ಕುಮಾರರಾಮನನ್ನು ಕುರಿತು ಈ ಅವತಾರದ ಕಲ್ಪನೆ ಹೇಗೆ ಉದಯವಾಯಿತು ಎಂದು ನಿರ್ಣಯಿಸಿ ಹೇಳಲು ಇಂದು ಯಾವ ಪ್ರಮಾಣವೂ ಇಲ್ಲ. ಆತನನ್ನು ಪರದಾರ ಸೋದರತ್ವದ ಪ್ರತೀಕವೆಂದು ಎಂದಿನಿಂದ ಭಾವಿಸತೊಡಗಿದರೋ ಅಂದಿನಿಂದಲೇ ಈ ಮಾಹಾತ್ಮ್ಯ ಮೊದಲಾಗಿರಬೇಕೆಂದು ತೋರುತ್ತದೆ. ಅಂತೂ, ಈ ಅವತಾರ ಕಲ್ಪನೆಯ ಪಾತ್ರ ಬರಬರುತ್ತ ಹಿರಿದಾಗಿ ಬೆಳೆದು, ಮಾನವನಾಗಿದ್ದ ಕುಮಾರರಾಮನು ಮಹಿಮಾಪುರುಷನಾಗಿದ್ದಾನೆ; ಒಂದು ಜನಾಂಗದ ಆರಾಧ್ಯದೇವತೆಯೂ ಆಗಿದ್ದಾನೆ. ಕುಮ್ಮಟದುರ್ಗದಲ್ಲಿ ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯೂ[2] ಉತ್ತರ ಕರ್ನಾಟಕದಲ್ಲಿ ಸಿದ್ದಾಪುರ ತಾಲ್ಲೂಕಿನ ಬೆದಕರಣಿ ಎಂಬಲ್ಲಿಯೂ[3] ತುಮಕೂರು ಜಿಲ್ಲೆ ಕೊರಟಗಿರಿ ತಾಲ್ಲೂಕಿನ ದೊಡ್ಡಪಾಲನ ಹಳ್ಳಿಯಲ್ಲಿಯೂ[4] ಕುಮಾರರಾಮನ ಗುಡಿಯಿರುವುದು ಈತನ ಬಗ್ಗೆ ಜನರಿಗಿರುವ ಭಕ್ತಿಯನ್ನು ಪ್ರಕಟಪಡಿಸುತ್ತವೆ. ಸಂಗೂರು ಮತ್ತು ರಾಮಘಡದ ಶಿಲಾಶಾಸನಗಳೂ ಸಹ ಇದಕ್ಕೆ ಸಾಕ್ಷಿಗಳಾಗಿವೆ.

---

1. "....మఱి కూష్మాండవల్లరినుండి కాకతీయలుద్భవించిరను శాసనభాగమును పరిశీలింపనది స్థానికగాథల పైనాధారపడియున్నట్లు తోఁచుచున్నది. మాధవవర్మ కుమారుడు పద్మసేనుడు సంతానంబులేమి బుధానుమతంబున సిద్ధేశ్వర శ్రీమన్మహాదేవుని నిత్యంబునుగూష్మాండఫలంబుల బూజింపదత్ప్రసాదంబుననొక్క సుతుడుగలిగెనని ప్రతాపచరితాదులగలదు. ఇదియే కూష్మాండవల్లరీగాథకు మూలమని తోఁచును ...."

(ప్రతాప చరిత్రము : శ్రీ. కే. రాఘవాచార్యులగారు ; కాకతీయ సంచిక, పు. ౨౫౨.)

2. ಈ ಜಾತ್ರೆ ವೈಶಾಖ ಶುಕ್ಲ ಪೂರ್ಣಿಮೆಯಂದು ನಡೆಯುವುದಾಗಿ ತಿಳಿದುಬರುತ್ತದೆ : QJMS, Vol. xx, No. 4, P. 268.

3. ಈ ಸಂಗತಿಯನ್ನು ನನಗೆ ತಿಳಿಸಿದ ಶ್ರೀ. ಎ. ಎಮ್. ಅಣ್ಣಿಗೇರಿ, ಎಂ. ಎ., ಅವರಿಗೆ ನಾನು ಕೃತಜ್ಞನಾಗಿದ್ದೇನೆ.

4. ಗಂಡುಗಲಿ ಕುಮಾರರಾಮ, ೧೯೫೫, ಪು. ೧೩೩.

ದೈವಾಂಶ ಪ್ರಧಾನವಾಗಿ ಬೆಳೆದಂತೆಯೋ ಜನಪ್ರಿಯವಾದ ದೈವವಾದ, ಸ್ಥಳಮಾಹಾತ್ಮ್ಯ, ಪೂರ್ವಕಥೆ, ಪವಾಡಗಳೇ ಮೊದಲಾದ ಎಲ್ಲ ರೀತಿಯ ಭಾವನೆಗಳೂ ಈ ಕೃತಿಗಳಲ್ಲಿ ವ್ಯಾಪಿಸಿರುವುದನ್ನು ಕಾಣಬಹುದು. ಕುಮಾರರಾಮುನಿಗೆ ಉಂಟಾದ ಒಂದೊಂದು ದಾರುಣ ಪ್ರಸಂಗವೂ ಅವನ ದುರ್ವಿಧಿಯನ್ನು ಸಾರಿ ಹೇಳುತ್ತದೆ. ಇಂಥ ಸಂದರ್ಭಗಳಲ್ಲಿ ಕವಿಗಳು ನೇರವಾಗಿಯೋ, ಇಲ್ಲವೇ ಇತರ ಪಾತ್ರಗಳ ಮೂಲಕವೋ ದೈವವಾದವನ್ನು ಪ್ರತಿಪಾದಿಸಿರುತ್ತಾರೆ. ನಂಜುಂಡನಲ್ಲಿ ಬರುವ ಪಂಪಾಕ್ಷೇತ್ರದ ಮಹಿಮೆ, ಮಹಲಿಂಗಸ್ವಾಮಿಯಲ್ಲಿ ಬರುವ ಹೊಸಮಲೆಯ ಮಹಿಮೆಗಳು ಕ್ಷೇತ್ರಮಾಹಾತ್ಮ್ಯಗಳನ್ನು ಕಾವ್ಯಗಳಲ್ಲಿ ಹೇಗೆ ಜೋಡಿಸುತ್ತಾರೆ ಎನ್ನುವುದಕ್ಕೆ ನಿದರ್ಶನಗಳಾಗಿವೆ. ಗಂಗನಲ್ಲಿ ಜಟ್ಟಂಗಿರಾಮುನಿಗೆ ಕೊಟ್ಟಿರುವ ಪ್ರಾಶಸ್ತ್ಯ ಇಷ್ಟದೇವತೆಯ ಮೇಲ್ಮೆಯನ್ನು ವಿದಿತಪಡಿಸುತ್ತದೆ. ಇವುಗಳಲ್ಲದೆ, ಮಹಲಿಂಗಸ್ವಾಮಿ ಒಂದಲ್ಲ ಒಂದು ನೆಪದಲ್ಲಿ ಜನಪ್ರಿಯವಾದ ಕಥೆಗಳನ್ನು ಸಂಗ್ರಹಿಸಿ ಹೇಳಿರುವುದಂತೂ ತುಂಬ ಮನನೀಯವಾದದ್ದು. ಏಕೆಂದರೆ, ಕುಮಾರರಾಮುನ ಕೃತಿ ಜನತೆಯ ಒಂದು ಅಕ್ಷಯ ಕಥಾಭಾಂಡಾಗಾರವಾಗಬೇಕೆಂದು ಅವನ ಆಸೆಯಿದ್ದಂತಿದೆ. ಕಥೆಯ ಪವಾಡಭಾಗಕ್ಕೆ, ಕುಮಾರರಾಮನು ಸತ್ತರೂ ಆತನ ರುಂಡವು ಪ್ರಚಂಡವಾಗಿ ಭಯೋತ್ಪಾದನೆಯನ್ನು ಉಂಟುಮಾಡುತ್ತಿದ್ದ ಸನ್ನಿವೇಶವನ್ನೇ ತೆಗೆದುಕೊಳ್ಳಬಹುದು. ಬೈಚಪ್ಪನ ಇಂದ್ರಜಾಲ, ಶೂಲಗಳು ತಾವಾಗಿ ಯುದ್ಧ ಮಾಡುವುದು, ಬೊಲ್ಲನು ಶಿಲೆಯಾಗಿ ಮಾರ್ಪಡುವುದು, ನಾರದರು ಬಂದು ಭವಿಷ್ಯವನ್ನು ಹೇಳುವುದು, ರಾಮನ ಪರಾಕ್ರಮವನ್ನು ಕುರಿತು ದೇವಾನುದೇವತೆಗಳು ಮಾತಾಡಿಕೊಳ್ಳುವುದು, ರಾಮನ ಪರಲೋಕಗಮನ ಮೊದಲಾದ ಸನ್ನಿವೇಶಗಳು ಮಹಿಮೆ ಅಥವಾ ಪವಾಡವು ಎಂಥ ಅದ್ಭುತ ಪಾತ್ರವನ್ನು ವಹಿಸಿದೆ ಎನ್ನುವುದನ್ನು ದೃಢಪಡಿಸುತ್ತವೆ.

ಈ ಮೇಲಿನ ವಿವರಣೆಯಿಂದ, ಈ ಕವಿಗಳಿಗೆ ಇತಿಹಾಸದ ಪ್ರಜ್ಞೆಗಿಂತ ಐತಿಹ್ಯದ ಅಭಿಮಾನವೇ ಹೆಚ್ಚಾಗಿರುವುದಾಗಿ ತಿಳಿದುಬರುತ್ತದೆ. ಇಂಥ ಕೃತಿರಚನೆಯೊಂದನ್ನು ಕುರಿತು ಸಿ. ಎಂ. ಬೌರಾ ಅವರು ಹೇಳಿರುವ ಮಾತನ್ನೇ ಇಲ್ಲಿ ಮತ್ತೊಮ್ಮೆ ಉದಾಹರಿಸಬಹುದು :—

> "ಅವರು ಘಟನೆಗಳನ್ನು ಚರಿತ್ರೆಕಾರರಂತೆ ನೋಡುವುದಿಲ್ಲ ; ಅವರು, ರಾಜಕೀಯದ ದೊಡ್ಡ ದೊಡ್ಡ ಆಂದೋಲನಗಳು ಇಲ್ಲವೇ ಸ್ವೇಚ್ಛಾಪ್ರವರ್ತನೆಗಳಿಗಿಂತಲೂ ವ್ಯಕ್ತಿಗಳಲ್ಲಿಯೂ ಉಜ್ವಲವಾದ ಘಟನೆಗಳಲ್ಲಿಯೂ ಹೆಚ್ಚು ಆಸಕ್ತರಾಗಿರುತ್ತಾರೆ. ಅವರ ಕೃತಿಗಳನ್ನು ಓದುವಾಗ, ಕಲಾದೃಷ್ಟಿಯಿಂದ ಅವರ ವಿಷಯಸಾಮಗ್ರಿ ಎಷ್ಟರಮಟ್ಟಿಗೆ ರೂಪಾಂತರಗೊಂಡಿದೆಯೆಂಬುದನ್ನು ನಾವು ಪರಿಶೀಲಿಸಬೇಕು.
>
> ಒಟ್ಟಿನಲ್ಲಿ ವೀರಕಾವ್ಯವು ಚರಿತ್ರೆಗೆ ಸಮಾನವಾದ ಪ್ರತಿಕೃತಿಯಾಗಲಾರದು. ಆದರೆ ಅದು ಇನ್ನೊಂದು ರೀತಿಯಲ್ಲಿ ಚರಿತ್ರೆಗೆ ಸಂಬಂಧಪಟ್ಟುದಾಗಿದೆ. ಅದು ಏನು ಸಂಭವಿಸಿತೆನ್ನುವುದನ್ನು ಖಚಿತವಾಗಿ ನಿರೂಪಿಸುವುದಿಲ್ಲ. ಆದರೆ ಜನರು ಏನನ್ನು ನಂಬಿದ್ದರು ಮತ್ತು ಏನನ್ನು ಅನುಭವಿಸಿದರು ಎನ್ನುವುದನ್ನು ತೋರಿಸಿಕೊಡುತ್ತದೆ."[1]

---

1. "They do not see events as historians do ; they are much more interested in personalities and vivid episodes than in great movements or the vagaries of politics. In reading their works we must look art for a tendency to shape material in the interest of artistic needs (Heroic Poetry, Chapt. xiv , P. 519)."

"Heroic poetry then seems to be on the whole a poor substitute for history ....But of course it has a great relevance to history in a different way. It does not record truthfully what happened but it shows what men believed and felt (Ibid, P. 535)."

ಈ ಹೇಳಿಕೆಗಳನ್ನು ಪರಿಶೀಲಿಸಿದರೆ ಇತಿಹಾಸಜ್ಞರಿಗೂ, ಐತಿಹ್ಯಗಳನ್ನು ಅವಲಂಬಿಸಿ ಜನರಂಜನೆಗಾಗಿ ಕಾವ್ಯಗಳನ್ನು ರಚಿಸುವವರಿಗೂ ಇರುವ ಅಂತರ ಸ್ಪಷ್ಟವಾಗುತ್ತದೆ. ಕುಮಾರರಾಮನ ಕೃತಿಗಳಲ್ಲಿ ಕಂಡು ಬರುವ ಕೆಲವು ಐತಿಹ್ಯಗಳು ಯಾವುದೋ ಚರಿತ್ರಾಂಶಗಳ ಸಂಕೇತಗಳಂತಿವೆ. ಕೆಲವು ಘಟನೆಗಳು ಕಂಡ ಹಾಗೆಯೇ ಐತಿಹ್ಯಗಳಾಗಿ ಪರಿಣಮಿಸಿವೆ. ಇವುಗಳೊಂದಿಗೆ ಕಾಲ್ಪನಿಕವೋ ವ್ಯಾವಹಾರಿಕವೋ ಆದ ಇತರ ಸಂದರ್ಭಗಳೂ ಬಂದು ಸೇರಿಕೊಂಡಿವೆ. ಈ ಪರಿವರ್ತನೆಗಳು ಚರಿತ್ರೆಯ ದೃಷ್ಟಿಯಿಂದ ಲೋಪ ವೆನ್ನಿಸಿದರೂ ಕುಮಾರರಾಮನ ಮಹತ್ವದ ದೃಷ್ಟಿಯಿಂದ ಮಾನ್ಯವಾಗಿವೆ.

## ೧೧. ಮೂಲಕಥೆಯ ಸ್ವರೂಪ

ಈವರೆಗೆ ಕುಮಾರರಾಮನ ಸಾಂಗತ್ಯಗಳನ್ನೂ ಇತರ ರಚನೆಗಳನ್ನೂ ಪರಿಶೀಲಿಸಿದ್ದಾಯಿತು. ಈ ಅವಲೋಕನದಿಂದ, ಇವುಗಳಲ್ಲಿ ಚರಿತ್ರಾಂಶಗಳನ್ನು ಕುರಿತು ಎಷ್ಟೇ ಭಿನ್ನಾಭಿಪ್ರಾಯಗಳಿರಲಿ, ರತ್ನಾಜಿಯ ಪ್ರಸಂಗ ಮಾತ್ರ ಉದ್ದಕ್ಕೂ ಒಂದೇ ರೀತಿಯಾಗಿರುವುದು ಕಂಡುಬರುತ್ತದೆ. ಆದ್ದರಿಂದ, ಕುಮಾರ ರಾಮನ ಸಾಂಗತ್ಯಗಳ ನಿರ್ಮಾಣದಲ್ಲಿ ಈ ಪ್ರಕರಣವೇ ಪ್ರಧಾನ ಪಾತ್ರವನ್ನು ವಹಿಸಿರಬಹುದೆಂದು ಭಾಸ ವಾಗುತ್ತದೆ. ಈ ಅಭಿಪ್ರಾಯಕ್ಕೆ ಎಷ್ಟರಮಟ್ಟಿಗೆ ಆಧಾರವಿದೆಯೆಂಬುದನ್ನೂ, ಕುಮಾರರಾಮನ ಕಥೆಯಲ್ಲಿ ಕಂಡುಬರುವ ರತ್ನಾಜಿಯ ಪ್ರಕರಣದ ಸ್ವರೂಪವನ್ನೂ ಇಲ್ಲಿ ವಿಚಾರಮಾಡಲಾಗಿದೆ.

ನಂಜುಂಡನು ತನ್ನ ಕಾವ್ಯದ ಆಧಾರಸಾಮಗ್ರಿಯನ್ನು ಕುರಿತು ಹೀಗೆ ಹೇಳಿರುತ್ತಾನೆ:—

ಕಂದುಕ ಬೀಳಲರಮನೆಗದನಿರದೆತ್ತಿ
ತಂದಪೆನೆಂದು ಕಂಪಿಲನ
ನಂದನನೆಯ್ದಲವನ ರೂಪಿಗೆ ಸೋತು
ಬಂದು ಪಿಡಿದಳು ರತ್ನಾಜಿ

ಪಿಡಿಯೆ ಬಿಡಿಸಿಕೊಂಡು ಬರಲವನವಳಂದು
ಕಡುನೊಂದು ಕಯ್ಯ ಬಳೆಗಳ
ಒಡೆದು ತೋಳ್ತೊಡೆಗಳೆಡೆಗಳ ಕೆಡಿಸಿಕೊಂಡು
ಬಿಡದೆ ತೋಱಿದಳು ಕಂಪಿಲಗೆ

ನೆಲೆಯನಱಿಯದವ ಕೊಲಿಸು ರಾಮನನೆಂದು
ಬಲಿದು ಮಂತ್ರಿಗೆ ಪೇಳಲವನು
ನೆಲಮಾಳಿಗೆಯೊಳಿಟ್ಟವನ ಕೊಲಿಸಿದೆನೆಂದು
ನೆಲೆಮಾಡಲಾ ಸುದ್ದಿಯನು

ಕೇಳಿ ತುರುಕದಾಳಿ ಬರಲವನನು ಮಂತ್ರಿ
ಲೀಲೆಯಿಂ ತಂದಾ ಬಲವ
ಕೋಲಾಹಲವ ಮಾಡಿಸಿದನೆಂಬುದು ಕಥಾ
ಮೂಲವಿದನು ನಾನೊಲಿದು

ರಸದಿಂದ ಪುಟ್ಟಿಸಿ ಭಾವದಿಂ ಬಲಿಯಿಸಿ
ಪೊಸಬಗೆವೆತ್ತಲಂಕೃತಿಯ
ಎಸಕದಿಂ ಬಳೆಯಿಸಿ ಕೃತಿಯೆನಿಸುವೆನಿದ
ರಸಿಕರು ಮಚ್ಚುವಂದದಲಿ

(i, ೮೪–೮೮)

ಪಾಂಚಾಳಗಂಗನ ಒಂದು ಪ್ರತಿಯಲ್ಲಿ ಇದೇ ಅಭಿಪ್ರಾಯವನ್ನು ಈ ರೀತಿಯಾಗಿ ಹೇಳಿದೆ :—

ಪೆಣ್ಣಿಂದ ಬಂದು ಕಂಟಕ ರಾಮನಾಥಗೆ
ಹಣ್ಣಿತು ವಿಧಿವಶದಿಂದ
ಪುಣ್ಯವುಳ್ಳವರು ಲಾಲಿಪುದು ಈ ವಿವರವ
ಬಣ್ಣಿಸುವೆನು ಧರೆಯೊಳಗೆ

ರತ್ನಿ ಕುಹ [ಕವ] ಕೇಳಿ ಮತ್ತೆ ಕಂಪಿಲರಾಯ
ಪುತ್ರನ ಕೊಲ್ಲ ಹೇಳಿ ಮುನಿದು
ಅತ್ಯಂತ ರೋಷದಿ ಒತ್ತಿ ಮಂತ್ರಿಗೆ ಪೇಳಿ (ಳೆ?)
ಸತ್ಯವಂತನು ಕಾಯಿದ ಕಥೆಯ

ಚಿತ್ತಜ ರೂಪ ರಾಮನ ಮೇಲೆ ಮುನಿದಾಗ
ಹೆತ್ತ ತಂದೆಯು ಕೊಲ್ಲ ಹೇಳೆ
ಮತ್ತೆ ಪ್ರಧಾನಿಗಳರಸ ಕೊಲ್ಲದೆ ಕಾಯ್ದ ವಿ
ಚಿತ್ರದ ಕಥೆಯ ಪೇಳುವೆನು

ಗುರಿಯಿಲ್ಲದಂಬವೊಂದ್ಯೆನೂರನೆಚ್ಚರೆ
ಗುರಿಯು ತಾಕುವುದೆ ಲೋಕದಲಿ
ಗ (ಗು ?) ರಿಗಾಣೆ ಶುದ್ಧ ರಾಮನ ಕೃತಿಬಾಣವ
ಉರ್ವಿಯೊಳೆಚ್ಚ ಗಂಗಯ್ಯ

ಬಲ್ಲಾಳರಾಯನ ಮುರಿಯಲಿರಿದು
ಹುಳಿಯಾರ ಮಾರನ ಬಿಂಕವಳಿದು
ನಿಲ್ಲದೆ ಬಾದೂರಖಾನ ಮೊರೆಯ ಬೀಳೆ
ಅಲ್ಲಿ ಕಾಯಿದ ಕೃತಿ ಪೇಳ್ವೆ

ಓರುಗಲ್ಲಲಿ ರುದ್ರರಾಯನೊಳ್ ಕಾದಿಯೆ
ವಾರುವ ತೆಗೆತಂದ ಧೀರ
ವೀರರ ದೇವ ರಾಮನ ಕೃತಿಯನು ಈಗ
ಸಾರುವೆ ಕೇಳಿ ಸಜ್ಜನರು

ನೆಲಮಾಳಿಗೆಯಿಂದ ಪೊರಟು ನೇಮಿಯ ಗೆದ್ದು
ಗೆಲವ ತೋಡಿದ ಕಂಪಿಲಗೆ
ಚಲದಿಂದ ಮಾತಂಗಿಯೊಳು ಕಾದಿ ಮಡಿದಂತ
ಚೆಲುವ ರಾಮನ ಕತೆಗೇಳಿ

ಪೃಥ್ವಿಯ ಜನರೆಲ್ಲ ಅರ್ತಿಯಿಂದಲಿ ಕೇಳಿ
ಸತ್ಯವುಳ್ಳವನ ಕಥೆಯನು
ಪ್ರತ್ಯಕ್ಷವಾಗಿ ಕಾಶಿಯೊಳು ಇವನ ತಲೆ
ಅತ್ಯಂ[ತ] ಪೂಜೆಯಾಗಿಹುದು

(ಗಂ. ೧, i, ೧೫–೨೨.)

ಗಂಗನ ಇತರ ಪ್ರತಿಗಳಲ್ಲಿಯೂ ಈ ಭಾವನೆ ಸ್ವಲ್ಪಮಟ್ಟಿಗೆ ಕಂಡುಬರುತ್ತದೆ (ಗಂ. ೩, xxiv, ೧೧, ೧೨; ಗಂ. ೫, viii, ೧೧೩; ಗಂ. ೬, i, ೧೪). ಇದೇ ಅಭಿಪ್ರಾಯವನ್ನುಳ್ಳ ಒಂದು ಪದ್ಯವನ್ನು ಕವಿ ಚರಿತೆಕಾರರೂ ಉದಾಹರಿಸಿರುತ್ತಾರೆ.[1]

ಗಂಗನಲ್ಲಿ ಕೆಲವು ಹೆಚ್ಚು ವಿಷಯಗಳನ್ನು ಹೇಳಿದ್ದರೂ, ಇಬ್ಬರು ಕವಿಗಳ ಹೇಳಿಕೆಗಳನ್ನೂ ಒಟ್ಟಿಗೆ ಗಮನಿಸಿದರೆ, ಇವರ ದೃಷ್ಟಿ ಮೊದಲು ರತ್ನಾಜಿಯ ಪ್ರಕರಣದ ಕಡೆಗೇ ಬಿದ್ದಿರುವುದನ್ನು ಕಾಣಬಹುದು. ಅಷ್ಟೇ ಅಲ್ಲ; ರತ್ನಾಜಿಯ ಘಟನೆಯೊಂದಿಗೆ ಬೈಚಪ್ಪನ ಬುದ್ಧಿವಂತಿಕೆಯೂ ಸೇರಿಕೊಂಡು ಬಂದಿರುತ್ತದೆ. ಈ ಆಧಾರದ ಮೇಲೆ, ಈ ಕವಿಗಳು ಕಾವ್ಯ ಬರೆಯುವ ಕಾಲಕ್ಕಾಗಲೇ ಕುಮಾರರಾಮನ ಕಥೆಯಲ್ಲಿ ರತ್ನಾಜಿಯ ಪ್ರಕರಣಕ್ಕೆ ಅಗ್ರಸ್ಥಾನ ಲಭಿಸಿತ್ತೆಂದೂ, ಎಲ್ಲರ ಮನಸ್ಸನ್ನೂ ಸೆಳೆಯುತ್ತಿದ್ದ ಈ ಕಥಾವಸ್ತುವೇ ಕವಿಗಳಿಗೆ ಕಾವ್ಯವನ್ನು ಬರೆಯಲು ಪ್ರಚೋದಿಸಿರಬಹುದೆಂದೂ ಹೇಳಬಹುದು. ಈ ಸಂಗತಿ ಇಷ್ಟು ಜನಪ್ರಿಯವಾಗಿದ್ದರೂ ಇತಿಹಾಸಕಾರರು ಇದನ್ನು ಪ್ರಮಾಣವೆಂದು ಸ್ವೀಕರಿಸಲು ಸಿದ್ಧರಾಗಿಲ್ಲ.[2]

ಕುಮಾರರಾಮನ ಸಾಹಸದ ಕಥಾಭಾಗಕ್ಕೆ ಪರೋಕ್ಷವಾಗಿಯೂ ಅಲ್ಪಸ್ವಲ್ಪ ಆಧಾರಗಳು ದೊರೆಯುವಂತೆ ಇದಕ್ಕೆ ಬೇರೆ ಯಾವ ಸಾಕ್ಷ್ಯವೂ ಇಲ್ಲದಿರುವುದರಿಂದ ಹೀಗೆ ಹಿಂತೆಗೆಯುವುದು ಸಹಜವೇ ಸರಿ. ಆದರೂ, ಅಶೋಕನ ಚರಿತ್ರೆಯಲ್ಲಿ ಕುನಾಲನ ಪ್ರಸಂಗವು ಕಂಡುಬರುವಂತೆ[3] ಕುಮಾರರಾಮನ ಕಥೆಯಲ್ಲಿ ತೋರಿಬರುವ ಈ ಘಟನೆಯನ್ನು ಇತರ ದೃಷ್ಟಿಗಳಿಂದ ವಿಚಾರಮಾಡಬಹುದಾಗಿದೆ.

ರತ್ನಾಜಿಯ ಪ್ರಸಂಗವನ್ನು ವಾಸ್ತವಿಕವೆಂದು ಭಾವಿಸುವುದಾದರೆ, ಅದು ಹೇಗೆ ನಡೆದಿರಬಹುದು ಎನ್ನುವುದನ್ನು ಪ್ರಕೃತದಲ್ಲಿ ಸ್ಥೂಲವಾಗಿ ಊಹಿಸಿ ತಿಳಿಯುವುದೊಂದೇ ಮಾರ್ಗ. ಕಾವ್ಯಗಳಲ್ಲಿ ಉಕ್ತವಾಗಿರುವಂತೆ, ತರುಣಿಯಾದ ರತ್ನಾಜಿಯನ್ನು ಕುಮಾರರಾಮನಿಗೆಂದು ಹೇಳಿ ಕಂಪಿಲನೇ ಮದುವೆಯಾಗಿದ್ದ ಪಕ್ಷದಲ್ಲಿ, ಆಕೆ ಒಳಗೊಳಗೇ ಸಂಕಟಪಡುತ್ತಿದ್ದಿರಬೇಕು. ಸ್ಫುರದ್ರೂಪಿಯಾದ ರಾಮನನ್ನು ಕಂಡಾಗ ಆಕೆಗೆ ತಡೆಯಲಾರದ ಮೋಹವುಂಟಾಗಿರಬೇಕು. ಅನಿರೀಕ್ಷಿತವಾಗಿ ರಾಮನನ್ನು ಸಂಧಿಸಿದಾಗ ತನ್ನ ದುಃಖವನ್ನು ನಿವೇದಿಸಿಕೊಂಡು ಆಕೆ ನಿರಾಶಳಾಗಿರಬಹುದು. ಯಾವುದೋ ನೆವ ಹೇಳಿ ಆಕೆ ತಂದೆಗೂ ಮಗನಿಗೂ ವಿರಸವನ್ನುಂಟುಮಾಡಿರಬಹುದು. ಸತ್ಯಾಂಶ ತಿಳಿದುಬರಲು ರತ್ನಾಜಿ ಎಲ್ಲರ ಅವಹೇಳನಕ್ಕೂ ಗುರಿಯಾಗಿರಬಹುದು. ಹೀಗೆ ಹತಾಶಳಾದ ಹೆಣ್ಣು ಕಡೆಗೆ ತನ್ನ ಮನೆಗೆ ತಾನೇ ಮಾರಿಯಾಗಿ ಪರಿಣಮಿಸಿರಬಹುದು. ಕುಮಾರರಾಮನೂ ಕಂಪಿಲನೂ ಐತಿಹಾಸಿಕ ವ್ಯಕ್ತಿಗಳಾಗಿರುವುದರಿಂದ ಈ ರೀತಿಯಾಗಿ ಊಹಿಸುವುದು ಅನುಚಿತವಾಗಲಾರದು. ಈ ಸಂಗತಿ ಕೇವಲ ಕಂಪಿಲನ ಗೃಹಕೃತ್ಯಕ್ಕೆ ಸಂಬಂಧಿಸಿದ್ದರಿಂದ ಚರಿತ್ರಕಾರರ ಗಮನಕ್ಕೆ ಬಾರದಿರಬಹುದು.

---

1. ಕಚ. ಸಂ. ii, ಪು. ೪೨೩.
2. ಕುಮಾರರಾಮುನಿ ಕಥ, ಉಪೋದ್ಘಾತಮು, ಪು. xxiv.
3. Asoka, by V. A. Smith, pp. 234-237.

ಒಂದು ವೇಳೆ, ಕುಮಾರರಾಮನ ಸಾಹಸದ ಕಥೆ ಬೆಳೆದ ಮೇಲೆ ಈ ವಿಷಯ ಹೊಸದಾಗಿ ಬಂದು ಸೇರಿರಬಹುದೆಂದು ಭಾವಿಸುವುದಾದರೆ ಆಗ ಈ ಕಲ್ಪನೆಗೆ ಏನೇನು ಆಧಾರಗಳಿವೆ ಎಂಬುದನ್ನು ಬೇರೆ ಬೇರೆ ಯಾಗಿ ಯೋಚಿಸಬೇಕಾಗುತ್ತದೆ. ಕುಮಾರರಾಮನನ್ನು ಅರ್ಜುನನ ಅವತಾರವೆಂದು ಭಾವಿಸತೊಡಗಿ ದಾಗಲೇ ಈ ಪ್ರಕರಣವೂ ತಾನಾಗಿಯೇ ಕೂಡಿಕೊಂಡು ಬಂದಿರಬಹುದು. ನಂಜುಂಡನಲ್ಲಿ ಕಥಾಪ್ರಾರಂಭ ದಲ್ಲಿಯೇ ನಿರೂಪಿತವಾಗಿರುವ ಗಣನಾಥನಾದ ಅರ್ಜುನ ಮತ್ತು ಉರ್ವಶಿಯರ ಚಿತ್ರವೇ ಇದಕ್ಕೆ ಸಾಕ್ಷಿ. ಆದರೆ, ಇತರ ಕಾವ್ಯಗಳಲ್ಲಿ ಕುಮಾರರಾಮನನ್ನು ಜಟ್ಟಂಗಿರಾಮನ ಅಂಶವೆಂದೋ ಪರಶುರಾಮನ ಅಂಶ ವೆಂದೋ ಭಾವಿಸಿರುವುದೂ ಉಂಟು. ಆದ್ದರಿಂದ ಈ ಊಹೆಯೊಂದೇ ಸಮಗ್ರವಾಗಲಾರದು.

ಈ ಘಟನೆಯನ್ನೇ ಹೋಲುವ ಬೇರೆ ಯಾವುದಾದರೂ ಸಂದರ್ಭವಿದೆಯೆ ಎಂಬುದನ್ನು ಈಗ ನೋಡ ಬೇಕಾಗುತ್ತದೆ. ನಮ್ಮ ನೆರೆ ನಾಡಾದ ಆಂಧ್ರದಲ್ಲಿ ಕ್ರಿ. ಶ. ೧೫ ನೆಯ ಶತಮಾನದ ಮಧ್ಯದ ವೇಳೆಗಾಗಲೇ ಗೌರನನ "ನವನಾಥ ಚರಿತ್ರೆ" ಯ ಮೂಲಕ ಸುಪ್ರಸಿದ್ಧವಾದ ಸಾರಂಗಧರನ ಕಥೆ ಪ್ರಚಾರಕ್ಕೆ ಬಂದಿತ್ತು. ಅಲ್ಲಿಂದ ಈಚೆಗೆ ತೆಲುಗಿನಲ್ಲಿ ಇನ್ನೂ ಕೆಲವು ಗ್ರಂಥಗಳೂ, ಹಲವು ಜನಪದ ಕೃತಿಗಳೂ ರಚಿತವಾಗಿರುವುದಾಗಿ ತಿಳಿದುಬರುತ್ತದೆ.[1] ಮಾಳವ ದೇಶಕ್ಕೆ ಸೇರಿದ ಈ ಕಥೆಯನ್ನು ಆಂಧ್ರರು ತಮ್ಮ ರಾಜನಾದ ರಾಜರಾಜ ನರೇಂದ್ರನಿಗೆ ಸಂಬಂಧಿಸಿದುದೆಂದು ಭಾವಿಸಿದ್ದರಿಂದ ಇದಕ್ಕೆ ಇಷ್ಟೊಂದು ಪ್ರಾಚುರ್ಯ ಲಭಿಸಿತೆಂದು ತೋರುತ್ತದೆ. ಆದರೆ, ಇದು ಕೇವಲ ಇತ್ತೀಚಿನವರ ಕಲ್ಪನೆಯೆಂದೂ, ರಾಜಮಹೇಂದ್ರಿಯಲ್ಲಿ ರಾಜ್ಯವಾಳಿದ ರಾಜನರೇಂದ್ರನಿಗೂ, ಸಾರಂಗಧರನ ಕಥೆಯಲ್ಲಿ ಬರುವ ರಾಜನರೇಂದ್ರನಿಗೂ ಯಾವ ಸಂಬಂಧವೂ ಇಲ್ಲ ವೆಂದೂ ಗೊತ್ತಾಗುತ್ತದೆ.[2] ಈ ವಿಷಯುವನ್ನು ಶ್ರೀಮಾನ್ ಕೆ. ರಾಮಕೃಷ್ಣಯ್ಯ ಅವರು ವಿಶದವಾಗಿ ವಿಮರ್ಶಿಸಿ, ಈ ತಪ್ಪು ಕಲ್ಪನೆ ದ್ವಿಪದಿ ಬಾಲಭಾಗವತವನ್ನು ಬರೆದ ದೋನೇರು ಕೋನೇರುನಾಥನ ಕಾಲಕ್ಕಾಗಲೇ, ಎಂದರೆ, ಕ್ರಿ. ಶ. ೧೫೬೦ ರ ವೇಳೆಗಾಗಲೇ ಕಂಡುಬಂದರೂ, ಚೇಮಕೂರ ವೆಂಕಟಕವಿಯ (ಕ್ರಿ. ಶ. ೧೬೩೦) "ಸಾರಂಗಧರ ಚರಿತ್ರೆ" ಎಂಬ ಚಂಪೂಕಾವ್ಯದಲ್ಲಿ ರಾಜನರೇಂದ್ರನನ್ನು ಮಾಳವ ದೇಶಾಧಿಪತಿಯೆಂದೇ ಕರೆದಿರುವುದರಿಂದ (ಆಶ್ವಾಸ i, ಪ. ೫; ಆಶ್ವಾಸ ii, ಪ. ೧೫೪) ಆತನು ಇದನ್ನು ಪುರ ಸ್ಕರಿಸಿಲ್ಲವೆಂದೂ, ಆದರೆ, ಇದೇ ಶತಮಾನಕ್ಕೆ ಸೇರಿದ ವೈಯಾಕರಣ ಅಪ್ಪಕವಿ ಇದನ್ನು ಗ್ರಹಿಸಿರುವುದರಿಂದ, ಇದರ ಪ್ರಾಶಸ್ತ್ಯಕ್ಕೆ ಆತನೇ ಕಾರಣನಿರಬಹುದೆಂದೂ ಅಭಿಪ್ರಾಯಪಡುತ್ತಾರೆ.[3] ಕನ್ನಡದಲ್ಲಾದರೋ ಸಿದ್ಧ ನಂಜೇಶನು (ಕ್ರಿ. ಶ. ಸು. ೧೬೫೦) ತನ್ನ "ಗುರುರಾಜ ಚಾರಿತ್ರ" ದಲ್ಲಿ ಪ್ರಾಸಂಗಿಕವಾಗಿ "ಸಾರಂಗಧರನ ಕಥೆ" ಮತ್ತು "ಕುಮಾರರಾಮನ ಕಥೆ" ಗಳನ್ನು ಒಟ್ಟಿಗೆ ಉದಾಹರಿಸಿರುವುದರಿಂದ ಆ ವೇಳೆಗಾಗಲೇ ಇವುಗಳ ಪರಸ್ಪರ ಸಾದೃಶ್ಯವನ್ನು ಗಮನಿಸಿರುವುದು ವ್ಯಕ್ತವಾಗುತ್ತದೆ.[4] ಆದರೆ, ಕ್ರಿ. ಶ. ೧೮ನೆಯ ಶತ

1. ತೆಲುಗು ಜಾನಪದಗೇಯ ಸಾಹಿತ್ಯಮು, ಪು. ೫೯೫.

2. ...... Now the story of Sarangadhara as narratted by Gaurana in this work (Navanatha Charita) not only absolves the Chalukyan King Raja Raja Narendra of Rajamundry from this cruel act of immolation, but sets at nought all stories connecting Sarangadhara with the preservation of the grammar Andhra Sabda Chintamani since the scene of action of the whole story is said to belong to the Malva country and not to the Telugu country or Rajamundry in it.''
(Navanatha Charita: Ed. K. Ramakrishnaiya, Eng. Intro. p. vii.)

3. ನವನಾಥ ಚರಿತ್ರ, ತೆಲುಗು ಪೀಠಿಕೆ, ಪು. xx–xxiii.

4. ಗುರುರಾಜ ಚಾರಿತ್ರ, ಸಂಧಿ, xiii, ಪ. ೪೦–೬೦, ೬೧.

ಮಾನಕ್ಕೆ ಸೇರಿರಬಹುದಾದ ಸಾಂಬಯ್ಯನ (ಶಂಬಯ್ಯ ?) "ಸಾರಂಗಧರನ ಕಥೆ" ಎಂಬ ಯಕ್ಷಗಾನವೇ ಈವರೆಗೆ ದೊರೆತಿರುವ ಕೃತಿಗಳಲ್ಲಿ ಅತ್ಯಂತ ಹಳೆಯದಾದುದು.[1] ಕ್ರಿ. ಶ. ೧೭ನೆಯ ಶತಮಾನದಲ್ಲಿ ರಚಿತವಾದ ನರಸಿಂಹ ಕವಿಯ "ಮದನಮೋಹಿನಿ ಕಥೆ" ಇದೇ ರೀತಿಯದಾದರೂ ಅದು ಮಾಳವ ದೇಶಕ್ಕೆ ಸಂಬಂಧಿಸಿದ ಬೇರೊಂದು ಕಥೆಯ ಅನುಕರಣವಿದ್ದಂತಿದೆ. ಅಲ್ಲದೆ, ಇದು ಕುಮಾರರಾಮನ ಸಾಂಗತ್ಯದ ಕಾಲಕ್ಕೆ ಈಚಿನದಾಗಿರುವುದರಿಂದ ಪ್ರಕೃತವಿಚಾರಕ್ಕೆ ಇದರಿಂದ ಯಾವ ಸಹಾಯವೂ ದೊರೆಯುವುದಿಲ್ಲ. ಈ ಕೆಲವು ಅಂಶಗಳನ್ನು ಗಮನಿಸಿದರೆ ತೆಲುಗಿನಲ್ಲಿ ಸಾರಂಗಧರನ ಕಥೆ ಹದಿನೈದನೆಯ ಶತಮಾನದಿಂದೀಚೆಗೆ ಕ್ರಮಕ್ರಮವಾಗಿ ಪ್ರಚಾರಕ್ಕೆ ಬರುತ್ತಿದ್ದ ಕಾಲದಲ್ಲಿ, ಅದೇ ವಸ್ತು ಕನ್ನಡದಲ್ಲಿ ಮೊದಮೊದಲು ರೂಪಾಂತರಹೊಂದಿ, ಕುಮಾರರಾಮನ ಕಥೆಯಲ್ಲಿ ಕಾವ್ಯರೂಪದಲ್ಲಿ ಸೇರಿಕೊಂಡಿರಬಹುದೆಂದು ಸಂದೇಹವುಂಟಾಗುತ್ತದೆ.[2] ಮಹಲಿಂಗಸ್ವಾಮಿ ರತ್ನಾಜಿಯ ಪ್ರಕರಣವನ್ನು ಚಿತ್ರಿಸುವಾಗ ಸಾರಂಗಧರನ ಕಥೆಯನ್ನು ಉಪಮಾನವಾಗಿ ಉದಾಹರಿಸಿರುವುದನ್ನೂ[3] ಕುಮಾರರಾಮನ ಯಕ್ಷಗಾನವೊಂದರಲ್ಲಿ ಆತನನ್ನು ಸಾರಂಗಧರನ ಅವತಾರವೆಂದು ನಿರ್ದೇಶಿಸಿರುವುದನ್ನೂ ನೋಡಿದರೆ[4] ಈ ಕೃತಿಗಳ ಕಾಲಕ್ಕೆ ಕನ್ನಡದಲ್ಲಿಯೂ ಸಾರಂಗಧರನ ಕಥೆಗೆ

---

1. ಕಚ. ಸಂ. iii, ಪು. ೧೦೧-೧೦೨. ಕವಿಚರಿತೆಕಾರರು ಮೂರನೆಯ ಸಂಪುಟದಲ್ಲಿ ಅನುಕ್ತಗ್ರಂಥಗಳ ಪಟ್ಟಿಯಲ್ಲಿ ಇನ್ನೂ ಮೂರು ಕೃತಿಗಳ ಹೆಸರನ್ನು ಹೇಳಿರುತ್ತಾರೆ (ಪು. ೪೩೨). ಅವುಗಳ ಕಾಲವಾಗಲಿ ಇತರ ವಿವರವಾಗಲಿ ತಿಳಿದುಬಂದಿಲ್ಲ. ತುರುವೇಕೆರೆ ಬೇಟೆರಾಯದೀಕ್ಷಿತರಿಂದ ರಚಿತವಾದ "ಸಾರಂಗಧರ ನಾಟಕ" ಎಂಬ ಇನ್ನೊಂದು ಯಕ್ಷಗಾನವಿದೆ. ಈತನು "ರಾಜಕೃಷ್ಣಮಹೀಶ"ನನ್ನು ಸ್ತುತಿಸಿದ್ದಾನೆ. ಈತನ ಕಾಲವಾವುದೋ ತಿಳಿಯದು. ಗುಬ್ಬಿ ಗುರುಸಿದ್ದಪ್ಪನವರು ಬರೆದ "ಕರ್ನಾಟಕ ಸಾರಂಗಧರ ನಾಟಕವು" (೧೮೯೭) ಎಂಬ ಮತ್ತೊಂದು ಕೃತಿಯಿದೆ (ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಸಂ. i, ಪು. ೪೧). ನಂಜಯ್ಯ (ಸು. ೧೮೬೦) ರಚಿತವಾದ ಇನ್ನೊಂದು 'ಸಾರಂಗಧರನ ಕಥೆ'ಯೂ ಇದ್ದಂತಿದೆ (ಕಚ. ಸಂ. iii, ಪು. ೩೩೧). ಈ ಎರಡು ಕೃತಿಗಳ ಕಡೆಗೆ ನನ್ನ ಗಮನವನ್ನು ಸೆಳೆದ ಶ್ರೀ. ಎಸ್. ಶಿವಣ್ಣ ಅವರಿಗೆ ವಂದನೆಗಳು. ಈ ವಸ್ತುವನ್ನು ಆಧಾರವಾಗಿಟ್ಟುಕೊಂಡು ಇತ್ತೀಚೆಗೆ ರಚಿತವಾಗಿರುವ ಕೃತಿಗಳನ್ನು ಇಲ್ಲಿ ಗಮನಿಸಿಲ್ಲ.

2. ಮಲತಾಯಿಯ ಮಾತ್ಸರ್ಯದಿಂದ ಕಳೆದುಕೊಂಡಿದ್ದ ಕೈಕಾಲುಗಳನ್ನು ಮತ್ಸ್ಯೇಂದ್ರನಾಥನ ಅನುಗ್ರಹದಿಂದ ಪುನಃ ಪಡೆದುಕೊಂಡ 'ಚೌರಂಗನಾಥ'ನೆಂಬ ಕಥೆಯೇ ಸಾರಂಗಧರನ ಕಥೆಗೆ ಮೂಲವಿರಬಹುದೆಂದು ತೋರಿಬರುತ್ತದೆ. ಈ ಅಂಶವನ್ನು ಸಾಂಬಯ್ಯ ಕವಿರಚಿತವಾದ 'ಸಾರಂಗಧರನ ಕಥೆ'ಯೆಂಬ ಕನ್ನಡ ಯಕ್ಷಗಾನದಲ್ಲಿಯೂ ಕಡೆಯಲ್ಲಿ ಸೂಚಿಸಿರುವುದನ್ನು ನೋಡಬಹುದು. ಮಾಳವದೇಶಕ್ಕೆ ಸೇರಿದ ಈ ಕಥೆಯ ಕಾಲ, ಸ್ವರೂಪ ಮತ್ತು ಬೆಳವಣಿಗೆಗಳ ವಿಚಾರ ಹೆಚ್ಚಾಗಿ ತಿಳಿದುಬಂದಿದ್ದೇ ಆದರೆ, ಪ್ರಚಲಿತವಾಗಿರುವ 'ಸಾರಂಗಧರನ ಕಥೆ'ಯ ಮೇಲೆ ಹೆಚ್ಚು ಬೆಳಕು ಬಿದ್ದೀತು.

3. ಕೊಂದು ಹೋಗೆಲೊ ರಾಮ ತುಂಬಿತು ವಿಧಿ ನಿನಗೆ ಹಿಂದಣ ಗಮನ ಕೇಳ್ದರಿಯಾ ।
ಗಂಡನಿಲ್ಲದ ಮನೆಗೆ ಬಂದ ತಪ್ಪಿಲಿ ಸಾರಂಗಧರನ ತೆರ ಮಾಳ್ಪೆ ॥ (xii, ೧೭೨)

ರಾಯನಾಡಿದ ಮಾತ ಪೇಳುವರೆ ಭಯಯೇನೋ ದೇವರಿಗೆ ಹೇಗೆ ತೋರುವುದೊ ।
ಸಾರಂಗಧರನಂತೆ ಮಾಡೆಂದು ಅಭಯವ ಹೇಳಿರುಹಾ(ವು ?)ದೆ ಸರಿಯುಷ್ಟೆ ॥ (xiv, ೧೯)

ಸತ್ಯಪುರುಷನ ಮಾತು ಸತ್ತರೆ ಅಡಗದು ಪೃಥ್ವಿಯುಳ್ಳನಕ ಶಾಶ್ವತವು ।
ಚಿತ್ರಾಂಗಿ ಕೊಲ್ಲಳೆ ತಪ್ಪಿಲ್ಲದ ಸಾರಂಗ ಪುತ್ರನ ವಾಕ್ಯ ಪೋದಪುದೆ ॥ (xiv, ೩೦)

ಪಾದರಗಿತ್ತಿಗೆ ಒಳಗಾಗದಿರಲು ಇದನು ಮಾಡಿದಳೆಂಬುದ ಅರಿಯಾ ।
ಸಾರಂಗಧ[ರ]ನು ಚಿತ್ರಾಂಗಿಯ ಕೂಡಿದನೆ ಕಾಲನರಿವರೆ ಬೇಪ್ಪ (?) ಮಾವ ॥ (xiv, ೧೬೩)

4. ಕುಮಾರರಾಮನ ನಾಟಕ, ಪು. ೬೧.

ಪ್ರತ್ಯೇಕವಾದ ಸ್ಥಾನ ಲಭಿಸಿತ್ತೆಂದು ತೋರುತ್ತದೆ.[1] ತೆಲುಗಿನಲ್ಲಿರುವಂತೆ ನವನಾಥರನ್ನು ಕುರಿತು ಕನ್ನಡದಲ್ಲಿ ಈವರೆಗೆ ಯಾವ ಪುರಾತನ ಕೃತಿಯೂ ದೊರೆತಿಲ್ಲವಾದ್ದರಿಂದ ಸಾರಂಗಧರನ ಕಥೆಯ ಪ್ರಭಾವ ಕುಮಾರರಾಮನ ಕಥೆಯ ಮೇಲೆ ಬಿದ್ದಿದ್ದರೂ ಬಿದ್ದಿರಬಹುದು ಎಂದು ಊಹಿಸಬಹುದು.

ಇಷ್ಟೇ ಅಲ್ಲದೆ, ರತ್ನಾಜಿಯ ಕಥಾವಸ್ತುವನ್ನು ಹೋಲುವ ಪ್ರಸಂಗಗಳು ಇತರ ದೇಶಗಳ ಸಾಹಿತ್ಯದಲ್ಲಿಯೂ ಇರುವುದು ಕಂಡುಬರುತ್ತವೆ. ಸಿ. ಎಂ, ಬೌರಾ ಅವರು ಇಂಥ ಕಥಾವಸ್ತುವನ್ನು ಕುರಿತು ಹೀಗೆ ಹೇಳಿರುತ್ತಾರೆ :-

> "ಕೊನೆಯದಾಗಿ, ತಕ್ಕಮಟ್ಟಿಗೆ ಹಳೆಯದಾದ ಕಥಾವಸ್ತುವೆಂದರೆ, "ಪೋಟಿಫಾರನ ಪತ್ನಿ"ಯನ್ನು ಕುರಿತಿದ್ದು (ಹಳೆಯ ಒಡಂಬಡಿಕೆ, 'ಜೆನೆಸಿಸ್', ಅಧ್ಯಾಯ ೩೯). ಒಬ್ಬ ಹೆಂಗಸು ಮತ್ತೊಬ್ಬ ಗಂಡಸಿಗೆ ತನ್ನ ಅನುರಾಗವನ್ನು ವ್ಯಕ್ತಪಡಿಸುತ್ತಾಳೆ. ಆತನು ನಿರಾಕರಿಸಿದ್ದೇ ಆದರೆ, ತನ್ನ ಗಂಡನಿಗೆ ಅವನ ಮೇಲೆ ಚಾಡಿಹೇಳುತ್ತಾಳೆ. ಈ ಕಥಾವಸ್ತು ಈಜಿಪ್ಟಿನಲ್ಲಿ ಮೊದಲಾದಂತೆ ತಿಳಿದುಬರುತ್ತದೆ. ಆದರೆ, ಕಾವ್ಯದಲ್ಲಿ ಅದು 'ಇಲಿಯಡ್ಡಿ'ನಲ್ಲಿ ಮೊದಲನೆಯ ಬಾರಿ ಕಂಡುಬರುತ್ತದೆ. ಪ್ರೊಟಿಯಸ್ಸಿನ ಹೆಂಡತಿ, ತನ್ನ ಗಂಡನೊಂದಿಗೆ ಬೆಲಿರೊಫಾನಿನ ಮೇಲೆ ಸುಳ್ಳುಕತೆ ಹೇಳಿ, ತನ್ನ ಛಲವನ್ನು ತೀರಿಸಿಕೊಳ್ಳುತ್ತಾಳೆ. ತತ್ಪರಿಣಾಮವಾಗಿ ಬೆಲಿರೊಫಾನನನ್ನು ಲಿಸಿಯಾ ದೇಶಕ್ಕೆ ಅಟ್ಟಲು ಅಲ್ಲಿ ಆತನು ತನ್ನ ಸಾಹಸದಿಂದ ಸಾವಿನಿಂದ ಪಾರಾಗುತ್ತಾನೆ. ಇದರಂತೆಯೇ, ಹಿಪ್ಪೊಲೈಟಳು ತನ್ನ ಗಂಡನಾದ ಕ್ರೇಥಿಯಸ್ಸಿನಿಗೆ ಚಾಡಿ ಹೇಳಿದ್ದರಿಂದ ಪೀಲಿಯಸ್ಸನು ಮೃತ್ಯುಸದೃಶವಾದ ಪರ್ವತಗಳಿಗೆ ಹೋಗಬೇಕಾಗಿಬರುತ್ತದೆ. ಅಲ್ಲಿ, ವಾಸ್ತವಿಕವಾಗಿ ಕಿಂಪುರುಷನಾದ ಖಿರಾನ್ ಅವನನ್ನು ರಕ್ಷಿಸುತ್ತಾನೆ. ಈ ಕಥಾವಸ್ತು ಆರ್ಮಿನಿಯಾಕ್ಕೂ ಕಾಲಿಟ್ಟಿದೆ. ಅದಕ್ಕೆ ಮೂಲ ಯಾವುದೋ ತಿಳಿಯದು. ಡೇವಿಡ್ ಮತ್ತು ಆತನ ಚಿಕ್ಕಮಗ ಮೆಹರನಿಗೆ ಸಂಬಂಧಿಸಿದಂತೆ ಕೇಳಿಬರುತ್ತದೆ...."[2]

ಈ ಅಧಾರ್ಮಿಕ ಪ್ರಣಯವನ್ನೇ ಹೋಲುವ ಯೂರಿಪಿಡೀಸಿನ "ಹಿಪ್ಪೊಲಿಟಸ್" ನಾಟಕವನ್ನೂ ಈ ಪಾಶ್ಚಾತ್ಯ ನಿದರ್ಶನಗಳೊಂದಿಗೆ ಸೇರಿಸಿಕೊಳ್ಳಬಹುದು. ಪರಿಶುದ್ಧಾತ್ಮನೂ ಮೃಗಯಾವಿನೋದಿಯೂ

---

1. ದೇವಚಂದ್ರನೂ (ಕ್ರಿ.ಶ. ೧೭೭೦–೧೮೪೧) ತನ್ನ 'ರಾಜಾವಳಿ ಕಥೆ'ಯಲ್ಲಿ ಸಾರಂಗಧರನ ಕಥೆ, ಕುಮಾರರಾಮನ ಕಥೆ, ಕರೀಭಂಟನ ಕಥೆಗಳನ್ನು ಒಟ್ಟಿಗೆ ನಿರ್ದೇಶಿಸಿ "ಈ ಪ್ರಕಾರದೊಳೆ ಕುಮುಟದೊಳು ಬೇಡರಸಪ್ಪ ಕಂಪಿಲ್ಲರಾಯನ ಮಗಂ ರಾಮಂಗೆ ಚಿಕ್ಕಮ್ಮನಾದ ರತ್ನಾಜಿಯು ಮೋಹಿಸಿದೊಡಂ ಕೂಡಲೊಲ್ಲದಿರಲವಂಗೆ ಮುನಿದು ಕೊಲಿಸಲ್ಬಗೆದೊಡಾತನದಂ ತಪ್ಪಿಸಿ ಕೀರ್ತಿಯಂ ಪಡೆದಂ" ಎಂದು ಹೇಳಿರುತ್ತಾನೆ.

(ರಾಜಾವಳಿ ಕಥೆ, ಅಧಿಕಾರ ೧೦, ಪು. ೩೦೧, K.A. ೬೫)

2. "A last theme of some antiquity is that of 'Potiphar's wife' (Old Testament, Genesis, chapter 39). A woman makes proposals to a man and when he rejects them denounces him to her husband. The theme seems to have arisen in Egypt, but its first appearance in poetry is in the Iliad, where the wife of Proteus revenges herself on Bellerophon by telling a false story to her husband, with the result that Bellerophon is sent to Lycia where his exploits secure his reprieve from his death. A similar story was told about Peleus, who is denounced by Hippolyte to her husband, Cretheus, and sent by him to what looks like death on the mountains, where he is in fact saved by the centaur Chiron. This theme has come to Armenia, though we cannot say from what source and is told both of David and of his son Mher the younger........" (Heroic Poetry, P. 402.)

ಆದ ಹಿಪ್ಪೊಲಿಟಸ್ಸನ ಮೇಲೆ ಪ್ರಣಯ ದೇವತೆಯಾದ ಅಪ್ರೊಡೈಟಿ ಕೋಪಗೊಂಡು, ಆತನ ಮಲತಾಯಿಯಾದ ಫೀಡ್ರಳ ಮೂಲಕ ಆತನಿಗೆ ಕೇಡನ್ನು ತಂದೊಡ್ಡುವುದೇ ಈ ನಾಟಕದ ಕಥಾವಸ್ತು. ಫೀಡ್ರಳ ದುರ್ದಮ್ಯವಾದ ವ್ಯಾಮೋಹ, ನಿರಪರಾಧಿಯಾದ ಹಿಪ್ಪೊಲಿಟಸ್ಸನ ಮೇಲೆ ಬಂದ ಅಪವಾದ, ತಂದೆ ಮಗನ ವೈಮನಸ್ಯ, ಮಲತಾಯಿ ಮತ್ತು ಆಕೆಯ ಮಗನ ದುರಂತ ಇವು ಈ ನಾಟಕದಲ್ಲಿ ಮನಸೆಳೆಯುವಂತೆ ಚಿತ್ರಿತವಾಗಿವೆ.

ಈ ದೃಷ್ಟಿಯಿಂದ ವಿಚಾರಿಸಿ ನೋಡಿದರೆ ರತ್ನಾಜಿಯ ಅಕೃತ್ಯವನ್ನು ಹೋಲುವ ಕಥಾವಸ್ತು ಸಾರ್ವತ್ರಿಕವಾದ ಕಥಾಪಂಕ್ತಿಗೆ ಸೇರುತ್ತದೆ.[1] ಕುಮಾರರಾಮನ ಕಥೆಯಲ್ಲಿ ಜನಪ್ರಿಯವಾದ ಅನೇಕ ಕಲ್ಪನೆಗಳು ಹೇಗೆ ಸೇರಿವೆಯೆಂಬುದನ್ನೂ ಅವುಗಳ ಮೂಲಕ ಕೆಲವು ಚರಿತ್ರಾಂಶಗಳೂ ಹೇಗೆ ಐತಿಹ್ಯವಾಗಿ ಮಾರ್ಪಟ್ಟಿವೆಯೆಂಬುದನ್ನೂ ಕಂಡಿರುತ್ತೇವೆ. ಆದ್ದರಿಂದ ಸುಪ್ರಸಿದ್ಧವಾದ ಈ ಕಥಾವಸ್ತು ಪ್ರಕೃತದಲ್ಲಿ ರತ್ನಾಜಿಯ ಪ್ರಸಂಗವಾಗಿ ರೂಪುಗೊಂಡು ಸಹಜವಾಗಿಯೇ ಕವಿಗೆ ಸ್ಫುರಿಸಿರಬಹುದು. ಇಂಥ ವಸ್ತುವಿನ ಮಹತ್ವವನ್ನು ಸರಿಯಾಗಿ ಗ್ರಹಿಸದೆ ಲೇಖಕರೊಬ್ಬರು ಇದು ಅನುಚಿತವೂ, ಅಸಹನೀಯವೂ, ಅನೀತಿಯುಕ್ತವೂ ಆದುದೆಂದು ಆಕ್ಷೇಪಿಸಿರುತ್ತಾರೆ.[2] ಈವರೆಗೆ ಉದಾಹರಿಸಿರುವ ನಿದರ್ಶನಗಳನ್ನು ಗಮನಿಸಿದರೆ ಲೇಖಕರ ಈ ಅಭಿಪ್ರಾಯ ಸೂಕ್ತವೆನ್ನಿಸುವುದಿಲ್ಲ. ಹೆಣ್ಣಿನ ಚಿತ್ತವಿಕಾರವನ್ನೂ ಗಂಡಿನ ಮನೋಬಲವನ್ನೂ ಚಿತ್ರಿಸುವುದೇ ಈ ವಸ್ತುವಿನ ಮುಖ್ಯ ಉದ್ದೇಶ.

ಇದೇ ಸಂದರ್ಭದಲ್ಲಿ, ಪ್ರಕೃತ ಕಥೆಯಲ್ಲಿ ಕಂಡುಬರುವ ಜನಪ್ರಿಯವಾದ ಇನ್ನೂ ಒಂದು ವಸ್ತುವನ್ನು ಕುರಿತು ನಾಲ್ಕುಮಾತುಗಳನ್ನು ಹೇಳಬಹುದು. ಬೈಚಪ್ಪನು ತನ್ನ ಸಮಯೋಚಿತವಾದ ಕೌಶಲದಿಂದ ಕುಮಾರರಾಮನನ್ನು ರಕ್ಷಿಸಿ, ಅನಂತರ ಕಂಪಿಲನ ಪ್ರಶಂಸೆಗೆ ಪಾತ್ರನಾಗುತ್ತಾನಷ್ಟೆ. ಈ ನಿರೂಪಣೆಯೂ ತುಂಬ ಹಳೆಯದು. ದುಡುಕುಸ್ವಭಾವದ ಮಹಾರಾಜನ ಕಟ್ಟಪ್ಪಣೆಯನ್ನು ಬುದ್ಧಿವಂತನಾದ ಮಂತ್ರಿ ಉಪಾಯದಿಂದ ನಿರ್ವಹಿಸಿ, ಕಡೆಗೆ ರಾಜನು ಸಮಾಧಾನಗೊಂಡ ಮೇಲೆ ನಿಜವಾದ ವೃತ್ತಾಂತವನ್ನು ತಿಳಿಸಿ ಮೆಚ್ಚುಗೆಯನ್ನು ಪಡೆಯುವ ಕಥೆಗಳು ಒಮ್ಮೊಮ್ಮೆ ಕೇಳಿಬರುತ್ತವೆ. "ಬೃಹತ್ಕಥಾ ಮಂಜರಿ", "ಕಥಾಸರಿತ್ಸಾಗರ" ಮತ್ತು "ವಿಕ್ರಮಾರ್ಕ ಚರಿತ್ರೆ" ಗಳಲ್ಲಿ ಬರುವ ವರರುಚಿಯ ವೃತ್ತಾಂತ ಈ ರೀತಿಯಾದದ್ದು. ಕನ್ನಡದ "ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರ" ದಲ್ಲಿರುವ ಸಚಿವ ಗುಣನಿಧಿಯ ಪ್ರಸಂಗವೂ ಇದೇ ತೆರನಾದದ್ದು.[3] ಆದ್ದರಿಂದ, ರತ್ನಾಜಿಯ ಪ್ರಕರಣದೊಂದಿಗೆ ಬೈಚಪ್ಪನ ಬುದ್ಧಿವಂತಿಕೆಯನ್ನೂ ಕೂಡಿಸಿ ಕವಿಗಳು ಕೊಂಡಾಡಿರುವುದು ಅರ್ಥವತ್ತಾಗಿದೆ.

---

1. "ಬಸವಕುಮಾರ ಲೋಹಿತಕುಮಾರ" ಎಂಬ ಕನ್ನಡ ಜಾನಪದಗೀತವೊಂದನ್ನು ಶ್ರೀ. ಜಿ. ಶಂ. ಪರಮಶಿವಯ್ಯ, ಎಂ.ಎ., ಅವರು ಇತ್ತೀಚೆಗೆ 'ಸುಧಾ' ವಾರಪತ್ರಿಕೆಯಲ್ಲಿ ಪರಿಚಯಮಾಡಿಕೊಟ್ಟಿರುತ್ತಾರೆ (೨೦-೨-೧೯೬೬). ಜೂನಾವತಿ ಎಂಬಾಕೆ ತನ್ನ ಸವತಿಯ ಮಗನಾದ ಲೋಹಿತಕುಮಾರನಲ್ಲಿ ಅನುರಕ್ತಳಾಗುವುದೇ ಇಲ್ಲಿನ ಕಥಾವಸ್ತು. ಕುಮಾರರಾಮನ ಕಥೆಯಲ್ಲಿ ಕಂಡುಬರುವಂತೆ, ಇಲ್ಲಿಯೂ ಮುತ್ತಿನ ಚೆಂಡಾಟ, ಜೂನಾವತಿಯ ದುಷ್ಟವರ್ತನೆ, ಲೋಹಿತಕುಮಾರನ ಮೇಲೆ ಮಿಥ್ಯಾಪವಾದ, ಮಹಾರಾಜನ ದುಡುಕುಸ್ವಭಾವ, ಮಂತ್ರಿಯ ಜಾಣತನ ಮೊದಲಾದ ಸನ್ನಿವೇಶಗಳ ಚಿತ್ರಣವಿದೆ.

2. "Kumara Rama" is full of impropotions and it is repulsive to the feelings of any man of refined tastes. The main issue is a lesson to the people. It tends to demoralise the ignorant. Stepmothers' animal instincts are made much of. Such stories are not found in ancient epics. But still the authors claim antiquity for them. The main idea of the story is highly repulsive to the Indian taste"—The Dramatic History of the World, by Sri. K. Srinivasa Rao, p. 22; Quoted by Dr. K. M. Krishna Rao, in his ಯಕ್ಷಗಾನ ಸಾಹಿತ್ಯ, ಪು. ೫೦ ಅಡಿಟಿಪ್ಪಣಿ.

3. ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರ, ಭಾಗ ೧, ಸಂ. ಎನ್. ಬಸವಾರಾಧ್ಯ, ಪು. ೭೧.

ಕಡೆಯಲ್ಲಿ ಬರುವ ಮಾತಂಗಿಯ ವಿಷಯವಂತೂ ರತ್ನಾಜಿಯ ಸಂಗತಿಗಿಂತಲೂ ಸೋಜಿಗವಾದದ್ದು. ಈಕೆಯನ್ನು ಗಾಂಧಾರಿಯ ಅವತಾರವೆಂದು ನಂಜುಂಡನೂ, ರತ್ನಾಜಿಯ ಪುನರ್ಜನ್ಮವೆಂದು ಇತರರೂ ಹೇಳಿರುತ್ತಾರೆ. ಮೊದಲನೆಯದು ಅವತಾರಕಲ್ಪನೆಯ ಮತ್ತೊಂದು ನಿದರ್ಶನವಾದರೆ, ಎರಡನೆಯದು ರತ್ನಿಯ ಸೇಡಿಗೆ ಕೋಡು ಮೂಡಿದಂತಿದೆ. ಬಹುಶಃ, ಮೇಲೆ ಹೇಳಿರುವ ಮೇರೆಗೆ ಹತಾಶಳಾದ ರತ್ನಾಜಿ ಇತರರ ನೆರವನ್ನು ಪಡೆದು ಒಟ್ಟು ರಾಜ್ಯಕ್ಕೇ ಕಂಟಕವಾಗಿ ಪರಿಣಮಿಸಿದಳೋ ಏನೋ! ಆ ಸಂದರ್ಭದಲ್ಲಿ ರೆಡ್ಡಿಯ ವಂಶಕ್ಕೆ ಸೇರಿದ ಆಕೆಗೆ ತೆಲುಗರು ನೆರವನ್ನು ನೀಡಿರಬಹುದು. ತೆಲುಗರು, ಕುಮಾರರಾಮನಿಗೆ ದ್ರೋಹ ಬಗೆದು, ನಿರಾಶಳಾಗಿ ಹಿಂತಿರುಗುತ್ತಿದ್ದ ಮಾತಂಗಿಗೆ ಸಹಾಯ ಮಾಡಿದರು ಎಂಬ ನಿರೂಪಣೆಯಲ್ಲಿ ಈ ಧ್ವನಿಯೇ ಅಡಕವಾಗಿರುವಂತಿದೆ. ಇಲ್ಲವೇ ಯಾವ ಬಗೆಯಾದ ನೈಜಾಂಶವನ್ನೂ ನಿರೀಕ್ಷಿಸದೆ ಹಾಗೆಯೇ ಗ್ರಹಿಸುವುದಾದರೆ, ಈ ಪಾತ್ರವೂ ಕುಮಾರರಾಮನ ಪರದಾರ ಸೋದರತ್ವವನ್ನು ಪರೀಕ್ಷಿಸುವ ಮತ್ತೊಂದು ಒರೆಗಲ್ಲು ಎನ್ನಬಹುದು. ಮಲತಾಯಿಯ ವ್ಯಾಮೋಹದ ದುಷ್ಟಗ್ರಹದಿಂದ ಬಿಡುಗಡೆಯನ್ನು ಪಡೆದಿದ್ದ ಅವನು, ತನ್ನ ನಿಷ್ಠೆಗೆ ತಾನೇ ಕಟ್ಟುಬಿದ್ದು, ಈ ಚಲಗಾರ್ತಿಯ ಕೈಯಿಂದ ಹತನಾಗುತ್ತಾನೆ.

ಒಟ್ಟಿನಲ್ಲಿ, ಯಾವ ಯಾವ ದೃಷ್ಟಿಯಿಂದ ನೋಡಿದರೂ ಕುಮಾರರಾಮನ ಕಥೆಯಲ್ಲಿ ಬರುವ ರತ್ನಾಜಿಯ ಪ್ರಸಂಗ ತುಂಬ ಆಕರ್ಷಕವಾಗಿದೆ. ಅದೇ ಈ ಕಥೆಯ ಹೃದಯವೋ ಎನ್ನುವಷ್ಟುಮಟ್ಟಿಗೆ ಪ್ರಮುಖವಾಗಿ ಪರಿಣಮಿಸಿದೆ. ಈ ರೀತಿ ಜನತೆಯ ಮನಸ್ಸನ್ನು ಒಲಿಸಿಕೊಂಡಿದ್ದ ಕಥಾವಸ್ತುವನ್ನು ಅವಲಂಬಿಸಿ, ಒಬ್ಬೊಬ್ಬ ಕವಿಯೂ ತನ್ನ ಕಾಲದಲ್ಲಿ ಇನ್ನೂ ಮಸಕುಮಸಕಾಗಿದ್ದ ಕುಮಾರರಾಮನ ಸಾಹಸದ ಸಂಗತಿಗಳನ್ನೂ ಕೂಡಿಸಿಕೊಂಡು, ಅದೇ ಜನತೆಯ ಮನಸ್ಸಿನಲ್ಲಿ ಬೇರೂರಿದ್ದ ಕುಮಾರರಾಮನ ದೈವಾಂಶ ಕಲ್ಪನೆಗೂ ಭಂಗವಾಗದಂತೆ ವಿಷಯವನ್ನು ಅಳವಡಿಸಿಕೊಂಡು ತನ್ನ ಕಾವ್ಯವನ್ನು ರಚಿಸಿರುತ್ತಾನೆ. ಹೀಗೆ ಜನಪ್ರಿಯವಾದ ನಾನಾ ಕಲ್ಪನೆಗಳಿಂದ ಕೂಡಿ ಜಾನಪದ ಕತೆಯೋ, ಗೀತವೋ ಆಗಿದ್ದ ಕುಮಾರರಾಮನ ಕಥಾವಸ್ತು ಒಂದೊಂದು ಕಾಲದಲ್ಲಿ ಒಬ್ಬೊಬ್ಬ ಕವಿಯ ಮನಸ್ಸನ್ನು ಸೆಳೆದು ಕಾವ್ಯರೂಪವನ್ನು ತಾಳಿರುತ್ತದೆ.

# ೧೨. ಸಾಹಿತ್ಯವಿಮರ್ಶೆ

## ವಸ್ತುವಿನ್ಯಾಸ

ಇನ್ನು ಕುಮಾರರಾಮನನ್ನು ಕುರಿತ ಈ ಸಾಂಗತ್ಯಗಳನ್ನು ಸಾಹಿತ್ಯದ ದೃಷ್ಟಿಯಿಂದ ವಿಚಾರಿಸಲು ತೊಡಗಬಹುದು. ಈಗಾಗಲೆ ಕೆಲವು ವಿದ್ವಾಂಸರು ನಂಜುಂಡನ ಕೃತಿಯ ಬಗ್ಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುತ್ತಾರೆ. ಶ್ರೀ. ಬೆಟಗೇರಿ ಕೃಷ್ಣಶರ್ಮರು ನಂಜುಂಡ ಮತ್ತು ಗಂಗನ ಕೃತಿಗಳನ್ನು ಉದ್ದೇಶಿಸಿ "ಈ ಎರಡೂ ಕಾವ್ಯಗಳು ಜಾನಪದ ವೃತ್ತವಾದ ಸಾಂಗತ್ಯದಲ್ಲಿ ಹೆಣಿಕೆಗೊಂಡಿವೆ. ಕನ್ನಡದಲ್ಲಿ 'ಚಾರಣಕಾವ್ಯ'ವೆನಿಸಿಕೊಳ್ಳಬಹುದಾಗಿ ದೊರೆಯುವ ಮೊದಲನೆಯ ಕಾವ್ಯವೆಂದರೆ ನಂಜುಂಡ ಕವಿಯ 'ಕುಮಾರರಾಮನ ಕಥೆ!'[1] ಎಂದು ಹೇಳಿರುತ್ತಾರೆ. ಶ್ರೀ. ಡಿ. ಎಲ್. ನರಸಿಂಹಾಚಾರ್ಯರು, ವಿಜಯನಗರ ಕಾಲದ ಕನ್ನಡ ಸಾಹಿತ್ಯವನ್ನು ಪರಿಚಯಮಾಡಿಕೊಡುವ ಸಂದರ್ಭದಲ್ಲಿ "........ನಂಜುಂಡನ ಕುಮಾರರಾಮನ ಕಥೆ (ಸು. ೧೫೨೫) ಕಲ್ಪನೆ ಮತ್ತು ಪ್ರಣಯ ಮಿಶ್ರಿತವಾದ ಚರಿತ್ರೆ. ಒಬ್ಬಿಬ್ಬರು ಚರಿತ್ರಕಾರರು ಈ ಕೃತಿಯುನ್ನು ವಿಶ್ಲೇಷಿಸಿ, ಕೆಲವು ಚರಿತ್ರಾಂಶಗಳನ್ನು ಇತ್ಯರ್ಥಗೊಳಿಸಿರುತ್ತಾರೆ. ಕಾವ್ಯದ ದೃಷ್ಟಿಯಿಂದ ಪರಿಶೀಲಿಸಿದಲ್ಲಿ, ಈ ಕೃತಿಯನ್ನು ಸಂಪೂರ್ಣವಾಗಿ ಕಡೆಗಣಿಸುವಂತಿಲ್ಲ"[2] ಎಂದು ಅಭಿಪ್ರಾಯಪಟ್ಟಿರುತ್ತಾರೆ. ಅಲ್ಲದೆ ಮತ್ತೊಂದು ಲೇಖನದಲ್ಲಿ, ನಂಜುಂಡನ ಕೃತಿಯನ್ನೇ ವಿಸ್ತಾರವಾಗಿ ಪರಿಶೀಲಿಸಿ "........ಯಾವ ಕಡೆಯಿಂದ ನೋಡಿದರೂ ಈ ಕಾವ್ಯ ಉತ್ಕೃಷ್ಟವಾದದ್ದೆಂದು ಹೇಳಬಹುದು. ಇದರಲ್ಲಿ, ಮುಖ್ಯವಾಗಿ ರಾಜಕೀಯ ಚರಿತ್ರೆ, ಮೋಹ ಪ್ರೇಮುಗಳ ಕಥೆ, ಪುರಾಣದ ಛಾಯೆ–ಈ ಮೂರು ಎಳೆಗಳನ್ನು ಒಟ್ಟಿಗೆ ನೆಯ್ದಿದೆ. ದೇಶಪ್ರೇಮವೂ ಧರ್ಮಾನುರಕ್ತಿಯೂ ಸ್ವಾತಂತ್ರ್ಯವೂ ಸಂಪ್ರದಾಯವೂ ಜೊತೆಗೆ ಸೇರಿ ಕಾವ್ಯವನ್ನು ರಮಣೀಯವಾಗಿ ಮಾಡಿವೆ. ಇಂಥ ಕಾವ್ಯ ಯಾರನ್ನು ತಾನೆ ಮೆಚ್ಚಿಸಲಾರದು ?[3] ಎಂದು ಮನವಾರೆ ಹೊಗಳಿರುತ್ತಾರೆ. ಡಾ|| ರಂ. ಶ್ರೀ. ಮುಗಳಿ ಅವರು ತಮ್ಮ "ಕನ್ನಡ ಸಾಹಿತ್ಯ ಚರಿತ್ರೆ" ಯಲ್ಲಿ "ಶೂರ ಚರಿತ್ರೆಗಳಲ್ಲಿ ನಂಜುಂಡನ 'ಕುಮಾರರಾಮನ ಕಥೆ' ಮತ್ತು ಗಂಗನ 'ಕುಮಟ ರಾಮನ ಕಥೆ' ಇವೆರಡಿವೆ. ಎರಡರ ಕಥಾನಾಯಕರು ಕುಮಾರರಾಮ. ಎರಡೂ ಸಾಂಗತ್ಯದಲ್ಲಿ ಬರೆದುವು. ಕುಮಾರರಾಮ ಕಥೆಯಲ್ಲಿ ಅಲ್ಲಲ್ಲಿ ಕೆಲವು ಷಟ್ಪದಿಗಳೂ ಇವೆ. ಸಾಮಾನ್ಯವಾಗಿ ವೀರಶೈವಕವಿಗಳು ಹರಿಹರನು ಹಾಕಿಕೊಟ್ಟ ವಿಷಯ ನಿಯಮವನ್ನು ಅನುಸರಿಸಿದ್ದಾರೆ. ಅದಕ್ಕೆ ಅಪವಾದವಾಗಿ ಇವರಿಬ್ಬರು ಕುಮಾರರಾಮನೆಂಬ ಕಂಪರಾಜನ ಮಗನು ತೋರಿದ ಶೌರ್ಯ ಸಚ್ಚಾರಿತ್ರ್ಯಗಳ ಲೌಕಿಕ ಕಥೆಯನ್ನು ನಿರೂಪಿಸಿದ್ದಾರೆ. ಧಾರ್ಮಿಕ ವಿಷಯಗಳಿಂದ ಇಡಿಕಿರಿದ ಸಾಹಿತ್ಯಕ್ಕೆ ಸ್ವಲ್ಪಮಟ್ಟಿಗೆ ವೈವಿಧ್ಯವನ್ನು ಕಲ್ಪಿಸಿಕೊಟ್ಟಿದ್ದಾರೆ. ಕಥನ ಶೈಲಿಯಲ್ಲಿ ಮತ್ತು ವರ್ಣನೆಯಲ್ಲಿ ಸೊಗಸಿದೆ"[4] ಎಂದು ತಿಳಿಸಿದ್ದಾರೆ. ಮುಖ್ಯವಾಗಿ, ಕುಮಾರರಾಮನ ಕಥೆ ಕನ್ನಡ ಸಾಹಿತ್ಯಕ್ಕೆ ಒಂದು ವಿಶಿಷ್ಟವಾದ ಕಾಣಿಕೆ. ಇತಿಹಾಸಕಾರರಿಗೂ ಸಾಹಿತಿಗಳಿಗೂ ಅಚ್ಚುಮೆಚ್ಚಾಗಿ

---

1. ಕರ್ಣಾಟಕ ಜನಜೀವನ, ೧೯೩೯, ಪು. ೧೦೬.

2. The Kumara Ramana Kathe of Nanjunda (C. 1525) is history mixed with fiction and romance. One or two historions have analysed the work and deduced some historical facts. As poetry the work is not wholly negligible........ (VSCV, p. 365.)

3. ಕುಮಾರರಾಮನ ಸಾಂಗತ್ಯ, ಕನ್ನಡ ನುಡಿ, ೧೯೪೧, ಸಂ. iii, ಸಂ. ೪೪, ಪು. ೩೪೮.

4. ಕನ್ನಡ ಸಾಹಿತ್ಯ ಚರಿತ್ರೆ, ೧೯೫೩, ಪು. ೩೩೨.

ರುವ ಈ ಕಥಾವಸ್ತುವನ್ನು ನಮ್ಮ ಕವಿಗಳಾದ ನಂಜುಂಡ, ಪಾಂಚಾಳ ಗಂಗ ಮತ್ತು ಮಹಲಿಂಗಸ್ವಾಮಿಗಳು ಹೇಗೆ ಬಳಸಿಕೊಂಡಿದ್ದಾರೆ ಎಂಬುದನ್ನು ಇಲ್ಲಿ ವಿಚಾರಮಾಡಲಾಗಿದೆ.

ಮೂರು ಕೃತಿಗಳಲ್ಲಿ, ನಂಜುಂಡನ ಕೃತಿಯಂತೂ ಅವನೇ ಸ್ಪಷ್ಟವಾಗಿ ಹೇಳಿಕೊಂಡಿರುವಂತೆ (ಕುಮಾರರಾಮಚರಿತ ಮಹಾಪ್ರಬಂಧ) ಪ್ರೌಢಿಮೆಯಿಂದ ಕೂಡಿದೆ. ಗಂಗನ ಕೃತಿ ತನ್ನ ಸರಳವಾದ ನಿರೂಪಣೆಗೂ, ಮಹಲಿಂಗಸ್ವಾಮಿಯ ಕೃತಿ ತನ್ನದೇ ಆದ ರೀತಿಯಲ್ಲಿ ಕಥೆಯನ್ನು ಮಾರ್ಪಡಿಸಿಕೊಂಡು, ಅನೇಕ ಉಪಕಥೆಗಳಿಂದ ಕೂಡಿ, ಜನಸಾಮಾನ್ಯರ ಅಭಿರುಚಿಗೆ ತಕ್ಕಂತೆ ಕುಮಾರರಾಮನ ವಿಷಯವನ್ನು ತಿಳಿಸುವುದಕ್ಕೂ ಒಪ್ಪತಕ್ಕದ್ದಾಗಿವೆ.

ಕಥಾವಸ್ತುವಿನಲ್ಲಿ ಕಂಡ ಹಾಗೆಯೇ ಎರಡು ಪ್ರಧಾನ ಭಾಗಗಳುಂಟು. ಕುಮಾರರಾಮನ ಪರಾಕ್ರಮ ಕಾವ್ಯದ ಒಂದು ಭಾಗವೆನ್ನಿಸಿದರೆ, ಆತನ ಪರದಾರ ಸೋದರತ್ವವೇ ಇನ್ನೊಂದು ಭಾಗವಾಗುತ್ತದೆ. ಇದನ್ನು ನಂಜುಂಡ ಕವಿ "ವರಶುಚಿ ವೀರರಾಮನ ಚರಿತವನಿದನೊರೆವೆನೊಲಿದು ಸತ್ಪುರುಷರು ಇರದಾಲಿಪುದು ಶುಚಿತೆ ವೀರತೆ ಬಂದು ದೊರೆಕೊಂಬುದಂತರಂಗದೊಳು" ಎಂದು ಸ್ಪಷ್ಟವಾಗಿ ವಿಭಾಗಿಸಿಯೇ ಹೇಳಿರುತ್ತಾನೆ. ಎಷ್ಟಾದರೂ ಈತನು ಕಸಿಯಾದ ಕವಿ. ವಿಷಯವನ್ನು ಹೇಗೆ ವಿಂಗಡಿಸಿಕೊಳ್ಳಬೇಕೆಂದು ಯೋಚನೆ ಮಾಡಿರುತ್ತಾನೆ. ಪಾಂಚಾಳಗಂಗನು "ಇನ್ನು ಪೇಳುವೆ ಚೆನ್ನರಾಮನ ಕೃತಿಯನು ಚೆನ್ನಾಗಿ ಕೇಳಿ ಸಜ್ಜನರು, ಮುನ್ನಿನ ಪಾಂಡವ ಶೌರ್ಯದ (ವ ?) ಪಂಥದಿ ಬಣ್ಣಿಸುವೆನು ಧರೆಯೊಳಗೆ" ಎಂದು ಲೋಕಾಭಿರಾಮವಾಗಿ ಹೇಳಿರುವನು. ವಾಸ್ತವವಾಗಿ ನೋಡಿದರೆ, ಒಟ್ಟು ಕಥಾವಸ್ತುವಿನಲ್ಲಿ ಮೂಡಿ ಕಾಣುವ ಪ್ರಧಾನಾಂಶ ಗಳೆಂದರೆ ಈ ಎರಡೇ! ರಾಮನು ವೀರನೂ ಹೌದು; ಶುಚಿಯೂ ಹೌದು.

ಮೊದಲು, ರಾಮನ ಸಾಹಸವಿಭಾಗದ ವಸ್ತುರಚನೆಯನ್ನು ನೋಡಬಹುದು. ರಾಮನು ಬಾಲ್ಯ ದಿಂದಲೇ ತುಂಬ ಸಾಹಸಿ, ಪರಾಕ್ರಮಶಾಲಿ ಎಂಬುದನ್ನು ತಿಳಿಯಪಡಿಸಲು ನಂಜುಂಡನು ಕವಿ ರನ್ನನ ಮಾರ್ಗವನ್ನು ಅನುಸರಿಸಿರುವುದು ವಿದಿತವಾಗುತ್ತದೆ. ಹರಿಹರದೇವಿ ಗರ್ಭಿಣಿಯಾಗಿರುವುದನ್ನು ವರ್ಣಿಸುತ್ತ "ಬಸಿಱೊಳಗಣ ಮಗನಿಱುಯದಿರನು ರಿಪುವಸುಧೆಯನೆಂದು ಪೇಳ್ವಂತೆ, ಬಿಸಜಾಕ್ಷಿಗರಿಭೂಮಿಯ ವೃತ್ತಿ ಕೆಯು ಸೇವಿಸುವ ಬಯಕೆ ಜನಿಸಿದುದು" ಎಂದು ಹೇಳಿರುತ್ತಾನೆ. ಇಂತೆಯೇ, "ಬರೆ ಬಸಿಱಗೆ ವಸ್ತುವಾಹನ ಗಳು ಬಂದವರಮನೆಗಾ ಶಿಶು ಪುಟ್ಟೆ ಇರದೆ ಪುಟ್ಟಿತು ರಾಯಪದವಿ ಕಂಪಿಲಗಾ ತರುಣನ ಸೈಪನೇನೆಂಬೆ" ಎಂಬುದಂತೂ ರನ್ನನ "ಬರೆ ಗರ್ಭಕ್ಕರಿವಸ್ತುವಾಹನಚಯಂ ಕಯ್ಗ್ಗೆಯ್ದೆ ವಂದತ್ತು ಪುಟ್ಟೆ ರಣೋತ್ಸಾಹದೆ ಚಕ್ರವರ್ತಿ ವಿಭವಂ ಪುಟ್ಟಿತ್ತು .... (ಗದಾಯುದ್ಧ i, ೧೨)" ಎಂಬ ವಾಕ್ಯಗಳ ಪಡಿಯಚ್ಚಿನಂತಿದೆ. ಶುಭ ಮುಹೂರ್ತದಲ್ಲಿ ಹುಟ್ಟಿದ ರಾಮನಿಗೆ ಗುರುಮುಖದಿಂದ ಕ್ಷತ್ರಿಯ ವಿದ್ಯೆಗಳೆಲ್ಲವೂ ಪಾಠವಾಗುತ್ತವೆ. ಅವನ ರೂಪು, ಪ್ರತಾಪಗಳು ಒಟ್ಟೊಟ್ಟಿಗೇ ವರ್ಧಿಸುತ್ತವೆ.

ಪಾಂಚಾಳಗಂಗನು ಚಿತ್ರಿಸಿರುವ ರಾಮನ ಬಾಲ್ಯದ ಚಿತ್ರವನ್ನೂ ಸ್ವಲ್ಪ ಪರಿಶೀಲಿಸಬಹುದು. "ನವ ಮಾಸ ತುಂಬಿಯೆ ನರಳುವಳ್ದೇವಿಯು ಭವರೋಗ ಹರನ ಧ್ಯಾನದಲಿ, ಕುವರನ ಪಡೆದಳು ಕುಮುದಗಂಧಿನಿ ಯಾಗ ದ್ಯುಮಣಿ ಪ್ರಕಾಶವುಳ್ಳವನ (ಗಂ. ೧, i, ೫೦)" ಎಂದು ರಾಮನ ಜನನ ವೃತ್ತಾಂತವನ್ನು ಹೇಳಿ, "ಕಂದರ್ಪರೂಪ ರಾಮನ ಕಂಡು ಕಂಪಿಲ ಆನಂದಿ[ಸಿ] ವಿದ್ಯಾರ್ಥಿಗಳ ಅಂದಾಗ ಕರೆಸಿ ಕೈವರ್ತಿಸಿಕೊಟ್ಟ ಅಂದು ಗಣೇಶಪೂಜೆಯಲಿ (ಗಂ. ೧, i, ಪ. ೬೦)" ಎಂಬುದಾಗಿ ಮುಂದುವರಿಸುತ್ತಾನೆ. ಕುಮಾರರಾಮನ ಚುರುಕುಬುದ್ಧಿ ಹೇಳತೀರದು. "ಮೃಡನತನಯ ಗಣಪತಿಯಂತೆ ಕಲಿತನು ಪಡೆದ ಗುರುವಿನ ಚಿತ್ತವನು (ಗಂ. ೧, i, ಪ. ೬೨)" ಎಂದು ಚಿತ್ರಿಸಿರುವನು. ರಾಮನು ಬಹು ಬೇಗನೆ "ಚೌಷಷ್ಟಿ ವಿದ್ಯದೊಳಾಗ ಪರಿ ಣತನಾದ ಕಂಸನಮರ್ದನನಂತೆ, ಸಾಹಸ ಸಂಪನ್ನನಾದನು ಜಟ್ಟಂಗಿ ರಾಮೇಶನ ಕರುಣದಲಿ (ಗಂ. ೧, i, ೬೪)" ತುರಗ ವಿದ್ಯೆಯಲ್ಲಿ ಶಾಲಿಹೋತ್ರನನ್ನೂ ಗಜದೇರಾಟದಲ್ಲಿ ದಿವಿಜೇಂದ್ರನನ್ನೂ ಮೀರಿಸಿ ಮೆರೆಯ ತೊಡಗಿದನಂತೆ!

ಇದೇ ಬಗೆಯ ವರ್ಣನೆ ಮಹಲಿಂಗಸ್ವಾಮಿಯಲ್ಲಿಯೂ ರೂಪುತಾಳದೆ ಇಲ್ಲ. ಕುಮಾರರಾಮನು "ನಗುವನು ಕಿಲಿಕಿಲಿ ನೆಲವನು ನಲಿವಂತೆ, ಕುಣಿವನು ಕಾಳಗಗತಿಯೊಳಗೆ ಘಲಿಘಲಿಯೆಂಬ ಕಾಲ್ಗೆಜ್ಜೆಗಳಿಂದ ಪಲಬಗೆಯು ರತ್ನದೋರುವನು"; "ಅಂಬೆಗಾಲಿಡುವನು ತುಂಬಿಯ ಮರೆಯುತ್ತ (?) ತಾಯೆಂದರೆ ಮುತ್ತನು ಕೊಡುತ್ತ ಚಂದ್ರನು ಅರುಣಾದ್ರಿ ಮುಂಬರಿದು ಬೆಳೆವಂತೆ ದಿನಕೊಂದು ಕಳೆಯದೋರುವನು." ಹುಡುಗನಿಗೆ ಪ್ರಾಪ್ತ ವಯಸ್ಸಾಗಲು "ರಾಣಿ ಹರಿಹರದೇವಿ ರಾಯನೊಡನೆ ಪೇಳಿ ಬಾಲರಿಗೆ ವಿದ್ಯಾಸಾಧನವ ಮಾಡಬೇಕೆಲೆ ರಾಯ ಮಕ್ಕಳು ಬರುವಂತ ಸಾಲೆಯೊಳ್ಗುರುಪೂಜೆ ಮಾಡಿ" ಎನ್ನುವಳು. ಕಂಪಿಲನು ರಾಮುನನ್ನೂ ಕಾಟಣ್ಣನನ್ನೂ ಗುರುವಿಗೆ ಒಪ್ಪಿಸಿಕೊಡುವನು. ಅವರು ಓನಾಮ (ಓಂನಾಮ ?) ಮಗ್ಗಿ, ಗಣಿತ ಮೊದಲಾದುವುಗಳನ್ನು ಕಲಿತು, ಓಲೆ, ಹಲಗೆಗಳನ್ನು ಬಳಸುವುದನ್ನು ತಿಳಿದರು. "ಭಾರತ, ರಾಮಾಯಣ, ಚೋರತನದ ಕಥೆ, ಕಾರ್ಯ ಕದನಗಳು ಜೈಮಿನಿಯ ಕೇಳುತ ಬಾಲರಿಗೆ ಜೀವಪಲ್ಲಟವಾಗಿ ಮಾಡಬೇಕವರಂತೆ ನಾವು" ಎನ್ನಿಸಿತು. ಅದೇ ಮೇರೆಗೆ ಅವರು ದಿನದಿನಕ್ಕೂ ನಾನಾ ವಿದ್ಯೆಗಳಲ್ಲಿ ಕುಶಲರಾದರು. ರಾಮನು, ಒಂದು ದಿನ, ಕಾಟಣ್ಣನನ್ನು ಕುರಿತು "ಅಣ್ಣಾಜಿ ಲಾಲಿಸೊ ಅಪರಂಜಿ ಚಿನ್ನವೆ, ಎಮ್ಮಯ್ಯಗೆ ಯಾರು ಮಲೆತವರಾ ಇನ್ಮೈಯ ದೊರೆಗಳ ಎದೆಗರ್ವ ಮುರಿಯದ ಮೇಲೆ ಎಮ್ಮ ಪಡದವರಿಗೆ ಫೌನವೇನು" ಎಂದು ಹೇಳಿ ಎಚ್ಚರಿಸುವನು. ಈ ಛಲವೇ ಅವರು ಮುಂದೆ ಕೈಕೊಳ್ಳುವ ಹಲವಾರು ಪ್ರಾರಂಭದ ಕದನಗಳಿಗೆ ಕಾರಣವಾಗುತ್ತದೆ. ಒಟ್ಟಿನಲ್ಲಿ, ಪ್ರೌಢಮಾರ್ಗವನ್ನು ಅನುಸರಿಸಿರುವ ನಂಜುಂಡನೇ ಆಗಲಿ, ನೇರವಾಗಿ ನಿರೂಪಿಸಿರುವ ಇತರ ಇಬ್ಬರು ಕವಿಗಳೇ ಆಗಲಿ ಕುಮಾರರಾಮನ ಬಾಲ್ಯದ ಮಹತ್ವವನ್ನು ತಕ್ಕಮಟ್ಟಿಗೆ ಚಿತ್ರಿಸಿರುತ್ತಾರೆ.

ನಂಜುಂಡನು ಕುಮಾರರಾಮನ ಸಾಹಸ ವಿಭಾಗವನ್ನು ಹುಳಿಯೇರು (ಹುಳಿಯಾರು ?) ಕಾಳಗದಿಂದ ಮೊದಲು ಮಾಡುತ್ತಾನೆ. ಜಾಯಿಲಗಳ ಸಲುವಾಗಿ ಹುಳಿಯೇರಿನ ಅಧಿಪತಿಗೆ ಹೇಳಿ ಕಳುಹಿಸಲು, ಅವನು ಬಲ್ಲಾಳರಾಯನ ಸಾಮಂತನಾಗಿದ್ದುದರಿಂದ ನಿರಾಕರಿಸುವನು. ಅನಂತರ ಕುಪಿತನಾದ ಕುಮಾರರಾಮನು ಹುಳಿಯೇರನ್ನು ಮುತ್ತುವನು. ದೈವಾಂಶಸಂಭೂತನೂ, ದಿವ್ಯಾಶ್ವಸಮೇತನೂ ಆದ ರಾಮನನ್ನು ಅಡ್ಡಗಟ್ಟುವರಾರು? ಹುಳಿಯೇರಿನ ಅಧಿಕಾರಿಯು ಮದೋನ್ಮತ್ತವಾದ ಮಾತುಗಳಿಗೆ ಮಲೆತು ನಿಂತ ರಾಮನು ಆ ಊರನ್ನು ಮುತ್ತುವುದೇ ತಡ ಯುದ್ಧ ಮೊದಲಾಯಿತು. ಆ ಹೋರಾಟಕ್ಕೆ ತಾರಕೆಗಳು ಧ್ರುವಲೋಕಕ್ಕೆ ಗೂಳಿಯ ತೆಗೆದವಂತೆ! ನಿಮಿಷ ಮಾತ್ರದಲ್ಲಿ ಆ ಅಗ್ರಹಾರವು ಕಿಚ್ಚಿನ ಬೀಡಾಯ್ತು. ಅಧಿಕಾರಿ ರಾಮನ ಕೈಸೆರೆಯಾದನು. ಆತನನ್ನು ಹಿಡಿದು ತಂದು ತಂದೆಗೆ ಒಪ್ಪಿಸಿದನು. ಹರಿಹರದೇವಿ, ಬುಕ್ಕಾಂಬಿಕೆ (?) ಯರು ಕುವರನ ಸಾಹಸಕ್ಕೆ ಮೆಚ್ಚಿ ಹರಸಿದರು. ನಂಜುಂಡನಲ್ಲಿ ಈ ಕಿರುಗಾಳಗವೇ ಮುಂದೆ ಕದನ ಪರಂಪರೆಗೆ ಪೀಠಿಕೆಯಾಗುವುದು. ತನ್ನ ಸಾಮಂತನಿಗಾದ ಅವಮಾನವನ್ನು ಸಹಿಸಲಾರದೆ ಬಲ್ಲಾಳನು ಕಂಪಿಲನ ಮೇಲೆ ದಂಡೆತ್ತಿ ಬಂದನು. ಬಲ್ಲಾಳನ ಸೇನೆಯೆಂದರೆ ಕೇಳಬೇಕೆ! ತುರುಕ ರಾವುತರು, ಒಡ್ಡಿಯ ರಾವುತರು, ಕನ್ನಡ ರಾಯರಾವುತರು ಮೊದಲಾದ ನಾನಾ ದೇಶಗಳ ವೀರಾಧಿವೀರರು ನೆರೆದು ನಿಂತರು. ದಳಪತಿ ನರಸಿಂಗು, ಸೋಮದಂಡಾಧಿಪ ಮುಂತಾದ ಪ್ರಮುಖರು ಸೇನಾಸೂತ್ರವನ್ನು ಹಿಡಿದರು. ಕಂಪಿಲನೂ ತನ್ನ ಮಗ ರಾಮನೊಂದಿಗೆ ಬಲ್ಲಾಳನನ್ನು ಎದುರಿಸಿದನು. ಎರಡು ಪಡೆಗಳಿಗೂ ಭೀಕರವಾದ ಕಾಳಗ ನಡೆದು, ಕಡೆಗೆ ಆಯಾ ಪಕ್ಷದ ಮಂತ್ರಿಗಳ ಸಲಹೆಯ ಮೇರೆಗೆ ಸಂಧಿಯಲ್ಲಿ ಪರ್ಯವಸಾನವಾಯಿತು. ಈ ಸುದ್ದಿ ವೀರರುದ್ರನಿಗೆ ತಿಳಿದು ಬರುವುದು. ಸಾಲದ್ದಕ್ಕೆ ರಾಮನು "ನವಲಕ್ಕ ತೆಲುಗು ರಾಯರ ಮಿಂಡ" ಎಂಬ ಬಿರುದನ್ನು ಧರಿಸಿದ್ದಾನೆಂದು ಗೊತ್ತಾಗುವುದು. ಒಡನೆಯೇ ಅವನು ತಾನಾಗಿಯೇ ದಂಡೆತ್ತಿ ಬರುವನು. ಈ ಕದನವೂ, ಮೊದಮೊದಲು ಭರದಿಂದ ಸಾಗಿ, ಕಡೆಯಲ್ಲಿ ವೀರರುದ್ರನಿಗೆ ಸೋಲಾಗುವುದು. ಅನಂತರ ಕಪಿಲೇಶ್ವರನ ಸರದಿ. ಈತನು ಸಮಸ್ತ ಸೇನೆಯೊಂದಿಗೆ ಕೂಡಿ ಕಂಪಿಲನ ಮೇಲೆ ದಂಡೆತ್ತಿ ಬರುವನು. ಆದರೆ,

ಆಶಾಭಂಗಿತನಾಗುವನು. ಈ ರೀತಿ, ಹುಳಿಯೇರಿನ ಕಾಳಗದಿಂದ ಮೊದಲಾದ ರಾಮನ ವಿಜಯಪರಂಪರೆಯಿಂದ, ಆತನು ಚಿಕ್ಕವನಾದರೂ ಅಸಮ ಸಾಹಸಿಯೆಂಬುದು ದೃಢವಾಗಿ, ಅವನ ಕೀರ್ತಿ ಡಿಳ್ಳಿಯವರೆಗೂ ವ್ಯಾಪಿಸುತ್ತದೆ. ನಂಜುಂಡನ ಈ ಕಥಾಭಾಗ ಬಹು ಅಚ್ಚುಕಟ್ಟಾಗಿ ಹೆಣೆದುಕೊಂಡು ಬಂದಿದೆ.

ಗಂಗನ ರಚನೆಯಲ್ಲಿ ಕುಮಾರರಾಮನ ಪರಾಕ್ರಮವಿಭಾಗ ಕೆಲವು ಪ್ರತಿಗಳಲ್ಲಿ ಪಾದುಕೆಯ ಪ್ರಸಂಗದಿಂದ ಪ್ರಾರಂಭವಾದರೆ, ಇತರ ಪ್ರತಿಗಳಲ್ಲಿ ಗುತ್ತಿಯ ಜಗತಾಪಿಯ ಪ್ರಸಂಗದಿಂದ ಮೊದಲಾಗುತ್ತದೆ. ಈ ಘಟನೆಗಳೆರಡೂ ಮತ್ತೊಂದು ಅದ್ಭುತವಾದ ಸಾಹಸ ಕಾರ್ಯಕ್ಕೆ ಪೀಠಿಕೆಯಂತಿವೆ. ಕುಮಾರರಾಮನು ರುದ್ರನ ಬಳಿಯಲ್ಲಿದ್ದ ಬೊಲ್ಲನನ್ನು ಸಾಧಿಸಿಕೊಂಡು ಬರುವ ರೋಮಾಂಚನಕಾರಿಯಾದ ಪ್ರಕರಣವೇ ಅದು! ಕುಮಾರರಾಮನ ಸಾಹಸದ ಫಲವಾಗಿ ಜಗತಾಪಿಯಿಂದ ದೊರೆತ ಕುದುರೆಗಳನ್ನು ಕಂಪಿಲನು ತನ್ನ ಇತರ ಮಕ್ಕಳಿಗೆ ಕೊಡುವನು. ಆಗ ರಾಮನು "ಧುರದೊಳು ಪಿಡಿದ ಕುದುರೆಯನವರಿಗಿತ್ತೆ ನಿರಿಯ ಹೊತ್ತವರೆ ಹೆಣ್ಣಾಗಿ" ಎಂದು ತಂದೆಯನ್ನು ಆಕ್ಷೇಪಿಸುವನು. ಆಗ ಕಂಪಿಲನು, "ತಪ್ಪದೆ ನಿನಗೆ ಬಿರುದು ಸಲುವುದು ರಾಮ ಯಪ್ಪತ್ತಿರಾಜ ಬೊಲ್ಲನನು ಅಪ್ಪಣೆಲ್ಲದೆ ಹೋಗಿ ತರುವ ಭಂಟನು ನೀನು" ಎಂದು ಸವಾಲು ಹಾಕುವನು. ಚಲಗಾರನಾದ ರಾಮನು ಕೂಡಲೆ ಆ ಪಂಥವನ್ನು ಸ್ವಾಗತಿಸಿ, ಓರುಗಲ್ಲಿನಲ್ಲಿ ರುದ್ರರಾಯನ ಆಶ್ರಯದಲ್ಲಿಯೂ, ಯುವರಾಜನಾದ ಯಪ್ಪತ್ತುರಾಯನ ಮೇಲ್ವಿಚಾರಣೆಯಲ್ಲಿಯೂ ಇದ್ದ ಬೊಲ್ಲನೆಂಬ ಕುದುರೆಯನ್ನು ತರಲು ಸಿದ್ಧನಾಗುವನು. ಗಂಗ ಮತ್ತು ಮಹಲಿಂಗಸ್ವಾಮಿಗಳಿಬ್ಬರೂ ಈ ಸಂದರ್ಭವನ್ನು ಸಾಕಾದಷ್ಟು ವಿಸ್ತಾರವಾಗಿಯೇ ಚಿತ್ರಿಸಿರುತ್ತಾರೆ. ಪ್ರತಾಪರುದ್ರನೊಂದಿಗೆ ಕಾಳಗ ನಡೆಯುವುದಕ್ಕೆ ಇದೇ ನೆಪವಾಗುತ್ತದೆ.

ಮಹಲಿಂಗಸ್ವಾಮಿಯ ಕೃತಿಯಲ್ಲಿ ಬಲ್ಲಾಳರಾಯನ ಯುದ್ಧ, ಗುತ್ತಿಯ ಚಾಮಯ್ಯನ ಯುದ್ಧ, ವೀರರುದ್ರನ ಯುದ್ಧ ಎಂಬುದಾಗಿ ಕದನಪರಂಪರೆ ತೋರಿಬರುತ್ತದೆ. ಇವನ ಮೇರೆಗೆ, ಇವರೆಲ್ಲರೂ ಈ ಮೊದಲೇ ಕಂಪಿಲನ ಸಾಮಂತರಾಗಿದ್ದು, ತಮ್ಮ ತಮ್ಮ ಪೊಗದಿಯನ್ನು ಬಾಕಿ ಉಳಿಸಿಕೊಂಡಿರುತ್ತಾರೆ. ಅದನ್ನು ವಸೂಲು ಮಾಡುವ ಸಲುವಾಗಿಯೇ ಕುಮಾರರಾಮನು ಒಬ್ಬೊಬ್ಬರ ಮೇಲೂ ದಂಡೆತ್ತಿ ಹೊರಟು ವಿಜಯಿಯಾಗಿ ಹಿಂದಿರುಗುತ್ತಾನೆ.

ಈ ಮೇಲೆ ಸೂಚಿಸಿರುವ ಘಟನೆಗಳು ಒಬ್ಬೊಬ್ಬ ಕವಿಯಲ್ಲಿ ಒಂದೊಂದು ತೆರನಾಗಿ ಹೆಣೆದುಕೊಂಡು ಬಂದಿದ್ದರೂ ಎಲ್ಲವೂ ಕುಮಾರರಾಮನ ಸಾಹಸಮಯ ಜೀವನದ ಪೂರ್ವಾರ್ಧವನ್ನು ಬಹಳ ಚೆನ್ನಾಗಿ ಪ್ರತಿಬಿಂಬಿಸುತ್ತವೆ. ಕುಮಾರರಾಮನಿಗಾಗಿಯೇ ಜನ್ಮವೆತ್ತಿದ್ದ ದಿವ್ಯಾಶ್ವ ಅಪೂರ್ವವಾದ ರೀತಿಯಲ್ಲಿ ವ್ಯಾಪಾರಿಗಳ ಮೂಲಕ ಆತನಿಗೆ ಹಸ್ತಗತವಾಯಿತೆಂದು ಹೇಳುವುದು ಒಂದು ಬಗೆಯಾದರೆ, ಅದನ್ನು ತನ್ನ ಬಾಹುಬಲದಿಂದಲೇ ಸಾಧಿಸಿಕೊಂಡು ತಂದನೆಂದು ಇನ್ನೊಂದು ರೀತಿಯಾಗಿ ಹೇಳುವುದು ಆತನ ಕಲಿತನಕ್ಕೆ ಕಿರೀಟವಿಟ್ಟಂತೆ! ಸುತ್ತಮುತ್ತಲಿನವರ ಮೇಲೆ ತಾನೇ ಕಾಲ್ಕೆರೆದು ಜಗಳಕ್ಕೆ ಹೋದನೆಂದು ಹೇಳುವುದು ಒಂದು ತೆರನಾದರೆ, ಅವರೇ ಮೇಲಿಂದ ಮೇಲೆ ದಂಡೆತ್ತಿ ಬಂದು ಹಿಮ್ಮೆಟ್ಟಿದರೆಂದು ಹೇಳುವುದು ಇನ್ನೊಂದು ಬಗೆ. ಹಾಗೂ, ಒಬ್ಬ ಕವಿ ಹುಳಿಯಾರಿನ ಪ್ರಸಂಗವನ್ನು ಬಿಟ್ಟರೆ ಮತ್ತೊಬ್ಬ ಗುತ್ತಿಯ ಪ್ರಸಂಗವನ್ನು ಬಿಟ್ಟಿರುತ್ತಾನೆ. ಆದರೆ, ಕುಮಾರರಾಮನ ವ್ಯಕ್ತಿತ್ವವನ್ನು ಯಾರೂ ಮರೆಯುವಂತಿಲ್ಲ. ಆ ತರುಣವೀರನ ಚಿತ್ರ ಮಾಸದಂತೆ ಅವರವರ ಕೃತಿಗಳಲ್ಲಿ ಸಾಕಾರವೆತ್ತಿ ಬಂದಿದೆ.

ಕುಮಾರರಾಮನ ಸಾಹಸದ ಉತ್ತರಾರ್ಧ ಆತನು ನೇಮಿಯೊಂದಿಗೆ ನಡೆಸಿದ ಮೂರು ಯುದ್ಧಗಳಲ್ಲಿ ಮಿಗಿಲಾಗಿ ಕಾಣುತ್ತದೆ. ಬಾದೂರನಿಗೆ ಕಂಪಿಲನು ಆಶ್ರಯವನ್ನು ಕೊಡುವುದೇ ಈ ಯುದ್ಧಗಳಿಗೆ ಮುಖ್ಯ ಕಾರಣ. ಸಾಲದ್ದಕ್ಕೆ ಕುಮಾರರಾಮನಿಗೆ ತನ್ನ ಮಗಳನ್ನು ಕೊಡಬೇಕೆಂದು ತಾನಾಗಿಯೇ ಮುಂದೆ ಬಂದ ಸುಲ್ತಾನನ ಮಾತನ್ನು ಕಂಪಿಲನು ನಿರಾಕರಿಸಿದ್ದೂ ಒಂದು ಕಾರಣವೆಂದು ಭಾವಿಸಬಹುದು. ಅಂತೂ

ಸುಲ್ತಾನನ ಆಗ್ರಹಕ್ಕೆ ಗುರಿಯಾಗಿದ್ದ ಬಾದೂರನು ಕಂಪಿಲನನ್ನು ಮರೆಹೊಗಲು ಸುಲ್ತಾನನು ಕುಪಿತನಾಗಿ ನೇಮಿಯ ನೇತೃತ್ವದಲ್ಲಿ ಅಪಾರವಾದ ಸೈನ್ಯವನ್ನು ಕಳುಹಿಸುವನು. ಈ ಸನ್ನಿವೇಶವನ್ನು ಮೂರು ಜನ ಕವಿಗಳೂ ಒಂದೇ ರೀತಿಯಾಗಿ ಚಿತ್ರಿಸಿರುತ್ತಾರೆ. ಬಾದೂರನು ಮೊದಲ್ಗೊಂಡು ರಾಮನ ಪರಿವಾರದವರೆಲ್ಲರೂ ವೀರಾವೇಶದಿಂದ ಹೋರಾಡುತ್ತಾರೆ. ರಣೋತ್ಸಾಹಿಯಾಗಿದ್ದ ಕುಮಾರರಾಮನಿಗೆ ನೇಮಿಯ ಮೇಲಿನ ಈ ಮೊದಲನೆಯ ಯುದ್ಧ ಒಳ್ಳೆಯ ಅವಕಾಶವನ್ನು ಉಂಟುಮಾಡಿಕೊಡುತ್ತದೆ. ನಂಜುಂಡನಲ್ಲಿ ಬರುವ ಈ ಘಟನೆ ನೇಮಿಯ ಸೋಲಿನಲ್ಲಿ ಮುಕ್ತಾಯವಾದರೆ, ಗಂಗನಲ್ಲಿ ಬರುವ ಈ ಸಂದರ್ಭ ಇಷ್ಟಕ್ಕೇ ಮುಗಿಯುವುದಿಲ್ಲ. ಸೋತ ನೇಮಿ ಕುಮಾರರಾಮನ ಮೇಲೆ ಬಲ್ಲಾಳನನ್ನು ಎತ್ತಿಕಟ್ಟಿ ಹೋಗುತ್ತಾನೆ. ಕುಮಾರರಾಮನಿಗೂ ಬಲ್ಲಾಳನಿಗೂ ಬಲವಾದ ಕಾಳಗವಾಗುತ್ತದೆ. ಮಹಲಿಂಗಸ್ವಾಮಿಯಾದರೋ ಇದನ್ನು ಬಹಳ ಮೊದಲಿನಲ್ಲಿಯೇ ಹೇಳಿರುತ್ತಾನೆ. ಬಲ್ಲಾಳನನ್ನು ಗೆದ್ದು, ಗುತ್ತಿಯ ಕಡೆ ರಾಮನು ತೆರಳಿರಲು ಬಾದೂರನ ವೃತ್ತಾಂತ ಗೊತ್ತಾಗುತ್ತದೆ. ಆತನನ್ನು ಬೆನ್ನಟ್ಟಿ ಬಂದ ನೇಮಿಯನ್ನು ರಾಮನು ಎದುರಿಸಿ ಹಿಂದಟ್ಟುತ್ತಾನೆ.

ನೇಮಿಯೊಂದಿಗೆ ನಡೆದ ಎರಡನೆಯ ಯುದ್ಧ ತುಂಬ ಕುತೂಹಲಕಾರಿಯಾಗಿದೆ. ಒಟ್ಟು ಪ್ರಸಂಗವೇ ಕುಮಾರರಾಮನ ಅಮಿತ ಪರಾಕ್ರಮಕ್ಕೆ ಭೂಷಣಪ್ರಾಯವಾಗಿದೆ. ಆರು ತಿಂಗಳ ಕಾಲ ರಾಮನ ಹೆಸರು ಎಲ್ಲೆಲ್ಲಿಯೂ ಕೇಳಿ ಬರದಿರಲು, ಸುತ್ತಮುತ್ತಲಿನವರೂ ಸುಲ್ತಾನನೂ ಹೇಗೆ ಹೊಂಚು ಹಾಕುತ್ತಿದ್ದರೆಂಬ ಹಿನ್ನೆಲೆ ಈ ಘಟನೆಗೆ ವಿಶೇಷವಾದ ಮಹತ್ವವನ್ನು ಉಂಟುಮಾಡಿದೆ. ಕಂಪಿಲನ ಭಯ ಭೀತಿಗಳ ಚಿತ್ರವಂತೂ ಕವಿಯಿಂದ ಕವಿಗೆ ಮಿಗಿಲಾಗಿ ಬೆಳೆಯುತ್ತದೆ. ಇದ್ದಕ್ಕಿದ್ದಂತೆ ರಾಮನು ಪ್ರವೇಶಿಸಿ ಶತ್ರುಗಳಿಗೆ ಉಂಟುಮಾಡುವ ತಲ್ಲಣ ನಾಟಕೀಯವಾಗಿದೆ. ಈ ಸಂದರ್ಭದಲ್ಲಿ ನಂಜುಂಡನಲ್ಲಿ ಬರುವ ರಾಮನ ಪೂರ್ವವೃತ್ತಾಂತ ಅಷ್ಟೇನೂ ಸಹಜವಾಗಿಲ್ಲ. ಆದರೆ, ರಾಮನ ನಿಜವೃತ್ತಾಂತವನ್ನು ತಿಳಿದ ಕಂಪಿಲನ ಚಿತ್ರ ತುಂಬ ಸ್ವಾಭಾವಿಕವಾಗಿದೆ. ರಾಮನ ಆಗಮನವನ್ನು ಕಂಡು ಹಿಗ್ಗಿದ ಕುದುರೆ, ಆತನನ್ನು ಮರಳಿ ಪಡೆದ ಹರಿಹರದೇವಿ, ಆತನ ಅಕ್ಕತಂಗಿಯರ ಆನಂದ, ಊರಿನವರ ಸಡಗರ ಸಂಭ್ರಮಗಳ ನಿರೂಪಣೆ ನೈಜವಾಗಿವೆ. ರತ್ನಾಜಿಯ ಸಾವು ಕಂಪಿಲನಿಗೆ ನಂಜುಂಡನ ಮೇರೆಗೆ ಸಂತಾಪವನ್ನು ಉಂಟುಮಾಡಿರಬಹುದು. ಗಂಗ, ಮಹಲಿಂಗಸ್ವಾಮಿಗಳ ಮೇರೆಗೆ ಏನೇನೂ ದುಃಖವನ್ನೇ ಉಂಟುಮಾಡದಿರಬಹುದು. ರಾಮನಿಗಂತೂ ಆಕೆಯ ಸಾವು ಕರುಣೆಯನ್ನುಂಟುಮಾಡುತ್ತದೆ. ಇದು ರಾಮನ ಉದಾರ ಸ್ವಭಾವಕ್ಕೆ ಒಂದು ನಿದರ್ಶನ. ನೆಲನಾಳಿಗೆಗೆ ಹೊರಟಾಗ ಬೈಚಪ್ಪನೊಂದಿಗೆ ಅವನು ಒಂದೆರಡು ಅಣಕದ ಮಾತುಗಳನ್ನು ಆಡುವುದುಂಟು. ಅನಂತರ ಅವನು ತೋರಿಸಿದ ಸಾಹಸದಿಂದ ಆ ವ್ಯಂಗ್ಯವನ್ನು ಮರೆಯಬಹುದು. ನಂಜುಂಡನಂತೂ, ಈ ಸಂದರ್ಭದಲ್ಲಿ ದೇವದೂತನ ಮೂಲಕ ಮುಂದಿನ ಕಥೆಯು ಬೆಳವಣಿಗೆಗೆ ಕಾರಣಳಾಗುವ ಮಾತಂಗಿಯ ವಿಷಯವನ್ನು ತಿಳಿಸುತ್ತಾನೆ. ಗಂಗನ ಒಂದು ಪ್ರತಿಯಲ್ಲಾದರೋ (ಗಂ. ಳ.) ರತ್ನಾಜಿಯೇ ಛಲಹೊತ್ತು ಸತ್ತಳೆಂದು ವರ್ಣಿತವಾಗಿದೆ.

ಕುಮಾರರಾಮನ ಕಟ್ಟಕಡೆಯ ಕಾಳಗದ ವರ್ಣನೆಯಂತೂ ಅತ್ಯದ್ಭುತವಾಗಿದೆ. ಮೂವರು ಕವಿಗಳೂ ಇದನ್ನು ಮನಸೆಳೆಯುವಂತೆ ನಿರೂಪಿಸಿರುತ್ತಾರೆ. ಮಾತಂಗಿ ದಂಡೆತ್ತಿ ಬರುವ ಈ ಪ್ರಕರಣ ಆಕೆಯ ಸಮಯೋಚಿತವಾದ ಸಾಹಸ, ಸಂಯಮ, ಸಂಕಲ್ಪಗಳಿಂದ ಕೂಡಿ ಬೆರಗುಗೊಳಿಸುವಂತಿದೆ. ಕಟ್ಟಕಡೆಯ ತನಕ ಹೋರಾಡಿ ಹೆಂಗಸಿನ ಮೇಲೆ ಕೈಮಾಡಲಿಚ್ಛಿಸದ ರಾಮನ ದುರಂತ, ಆತನಿಗಾಗಿ ತಮ್ಮ ಜೀವನನ್ನೇ ಮೀಸಲಿಟ್ಟಿದ್ದ ಕಾಟಣ್ಣ, ದೇವಿಶೆಟ್ಟಿಯ ಲಿಂಗ, ಬಾದೂರ ಮೊದಲಾದ ವೀರಾಧಿವೀರರ ಸಾವಿನ ಪರಂಪರೆ ಮುಂತಾದುವು ಕವಿಗಳ ದೃಷ್ಟಿಗೆ ಬೀಳದೆ ಇಲ್ಲ. ಗಂಗನ ನಿರೂಪಣೆ ಸರಳವಾಗಿದ್ದು, ಸಹಜವಾಗಿದ್ದು ಪ್ರಭಾವಶಾಲಿಯಾಗಿದೆ. ನಂಜುಂಡನ ಯುದ್ಧವಿವರಗಳು ಅಲಂಕಾರಗಳಿಂದ ನಿಬಿಡವಾಗಿರುವುವಲ್ಲದೆ, ಮಧ್ಯೇ ಮಧ್ಯೇ ಪ್ರವೇಶಿಸುವ ವಂದಿಮಾಗಧರ ಹೊಗಳಿಕೆ ತೆಗಳಿಕೆಗಳು ಕಾವ್ಯದ ಗತಿ

ಯನ್ನೇ ಸ್ವಲ್ಪಮಟ್ಟಿಗೆ ಕುಂದಿಸಿವೆ. ಕುಮಾರರಾಮನ ಕೈಲಾಸಾಭಿಗಮನವಂತೂ ಪವಾಡಮಯವಾಗಿದೆ. ಮಹಲಿಂಗಸ್ವಾಮಿಯ ಕಥನ ಕ್ರಮ ಗಂಗನನ್ನೇ ಅನುಸರಿಸಿದ್ದರೂ ಮಾತಂಗಿಯ ಜನ್ಮಕಾರಣ, ರಾಮನ ಮಗನ ಜನನ, ಯಲ್ಲರಸನ ಸೃಷ್ಟಿ, ರಾಮನಿಗೆ ದೊರೆತ ಕುಲದೇವತೆಯ ಪಟ್ಟ, ಆತನ ಹೆಸರಿನ ಜಾತ್ರೆ ಮೊದಲಾದುವು ಕಥೆ ಹೇಗೆ ಬೆಳೆಯಿತೆಂಬ ಕಲ್ಪನೆಯನ್ನು ಉಂಟುಮಾಡಿಕೊಡುತ್ತದೆ. ರಾಮನ ಅಂತ್ಯ ಕಾಲದ ವರ್ಣನೆ ಮೂವರಲ್ಲಿಯೂ ಮಿಗಿಲಾಗಿ ಬಂದಿದೆ. ಮಾತಂಗಿಯ ಪಾತ್ರದ ರೂಪರೇಖೆಗಳು ಎಲ್ಲಿಯೂ ಮಾಸಿಲ್ಲ. ಗಂಗನಲ್ಲಿ ವಿದಿತವಾಗುವ ಆಕೆಯ ಪರಾಕ್ರಮ, ನಂಜುಂಡನಲ್ಲಿ ವಿಲಾಸ ವಿಭ್ರಮಗಳ ಮಧ್ಯೆ ಸ್ವಲ್ಪ ಬಣ್ಣ ಬದಲಾಯಿಸಿದರೆ, ಮಹಲಿಂಗಸ್ವಾಮಿಯ ರಚನೆಯಲ್ಲಿ ಆಕೆಯೂ ಒಬ್ಬ ಮಹಾಸತಿಯಾಗುತ್ತಾಳೆ.

ಕುಮಾರರಾಮನ ಪರದಾರ ಸೋದರತ್ವವನ್ನು ಕುರಿತ ಕಥಾಭಾಗ ಕಾವ್ಯದ ಮೂರನೆಯ ಒಂದು ಭಾಗಕ್ಕೆ ಕಡಮೆಯಿಲ್ಲದಷ್ಟಿದೆ. ಮೂರು ಜನ ಕವಿಗಳೂ ಈ ಕಥಾವಸ್ತುವನ್ನು ಯಾವ ವ್ಯತ್ಯಾಸವೂ ಇಲ್ಲದಂತೆ ನಿರೂಪಿಸಿರುತ್ತಾರೆ. ಕುಮಾರರಾಮನು ಮುತ್ತಿನ ಚೆಂಡನ್ನು ಬೇಡುವುದರಿಂದ ಮೊದಲ್ಗೊಂಡು ಆತನಿಗೆ ಒದಗುವ ನೆಲಮಾಳಿಗೆಯ ವಾಸದವರೆಗೆ ಕಥೆಯ ಒಂದೊಂದು ಅಂಶವೂ ಕುತೂಹಲಕಾರಿಯಾಗಿದೆ. ಹೆತ್ತ ತಾಯಿಯಾದ ಹರಿಯಾಲವ್ಮನ ಬಳಿಗೆ ಚೆಂಡನ್ನು ಕೇಳಲು ಹೋಗುವ ರಾಮನ ಸಂದರ್ಭ ಒಂದು ರೀತಿಯಾಗಿ ತಾಯಿ ಮಗನ ಹೃದಯಾಂತರಾಳವನ್ನು ವ್ಯಕ್ತಪಡಿಸುವಂತಿದ್ದರೆ, ಅದೇ ಮಗನು ಮಲತಾಯಿಯ ಬಳಿ ಅದೇ ಚೆಂಡನ್ನು ಬೇಡಲು ನಡೆದು ಪಡಬಾರದಪಾಡುಪಟ್ಟು ಅಪವಾದಕ್ಕೆ ಗುರಿಯಾಗುವುದು ಮನಸ್ಸನ್ನು ತಲ್ಲಣಗೊಳಿಸುವಂತಿದೆ. ಈ ಎರಡು ಘಟನೆಗಳನ್ನೂ ಮೂವರು ಕವಿಗಳೂ ತಮ್ಮ ತಮ್ಮ ಶಕ್ತ್ಯನುಸಾರ ವರ್ಣಿಸಿರುತ್ತಾರೆ. ನಂಜುಂಡನಲ್ಲಿ ಹರಿಹರದೇವಿಯ ಆತಂಕ, ಮಗನಿಗೆ ಹೇಳುವ ಹಿತೋಕ್ತಿಗಳು, ನಿರ್ವಾಹವಿಲ್ಲದೆ ಒಪ್ಪಿಕೊಳ್ಳುವ ಸನ್ನಿವೇಶಗಳು ಬಹಳ ಕ್ಷಿಪ್ರವಾಗಿಯೇ ಮುಗಿದರೆ, ಉಳಿದ ಇಬ್ಬರೂ ಬಲಿ ಮೊದಲಾದ ಇತರ ಅಂಶಗಳನ್ನು ಸೇರಿಸಿ ಮತ್ತಷ್ಟು ಬೆಳೆಸಿರುತ್ತಾರೆ. ರತ್ನಾಜಿಯ ವಿರಹ ವೇದನೆ, ಸಂಗಿಯ ಸಮಯೋಚಿತ ಸಮಾಧಾನವಾಕ್ಯಗಳು ಮೊದಲಾದುವುಗಳನ್ನು ನಂಜುಂಡನು ಬೆಳೆಸಿರುವಷ್ಟುಮಟ್ಟಿಗೆ ಗಂಗನಾಗಲಿ, ಮಹಲಿಂಗಸ್ವಾಮಿಯಾಗಲಿ ಬೆಳೆಸಿಲ್ಲ. ರತ್ನಿಗೂ ರಾಮನಿಗೂ ನಡೆಯುವ ಸಂಭಾಷಣಾ ವಿಭಾಗ ಗಂಗನ ಕೃತಿಯಲ್ಲಿ ಚುರುಕಾಗಿ ಸಾಗುತ್ತದೆ. ಈ ಸಣ್ಣ ಪುಟ್ಟ ಅಂತರಗಳು ಹೇಗೇ ಇದ್ದರೂ, ಎಲ್ಲ ಕವಿಗಳೂ ತಮ್ಮ ಮುಖ್ಯ ಗುರಿಯನ್ನು ತಪ್ಪದೆ ಸಾಧಿಸುತ್ತಾರೆ.

ಕುಮಾರರಾಮನ ಕಥೆಯಲ್ಲಿ ಕಂಡುಬರುವ ವಿಷಯಪ್ರಾಶಸ್ತ್ಯವನ್ನೂ ವಿಭಜನಾಕ್ರಮವನ್ನೂ ನೋಡಿದರೆ ಈ ಕವಿಗಳು ಎಷ್ಟು ನೈಪುಣ್ಯದಿಂದ ತಮ್ಮ ತಮ್ಮ ಕೃತಿಯನ್ನು ನಿರ್ಮಿಸಿದ್ದಾರೆ ಎನ್ನಿಸುತ್ತದೆ. "ಮಹಾಪ್ರಬಂಧ" ವನ್ನಾಗಿ ಮಾಡಲು ತೊಡಗಿರುವ ನಂಜುಂಡನ ಸಾಹಸ ಒಂದು ಬಗೆಯಾದರೆ, ಇದ್ದದ್ದನ್ನು ಇದ್ದಂತೆಯೇ ಹೇಳಿ ಹಾಡಿ ತಣಿಯುವ ಪಾಂಚಾಳಗಂಗನ ಸಂವಿಧಾನ ಕೌಶಲ ಮತ್ತೊಂದು ಬಗೆಯಾದುದು. ಹಿಂದಿನವರು ಹಾಕಿಕೊಟ್ಟ ದಾರಿಯಲ್ಲೇ ನಡೆದರೂ ಮಹಲಿಂಗಸ್ವಾಮಿ ಅಲ್ಲಲ್ಲಿಯೇ ತಂಗಿ, ಇತರ ಕಥೆ ಉಪಕಥೆಗಳನ್ನು ಹೇಳುತ್ತ ಕಡೆಗೂ ತನ್ನ ಲಕ್ಷ್ಯವನ್ನು ಬಂದು ಮುಟ್ಟುವ ಆ ಮಂದಗತಿ ಬೇರೊಂದು ತೆರನಾದುದು. ಸಾಹಸ ಮತ್ತು ಶೀಲ ಸಂಪನ್ನತೆಗಳನ್ನು ಸರಿಸಮನಾಗಿ ಈ ವಸ್ತುವಿನಲ್ಲಿ ಅಳವಡಿಸಿಕೊಂಡು ಕೃತಿರಚನೆ ಮಾಡಿರುವ ಈ ಒಬ್ಬೊಬ್ಬ ಕವಿಯೂ ಕೃತಕೃತ್ಯನಾಗಿದ್ದಾನೆ.

## ವರ್ಣನೆಗಳು

ಕುಮಾರರಾಮನ ಕಥೆಯಲ್ಲಿ ಶೌರ್ಯ ಮತ್ತು ಶುಚಿತ್ವಗಳು ಪ್ರಧಾನವಾಗಿ ನಿಲ್ಲುವುದರಿಂದ, ಇಲ್ಲಿ ಯುದ್ಧಗಳಿಗೂ, ಕುಮಾರರಾಮನ ಪರದಾರ ಸೋದರತ್ವಕ್ಕೂ ಸಂಬಂಧಿಸಿದಂತೆ ಹಲವಾರು ವರ್ಣನೆಗಳು

ಬಂದಿವೆ. ಇವುಗಳಲ್ಲದೆ, ಪ್ರಾಸಂಗಿಕವಾಗಿ ಇತರ ಕೆಲವು ವರ್ಣನೆಗಳೂ ಕಂಡುಬರುತ್ತವೆ. ವ್ಯಾಸಂಗದ ದೃಷ್ಟಿಯಿಂದ ಇವುಗಳನ್ನು ಸ್ಥಳವರ್ಣನೆ, ಯುದ್ಧವರ್ಣನೆ ಮತ್ತು ಸ್ವಭಾವವರ್ಣನೆ ಎಂಬುದಾಗಿ ವಿಂಗಡಿಸಿಕೊಂಡು ಇಲ್ಲಿ ಪರಿಶೀಲಿಸಿದೆ.

ನಂಜುಂಡನು ಮಹಾಕಾವ್ಯದ ಸರಣಿಯನ್ನು ಅನುಸರಿಸಿ, ತನ್ನ ಕಾವ್ಯವನ್ನು ಸಮುದ್ರವರ್ಣನೆಯಿಂದ ಆರಂಭಿಸುವನು. "ಈ ಕಥೆಗಾವುದು ಮೊದಲೆನೆ ತೆರೆಗಳ ನೂಕು ತಾಕಿಂದ ರತ್ನಗಳ ಆಕರದಿಂದ ನಾನಾ ಜಲಚರಗಳಿಂದಾ ಕಡಲಿರದೊಪ್ಪುತಿಹುದು" ಎಂದು ಪ್ರಾರಂಭಿಸಿ, "ಕಡೆಯ ಬೇಡಿನ್ನೆನ್ನನೆಂದು ಬೊಮ್ಮಗೆ ಮೊಱೆಯಿಡುವ ಬಲ್ಸರವಿದೆಂಬಂತೆ ಕಡು ಸೊಗಯಿಪ ಘುಳುಘುಳುರವದಿಂದಾ ಕಡಲು ಕಣ್ಗೆಸೆದಿರುತಿಹುದು", "ನೀರೆಂಟ ಪೋಪ ಕುಡಿಯಲಿರದೈತಪ್ಪ ವಾರಿದಗಳ ವಂಗಡದ ಆರಭಟೀವೃತ್ತಿಯಿಂದಾ ನೀರಭಂಡಾರ ಬೆಡಂಗಾಗಿಹುದು" ಎಂಬುದಾಗಿ ಎರಡು ನುಡಿಗಳನ್ನು ಆಡಿ, ಮುಂದೆ ಕುಂತಳ ದೇಶ, ಕರ್ನಾಟ ಮಹೀಮಂಡಲ, ಪಂಪಾಕ್ಷೇತ್ರ ಮತ್ತು ಹೊಸಮಲೆದುರ್ಗಗಳನ್ನು ವರ್ಣಿಸುವನು. ಈ ಪುರವರ್ಣನೆಯಲ್ಲಿ ಹೆಜ್ಜೆಹೆಜ್ಜೆಗೂ ನಂಜುಂಡನ ಸಾಂಪ್ರದಾಯಿಕ ಶ್ರದ್ಧೆಯನ್ನು ಕಾಣಬಹುದು. "ಹರಿಯುರಮನೆ ಹರನಾಡುಂಬೊಲ ಸರಸಿರುಹಸಂಭವನೊಸೆದಿರ್ಪ ಕರುನಾಡಮನೆ ಕನಕಾಚಲವದು ಕಣ್ಗೆ ಕರವೆಸೆದಿಹುದು ಚೆಲ್ವಿಂಪ" ಎಂದು ಕನಕಪರ್ವತವನ್ನು ಪರಿಪರಿಯಾಗಿ ವಿವರಿಸಿ, ಆ ಮೇರುಪರ್ವತಕ್ಕೆ ದಕ್ಷಿಣದಲ್ಲಿ "ಕರ್ನಾಟ ಮಹೀಮಂಡಲ ಗಾಡಿವೆತ್ತು" ಕಾಣುವುದು ಎನ್ನುವನು. ಕನ್ನಡ ದೇಶದ ವರ್ಣನೆಯಂತೂ "ಕಾವೇರಿಯಿಂದ ಗೋದಾವರಿವರೆಗವಿರ್ದಾ ವಸುಧಾತಳವಳಯ ಭಾವಿಸೆ ಕರ್ನಾಟಕ ಜನಪದವನಾವನೊಲಿದು ಬಣ್ಣಿಸುವನು" ಎಂದು ನೃಪತುಂಗನ ಮಾರ್ದನಿಯಿಂದಲೇ ಮೊದಲಾಗುತ್ತದೆ. ಸುಮಾರು ನಲ್ವತ್ತೈದು ಪದ್ಯಗಳಷ್ಟು ವಿಸ್ತಾರವಾಗಿ ಕನ್ನಡನಾಡಿನ ಮತ್ತು ಜನರ ವರ್ಣನೆಯನ್ನು ಮಾಡಿರುತ್ತಾನೆ. ಈ ವಿಸ್ತಾರವಾದ ಕರ್ನಾಟಕದ ಮಧ್ಯೆ ಭೂಸತಿಯ ಕುಂತಣದಂತೆ", "ಮಾನಿತ ಕುಂತಣ ಜನಪದ ಸಿರಿಯಿಂದಾ ನಾಕವನೇಳಿಸುತ" ಇದೆ ಎನ್ನುವನು. ಈ ನಾಡಿನಲ್ಲಿಯೇ "ಶ್ರೀ ಕೈಲಾಸ ಕೇತಾರ ಕಾಂಚೀಪುರ ಗೋಕರ್ಣಗಳನೇಳಿಸುತ ಲೋಕವಿನುತ ಪಂಪಾಕ್ಷೇತ್ರ" ನೆಲಸಿರುವುದು. ಹಂಪೆಯೆಂದ ಕೂಡಲೆ ತುಂಗಭದ್ರಾನದಿಯನ್ನು ನೆನೆಯದವರಾರು! "ಫೇನ್ನ ತರಂಗಾವರ್ತ ಕರ್ಕಟಕ ಪಾಠೀನ ಕಮಠ ಕುಲದಿಂದ ತಾನುಱೆ ಕಣ್ಗೆಸೆದಿಹುದಲ್ಲಿ ತುಂಗಭದ್ರಾ ನದಿ ಕಡು ಚೆಲ್ವುವಡೆದು" ಎಂದು ನಂಜುಂಡನು ತನ್ನ ಕಾಣಿಕೆಯನ್ನು ನದಿಗೆ ಅರ್ಪಿಸುವನು. ಒಂದು ಕಡೆ, ಪಂಪಾಸರೋವರ ಮನೋಹರವಾಗಿ ತೋರಿಬರುತ್ತದೆ; ಮತ್ತೊಂದು ಕಡೆ ಮಂದರಪರ್ವತ ಸದೃಶವಾದ ಮಾತಂಗ ಪರ್ವತ ಕಂಡುಬರುತ್ತದೆ. ಹೀಗೆ "ಆ ಕಮಲಾಕರ ಮೊದಲಾದ ತೀರ್ಥಾನೀಕದಿಂದಾ ಪಂಪಾಕ್ಷೇತ್ರ ಆ ಕಾಶಿಯನಾ ಕೇತಾರವನಾ ಗೋಕರ್ಣವ ನಗುತಿಹುದು." "ಆ ಕ್ಷೇತ್ರದ ಮಧ್ಯದಲಿ ಪಂಪಾಪುರಿ ಸಾಕ್ಷಾತ್ಕರಿಸಿ ಕಣ್ಗೆಸೆವ ಮೋಕ್ಷದಂತಿರ್ಪುದು ವಿಶ್ವಾಧಿಪ ವಿರೂಪಾಕ್ಷಲಿಂಗನನೊಳಕೊಂಡು." ನಂಜುಂಡನಿಗೆ ಇಷ್ಟಕ್ಕೇ ತೃಪ್ತಿಯಾಗದೆ, ಹಂಪೆಯ ಕ್ಷೇತ್ರವನ್ನು ಒಂದು ಸಂಧಿ ಪೂರ್ತಿಯಾಗಿ ವಿವರಿಸಿರುವನು. ತರುವಾಯ ಕುಮಾರರಾಮನ ಕಥೆಗೆ ಸಂಬಂಧಿಸಿದಂತೆ ಹೊಸಮಲೆಯದುರ್ಗದ ಪರಿಚಯಕ್ಕೆ ಮೊದಲು ಮಾಡುವನು. "ಆ ವಿರೂಪಾಕ್ಷನ ನಿಳಯದ ದಕ್ಷಿಣ ಭೂವಳಯದೊಳು ಮೃಗಗಳ ಆವಾಸದಂತಿರ್ಪುದು ಹೊಸಮಲೆಯದನಾವನೊಲಿದು ಬಣ್ಣಿಸುವನು" ಎಂದು ಈ ವಿಷಯಕ್ಕೆ ಪ್ರವೇಶಿಸುವನು. ಈ ಹೊಸಮಲೆಯೆಂಬುದು ಅತ್ಯಂತ ವಿಸ್ತಾರವಾದ ಒಂದು ವಿಪಿನ. "ಇಡಿಕಿಱಿದಿರ್ದ ನಾನಾ ಕುಜಕುಲದಿಂದ ಗಿಡು ಮೆಳೆ ಪಳ್ಳ ಕೊಳ್ಳಗಳ ಗಡಣದಿಂದೆಲರಡಿಯಿಡದಲ್ಲಿ ರವಿ ಕೈದುಡುಕಲಮ್ಮನು ಪೇಳ್ವೆನೇನ" ಎನ್ನುವಷ್ಟುಮಟ್ಟಿಗೆ ಅದು ಗಹನ; ಭಯಂಕರ. ಅದರ ಮಧ್ಯೆ ಒಂದು ಗಿರಿದುರ್ಗವಿತ್ತು. ಆ ದುರ್ಗದ ಎತ್ತರವನ್ನು ಈ ಒಂದೇ ಒಂದು ಪದ್ಯದ ಮೂಲಕ ಊಹಿಸಿಕೊಳ್ಳಬಹುದು. "ಪಿರಿದು ಮಾತೇನಾ ದುರ್ಗದ ಮೇಗಣ ಮರಗೊಂಬುಗಳ ಪಾಯ್ದೊದೆದು ಸುರಿವವು ಮುಗಿಲ ಮುತ್ತುಗಳೆಂದೆನಲದಱರವನದೇನ ಬಣ್ಣಿಸುವೆ" ಎನ್ನುತ್ತಾನೆ ಕವಿ. "ಗರುಡನಗರಿಗೆ ಗಂಧರ್ವಪುರಿಗೆ ಕಿನ್ನರ

ಪಟ್ಟಣಕೆ ಚೆಲ್ವಿಂದ ಸರಿದೊರೆ ಪಡಿಯೆಂದೆನೆ ಪೊಳಲೊಂದಾ ಗಿರಿಯ ಮೇಲಿಹುದೊಪ್ಪವೆತ್ತು." ಈ ಊರಿನ ರಚನೆ, ಜನ, ಹೊಲ, ಗದ್ದೆ, ಪೈರು, ಪಚ್ಚೆ ಮುಂತಾದುವುಗಳನ್ನೆಲ್ಲ ಕವಿ ಹಿಗ್ಗಿ ಹಾಡಿರುತ್ತಾನೆ. ಈ ಸೊಬಗಿನ ಮಧ್ಯೆ "ಪುರಮೆಂಬ ಪುಂಡರೀಕದ ನಟ್ಟನಡುವಣ ವರಕರ್ಣಿಕೆಯಿದೆಂಬಂತೆ ಸಿರಿಯಿಂದ ಸಿಂಗರದಿಂದರಮನೆ ಕಣ್ಗೆ ಕರವೆಸೆದಿಹುದು ಚೆಲ್ವಿಂದ." ಅದರ ಒಡೆಯನೇ ಕರ್ಣಾಟಪತಿ ಕಂಪಿಲ. ಆತನ ಧರ್ಮಪತ್ನಿಯೇ ಹರಿಹರದೇವಿ. ಈ ರೀತಿ ನಂಜುಂಡನು ತನ್ನ ಕಾವ್ಯದ ಆದಿಯಲ್ಲಿ ಹೊಸಮಲೆದುರ್ಗದ ವರ್ಣನೆಗೆ ಬಹು ದೀರ್ಘವಾದ ಪೀಠಿಕೆಯನ್ನು ರಚಿಸಿರುತ್ತಾನೆ.

ಗಂಗನ ಪ್ರತಿಗಳಲ್ಲಿ ಇದೇ ಸಂದರ್ಭ ಮೂರು ತೆರನಾಗಿ ನಿರೂಪಿತವಾಗಿರುವುದರಿಂದ ಅಲ್ಲಿನ ಕ್ರಮ ಸ್ವಲ್ಪಮಟ್ಟಿಗೆ ಭಿನ್ನವಾಗಿದೆ. "ಗಂ. ೧"ರಲ್ಲಿ ನೇರವಾಗಿ ಕುಮ್ಮಟದುರ್ಗದ ವರ್ಣನೆಯೇ ಮೊದಲಾಗುತ್ತದೆ. ಅಲ್ಲಿನ ಕೋಟೆ ಕೊತ್ತಲುಗಳ ಚಿತ್ರ ಕಂಡುಬರುತ್ತದೆ. "ಗಂ. ೫" ರಲ್ಲಿ ರಾಮದೇವರಾಯನಿಗೆ ಮುಮ್ಮಡಿ ಸಿಂಗನು ಆಶ್ರಿತನಾಗಿದ್ದನೆಂಬ ಪೂರ್ವಚರಿತ್ರೆಯಿಂದ ಮೊದಲಾಗಿ, ಕಂಪಿಲನು ಒಂದು ದಿನ ಬೇಟೆಗಾಗಿ ಹೋಗಿರಲು ಮೊಲವೊಂದು ಬೇಟೆಯ ನಾಯಿಗಳನ್ನು ಬೆದರಿಸಿ ಹಿಮ್ಮೆಟ್ಟಿಸಿದ್ದನ್ನು ಕಂಡು ಸೋಜಿಗಗೊಳ್ಳುತ್ತಾನೆ. ವಿಚಾರಿಸಲು ಅದೇ ಹೊಸಮಲೆದುರ್ಗವೆಂದು ತಿಳಿದುಬರುತ್ತದೆ. ವಿದ್ವಾಂಸರು "ಈ ದುರ್ಗ ಅಷ್ಟ ದಿಕ್ಕಿನ ವ್ಯಾಘ್ರ ಖಲೆಯು (?), ಈ ದುರ್ಗ ಲಕ್ಷ್ಮಿಯ ಬೀಡು, ಈ ದುರ್ಗ ಕಲಿಗಳ ನೆಲೆಯನಿವದು (?), ಈ ದುರ್ಗ ವೈರಿಗಂಕುಶವು" ಎಂದು ಹೇಳುವರು. ಅನಂತರ ಕಂಪಿಲನು ಅದನ್ನೇ ರಾಜಧಾನಿಯನ್ನಾಗಿ ಮಾಡಿಕೊಳ್ಳಲಿಚ್ಛಿಸಿ, ಮಂತ್ರಿಗೆ ಹೇಳಿ, ಅಗಳು, ಆಳ್ವೇರಿ, ಅಟ್ಟಳೆ, ಅಂಬುಗಂಡಿ, ಹುಲಿಮುಖ, ಕೊತ್ತಳ ಮೊದಲಾದುವುಗಳನ್ನು ನಿರ್ಮಿಸಿ, ಅಂಗಡಿ ಅರಮನೆಗಳನ್ನು ಏರ್ಪಡಿಸಿ, ವಾಸಿಸಲು ತಕ್ಕಂತೆ ವ್ಯವಸ್ಥೆ ಮಾಡಿಸಿದನು. "ಗಂ. ೨" ರಲ್ಲಿ ಸ್ವಲ್ಪಮಟ್ಟಿಗೆ ಇದೇ ಕ್ರಮವನ್ನೇ ಹೋಲುವಂತೆ ಸಂಗ್ರಹವಾಗಿ ಚಿತ್ರಿಸಿದೆ. "ಸೃಷ್ಟಿಗಧಿಕ ಹೊಸಮಲೆಯೊಳು ದುರ್ಗವ ಕಟ್ಟಿ ಆಳುವ ಕಂಪಿಲನು ಕೊಟ್ಟ ಸಂಬಳ ಬತ್ತ ಪಡಿಗಳನಡಸಿ ಬಲುದಿಟ್ಟ ಈ ಬೇಡನೆಂದೆನಿಸಿ", "ಅಗಳು ಆಳ್ವೇರಿಯ ಮಿಗೆ ಜಿಡ್ಡಿ ಕೊತ್ತಳ ಜಗಳಕ್ಕೆ ಭಾರಿ ಹುಲಿಮುಖವು ನೆಗಳಿಹ ಕೋಟೆಗೆ ಫಣಿಪನಂತೆಸೆದಿಹ ಅಗಣಿತ ತೆನೆಗಳೊಪ್ಪಿದುವು" ಎಂದು ನಾಲ್ಕೈದು ಪದ್ಯಗಳಲ್ಲಿಯೇ ಈ ವೃತ್ತಾಂತವನ್ನು ಮುಗಿಸಿದೆ. ಮುಖ್ಯವಾಗಿ, ಇಲ್ಲಿ ಗಮನಾರ್ಹವಾದುದೆಂದರೆ, ಹೊಸಮಲೆದುರ್ಗವನ್ನು ಕಟ್ಟಿದ ಕೀರ್ತಿ ಕಂಪಿಲನಿಗೆ ಸೇರಿದ್ದು. ಅಲ್ಲಿದ್ದ ಪ್ರಕೃತಿಸಿದ್ಧವಾದ ಭದ್ರತೆ ಆತನ ಕೋಟೆಯ ನಿರ್ಮಾಣಕ್ಕೆ ಅನುಕೂಲವಾಯಿತು. ಈ ನಿರೂಪಣೆ ಕಥೆಗೆ ಹೊಂದಿಕೊಂಡು ಬರುತ್ತದೆ. ನಂಜುಂಡನು ಕೋಟೆಯ ಹೆಸರನ್ನು ಹೇಳಿ, ಉಳಿದ ವಿವರಗಳನ್ನು ಬೆಳೆಸಿದ್ದರೆ, ಈ ಪ್ರತಿಗಳಲ್ಲಿ ಕೋಟೆಯ ನಿರ್ಮಾಣಕ್ಕೇ ಪ್ರಾಧಾನ್ಯ ದೊರೆತಿದೆ.

ಮಹಲಿಂಗಸ್ವಾಮಿ ಕುಮಾರರಾಮನ ಮಗನಾದ ಜಟ್ಟಂಗಿರಾಯನು ರಾಜ್ಯವಾಳುತ್ತಿದ್ದನೆಂದು ತಿಳಿಸಿ "ರಾಮನ ಕೃತಿಯೊಳು ಮೊದಲಾವುದೆಂದರೆ ಚತುರಾಷ್ಟ್ರಕಧಿಕ ಹಮ್ಮಿರಾ, ರತ್ನಮಾಣಿಕದಂತೆ ಮೆರೆವ ಕುಮ್ಮಟದುರ್ಗಯಿಪ್ಪುದು ಕಿರಣ ಪ್ರಭೆಯಂತೆ" ಎಂದು ಪ್ರಾರಂಭಿಸುವನು. ಅನಂತರ ಕಥೆ ಬಹುಮಟ್ಟಿಗೆ ಮುಂದುವರಿದ ಬಳಿಕ, ನಾರದರು ಮುನಿಗಳನ್ನು ಕುರಿತು ರಾಮನ ಜನನವೇ ಮೊದಲಾದ ವೃತ್ತಾಂತವನ್ನು ತಿಳಿಸುವಾಗ ಹೊಸಮಲೆಯ ಸುದ್ದಿ ಬರುತ್ತದೆ. ನಾರದರು "ರಾಯ ರಾಮನ ಜನನ ಕಾಲಗತಿಗಳೆಲ್ಲ ಹೇಳಲ್ಕೆ ತಮ್ಮ ಮುನಿಜನಕ್ಕೆ ಸುರಲೋಕ ಹರಲೋಕ ಕಳದಾಗ ಹೊಸಮಲೆಯ ಗಿರಿಯ ಸಮಿಪ(ಕ್ಕೆ) ಬರಲು", ಮುನಿಗಳು "ಸುಮ್ಮನೆ ಬರನೀತ" ಎಂದು ಆತನ ಆಗಮನಕ್ಕೆ ಕಾರಣವನ್ನು ಕೇಳುವರು. ಆಗ ನಾರದರು "ಸಂತಾನಗಳು ತೊಲಗುವ ವ್ಯಾಳ್ಯ ಒದಗಿತ್ತು ನಿಮಗೆ ಯೋಗ ಬಂದಿತ್ತು ಯಡೆವಿದ್ಯಾ (?) ಕಾಳಗ ಹಣ್ಣುವುದು ಕೋಟೆ ಜೀವನವಳಿದು ರಣಭೂಮಿಯಾಗುವುದು ಈ ಬಳಿಯು" ಎಂದು ಹೇಳುವರು. ಅವರು ಆಶ್ಚರ್ಯಗೊಂಡು, ಕಾಳಗವನ್ನು ಮಾಡುವ ಕಲಿ ಯಾರೆಂದು ಕೇಳಲು "ಕುಮ್ಮಟ

ದೊಳು ರಾಮ ಮುನ್ನೆ ಜನಿಸಿದ ಭೇದ ನಿಮ್ಮ ಆತ್ಮದಲಿ ತಿಳಿದಿಲ್ಲವೆ?", "ಕೆ (ಗೆ?) ಲ್ಲುವ ಸಾಹಸ ಪಡೆ ಕೊಂಡು ಹರನೊಳು ಇಲ್ಲೀಗ ಜನಿಸಿದ ಕೇಳಿ" ಎಂದು ಉತ್ತರವಿತ್ತು ಭವಿಷ್ಯವನ್ನು ಹೇಳಿ ಹೋಗುವರು. ಅಂತೂ, ಕಥೆಯ ನಿರೂಪಣೆಗೆ ತಕ್ಕಂತೆ ಅಲ್ಪಸ್ವಲ್ಪ ಸ್ಥಳಪರಿಚಯ ಮಾಡಿಕೊಟ್ಟಂತಾಯಿತೇ ಹೊರತು, ಇದು ವರ್ಣನೆಯೆನ್ನಿಸುವುದಿಲ್ಲ.

ಊರು, ಕೇರಿ ಮತ್ತು ಸ್ಥಳಗಳ ವರ್ಣನೆಯನ್ನು ಮಾಡುವುದರಲ್ಲಿ ನಂಜುಂಡನಲ್ಲಿ ಕಂಡುಬರುವ ವಾಗ್ವಿಲಾಸ (ಒಮ್ಮೊಮ್ಮೆ ಅತಿಯೆನ್ನಿಸಿ ಬೇಸರವಾಗುವುದೂ ಉಂಟು.) ಉಳಿದವರಲ್ಲಿ ಇಲ್ಲ. ಕೇವಲ ಸಂಕ್ಷಿಪ್ತವಾಗಿಯೋ ಸೂಚ್ಯವಾಗಿಯೋ ವಿಷಯವನ್ನು ಪ್ರಸ್ತಾವಿಸಿ ಮುಂದೆ ಸಾಗುತ್ತಾರೆ.

ಯುದ್ಧದ ವರ್ಣನೆಗಳನ್ನು ಆರಿಸಿ ಹೇಳುವುದೇ ಬಹು ಪ್ರಯಾಸದ ಕೆಲಸ. ಕಾವ್ಯದ ಪ್ರಮುಖ ಕಥಾ ಭಾಗವೇ ಅದಾಗಿರುವುದರಿಂದ ಮೂರು ಜನ ಕವಿಗಳೂ ಸಾಕಾದಷ್ಟು ವಿಸ್ತಾರವಾಗಿಯೇ ಮಾಡಿರುತ್ತಾರೆ. ಕಥಾಸಂಗ್ರಹಗಳಲ್ಲಿ ಈಗಾಗಲೇ ಇದರ ಪರಿಚಯ ಆಗಿರುತ್ತದೆ. ಆದ್ದರಿಂದ, ಯುದ್ಧ ಸಂವಿಧಾನಕ್ಕೆ ಸಂಬಂಧಿಸಿ ದಂತೆ ಕೋಟೆಯ ಕಾಳಗ ಮತ್ತು ಇರುಳ ಕಗ್ಗೊಲೆಗಳನ್ನು ಈ ಕವಿಗಳು ಹೇಗೆ ನಿರೂಪಿಸಿರುತ್ತಾರೆಂಬುದನ್ನು ಸಂಗ್ರಹವಾಗಿ ಇಲ್ಲಿ ನೋಡಬಹುದು.

ಕುಮಾರರಾಮನ ಕಟ್ಟಕಡೆಯ ಕಾಳಗವೇ ಎಲ್ಲಕ್ಕಿಂತಲೂ ಭೀಷಣವೂ ದಾರುಣವೂ ಆದದ್ದು. ಈ ಪ್ರಸಂಗವನ್ನು ಒಬ್ಬೊಬ್ಬ ಕವಿಯೂ ವೀರಾವೇಶದಿಂದ ಚಿತ್ರಿಸಲು ಪ್ರಯತ್ನಿಸುವುದು ಸಹಜವೇ ಸರಿ. ಈ ಸಂದರ್ಭದಲ್ಲಿ ಕಂಡುಬರುವ ಕೋಟೆಯ ಕಾಳಗದ ವರ್ಣನೆ ಗಮನಾರ್ಹವಾಗಿದೆ. ಮೊದಲು ಪ್ರೌಢ ಕವಿ ಯಾದ ನಂಜುಂಡನನ್ನೇ ಕುರಿತು ವಿಚಾರಿಸಬಹುದು. ಸುಲ್ತಾನನ ಸೈನ್ಯ ಮಾತಂಗಿಯ ನೇತೃತ್ವದಲ್ಲಿ ಹೊರಟುಬಂದು, ಕುಮ್ಮಟದ ಬಳಿ ಬೀಡುಬಿಟ್ಟಿತಷ್ಟೆ. ಆಗ ಕುಮಾರರಾಮನು ಕಾಟಣ್ಣ ಮೊದಲಾದವರನ್ನು ಕೋಟೆಯ ಕಾವಲಿಗಿಟ್ಟು, ತಾನು ಬಯಲಿನಲ್ಲಿ ನಿಂತು ವೀರಾವೇಶದಿಂದ ಶತ್ರುಸೇನೆಯನ್ನು ಸಂಹಾರ ಮಾಡಲು ತೊಡಗುತ್ತಾನೆ. ಅವನ ಕತ್ತಿಗೆ ಸಿಕ್ಕಿ ಉಳಿದವರೇ ಇಲ್ಲ. ಈ ಏಕಾಂಗ ವೀರನ ಸಾಹಸವನ್ನು ಕಂಡು ಮಾತಂಗಿಯೂ ಚಕಿತಳಾಗುತ್ತಾಳೆ. ಈ ವೇಳೆಗೆ ಮಧುರಖಾನನು ಕುಮ್ಮಟವನ್ನು "ಮೂವಳಸಾಗಿ" ಮುತ್ತಿಗೆ ಹಾಕುತ್ತಾನೆ. ಆ ಚಿತ್ರದ ವರ್ಣನೆ ಹೀಗೆ ಮುಂದುವರಿಯುತ್ತದೆ :

> ತಳಿ ನಡೆ ಚಪ್ಪರ ಡಗ್ಗೆ ಬದ್ದರಗಳ
> ಬಳಿಸಂದು ಭಟರು ಸಂದಣಿಸಿ
> ಬಳಸಿ ಕೋಟೆಯ ಲಗ್ಗೆಯೊಳು ಹತ್ತಿದರು ಕಳ
> ಕಳರವ ಮಸಗೆ ಬಲದೊಳು
>
> ಅಗಳ ಹೂಳಿದರು ಕೋಟೆಯ ಕಲ್ಲ ಕಿತ್ತರು
> ಜಗಳವನಾಳ್ವೇರಿಯೊಳಗೆ
> ನೆಗಳಿದರಾರ್ದು ಕಾಲವರಂದವರ ನೋಡಿ
> ಪೊಗಳಿದರೊಲಿದಾ ಖಾನ
>
> ಬಿದ್ದಾಳನೆತ್ತದೆ ಸತ್ತಾಳನೆಳೆಯದೆ
> ನಿರ್ದಯದಿಂ ಪಟುಭಟರು
> ಪೊರ್ದಿ ಕೋಂಟೆಯ ತೆನೆಯೊಳು ಕಡಿದಾಡಿದ
> ರಾರ್ದು ವೀರಾವೇಶದಿಂದ

ತೊಲೆ ಸಂದಿ ಪೊಟ್ಟಟ್ಟ ಬಂಡಿ ಡೆಂಕಣಿ ಸಂದಿ
ದಲೆ ಭೀಮಗದೆ ಬಿಡದುರಿವ
ಪುಲಿದೊಂದೆ ಪುರಿದ ಮಳಲುಗಳಿಂದೊಳಗಣ
ಕಲಿಗಳಳುಕದೆ ಕಾದಿದರು

ತಱಗೆಂಡ ಕಾದೆಣ್ಣೆ ಅಂಬಲಿವಳೆಯನು
ಕಱದರಾಳ್ವೇರಿಗಿಳದರನು
ಬಱಕೆಯ್ದು ನಿಂದಿಱದಾಡಿದರಾ ದುರ್ಗ
ದುಱುವ ಭಟರು ಛಲವೆದ್ದು (xlv, ೨–೭)

ಈ ರೀತಿ ಕೋಟೆಯು ಮುತ್ತಿಗೆ ಸಾಗಿತು. ಈ ಸ್ಥಿತಿಯನ್ನು ಕಂಡ ಕಾಟಣ್ಣ, ಲಿಂಗ ಮೊದಲಾದವರು ಶತ್ರುಗಳಿಗೆ ಅಭಿಮುಖವಾಗಿ ನಿಂತು ಹೋರಾಡತೊಡಗಿದರು. ನಿಮಿಷಮಾತ್ರದಲ್ಲಿ ಕಾಳಗವು ಉಗ್ರವಾಗಿ ಪರಿಣಮಿಸಿ, ಅನೇಕ ಹೆಸರುವಾಸಿಯಾದ ಕಲಿಗಳು ಸತ್ತು ಬಿದ್ದರು. "ರಣಭೂಮಿಯಂತಕನುಂಡು ಕಕ್ಕಿದಂತಾಯಿತು." ಕಾಟಣ್ಣ ದುರ್ಗವನ್ನು ಒಳಹೊಕ್ಕು ಅಡ್ಡಗಟ್ಟಲು ತೊಡಗಿದನು. ಈ ವೇಳೆಗಾಗಲೆ ಊರಿನ ಹೆಣ್ಣು ಮಕ್ಕಳು ಚಿತಾಪ್ರವೇಶ ಮಾಡಲು ಅಣಿಯಾಗುತ್ತಿದ್ದರು. ಈ ಅಗ್ನಿಯ ಹೊಗೆಯನ್ನು ಕಂಡ ರಾಮನು ತಾನು ಇದ್ದಲ್ಲಿಯೇ "ಪುರಹರನೊಲ್ಮೆ ತಪ್ಪಿತು" ಎಂದುಕೊಂಡು, ತಾನೂ ಊರಿನ ಕಡೆಗೆ ಬರತೊಡಗಿದನು. ಆದರೆ, ಅವನು ಸುಲಭವಾಗಿ ಬರುವಂತಿಲ್ಲ. ಹೆಜ್ಜೆ ಹೆಜ್ಜೆಗೂ ಹಗೆಗಳು ಹಂಗಿಸಿ ಅಡ್ಡಗಟ್ಟುತ್ತಿದ್ದರು. ಗಂಡುಗಲಿಯಾದ ರಾಮನಾದರೋ ಯಾರನ್ನೂ ಲಕ್ಷಿಸದೆ ಒಬ್ಬೊಬ್ಬರನ್ನೂ ಕಡಿದೆಸೆದು, ಅವರ ಅಬ್ಬರವನ್ನು ಅಡಗಿಸಿ, ಪುರದ ಕಡೆಗೆ ಸಾರುತ್ತಿದ್ದನು. ಆತನ ದಿವ್ಯ ತುರಗ "ಮೈಯ ಪೂರಾಯ ಗಾಯಗಳನೆಣಿಸದಾರಯ್ಯುತ ಮೇಲಣ ವನನು ಒಯ್ಯನೊಯ್ಯನೆ ಮದಗಜದಂತೆ ನಡೆದುದು." ದುರ್ಗದಲ್ಲಿ ಹುಲಿಮುಖದ ಬಳಿ ಕಾಟನನ್ನು ಕಂಡನು. ರಾಮನು ಕುದುರೆಯಿಂದ ಕೆಳಗಿಳಿಯುವುದೇ ತಡ ಅದು ಕಣ್ಮುಚ್ಚಿತು. ರಾಮನು ಊರಿಗೆ ಬಂದು ತನ್ನ ಸತಿಯರನ್ನು ಕಂಡು, ಅವರಿಗೆ ಕಡೆಯ ಸಂದೇಶವನ್ನಿತ್ತು, ಮತ್ತೆ ಯುದ್ಧಕ್ಕೆ ಅನುವಾದನು. ದುರ್ಗವನ್ನು ನುಗ್ಗಿ ಬಂದ ಶತ್ರುಗಳೊಂದಿಗೆ ಕದನವು ಮಸಗಿತು. ರಾಮನ ಶರವರ್ಷಕ್ಕೆ ಎದುರು ನಿಲ್ಲುವರಾರು ? ಖಾನ ಖಾನರು ಹೋರಾಡಿ ಮಣ್ಣುಮುಕ್ಕಿದರು. "ಸುರಚಾಪಬಿಲ್ಲಾ ಬಿಲ್ಲ ಟಂಕೃತಿ ಮೊಳಗುಱು ಶರಜಾಲ ಬೆಸ್ಸರಿಯಾ ಇರವಾಗಲಾ ರಾಮ ಮಳೆಗಱದಿಂದ್ರನ ಪರಿಯಂತೆಸೆದನಾಜಿಯೊಳು." ಅಸುವಿನ ಮೇಲೆ ಆಸೆಬಿಟ್ಟ ಎರಡು ಪಡೆಗಳೂ ಮೈಮರೆತು ಹೋರಾಡತೊಡಗಿದ್ದುವು. ತನ್ನ ಅಚ್ಚುಮೆಚ್ಚಿನ ಭಟರು ಒಬ್ಬೊಬ್ಬರಾಗಿ ಸಾಯುತ್ತಿರಲು, ರಾಮನು ಒಬ್ಬನೇ ನಿಂತು ಸಮಸ್ತರನ್ನೂ ಎದುರಿಸುತ್ತಿದ್ದನು. ಕೋಟೆಯನ್ನು ಸುತ್ತಿ ಬಂದಂತೆಯೇ ಸುರುತಾಳನ ಸೇನೆ ಈಗ ರಾಮನನ್ನೂ ಮೂವಳಸಾಗಿ ಮುತ್ತಿತು. ರಾಮನು "ಹತ್ತು ದೆಸೆಯೊಳು ಬಂದೊತ್ತುವ ಖಾನರ ಮೊತ್ತವ ನೋಡಿ ಮೊಗದೊಳು ಹೊತ್ತನು ನಸುನಗೆಯನು." ಕಟ್ಟಕಡೆಯವರೆಗೂ ಬಿಡುವಿಲ್ಲದೆ ಬಾಣಗಳ ಮಳೆಗರೆದು "ಹೆಚ್ಚಿದ ಹೇರಡವಿಯನು ಕಾಳ್ಗಿಚ್ಚು ಸುಟ್ಟು ಬಂದೊಂದು ಬಲ್ಮರನ ಕಿಚ್ಚನಾಶ್ರಯಿಸಿ ನಿಂದಂತೆ" ರಾಮನು ಶಿಲೆಯೊಂದನ್ನು ನೆಮ್ಮಿ ಅಸುವನ್ನು ತೊರೆದನು. ನಂಜುಂಡನು ಈ ಕಾಳಗದ ಒಂದೊಂದು ಅಂಶವನ್ನೂ ತಪ್ಪದೆ ಚಿತ್ರಿಸಿರುತ್ತಾನೆ.

ಗಂಗನಲ್ಲಿಯೂ ಕಡೆಯ ಈ ಕೋಟೆಗಾಳಗ ಕಣ್ಣಿಗೆ ಕಟ್ಟುವಂತೆ ವರ್ಣಿತವಾಗಿದೆ. ಮಾದಿಗಿತ್ತಿ ಮಾತಂಗಿ ಸೇನಾಸಮೇತಳಾಗಿ ಬಂದು ಕುಮ್ಮಟಕ್ಕೆ ಮುತ್ತಿಗೆ ಹಾಕಲು ಏರ್ಪಾಡುಮಾಡಿಕೊಂಡಳು. ಇತ್ತ ರಾಮನು ತನ್ನ ತಂದೆ, ತಾಯಿ ಮತ್ತು ಬಾದೂರಖಾನರನ್ನು ಹೊಸಮಲೆಗೆ ಹೋಗುವಂತೆ ಹೇಳಿ, ತಾನು ಕುಮ್ಮಟದಿಂದಲೇ ಶತ್ರುಗಳನ್ನು ಎದುರಿಸಲು ಅಣಿಯಾದನು. ಆಗ ರಾಮನು "ದುರ್ಗಕ್ಕೆ ಎನಗೆ ಮದುವೆ"

ಎಂದು ಸಾರಿ ಹೇಳಿದನು. ಅಂದಿನ ರಾತ್ರಿ ಕುಮ್ಮಟದವರು ಹೇಗೆ ಎಚ್ಚರವಾಗಿದ್ದರೆಂಬುದನ್ನು ಕವಿ ಒಂದು ಪದ್ಯದಲ್ಲಿ ಚೆನ್ನಾಗಿ ಹೇಳಿರುತ್ತಾನೆ. "ನಳಿನ ಸಖನು ಅಸ್ತಮಾನಕ್ಕೆ ಬಂದರೆ ಕಳೆಯೇರಿತು ಕುಮ್ಮಟವು, ತಳತಳ ಕೈದೀವಿಗೆ ಕೋಟೆ ಸುತ್ತಲಿ ಹೊಳೆಯಿತು". "ತಿರುಗುವ ಲಗ್ಗೆ ಉರುವ ಉಕ್ಕಡಗಹಳೆ ಬಿಡದೆ ಚೀರುವ ಹೆಗ್ಗಾಳೆ ತರತರದಲ್ಲಿ ಕಾವಲ ಮಂದಿ ದುರ್ಗಕ್ಕೆ ಸಿರಿಯ ನಾನೇನ ಹೇಳುವೆನು" ಎನ್ನುತ್ತಾನೆ ಕವಿ. ಬೆಳಗಾಗಲು ರಾಮನು ತನ್ನ ಬಿರುದಿನ ಆಭರಣಗಳನ್ನು ಧರಿಸಿಕೊಂಡು ಹೆಬ್ಬಾಗಿಲನ್ನು ತೆಗೆಸಿ, "ದುರುಗಾವ ನಿಳಿದು ನಗುತ", "ಅರಿರಾಯರ ಕೆಣಕಿದ ಛಲದಂಕನು". ಪಿಳ್ಳೆಗೋಟೆಗೆ ಕಾವಲಿಟ್ಟು, ಕಣಿವೆಯಲ್ಲಿ ಮಾತಂಗಿಯ ದಂಡನ್ನು ಸಿಕ್ಕಿಸಿಕೊಂಡು ಸಂಹಾರ ಮಾಡಿದನು. ರಾಮನನ್ನು ಎದುರಿಸಿದ ಖಾನರು ಜೀವ ಸಹಿತ ಹಿಂದಿರುಗದಾದರು. ಭೂತಗಳಿಗೆ ಭಾರಿ ಔತಣವಾಯಿತು. ಆದರೂ ಕೆಲವು ಮಂದಿ ತುರುಕರು ಕೋಟೆಯನ್ನು ಹತ್ತಲು ಯತ್ನಿಸಿದರು. ಆಗ "ಡೆಂಕಣಿ ಮಕರ ಬಿಬ್ಬಿಯು ಶೂಲಾಂಗಿಯು ಬಿಂಕದ ಸಬಳ ಕವಣೆಯು ಶಂಕೆಯಿಲ್ಲದ ಯಸುಗೆಯ ಕಂಡು" ತುರುಕರು ಹಿಮ್ಮೆಟ್ಟಿದರು. "ಕಾದೆಣ್ಣೆಯ ಜೀರ್ಗೊಳವಿ ಯೊಳೆಸೆ (ರೆ ?) ಯಲು ಬಾಧೆಗಳಿಗೆ ನಿಲಲಮ್ಮದೆ" ಹಿಂತಿರುಗುತ್ತಿದ್ದರು. ನಿರಾಶಳಾದ ಮಾತಂಗಿ ಮರಳ ವುದೇ ಲೇಸೆಂದು ಬಗೆದು ಹೊರಟುನಿಂತಳು. ಈ ವೇಳೆಗೆ ತೆಲುಗರು ರಾಮನಿಗೆ ದ್ರೋಹವನ್ನು ಬಗೆದು, ಆಕೆಯನ್ನು ಓಲೆಕೊಟ್ಟು ಬರಮಾಡಿಕೊಂಡರು. ಆಕೆ "ಭಾಳಲೋಚನ ಕಣ್ಣುದೆರೆದಂತೆ ದುರ್ಗಕ್ಕೆ ಕಾಳಗ ವನು ಗಂಟಿಕ್ಕಿದಳು." ಕೆಳಗೋಟೆ ಶತ್ರುಗಳ ವಶವಾಗಲು ರಾಮನು ಕೆರಳಿ, ಧನುಸ್ಸನ್ನು ಹಿಡಿದು, ಜಟ್ಟಂಗಿ ದೇವನನ್ನು ನೆನೆದು, ಹೆಂಡತಿಯರಿಗೆ ಧೈರ್ಯ ಹೇಳಿ, ದ್ವಾರವಟ್ಟದಲ್ಲಿ ಬಂದು ನಿಂತನು. ಬಿರುಸಾದ ಕಾಳಗದಲ್ಲಿ ರಾಮನ ಆಪ್ತರಾದ ಭಟರುಗಳೆಲ್ಲ ಉರುಳಿಬಿದ್ದರು. ರಾಮನು ದುರ್ಗವನ್ನಿಳಿದು ಬಂದು "ಕರಿಗೆರಗುವ ಸಿಂಹದಂತೆ", "ಗಿರಿಗಡರುವ ಸಿಡಿಲಂತೆ" ಶತ್ರುಸೇನೆಯ ಮೇಲೆ ಬಿದ್ದನು. ಸಾಕ್ಷಾತ್ ಮಾತಂಗಿಯೇ ಅವನನ್ನು ಎದುರಿಸಲು ಬಂದಳು. ಆಗ ಅವನು "ಮೂಗುತಿಯನು ಕಂಡು ಮುಖನೋಡಿ ಕಡುಗಲಿಗಿದು ತರವಲ್ಲ," "ಸಂಗ್ರಾಮದೊಳು ಕಂಡು ಹೆಂಗಸಿನ (ಸನು ?) ಕೊಂದರೆ ಭಂಗ ತಪ್ಪದು" ಎಂದು ತಟಸ್ಥನಾದನು. ಅದೇ ಸಮಯುವೆಂದರಿತು ಆಕೆ ರಾಮನ ಮೇಲೆ ಬಾಣವನ್ನು ಬಿಟ್ಟಳು. ಗಾಯಗೊಂಡ ರಾಮನು ಗೂಗೆಗಲ್ಲಿನ ಬಳಿ ಬಂದು, ನಿಂತು ಹೋರಾಡತೊಡಗಿದನು. ಕಾಟನನ್ನು ಕರೆದು, ತಂದೆ ತಾಯಿ ಯರ ಬಳಿಗೆ ಹೋಗಿ, ವೃತ್ತಾಂತವನ್ನು ತಿಳಿಸುವಂತೆ ಒತ್ತಾಯ ಮಾಡಿದನು. ತೆರಳಲು ಮನಸ್ಸಿಲ್ಲದಿದ್ದರೂ ಕಾಟನು ಅಂತೆಯೇ ಮಾಡಿ, ಕ್ಷಿಪ್ರವಾಗಿ ಹಿಂತಿರುಗಿ ಬಂದನು. ಕಡೆಕಡೆಗೆ ರಾಮನ ಸ್ಥಿತಿ ಹೇಳತೀರದು. "ನೆಟ್ಟವು ಸರಳು ರಾಮಯ್ಯನ ಮೈಯೊಳು ಬೊಟ್ಟನೂರಲು ತೆರಪಿಲ್ಲ ದಿಟ್ಟತನದಲಿ ಬಾಯಲ್ಲಿ ಕೂಗುವ ಬೊಬ್ಬೆ ಬೆಟ್ಟವೆಲ್ಲವು" ಗೀಳಿಡುವಂತೆ ಇದ್ದಿತಂತೆ ! ಈ ಸಂಕಟ ಮೀರಿ ಮೀರಲು ರಾಮನು "ಕೆಟ್ಟಿತು ಕುಮ್ಮಟವೆಂದು" ಜಟ್ಟಂಗಿರಾಮನನ್ನು ನೆನೆಯುತ್ತ ಕಣ್ಣುಮುಚ್ಚಿದನು.

ಇದೇ ಸಂದರ್ಭವನ್ನು ಮಹಲಿಂಗಸ್ವಾಮಿ ವರ್ಣಿಸಿರುವ ಕ್ರಮ ಸ್ವಲ್ಪ ಭಿನ್ನವಾಗಿದೆ. ಸುಲ್ತಾನನ ಆಜ್ಞೆಯ ಮೇರೆಗೆ ಮಾತಂಗಿ ಖಾನರನ್ನು ಕೂಡಿಕೊಂಡು ಆರುತಿಂಗಳ ದಾರಿಯನ್ನು ಮೂರು ತಿಂಗಳಲ್ಲಿಯೇ ಸವೆಸಿ, ಕುಮ್ಮಟದ ಬಳಿ ಬಂದು ಬೀಡುಬಿಟ್ಟಳು. ಈ ಸುದ್ದಿ ರಾಮನಿಗೆ ತಿಳಿಯಿತು. ಅವನು ಕಾಟಣ್ಣನನ್ನು ಬರಮಾಡಿಕೊಂಡು "ಹೆಣ್ಣುಬಾಲೆಯ ಮೇಲೆ ಹೆಸರೊಡೆದ ಮೊನೆಗಾರ ಧರ್ಮವೆ ಕಾರ್ಯಮಾಡುವುದು" ಎಂದು ಹೇಳಿ, ನೆಪಮಾತ್ರಕ್ಕಾದರೂ ಯುದ್ಧಮಾಡಿ, ಅವಳನ್ನು ಹೆದರಿಸಿ ಕಳುಹಿಸುವುದಾಗಿ ನಿರ್ಧರಿಸಿದನು. ಅಂತೆಯೇ ಬೀಡುಬಿಟ್ಟದ್ದವರ ಮೇಲೆ ಬಿದ್ದು ಎಲ್ಲರನ್ನೂ ಸದೆಬಡಿದರು. ಮಾತಂಗಿಯ ದಂಡು ದಿಕ್ಕು ಗೆಟ್ಟಿತು. ಆಗ ಕತ್ತಲಾಗಲು, ಕಂಪಿಲನು ಇರುಳು ಕಗ್ಗೊಲೆಯನ್ನು ನಡೆಸಿ ಶತ್ರುಗಳನ್ನು ಅಟ್ಟಬೇಕೆಂದು ಸೂಚಿಸಿದನು. ರಾಮನಿಗಾದರೋ ಹಾಗೆ ಮಾಡಲು ಮನಸ್ಸಿಲ್ಲ. ಆದರೆ ತಂದೆಯ ಮಾತನ್ನು ಉಲ್ಲಂಘಿಸ ಬಾರದೆಂದು ಬಗೆದು ತನ್ನ ವೀರರಿಗೆ ಆಜ್ಞೆಮಾಡಿದನು. ಅವರು ಅರ್ಧರಾತ್ರಿಯಲ್ಲಿ ಶತ್ರುಗಳ ಪಾಳಯುಮನ

ಪ್ರವೇಶಿಸಿ, ಲೂಟಿಮಾಡಿದರು. ತುರುಕರ ಸೇನೆ ತಬ್ಬಿಬ್ಬಾಗಿ ಚೆದರಿತು. ರಾಮನ ವೀರರು "ಗೋವಿಗೆ ಕಡೆಯಾಗಿ ತುರಗವ ಹೊಡಕೊಂಡು" ಕುಮ್ಮಟಕ್ಕೆ ಬಂದರು. ರಾಜನು ವೀರರ ಸೂರೆಯನ್ನು ಕಂಡು ತಲೆದೂಗಿದನು. ಬೆಳಗಾಗಲು ಮಾತಂಗಿಯ ದಂಡಿನಲ್ಲಿ ಅಸಮಾಧಾನ ವ್ಯಾಪಿಸಿತು. "ಇರುಳು ನೋಡಿಪ ಬಾವಿ ಹಗಲೆ ಬಿದ್ದುದು" ಎಂಬಂತೆ ಒಬ್ಬೊಬ್ಬರೂ ರಾಗವೆಳೆಯುತ್ತಿದ್ದರು. ಖಾನಖಾನರುಗಳೆಲ್ಲ ಕೂಡಿ ಮಾತಂಗಿಯನ್ನು ಹೀಯಾಳಿಸಿದರು. ಆಕೆ "ಭೂಮಿ ಪಾತಾಳಕೆ ಇಳಿದು" ಮುಂಗಾಣದೆ ತನ್ನ ಶಪಥ ಭಂಗವಾಗುವ ಕಾಲ ಬಂದಿತೆ ಎಂದು ಮರುಗಿದಳು. ಈ ವೇಳೆಗೆ ಸರಿಯಾಗಿ ತೆಲುಗ ಯಲ್ಲರಸನ ಓಲೆ ಬಂದಿತು. ತೆಲುಗರು ರಾಮನಿಗೆ ದ್ರೋಹ ಬಗೆದು ಆಕೆಗೆ ನೆರವೀಯುವುದಾಗಿ ಯಲ್ಲರಸನ ನೇತೃತ್ವದಲ್ಲಿ ಒಳಸಂಚು ನಡೆಸಿದ್ದರು. ಹತಾಶಳಾಗಿದ್ದ ಮಾತಂಗಿ ಹಿಗ್ಗಿದಳು. ಆಕೆಯನ್ನು ಕೈಬಿಟ್ಟದ್ದ ಖಾನರೂ ಪ್ರಸನ್ನರಾದರು. ಅವರೆಲ್ಲರೂ ಒಡಗೂಡಿ ಭೇರಿ ಕಹಳೆಗಳ ಧ್ವನಿಗೈದು ನಾಲ್ಕು ಕಡೆಗಳಿಂದಲೂ ಊರನ್ನು ಮುತ್ತಿದರು. "ಕಡಿಕಡಿಯೆನುತಲಿ ಕತ್ತಿ ಭಲ್ಯವ ಕಿತ್ತು ಹೊಕ್ಕರು ಬಿದ್ದೆಣನ ತುಳಿದು." ಜೇನ್ನೊಣದಂತೆ ಕೋಟೆಯ ಬುಡವನ್ನು ಸುತ್ತಿ, ಪಿಳ್ಳೆಕೋಟೆಯನ್ನು ಪ್ರವೇಶಿಸಿದರು. ಆಟವಾಡುತ್ತಿದ್ದ ರಾಮನಿಗೆ ಈ ವೃತ್ತಾಂತ ತಿಳಿದು ಬರಲು ಕೂಡಲೇ ಎದ್ದು ತನ್ನ ಇಷ್ಟದೇವತೆಯ ಬಳಿಗೆ ಬಂದು ಪ್ರಾರ್ಥನೆ ಮಾಡಿದನು. ದೇವರು ಎಡಭಾಗದ ಪುಷ್ಪವನ್ನು ಕೊಡಲು, ತನಗೆ ಅಂತ್ಯಕಾಲವು ಸಮಿಾಪಿಸುತ್ತಿರುವುದನ್ನು ಅರ್ಥಮಾಡಿಕೊಂಡು, ತಂದೆ, ತಾಯಿ, ಅಕ್ಕ, ತಂಗಿ, ಪತ್ನಿಯರು ಮಂತ್ರಿ ಮುಂತಾದವರನ್ನು ಕಂಡು ಧೈರ್ಯ ಹೇಳಿ, ಮಗನಾದ ಜಟ್ಟಂಗಿರಾಯನಿಗೆ ಪಟ್ಟಕಟ್ಟಿ, ಕಡೆಗೆ ಯುದ್ಧಕ್ಕೆ ತೆರಳಿದನು. ಮೊದಲು ದ್ರೋಹಿಯಾದ ಯಲ್ಲರಸನ ತಲೆಯನ್ನು ಹಾರಿಸಿ, ಅನಂತರ ಶತ್ರುಗಳನ್ನು ಎದುರಿಸಿದನು. ರಾಮನನ್ನು ಕಂಡಕೂಡಲೆ ತುರುಕರು ತತ್ತರಿಸಿದರು. "ಕುರಿ ಹಿಂಡು ಚೆದರಿದಂತೆ" ದಿಕ್ಕಾಪಾಲಾದರು. ರಾಮನ ಬಂಟರಿಗೆ ಜೀವ ಬಂದಂತಾಯಿತು. ಒಬ್ಬೊಬ್ಬರೂ ತಮ್ಮ ತಮ್ಮ ಶಕ್ತ್ಯನುಸಾರ ಆಹುತಿಯನ್ನು ತೆಗೆದುಕೊಂಡರು. ರಾಮನು ಕುಮಾರಸ್ವಾಮಿಯಂತೆ ಮೈಮರೆತು ಯುದ್ಧಮಾಡತೊಡಗಿದನು. ಆತನ ಕುದುರೆಯೂ ಸಾಕಾದಷ್ಟು ಮಂದಿಯನ್ನು ಸಂಹಾರಮಾಡುತ್ತಿತ್ತು. ಕಡೆಗೆ ರಾಮನಿಗೂ ಮಾತಂಗಿಗೂ ಕಾಳಗ ಮೊದಲಾಯಿತು. ಖಡ್ಗವನ್ನು ಎತ್ತಿ ಇಳುಹುವ ಹೊತ್ತಿಗೆ ರಾಮನು ಆಕೆಯ ಮೂಗುತಿಯನ್ನು ಕಂಡು, ಕೈದೆಗೆದು ತಟಸ್ಥನಾದನು. ಆಕೆಯೂ ಸಹ "ಕಡಿಯದೆ ಬಿಡನೆಂದು ಎದೆಯ ಸೆರಗನು ತೆಗೆದು ಕಳಶ ಕುಚಗಳನು ತೋರಿದಳು." ಅಪಕೀರ್ತಿಗಾಗಿ ಅಳುಕಿದ ರಾಮನು ಅಚಲನಾದನು. ಆಕೆ "ಹಿಂದೊಮ್ಮೆ ಕರೆಯಲು ಒಲ್ಲೆನೆಂದೆ ರತಿಗಲೆಗೆ ಇಂದಿನ್ನು ಮನಸು ಒಪ್ಪದೆ, ಕೊಂದೆನೆಂಬುವ ಕೈಯ ನಿಲಿಸಿ, ನೇಮಿಯ ಕಳುಹಿ ಆನಂದದಿ ಸುಖದೊಳು ಬಾಳ್ವ" ಎಂದು ಸವಿನುಡಿಗಳನ್ನು ಆಡಿದಳು. ರಾಮನು ಆ ಮಾತುಗಳನ್ನು ಕೇಳಲಾರದೆ, ಆಕೆಯನ್ನು ಕುರಿತು "ಪರಸ್ತ್ರೀಯರು ತಾಯಿ ಹೋಗಮ್ಮ" ಎಂದು ನಿರಾಕರಿಸಿದನು. ಆಕೆ, ಅದೇ ಸುಸಮಯವೆಂದು ಬಗೆದು ಚಾಪವೇರಿಸಿ, ಸರಳುಗಳ ಮಳೆಯನ್ನು ಕರೆಯಲು, ಅವನ ವಜ್ರಾಂಗಿ "ತಾತಾತೂತಾ"ಯಿತು. ಅವನ ಶರೀರ ಗಾಯಗೊಂಡಿತು. ತ್ರಾಣ ಉಡುಗುವಂತಾಯಿತು. ಕಾಟಣ್ಣನು ಬಂದು ರಾಮನ ದುಃಸ್ಥಿತಿಯನ್ನು ಕಂಡು ಮಾತಂಗಿಯನ್ನು ಮಟ್ಟ ಹಾಕುವೆನು ಎನ್ನಲು, ರಾಮನು "ಬಾರಯ್ಯ ಅಣ್ಣಾಜಿ ಆಡಬಹುದೆ ನೀನು ಹೀನವಾಗದೆ ಸ್ವರ್ಗದೊಳಗೆ" ಎಂದು ಸಮಾಧಾನ ಹೇಳಿದನು. ಅನಂತರ ಕಥೆ ಮುಂದುವರಿದು ರಾಮನು ಎಲ್ಲರನ್ನೂ ಕಳೆದುಕೊಂಡು, ಗೂಗೆಕಲ್ಲನ್ನು ನೆಮ್ಮಿ ಶಿವೈಕ್ಯನಾಗುತ್ತಾನೆ.

ಈ ಮೇಲಿನ ಪ್ರಸಂಗ ವಾಸ್ತವಿಕವಾಗಿ ಕ್ರಿಯಾಪ್ರಧಾನವಾದದ್ದು. ಕೋಟೆಯ ಕಾಳಗದ ಕಲ್ಪನೆ ಮನಸೆಳೆಯುವಂತೆ ಚಿತ್ರಿಸಬೇಕಾದ ಸಂದರ್ಭ. ನಂಜುಂಡನ ನಿರೂಪಣೆ ಶಾಸ್ತ್ರೀಯವೂ, ಆದಷ್ಟು ಖಚಿತವೂ ಆಗಿದೆ. ಆತನು ಸನ್ನಿವೇಶದ ಗಹನತೆಯನ್ನೂ, ತೀವ್ರತೆಯನ್ನೂ ತಕ್ಕಮಟ್ಟಿಗೆ ಗ್ರಹಿಸಿರುತ್ತಾನೆ. ಕೋಟೆಯ ಕಾಳಗದ ಪೀಠಿಕೆ, ಉಭಯ ಪಕ್ಷಗಳ ಪ್ರತಿಭಟನೆ, ವೀರರಾಮನ ದುರಂತ ಮೊದಲಾದುವುಗಳನ್ನು ಕ್ರಮವಾಗಿ

ಬೆಳೆಸಿರುತ್ತಾನೆ. ರಾಮನ ಪರಾಕ್ರಮಕ್ಕೇ ಹೆಚ್ಚು ಗಮನವಿತ್ತಿರುವುದರಿಂದ ಕೋಟೆಯ ಕಾಳಗದ ವಿವರ ಸ್ವಲ್ಪ ಕಡಮೆಯಾಯಿತು ಎನ್ನಿಸುವುದೂ ಉಂಟು. ಆದರೆ, ಸನ್ನಿವೇಶಕ್ಕೆ ಎಷ್ಟು ಅಗತ್ಯವೋ ಅಷ್ಟರ ಮಟ್ಟಿಗೆ ಹಿನ್ನೆಲೆಯಾಗಿ ಬಂದಿವೆ. ಗಂಗನ ರೀತಿಯಲ್ಲಿ ವಿವರಣೆ ಕಡಮೆ. ಒಂದೆರಡು ಮಾತುಗಳಲ್ಲಿಯೇ ಒಟ್ಟು ಪ್ರಸಂಗವನ್ನೇ ಹೇಳಬಯಸಿದಂತಿದೆ. ಆದರೆ, ಸಾಕಾದಷ್ಟು ಆವೇಶವೂ ಆವೇಗವೂ ಇರುವುದರಿಂದ ಕಾಳಗದ ಕಲ್ಪನೆಗೆ ಲೋಪ ಬಂದಿಲ್ಲ. ಕ್ರಿಯೆಗೂ ಸಹ ಎಲ್ಲಿಯೂ ಚ್ಯುತಿ ಬಂದಿಲ್ಲ. ನಂಜುಂಡನಲ್ಲಿ ಕಂಡುಬರುವ ಅಚ್ಚುಕಟ್ಟಾಗಲಿ, ಸಮಗ್ರತೆಯಾಗಲಿ ಇಲ್ಲದಿದ್ದರೂ, ಕೋಟೆಯ ಪರಿಚಯ, ಆಯುಧಗಳ ವರ್ಣನೆ, ರಾಮನ ಕಡೆಗಾಲದ ನಿರೂಪಣೆ ಮೊದಲಾದವು ಕೋಟೆಗಾಳಗದ ಆವರಣವನ್ನು ಊಹಿಸಿ ಕೊಳ್ಳಲು ನೆರವಾಗುತ್ತವೆ. ಮಹಲಿಂಗಸ್ವಾಮಿಯ ಕಥನಕ್ರಮದಲ್ಲಿ ಕೋಟೆಗಾಳಗದ ಕಲ್ಪನೆಯೇ ಮಸಕು ಮಸಕಾಗಿ ಪರಿಣಮಿಸಿ, ಇತರ ಕಾಳಗದಂತೆಯೇ ಅದೂ ಒಂದು ಹೋರಾಟವೆನ್ನಿಸುತ್ತದೆ. ಅವನ ಗಮನವೆಲ್ಲ ಇತರ ವಿವರಗಳ ಕಡೆಗೆ ಹರಿದು, ಮುಖ್ಯ ಕ್ರಿಯೆಗೆ ಸಾಕಾದಷ್ಟು ಪುಷ್ಟಿ ದೊರೆಯದಂತಾಗಿದೆ.

ಈ ಕಾವ್ಯಗಳಲ್ಲಿ ಬರುವ ಇರುಳ ಕಗ್ಗೊಲೆಯ ಚಿತ್ರ ಇಂತೆಯೇ ಪರಿಶೀಲನಾರ್ಹವಾದುದು. ನೇಮಿ ಎರಡನೆಯ ಬಾರಿ ದಂಡೆತ್ತಿ ಬಂದ ಸಂದರ್ಭದಲ್ಲಿ ಇದರ ಪರಿಚಯವಾಗುತ್ತದೆ. ನಂಜುಂಡನು ಈ ಸನ್ನಿವೇಶ ವನ್ನು ಹೀಗೆ ನಿರೂಪಿಸಿರುತ್ತಾನೆ. ಕುಮ್ಮಟದುರ್ಗಕ್ಕೆ ಸಮೀಪದಲ್ಲಿಯೇ ನೇಮಿ ತನ್ನ ಪಾಳೆಯವನ್ನು ಬಿಟ್ಟನಷ್ಟೆ. ರಾತ್ರಿಯಾಗಲು ಆತನ ಪಾಳಯದಲ್ಲಿ ಸಾವಿರಾರು ಕೈದೀವಿಗೆಗಳು ಬೆಳಗಿದುವು. ಅವುಗಳನ್ನು ನೋಡಲು "ವಿಯತ್ತಳವನು ವಿಲಯಾಗ್ನಿ" ಸುತ್ತಿತೋ ಎನ್ನುವಂತಿತ್ತು. ಇತ್ತ, ಬೈಚಪ್ಪನು ಭದ್ರಪಡಿಸಿದ್ದ ಕೋಟೆಯ ವ್ಯವಸ್ಥೆಯನ್ನು ಕಂಡು ಕಂಪಿಲನು ತಲೆದೂಗಿದನು. ದುರ್ಗದ ಮೂಲೆ ಮೂಲೆಗಳಲ್ಲೂ ತೆನೆ ತೆನೆಯ ತುದಿಗಳಲ್ಲೂ ಕೈದೀವಿಗೆಗಳು "ಫಣಿಕುಲ ಸಾರ್ವಭೌಮನ ಸಾಸಿರ ಪೆಡೆವಣಿ"ಗಳಂತೆಯೂ "ಧುರಗಲಿಗಳ ಕೋಪಾಗ್ನಿಯ ಬಲು ದಳ್ಳುರಿಗಳ ಬಳಗ"ವೆಂಬಂತೆಯೂ ತೋರಿಬಂದುವು. ವಾದ್ಯಗಳ ಮೊಳಗು ಹೇಳಲೇಬೇಕಾಗಿಲ್ಲ. ಸಮಯ ಕಾಯುತ್ತಿದ್ದ ಬೈಚಪ್ಪನು ಬಂಟರನ್ನು ಬರಮಾಡಿಕೊಂಡು ಶತ್ರುವಿನ ಪಾಳಯಕ್ಕೆ ಕಗ್ಗೊಲೆಗಾಗಿ ಹುರಿದುಂಬಿಸಿ ಕಳುಹಿಸಿದನು. ರಾತ್ರಿಯಲ್ಲಿ ಅನಿರೀಕ್ಷಿತವಾಗಿ ಈ ರೀತಿ ಶತ್ರುಗಳು ಮೇಲೆ ಬಿದ್ದುದನ್ನು ಕಂಡು ನೇಮಿಯ ಪಡೆಯವರು ಕಂಗೆಟ್ಟರು. ನಿಮಿಷಮಾತ್ರದಲ್ಲಿ ಪಾಳಯ ವೆಲ್ಲ "ಗುಂಡುಗಲ್ಲು ನೀರೊಳು ಬಿದ್ದಂತೆ" ದಿಕ್ಕಾಪಾಲಾಯಿತು. ಕೆಲವು ಅಬ್ಬರಗಲಿಗಳು "ಬೊಬ್ಬಿಱಿವುತ ತೂಳ ಬಂದಂತೆ ನಡುಗುತ ತಬ್ಬಿಬ್ಬುಗೊಳುತೆಡಬಲಕೆ ಉಬ್ಬಿನಿಂ ಪರಿದರು." ಮತ್ತೆ ಕೆಲವು ಮರುಳು ಗಲಿಗಳು ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು ಇತರರನ್ನು ಹಿಂಬಾಲಿಸಿದರು. ನಾಲಗೆಗಲಿಗಳು ಎತ್ತಲೂ ಹೋಗಲಾರದೆ ಭಯಗ್ರಸ್ತರಾಗಿ ನಿಂತಲ್ಲಿಯೇ ಇದ್ದರು. ಈ ರೀತಿ ನಾನಾ ಬಗೆಯಾದ ಕಲಿಗಳು ಕನವರಿಸುತ್ತಲೋ ಕನಲುತ್ತಲೋ ತಮ್ಮ ತಮ್ಮಲ್ಲಿಯೇ ಹೋರಾಡತೊಡಗಿದ್ದರು. ಮನುಷ್ಯರ ಪಾಡೇ ಹೀಗಾದ ಮೇಲೆ ಪಾಳಯದಲ್ಲಿದ್ದ ಪ್ರಾಣಿಗಳ ಸ್ಥಿತಿ ಹೇಳತೀರದು. ಅವುಗಳು ಸ್ವೇಚ್ಛೆಯಾಗಿ ಹರಿದಾಡ ತೊಡಗಿದವು. ಪಾಳಯದಲ್ಲಿದ್ದ ಬಿಬ್ಬಿಯರು ದಾರಿಗಾಣದಾದರು. ಈ ಮಧ್ಯೆ ಕೆಲವು ಧೀರರು ವೀರಾವೇಶ ದಿಂದ ಹೋರಾಡಲಾರಂಭಿಸಿದರು. ಉಳಿದ ಹಲವರು ತಲೆತಪ್ಪಿಸಿಕೊಂಡು ಹೋಗಲು ಹವಣಿಸುತ್ತಿದ್ದರು. ಅಂತೂ, ಕಂಪಿಲನ ಸೈನಿಕರು ಶತ್ರುಗಳ ಪಾಳಯವನ್ನು ಈ ರೀತಿ ಸೂರೆಮಾಡಿ, ಅಪಾರವಾದ ಗಜ ತುರಗಗಳನ್ನೂ ಖಾನರ ತಲೆಗಳನ್ನೂ ತಂದು ತಮ್ಮ ಒಡೆಯನಿಗೆ ಒಪ್ಪಿಸಿದರು.

ಈ ಪ್ರಸಂಗ ಗಂಗನಲ್ಲಿ ಸಂಕ್ಷಿಪ್ತವಾಗಿ ತೋರಿಬರುತ್ತದೆ. ಚೋರಗಂಡಿಯಿಂದ ಹಾದು ಬಂದ ಬಂಟರು, ಪಾಳಯದ ತಳಿಯನ್ನು ಮುರಿದು, ಗುಡಿ ಗುಡಾರಗಳನ್ನು ಕೆಡಹಿ, ಅಬ್ಬರದಿಂದ ಶತ್ರುವಿನ ಮೇಲೆ ಬಿದ್ದರು. (ಕೆಲವು ಪ್ರತಿಗಳಲ್ಲಿ ಬಾದೂರಖಾನನೇ ಈ ಕಾರ್ಯಕ್ಕೆ ನಾಯಕನಾಗಿ ನಿಂತನೆಂದು ವರ್ಣಿತವಾಗಿದೆ, ಗಂ. ೨; ಗಂ. ೩.) ನಿದ್ರೆಯಿಂದೆದ್ದ ಶತ್ರುಗಳನ್ನು ಯುದ್ಧಕ್ಕೆ ಸಿದ್ಧವಾಗಲೂ ಬಿಟ್ಟುಕೊಡದೆ ತರಿದುಹಾಕು

ತ್ತಿದ್ದರು. ಅಸಹಾಯಕರಾದ ಖಾನರು ನಾನಾ ರೀತಿಗಳಲ್ಲಿ ಶರಣಾಗತರಾದರು. ಕಂಪಿಲನ ಕಡೆಯವರು ತಮ್ಮ ಪ್ರತಾಪವನ್ನು ಮೆರೆಸಿ ಸೂರೆಮಾಡಿ ತಂದ ವಸ್ತುಗಳ ಸಮೇತ ತಮ್ಮ ಒಡೆಯನನ್ನು ಕಂಡರು.

ಮಹಲಿಂಗಸ್ವಾಮಿಯ ನಿರೂಪಣೆಯಲ್ಲಿ ಅಧಿಕಾಂಶಗಳೇನೂ ಇಲ್ಲ ಬಹುಮಟ್ಟಿಗೆ ಗಂಗನ ಸರಣಿಯನ್ನೇ ಹೋಲುತ್ತದೆ. ಖಾನರು ಭಂಗಿ ಸೇವಿಸಿ ಮೈಮರೆತು ಮಲಗಿರುತ್ತಾರೆ. ಎಚ್ಚತ್ತ ಅವರು ತಮ್ಮ ತಮ್ಮಲ್ಲಿಯೇ ಮಾತಾಡಿಕೊಳ್ಳುತ್ತ ಚೆದರುತ್ತಾರೆ. (ಈ ಸಂವಿಧಾನವನ್ನು ಮಹಲಿಂಗಸ್ವಾಮಿ ಕಡೆಯ ಕಾಳಗದ ಸಂದರ್ಭದಲ್ಲಿಯೂ ಚಿತ್ರಿಸಿರುತ್ತಾನೆ. ಅಲ್ಲಿಯೂ ಹೆಚ್ಚು ವಿವರಗಳೇನೂ ಇಲ್ಲ.)

ಮೇಲ್ಕಂಡ ನಿರೂಪಣೆಗಳಲ್ಲಿ, ನಂಜುಂಡನಲ್ಲಿ ಕಂಡುಬರುವ ಸಮಗ್ರತೆಯಾಗಲಿ, ಸ್ಪಷ್ಟ ಕಲ್ಪನೆಯಾಗಲಿ ಉಳಿದಿಬ್ಬರಲ್ಲಿ ತೋರಿಬರುವುದಿಲ್ಲ. ಯುದ್ಧವಿಧಾನಗಳಲ್ಲಿ ಈ ಮೋಸಗಾಳಗವೂ ಒಂದು ಎಂಬುದಾಗಿ ಈ ವರ್ಣನೆಗಳಿಂದ ತಿಳಿದುಬರುತ್ತದೆ.

ಪ್ರಕೃತ ಕಥಾವಸ್ತುವಿನಲ್ಲಿ ಪ್ರಕೃತಿಯ ಚಿತ್ರಗಳಿಗೆ ಹೆಚ್ಚು ಅವಕಾಶವೇನೂ ಇಲ್ಲ. ಆದರೂ, ಕವಿ ನಂಜುಂಡನು ಪ್ರಾಸಂಗಿಕವಾಗಿ ಬರುವ ಹೊಸಮಲೆಯನ್ನು ಕಥಾಪ್ರಾರಂಭದಲ್ಲಿಯೂ, ಕಂಪಿಲನ ಬೇಟೆಯ ಸಂದರ್ಭದಲ್ಲಿಯೂ ಸ್ವಲ್ಪಮಟ್ಟಿಗೆ ವಿವರಿಸಿದ್ದಾನೆ. ಉಪವನದ ಸೊಬಗೊಂದು ಅವನ ಕಣ್ಣನ್ನು ಸೆಳೆದಿರುತ್ತದೆ. ಸಾಲದುದಕ್ಕೆ ಆತನು ಕುಮಾರರಾಮನು ಬೇಸರವಾಗಲು ಚಂದ್ರಿಕಾವಿಹಾರಕ್ಕಾಗಿ ತೆರಳಿದನೆಂದು ಒಂದು ಪ್ರತ್ಯೇಕವಾದ ಸನ್ನಿವೇಶವನ್ನೇ ಕಲ್ಪಿಸಿರುತ್ತಾನೆ. ಇಲ್ಲಿ ಚಿತ್ರಿತವಾಗಿರುವ ಸೂರ್ಯಾಸ್ತ, ಚಂದ್ರೋದಯಗಳ ವರ್ಣನೆ ಕವಿಯಕೌಶಲಕ್ಕೆ ಸಂಕೇತಗಳಾಗಿವೆ. ಆದ್ದರಿಂದ, ಈ ಕೆಲವು ಸನ್ನಿವೇಶಗಳನ್ನು ಸಂಗ್ರಹವಾಗಿ ಅವಲೋಕಿಸಬಹುದು.

ಹೊಸಮಲೆಯೆನ್ನುವುದು ಹೆಸರೇ ಸೂಚಿಸುವಂತೆ ಹಂಪೆಯ ಸಮೀಪದಲ್ಲಿದ್ದ ಒಂದು ಮಹಾರಣ್ಯ. ಅದು "ಮೃಗಗಳ ಆವಾಸದಂತೆ" ಇದ್ದಿತು. ಅಲ್ಲಿ "ಮರವಾಯ್ದು ಕೊರ್ಬಿ ಬೆಳೆದ ಬಿದಿರ್ಗಳ ನೆರವಿಂದ ಕಳ್ತಲೆ ರವಿಗೆ ಬಿರಿದಿಕ್ಕಿ ಬಿಂಕದಿಂದ" ಮೆರೆಯುತ್ತಿದ್ದಿತಂತೆ! ಅಲ್ಲಿ ಬಗೆಬಗೆಯ ಮೃಗಗಳೂ, ಗಿಡಗಳೂ ಕಿಕ್ಕಿರಿದಿದ್ದುವು. ಈ ಗೊಂಡಾರಣ್ಯದ ಮಧ್ಯೆ ಗಿರಿದುರ್ಗವೊಂದು ಇತ್ತು. ಅದರೊಳಗಿದ್ದ ಊರಿನ ಉಪವನದ ಸೊಬಗಂತೂ ಹೇಳತೀರದು. "ಪುರಲಕ್ಷ್ಮಿ ನಟಿಯಾಟಕೆ ತೆಱಪೀ ಪುರವರದೊಳಿಲ್ಲೆಂದಜಸಮೆದ ಉರು ರಂಗಮಂಟಪದಂತೆ ಪುರದ ಬಹಿಃಪುರದೆಡೆಯಿಹುದು ಚೆಲ್ವಿಂದ." ಅಲ್ಲಿದ್ದ ಫಲಭರಿತವಾದ ವೃಕ್ಷಗಳು "ನಂದನ ಚೈತ್ರರಥಗಳಂತೆ" ಆನಂದವನ್ನು ಬೀರುತ್ತಿದ್ದುವು. ಅಲ್ಲಿನ ಪಕ್ಷಿಗಳ ವೈಭವವಂತೂ ವಿಸ್ಮಯಕಾರಿಯಾಗಿತ್ತು. "ಗಿಳಿಗಳೋದುವ ಮಠ ನವಿಲ್ಗಳ ನರ್ತನ ನಿಳಯವಂಚೆಗಳಿಕ್ಕೆದಾಣ ಅಳಿಗಳ ಭೋಜನ ಶಾಲೆ" ಎಂಬಂತೆ ಕಂಡುಬರುತ್ತಿತ್ತು. ಅಲ್ಲಿ "ನಾಗವಲ್ಲಿಯು ನಾಳಿಕೇರ ನಾರಂಗ ಪುನ್ನಾಗ ಪುಂಡ್ರೇಕ್ಷು ಪೂಗ" ಮೊದಲಾದ ಗಿಡಮರಗಳು ನಿಬಿಡವಾಗಿದ್ದುವು. ಅಲ್ಲಿದ್ದ ಕೊಳಗಳು "ಅಮೃತಮೆ ಮಡುಗಟ್ಟಿ ನಿಂದವೆಂಬಂತೆ ಕಡುಸೊಗಸಿದವು". ಉಪವನದಲ್ಲಿ ಅಡ್ಡಾಡುತ್ತಿದ್ದ ಜವ್ವನೆಯರ ವಿಲಾಸವೋ ವಿಲಾಸ! "ಕೃತಕಾದ್ರಿಗಳೊಳು ಕುಂಜದೆಡೆಗಳೊಳು ಲತೆವನೆಗಳೊಳು ತಣ್ಪೆಳಲ ಕ್ಷಿತಿತಳದೊಳಗಂಗಜ ಕೇಳಿಯೊಳು ದಂಪತಿಗಳಿಹರು ಲೀಲೆಯಿಂದ". ಒಟ್ಟಿನಲ್ಲಿ, ಆ ಬನ "ಅಳಿಗಳ ಜೇವಣಶಾಲೆಯಂಗಜ ವೀರನಲಗಿನಶಾಲೆ ಬಾಲೆಯರ ಬೆಳುನೋಟ ಸಿರಿಯ ಬಿನದಶಾಲೆ" ಎಂಬಂತೆ ತೋರಿಬರುತ್ತಿತ್ತು. ಕಂಪಿಲನು ಹೊಸಮಲೆಗೆ ಬೇಟೆಗಾಗಿ ಹೋದ ಸಂದರ್ಭದಲ್ಲಿ ಆ ಪ್ರದೇಶದ ವಿವರಗಳು ಮತ್ತಷ್ಟು ವರ್ಣಿತವಾಗಿವೆ. ಆದರೆ ಬೇಟೆಯ ವರ್ಣನೆಯೇ ಬೆಳೆದಿರುವುದರಿಂದ ಅರಣ್ಯದ ವರ್ಣನೆ ಒಂದೆರಡು ಪದ್ಯಗಳಲ್ಲಿಯೇ ಮುಗಿಯುತ್ತದೆ.

ನಂಜುಂಡನು ಆಗಿಂದಾಗ್ಗೆ ಸೂರ್ಯಾಸ್ತಮಯ, ಚಂದ್ರೋದಯ ಮೊದಲಾದ ಪ್ರಕೃತಿಯ ವ್ಯಾಪಾರವನ್ನು ಕುರಿತು ಒಂದೆರಡು ಪದ್ಯಗಳಲ್ಲಿಯೇ ವರ್ಣಿಸಿ ಮುಂದೆ ಸಾಗಿರುವುದುಂಟು. ಕುಮಾರರಾಮನು ತನ್ನ

ಗೆಳೆಯರೊಂದಿಗೆ ನೀರಾಟವಾಡಲು ಆಗ ಅನೇಕ ಜಲಚರಗಳು ಹತವಾದುವು. ಆಗ ಚಿಮ್ಮಿದ ರಕ್ತದಿಂದ ಆಕಾಶ ಕೆಂಪಾಯಿತಂತೆ. "ನೆತ್ತರಿಂ ಪೊರೆದಿಳೆ ಗಗನದೊಳ್ಪ್ರತಿಬಿಂಬಿಸಿತ್ತೆನೆ ಸಂಧ್ಯಾರಾಗ ಎತ್ತ ನೋಡಿದೊಡಾಗಸವೆಡೆಯೊಳಗೆಸೆವತ್ತು." ಅದನ್ನು ಸಹಿಸಲಾರದೆ "ಅಪರಾದ್ರಿಯ ಮರೆಗೊಂಡನೆಂಬಂತೆ ಭಾನುವೆಯ್ದಿದನು." ಕತ್ತಲೆ ಕವಿದು ಬಂದ ಪರಿಯಾದರೂ ಹೇಗೆ! "ಇರುಳೆಂಬ ರಾಹು ದಿವಸವೆಂಬ ದಿನಪನನಿರದೆ ನುಂಗಿದುದೆಂಬಂತೆ ಕರನೆಸೆವತ್ತು ಕತ್ತಲೆ." ಆಗ ಮೂಡಿ ಬಂದ ನಕ್ಷತ್ರಗಳು "ಕತ್ತಲೆಯೆಂಬ ಕರಿಯ ಮಸ್ತಕವನಿಂದು ಮತ್ತಕೇಸರಿ ಪೊಯ್ಯಲುದಿರ್ದ ಮುತ್ತುಗಳೆನೆ" ಕಂಡುಬಂದುವು. ಚಂದ್ರಮಂಡಲ "ಮೂಡುವೆಣ್ಣಿನ ಬೈತಲೆಯ ಕೆಂಬರಲಂತೆ"ಯೂ, "ರತಿಯ ತೋಗುವ ಮಣಿಮಯ ಮುಕುರವಂತೆ"ಯೂ ಇದ್ದಿತಂತೆ! ಸುತ್ತಮುತ್ತಲೂ ಹಾಲು ಚೆಲ್ಲಿದಂತಿದ್ದ ಬೆಳುದಿಂಗಳು "ಅಂಗಜ ಕೀರ್ತಿಲತಿಕೆ ಪರ್ವಿದಂತೆ" ಮನಮೋಹಕವಾಗಿತ್ತು ಎನ್ನುತ್ತಾನೆ. ಇದೀಗ ನಂಜುಂಡನ ವರ್ಣನಾ ವಿಧಾನ. ಒಹುಮಟ್ಟಿಗೆ ಸಾಂಪ್ರದಾಯಿಕವಾದ ಸರಣಿ. ಚರ್ವಿತ ಚರ್ವಣವಾದರೂ ಆತನಿಗೆ ಅದರ ಆತಂಕವೇ ಇಲ್ಲ.

ಗಂಗನಲ್ಲಾಗಲಿ, ಮಹಲಿಂಗಸ್ವಾಮಿಯಲ್ಲಾಗಲಿ ಉತ್ಸಾಹದಿಂದ ಉದಾಹರಿಸಬಹುದಾದ ಪ್ರಕೃತಿ ವರ್ಣನೆಗಳೇ ಇಲ್ಲವೆನ್ನಬಹುದು. ಎಂದಿನಂತೆಯೇ ಗಂಗನ ಒಂದು ಪ್ರತಿಯಲ್ಲಿ ಹೊಸಮಲೆಯನ್ನು ಕುರಿತು "ಆ ದ್ವೀಪಾಂತರ ದಕ್ಷಿಣಭಾಗದೊಳಗೆ ತಾನೆಸೆದುದು ಹೊಸಮಲೆಯು" ಎಂದು ಮೊದಲಾಗಿ "ದೇಶದೊಳಧಿಕವೆಂದೆನಿಸುವ ಹೊಸಮಲೆ ಶೇಷಮಂಡಳಿಸಿದಂದದಲಿ ವಾಸವಾದ್ಯರಿಗೆ ಅಸಾಧ್ಯವೆಂಬಂತೆ ವಿಶೇಷವಪ್ಪಿಹ ಪರ್ವತವು" ಎಂದು ಮುಂದುವರಿಯುತ್ತವೆ. ಅನಂತರ "ಜಂಬು ನೇರಿಲು ದಾಳಿಂಬ ಖರ್ಜೂರ ದ್ರಾಕ್ಷಿ ಅಂಬಟೆ ಆರನೆಲ್ಲಿ ಮಾವು ಯಿಂಬ ಪಲಸು ತಂಗಕೇ(ಡಿ ?)ಯ ಮರಗಳು ಸಂಭ್ರಮದೊಳು ರಾಜಿಸುವುವು." "ಬೆತ್ತವು ನಾಗಬೆತ್ತವು ರುದ್ರಾಕ್ಷಿಯು ಮತ್ತಿಯ ಮರ ಬಿಲ್ವಪತ್ರಗಳು ಅತ್ತಿ ಕಲ್ಲತ್ತಿ ಹೆಬ್ಬಿದಿರು ಕಿರುಬಿದಿರಿಂದ ಮೊತ್ತದಿಂದಲಿ ಪಸರಿಪುದು" ಎಂಬುದಾಗಿ ಆ ಎಡೆಯ ಗಿಡ ಮರಗಳ ಪ್ರಸ್ತಾಪವು ಬರುತ್ತದೆ (ಗಂ. ೧. i. ೨೪–೨೯). ಬಳಿಕ, ಕಂಪಿಲನು ಹೊಸಮಲೆಗೆ ಬೇಟೆಗೆ ಹೋದಾಗ ಮತ್ತೊಮ್ಮೆ ಅಡವಿಯ ವರ್ಣನೆ ಬರುತ್ತದೆ. ಆಗ ಕವಿ "ಒತ್ತಿ ನಡೆದನತಿಬೇಗದಿ ಕಂಪಿಲ ಮುತ್ತಿದನಾ ಹೊಸಮಲೆಯ ಎತ್ತ ನೋಡಿದರತ್ತ ಬಲು ಜಾಲಗಲ್ಲುಗಳು ಕತ್ತಲೆ ಬೀರೆ ಕಣ್ಮನಕೆ." "ಆಕಾಶವನಂಡಲೆವ ಗಿರಿಗಳಿಂದ ಬೇಕೆನಿಸಿತು ಕೋಡುಗಲ್ಲು ಸಾಕಾರ(?) ಮೆರೆವ ನೀಗೊರ್ಕ(ಳ ?)ಗಳಿಂದಲಿ ಸಾಕೆನಿಸಿತು ಹೊಸಮಲೆಯು (ಅದೇ. iii. ೧೩೮–೧೩೯)" ಎಂದು ಎರಡೇ ಎರಡು ಪದ್ಯಗಳಲ್ಲಿ ಹೇಳಿ ಮುಗಿಸುತ್ತಾನೆ. ಈ ಸಂದರ್ಭಗಳೇ ಬರುವ ಮಹಲಿಂಗಸ್ವಾಮಿಯಲ್ಲಿ ಇಷ್ಟೂ ಕಂಡುಬರುವುದಿಲ್ಲ. ಪ್ರಾರಂಭದಲ್ಲಿ ನಾರದರ ಕಡೆಗೂ, ಬೇಟೆಯ ಸಂದರ್ಭದಲ್ಲಿ ರತ್ನಿಯನ್ನು ನೆನೆದು ಆತಂಕ ಪಡುವ ಕಂಪಿಲನ ಕಡೆಗೂ ಅವನ ಗಮನವೆಲ್ಲ ಹರಿದು ಹೊಸಮಲೆಯ ಚಿತ್ರ ಕೇವಲ ಹೆಸರಿನಲ್ಲಿಯೇ ಮುಕ್ತಾಯವಾಗುತ್ತದೆ.

ಉದಯಾಸ್ತಗಳ ವರ್ಣನೆ ವಿರಳವಾದರೂ, ಒಬ್ಬೊಬ್ಬರಲ್ಲಿಯೂ ಒಂದೊಂದು ರೀತಿಯಾಗಿ ಬಂದಿದೆ. ಮೊದಲು ಗಂಗನಲ್ಲಿ ಕಂಡುಬರುವ ಒಂದೆರಡು ಭಾವನೆಗಳನ್ನು ನೋಡೋಣ. "ನಡೆಗೊಂಡ ರವಿಯು ವಿಶ್ರಮಕೆ" ಎಂದು ಅಸ್ತಮಾನವನ್ನು ಸೂಚಿಸಿ, "ಕತ್ತಲೆ ಜಂಬುನೇರಿಲು ಹಣ್ಣಿನಂದದಿ ಮುತ್ತಿತು ಜಗವನಾವರಿಸಿ" ಎಂಬ ರಾತ್ರಿಯ ಆಗಮನವನ್ನು ಒಂದೇ ಮಾತಿನಲ್ಲಿ ಹೇಳುತ್ತಾನೆ. ಇನ್ನೊಂದೆಡೆ, "ಪುಂಡರೀಕನ ಸಖ ಪಶ್ಚಿಮಕೆಳೆಯಲು ದಂಡು ಬಿಟ್ಟಿತು ಸಂತೋಷದಿ." "ಕತ್ತಲೆ ಆಯಿತು ಹೊತ್ತಿಸಿದುವು ಪಂಜು ಮೊತ್ತದ ಪಾಳೆಯದೊಳಗೆ ಆರ್ತಿಯೊಳಗೆ ಆರೋಗಣೆ(ಯನು) ಮಾಡಿ ಮತ್ತೆ ಪವಡಿಸಿದರೆಲ್ಲರು" ಎಂದು ರಾತ್ರಿಯ ಚಿತ್ರವನ್ನು ನಿರೂಪಿಸಿರುತ್ತಾನೆ. ಮುಂದಿನ ಪದ್ಯದಲ್ಲಿಯೇ "ಪೂರ್ವಾದ್ರಿಯಲ್ಲಿ ಮೂಡಲು ರವಿ...." ಎಂದು ಬೆಳಗಿನ ವರ್ಣನೆಯನ್ನೂ ಮಾಡಿರುವುದನ್ನು ನೋಡಿದರೆ ಕವಿಗೆ ಕ್ರಿಯೆಯ ಕಡೆ ಇರುವ ತೀವ್ರಾಭಿಲಾಷೆ ವ್ಯಕ್ತವಾಗುತ್ತದೆ.

ಮಹಲಿಂಗಸ್ವಾಮಿಯಲ್ಲಿ ಬರುವ ಒಂದು ಉದಯದ ಚಿತ್ರ ಹೀಗಿದೆ. "ರಾಯ ಬಲ್ಲಾಳನ ಹಾನಿ ನೋಡೆನು ಎಂದು ಸೋಮನು ಕಳೆಯುಗುಂದಿದನು, ಕೂಗಲು ಕುಕ್ಕುಟ, ರಾಗದೋರಲು ಪಿಕ, ಆಗ ಚರಿಸುವ ಖಗ ಮೃಗವೂ," "ಭೃಂಗವು ಚರಿಸಾಡೆ ಪದ್ಮಗಳು ಮುಖಬಿಚ್ಚೆ ಮಂದಮಾರುತನಾಗ ನಡೆಯೆ ಇಂದ್ರ ದೊಳ್ರವಿ ಕೋಟಿಸಂಜನು ಹಿಡಿದಂತೆ ಜನಂಗಳಿಗೆ ಮುಖವನು ತೋರೆ" ಎಂಬುದಾಗಿ ವಾಸ್ತವಿಕವಾಗಿ ವರ್ಣಿತವಾಗಿದೆ. ನಕ್ಷತ್ರಗಳು "ಗಗನಕ್ಕೆ ನವಕೋಟಿ ನಯನ ಒಪ್ಪುವ ತೆರದಿ" ಕಂಡುಬಂದುವಂತೆ! "ದಿನ ಕರನ ಪ್ರಭೆ ಮುನ್ನ ಗಗನಕ್ಕೆ ಎಸೆಯಲು ನಲಿಯಲು ಖಗ ಮೃಗ ಸ್ವರವು ಜಗದೊಡೆಯನು ಯಾ(ತಾ ?)ನು ಏರಿ ಮುಖದೋರೆ ಕಮಲಗಳು ನಗುವಂತೆ ಎಸಳು ಬಿಚ್ಚಿಹವು" ಎಂಬ ಸೂರ್ಯೋದಯದ ವರ್ಣನೆ ಸುಸ್ಪಷ್ಟವಾಗಿದೆ.

ಈ ನಿದರ್ಶನಗಳನ್ನು ನೋಡಿದರೆ, ಗಂಗನಿಗಾಗಲಿ, ಮಹಲಿಂಗಸ್ವಾಮಿಗಾಗಲಿ ನಂಜುಂಡನಷ್ಟು ಪರಿ ಶ್ರಮವೂ, ನೈಪುಣ್ಯವೂ ಇಲ್ಲವೆನ್ನುವುದು ವ್ಯಕ್ತವಾಗುತ್ತದೆ. ಇಬ್ಬರೂ, ತಮಗೆ ತೋರಿದಷ್ಟನ್ನು ನೇರವಾಗಿ ಹೇಳಬಲ್ಲರು. ಆದರೆ, ಕುಮಾರರಾಮನ ಕಥಾವಸ್ತುವಿನಲ್ಲಿ ಕ್ರಿಯೆಯೇ ಪ್ರಧಾನವಾಗಿರುವುದರಿಂದ, ಸಾವ ಧಾನವಾಗಿ ಪ್ರಕೃತಿಯ ರೌದ್ರ ಮತ್ತು ರಮಣೀಯತೆಗಳ ಕಡೆಗೆ ಕವಿಗಳು ತಮ್ಮ ದೃಷ್ಟಿಯನ್ನು ಬೀರಲು ಆಸ್ಪದವಿಲ್ಲ. ಆದ್ದರಿಂದಲೇ ವರ್ಣನಾಪ್ರಿಯನಾದ ನಂಜುಂಡನ ಪಾಂಡಿತ್ಯವಾಗಲಿ, ಸಹಜಪ್ರಿಯರಾದ ಉಳಿದ ಕವಿಗಳ ಸರಳತೆಯಾಗಲಿ ಇಲ್ಲಿ ನಮ್ಮ ಮನಸ್ಸನ್ನು ಸೆಳೆಯುವಷ್ಟುಗೆ ಜಯಪ್ರದವಾಗಿಲ್ಲ. ಪ್ರತಿಯೊಬ್ಬರ ಪ್ರಯತ್ನವೂ ಕೇವಲ ಔಪಚಾರಿಕವಾಗಿದೆಯೆನ್ನಬಹುದು.

ಈವರೆಗೆ ಈ ಕವಿಗಳು ಬಾಹ್ಯಪ್ರಪಂಚವನ್ನು ಹೇಗೆ ಚಿತ್ರಿಸಿದ್ದಾರೆ ಎಂಬುದನ್ನು ನೋಡಿದ್ದಾಯಿತು. ಈಗ, ಕಥೆಯಲ್ಲಿ ಪ್ರಾಸಂಗಿಕವಾಗಿ ಬರುವ ಅಂತರಂಗದ ತುಮುಲವನ್ನು ಹೇಗೆ ನಿರೂಪಿಸಬಲ್ಲರು ಎನ್ನುವು ದನ್ನು ಪರಿಶೀಲಿಸಬಹುದು. ರಾಮನ ರೂಪಕ್ಕೆ ಮನಸೋತ ರತ್ನಾಜಿಯ ವಿರಹಯಾತನೆ, ಕಿಳಿದೂ ಕಿಳಿದೂ ಕಂಟಕಕ್ಕೆ ಕೈಯೊಡ್ಡುತ್ತಿರುವ ಕುಮಾರರಾಮನನ್ನು ಕಂಡು ಹರಿಯಮ್ಮನು ಪಡುವ ಆತಂಕ, ಶತ್ರುಗಳು ಬಂದು ಮುತ್ತಿಗೆ ಹಾಕಲು ಮಗನನ್ನು ಕಾಣದೆ ಕಂಗೆಡುವ ಕಂಪಿಲನ ಕಂಪನ, ಕಟ್ಟಕಡೆಯಲ್ಲಿ ಕ್ಷಣಕಾಲ ತಮ್ಮನೊಬ್ಬನನ್ನೇ ಬಿಟ್ಟು ಹೋಗಬೇಕಾಗಿ ಬಂದ ಕಾಟಣ್ಣನ ಕಳವಳ ಇವೇ ಮೊದಲಾದ ಹಲವು ಸಮ ಸ್ಯಾತ್ಮಕ ಸನ್ನಿವೇಶಗಳು ಈ ಕಥೆಯಲ್ಲಿ ಅಡಕವಾಗಿವೆ. ಆಯಾ ಕೃತಿಗಳ ಕಥಾಸಂಗ್ರಹದಲ್ಲಿ ಈ ಸನ್ನಿವೇಶ ಗಳ ಪರಿಚಯವನ್ನು ಈಗಾಗಲೇ ಸ್ಥೂಲವಾಗಿ ಮಾಡಿಕೊಟ್ಟಿದೆ. ಪ್ರಕೃತದಲ್ಲಿ, ರತ್ನಾಜಿಯ ವಿರಹ ಮತ್ತು ಕಾಟಣ್ಣನ ಧರ್ಮಸಂಕಟಗಳನ್ನು ಮತ್ತಷ್ಟು ವಿವರಿಸಿ ವಿಮರ್ಶಿಸಬಹುದು.

ಶೂಲದಹಬ್ಬದಂದು ರಾಮನನ್ನು ಕಂಡಕೂಡಲೆ ರತ್ನಾಜಿಯ ಚಿತ್ತ ಅಸ್ತವ್ಯಸ್ತವಾಯಿತು. ಆಕೆಯ ವಿರಹವೇದನೆ ನಿಮಿಷ ನಿಮಿಷಕ್ಕೂ ಹಿಡಿದಾಯಿತು. ಇಂಥ ಸನ್ನಿವೇಶವೊಂದು ನಂಜುಂಡನಂಥ ನಿಪುಣನಿಗೆ ಸಿಕ್ಕಿದರೆ ಆತನ ನಾಲಿಗೆಗೆ ಬಿಡುವೆಲ್ಲಿದ್ದೀತು! ರತ್ನಾಜಿ ಕರುಮಾಡದಿಂದಿಳಿದು ತನ್ನ ಅರಮನೆಗೆ ಬಂದು, ದೂತಿಯಾದ ಸಂಗಿಯೊಡನೆ ತನ್ನ ತಳಮಳವನ್ನು ತೋಡಿಕೊಳ್ಳತೊಡಗಿದಳು. "ಲಕ್ಕಣಿಕೆಯ ಪಿಡಿದೊಸೆದು ಚಿತ್ರಗ ಕಣ್ಣಿಕ್ಕಿ ಬರೆದ ಗಂಡುರೂಪ ಮಿಕ್ಕುತೋರುವ ರಾಮನ ರೂಪಿಗೆ ಮನವಿಕ್ಕಿದೆನಕ್ಕ" ಎಂದು ಮಾತನ್ನು ಮೊದಲುಮಾಡಿದಳು. "ಕುಮುದಬಂಧುವಿನೊಡನೊಸೆದು ನೆರೆಯದಿರ್ದ ಕಮಲಿನಿ ಯಂತಿವನೊಡನೆ ರಮಿಸದೆನ್ನೀ ಜನ್ಮವಾಯ್ತು ನಿರರ್ಥಕ" ಎಂದು ಪರಿತಪಿಸಿದಳು. ಆಕೆ ಮುಚ್ಚುಮರೆಯಿಲ್ಲದೆ ತನ್ನ "ಅಂತರಂಗವ ಹಿಕ್ಕಿ ಕೆಳದಿಯೊಳಾಡಿದಳು." "ಕೋಳುವೋಯ್ತೆರ್ದೆಗೋಟೆ ಮನಸಿಜನೃಪನ ಕಾಳಾಳ ಕಾಳಾಟ ಮಸಗಿತು ತಾಳಲಾರೆನು ವಿರಹಾಗ್ನಿಯುರಿಯನು" ಎಂದು ಹೇಳಿಕೊಂಡಳು. "ಮತಿಮಣಿ ದರ್ಪಣ ಸೂರೆವೋದುದು ಬಾಳ್ವ ಗತಿಯ ಪೇಳೆನಗೇಣನೇತ್ರೆ", "ಕುಸುಮ ಕೋದಂಡನಂತೆಸೆವ ಕುವರನ ಗಂಡಗಾಡಿಯನ್ನೆರ್ದೆಗೋಟೆಯ ಕೋಳುಗೊಂಡುದಕ್ಕಾಜಿ", "ಏನು ಪುಣ್ಯವ ಮಾಡಿ ಪಡೆದಳೊ ತಾಯಿ

ತಾನಾ ಸುಕುಮಾರಾಂಗನನು, ಆಸೆವಟ್ಟಾವ ನೋಂಪಿಯ ನೋಂತು ರಾಣಿವಾಸವಾದರೊ ಪೆಣ್ಗಳವಗೆ", "ಇವನಿಗೆ ಪಡಿಯೆ ಮದನನೆಂಬವನು," "ತಂದಿತ್ತವನೆನಗಕ್ಕನಾದೆಪೆಯೊ ಪೇಳಿಂದುವದನೆ ತಾರದವನ ಕೊಂದೆನ್ನ ನಿನ್ನುದರದೊಳು ಬರಿಸಿಕೊಂಡು ಸಂದ ಜನನಿಯಾದಪೆಯೊ"—ಎಂಬುದಾಗಿ ದೂತಿಯೊಂದಿಗೆ ಬಗೆಬಗೆಯಾಗಿ ಬಿನ್ನವಿಸಿಕೊಂಡಳು. ಚತುರಳಾದ ಸಂಗಿ ರತ್ನಾಜಿಯನ್ನು ಬುದ್ಧಿವಂತಿಕೆಯಿಂದ ಸಮಾಧಾನ ಮಾಡಲು ತೊಡಗಿದಳು. "ಪಲ್ಲವಾಧರೆ ಕುಂಟಣಿತನಕಾನಲ್ಲದಿಲ್ಲ" ಎಂದು ಆತ್ಮಪ್ರಶಂಸೆಯನ್ನು ಮಾಡಿ ಕೊಳ್ಳಲೂ ಹಿಂತೆಗೆಯದೆ, ಒಡತಿಯೊಂದಿಗೆ ತನ್ನ ಪ್ರವೀಣತೆಯನ್ನೆಲ್ಲ ವಿವರಿಸಿದಳು. ಆದಾಗ್ಯೂ ರತ್ನಿಗೆ ಸಮಾಧಾನವಾಗಲಿಲ್ಲ. "ಅಗ್ನಿಯ ಮೇಲೆ ತುಪ್ಪದ ತುಂತುಱು ಬಿದ್ದಂತವಳ ಅಂತರಂಗದೊಳಂಗಜಾಗ್ನಿ ಪೊಗೆವುತೋರಂತೆ ಪೆರ್ಚಿದುದು." ಆಕೆ, "ಕಿಚ್ಚೀಳೆ ನೀರ ಪೊಯ್ಯದೆ ಹೊಯ್ದಪೆನೆಂದುಚ್ಚರಿಸಿದೊಡೆ ಕೆಡುವುದೆ ಮಚ್ಚಿದಿನಿಯನ ತೋಱದೆ ತೋಱಿಸುವೆನೆಂದೊಡಚ್ಚಿಗ ಪೆರ್ಚದೆ ಪೆಣ್ಗೆ" ಎಂದು ಸಂಗಿಯನ್ನು ಆಕ್ಷೇಪಿಸಿದಳು. ಒಡತಿಯ ಒಳಗುದಿಯನ್ನು ಕಂಡು ದೂತಿಯಾದ ಸಂಗಿ ಶೈತ್ಯೋಪಚಾರಗಳನ್ನು ಮಾಡಿದಳು. ಆದರೇನು? ಆಕೆಯ ಶರೀರದ ಮೇಲೆ ತಂದು ಹೊದಿಸಿದ್ದ ತಾವರೆಯ ದಂಟುಗಳು "ದಾವಶಿಖಿಯ ಮೇಲಿಕ್ಕಿದ ಜೋಳದ ಕಾವುಗಳಂತೆ ಪೊಗೆದವು." ರತ್ನಾಜಿಗೆ ಭರವಸೆಯಿತ್ತು, ಆಕೆಯನ್ನು ಸೆಜ್ಜೆಮನೆಗೆ ಕರೆದೊಯ್ದಳು. "ಕಳಹಂಸೆ ಬಂದುನ್ನತ ಪುಳಿನ ಸ್ಥಳದೊಳಗೆ ಮೈಯಿಕ್ಕುವಂತವಳು ಬೆಳುವಟ್ಟೆವಾಸಿನ ಸೆಳೆಮಂಚದ ಮೇಲೆ ಬಳಲುತ ಬಂದೊಱಗಿದಳು." ಸಂಗಿ ರತ್ನಾಜಿ ತನ್ನ ವಿರಹಯಾತನೆಯನ್ನು ಹಾಗೆ ಪ್ರಕಟಿಸುವುದು ವಿಹಿತ ವಲ್ಲವೆಂದು ಬುದ್ಧಿವಾದವನ್ನು ಹೇಳಿದಳು. ಹಾದರಮಾಡಿದರೂ ಎಚ್ಚರವಾಗಿರಬೇಕೆಂದು ಸೂಚಿಸಿದಳು. ಇಲ್ಲದಿದ್ದಲ್ಲಿ ಅದು "ಸಾವಿನ ತವರು," "ಖಡ್ಗಧಾರೆಯ ಜೇನಯ್ಯನೊಲಿದು ಸೇವಿಸುವಂತೆ" ಎಂದು ತಿಳಿಸಿ ದಳು. ಅತಿ ವಿಸ್ತಾರವಾಗಿ ಒಡತಿಯ ರೂಪುಲಾವಣ್ಯಗಳ ವೈಭವವನ್ನೂ, ಆಕೆಯ ಆಕಾಂಕ್ಷೆಯನ್ನೂ ಪ್ರಶಂಸೆಮಾಡಿದಳು. ರತ್ನಾಜಿಗಾದರೋ ಮನಸ್ಸು ಮಸೆಯುತ್ತಿತ್ತು. ಕ್ಷಣಕಾಲ ಭಾವರತಿಯನ್ನೂ ಅನುಭವಿಸಿ ಭ್ರಮಿಸಿದಳು. ಮರುಗಳಿಗೆಯಲ್ಲಿ ಕುಮಾರರಾಮನ ಕನಸನ್ನೂ ಕಾಣಲಾರಂಭಿಸಿದಳು. "ಕುದಿದುಕ್ಕಿ ಬೀಳ್ವ ಕಾದೆಸರ ಬಿಂದುಗಳಂತೊದವಿ ಸುರಿಯೆ ಕಂಬನಿಗಳು ಮದನಾತುರದಿಂದ ಮಱುಗುತ ಮಾನಿನಿ ಬೆದೆ ಬೇಟ ಗೊಂಡಳೆದೆಯೊಳು." ಬೆಳಗಾಗಲು, ಆಕೆ ಕಳೆಗುಂದಿದಂತಿದ್ದರೂ, ಇತರರಿಗೆ ಗೊತ್ತಾದೀತೆಂದು ಶಂಕಿಸಿ ಎಂದಿನಂತೆಯೇ ವ್ಯವಹರಿಸತೊಡಗಿದಳು. ಈ ಒಟ್ಟು ಸಂದರ್ಭವನ್ನು ನಂಜುಂಡನು ಬಹು ದೀರ್ಘವಾಗಿಯೂ ಪರಿಣಾಮಕಾರಿಯಾಗಿಯೂ ಚಿತ್ರಿಸಿರುತ್ತಾನೆ. ಆತನ ಪಾಂಡಿತ್ಯ ಪ್ರತಿಭೆಗಳು ಸಮಜೋಡಿಯಾಗಿ ನಿಂತು ಸಾಗುತ್ತವೆ. ರತ್ನಾಜಿಯ ಒಳತೋಟಿಯನ್ನು ಮನಸೆಳೆಯುವಂತೆ ಎಳೆ ಎಳೆಯಾಗಿ ಬಿಡಿಸಿ ತೋರಿಸಿದ್ದಾನೆ.

ಗಂಗನಲ್ಲಿ ರತ್ನಾಜಿಯ ವ್ಯಾಮೋಹ ಎಂದಿನಂತೆ ಶೂಲದ ಹಬ್ಬದ ಸಂದರ್ಭದಲ್ಲಿಯೇ ಆದರೂ, ಅದರ ಉದ್ರೇಕ ಚೆಂಡಿನಾಟದ ಸಂದರ್ಭದಲ್ಲಿ ವಿಶದವಾಗುತ್ತದೆ. ಜನಪ್ರಿಯವಾದ ಈ ಕಥಾಭಾಗದಲ್ಲಿ ಸಾಕಾದಷ್ಟು ಪಾಠಾಂತರಗಳಿವೆ. ಆದ್ದರಿಂದ, ಸಾರ್ವತ್ರಿಕವಾಗಿ ತೋರಿಬರುವ ಕಥಾಂಶವನ್ನು ಗಮನಿಸಿ ಇಲ್ಲಿ ವಿಚಾರ ಮಾಡಿದೆ. ಕುಮಾರರಾಮನು ತನ್ನ ಗೆಳೆಯರೊಂದಿಗೆ ರತ್ನಾಜಿಯ ಅರಮನೆಯ ಬಳಿಯಲ್ಲೇ ಚೆಂಡಾಟವಾಡ ತೊಡಗಿದನಷ್ಟೆ. ಅದರ ಅಬ್ಬರ ಭೂಮ್ಯಾಕಾಶಗಳನ್ನೇ ಆವರಿಸಿತ್ತು. ಅದನ್ನು ಕೇಳಿದ ರತ್ನಾಜಿ ನೋಡಿ ಕೊಂಡು ಬರಲು ಸಂಗಿಯನ್ನು ಕಳುಹಿಸಿದಳು. ಅವಳು ಹಿಂತಿರುಗಿ ಬಂದು ವೃತ್ತಾಂತವನ್ನು ತಿಳಿಸಿದಳು. ರತ್ನಾಜಿಗೆ ರಾಮನನ್ನು ಕಾಣಬೇಕೆಂದು ಹಂಬಲವಾಯಿತು. ಕೂಡಲೇ ಸಡಗರದಿಂದ ಅಲಂಕೃತಳಾದಳು. ರಾಮನಾಥನಾಡುವ ಚೆಂಡು ಹೇಗಾದರೂ ಮಾಡಿ ತನ್ನ ಮನೆಗೆ ಬೀಳಲೆಂದು ತನಗೆ ಗೊತ್ತಿದ್ದ ದೇವತೆಗಳಿಗೆಲ್ಲ ಹರಸಿಕೊಂಡಳು. ನಾನಾ ಪ್ರದೇಶಗಳ ವೀರರು ಚೆಂಡಾಟದಲ್ಲಿ ಭಾಗವಹಿಸಿದ್ದರು. ಅವರುಗಳು ಯಾರೆಂದು ಕೇಳಲು ಸಂಗಿ ಒಬ್ಬೊಬ್ಬರನ್ನೂ ಬೆರಳಿಟ್ಟು ತೋರಿ ವರ್ಣಿಸಿದಳು. ರತ್ನಾಜಿಗಾದರೋ ಕುಮಾರರಾಮನನ್ನು ನೋಡಬೇಕೆಂಬ ಕುತೂಹಲ. "ಉನ್ನಂತ ರಾಮನ ತೋರೆಂದಡೆ ನಾಡಮನ್ನೆಯರ ಎನಗೆ ತೋರುವರೆ, ಎನ್ನ

ತನುವ ಸೂರೆಗೊಂಬ ರಾಮನ ತೋರೆ, ಹೊನ್ನ ಹೊಯ್ಸುವೆನು ಬಾಯ ತುಂಬ" ಎಂದು ಒತ್ತಾಯ ಮಾಡಿದಳು. ಒಡತಿಯ ಒಳಗುದಿಯನ್ನು ಬಲ್ಲ ಸಂಗಿ ಹಾಗೆಯೇ ಮಾಡಿದಳು. ಒಡನೆಯೇ ರತ್ನಾಜಿಗೆ "ರಾಮನೆಂಬಾ ಮಾತ ಕೇಳಿ ಸಂತೋಷದಿ ನಿಸ್ಸೀಮನ ದೃಷ್ಟಿಸಿ ನೋಡಿ ಪ್ರೇಮದಿ ತಲ್ಲಣಿಸುತ ತರಹರಿಸುತ ಕಾಮ ಹುಟ್ಟಿತು ಮನದೊಳಗೆ." ಮದನತಾಪ ಮಿಗಿಲಾಗಲು "ಧರೆಯೊಳಗಾಡ್ವರು ಬರಿಮಾತು ಮನ್ಮಥನ ಉರುಹಿ ಸುಟ್ಟುದು ಸಟೆಯೆಂದು ಧುರಧೀರ ರಾಮನು ಸ್ತ್ರೀಯರ ಅಂಗವ ಇರದೆ ಮುತ್ತಿಗೆ ಮಾಡಬಂದ" ಎಂದು ನುಡಿದಳು. ಮನ್ಮಥನಾದರೂ ಎಲ್ಲಿ ಕಾದಿದ್ದನೋ ಏನೋ! "ತನ್ನೈದು ಬಾಣವ ಹೂಡಿಬಿಟ್ಟನು ಇವಳೆದೆಗೆ." ರತ್ನಾಜಿ ಮೂರ್ಛಿತಳಾದಳು. ಸಂಗಿಗೆ ಸಂಕಟಕ್ಕಿಟ್ಟುಕೊಂಡಿತು. "ಕೆಟ್ಟೆನು ಪಾಪಿಗೆ ಹುಟ್ಟಿತು ತಾಪವು ಮುಟ್ಟಬಾರದು ಕಾಮಜ್ವರವು" ಎಂದು ನೊಂದುಕೊಂಡಳು. ಅಷ್ಟೇ ಅಲ್ಲ; "ತವಕದಿ ಕಂಪಿಲ ರಾಯ ಬಂದರೆ ಇವಳ ಜೀವಕ್ಕೆ ಮುನಿಯದೆ ಬಿಡನು" ಎಂದು ಹೆದರಿಕೆ ಬೇರೆ! (ಕೆಲವು ಪ್ರತಿಗಳಲ್ಲಿ "ತವಕದಿ ಕಂಪಿಲರಾಯ ಬಂದರೆ ಎನ್ನ ಕಿವಿ ಮೂಗ ಕೊಯಿಸದೆ ಬಿಡನು" ಎಂದೂ ಇದೆ.) ಅನಂತರ ಒಡತಿಗೆ ಶೈತ್ಯೋಪಚಾರಗಳನ್ನು ಮಾಡಿದಳು. ರತ್ನಾಜಿ ಚೇತರಿಸಿಕೊಂಡು ಏಳುವುದೇ ತಡ "ಚೆನ್ನರಾಮನ ತೋರು ಎನಗೆ" ಎಂದು ಅಂಗಲಾಚಿದಳು. ಸಂಗಿ "ಕನ್ನೆ ನಿನ್ನಯ ಬುದ್ಧಿ ಸಣ್ಣವರಂದದಿ" ಆಗಬಾರದೆಂದೂ, ಕುಮಾರರಾಮನು "ನಿನ್ನಿಚ್ಛೆಗೆ ಸಿಕ್ಕುವನಕ ತರಹರಿಸ" ಬೇಕೆಂದೂ ಹಿತೋಕ್ತಿಗಳನ್ನಾಡಿದಳು. ಕಾಮತಪ್ತಳಾದ ತರುಣಿಗೆ ಈ ಮಾತು ಹಿಡಿಸುತ್ತದೆಯೆ? ಪ್ರತಿಕ್ಷಣದಲ್ಲಿಯೇ "ಗಾದೆಯ ಮಾತು ಸಾವಿರ ಆಡಿದರೇನು ಬೋಧಿಸಲಿನಿತು ಬುದ್ಧಿಯನು. ನಿಧಾನವನೆಡಹಿ ಕಾಣಲು ಬಿಡುವವರುಂಟೆ" ಎಂದು ಉತ್ತರವಿತ್ತು ತನ್ನ ಹಟವನ್ನೇ ಹಿಡಿದಳು. ನಿರ್ವಾಹವಿಲ್ಲದೆ ದೂತಿ ಒಡತಿಗೆ ಕುಮಾರರಾಮನನ್ನು ಗುರುತಿಸಿ ತೋರಿಸಿದಳು. ಸ್ಫುರದ್ರೂಪಿಯಾದ ಆತನನ್ನು ಕಂಡು ಕಂಗೆಟ್ಟಳು. "ಇಟ್ಟ ದೃಷ್ಟಿಯು ತೆಗೆಯಳು ರಾಮನ ಮೇಲೆ ಕೆಟ್ಟ ಮನವು ಸಂಚಳಿಸಿ." "ಎಂದಿಗೆ ಕಾರ್ಯವು ಕೈವಶವಹುದೊ ಎಂದಿಗೆ ಅವನ ತಬ್ಬುವೆನೊ ಎಂದಿಗೆನ್ನಕ್ಕರ ಹರಿವುದೊ ಸಂಗಾಯಿ" "ಇಂದ್ರನೊ ಚಂದ್ರನೊ ಶೂದ್ರಕವೀರನೊ" ಎಂದು ಬಗೆಬಗೆಯಾಗಿ ಪರಿತಪಿಸಿದಳು. ಅವಳ ಆಸೆ ನೆರವೇರಲೋ ಎಂಬಂತೆ ಆ ಮುತ್ತಿನ ಚೆಂಡು ಆಟವಾಡುತ್ತಿದ್ದವರ ಕಣ್ಣಿಗೆ ಮಣ್ಣೆರಚಿ, ರಾಮನಿಟ್ಟ ಲಗ್ಗೆಗೆ ಮೇಲಕ್ಕೆ ಲಂಘಿಸಿ ರತ್ನಾಜಿಯ ಮಹಲಿನ ಒಳಗೇ ಬಂದು ಬಿದ್ದಿತು. "ಏರಿತು ರತ್ನಿಗೆ ಬೇಟ."

ಈ ಸರಳವಾದ ನಿರೂಪಣೆಯಲ್ಲದೆ, ಕೆಲವು ಪ್ರತಿಗಳಲ್ಲಿ (ಗಂ. ೧, ಗಂ. ೩) ರತ್ನಾಜಿ ಸಂಗಿಯ ಮೂಲಕ ಕಳುಹಿಸಿದ್ದ ಉಂಗುರವನ್ನು ಆಕೆಯ ಇಂಗಿತವನ್ನರಿಯದ ರಾಮನು ನಿರಾಕರಿಸಲು ಆಕೆ ನಿರಾಶಳಾದಳೆಂದೂ ವಿರಹೋದ್ವೇಗವನ್ನು ತಾಳಲಾರದ ಆಕೆ ರಾಮನಂತಿದ್ದ ಚಿತ್ರಪಟದೊಂದಿಗೆ ಸರಸ ಸಲ್ಲಾಪಗಳನ್ನು ನಡೆಸಿದಳೆಂದೂ ವರ್ಣಿತವಾಗಿದೆ. ಬೇರೊಂದು ಪ್ರತಿಯಲ್ಲಿ (ಗಂ. ೫) ಶೂಲದಹಬ್ಬದಂದು ಕಳೆಗುಂದಿದ್ದ ರತ್ನಿಯನ್ನು ಸಂಗಾಯಿ ಸಮಾಧಾನಮಾಡಿದರೂ ಅವಳ ಆತಂಕ ಪರಿಹಾರವಾಗುವುದಿಲ್ಲ. ಆಕೆ "ಪಂಜರದ ಗಿಳಿಯ ರಾಮ ರಾಮಯೆನುತಲಿ ಮನದೊಳು ನೋವುತಿದ್ದಳು" ಎಂದೂ, ಕೊಳದ ತಾವರೆಯನ್ನು ಕಂಡು "ಕುಶಲ ರಾಮನ ಕಾಣಿರೆ" ಎಂದೂ, ಕೋಗಿಲೆಯನ್ನು ಕುರಿತು "ಅರಸು ರಾಮನ ಕಾಣಿರೆ" ಎಂದೂ ಹಲಬುತ್ತಿದ್ದಳೆಂದು ವಿವರಿಸಿದೆ. ಈ ಎಡೆಗಳಲ್ಲಿ ವಿಶೇಷವೇನೂ ಕಂಡುಬರುವುದಿಲ್ಲ. ರಾಮನ ಚಿತ್ರಪಟವನ್ನು ಕಂಡು ಯಾತನೆಪಡುವುದು ನಂಜುಂಡನ ಚಿತ್ರಪಟದ ಸಂಧಿಯನ್ನೂ, ಗಿಳಿ, ಕೋಗಿಲೆ, ತಾವರೆಗಳನ್ನು ಸಂಬೋಧಿಸುವುದು ಇಂತಹ ಸಂದರ್ಭವನ್ನೇ ಒಳಗೊಂಡಿರುವ ಇತರ ಕಾವ್ಯಗಳನ್ನೂ ಸ್ಮರಣೆಗೆ ತರುತ್ತವೆ. ಮುಖ್ಯವಾಗಿ, ಈ ಸಂದರ್ಭದಲ್ಲಿ ತೋರಿಬರುವ ಸರಳವಾದ ಮಾತುಕತೆಗಳೂ, ಒಂದೆರಡು ನುಡಿಗಳಲ್ಲಿಯೇ ವಿದಿತವಾಗುವ ರತ್ನಾಜಿಯ ಹರಕೆ, ಹಾರೈಕೆ, ಹಂಬಲಗಳೂ ಮೆಚ್ಚುವಂತಿವೆ.

ಮಹಲಿಂಗಸ್ವಾಮಿಯ ರಚನೆಯಲ್ಲಿ ಶೂಲದ ಹಬ್ಬದ ಸಂದರ್ಭವಿಲ್ಲದಿರುವುದರಿಂದ ರತ್ನಿಯ ವಿರಹದ

ಪ್ರಸಂಗ ಚೆಂಡಾಟದ ಸನ್ನಿವೇಶದಲ್ಲಿಯೇ ಮೊಳಕೆದೋರಿ ಬೆಳೆಯುತ್ತದೆ. ಎಂದಿನಂತೆಯೇ ಸಂಗಿ ಚೆಂಡಾಡು ತ್ತಿದ್ದ ಒಬ್ಬೊಬ್ಬರನ್ನೂ ರತ್ನಿಗೆ ಗುರುತಿಟ್ಟು ತೋರಿಸಿದಳು. ಕಡೆಗೆ ಕುಮಾರರಾಮನನ್ನು ಕಂಡಾಗ ಆಕೆ "ಬ್ರಹ್ಮನೆಂಬುವ ಪಾಪಿ ಇಂತಪ್ಪ ಪುರುಷನ ನಮ್ಮ ಗಂಡನ ಮಾಡದ್ಹೋದ" ಎಂದು ಉದ್ಗಾರವೆಳೆದು ಕುದಿ ದಳು. ಎವೆಯಿಕ್ಕದೆ ಎರಳೆಯಂತೆ ಬೆಚ್ಚಿ ನೋಡುತ್ತಿದ್ದಳು. ಕಾಮನ ಕೂರಂಬು ತಾಕಿ ಆಕೆ "ಗಾಯವಡೆದ ಮೃಗದಂತೆ ಮಾನಾಭಿಮಾನವ ತೊರೆದಳು." "ತಾಯ ಕಾಣದ ಹುಲ್ಲೆಯಂತೆ" ಕಳವಳಗೊಂಡಳು. ಆಕೆ ಇದ್ದಕ್ಕಿದ್ದಂತೆಯೇ ಮೂರ್ಛಿತಳಾಗಲು, ಸುತ್ತಮುತ್ತಲಿದ್ದವರು ಆಕೆಯ ಸಂಕಟವನ್ನರಿತು ಆಕ್ಷೇಪಿಸಿದರು. "ಕಟ್ಟಾಳು ರಾಮುಗೆಯಿಟ್ಟಳು ಮನವನು" ಎಂದು ಆಡಿಕೊಳ್ಳಲು ಆರಂಭಿಸಿದರು. ಆಗ "ಮಾರುತನ ಸುಳುವಾಗಿ ಬೆಮರೊಡೆದ ರತ್ನಿಗೆ ತೀರಿತು ಮೂರ್ಛೆ ಕಿಂಚಿತವು." "ಸೂರ್ಯಗೆ ಅಡರಿದ ಗ್ರಹವಿಳಿದು ಬರುವಂತೆ ತೀರಲು ನಯನವ, ತೆರೆದು" ನೋಡಿದಳು. "ಮೃದುಬಾಲನಂದಾದಿ ತೊದಲುತ ನುಡಿಗಳು ಕುಣಿವುತ ತುಟಿಬಾಯಿ ಹಲ್ಲ ಸುಖಸಾರ ಕೂಡಿದೆನು ಕಾಣ್ವಂತೆ ಎಲ್ಲಾರು ಮತಿಗೆಟ್ಟು" ಎಂದುಕೊಂಡಳು. ಪಕ್ಕದಲ್ಲಿಯೇ ಇದ್ದ ಸಂಗಿ "ಪುರುಷನುಳ್ಳವಳಿಗೆ ತರವೇನೆ ಇಂತಪ್ಪ ಮಮಕಾರದ ಮೂರ್ಛೆ ತಾಪಗಳು, ಅರಸು ಕೇಳಲು ನಿನ್ನ ಕೊರೆಸನೆ ಕಿವಿ ಮೂಗ ತರಹರ ಇರಬೇಕು ಮನದಿ" ಎಂದು ಎಚ್ಚರಿಸಿದಳು. ರತ್ನಾಜಿ "ಧರೆಯೊಳಗೀ ಕಾಯ ಸ್ಥಿರರಾಜ್ಯ ಪಡೆದಿಹುದೆ ಒಂದರಗಳಿಗೆ ರಾಮನ ಭೋಗ ಸಾಕು" ಎಂದು ನುಡಿದು "ಬಾಲೆ ನಿನ್ನಯ ಬಸು ರೊಳು ಬಂದೆನು ಹೇಳಬಾರದೆ ಒಂದು ಮಾತ" ಎಂದು ಕೇಳಿಕೊಂಡಳು. ರಾಣಿಯ ಆಜ್ಞೆಯ ಮೇರೆಗೆ ಸಂಗಿ ಇತರರನ್ನೆಲ್ಲ ಕೊಟ್ಟು ಕಳುಹಿಸಿ, ತಾನು ರಾಮನನ್ನು ತಂದೊಪ್ಪಿಸುವುದಾಗಿ ಭರವಸೆಯಿತ್ತಳು. ರತ್ನಾಜಿ ಸಂಗಿಯ ಮೂಲಕ ಉಂಗುರವನ್ನು ಕಳುಹಿಸಿಕೊಡಲು ರಾಮನು ಸ್ವೀಕರಿಸುವುದಿಲ್ಲ. ಹತಾಶಳಾದ ರತ್ನಿ ಎಲ್ಲ ದೇವತೆಗಳಿಗೂ ಹರಕೆ ಹೊತ್ತಳು. ಮೇಲಕ್ಕೆ ಚಿಮ್ಮಿದ ಚೆಂಡು ರತ್ನಿಯ ಮನೆಗೆ ಬಂದು ಬಿದ್ದಿತು. ಈ ನಿರೂಪಣೆ ಬಹುಮಟ್ಟಿಗೆ ಗಂಗನ ಕ್ರಮವನ್ನೇ ಅನುಸರಿಸಿದೆ. ಒಂದೆರಡು ಪದ್ಯಗಳಲ್ಲಿ ಸಾದೃಶ್ಯವನ್ನೂ ಕಾಣಬಹುದು. ಗಂಗನಿಗಿಂತಲೂ ವಿವರವಾಗಿ ರಚಿತವಾಗಿರುವುದೇ ಇದರ ವಿಶೇಷ.

ರತ್ನಾಜಿಯ ಕಾಮುಕಪ್ರವೃತ್ತಿ, ವಿರಹೋದ್ರೇಕ, ಅಸಹನೀಯವಾದ ಯಾತನೆ ಇವೇ ಮೊದಲಾದುವು ಈ ಪ್ರಸಂಗದ ಮುಖ್ಯಾಂಶಗಳು. ಇವುಗಳನ್ನು ನಮ್ಮ ಊಹೆಗೂ ಮೀರುವಷ್ಟು ದೀರ್ಘವಾಗಿ ನಂಜುಂಡನು ನಿರೂಪಿಸಿರುತ್ತಾನೆ. ರತ್ನಾಜಿ ಮತ್ತು ಸಂಗಿಯರ ಸಂಭಾಷಣೆಯೇ ಸಂಧಿಗಟ್ಟಲೆ ಸಾಗುತ್ತದೆ. ಶೂಲದ ಹಬ್ಬ ಮತ್ತು ಚೆಂಡಾಟಗಳ ಮಧ್ಯದ ಬಹುಭಾಗವನ್ನು ಈ ವರ್ಣನೆಗೆ ಮೀಸಲಿಟ್ಟಿದ್ದಾನೆ. ರತ್ನಿಗಿಂತ ಹೆಚ್ಚಾಗಿ ಸಂಗಿಯ ಸವಿನುಡಿ ಮೆಲ್ನುಡಿಗಳು ಅವಳ ಜಾಣತನವನ್ನೂ, ಕುಂಟಣಿತನದ ಪ್ರಾವೀಣ್ಯವನ್ನೂ ಪರಿಚಯ ಮಾಡಿಕೊಡುತ್ತವೆ. ಪ್ರೌಢವೂ ಗಾಢವೂ ಆದ ಈ ನಿರೂಪಣೆ ನಂಜುಂಡನ "ಮಹಾಪ್ರಬಂಧ"ದ ಸರಣಿಗೆ ತಕ್ಕಂತಿದೆ. ಗಂಗ ಮತ್ತು ಮಹಲಿಂಗಸ್ವಾಮಿಯವರ ಪ್ರಯತ್ನದಲ್ಲಿ ಮುಖ್ಯ ಪರಿಣಾಮಕ್ಕೆ ಬಾಧಕವೇನೂ ಬಂದಿಲ್ಲ. ಚೆಂಡಿನಾಟದೊಂದಿಗೇ ರತ್ನಾಜಿಯ ಕಾಮನ ಕೋಟಲೆಯೂ ಬಹು ತೀಕ್ಷ್ಣವಾಗುತ್ತದೆ. ಸೂಕ್ಷ್ಮಾಂಶಗಳನ್ನು ಬೆಳೆಸದಿದ್ದರೂ ತಮ್ಮ ತಮ್ಮ ಪರಿಮಿತಿಯಲ್ಲಿ ಈ ಕವಿಗಳು ಗುರಿ ಮುಟ್ಟಿದ್ದಾರೆ.

ಕಾಟಣ್ಣನಿಗೆ ಒದಗಿ ಬಂದ ಧರ್ಮಸಂಕಟವೊಂದರ ಪ್ರಸಂಗವನ್ನು ನಾವು ಗಂಗನಲ್ಲಿಯೂ ಮಹಲಿಂಗ ಸ್ವಾಮಿಯಲ್ಲಿಯೂ ಕಾಣಬಹುದು. ಕುಮಾರರಾಮನು ಕಡೆಯತನಕ ಹೋರಾಡುತ್ತಿದ್ದು, ದಣಿದು ಗೂಗೆಯ ಕಲ್ಲನ್ನು ನೆಮ್ಮಿ ನಿಂತನಷ್ಟೆ. ಕಾಟಣ್ಣನು ತಮ್ಮನನ್ನು ಕಂಡು ಆತನ ಸಮೀಪಕ್ಕೆ ಬಂದನು. ಆಗ ರಾಮನು ತನ್ನ ಒಡವೆ ಆಭರಣಗಳನ್ನು ಕಳಚಿಕೊಟ್ಟು "ಪಡೆಬೇಗ ಬರುತದೆ ನಡಿ ನೀನು ಕಾಟಣ್ಣ ಒಡೆಯರಾರೊ ಹೆಮ್ಮಕ್ಕಳಿಗೆ" ಎಂದು ಹೇಳಿದನು. ಕಾಟಣ್ಣನಿಗೆ ರಾಮನನ್ನು ಬಿಟ್ಟು ಹೋಗಲು ಮನಸ್ಸಾಗಲಿಲ್ಲ. "ಒಡ ಹುಟ್ಟಿದನ ಬಿಟ್ಟು ಬಂದೆ ನೀನೆಂಬೋಳು ಹಡೆದ ತಾಯಿ ಹರಿಯಮ್ಮ" ಎಂದು ನೆಪ ಹೇಳಿ ಹಿಂತೆಗೆದನು. ಆದರೆ ರಾಮನು ಕೈಮುಗಿದು ಕೇಳಿಕೊಳ್ಳತೊಡಗಿದನು. ಕಾಟನಿಗೆ ತುಂಬ ಸಂಕಟವಾಯಿತು. "ಸುಣ್ಣ

ಸಾಸಿವೆಯು ಒಡಲೊಳು ಹುಯ್ದಂತೆ, ಕಣ್ಣೊಳು ದಸಿಯ ನೆಟ್ಟಂತೆ" ಹೊರಳಾಡಿದನು. ರಾಮನಾದರೋ "ಹೋಗೆಂದರೆ ಹೋಗಲಿಲ್ಲವೆ ಅಣ್ಣಯ್ಯ ಹೋಗಯ್ಯ....ಹೋಗೋ ಎನ್ನಾಣೆ" ಎಂದು ಬಲಾತ್ಕರಿಸಿದನು. ನಿರ್ವಾಹವಿಲ್ಲದೆ ಕಾಟನು ಹೋಗಬೇಕಾಯಿತು. ಆದರೆ ಹೊರಡುವುದಕ್ಕೆ ಮುಂಚೆ ರಾಮನನ್ನು ಕಂಡು "ಅಂಗವ ಕೊಡದಿರೊ ಭಂಗ ನಿನಗೆ" ಎಂದು ಎಚ್ಚರಿಕೆಯಿತ್ತು "ಉರಿಗೊಂಡ ಪುತ್ಥಳಿಯಿಂತೆ" ಊರಿಗೆ ಬಂದನು. ಹರಿಯಮ್ಮ ಕಂಪಿಲ ಮೊದಲಾದವರಿಗೆ ರಾಮನ ದಾರುಣ ಸ್ಥಿತಿಯನ್ನು ತಿಳಿಸಿ, ರಾಮನ ಸತಿಯರಿಗೆ ಚಿತೆಯನ್ನು ಏರ್ಪಡಿಸಿ, ತನ್ನ ಹೆಂಡತಿಯನ್ನೂ ಬಲಿಗೊಟ್ಟು ನಿಮಿಷಮಾತ್ರದಲ್ಲಿ ಹಿಂತಿರುಗಿ ಬಂದನು. ರಾಮನಿಗೆ ಎಲ್ಲವನ್ನೂ ವರದಿ ಒಪ್ಪಿಸಿದನು. ಸ್ವಲ್ಪ ಕಾಲದೊಳಗಾಗಿಯೇ ರಾಮನ ಸಮ್ಮುಖದಲ್ಲಿಯೇ ಜೀವವನ್ನು ಅರ್ಪಿಸಿದನು.

ಈ ಹೃದಯವಿದ್ರಾವಕವಾದ ಸನ್ನಿವೇಶವನ್ನು ಮಹಲಿಂಗಸ್ವಾಮಿಯೂ ಗಂಗನಂತೆಯೇ ಮನಕರಗುವಂತೆ ಚಿತ್ರಿಸಿರುವನು. ರಾಮನು ಕಾಟನನ್ನು ಕರೆದು "ಬಾರಯ್ಯ ಕಾಟಣ್ಣ ನೀ ಪೋಗಿ ನಗರಕ್ಕೆ ತಾಯಿ ತಂದೆಗೆ ಸುದ್ದಿ ಪೇಳೋ" ಎಂದನು. ಕಾಟಣ್ಣನು "ದೇವೇಂದ್ರನಾತ್ಮಜನೆ ನಿನ್ನಗಲಿ ಪೋಗುವನಲ್ಲ ಸಾಗಿಸು ಮತ್ಯಾರ ನೀನು" ಎಂದು ಹೇಳಿ "ಅಡವಿಗೊಲ್ಲನ ತಂದು ಅಣ್ಣಾಜಿಯೆನಿಸಿದ ಋಣವ ಕಡಿದಾಡಿ ಅಳಿವೆ ನಿನ್ನೆಡೆಯಾ" ಎಂದು ತನ್ನ ಇಷ್ಟಾರ್ಥವನ್ನು ಒತ್ತಿ ಹೇಳಿದನು. ರಾಮನಿಗಾದರೋ ಬಾದೂರ ಮೊದಲಾದವರು ಊರಿಗೆ ತೆರಳಿ ತನ್ನ ಮಗ ಜಟ್ಟಂಗಿರಾಯನನ್ನು ರಕ್ಷಿಸಬೇಕೆಂದು ಹೆಬ್ಬಯಕೆ. ಅದಕ್ಕಾಗಿ ಎಲ್ಲರನ್ನೂ ಒತ್ತಾಯಮಾಡಿದನು. ಕಡೆಗೆ ಒಲ್ಲದ ಕಾಟನಿಗೇ ಮತ್ತೊಮ್ಮೆ "ಬಾರಯ್ಯ ಕಾಟಣ್ಣ ತೀರಿಸಿದೆ ಜಡರಾನು ರಾಣಿಯರ ತೊಡಕೊಂಡು(ದು?) ಇಹುದು ನಾಲ್ವರ ತಲೆ ಹೊಡೆಯೆ ಕುಮಾರನ ಪಡೆದಂಥ ಬಾಲೆಯೋರ್ವಳ ಕಾಯಿ" ಎಂದು ಒಂದು ಕೆಲಸವನ್ನೂ ನಿಯಾಮಿಸಿದನು. ಕಾಟಣ್ಣನಿಗೆ ಈಗ ಉಭಯಸಂಕಟವುಂಟಾಯಿತು. ರಾಮನ ಅಪ್ಪಣೆ, ಅರಿಕೆಗಳು ಅವನ ಮನಸ್ಸನ್ನು ಕಲಕಿದುವು. ತೀರ ನೊಂದುಕೊಂಡು "ಸಾಸುವೆ ಹಿಟ್ಟನು ತನುವಿಗೆ ನೈದಂತೆ ನಯನಕ್ಕೆ ದಸಿಯಾ ಬಲಿದಂತೆ" ಕಳವಳಗೊಂಡು, "ರಾಹು ತುಡುಕಿದ ಶಶಿಯಂತೆ" ಖಿನ್ನನಾಗಿ, ನಿರ್ವಾಹವಿಲ್ಲದೆ ಊರಿಗೆ ಬಂದನು. ರಾಮನ ವೃತ್ತಾಂತವನ್ನು ಕೇಳಿ ಎಲ್ಲರೂ ಮರುಗಿದರು. ಕಾಟಣ್ಣನು ರಾಮನ ಹೆಂಡತಿಯರಲ್ಲಿ ನಾಲ್ವರಿಗೆ ಚಿತೆಯನ್ನು ಏರ್ಪಡಿಸಿ, ಸುಭದ್ರೆ ಎಂಬಾಕೆಯನ್ನು ಜಟ್ಟಂಗಿರಾಯನ ಸಲುವಾಗಿ ಹಾಗೆಯೇ ಬಿಟ್ಟನು. ತನ್ನ ಇಬ್ಬರು ಹೆಂಡತಿಯರನ್ನೂ ತಾನಾಗಿ ಕೊಂದು, ವಾಯುವೇಗದಲ್ಲಿ ರಾಮನ ಬಳಿಗೆ ಬಂದನು.

ಕಾಟಣ್ಣನ ಮನೋಧರ್ಮವನ್ನು ಸ್ಪಷ್ಟಪಡಿಸುವ ಈ ಸನ್ನಿವೇಶ ಬಹಳ ಚಿಕ್ಕದಾದರೂ ತುಂಬ ಹೃದಯಸ್ಪರ್ಶಿಯಾಗಿದೆ. ಕಾಟಣ್ಣನು ತಾನು ಸಾಯುವುದಕ್ಕೆ ಮುಂಚೆ ರಾಮನಿಗೆ ತನ್ನ ಕಡೆಯ ಸೇವೆಯನ್ನು ಸಲ್ಲಿಸಿ, ತನ್ನ ಇಷ್ಟದಂತೆಯೇ ರಾಮನ ಕಣ್ಣುಮುಂದೆಯೇ ಜೀವ ತೆರುವುದು ಅವನ ಸ್ವಭಾವಕ್ಕೆ ಕಳಶವಿಟ್ಟಂತಿದೆ. ಇಂಥ ಸಂದರ್ಭವೊಂದು ನಂಜುಂಡನಲ್ಲಿ ಕಂಡುಬರುವುದಿಲ್ಲ. ಅಲ್ಲಿ ಯುದ್ಧದ ಬಿರುಸೇ ಬಹಳವಾಗಿ ಬೆಳೆಯುತ್ತದೆ. ರಾಮನ ಪ್ರತಾಪವೇ ಎಲ್ಲೆಲ್ಲಿಯೂ ಆವರಿಸಿ, ಬಾದೂರ, ಕಾಟಣ್ಣ, ಮೊದಲಾದವರು ಹೋರಾಡುತ್ತ ಸತ್ತರೆಂದು ಹೇಳಿ ಮುಗಿಸುತ್ತಾನೆ.

ಇದೇ ರೀತಿ ಮೂರು ಕೃತಿಗಳಿಂದಲೂ ಬೇಕಾದಷ್ಟು ಸಂದರ್ಭಗಳನ್ನು ಆರಿಸಿಕೊಂಡು ತೌಲನಿಕ ದೃಷ್ಟಿಯಿಂದ ಪರಿಶೀಲಿಸಲು ಅವಕಾಶವಿದೆ. ಪ್ರಕೃತದಲ್ಲಿ, ಕೆಲವು ವರ್ಣನೆಗಳನ್ನು ಮಾತ್ರ ವಿಚಾರಮಾಡಲಾಯಿತು. ವಿಸ್ತಾರ, ವಿದ್ವತ್ತುಗಳಲ್ಲಿ ನಂಜುಂಡನದು ಮೇಲುಗೈ. ಸಾಂಪ್ರದಾಯಿಕವಾಗಿ ಆತನು ಯಾವ ಸನ್ನಿವೇಶವನ್ನಾದರೂ ಪ್ರೌಢವಾಗಿ ನಿರೂಪಿಸಬಲ್ಲ. (ಅವನ ಈ ಸಂಪ್ರದಾಯಶ್ರದ್ಧೆಯೇ ಪರದಾರಸೋದರನಾದ ಕುಮಾರರಾಮನನ್ನು ಸೂಳೆಗೇರಿಗೂ ಕರೆದೊಯ್ಯುವಂತೆ ಪ್ರೇರಿಸಿರುವುದುಂಟು. ಆದರೆ ರಾಮನ ಸಂಯಮ ಅವನನ್ನು ಕಾಪಾಡುತ್ತದೆ!) ಶೌರ್ಯ ಮತ್ತು ವಿರಹಪ್ರಧಾನವಾದ ಭಾಗಗಳಲ್ಲಿ ಅವನ ಪಾಂಡಿತ್ಯ

ಅವನಿಗೆ ಬೆಂಬಲವಾಗಿ ಬರುತ್ತದೆ. ಹೃದಯಾಂತರಾಳವನ್ನು ಚಿತ್ರಿಸುವ ಹರಿಯಮ್ಮನ ಆತಂಕ, ಕಂಪಿಲನ ಒಳತೋಟಿ ಮೊದಲಾದ ಕೆಲವು ಸಂದರ್ಭಗಳು ಸ್ವಲ್ಪ ಸಪ್ಪೆಯಾಗುತ್ತವೆ. ರತ್ನಾಜಿಯ ಆತುರ ಕಾತರಗಳನ್ನು ಅರಿತ ಅವನ ಪ್ರತಿಭಾದೃಷ್ಟಿ ಇತರ ತೆರನಾದ ಚಿತ್ತವೃತ್ತಿಗಳನ್ನು ಕಾಣದೆ ಹೋಗುತ್ತದೆ. ನಂಜುಂಡನ ವರ್ಣನೆಯಲ್ಲಿ ವ್ಯಾಪ್ತಿಯಿದೆ; ವಾಗ್ವೈಭವವಿದೆ. ಸಾಕಾದಷ್ಟು ಅಬ್ಬರವೂ ಇದೆ. ಕಥಾಪ್ರಸಂಗಕ್ಕೆ ಮೀರಿದ ಮಾತುಗಾರಿಕೆಯಿಂದ ಕೆಲವು ಸಲ ನೀರಸವಾದರೆ ಸೋಜಿಗವೇನಿಲ್ಲ.

ಪಾಂಚಾಳ ಗಂಗನ ವರ್ಣನಾವಿಧಾನದಲ್ಲಿ ಪಾಂಡಿತ್ಯದ ಲಕ್ಷಣಗಳು ವಿರಳ. ಆಯಾ ಸನ್ನಿವೇಶದ ಸತ್ವವನ್ನು ಅರಿತೋ ಅರಿಯದೆಯೋ ಸರಳವಾದ ಮಾತುಗಳಲ್ಲಿ ಚೆನ್ನಾಗಿ ಪ್ರಕಟಪಡಿಸಿರುತ್ತಾನೆ. ಒಟ್ಟು ಕಾವ್ಯವೇ ಚಿಕ್ಕದಾಗಿರುವುದರಿಂದ ಪ್ರತಿಯೊಂದು ಪ್ರಸಂಗಕ್ಕೂ ಸಹಜವಾಗಿಯೇ ಒಂದು ಪರಿಮಿತಿ ಏರ್ಪಟ್ಟಿರುತ್ತದೆ. ಇಲ್ಲಿ ವಾಗ್ವೈಭವವಿಲ್ಲದಿದ್ದರೂ ಮನಸ್ಸನ್ನು ಸೆಳೆಯಬಲ್ಲ ನಿರಾಡಂಬರವಾದ ನಿರೂಪಣೆಯಿದೆ. ಆಯಾ ಘಟನೆಯ ಕಲ್ಪನೆಯಾಗಲಿ, ಪಾತ್ರಗಳ ಗುಣ ದೋಷಗಳಾಗಲಿ ನೇರವಾಗಿ ಪರಿಚಯವಾಗುತ್ತವೆ. ಕವಿಯ ನೈಸರ್ಗಿಕವಾದ ರಚನಾಶಕ್ತಿಯೊಂದೇ ಇಲ್ಲಿನ ವರ್ಣನೆಗಳ ಬಂಡವಾಳ.

ಮಹಲಿಂಗಸ್ವಾಮಿಯ ಚಿತ್ರಗಳು ಅನೇಕ ಬಾರಿ ಪಾಂಚಾಳ ಗಂಗನ ಪ್ರತಿಧ್ವನಿಯೋ ಏನೋ ಎನ್ನಿಸುತ್ತವೆ. ಅದೇ ತಿರುಳು; ಅದೇ ಕ್ರಮ. ಆದರೆ ಮಾತಿಗೆ ಮಿತಿಯಿಲ್ಲ. ನಿರ್ದಿಷ್ಟವಾದ ಗುರಿಯಿಲ್ಲ. ಒಂದೇ ಕಥಾವಸ್ತು ನಂಜುಂಡನ ಅತಿ ಪ್ರೌಢಿಮೆಯಿಂದ ಹೇಗೆ ಹಿಡಿತಕ್ಕೆ ಸಿಕ್ಕದಂತೆ ಪರಿಣಮಿಸಿದೆಯೋ ಹಾಗೆಯೇ ಮಹಲಿಂಗಸ್ವಾಮಿಯ ಅತಿ ವ್ಯಾಪ್ತಿಯಿಂದ ಅದರ ಮುಖ್ಯಾಂಶದ ಉಜ್ವಲತೆ ಕುಗ್ಗಿದಂತಾಗುತ್ತದೆ. ಆದರೂ ಈ ಮೊದಲೇ ನಂಜುಂಡನೂ ಗಂಗನೂ ಹೇಳಿ ಬಿಟ್ಟಿರುವ ಆಯಾ ಕಥಾಭಾಗದ ವರ್ಣನೆಯನ್ನು ಮತ್ತೆ ನವೀನವಾಗಿ ಕಂಡುಬರುವಂತೆ ಮಾಡಿರುವ ಈತನ ಪ್ರಯತ್ನಗಳು ಗಮನಾರ್ಹವಾಗಿವೆ.

## ಪಾತ್ರ ಪರಿಶೀಲನೆ

ಕಥಾವಿವರಗಳನ್ನು ಓದಿದಾಗಲೆ ತಕ್ಕಮಟ್ಟಿಗೆ ಪಾತ್ರಗಳ ಪರಿಚಯವೂ ಆಗಿರುತ್ತದೆ. ಆದರೂ ಈ ಮೂವರು ಕವಿಗಳೂ ಇಲ್ಲಿನ ಪ್ರಧಾನ ಪಾತ್ರಗಳನ್ನು ಹೇಗೆ ಚಿತ್ರಿಸಿದ್ದಾರೆ ಎನ್ನುವುದನ್ನು ಅವಲೋಕಿಸ ಬಹುದು. ಒಂದೊಂದು ಕೃತಿಯಲ್ಲಿಯೂ ಪಾತ್ರಗಳ ಮಹತ್ವ ಹೇಗೆ ವ್ಯಾಪಿಸಿದೆಯೆಂಬುದು ಕುತೂಹಲಕಾರಿಯಾಗಿದೆ. ಹಲಕೆಲವು ಪಾತ್ರಗಳಂತೂ ವಿಶಿಷ್ಟವಾಗಿ ಎದ್ದು ನಿಲ್ಲುತ್ತವೆ. ಆಯಾ ಸನ್ನಿವೇಶಗಳ ಹಿನ್ನೆಲೆಯಲ್ಲಿ ಒಡಮೂಡಿ ನಿಲ್ಲುವ ಈ ಪಾತ್ರಗಳ ಗುಣಶೀಲಗಳನ್ನು ಪರಿಶೀಲಿಸಿದಂತೆಲ್ಲ ಕಾವ್ಯದ ಸ್ವಾರಸ್ಯ ಮಿಗಿಲಾಗುತ್ತದೆ. ಈ ಪಾತ್ರಸಮುದಾಯದಲ್ಲಿ ಮೊದಲು ಪುರುಷವರ್ಗವನ್ನೂ ಅನಂತರ ಸ್ತ್ರೀ ಪಾತ್ರಗಳನ್ನೂ ವಿಚಾರಿಸ ಬಹುದು.

ಪುರುಷರಲ್ಲೆಲ್ಲ ಅಗ್ರಗಣ್ಯನಾದವನು ಕುಮಾರರಾಮ. ಇದು ಸಹಜವೂ ಹೌದು. ಆತನೇ ಕಾವ್ಯದ ಕಥಾನಾಯಕನಾಗಿರುವುದರಿಂದ ಆತನ ಸಮಗ್ರಜೀವನವೇ ಕೃತಿಯ ವಸ್ತು. ಪ್ರತಿಯೊಬ್ಬ ಕವಿಯೂ ಇದನ್ನು ಮೇಲಿಂದ ಮೇಲೆ ಸ್ಪಷ್ಟಪಡಿಸಿರುತ್ತಾನೆ. ಕುಮಾರರಾಮನ ಜನನವನ್ನು ಒಬ್ಬೊಬ್ಬ ಕವಿಯೂ ಒಂದೊಂದು ತೆರನಾಗಿ ಸೂಚಿಸಿರುತ್ತಾನೆ. ಗಂಗನ ಕೃತಿಯಲ್ಲಿ ಆತನು ಜಟ್ಟಂಗಿರಾಮನ ವರಪ್ರಸಾದವೆಂದೂ ನಂಜುಂಡನ ರಚನೆಯಲ್ಲಿ ಅರ್ಜುನನ ಅವತಾರವೆಂದೂ, ಮಹಲಿಂಗಸ್ವಾಮಿಯ ಕಥೆಯಲ್ಲಿ ಪರಶುರಾಮನ ಅಂಶವೆಂದೂ ನಿರೂಪಿಸಲಾಗಿದೆ. ಅಂತೂ ಕುಮಾರರಾಮನು ದೈವಾಂಶ ಪುರುಷನೆಂಬ ಅಂಶ ಎಲ್ಲರಿಗೂ ಸಮಾನವಾದದ್ದು. ಕಾರಣಿಕಪುರುಷನಾದ ಕುಮಾರರಾಮನು ಚಿಕ್ಕಂದಿನಿಂದಲೇ ತರುಣವೀರನೆನ್ನಿಸುತ್ತಾನೆ. ವಯಸ್ಸು ಚಿಕ್ಕದಾದರೂ ಆತನ ವರ್ಚಸ್ಸು ಮಿಗಿಲಾದದ್ದು. ಕಂಪಿಲನ ಏಳಿಗೆಯನ್ನು ಸಹಿಸದ

ಬಲ್ಲಾಳ, ಜಗತಾಪಿ, ಪ್ರತಾಪರುದ್ರ, ಕರಿಪತಿ ಕಪಿಲೇಶ್ವರರ ಹಮ್ಮನ್ನು ಮುರಿಯುತ್ತಾನೆ. ಹನ್ನೆರಡು ವರ್ಷ ತುಂಬುವ ವೇಳೆಗಾಗಲೇ ಅಕ್ಕಪಕ್ಕದ ರಾಜಾಧಿರಾಜರುಗಳನ್ನೆಲ್ಲ ನಡುಗಿಸಿ, ತಂದೆಯ ಸಾಮ್ರಾಜ್ಯವನ್ನು ವಿಸ್ತರಿಸಿ, ಸುಭದ್ರಗೊಳಿಸುತ್ತಾನೆ. ಈತನ ಪರಾಕ್ರಮಾದಿಗಳು ಮನೆಮಾತಾಗಿ ಪರಿಣಮಿಸಿ, ದೂರದ ಡಿಳ್ಳಿಗೂ ಮುಟ್ಟಿ ಸುಲ್ತಾನನ ಮಗಳಾದ ಬಾಬಮ್ಮ ತನ್ನನ್ನು ತಾನೇ ಅರ್ಪಣೆಮಾಡಿಕೊಳ್ಳುವಂತಾಗುತ್ತದೆ. ಆ ಕಾಲಕ್ಕೆ ರಣಭಯಂಕರನಾಗಿದ್ದ ಸುಲ್ತಾನನು ಕಂಪಿಲನ ಸ್ನೇಹವನ್ನು ಬಯಸಿ ವಜೀರರನ್ನು ಕಳುಹಿಸುತ್ತಾನೆ. ರಾಜನು ಸುಲ್ತಾನನ ಸ್ನೇಹವನ್ನು ಶಂಕಿಸಿ ನಿರಾಕರಿಸುತ್ತಾನೆ. ಇನ್ನೊಂದು ರೀತಿಯನ್ನು ಅನುಸರಿಸಿ ಹೇಳುವುದಾದರೆ, ಕಂಪಿಲನಿಂದ ಕಪ್ಪವನ್ನು ಪಡೆಯುವ ಸಲುವಾಗಿ ತನ್ನ ಪಾದುಕೆಗಳನ್ನು ಕಳುಹಿಸಿ, ಆ ಮೂಲಕ ರಾಮನನ್ನು ಬರಮಾಡಿಕೊಳ್ಳಲು ಯತ್ನಿಸುತ್ತಾನೆ. ರಾಮ ಈ ಪ್ರಯತ್ನವನ್ನು ಮುರಿಯುತ್ತಾನೆ. ಈ ಕೋಪವೇ ಕುದಿಯುತ್ತಿರಬೇಕಾದರೆ, ರಾಮನು ಬಾದೂರನಿಗೆ ಆಶ್ರಯವಿತ್ತಿದ್ದು ಮಹಾಪರಾಧವಾಗಿ ಪರಿಣಮಿಸುತ್ತದೆ. ನೇರವಾಗಿ ಯುದ್ಧವೇ ಮೊದಲಾಗುತ್ತದೆ. ನೇಮಿಯ ಎರಡು ಪ್ರಯತ್ನಗಳೂ ವಿಫಲವಾಗುತ್ತವೆ. ಮೊದಲನೆಯ ಬಾರಿ ಕುಮಾರರಾಮನು ರಾಜಾರೋಷವಾಗಿ ಪ್ರತಿಭಟಿಸುತ್ತಾನೆ. ಅವನ ಸಾಹಸಕ್ಕೆ ಎದುರಿಲ್ಲ. ಎರಡನೆಯ ಬಾರಿ ಅಜ್ಞಾತನಾಗಿದ್ದವನು ಮತ್ತೆ ಮೈದೋರಿ ಸುಲ್ತಾನನ ಕಡೆಯವರು ತತ್ತರಿಸುವಂತಾಗುತ್ತದೆ, ಎದ್ದೆವೋ ಬಿದ್ದೆವೋ ಎಂದು ಓಡಿಹೋಗುತ್ತಾರೆ. ನೇಮಿ ಕುಪಿತನಾದ ಸುಲ್ತಾನನೊಂದಿಗೆ ತನ್ನ ಅಸಹಾಯಕ ಸ್ಥಿತಿಯನ್ನು ನಿರೂಪಿಸುವ ಸಂದರ್ಭವೇ ಇದಕ್ಕೆ ಸಾಕ್ಷಿ. ಕಡೆಯ ಬಾರಿಯ ಕಾಳಗವಂತೂ ರಾಮನ ವೀರಾವೇಶಕ್ಕೆ ಕಳಶವಿಟ್ಟಂತಿದೆ. ಯೌವನದ ಗಡಿ ದಾಟದ ಕುಮಾರರಾಮನು ಅಸಂಖ್ಯಾತ ಶತ್ರುಗಳನ್ನು ಸಂಹರಿಸಿ ಕಡೆಗೆ ಮಾದಿಗಿತ್ತಿ ಮಾತಂಗಿಯ ಅಧರ್ಮದ ಅಂಬಿಗೆ ಗುರಿಯಾಗಿ ಸಾಯುವ ಚಿತ್ರ ಹೃದಯವಿದ್ರಾವಕವಾಗಿದೆ. ರಾಮನ ಕೆಚ್ಚು ನಚ್ಚುಗಳು ಈ ರೀತಿ ದುರಂತವಾಗಿ ಪರಿಣಮಿಸುವುದು ಯಾರಿಗಾದರೂ ಹೃದಯ ತಲ್ಲಣಿಸುವಂತಿದೆ. ಆತನು ವೀರನಾಗಿ ಹುಟ್ಟಿ, ವೀರನಾಗಿ ಬದುಕಿ, ವೀರನಾಗಿ ಸಾಯುವ ಚಿತ್ರ ಕಾವ್ಯದ ಘನತೆಗೆ ತಕ್ಕಂತಿದೆ. "One crowded hour of glorious life is worth an age without a name" (T.O. Mordaunt) ಎಂಬ ಇಂಗ್ಲಿಷಿನ ಹೇಳಿಕೆ ರಾಮನ ಸಾಹಸ ಜೀವನಕ್ಕೆ ಚೆನ್ನಾಗಿ ಒಪ್ಪುತ್ತದೆ. ಅವನ ಈ ಅಕಾಲಮರಣವೇ ಅವನನ್ನು ಚಿರಕಾಲ ನೆನೆಯುವಂತೆ ಮಾಡಿರುತ್ತದೆ. ಕುಮಾರರಾಮನ ಈ ಸಾಹಸದ ಚಿತ್ರವನ್ನು ಮೂರು ಜನ ಕವಿಗಳೂ ಅತ್ಯಂತ ಪ್ರಭಾವಯುತವಾಗಿ ಚಿತ್ರಿಸಿರುತ್ತಾರೆ.

ಕುಮಾರರಾಮನ ಮಾಹಾತ್ಮ್ಯೆಗೆ ಆತನ ಕಲಿತನ ಎಷ್ಟರಮಟ್ಟಿಗೆ ಕಾರಣವೋ ಆತನ ಪರದಾರ ಸೋದರತ್ವವೂ ಅಷ್ಟೇ ಕಾರಣವಾಗಿದೆ. ನಂಜುಂಡನ ಕುಮಾರರಾಮನು ಈ ಗುಣವನ್ನು ಗಣಪವಿಯಲ್ಲಿರುವಾಗಲೇ ವ್ಯಕ್ತಪಡಿಸುತ್ತಾನೆ. ಇನ್ನು ಆತನ ಇಡೀ ಜೀವನವೇ ಈ ಮಹಿಮೆಗೆ ಮೀಸಲಾಗುತ್ತದೆ. ಕುಮಾರರಾಮನು ಸೌಂದರ್ಯಕ್ಕೂ ಹೆಸರುವಾಸಿಯಾಗಿ ಚೆನ್ನಿಗರಾಮನೆನಿಸಿದ್ದನು. ಆತನನ್ನು ಕಂಡ ಹೆಂಗಸರು ವ್ಯಾಮೋಹಗ್ರಸ್ತರಾಗಿ ಮಕ್ಕಳು, ಮರಿ, ಮನೆ, ಮಠಗಳನ್ನು ಮರೆಯುವುದು ಮಾತ್ರವಲ್ಲದೆ ಕೈಹಿಡಿದ ಗಂಡಂದಿರನ್ನೇ ಮರೆಯುತ್ತಿದ್ದರು. ಅಷ್ಟೇ ಅಲ್ಲ; ಅಂಥವರನ್ನು ಕೈಹಿಡಿಯುವಂತೆ ಮಾಡಿದ ವಿಧಿಯನ್ನೂ ನಿಂದಿಸುತ್ತಿದ್ದರು. ಪರಸ್ತ್ರೀಯರು ತನಗೆ ತಾಯಿಯ ಸಮಾನವೆಂದೂ ಅಕ್ಕತಂಗಿಯರ ಸಮಾನವೆಂದೂ ದೃಢವಾಗಿ ನಂಬಿದ್ದವನು ಕುಮಾರರಾಮ. ಕಂಪಿಲನು ರತ್ನಾಜಿಯನ್ನು ಮದುವೆಯಾಗಿ ಮನೆಗೆ ಕರೆತಂದ ದಿನವೇ ಹರಿಯಾಲದೇವಿ ಮಗನ ಕಾಲಿಗೆ ಪರದಾರಸೋದರನೆಂಬ ಪೆಂಡೆಯವನ್ನು ತೊಡಿಸಿ ಆತನಿಂದ ವಾಗ್ದಾನವನ್ನು ಪಡೆಯುವಳು. ಕುಮಾರರಾಮನು ಹೊತ್ತು ಹೋಗದೆ ಮುತ್ತಿನ ಚೆಂಡನ್ನು ಆಡಲು ಬಯಸಿ ತಾಯಿಯ ಬಳಿ ಬರಲು ಆತನನ್ನು ಆಕೆ ಪರಿಪರಿಯಾಗಿ ಕೋರುವಳು. ಪರಸ್ತ್ರೀಯರ ಕಣ್ಣು ಮಗನ ಮೇಲೆ ಬಿದ್ದು ಕೆಡುಕಾದೀತೆಂದು ಆಕೆಯ ಆತಂಕ. ರಾಮನು ತನ್ನ ಶಪಥವನ್ನು ಹೇಳಿದರೂ

ಅವಳಿಗೆ ಸಮಾಧಾನವಿಲ್ಲ. ಸವತಿ ರತ್ನಿಯ ಕಣ್ಣು ತನ್ನ ಮಗನ ಮೇಲೆ ಬಿದ್ದಿದೆಯೆಂದು ಆಕೆಯ ಶಂಕೆ ಬಲವಾಗಿದೆ. ಕುಮಾರರಾಮನಿಗೆ ಪರಸ್ತ್ರೀಯರು ಮಾರಕವಾಗಿ ಪರಿಣಮಿಸುವುದಕ್ಕಿಂತಲೂ ಆತನ ಚಿಕ್ಕಮ್ಮನೇ ಮಾರಿಯಾಗಿ ಪರಿವರ್ತನೆಯಾಗುವುದು ಆತನ ದುರದೃಷ್ಟವೇ ಸರಿ. ಆತನನ್ನು ಕಂಡಕ್ಷಣದಿಂದ ವಿರಹ ವ್ಯಾಕುಲಳಾಗಿದ್ದ ರತ್ನಿ, ರಾಮನು ಚೆಂಡನ್ನು ಬೇಡಲು ಬಂದಾಗ ಆತನನ್ನು ಮರುಳು ಮಾಡುವ ಪ್ರಸಂಗ ಕಾವ್ಯದಲ್ಲಿ ಅದ್ಭುತವಾಗಿ ಚಿತ್ರಿತವಾಗಿದೆ. ಕುಮಾರರಾಮನು ಚಿಕ್ಕಮ್ಮನ ವರ್ತನೆಗೆ ಮೊದಮೊದಲು ನಾಚುವನು ; ಅನಂತರ ಜುಗುಪ್ಸೆಗೊಂಡು ಆಕೆಯನ್ನು ತಿರಸ್ಕರಿಸಿ ತೆರಳುವನು. ಆಕೆಯ ದೂರಿನ ಪರಿಣಾಮವಾಗಿ ತನ್ನ ತಲೆಯನ್ನೇ ತೆರಬೇಕಾಗಿ ಬಂದಾಗ ಆತನಿಗೆ ಸಾಯುಲು ಸಂಕಟವಿಲ್ಲ. ಮಂತ್ರಿ ಬೈಚಪ್ಪನನ್ನು ತನಗೆ ಬಂದಿರುವ ಅಪಖ್ಯಾತಿಯನ್ನು ಹೇಗಾದರೂ ಮಾಡಿ ಹೋಗಲಾಡಿಸಬೇಕೆಂದು ಬೇಡಿಕೊಳ್ಳುವನು. ಅಂತೂ ಕುಮಾರರಾಮನು ತನ್ನ ಸದ್ಗುಣಕ್ಕೆ ಪ್ರತಿಯಾಗಿ ಅಜ್ಞಾತವಾಸವನ್ನು ಅನುಭವಿಸಬೇಕಾಗಿ ಬಂದಿತು. ಕಡೆಗೂ ಈ ವೀರನಿಗೆ ಸ್ತ್ರೀಯೇ ಕಂಟಕಳಾಗಿ ಪರಿಣಮಿಸುವಳು. ಅವನ ಪರಸ್ತ್ರೀಗೌರವ ಭಾವನೆಯೇ ಅವನ ಸಾವಿಗೆ ಕಾರಣವಾಗುವುದು. ಮಾತಂಗಿಗೆ ತಾನು ತೋರಿಸಿದ ಔದಾರ್ಯವೇ ಅವನಿಗೆ ಉರುಲಾಗುವುದು. ಆದರೆ, ಕುಮಾರರಾಮನ ಅಕಾಲಮರಣ ಅವನಿಗೆ ಭೂಷಣವಾಗಿರುವಂತೆ ಅವನ ಸದ್ಗುಣದ ಪ್ರತಿಫಲವಾದ ಈ ದುರಂತವೇ ಅವನ ಅಗ್ಗಳಿಕೆಗೆ ಕೈಗಂಬವಾಗಿದೆ. ಕುಮಾರರಾಮನು ಕಲಿಗಳಲ್ಲಿ ಕಲಿ ; ಶುಚಿಗಳಲ್ಲಿ ಶುಚಿ.

ಈ ತರುಣವೀರನಲ್ಲಿ ವಿದಿತವಾಗುವ ಇತರ ಗುಣಗಳಲ್ಲಿ ಆತನು ಮರೆಹೊಕ್ಕವರಿಗೆ ತೋರುವ ಔದಾರ್ಯ ಹೆಸರುವಾಸಿಯಾಗಿದೆ. ಅನ್ಯಮತೀಯನಾದರೂ ಆಶ್ರಯವನ್ನು ಆಶಿಸಿ ಬಂದ ಬಾದೂರನಿಗೆ ಆತನು ತೋರುವ ಸೌಜನ್ಯ ಸುತ್ತ್ಯರ್ಹವಾದುದು. ಆತನ ದೆಸೆಯಿಂದ ಮಹಾವಿಪತ್ತು ಒದಗುವುದೆಂದು ಹಿತೈಷಿಯಾದ ಬೈಚಪ್ಪನು ಸಕಾಲದಲ್ಲಿ ಎಚ್ಚರಿಸಿದರೂ ಹಿಂದೂಧರ್ಮವನ್ನು ಹಿಡಿದೆತ್ತಿ ಕುಮಾರರಾಮನು ಬಾದೂರನಿಗೆ ಆಶ್ರಯವನ್ನು ನೀಡುವನು. ಅನತಿ ಕಾಲದಲ್ಲಿಯೇ ಬಾದೂರನು ಕಂಪಿಲ ಮತ್ತು ಕುಮಾರ ರಾಮರ ಅನುಗ್ರಹಕ್ಕೆ ಪಾತ್ರನಾಗುವನು. ಕಡೆಯ ಕಾಳಗದಲ್ಲಿ ತನ್ನ ತಂದೆ ತಾಯಿಗಳೊಂದಿಗೆ ಬಾದೂರನನ್ನೂ ಸುರಕ್ಷಿತವಾದ ಸ್ಥಳಕ್ಕೆ ಕಳುಹಿಸಬೇಕೆಂದು ರಾಮನು ಸೂಚಿಸುವನು. ಅನಂತರ ಬಾದೂರನ ಮರಣವನ್ನು ಕಂಡಾಗ, ಆತನನ್ನು ರಕ್ಷಿಸಲು ಸಾಧ್ಯವಾಗದೆ ಹೋದುದಕ್ಕಾಗಿ ಸಂಕಟಪಡುವನು. ಇದೇ ರೀತಿ, ಕುಮಾರರಾಮನಿಗೂ ದೇವಿಶೆಟ್ಟಿಯ ಲಿಂಗನಿಗೂ ಆದ ಸ್ನೇಹ ಎಂದೆಂದಿಗೂ ಮರೆಯಲಾಗದ್ದು. ಪೂರ್ವಜನ್ಮದ ಅಣ್ಣತಮ್ಮಂದಿರಂತೆ ಅವರು ಅನಿರೀಕ್ಷಿತವಾಗಿ ಸಂಧಿಸುವರು. ರಾಮನನ್ನು ಕಂಡಕೂಡಲೇ ದೇವಿಶೆಟ್ಟಿ ಆತನಿಗೆ ತನ್ನನ್ನೇ ನಿವೇದಿಸಿಕೊಳ್ಳುವನು. ರುದ್ರನ ಆಗ್ರಹವನ್ನು ಎಣಿಸದೆ ಬೊಲ್ಲನನ್ನು ಪಡೆಯಲು ನೆರವಾಗುವನು. ಇವರಿಬ್ಬರ ಈ ಮೈತ್ರಿ ಬಹು ಪ್ರಶಂಸಾರ್ಹವಾದುದು. ರಾಮನ ಒಂದು ಭುಜ ಕಾಟಣ್ಣನಾದರೆ ಮತ್ತೊಂದು ಭುಜವೇ ದೇವಿಶೆಟ್ಟಿಯ ಲಿಂಗ. ಕಡೆಯ ಕಾಳಗದಲ್ಲಿ ಈತನಿಗೆ ಮರಣ ಪ್ರಾಪ್ತವಾಗಲು ರಾಮನಿಗೆ ಸಹೋದರನೊಬ್ಬನನ್ನು ಕಳೆದುಕೊಂಡಂತಾಗುವುದು. ಇತರರ ವಿಷಯದಲ್ಲಿಯೇ ರಾಮನ ಅಭಿಮಾನ ಹೀಗೆ ತುಂಬುಹೊಳೆಯಂತೆ ಹರಿಯುವಂತಿದ್ದರೆ ತನ್ನ ಒಡನಾಡಿಯೋ ಒಡಹುಟ್ಟಿದವನೋ ಆದ ಕಾಟಣ್ಣನನ್ನು ಕಂಡರೆ ಆತನ ವಿಶ್ವಾಸ ಹೇಳತೀರದು. ರಾಮನ ದೈವಭಕ್ತಿ, ಮಾತಾಪಿತೃಗಳಲ್ಲಿನ ಸದ್ಭಾವನೆ ಮೊದಲಾದುವುಗಳನ್ನು ಬೆಳಸಬೇಕಾಗಿಲ್ಲ. ತನಗೆ ಮೃತ್ಯುಪ್ರಾಯಳಾದ ರತ್ನಿ ಆತ್ಮಹತ್ಯವನ್ನು ಮಾಡಿಕೊಂಡಳೆಂದು ಕೇಳಿದಾಗ ರಾಮನು ಪಶ್ಚಾತ್ತಾಪಪಡುವುದು ಅವನ ಹೃದಯವೈಶಾಲ್ಯಕ್ಕೆ ಹೆಗ್ಗುರುತು. ಒಟ್ಟಿನಲ್ಲಿ ರಾಮನ ಪಾತ್ರ ಎಲ್ಲ ಕೃತಿಗಳಲ್ಲಿಯೂ ಪುಷ್ಟವಾಗಿ ನಿರೂಪಿತವಾಗಿದೆ. ಆತನನ್ನು ಅವತಾರಪುರುಷನೆಂದು ಭಾವಿಸಿದಾಗ್ಗೂ ಆತನು ಮಾನವಸಹಜವಾದ ಹಲವಾರು ಗುಣಗಳನ್ನು ಒಳಗೊಂಡು ಜೀವಂತವಾಗಿ ತೋರಿಬರುತ್ತಾನೆ. ಆತನ ಕಲಿತನ, ಶುಚಿತ್ವ ಮತ್ತು ಮೈತ್ರಿಗಳು ಅವನ ಜೀವನದ ಮುಖ್ಯ ಸೂತ್ರಗಳು

ಎನ್ನಬಹುದು. ಆತನ ದಾಂಪತ್ಯ ಜೀವನವನ್ನು ಇಲ್ಲಿ ಲಂಬಿಸದಿದ್ದರೂ, ಅದು ಆಗಾಗ್ಗೆ ಮಿಂಚಿನಂತೆ ಬೆಳಗುವುದನ್ನು ನಾವು ನೋಡಬಹುದು.

ಇತಿಹಾಸದಲ್ಲಿ ಕೇಳಿಬರುವ ಕಂಪಿಲನಿಗೂ ಈ ಕಾವ್ಯಗಳಲ್ಲಿ ಚಿತ್ರಿತವಾಗಿರುವ ಕಂಪಿಲನಿಗೂ ಅಜಗಜಾಂತರ. ಚರಿತ್ರೆಯಲ್ಲಿ ಕಂಪಿಲನು ಪ್ರಖ್ಯಾತನಾದ ಸೇನಾನಾಯಕನಾಗಿ ಕಂಡುಬರುತ್ತಾನೆ. ದೇವಗಿರಿಯ ರಾಮದೇವರಾಯನ ಪರವಾಗಿ ಬಲ್ಲಾಳನ ಅನೇಕ ದಳಪತಿಗಳನ್ನು ಎದುರಿಸಿ, ಗೆದ್ದು, ವಿಜಯಿಯಾಗಿ ತೋರಿಬರುತ್ತಾನೆ. ಇಂಥ ಅಪ್ರತಿಮ ವೀರ ಕಾವ್ಯದಲ್ಲಿ ತದ್ವಿರುದ್ಧವಾಗಿ ಕಂಡುಬರುತ್ತಾನೆ. (ನಂಜುಂಡನ ಕೃತಿಯಲ್ಲಿ ಮಾತ್ರ ಮೊದಲು ಮೊದಲು ಈತನಿಗೆ ಸ್ವಲ್ಪ ಪ್ರಾಶಸ್ತ್ಯ ಲಭಿಸಿದೆ.) ಯಾವ ಯುದ್ಧವನ್ನೇ ತೆಗೆದುಕೊಳ್ಳಲಿ ರಾಮನಿಗೆ ಪ್ರಾಶಸ್ತ್ಯವೇ ಹೊರತು ತಂದೆಯಾದ ಕಂಪಿಲನಿಗಿಲ್ಲ. ಆತನು ದೂರದ ಪ್ರೇಕ್ಷಕನೇ ವಿನಾ ಯುದ್ಧದಲ್ಲಿ ಸಮಭಾಗಿಯಾಗಿಲ್ಲ. ಇಷ್ಟಕ್ಕೇ ಮುಗಿಯದೆ, ಕಂಪಿಲನ ಪಾತ್ರಕ್ಕೆ ಕಳಂಕ ತಟ್ಟುವಂತೆ ಆತನು ಅಂಜುಪುರಕನಂತೆಯೂ ಕಂಡುಬರುತ್ತಾನೆ. ಆತನ ವ್ಯಾಮೋಹವಂತೂ ಆತನ ವ್ಯಕ್ತಿತ್ವಕ್ಕೆ ಮಸಿ ಬಳಿದಂತಿದೆ. ಚಿಕ್ಕ ಹೆಂಡತಿಯಾದ ರತ್ನಿಯ ಮೇಲೆ ಮುದಿ ಕಂಪಿಲನಿಗೆ ಮೇರೆಯಿಲ್ಲದ ಮೋಹ. ಬೇಟೆಗಾಗಿ ಹೋಗಬೇಕಾದಾಗ ಆಕೆಯನ್ನು ಸಮಾಧಾನಮಾಡಿ ಹೋಗುವಂಥ ಅನುರಾಗಿ. ಆಕೆಯ ದಾಸಾನುದಾಸನಾಗಿ ವರ್ತಿಸುವುದಕ್ಕೂ ಹಿಂತೆಗೆಯುವವನಲ್ಲ. ಬೇಟೆ ಮುಗಿಸಿಕೊಂಡ ಬಂದ ಆತನಿಗೆ ರತ್ನಿ ಒಬ್ಬಳು ಕಣ್ಣಿಗೆ ಕಾಣದೆ ಹೋದದ್ದು ತಡೆಯಲಾರದಷ್ಟು ಯಾತನೆಯಾಗುತ್ತದೆ. ಕೂಡಲೇ ಅವಳಿದ್ದಲ್ಲಿಗೆ ಹೋಗಿ ಅವಳ ಪರಿಸ್ಥಿತಿಯನ್ನು ಕಂಡು ಕುಗ್ಗಿ ಹೋಗುತ್ತಾನೆ. ಆಕೆ ಕುಮಾರರಾಮನ ಮೇಲೆ ದೂರನ್ನು ಹೇಳಲು ಅದನ್ನು ವಿಚಾರಿಸಲೂ ಸಹ ತೊಡಗದೆ, ಕುಮಾರರಾಮನ ಶಿರಚ್ಛೇದನಕ್ಕೆ ಆಜ್ಞೆಮಾಡುತ್ತಾನೆ. ವಿವೇಕಿಯಾದ ಮಂತ್ರಿ ಎಷ್ಟು ಎಚ್ಚರಿಸಿದರೂ ರಾಜನ ಅವಿವೇಕದ ಮುಂದೆ ಅದು ವ್ಯರ್ಥವಾಗುತ್ತದೆ. ಅನಂತರ ರಾಮನ ರುಂಡವನ್ನು ಕಂಡಾಗ ಆತನು ಗೋಳಿಡುವುದು ಆತನನ್ನು ನಗೆಗೀಡುಮಾಡುತ್ತದೆ. ನೇಮಿ ಎರಡನೆಯ ಬಾರಿ ದಂಡೆತ್ತಿ ಬಂದಾಗ ದಿಕ್ಕು ತೋಚದೆ ಮಂತ್ರಿಯಲ್ಲಿ ಮೊರೆಯಿಡುವ ಕಂಪಿಲನ ನಡತೆಯಂತೂ ಆತನನ್ನು ಎಂಥ ಅಂಜುಕುಳಿಯೆನ್ನುವಂತಿದೆ. ಈ ಸಂದರ್ಭದಲ್ಲಿ ಬೈಚಪ್ಪನ ಅವಹೇಳನದಿಂದ ಆತನಿಗೆ ಬೆಲೆಯಿಲ್ಲದಂತಾಗಿದೆ. ಮಹಲಿಂಗಸ್ವಾಮಿಯಂತೂ ಕಂಪಿಲನು ಬಾದೂರನನ್ನು ಒಪ್ಪಿಸಿಕೊಡುವುದಕ್ಕೂ ಸಿದ್ಧನಾಗಿರುವಂತೆ ಚಿತ್ರಿಸಿರುತ್ತಾನೆ. ಕಡೆಯ ಕಾಳಗದಲ್ಲಿಯಂತೂ ರಾಜ ರಾಣಿಯರು ಕುಮಾರರಾಮನ ಸಲಹೆಯ ಮೇರೆಗೆ ಸುರಕ್ಷಿತವಾಗಿರುವ ಸ್ಥಳವನ್ನು ಸೇರಿ ಯುದ್ಧದ ವಿಚಾರವನ್ನು ಆಗಿಂದಾಗ್ಗೆ ಕೇಳಿ ತಿಳಿಯುತ್ತಾರೆ. ಆದರೆ ಕಂಪಿಲನಿಗೆ ಸ್ವಭಾವತಃ ಕುಮಾರರಾಮನ ಮೇಲೆ ಕಟ್ಟಕ್ಕರೆ. ಅವನನ್ನು ಆರುತಿಂಗಳ ಕಾಲ ಕಾಣದೆ, ಅನಿರೀಕ್ಷಿತವಾಗಿ ಸಂಧಿಸಿದಾಗ ಆದ ಆನಂದ ಹೇಳಲಳವಲ್ಲ. ಆ ಹಿಗ್ಗು ತುಂಬಿರಬೇಕಾದರೆ,ರತ್ನಿಯ ಸಾವನ್ನು ಕೇಳಿ ಸಂತೋಷಪಟ್ಟನೆಂದು ಗಂಗನೂ, ಮಹಲಿಂಗಸ್ವಾಮಿಯೂ ನಿರೂಪಿಸಿರುತ್ತಾರೆ. ನಂಜುಂಡನು ಕಂಪಿಲನ ವ್ಯಾಮೋಹವನ್ನು ಇನ್ನೂ ಸ್ವಲ್ಪ ಉಳಿಸಿರುತ್ತಾನೆ. ನಿಜವಾಗಿಯೂ ನೋಡಿದಲ್ಲಿ ಕಂಪಿಲನ ಪಾತ್ರ ಇಲ್ಲಿ ನಿಮಿತ್ತಮಾತ್ರವಾಗಿ ತೋರುತ್ತದೆ. ಆತನನ್ನು ಹೆಬ್ಬುಲಿ ಕಂಪಿಲ ಎಂಬುದಾಗಿ ಕೈಫಿಯತ್ತಿನಲ್ಲಿ ಹೇಳಿರುವುದುಂಟು. ಆ ಗೌರವವೂ ಇಲ್ಲಿ ಸಲ್ಲದೆ ಹೋಗಿದೆ. ಬಹುಶಃ ಕುಮಾರರಾಮನ ಮೇಲ್ಮೆಯನ್ನು ಮೆರೆಸುವ ಭರದಲ್ಲಿ ಕವಿಗಳು ಕಂಪಿಲನ ಸ್ಥಾನ ಮಾನಗಳನ್ನು ತಗ್ಗಿಸಿರುವಂತಿದೆ. ಆತನು ಹೆಸರಿಗೆ ಮಾತ್ರ ರಾಜ; ರಾಜಕಾರ್ಯವೆಲ್ಲ ರಾಮನ ಕೈಯಲ್ಲಿರುತ್ತದೆ. ಹೀಗೆ ಒಂದು ಪಾತ್ರದ ಸಲುವಾಗಿ ಮತ್ತೊಂದು ಪಾತ್ರವನ್ನು ಇಳಿಮುಖವಾಗಿ ಚಿತ್ರಿಸುವುದು ಅಪೂರ್ವವೇನಲ್ಲ. ರಾಮಾಯಣದಲ್ಲಿನ ದಶರಥ, ಮಹಾಭಾರತದಲ್ಲಿನ ಧೃತರಾಷ್ಟ್ರರಿಗೂ ಹೀಗಾಗಿರುವುದುಂಟು. ಪಾಶ್ಚಾತ್ಯ ಸಾಹಿತ್ಯದಲ್ಲಿಯೂ ಹೀಗಾಗಿದೆಯೆಂದು ಸಿ. ಎಂ. ಬೌರಾ ಅವರು ಹೇಳಿರುತ್ತಾರೆ.[1] ಕಂಪಿಲನ ಪುತ್ರವಾತ್ಸಲ್ಯ ಎಷ್ಟು ಮಿಗಿಲೆಂಬುದನ್ನು ಕಾಣಬೇಕಾದರೆ

---

1. The hero is usually a leader of men and feels an obligation towards those

ಕಾವ್ಯದ ಅಂತ್ಯಭಾಗಕ್ಕೆ ಬರಬೇಕು. ಕುಮಾರರಾಮನು ಗಾಯಗೊಂಡು ನರಳುತ್ತಿರುವ ಸುದ್ದಿಯನ್ನು ಕಾಟಣ್ಣನು ಹೇಳುವುದೇ ತಡ, ಬಹಳ ಮರುಗುವನು. ಅನಂತರ ಮಗನ ಮರಣವುಂಟಾಗಿ, ದೆಹಲಿಯಿಂದ ಮತ್ತೆ ತಲೆಯನ್ನು ತಂದಾಗ ಈ ಮುದುಕನ ಸಂಕಟ ಹೇಳತೀರದು. ವಯಸ್ಸಾದ ತಂದೆ, ವೀರನಾದ ಕುವರನನ್ನು ಕಳೆದುಕೊಳ್ಳುವ ವ್ಯಥೆ ಅಷ್ಟಿಷ್ಟಲ್ಲ. ಕಂಪಿಲನ ಪಾತ್ರದಲ್ಲಿ ಎಷ್ಟೇ ಕೊರತೆಗಳಿದ್ದರೂ ಆತನ ದುಃಸ್ಥಿತಿಗಾಗಿ ಅನುಕಂಪೆಯುಂಟಾಗುತ್ತದೆ.

ಮುಮ್ಮಡಿ ಸಿಂಗನ ಕಾಲದಿಂದಲೂ ಮಂತ್ರಿಯಾಗಿ ಸೇವೆ ಸಲ್ಲಿಸುವ ಬೈಚಪ್ಪನ ವ್ಯಕ್ತಿತ್ವ ಬಹಳ ಪ್ರಭಾವಶಾಲಿಯಾಗಿ ಮೂಡಿ ಬಂದಿದೆ. ಪ್ರತಾಪದಲ್ಲಾಗಲಿ, ಸಮಯೋಚಿತವಾದ ಕಾರ್ಯನಿರ್ವಹಣೆಯಲ್ಲಾಗಲಿ ಬೈಚಪ್ಪನಿಗೆ ಸಮಾನರಾದವರು ಯಾರೂ ಇಲ್ಲ. ಕಂಪಿಲ ಮತ್ತು ಕುಮಾರರಾಮರು ಅವನ ಕಣ್ಣಮುಂದಿನ ಹುಡುಗರು. ಕಂಪಿಲನ ರಾಜಕಾರ್ಯ ಬೈಚಪ್ಪನ ಬೆಂಬಲವಿಲ್ಲದೆ ಸಾಗದು. ರಾಮನ ಮದುವೆಯ ಹೊಣೆಯೂ ಅವನಿಗೆ ಸೇರಿದ್ದು. ರಾಮನೊಂದಿಗೆ ಯುದ್ಧ ಮೊದಲಾದುವುಗಳಲ್ಲಿ ಭಾಗವಹಿಸುವ ಭಾಗ್ಯವೂ ಅವನ ಪಾಲಿಗೆ ಸೇರಿದ್ದು. ಕಂಪಿಲನು ರತ್ನಿಯ ವ್ಯಾಮೋಹಕ್ಕೆ ಒಳಗಾಗಿ ವಿವೇಕಹೀನನಾಗಿದ್ದಾಗ ಬೈಚಪ್ಪನ ಬುದ್ಧಿವಂತಿಕೆ ದೊಡ್ಡ ವಿಪತ್ತನ್ನೇ ನಿವಾರಿಸಿತು. ಉತ್ಸಾಹಗುಂದಿದ್ದ ಕಂಪಿಲನಿಗೆ ಧೈರ್ಯ ಹೇಳುವವನೂ ಬೈಚಪ್ಪನೇ. ಹಟಹಿಡಿದು ಯುದ್ಧಮಾಡಲು ಹಿಂತೆಗೆಯುತ್ತಿದ್ದ ಕುಮಾರರಾಮನನ್ನು ಹುರಿದುಂಬಿಸಿ, ನೆಲಮಾಳಿಗೆಯಿಂದ ಕರೆದುತಂದು ರಾಜ್ಯದ ಕಂಟಕವನ್ನು ಹೋಗಲಾಡಿಸಿದವನೂ ಬೈಚಪ್ಪನೇ. ಇದೇ ರೀತಿ, ಕುಮಾರರಾಮನು ಸತ್ತನೆಂದು ಚಿತೆಯೇರಲು ಅಣಿಯಾಗಿ ಬಂದ ಆತನ ಪಂಚಪತ್ನಿಯರನ್ನು ಕೃತಕ ಸತಿಯ ಏರ್ಪಾಡಿನಿಂದ ಸಮಾಧಾನಗೊಳಿಸಿ, ಅವರ ಮಾಂಗಲ್ಯದ ಭಾಗ್ಯವನ್ನು ಮತ್ತೆ ದೊರಕಿಸಿಕೊಟ್ಟ ಚತುರನೂ ಅವನೇ. ರಾಮನ ಮರಣ ರಹಸ್ಯವನ್ನು ಹರಿಯಾಲದೇವಿಯೊಬ್ಬಳಿಗೆ ಮಾತ್ರ ತಿಳಿಸಿ, ಆರುತಿಂಗಳ ಕಾಲ ಅವನನ್ನು ಗುಟ್ಟಾಗಿ ಕಾಪಾಡಿದ ಕೀರ್ತಿ ಬೈಚಪ್ಪನಿಗೆ ಸಲ್ಲತಕ್ಕದ್ದು. ನಂಜುಂಡನು ಈತನನ್ನು ಇಂದ್ರಾರಾಧಕನನ್ನಾಗಿ ಮಾಡಿ ಅನೇಕ ಇಂದ್ರಜಾಲಗಳನ್ನು ಇವನ ಮೂಲಕ ನೇರವೇರಿಸಿರುವನು. ಗಂಗನಲ್ಲಿ ಈತನು ಹರಿಯಾಲದೇವಿಯ ಸಹೋದರನೆಂತಲೂ, ಕುಮಾರರಾಮನು ಇವನ ಸೋದರಳಿಯನೆಂದೂ ಕೆಲವು ಪ್ರತಿಗಳಲ್ಲಿ ಸೂಚಿಸಿರುವುದುಂಟು. ಈ ಸೂಚನೆಯನ್ನು ಮಹಲಿಂಗಸ್ವಾಮಿಯೂ ಸ್ವೀಕರಿಸಿರುತ್ತಾನೆ. ಕುಮಾರರಾಮನನ್ನು ಕುರಿತ ಯಕ್ಷಗಾನದಲ್ಲಂತೂ ಇದು ಸುಸ್ಪಷ್ಟವಾಗಿದೆ. ಬೈಚಪ್ಪನ ಈ ಬಾಂಧವ್ಯದ ಕಥೆ ಬೇರೆ ಬೇರೆ ತೆರನಾಗಿ ಬೆಳೆದಿರುವುದುಂಟು. ಕುಮಾರರಾಮನ ಐದು ಜನ ಹೆಂಡತಿಯರಲ್ಲಿ ಬೈಚಪ್ಪನ ಮಗಳೂ ಒಬ್ಬಳು ಎಂದು ಗಂಗನ ಪ್ರತಿಯೊಂದರಲ್ಲಿ ಕಂಡುಬರುತ್ತದೆ (ಗಂ. ೨, vii ಪ. ೬೪–೬೬). ನೆಲಮಾಳಿಗೆಯಿಂದ ಎದ್ದು ಬಂದ ಕುಮಾರರಾಮನನ್ನೂ ಆತನ ಪರಿವಾರದವರನ್ನೂ ಬೈಚಪ್ಪನು ಮೊದಲು ತನ್ನ ಮನೆಯಲ್ಲಿ ಸತ್ಕರಿಸಿ ಅನಂತರ ಯುದ್ಧರಂಗಕ್ಕೆ ಕರೆತಂದನೆಂದೂ ಹೇಳಿದೆ. (ಗಂ. ೨, xxi, ೩೦; ಗಂ. ೩, xxxii, ೫೮). ಕಾಲ ಕಾಲಕ್ಕೆ ಕಥೆ ಬೆಳೆದು ಈ ಹಲಕೆಲವು ಸಂಗತಿಗಳು ಹೀಗೆ

---

under his command. It is therefore surprising that the kings of all heroic story are often hardly heroic in full sense. They seem so burdened with responsibilities and anxieties that they cannot display a full measure of individual prowess. Homer's Agamemnon, Hrothgar in Beowulf, Charlemagne in Roland and Gunnar in the Elder Edda are impressive figures but lack the four-square heroism of their suborinates, Achilles, Beowulf, Roland and Sigurth. The mere fact of being a king sometimes detracts from a man's heroic performance. His duties prevent him from giving all his attention to warlike exploits ; he is so occupied with ruling that he must leave the greatest opportunities to others. He may even be prevented by age from acting as he would have done in youth (Heroic Poetry, Chapt. iii, p. 105).

ನಾನಾ ಮುಖವಾಗಿ ಕವಲೊಡೆದಿರಬಹುದು. ಏನೇ ಆಗಿರಲಿ, ಬೈಚಪ್ಪನ ಸ್ವಾಮಿಭಕ್ತಿ, ಸಮಯಸ್ಫೂರ್ತಿ,
ಪೂರ್ವಾಪರ ಆಲೋಚನೆ, ಶೌರ್ಯ, ಸೌಜನ್ಯಗಳು ಎಲ್ಲ ಕವಿಗಳ ಕಣ್ಣಿಗೂ ಧಾರಾಳವಾಗಿ ವಿದಿತವಾಗಿರು
ತ್ತವೆ. ಆತನು ಆದರ್ಶ ಸಚಿವನೆನ್ನಿಸಿ ಪ್ರತಿಪಕ್ಷದ ಸುಲ್ತಾನನ ಪ್ರಶಂಸೆಗೂ ಪಾತ್ರನಾಗಿದ್ದಾನೆ.

ಕುಮಾರರಾಮನಿಗೆ ಕಾಟಣ್ಣನು ಒಂದು ಭುಜವಿದ್ದಂತೆ ಎಂದು ಹಿಂದೆಯೇ ಹೇಳಿದೆಯಷ್ಟೆ. ಈತನು
ಕುಮಾರರಾಮನಿಗೆ ಅಣ್ಣನಾಗಬೇಕೆಂದು ಗಂಗನ ಪ್ರತಿಯೊಂದರಲ್ಲಿ ಕಂಡುಬರುತ್ತದೆ. ಹರಿಯಾಲದೇವಿಗೆ
ಬಹಳ ದಿನಗಳ ಕಾಲ ಮಕ್ಕಳಿರಲಿಲ್ಲ. ಈ ಮಧ್ಯೆ ಆಕೆಯ ಸವತಿಯಾದ ಹಂಪಾಜಿ ಮಗನನ್ನು ಪಡೆದಳೆಂದು
ನಿರೂಪಿತವಾಗಿದೆ (ಗಂ. ೧, i, ೪೫–೪೬). ಆ ಹುಡುಗನೇ ಕಾಟ. ಮಹಲಿಂಗಸ್ವಾಮಿಯಾದರೋ ಕಾಟ
ನನ್ನು ತಬ್ಬಲಿ ಮಗುವೆಂದೂ ಆತನು ಅನಿರೀಕ್ಷಿತವಾಗಿ ಕಂಪಿಲನಿಗೆ ಲಭಿಸಿದನೆಂದೂ ಹೇಳಿರುತ್ತಾನೆ. ಈ
ಮೂಲ ಹೇಗಾದರೂ ಇರಲಿ, ರಾಮನಿಗೆ ಕಾವ್ಯದ ಉದ್ದಕ್ಕೂ ಹೆಗಲೆಣೆಯಾಗಿ ನಿಲ್ಲುವ ಕಲಿ ಕಾಟ.
ರಾಮನು ಕೈಕೊಳ್ಳುವ ಎಲ್ಲ ಕೆಲಸಗಳಲ್ಲಿಯೂ ಕಾಟನ ಸರದಿ ಮೊದಲು. ಆಟವೇ ಆಗಲಿ, ಹೋರಾಟವೇ
ಆಗಲಿ ಕಾಟನಿಲ್ಲದೆ ಸಾಗುವುದಿಲ್ಲ. ಕಾಟನನ್ನು ಎದುರಿಸಿ ನಿಲ್ಲುವುದೂ ಕಷ್ಟವೇ ಸರಿ. ನೀರಾಟ ಚೆಂಡಾಟ
ಗಳಲ್ಲಿ ಕಾಟನು ರಾಮನ ಒಡನಾಡಿಯಾಗಿ ಅಮಿತವಾದ ಆನಂದವನ್ನು ಪಡೆಯುತ್ತಾನೆ. ಆದರೆ, ಮುತ್ತಿನ
ಚೆಂಡು ರತ್ನಿಯ ಮನೆಯ ಅಂಗಳಕ್ಕೆ ಬಿದ್ದ ಕೂಡಲೆ ಕಾಟನ ವ್ಯಾಕುಲ ಹೇಳತೀರದು. ಕುಮಾರರಾಮನಿಗೆ
ಕಂಟಕ ಕಾದಿದೆಯೆಂದು ಹೊಯ್ದಾಟವು ಮೊದಲಾಗುವುದು. ಅನಂತರ ರಾಮನ ಮಾತಿನ ಮೇರೆಗೆ ರತ್ನಿಯ
ಬಳಿಗೆ ಕಾಟನೇ ಮೊದಲು ಹೋಗಬೇಕಾಗಿ ಬರುವುದು. ಆಗ ಕಾಟನು ತನ್ನ ಜಾಣತನವನ್ನೆಲ್ಲ ಉಪಯೋಗಿಸು
ವನು. ಕುಟಿಲ ರತ್ನಿಯ ಮುಂದೆ ಕಾಟನ ಚಾತುರ್ಯ ನಿರುಪಯೋಗವಾಗುವುದು. ರಾಮನಿಗೆ ಬಂದ
ವಿಪತ್ತಿನಲ್ಲಿ ಕಾಟನೂ ಹಂಚಿಕೊಳ್ಳುವನು. ಆತನೂ ನೆಲಮಾಳಿಗೆಯ ವಾಸವನ್ನು ಅನುಭವಿಸಬೇಕಾಗುವುದು.
ಕಾಟನಿಗೆ ರಾಮನ ಸಾನ್ನಿಧ್ಯವೊಂದಿದ್ದರೆ ಸಾಕು. ಕೆಲಸವೆಂದರೆ ಅವನಿಗೆ ಆಲಸ್ಯವಿಲ್ಲ. ಆದರೆ ದೈವ ಕಾಟ
ನನ್ನೂ ಪರೀಕ್ಷೆಗೆ ಗುರಿಮಾಡುವುದು. ರಾಮನು ತನಗೆ ಕಡೆಗಾಲವು ಸಮೀಪಿಸುತ್ತಿರುವುದನ್ನು ತಿಳಿದು,
ಕಾಟನನ್ನು ಕರೆದು ಊರಿಗೆ ತೆರಳಿ, ತಂದೆ ತಾಯಿಯರಿಗೆ ಸುದ್ದಿ ತಿಳಿಸಿ, ತನ್ನ ಹೆಂಗಸರು ಪರಕೀಯರ ವಶ
ವಾಗದಂತೆ ಎಲ್ಲ ಏರ್ಪಾಡುಗಳನ್ನೂ ಮಾಡಿಬರುವಂತೆ ಹೇಳುವನು. ಆಗ ಕಾಟನಿಗೆ ಆಗುವ ಧರ್ಮಸಂಕಟ
ಹೇಳತೀರದು. ಜೀವಸಮಾನನಾದ ರಾಮನನ್ನು ಆ ಅಸಹಾಯಕ ಸ್ಥಿತಿಯಲ್ಲಿ ಬಿಟ್ಟು ಹೋಗಲಾರ. ಆದರೆ
ರಾಮನ ಆಸೆಯನ್ನು ನೆರವೇರಿಸದೆ ಇರಲು ಮನಸ್ಸು ಬಾರದು. ರಾಮನನ್ನು ಪರಿಪರಿಯಾಗಿ ಬೇಡಿಕೊಳ್ಳುವನು.
ರಾಮನು ಒತ್ತಿ ಒತ್ತಿ ಹೇಳಲು ವಿಧಿಯಿಲ್ಲದೆ ಹೊರಡುವನು. ಶರವೇಗದಲ್ಲಿ ಓಡಿಬಂದು ಕಂಪಿಲನಿಗೂ
ಹರಿಯಾಲದೇವಿಗೂ ರಾಮನ ದುಃಸ್ಥಿತಿಯನ್ನು ತಿಳಿಸಿ, ಆತನ ಹೆಂಡತಿಯರಿಗೆಲ್ಲ ಚಿತೆಯನ್ನೇರ್ಪಡಿಸಿ,
ಕಡೆಗೆ ತನ್ನ ಮಡದಿಯ ಬಳಿಗೆ ಬಂದು, ಕೈಯಾರೆ ಅವಳನ್ನು ಕತ್ತಿಗೆ ಬಲಿಗೊಟ್ಟು ರಾಮನ ಬಳಿಗೆ
ಹಿಂತಿರುಗುವನು. ಈ ವೇಳೆಗಾಗಲೆ ರಾಮನ ಸ್ಥಿತಿ ತುಂಬ ದಾರುಣವಾಗಿರುತ್ತದೆ. ಅಧರ್ಮವನ್ನು ಬಗೆದ
ಮಾತಂಗಿಯನ್ನು ತನಗೆ ತೋರಿಸಬೇಕೆಂದು ಕೋರುವನು. ಮೈಮರೆತು ಹೋರಾಡುವನು. ರಾಮನ
ಕಣ್ಣೆದುರಿನಲ್ಲಿಯೇ ತನ್ನ ಪ್ರಾಣವನ್ನು ತೆರುವನು. ಈ ವೀರನ ಮರಣ ರಾಮನ ಮರಣಕ್ಕೆ ನಾಂದಿಯಾಗು
ವುದು.

ಕಾಟಣ್ಣನು ಬಂಧುವೋ ಬಳಗವೋ ಆದರೆ, ದೇವಿಶೆಟ್ಟಿಯ ಲಿಂಗನು ರಾಮನಿಗೆ ಅಚ್ಚುಮೆಚ್ಚಿನ ಆಪ್ತ
ಮಿತ್ರ. ಯಾವುದೋ ಜನ್ಮಾಂತರದ ಅಣ್ಣ ತಮ್ಮಂದಿರು. ರಾಮನ ತೇಜಸ್ಸಿಗೂ ಕಲಿತನಕ್ಕೂ ಮರುಳಾಗಿ
ಶರಣಾದ ವೀರ. ರುದ್ರನಂಥವನ ನಿಷ್ಠುರವನ್ನೂ ಗಣಿಸದೆ ರಾಮನ ಗುಣವನ್ನು ಮೆಚ್ಚಿ ಊರನ್ನೇ ಬಿಟ್ಟು
ಬಂದವನು. ಮೊಟ್ಟಮೊದಲಿನಲ್ಲಿಯೇ ಇಬ್ಬರೂ ಆಣೆಯಿಟ್ಟು ಸ್ನೇಹಿತರಾಗುವರು. ರಾಮನ ಬಳಗದಲ್ಲಿ ಒಬ್ಬ
ನಾಗಿ ಎಲ್ಲ ಕಾಳಗಗಳಲ್ಲಿಯೂ ಸರಿಪಾಲು ಭಾಗವಹಿಸುವನು. ಕಡೆಯ ಕಾಳಗದಲ್ಲಿ ರಾಮನ ಸಮ್ಮುಖದಲ್ಲಿಯೇ

ಕಣ್ಣು ಮುಚ್ಚುವನು. ಈತನು ಸಾಯುವಂದು ರಾಮನು ಕಣ್ಣೀರಿಡುವನು. ಆಡಿದ ಮಾತನ್ನು ಸಾರ್ಥಕ ಗೊಳಿಸಿಕೊಂಡ ಈತನ ಪಾತ್ರವನ್ನು ಗಂಗ ಮತ್ತು ಮಹಲಿಂಗಸ್ವಾಮಿಗಳು ಒಂದೇ ರೀತಿಯಾಗಿ ಚಿತ್ರಿಸಿರು ತ್ತಾರೆ. ನಂಜುಂಡನು ದೇವಿಶೆಟ್ಟಿ ಸ್ನೇಹಬೆಳೆಸಿದ ಮನೋಹರವಾದ ಸಂದರ್ಭವನ್ನು ಬಿಟ್ಟಿರುತ್ತಾನೆ. ಅವನ ರಚನೆಯಲ್ಲಿ ದಿವ್ಯಾಶ್ವವನ್ನು ಪಡೆಯುವ ಪ್ರಕರಣ ಬೇರೆಯಾಗಿರುವುದೇ ಇದಕ್ಕೆ ಕಾರಣ. ಆದರೆ ದೇವಿಶೆಟ್ಟಿಯ ಲಿಂಗನ ನಿರ್ವಂಚನೆಯಾದ ನೇಹ, ಕಡೆಯ ಕ್ಷಣಗಳು ಸಾಕಾದಷ್ಟು ಪ್ರಭಾವಶಾಲಿಯಾಗಿವೆ.

ಬಾದೂರನು ಐತಿಹಾಸಿಕ ವ್ಯಕ್ತಿಯೆಂಬುದನ್ನು ಹಿಂದೆಯೇ ನಿರ್ಣಯಿಸಲಾಯಿತಷ್ಟೆ. ಈತನನ್ನು ಚಿತ್ರಿಸು ವಲ್ಲಿ ನಂಜುಂಡನು ಪೀಠಿಕಾಭಾಗವನ್ನು ಸ್ವಲ್ಪಮಟ್ಟಿಗೆ ಬೆಳೆಸಿರುತ್ತಾನೆ. ಈತನ ಅಮಿತ ಪರಾಕ್ರಮಕ್ಕೆ ಸಂಕೇತಪ್ರಾಯವಾಗಿ, ಮುಂಗುಲಿರಾಯನು ಕಳುಹಿಸಿದ ಬಿಲ್ಲನ್ನು ಹೆದೆಯೇರಿಸಿದ ಧೀರನೆಂತಲೂ, ಈತನು ಸುಲ್ತಾನನ ವಿಶ್ವಾಸಕ್ಕೆ ಪಾತ್ರನಾಗಿದ್ದುದನ್ನು ಕಂಡು ಇತರ ಮಲ್ಲುಕರು ಸಹಿಸದೆಹೋದರೆಂದೂ, ಆ ಮಾತ್ಸ ರ್ಯದ ಮಲ್ಲುಕರ ಒಳಸಂಚಿನಿಂದ ಇವನು ಒಡೆಯನ ಸಿಟ್ಟಿಗೆ ಗುರಿಯಾಗಿ ದೇಶಭ್ರಷ್ಟನಾದನೆಂದೂ ನಿರೂಪಿ ಸಿರುತ್ತಾನೆ. ಈ ಅಂಶಗಳ ಸತ್ಯಾಂಶ ಹೇಗೇ ಇರಲಿ, ಈತನು ಸ್ವಭಾವತಃ ವೀರನೆಂಬ ಅಂಶ ಈ ಮೂಲಕ ಸ್ಪಷ್ಟವಾಗುತ್ತದೆ. ಇಂಥ ಪುರುಷನೊಬ್ಬನು ಸ್ವತಂತ್ರವಾಗಿರಲು ಪ್ರಯತ್ನಿಸಿದನೆಂಬ ಸೂಚನೆಯಾಗಲಿ, ಸುಲ್ತಾ ನನ ಆಧಿಪತ್ಯವನ್ನು ಕಾರಣಾಂತರದಿಂದ ಎದುರಿಸಿದನೆಂಬ ಹೇಳಿಕೆಯಾಗಲಿ ಅತಿಶಯೋಕ್ತಿಯೇನಲ್ಲ. ಅಂತೆಯೇ ಪರಾಕ್ರಮಿಯಾದ ಇಂಥ ಸರದಾರನೊಬ್ಬನನ್ನು ಸುಲ್ತಾನನು ಕಳೆದುಕೊಳ್ಳಲು ಸಿದ್ಧನಾಗಿಯೂ ಇರಲಿಲ್ಲ. ಆದರಲ್ಲಿಯೂ ಇಂಥವನು ತನ್ನ ಶತ್ರುಗಳಾದ ಹಿಂದುಗಳ ಪಕ್ಷವನ್ನು ಸೇರಿದನೆಂದು ಕೇಳಿದ ಯಾವ ದೊರೆಗೆ ತಾನೆ ನೆಮ್ಮದಿ ಇರುತ್ತದೆ ? ಆದ್ದರಿಂದ ನೇಮಿಯನ್ನು ಕಳುಹಿಸಿದಾಗಲೆಲ್ಲ ಬಾದೂರನನ್ನು ಹಿಡಿದು ತರಬೇಕೆಂಬ ಆಜ್ಞೆ ಪಲ್ಲವಿಯಾಗುತ್ತದೆ. ಬಾದೂರನಂಥವನು ಕಂಗೆಟ್ಟು ಬಂದಾಗ ಇತರ ರಾಜರು ಆಶ್ರಯ ನೀಡಲು ಹಿಂತೆಗೆದರೂ ಕುಮಾರರಾಮನು ಅತ್ಯಂತ ಆದರದಿಂದ ಬರಮಾಡಿಕೊಳ್ಳುವನು. ಇದು ಹಿಂದೂ ಧರ್ಮವೆಂದೂ ಆತನ ನಂಬಿಕೆ. ಬೈಚಪ್ಪನು ಬೆದರಿದರೂ ವೀರಕುಮಾರನು ಬಾದೂರನ ಕೈಬಿಡುವುದಿಲ್ಲ. ಅತ್ಯಲ್ಪ ಕಾಲದಲ್ಲಿಯೇ ಈ ಮುಸಲ್ಮಾನನು ತನಗೆ ಆಶ್ರಯವಿತ್ತವರ ಆಪ್ತಮಿತ್ರನಾಗುವನು. ಅವರ ಮೇಲೆ ದಂಡೆತ್ತಿ ಬಂದ ತನ್ನ ಪೂರ್ವದ ಬಂಧುಗಳ ಮೇಲೇ ವೀರಾವೇಶದಿಂದ ಹೋರಾಡುವನು. ಈ ಗುಣ ಬಹಳ ವಿರಳ. ಆದರಲ್ಲಿಯೂ ಭರತಖಂಡದ ಇತಿಹಾಸವನ್ನು ಅವಲೋಕಿಸಿದವರಿಗೆ ಮುಸಲ್ಮಾನನೊಬ್ಬನು ಹೀಗೆ ಹಿಂದೂಗಳ ಪಕ್ಷವನ್ನು ವಹಿಸಿ, ಮುಸಲ್ಮಾನರ ಸೈನ್ಯವನ್ನು ಎದುರಿಸಿ ನಿಂತನೆಂಬ ಸಂಗತಿ ನಂಬುವುದೇ ಕಷ್ಟ. ಆದರೆ, ಈ ಘಟನೆ ಕವಿಕಲ್ಪನೆಯಲ್ಲ ; ಐತಿಹಾಸಿಕ ಸತ್ಯ. ಬಾದೂರನನ್ನು ಕಂಡರೆ ರಾಮನಿಗೆ ಅಮಿತವಾದ ಅಭಿಮಾನ. ಮೊದಲು ಮೊದಲು ಆತನಲ್ಲಿ ಅಪನಂಬಿಕೆಯಿದ್ದವರೂ ಕಡೆಕಡೆಗೆ ಅವನಲ್ಲಿ ವಿಶ್ವಾಸವನ್ನಿಡುವರು. ಕಟ್ಟಕಡೆಯ ಕಾಳಗ ಒದಗಿದಾಗ ಕುಮಾರರಾಮನು ತನ್ನ ತಂದೆ ತಾಯಿಗಳನ್ನು ಹೇಗೆ ಸುರಕ್ಷಿತವಾದ ಸ್ಥಳಕ್ಕೆ ಕಳುಹಿಸಬೇಕೆಂದು ಅಪೇಕ್ಷಿಸಿದನೋ ಹಾಗೆಯೇ ಬಾದೂರನನ್ನೂ ರಕ್ಷಿಸಲು ಯೋಚಿಸುವನು. ಯುದ್ಧ ಪ್ರಬಲವಾಗಲು ಬಾದೂರನಿಗೆ ತಾನು ತಲೆಮರೆಸಿಕೊಂಡಿರುವುದು ಒಪ್ಪಲಿಲ್ಲವೋ ಏನೋ ! ಅವನೂ ಯುದ್ಧ ರಂಗದಲ್ಲಿ ಕಾಣಿಸಿಕೊಳ್ಳುವನು. ವೀರನಂತೆ, ಆಶ್ರಯವಿತ್ತವರ ಪಕ್ಷಕ್ಕೆ ದ್ರೋಹವೆಣಿಸದೆ ಕಾದಾಡಿ, ಕಡೆಗೆ ತನ್ನ ಪ್ರಾಣವನ್ನೇ ಅರ್ಪಿಸುವನು. ಬಾದೂರನ ಮರಣ ಕಾವ್ಯದಲ್ಲಿ ಚಿತ್ರಿತವಾಗಿರುವ ರೀತಿಗೂ ಚರಿತ್ರೆಯಲ್ಲಿ ಕಂಡುಬರುವ ಕ್ರಮಕ್ಕೂ ವ್ಯತ್ಯಾಸವುಂಟು. ಈತನನ್ನು ಕಂಪಿಲನು ಬಲ್ಲಾಳನ ಬಳಿಗೆ ಕಳುಹಿಸಿದನೆಂದೂ, ಅನಂತರ ಆತನು ಆಶ್ರಯವೀಯಲಾರದೆ ಆತನನ್ನು ಸುಲ್ತಾನನಿಗೆ ಒಪ್ಪಿಸಿದನೆಂದೂ, ಕುಪಿತನಾದ ಸುಲ್ತಾ ನನು ಬಾದೂರನನ್ನು ಚರ್ಮಸುಲಿಸಿ ಸಾಯಿಸಿದನೆಂದೂ ತಿಳಿದುಬರುತ್ತದೆ. ಕಾವ್ಯದಲ್ಲಿಯಾದರೋ ಈತನು ರಾಮನ ಸಮ್ಮುಖದಲ್ಲಿಯೇ ವೀರನಂತೆ ಹೋರಾಡಿ ಮಡಿದನೆಂದು ಹೇಳಿದೆ. ಈತನು ಆಶ್ರಯ ವಿತ್ತವರಿಗೆ ತನ್ನ ಅಸುವನ್ನು ತೆತ್ತನೆಂಬುದು ಇವನ ಪಾತ್ರಕ್ಕೆ ಎಷ್ಟರಮಟ್ಟಿಗೆ ಭೂಷಣಪ್ರಾಯವೋ,

ಮರೆಹೊಕ್ಕವನನ್ನು ಕಟ್ಟಕಡೆಯಲ್ಲಿ ಬೇರೆಯವರ ಬಳಿಗೆ ಕಳುಹಿಸಿದನೆಂಬ ಕಂಪಿಲನ ವರ್ತನೆಯನ್ನು ಪರಿವರ್ತಿಸಿ ನಿರೂಪಿಸಿರುವುದು ಕುಮಾರರಾಮನ ಮನೆತನಕ್ಕೂ ಒಪ್ಪತಕ್ಕಂತಿದೆ. ನಂಜುಂಡನಲ್ಲಿಯಂತೂ, ಬಾದೂರನ ಮರಣವನ್ನು ಕೇಳಿದ ಕುಮಾರರಾಮನು ಮರೆಹೊಕ್ಕಿ ಬಂದವನನ್ನು ಜೀವಸಹಿತ ರಕ್ಷಿಸಲಾರದೆ ಹೋದನೆಂದು ಸಂಕಟಪಡುವ ಸನ್ನಿವೇಶವೇ ಚಿತ್ರಿತವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ, ಕುಮಾರರಾಮನ ಕಡೆಯಲ್ಲಿದ್ದು ಆತನಿಗೆ ದ್ರೋಹವನ್ನು ಬಗೆದ ತೆಲುಗುಯೋಧರಿಗಿಂತಲೂ ಅನ್ಯಮತೀಯನಾದ ಬಾದೂರನು ಎಷ್ಟೋ ಪಾಲು ಮಿಗಿಲು ಎನ್ನಬಹುದು.

ಪ್ರಕೃತ ಕಥಾವಿವರದಲ್ಲಿ ತೋರಿಬರುವ ಸುಲ್ತಾನ,ವೀರಬಲ್ಲಾಳ, ಪ್ರತಾಪರುದ್ರ, ಹುಳಿಯಾರು ಮಾರ ಭೂಪಾಲ, ಗುತ್ತಿಯ ಜಗತಾಪಿ ಮುಂತಾದವರು ರಾಮನ ಪ್ರತಿಪಕ್ಷಕ್ಕೆ ಸೇರಿದವರು. ಈ ಒಬ್ಬೊಬ್ಬರೂ ಕುಮಾರರಾಮನ ಏಳಿಗೆಯನ್ನು ಸಹಿಸಲಾರದೆ ದಂಡೆತ್ತಿ ಬಂದವರೆಂದೂ, ಒಮ್ಮೊಮ್ಮೆ ರಾಮನೇ ದಂಡೆತ್ತಿ ಹೋದನೆಂದೂ ಚಿತ್ರಿಸಲಾಗಿದೆ. ಇಂಥ ಅನುಪಮ ಸಾಹಸಿಗಳೂ ಸಹ ಕುಮಾರರಾಮನ ಪರಾಕ್ರಮಕ್ಕೆ ಬೆರಗಾಗುತ್ತಾರೆ. ಸಂಧಿಯನ್ನು ಮಾಡಿಕೊಂಡು ಸ್ನೇಹಿತರಾಗಿರುವವರೂ ಉಂಟು. ಸುಲ್ತಾನನು ತನ್ನ ಮಗಳನ್ನು ಕೊಟ್ಟು, ಹಲವು ಊರುಗಳನ್ನು ಉಂಬಳಿಯನ್ನಾಗಿತ್ತು ಸಂಬಂಧವನ್ನು ಬೆಳಸಬೇಕೆಂದು ಹೇಳಿ ಕಳುಹಿಸಿರುವುದೂ ಉಂಟು. ಗುತ್ತಿಯ ಜಗತಾಪಿಯಂತೂ ಸೋತು ಖಿನ್ನನಾಗಿದ್ದರೂ ಕುಮಾರರಾಮನ ಪರಾಕ್ರಮಕ್ಕೆ ತಲೆದೂಗಿ ತನ್ನ ಮಗಳಾದ ರಾಮಲಾದೇವಿಯನ್ನು ಕೊಟ್ಟು ಸಂಬಂಧವನ್ನು ಬೆಳಸಿದನೆಂದೂ ನಿರೂಪಿತವಾಗಿದೆ. ಪ್ರತಾಪರುದ್ರನು ಮಗನನ್ನು ಕಳೆದುಕೊಳ್ಳಲಾರದೆ ಕುಮಾರರಾಮನಿಗೆ ಶರಣಾದನೆಂದು ಗಂಗ ಮತ್ತು ಮಹಲಿಂಗಸ್ವಾಮಿಗಳು ಹೇಳಿರುತ್ತಾರೆ. ಈ ಘಟನೆಗಳ ಚರಿತ್ರಾಂಶಗಳು ಹೇಗೆ ಇರಲಿ, ಕಾವ್ಯದ ದೃಷ್ಟಿಯಿಂದ ಕುಮಾರರಾಮನ ಪಾತ್ರಕ್ಕೆ ಪುಷ್ಟಿಕೊಡುವಂತೆ ಈ ಪ್ರತಿಪಕ್ಷದ ಪಾತ್ರಗಳು ಒಂದಲ್ಲ ಒಂದು ರೀತಿಯಲ್ಲಿ ನೆರವಾಗಿವೆ. ನೇರವಾಗಿ ಯುದ್ಧಗಳಲ್ಲಿ ಪಾತ್ರವಹಿಸಿದ ನೇಮಿಖಾನನಂತೂ, ಕುಮಾರರಾಮನ ಸಾಹಸಕ್ಕೆ ಶರಣುಹೋಗುತ್ತಾನೆ. ಒಡೆಯನ ಸಮ್ಮುಖದಲ್ಲಿ, ನಾಚಿಕೆಯನ್ನೂ ಮರೆತು ತನ್ನ ಅಸಹಾಯಕ ಸ್ಥಿತಿಯನ್ನು ಬಿನ್ನವಿಸಿಕೊಳ್ಳುತ್ತಾನೆ.

ಸ್ತ್ರೀಪಾತ್ರವರ್ಗದಲ್ಲಿ ರತ್ನಾಜಿಗೆ ಪ್ರಥಮಸ್ಥಾನ ಸಲ್ಲುತ್ತದೆ. ಕುಮಾರರಾಮನ ಕಥೆಯಲ್ಲಿ ಈ ಖಳ ಪಾತ್ರಧಾರಿಗೆ ಕಥಾನಾಯಕಿಯ ಪಟ್ಟವೂ ಸಲ್ಲುತ್ತದೆ ಎನ್ನಬಹುದು. ಈಕೆಯ ಪಾತ್ರಕ್ಕೆ ನಂಜುಂಡನು ಪೂರ್ವಜನ್ಮದ ಪೀಠಿಕೆಯನ್ನು ಕಲ್ಪಿಸಿ, ದೇವಲೋಕದ ಉರ್ವಶಿಯೇ ಈ ಜನ್ಮದಲ್ಲಿ ರತ್ನಾಜಿಯಾಗಿ ಜನಿಸಿ, ಕುಮಾರರಾಮನಾಗಿ ಹುಟ್ಟಿ ಬಂದಿದ್ದ ಅರ್ಜುನನ ಮೇಲೆ ಮತ್ತೊಮ್ಮೆ ತನ್ನ ಮಾಯಾಜಾಲವನ್ನು ಬೀಸಿದ ಳೆಂಬುದಾಗಿ ನಿರೂಪಿಸಿರುತ್ತಾನೆ. ಜನ್ಮಾಂತರದ ನಿಮಿತ್ತ ಹೇಗಿದ್ದರೂ ಸರಿಯೆ, ಪ್ರಕೃತ ಕಾವ್ಯಗಳಲ್ಲಿ ಚಿತ್ರಿತ ವಾಗಿರುವ ರತ್ನಾಜಿ ಅತ್ಯಂತ ಮಾಯಗಾತಿಯೇ ಸರಿ. ಆಕೆ ಡೊಂಬರ ಹೆಣ್ಣು ಎಂದು ಮಹಲಿಂಗಸ್ವಾಮಿಯ ಕಲ್ಪನೆ. ಕುಮಾರರಾಮನ ಸೋದರತ್ತೆಯ ಮಗಳು ಎಂಬುದಾಗಿ ಗಂಗನ ಸೃಷ್ಟಿ. ಆಕೆಗೆ ರಾಮನನ್ನು ಕಂಡ ಕ್ಷಣದಿಂದ ತನ್ನ ಮಾವೆಯನ್ನೂ ಮರೆಯುವಷ್ಟರಮಟ್ಟಿಗೆ ವ್ಯಾಮೋಹ ಆವರಿಸಿಕೊಂಡು ಕಾಮೋದ್ರೇಕ ವಾಗುತ್ತದೆ. ಆಕೆಯ ಆಪ್ತಸಖಿಯಾದ ಸಂಗಿಗೇ ಒಡತಿಯ ಆ ವಿಪರೀತವಾದ ವರ್ತನೆ ಆತಂಕವನ್ನು ಮಾಡುತ್ತದೆ. ಆಕೆಯ ಸ್ವಭಾವ ಹಸ್ತಿನಿ ಇಲ್ಲವೇ ಶಂಖಿನಿ ಜಾತಿಯ ಸ್ತ್ರೀಯನ್ನು ಹೋಲುತ್ತದೆ. ಆಕೆಯ ಹೃದಯಕ್ಷೋಭೆಯನ್ನು ಮೂರು ಜನ ಕವಿಗಳೂ ವಿವರವಾಗಿ ಬೆಳೆಸಿರುತ್ತಾರೆ. ರಾಮನ ಸಮಾಗಮಕ್ಕಾಗಿ ಆಕೆ ದೇವತೆಗಳಲ್ಲಿ ಹರಸಿಕೊಳ್ಳುವ ಸನ್ನಿವೇಶವಾಗಲಿ, ರಾಮನ ಚಿತ್ರಪಟವನ್ನು ಕಂಡು ಆಕೆ ಪರಿತಪಿಸುವ ವಿರಹವ್ಯಾಕುಲವಾಗಲಿ ಹೇಳತೀರದು. ಆಕೆ ಕಾಟನ ಜೊತೆಯಲ್ಲಿ ಹೂಡುವ ನಟನೆ, ಹಡಪದ ಬೊಲ್ಲುಗನನ್ನು ನಾಚಿಸಿ ಕಳುಹಿಸುವ ನೆಪಗಳು ಅವಳ ಕುಟಿಲತನವನ್ನೂ ಜಾಣತನವನ್ನೂ ವ್ಯಕ್ತಪಡಿಸುತ್ತವೆ. ರಾಮನ ಸಮ್ಮುಖದಲ್ಲಿ ಆಡುವ ಒಂದೊಂದು ಮಾತೂ ಆಕೆಯ ನೀಚಸ್ವಭಾವವನ್ನು ಪದರ ಪದರವಾಗಿ ಪರಿಚಯ

ಮಾಡಿಕೊಡುತ್ತದೆ. ರಾಮನನ್ನು ಒಲಿಸಿಕೊಳ್ಳುವ ಸಲುವಾಗಿ ಕಂಪಿಲನನ್ನು ಕೊಲ್ಲಿಸಲೂ ಹಿಂತೆಗೆಯದ ಹೆಂಗಸು ಅವಳು. ರಾಮನು ತಾನೂ ಆಕೆಯ ಮಗನೆಂದು ಎಚ್ಚರಿಸಿದರೆ, ತಂದೆಯೂ ಮಗನೂ ಒಂದೇ ಅಂದಳವನ್ನು ಏರಿಬರುವುದು ರೂಢಿಯಲ್ಲಿ ಇಲ್ಲವೆ ಎಂದು ಪ್ರಶ್ನಿಸುವಳು. ಪ್ರಾಣಿಗಳಲ್ಲಿ ಮಾತೃಗಮನವಿಲ್ಲವೆ ಎಂದು ಸವಾಲು ಹಾಕುವುದು ಆಕೆಯ ವಿಕೃತಕಾಮಕ್ಕೆ ತಕ್ಕ ಮಾತೇ ಸರಿ. ಆಕೆಯ ಈ ಒಂದೊಂದು ವಾದವೂ ರಾಮನನ್ನು ತಲೆತಗ್ಗಿಸುವಂತೆ ಮಾಡುತ್ತದೆ. ಆದರೆ, ಆಕೆಯ ಹೇಳಿಕೆಗೆ ಬೆಲೆಕೊಡಬಹುದಾದರೆ–ಎಂದರೆ, ಆಕೆ ರಾಮನಿಗಾಗಿಯೇ ನಿಶ್ಚಿತವಾದ ಕನ್ಯೆಯೆಂದೂ, ಕಂಪಿಲನು ಮೋಸಮಾಡಿ ವರಿಸಿದನೆಂದೂ ಆ ತರಳೆಗೆ ಮುದಿ ಮಹಾರಾಜನ ಸಹವಾಸ ಅಸಹನೀಯವೆಂದೂ ಹೇಳುವ ಮಾತುಗಳು—ಆಕೆಯ ಬಗ್ಗೆ ಅಲ್ಪಸ್ವಲ್ಪ ಸಹಾನುಭೂತಿಯನ್ನು ಉಂಟುಮಾಡುತ್ತದೆ. ಆದರೆ ಆ ನೆಪದಲ್ಲಿ ಆಕೆ ಕುಮಾರರಾಮನ ಇಂಗಿತವನ್ನು ಅರ್ಥಮಾಡಿಕೊಳ್ಳಲಾರದೆ ಅವನನ್ನು ಬಲಾತ್ಕರಿಸಲು ತೊಡಗುವುದು ಅಸಮರ್ಥನೀಯವೇ ಸರಿ. ಅನಂತರ, ಆಕೆ ನಾರಿಯಾಗಿದ್ದವಳು ಅಕ್ಷರಶಃ ಮಾರಿಯೇ ಆಗುವಳು. ಯಾವ ಅಕಾರ್ಯಕ್ಕಾಗಿ ಕುಮಾರರಾಮನು ಹೆದರಿ ಆಕೆಯನ್ನು ನೂಕಿ ಬಂದನೋ ಆ ಅಕಾರ್ಯದ ಅಪವಾದವನ್ನೇ ಆತನ ತಲೆಯ ಮೇಲೆ ಹೊರಿಸುವಳು. ಬಯಸಿ ಬಯಸಿ ಪಡೆದಿದ್ದ ಮಗನನ್ನು ಇದಕ್ಕಾಗಿ ಕಂಪಿಲನು ತಲೆಕಡಿಯುವ ಆಜ್ಞೆ ಮಾಡುವಂತೆ ಮಹಾರಾಜನನ್ನು ತನ್ನ ಕೈಗೊಂಬೆಯಾಗಿ ಮಾಡಿಕೊಳ್ಳುವಳು. ಆಕೆಯ ರೂಪಕ್ಕೂ ಲಾವಣ್ಯಕ್ಕೂ ಮರುಳಾಗಿದ್ದ ಕಂಪಿಲನಿಗೆ ಮಂತ್ರಿಯ ಹಿತೋಕ್ತಿಗಳಾವುವೂ ಹಿಡಿಸಲಾರದೆ ಹೋಗುವುವು. ದುರುಳ ರತ್ನಿಗಾದರೋ ಕುಮಾರರಾಮನ ರುಂಡವನ್ನು ಕಾಣುವತನಕ ಸಮಾಧಾನವಿಲ್ಲ. ಬೈಚಪ್ಪನು ತಲೆಯನ್ನು ತಂದು ಕೊಟ್ಟಾಗ ಅದನ್ನು ಪರೀಕ್ಷಿಸಿ, ತಾನು ಚಿಕ್ಕಂದಿನಂದು ಮಾಡಿದ್ದ ಗುರುತು ಕಾಣದೆ ಶಂಕಿಸಿದಳೆಂದು ಗಂಗನ ಕೆಲವು ಪ್ರತಿಗಳಲ್ಲಿ ಕಂಡುಬರುತ್ತದೆ. ಮುಖ್ಯವಾಗಿ ಆಕೆಯ ಹಟ ನೆರವೇರಿತೋ ಇಲ್ಲವೋ ಎಂಬ ಆತಂಕ. ಆದೇ ಮೇರೆಗೆ, ಮುಂದೆ ವಾಸ್ತವಿಕವಾದ ವೃತ್ತಾಂತವು ಪ್ರಕಟವಾಗಲು, ರತ್ನಿಗೆ ಕ್ಷಣಮಾತ್ರವೂ ಜೀವಸಹಿತವಿರಲು ಆಗುವುದಿಲ್ಲ. ಈ ವೇಳೆಗಾಗಲೇ ಮನೆ ಮಂದಿಯವರ ಶಾಪವೂ, ಊರಿನವರ ಆಗ್ರಹವೂ ಸಾಕಾದಷ್ಟು ಅವಳಿಗೆ ತಟ್ಟಿತ್ತೋ ಏನೋ ! ಅಂತೂ, ತನ್ನ ಕುಟಿಲತನ ಇನ್ನೂ ಪ್ರಕಟವಾಗುತ್ತಿದ್ದಂತೆಯೇ ಆಕೆ ಆತ್ಮಹತ್ಯ ಮಾಡಿಕೊಳ್ಳುವಳು. ಅಂಥ ಒಡತಿಯ ಸಹವಾಸದೋಷಕ್ಕೆ ಬಲಿಯಾದಳೋ ಎನ್ನುವಂತೆ ಬಡ ಸಂಗಿಯೂ ಸಾಯುವಳು. ಕೆಲವು ಕೃತಿಗಳಲ್ಲಿ ರತ್ನಿಯ ಸೇಡನ್ನು ಇಲ್ಲಿಗೇ ಮುಗಿಸದೆ ಆಕೆ ಮತ್ತೆ ಮಾತಂಗಿಯಾಗಿ ಹುಟ್ಟಿ ಬಂದಳೆಂದು ನಿರೂಪಿತವಾಗಿದೆ. ಈ ಜನ್ಮಾಂತರದ ಕಥೆ ಹೇಗೇ ಇರಲಿ, ರತ್ನಾಜಿಯ ಪಾತ್ರ ಕುಮಾರರಾಮನ ಕಥೆಯಲ್ಲಿ ಅತ್ಯಂತ ಮಹತ್ವವುಳ್ಳದ್ದು. ಕುಮಾರರಾಮನೇ ಹೇಳುವಂತೆ ಆತನ ಪರದಾರಸೋದರತ್ವವನ್ನು ಶಿವನು ಪರೀಕ್ಷಿಸಿ ನೋಡುವ ಒರೆಗಲ್ಲು ರತ್ನಾಜಿ. ಆದ್ದರಿಂದ ಆಕೆಯ ಪಾತ್ರದಲ್ಲಿ ಕಂಡುಬರುವ ಅತಿರೇಕಗಳು ರಾಮನ ಪಾತ್ರ ವೈಭವವನ್ನು ಹೆಚ್ಚಿಸುವ ಸಾಧನಗಳೆಂದು ಭಾವಿಸಬಹುದು.

ಪಾತಕಿಯಾದ ರತ್ನಿ ಸ್ತ್ರೀಜಾತಿಗೆ ಕಳಂಕದಂತಿದ್ದರೆ ಪಟ್ಟಮಹಿಷಿಯಾದ ಹರಿಯಾಲದೇವಿ ಸ್ತ್ರೀ ಸಹಜವಾದ ಸದ್ಗುಣಗಳನ್ನು ಒಳಗೊಂಡು ಆದರ್ಶ ಸತಿಯಾಗಿದ್ದಾಳೆ. ಮನೆತನದಿಂದಲೂ ಆಕೆ ಉತ್ತಮ ತರಗತಿಗೆ ಸೇರಿದವಳು. ಸಕಾಲದಲ್ಲಿ ಸಂತಾನವಾಗದಿರಲು ತನ್ನ ದೌರ್ಭಾಗ್ಯಕ್ಕಾಗಿ ಕೊರಗಿ ಮತ್ತೊಬ್ಬರ ಮಗುವನ್ನು ಪೋಷಿಸಲು ತೊಡಗುವಳು. ಅನಂತರ ಜಟ್ಟಂಗಿರಾಮನ ಕೃಪೆಯಿಂದ ಕುಮಾರರಾಮನನ್ನು ಪಡೆದಾಗ ಅವಳ ಬಾಳು ಸಾರ್ಥಕವೆನ್ನಿಸುತ್ತದೆ. ಅಭಿನವ ಮದನನೂ, ಅಭಿನವ ಅಭಿಮನ್ಯುವೂ ಆದ ಕುಮಾರರಾಮನನ್ನು ಕಂಡು ಆಕೆ ದಿನದಿನಕ್ಕೂ ಹಿಗ್ಗುವಳು. ಆದರೆ, ರತ್ನಿ ಕಾಲಿಟ್ಟ ದಿನದಿಂದ ಅವಳಿಗೆ ಆತಂಕ ಮೊದಲಾಗುತ್ತದೆ. ಸವತಿಯ ಕಣ್ಣು ಮಗನ ಮೇಲೆ ಬಿದ್ದು ಏನು ಕೇಡು ಸಂಭವಿಸೀತೋ ಎಂದು ಶಂಕೆಯುಂಟಾಗುತ್ತದೆ. ತನ್ನ ಮಗನ ರಕ್ಷಣೆಗಾಗಿ ಆತನ ಕಾಲಿಗೆ ಪರದಾರ ಸೋದರತ್ವದ ಪೆಂಡೆಯವನ್ನು ತೊಡಿಸುತ್ತಾಳೆ. ಆದರೆ, ಯಾವ ಭಯ ಹರಿಯಾಲದೇವಿಯನ್ನು ಮುಂಚಿತವಾಗಿಯೇ ಬಾಧಿಸತೊಡಗಿತೋ

ಅದೇ ಕರಾಳ ಛಾಯೆಯಾಗಿ ವ್ಯಾಪಿಸಿ, ಕಡೆಗೂ ರಾಮನನ್ನು ನುಂಗಲು ತನ್ನ ನಾಲಗೆಯನ್ನು ಚಾಚೀ ಚಾಚುತ್ತದೆ. ಕುಮಾರರಾಮನಿಗೆ ಚೆಂಡಾಟವಾಡಬೇಕೆಂಬ ಬಯಕೆ ಉಂಟಾದದ್ದೇ ಇದಕ್ಕೆ ಪೀಠಿಕೆಯಾಗುತ್ತದೆ. ಅಲಂಕೃತನಾಗಿ ಬಂದ ಮಗನು ಈ ಮಾತನ್ನು ಹೇಳುವುದೇ ತಡ ಹರಿಯಾಲದೇವಿ ಹಾವಗಿದು ಬಿಟ್ಟಂತೆ ಆಗುವಳು. ಆಕೆ ಮಗನನ್ನು ಎಚ್ಚರಿಸಿ ಆಡುವ ನೀತಿವಚನಗಳು ಒಂದಲ್ಲ, ಎರಡಲ್ಲ, ಹಲವಾರು. ಆಕೆಯ ಹೃದಯದ ಯಾತನೆ ಹೇಳತೀರದು. ಮೊದಲು ಮೊದಲು ಸಾಮಾನ್ಯ ರೀತಿಯಲ್ಲಿ ಬೋಧಿಸುವಳು. ರಾಮನು ಒಡಂಬಡುವುದಿಲ್ಲ ಅನಂತರ ಪರಸ್ತ್ರೀಯರ ನೆಪವನ್ನು ಹೂಡುವಳು. ಆಗಲೂ ರಾಮನು ತನ್ನ ಪರದಾರಸೋದರತ್ವವನ್ನು ಮತ್ತೊಮ್ಮೆ ಶಪಥಮಾಡಿ ವಾದಿಸುವನು. ಕಡೆಗೆ ಕುಮಾರ ರಾಮನು ಕಣ್ಣೀರಿಡಲು ಆ ಸಂಕಟವನ್ನು ಸಹಿಸಲಾರದೆ ನಿರ್ವಾಹವಿಲ್ಲದೆ ಚೆಂಡನ್ನು ಕೊಡಲು ಒಪ್ಪುವಳು. ಆಗಲೂ ಆಕೆ ಒಂದು ಕಟ್ಟಳೆಯನ್ನು ವಿಧಿಸುವಳು. ಅನಿಷ್ಟದೇವತೆಗಳ ಶಾಂತಿಗಾಗಿಯೋ ಎಂಬಂತೆ ಚೆಂಡಿಗೆ ರಾಮನ ಕೈಯಿಂದ ಹಲವಾರು ಬಲಿಗಳನ್ನು ಏರ್ಪಡಿಸಿ, ತರುವಾಯ ಆಶೀರ್ವದಿಸಿ ಅದನ್ನು ಕೊಡುವಳು. ಹಾಸಿಗೆ ಮುಂಚಿತವಾಗಿಯೇ ಇಷ್ಟು ಆತಂಕಪಟ್ಟ ತಾಯಿ ಇನ್ನು ಕೇಡು ಸಂಭವಿಸಿದಾಗ ಆಕೆಯ ಸ್ಥಿತಿ ಕೇಳಬೇಕೆ! ಬೈಚಪ್ಪನನ್ನು ಬಾಯಿಗೆ ಬಂದಂತೆ ನಿಂದಿಸುವಳು. ಸವತಿಯನ್ನು ಖಂಡಿಸುವಳು. ಆಕೆಯ ಸಂಕಟ ಮೇರೆವಿಾರಲು, ಚತುರನಾದ ಮಂತ್ರಿ ಉಪಾಯಾಂತರದಿಂದ ರಾಮನು ಬದುಕಿರುವುದನ್ನು ಗುಟ್ಟಾಗಿ ತಿಳಿಸಿದನೆಂದು ಮೂವರು ಕವಿಗಳೂ ಬೇರೆ ಬೇರೆ ಬಗೆಯಾಗಿ ಸೂಚಿಸಿರುತ್ತಾರೆ. ಇದರಿಂದ ಆಕೆಯ ಮಾತೃಹೃದಯದ ಆಳವೆಷ್ಟು ಎನ್ನುವುದನ್ನು ಊಹಿಸಿಕೊಳ್ಳಬಹುದು. ತಾತ್ಕಾಲಿಕವಾಗಿ ಸಂಭವಿಸಿದ ಈ ಕಗ್ಗತ್ತಲೆ ಮಾಯವಾಗಿ ಮತ್ತೆ ರಾಮನ ದರ್ಶನವಾದದ್ದೇ ತಡ ಹರಿಯಾಲದೇವಿಗೆ ಪುನರ್ಜನ್ಮ ಬಂದಂತಾಗುವುದು. ಕುಮಾರನ ಸಾಹಸೋದ್ಯಮಗಳಿಗೆ ಹರಿಯಾಲದೇವಿಯ ಹರಕೆ ಸರ್ವದಾ ಬೆಂಗಾವಲಾಗಿತ್ತು. ಆಕೆ ಆತನಿಗಾಗಿ ಹಣವನ್ನು ಕಳುಹಿಸಿ ಹುರಿದುಂಬಿಸುವ ಚಿತ್ರವಂತೂ ಮರೆಯಲಾಗ ದಂತಹುದು. ಕವಿಗಳು ಹರಿಯಾಲದೇವಿಗೆ ಕೊಟ್ಟಿರುವ ಈ ಸ್ಥಾನಮಾನಗಳು ಕುಮಾರರಾಮನ ಪಾತ್ರಕ್ಕೆ ಉಚಿತವಾಗಿವೆ.

ಕುಮಾರರಾಮನ ಅಕ್ಕ ಮಾರಮ್ಮ, ತಂಗಿ ಸಿಂಗಮ್ಮ, ಕೈಹಿಡಿದ ಹೆಂಡತಿಯರ ಪಾತ್ರಗಳು ದೀರ್ಘವಾಗಿ ಬೆಳೆಯದಿದ್ದರೂ ಸಾಕಾದಷ್ಟು ಪ್ರಭಾವಶಾಲಿಯಾಗಿವೆ. ಕುಮಾರರಾಮನಿಗೆ ತಂದೆ ತಾಯಿಗಳ ಅಭಿಮಾನ, ಸ್ನೇಹಿತರ ಮೈತ್ರಿ ಹೇಗೆ ಸಂತತವಾಗಿ ಲಭಿಸಿದ್ದುವೋ ಹಾಗೆಯೇ ಅಕ್ಕತಂಗಿಯರ ಪ್ರೀತಿಯೂ, ಸತಿಯರ ಒಲವೂ ಮಿಾಸಲಾಗಿದ್ದುವು ಎನ್ನುವುದು ಗಮನಾರ್ಹ. ಕುಮಾರರಾಮನು ರತ್ನಿಯ ಕುಟಿಲಕ್ಕೆ ಒಳಗಾದದ್ದನ್ನು ಕೇಳಿದಾಗ ಈ ಹೆಣ್ಣುಮಕ್ಕಳು ಒಂದೇ ಸಮನಾಗಿ ಹಂಬಲಿಸುವರು. ಕಂಪಿಲನ ಬಳಿಗೆ ಬಂದು ಮಾರಮ್ಮನೂ, ಸಿಂಗಮ್ಮನೂ ತಮ್ಮ ತಂದೆಯನ್ನು ಕಟುವಾಗಿ ಆಕ್ಷೇಪಿಸುವರು. ಕುಮಾರರಾಮನ ಸತಿಯರಂತೂ ಧರ್ಮಪತ್ನಿಯರಿಗೆ ತಕ್ಕುದಾದ ರೀತಿಯಲ್ಲಿ ಚಿತೆಯನ್ನು ಬೇಡುವರು. ಕಂಪಿಲನಿಗೆ ರಾಮನನ್ನು ಕಳೆದುಕೊಂಡದ್ದಕ್ಕಿಂತ ಹೆಚ್ಚಾಗಿ ಇವರಿಗೆ ಸಮಾಧಾನವನ್ನು ಹೇಳಲು ತುಂಬ ಪ್ರಯಾಸ ವಾಗುವುದು. ಬೈಚಪ್ಪನು ಅತ್ಯಂತ ಚಾತುರ್ಯದಿಂದ ಈ ಸ್ತ್ರೀಯರನ್ನು ಸಮಾಧಾನಗೊಳಿಸಿ ಕೃತಕವಾದ ಚಿತೆಯ ಮೂಲಕವೋ, ಇಲ್ಲವೇ ಇಂದ್ರಜಾಲದ ಮೂಲಕವೋ ಅವರಿಗೆ ನೆಮ್ಮದಿಯನ್ನು ನೀಡುವನು. ಕಡೆಗೆ ಕುಮಾರರಾಮನ ಅಂತ್ಯಕಾಲ ಸಮಿಾಪಿಸಿದ್ದಾಗ ಈ ಸಾಧ್ವಿಯರು ಕಾಟಣ್ಣನ ಮಾತಿಗೆ ಹೃತ್ಪೂರ್ವಕ ವಾಗಿ ಒಡಂಬಟ್ಟು ನಗುನಗುತ್ತ ಅಗ್ನಿಪ್ರವೇಶ ಮಾಡುವರು.

ರತ್ನಿ ಮನೆಯ ಬಳಗದಲ್ಲಿಯೇ ಒಬ್ಬಳಾಗಿದ್ದು ಕುಮಾರರಾಮನಿಗೆ ಕೇಡನ್ನು ಬಗೆದರೆ, ಮಾತಂಗಿ ಪ್ರತಿಪಕ್ಷದಲ್ಲಿದ್ದು ಯಾವುದೋ ಪೂರ್ವವೈರದಿಂದ ಆತನ ಮೇಲೆ ಸೇಡನ್ನು ತೀರಿಸಿಕೊಳ್ಳಲು ಸೃಷ್ಟಿಯಾದಂತೆ ಕಂಡುಬರುತ್ತದೆ. ಸುಲ್ತಾನನು ಕುಮಾರರಾಮನನ್ನು ಜಯಿಸುವುದು ಹೇಗೆಂದು ಚಿಂತಿಸುತ್ತಿರಬೇಕಾದರೆ

ಈಕೆ ತಾನು ಆ ಕೆಲಸವನ್ನು ಮಾಡುವುದಾಗಿ ಮುಂದೆ ಬರುವಳು. ಪೂರ್ವದಲ್ಲಿ ಪುರುಷರು ಮಾಡಲಾಗದಿದ್ದ ಕಾರ್ಯವನ್ನು ಸ್ತ್ರೀಯರು ಹೇಗೆ ನಿರ್ವಹಿಸಿದರು ಎಂಬುದನ್ನು ಉದಾಹರಿಸಿ ವಾದಿಸುವಳು. ಗಂಗ ಮತ್ತು ಮಹಲಿಂಗಸ್ವಾಮಿಗಳು ಈಕೆಯನ್ನು ರತ್ನಿಯ ಪುನರ್ಜನ್ಮವೆನ್ನುವಷ್ಟು ದೂರ ಹೋಗಿರುವರು. ಮುಖ್ಯವಾಗಿ ಕುಮಾರರಾಮನ ಜೀವಕ್ಕೆ ಹೆಣ್ಣಿನಿಂದ ಕಂಟಕವೆಂಬ ವಿಧಿಲಿಪಿ ಸ್ಥಿರವಾಗಿದ್ದುದರಿಂದ ಆತನಿಗೆ ರತ್ನಿ, ತಪ್ಪಿದರೆ ಮಾತಂಗಿ ಮಾರಿಯರಾಗಿ ಬರುತ್ತಾರೆ. ಮಾತಂಗಿ ರೂಪಿನಲ್ಲಿ ಚೆಲುವೆಯಂತೆ; ನಡೆನುಡಿಗಳಲ್ಲಿ ಸಾಕಾದಷ್ಟು ಚತುರೆಯೂ ಹೌದು. ನಂಜುಂಡನ ರಚನೆಯಲ್ಲಿ ಈಕೆ ಕುಮಾರರಾಮನನ್ನು ಕುಟಿಲತನದಿಂದ ಒಲಿಸಿಕೊಳ್ಳಲು ಮಾಡುವ ಹಲವಾರು ಸನ್ನಾಹಗಳೇ ಇದಕ್ಕೆ ಸಾಕ್ಷಿ. ಆದರೆ, ಯುದ್ಧ ಮಾಡಲೇಬೇಕಾಗಿ ಬಂದಾಗ ರಣರಂಗವನ್ನು ನಿರ್ಭಯವಾಗಿ ಪ್ರವೇಶಿಸುವಳು. ತನ್ನ ಪಕ್ಷದ ಮಲ್ಲುಕರು ಹೆದರಿ ಹಿಮ್ಮೆಟ್ಟಲು ಅವರನ್ನು ಮೂದಲಿಸುವಳು. ಯುದ್ಧದಲ್ಲಿ ಒಮ್ಮೊಮ್ಮೆ ತನ್ನವರನ್ನು ಹುರಿದುಂಬಿಸಿ ಮುಂದೆ ಬಿಡುವಳು. ಆದರೂ ಹಿಮ್ಮೆಟ್ಟಬೇಕಾಗಿ ಬಂದಾಗ ಇವಳಿಗೆ ದೈವಸಹಾಯವು ಒದಗಿಬಂದಂತೆ ಕುಮಾರರಾಮನ ಕಡೆಯ ತೆಲುಗರು ಒಳಸಂಚು ಮಾಡಿ ನೆರವಾಗುವರು. ಸ್ವಲ್ಪಕಾಲವಾದರೂ, ಮಾತಂಗಿಗೂ ಕುಮಾರರಾಮನಿಗೂ ಆಗುವ ಕಾಳಗ ಅತ್ಯಂತ ಪರಿಣಾಮಕಾರಿಯಾಗಿದೆ. ಕುಮಾರರಾಮನನ್ನು ಕಂಡು ಎದುರಿಸಿದುದೇ ಇವಳ ಸಾಹಸಕ್ಕೆ ಒಂದು ಹೆಗ್ಗುರುತು. ಅನಂತರ ರಾಮನು ಧರ್ಮಸಂಕಟಕ್ಕೆ ಸಿಕ್ಕಿಬಿದ್ದು ಹಿಂತೆಗೆದಾಗ ಈಕೆ ತನ್ನ ಬಾಣದಿಂದ ಆತನನ್ನು ಗಾಯಗೊಳಿಸುವಳು. ಈ ಅಕಾರ್ಯವೇ ಇವಳ ಮಾದಿಗಿತ್ತಿಯ ಹುಟ್ಟನ್ನು ಕಾವ್ಯದಲ್ಲಿ ಹಿಡಿದೆತ್ತಿ ತೋರುವಂತೆ ಮಾಡಿತೋ ಏನೋ! ಅಂತೂ ಕುಮಾರರಾಮನಿಗೆ ಮಾತಂಗಿ ಮೃತ್ಯುದೇವತೆಯಾಗಿ ಪರಿಣಮಿಸಿದಳು. ಈ ದುರ್ವಿಧಿಯೇ ಕುಮಾರರಾಮನ ದುರಂತಕ್ಕೆ ಕಾರಣವಾಯಿತು. ಆತನ ಬಂಧುಗಳೆಲ್ಲರೂ ಈ ಮಾತನ್ನು ಒತ್ತಿ ಒತ್ತಿ ಹೇಳುವರು. ಮಹಲಿಂಗಸ್ವಾಮಿ ಚಿತ್ರಿಸಿರುವ ಮಾತಂಗಿಯಾದರೋ ತನ್ನ ಕಾರ್ಯಕ್ಕೆ ತಾನೇ ಮರುಗಿ ರಾಮನ ತಲೆಯನ್ನು ಡಿಳ್ಳಿಗೆ ಕಳುಹಿಸಿ ತಾನು ಚಿತಾಪ್ರವೇಶ ಮಾಡಿ, ಆತನ ಸೇವೆಯನ್ನು ಕೈಕೊಳ್ಳುವಳು. ಒಂದು ರೀತಿಯಲ್ಲಿ ಇದು ಈಕೆಯನ್ನು ಉದ್ಧಾರಗೊಳಿಸಲು ಮಾಡಿದ ಪ್ರಯತ್ನವೆಂದು ಭಾವಿಸಬಹುದು. ಇನ್ನೂ ಒಂದು ಪ್ರಶ್ನೆ ಉಂಟಾಗುತ್ತದೆ. ಹಟ ತೊಟ್ಟ ಮಾತಂಗಿಯಾದರೂ ಸಾಧಿಸಿದ್ದು ಏನು? ಕುಮಾರರಾಮನ ಸಂದಲೆಯನ್ನು ಕಂಡಾಗ ಸುಲ್ತಾನನು ತುಂಬ ಅಸಮಾಧಾನಗೊಂಡು ಶೋಕಿಸುವನು. ಅವನಿಗೆ ಜೀವಸಹಿತನಾದ ಕುಮಾರರಾಮನು ಬೇಕಿತ್ತು. ಅವನ ಮಗಳಾದ ಬಾಬಮ್ಮನಿಗಂತೂ ಮಾತಂಗಿಯ ಈ ಕೆಲಸ ಮಹಾ ದ್ರೋಹವೇ ಸರಿ. ಅದಕ್ಕಾಗಿಯೇ ಆಕೆ ಮಾತಂಗಿ ತನ್ನ ಹಿಂದಿನ ಜನ್ಮದ ಹಗೆಯೋ ಏನೋ ಎಂದು ರೋದಿಸುವಳು. ಒಟ್ಟಿನಲ್ಲಿ, ಕುಮಾರರಾಮನ ಅಂತ್ಯ ಸಂಭವಿಸಿದ್ದೊಂದೇ ಫಲ. ಉಳಿದ ಉದ್ದೇಶಗಳೆಲ್ಲ ಈ ಮೂಲಕ ವಿಫಲವಾದಂತೆಯೇ ಸರಿ. ಆದರೂ ಮಾತಂಗಿಯ ಪಾತ್ರಕಲ್ಪನೆ ಕಾವ್ಯದಲ್ಲಿ ಸ್ವಲ್ಪ ಅರ್ಥವತ್ತಾಗಿಯೇ ಬಂದಿದೆಯೆನ್ನಬಹುದು. ಕುಮಾರರಾಮನ ಮರಣಕ್ಕೆ ಸ್ತ್ರೀತ್ವವೆನ್ನುವುದು ಹೇಗೆ ನಿಮಿತ್ತವಾಗಿ ನಿಂತು ಆತನ ಪರಸ್ತ್ರೀ ಪೂಜ್ಯಭಾವನೆಯೇ ಅವನಿಗೆ ಹೇಗೆ ಮಾರಕವಾಗಿ ಪರಿಣಮಿಸಿತು ಎಂಬುದನ್ನು ಈ ಮೂಲಕ ಸಾಕಾದಷ್ಟು ಚಿತ್ರಿಸಿರುವಂತೆ ವಿದಿತವಾಗುತ್ತದೆ.

ಕುಮಾರರಾಮನ ಕಥೆಯಲ್ಲಿ ಕಂಡುಬರುವ ಬಾಬಮ್ಮನ ಪಾತ್ರ ಇತಿಹಾಸದ ದೃಷ್ಟಿಯಿಂದ ಅಬದ್ಧವೆನ್ನಿಸಿದರೂ ಕಾವ್ಯದ ದೃಷ್ಟಿಯಿಂದ ತುಂಬ ಆಕರ್ಷಕವಾಗಿದೆ. ಈಕೆಯ ಪ್ರೇಮ ಪ್ರಶಂಸಾರ್ಹವಾದುದು. ಅನ್ಯಮತೀಯಳಾದರೂ ಈಕೆಯ ಅನುರಾಗ ಅನನ್ಯಭಾವದಿಂದ ಕೂಡಿದ್ದು. ಕುಮಾರರಾಮನ ಪರಾಕ್ರಮವನ್ನು ಕೇಳಿ, ಆತನು ಹಿಂದುವೆಂಬ ಅಂಶವನ್ನೂ ಗಣಿಸದೆ ಈಕೆ ತನ್ನ ಒಲವನ್ನು ಆತನಿಗಾಗಿಯೇ ಮೀಸಲಿಡುವಳು. ಆತನ ರೂಪು ಚೆಲುವುಗಳನ್ನು ಚಿತ್ರದ ಮೂಲಕ ಕಂಡಮೇಲಂತೂ ಈ ಅನುರಾಗ ದೃಢವಾಗುವುದು. ಸುಲ್ತಾನನು ಮಗಳಿಗೆ ಅನೇಕ ಹಿತೋಕ್ತಿಗಳನ್ನು ಹೇಳಿ ಸ್ವಯಂವರವನ್ನು ಏರ್ಪಡಿಸಿದಂತೆ

ನಂಜುಂಡನು ನಿರೂಪಿಸಿರುತ್ತಾನೆ. ಆದರೆ ಬಾಬಮ್ಮನು ತನ್ನ ಒಲವನ್ನು ಬೇರಾರಿಗೂ ತೆರಲು ಸಿದ್ಧವಾಗಿರಲಿಲ್ಲ. ತರುವಾಯ ಸುಲ್ತಾನನು ಕಂಪಿಲನಿಗೆ ಹೇಳಿಕಳುಹಿಸಿ ನಿರಾಶನಾಗುವನು. ಆಗಲೂ ಬಾಬಮ್ಮ ಮೌನವಾಗಿ ತನ್ನಲ್ಲಿಯೇ ಮರುಗುವಳು. ಇವಳ ಪಾತ್ರ ಪುನಃ ನಮ್ಮ ಕಣ್ಣೆದುರಿಗೆ ಬರುವುದು ಕಡೆಯಲ್ಲಿಯೇ. ಕುಮಾರ ರಾಮನ ರುಂಡವನ್ನು ತಂದಾಗ ಬಾಬಮ್ಮನ ದುಃಖ ಹೇಳತೀರದು. ಅದನ್ನು ನೋಡಿ ನೋಡಿ ತನ್ನ ದುಃಖ ವನ್ನು ತೋಡಿಕೊಳ್ಳುವಳು. ಅದನ್ನು ಉಡಿಯಲ್ಲಿಟ್ಟುಕೊಂಡು ಸಹಗಮನವನ್ನು ಮಾಡಲು ಅನುಮತಿಯನ್ನು ಕೊಡಬೇಕೆಂದು ತಂದೆಯನ್ನು ಕೇಳಿಕೊಳ್ಳುವಳು. ಜನರ ಅವಹೇಳನೆಗಾಗಿ ಅಳುಕಿ ಸುಲ್ತಾನನು ಹಿಂತೆಗೆಯು ವನು. ಮಗಳಿಗೆ ನಾನಾ ಬಗೆಯಾಗಿ ಸಮಾಧಾನಮಾಡುವನು. ಕುಮಾರರಾಮನು ಸತ್ತರೂ ಆತನ ರುಂಡವು ಡಿಳ್ಳಿಗೆ ಕಂಟಕಪ್ರಾಯವಾಗಲು, ಅದನ್ನು ಕುಮ್ಮಟಕ್ಕೇ ಕಳುಹಿಸಬೇಕಾಗುವುದು. ಬಾಬಮ್ಮನ ಪರಿಶುದ್ಧವಾದ ಪ್ರೇಮ ಕೈಗೂಡದೆ ಹೋದರೂ, ಅದರ ವಿಫಲತೆಯಲ್ಲಿಯೇ ಆದಕ್ಕೆ ಮಹತ್ವವುಂಟು.

ಬಾಬಮ್ಮನ ಪಾತ್ರದ ಮಹಿಮೆಯನ್ನು ಹೆಚ್ಚಿಸುವ ಸಲುವಾಗಿ ನಂಜುಂಡನು ಇವಳು ಪೂರ್ವಜನ್ಮ ದಲ್ಲಿ ದ್ರೌಪದಿಯಾಗಿದ್ದಳೆಂದೂ, ಆಗ ಅರ್ಜುನನ ಪತ್ನಿಯಾಗಿದ್ದವಳು ಈಗಲೂ ಅವನ ಅವತಾರವನ್ನು ಅನುಸರಿಸಿ ಏಕಪತಿಯ ಸುಖವನ್ನು ಅನುಭವಿಸಲು ಜನ್ಮವೆತ್ತಿ ಬಂದಳೆಂದೂ ಹೇಳಿರುತ್ತಾನೆ. ಗಂಗನ ಒಂದು ಪ್ರತಿಯಲ್ಲಂತೂ (ಗಂ. ೩) ಬಾಬಮ್ಮನ ಹತಾಶೆಯನ್ನು ನೋಡಿ ಸಹಿಸಲಾರದೆ ದೇವತೆಗಳು ಕುಮಾರರಾಮ ನನ್ನೂ ಆಕೆಯನ್ನೂ ದೇವಲೋಕದಿಂದ ಮತ್ತೆ ಭೂಲೋಕಕ್ಕೆ ಕಳುಹಿಸಿದಂತೆಯೂ, ಅವರು ಕೆಲವು ಕಾಲ ಸುಖದಿಂದಿದ್ದು ಅನಂತರ ಮುಕ್ತಿಯನ್ನು ಪಡೆದರೆಂದೂ ವರ್ಣಿತವಾಗಿದೆ. ಇದರಿಂದ ಕಥೆ ಬೆಳೆಯಿತೇ ಹೊರತು ಮಹತ್ವಕ್ಕೆ ಬೆಲೆ ಬಂದಂತಾಗಲಿಲ್ಲ. ಆದ್ದರಿಂದ, ಈ ಕಲ್ಪನೆಗಳಾವುವೂ ಕಾವ್ಯಕ್ಕೆ ಅಷ್ಟೇನೂ ಪೋಷಕವಾಗ ಲಾರವು.

ಮನುಷ್ಯವರ್ಗದಲ್ಲಿ ಹೇಗೆ ಹಲವಾರು ಪಾತ್ರಗಳು ವಿಶಿಷ್ಟವಾಗಿ ಮೂಡಿ ಕಾಣುತ್ತವೆಯೋ ಹಾಗೆಯೇ ಕುಮಾರರಾಮನ ಕೃತಿಗಳಲ್ಲಿ ಆತನ ಅಚ್ಚುಮೆಚ್ಚಿನ ಕುದುರೆಗೆ ಒಂದು ಗಣ್ಯ ಸ್ಥಾನವುಂಟು. ಇದನ್ನು ಗಂಗ ಮತ್ತು ಮಹಲಿಂಗಸ್ವಾಮಿಗಳು ಬೊಲ್ಲನೆಂದು ಕರೆದಿದ್ದಾರೆ. ಇದು ಜನ್ಮತಃ ವಿಶಿಷ್ಟವಾದ ಪಂಕ್ತಿಗೆ ಸೇರಿದ್ದು. ಒಂದ ಎರೀತಿಯಲ್ಲಿ, ಇದು ಕೆಟ್ಟ ನಕ್ಷತ್ರದಲ್ಲಿ ಹುಟ್ಟಿತೆಂದು ಮುಂಗುಲಿರಾಯನೂ ಸುಲ್ತಾನನೂ ಭೀತಿಪಟ್ಟು ತಮ್ಮಲ್ಲಿ ಇಟ್ಟುಕೊಳ್ಳಲು ಹೆದರಿದರೆ, ಇದನ್ನು ಯಪ್ಪತ್ತುರಾಯನು ತನ್ನ ಬಳಿಯಲ್ಲಿಟ್ಟುಕೊಂಡು ಆದರ ದಿಂದ ಸಲಹುವನು. ಆದರೂ ಈ ಕುದುರೆ ಎಂದಿದ್ದರೂ ಕುಮಾರರಾಮನಿಗೆ ಮೀಸಲಾದದ್ದು. ಆದ್ದರಿಂದ, ಇದನ್ನು ಕುಮಾರರಾಮನು ತನ್ನ ಸಾಹಸದಿಂದಲೇ ಸಂಪಾದಿಸಿಕೊಳ್ಳುವನು. ನಂಜುಂಡನಲ್ಲಿ ಈ ಕ್ರಮ ಬೇರೆಯಾಗಿದೆ. ಇಂದ್ರನ ಉಚ್ಚೈಶ್ರವಸ್ಸಿನ ಅಂಶವೇ ಇದು! ಅತ್ಯಂತ ವಿಸ್ಮಯಕಾರಿಯಾಗಿ ಹುಟ್ಟಿಬಂದ ಈ ಕುದುರೆಯನ್ನು ಯಾರೂ ಪಳಗಿಸಲು ಸಾಧ್ಯವಾಗುವುದಿಲ್ಲ. ಆಗ ಕುಮಾರರಾಮನು ಈ ದಿವ್ಯಾಶ್ವವನ್ನು ತಾನು ಪಳಗಿಸಿ ಪಡೆಯುವನು. ಒಟ್ಟಿನಲ್ಲಿ, ಕುಮಾರರಾಮನ ಕುದುರೆ ಮಹಿಮಾಪೂರ್ಣವಾದುದು. ಇದು ತನ್ನ ಒಡೆಯನಷ್ಟೇ ಶಕ್ತಿಸಾಹಸಗಳನ್ನುಳ್ಳದ್ದು. ರಣರಂಗದಲ್ಲಿ ಇದರ ಮುಂದೆ ಯಾರೂ ನಿಲ್ಲಲಾರರು. ಇದರ ಹೇಷಾರವ ಸಿಂಹಗರ್ಜನೆಯಷ್ಟು ಭಯಂಕರವಾದದ್ದು. ಇದರ ಆರ್ಭಟಕ್ಕೆ ಯಾರೂ ಪ್ರತಿಭಟಿಸಿ ನಿಲ್ಲ ಲಾರರು. ಮೂರು ಜನ ಕವಿಗಳೂ ಈ ಕುದುರೆಯ ಕಾದಾಟವನ್ನು ಚೆನ್ನಾಗಿ ಚಿತ್ರಿಸಿರುತ್ತಾರೆ. ನಂಜುಂಡನ ನಿರೂಪಣೆಯಲ್ಲಂತೂ ಮಹಾಭಾರತದಲ್ಲಿ ಬರುವ ಸುಪ್ರತೀಕಗಜದ ಹೋರಾಟದ ಪ್ರತಿಬಿಂಬವೇ ಕಂಡುಬರು ತ್ತದೆ. ಪಂಪನನ್ನೋ ಕುಮಾರವ್ಯಾಸನನ್ನೋ ನೆನೆಯುವಂತಾಗುತ್ತದೆ. ಕಾದಂಬರಿ ಕಾವ್ಯದ ಇಂದ್ರಾಯುಧ ದಂತೆ ಇದು ಅಸಾಮಾನ್ಯವಾದುದು. ಈ ಬೊಲ್ಲನಿಗೆ ಆರು ತಿಂಗಳ ಕಾಲ ತನ್ನ ಸ್ವಾಮಿಯ ಸಂದರ್ಶನವಾಗದೆ ಹೋಗಲು ಇದು ಉಪವಾಸವಿದ್ದಿತಂತೆ. ವೇಷಮರೆಸಿಕೊಂಡಿದ್ದರೂ ತನ್ನ ಸ್ವಾಮಿಯನ್ನು ಕ್ಷಣಮಾತ್ರದಲ್ಲಿ ಗುರುತಿಸಬಲ್ಲ ಬುದ್ಧಿವಂತಿಕೆ ಇದಕ್ಕಿದೆ. ಕಡೆಕಡೆಯಲ್ಲಿ ಒಡೆಯನ ಅಂತ್ಯಕಾಲ ಸಮೀಪಿಸಿದಾಗ ಇದರ

ಯಾತನೆ ಅನಿರ್ವಚನೀಯ. ರಾಮನು ಇದರ ಹೆಗಲನ್ನು ಬಿಟ್ಟು ಇಳಿಯುವುದೇ ತಡ, ಇದು ತನ್ನ ಪ್ರಾಣವನ್ನು ಬಿಟ್ಟಿತೆಂದು ನಂಜುಂಡನೂ ಗಂಗನೂ ನಿರೂಪಿಸಿರುತ್ತಾರೆ. ಮಹಲಿಂಗಸ್ವಾಮಿಯಲ್ಲಿ ಕಥೆ ಸ್ವಲ್ಪ ಮುಂದುವರಿಯುತ್ತದೆ. ಇದರ ಕೋರಿಕೆಯ ಮೇರೆಗೆ ರಾಮನ ಅನುಗ್ರಹದಿಂದಲೇ ಶಿಲೆಯಾಗಿ ಪರಿಣಮಿಸುತ್ತದೆ. ಜೈಮಿನಿಭಾರತದ ಕಥಾಸರಣಿಯನ್ನು ಅನುಸರಿಸಿದಂತಿರುವ ಈ ಕವಿ ಈ ಸಂದರ್ಭವನ್ನು ಹೀಗೆ ಪರಿವರ್ತಿಸಿರುವುದು ಸಹಜವೇ ಸರಿ! ಅಂತೂ ಈ ವಿಸ್ತಾರವಾದ ಕಾವ್ಯಪ್ರಪಂಚದಲ್ಲಿ ಬೊಲ್ಲನ ಹೆಸರು ಕುಮಾರರಾಮನೊಂದಿಗೆ ಸರ್ವದಾ ಕೇಳಿಬರುತ್ತದೆ. ಕುಮಾರರಾಮನನ್ನು ಕುರಿತ ಕೈಫಿಯತ್ತುಗಳಲ್ಲಿಯೂ ಈ ಕುದುರೆಗೆ ಎಡೆಯುಂಟು. ಇದು ಇಟ್ಟ ಪಾದದ ಗುರುತು ಇಂದಿಗೂ ಕುಮ್ಮಟದುರ್ಗದಲ್ಲಿಯೂ, ಕುರುಗೋಡಿನ ಬಳಿಯೂ ಇದೆಯೆಂದು ಪ್ರತೀತಿ. ಬೊಲ್ಲನದುರ್ಗ, ಬೊಲ್ಲನ ಕಣಿವೆ ಎಂಬ ಹೆಸರುಗಳೊಂದಿಗೆ ಇದರ ಕೀರ್ತಿ ಅಮರವಾಗಿದೆ.

ಈವರೆಗೆ ಪರಿಶೀಲಿಸಿದ ಈ ಪಾತ್ರಸಮುದಾಯದಲ್ಲಿ ಹೇಗೆ ಒಂದು ಬಗೆಯಾದ ವಿಶಿಷ್ಟತೆಯೂ, ವೈವಿಧ್ಯವೂ, ಸತ್ವವೂ ಇವೆಯೆಂಬುದನ್ನು ಕಾಣಬಹುದು. ಶಿಷ್ಟರು, ದುಷ್ಟರು, ವೀರರು, ಭೀರುಗಳು ; ಸಾಧುಗಳು, ದ್ರೋಹಿಗಳು ; ತ್ಯಾಗಿಗಳು ಅನುರಾಗಿಗಳು ಇವರೇ ಮೊದಲಾದ ಎಲ್ಲ ರೀತಿಯ ಜನರೂ ಕಂಡುಬರುತ್ತಾರೆ. ಇತಿಹಾಸಪುರುಷರು ಐತಿಹ್ಯ ವ್ಯಕ್ತಿಗಳಾಗುವಮಟ್ಟಿಗೆ ಮಹಿಮಾವಂತರೂ ಅವತಾರಕಲ್ಪಿತರೂ ಆಗಿರುವುದನ್ನೂ ಕಾಣಬಹುದು. ಕೆಲವು ಪಾತ್ರಗಳು ಕಾವ್ಯದ ಆದಿಯಿಂದ ಅಂತ್ಯದವರೆಗೆ ವ್ಯಾಪಿಸಿದ್ದರೆ, ಇತರ ಪಾತ್ರಗಳು ಅಯಾ ಸಂದರ್ಭಗಳಲ್ಲಿ ಮಿನುಗಿ, ಮಿಂಚಿ, ಕ್ಷಣಕಾಲ ಬೆಳಗುತ್ತವೆ. ಪ್ರೌಢ ಕವಿಯಾದ ನಂಜುಂಡನಿಂದ ಮೊದಲ್ಗೊಂಡು ಜನಸಾಮಾನ್ಯ ಕವಿಗಳೆನ್ನಬಹುದಾದ ಗಂಗ ಮತ್ತು ಮಹಲಿಂಗಸ್ವಾಮಿಗಳವರೆಗೆ ಈ ಪಾತ್ರಗಳು ಒಂದಲ್ಲ ಒಂದು ತೆರನಾಗಿ ಮನಸೆಳೆಯುವಂತೆ ನಿರೂಪಿತವಾಗಿವೆ.

## ಶೈಲಿ

ಕವಿಯ ಸ್ವಭಾವಕ್ಕೆ ಅನುಗುಣವಾಗಿ ಆತನ ಶೈಲಿಯೂ ವಿಶಿಷ್ಟವಾಗಿರುತ್ತದೆಯಷ್ಟೆ. ಕವಿಯಾದವನು ಸ್ವಾನುಭವದಿಂದಲೂ, ಇತರರ ಕೃತಿಗಳನ್ನು ಅಭ್ಯಾಸಮಾಡುವುದರಿಂದಲೂ ತನ್ನ ಕೃತಿರಚನೆಗೆ ತಕ್ಕ ಸಾಮರ್ಥ್ಯವನ್ನು ಸಂಪಾದಿಸುತ್ತಾನೆ. ಆತನ ದೃಷ್ಟಿ ಪ್ರಾಚೀನ ಮತ್ತು ನವೀನ ಸಂಪ್ರದಾಯಗಳನ್ನು ಸಮನ್ವಯಗೊಳಿಸುವುದಕ್ಕೆ ಪ್ರಯತ್ನಿಸುತ್ತದೆ. ಆದ್ದರಿಂದ ಯಾವ ಪ್ರೌಢ ಕಾವ್ಯವನ್ನೇ ಆಗಲಿ ಓದಿ ನೋಡಿದಾಗ ಪರಂಪರಾನುಗತಿಕವಾಗಿ ಬಂದಿರುವ ಕವಿಸಮಯಗಳೂ, ಪಾಂಡಿತ್ಯಪೂರ್ಣವಾದ ಅಲಂಕಾರಾದಿಗಳೂ, ಕವಿಯ ಜೀವನಾನುಭವದ ಆಧಾರದ ಮೇಲೆ ರಚಿತವಾಗಿರುವ ಉಪಮಾನಗಳೂ ಆತನು ಕಂಡು ಕೇಳಿದ ನಾಣ್ಣುಡಿಗಳೂ ಗಮನಕ್ಕೆ ಬರುತ್ತವೆ. ಪ್ರಕೃತದಲ್ಲಿ, ನಂಜುಂಡನು ಬಹುಮಟ್ಟಿಗೆ ವಿದ್ವಜ್ಜನಪ್ರಿಯನಾದ ಕವಿಯಾಗಿರುವುದರಿಂದ ಆತನಲ್ಲಿ ಪಂಡಿತಪ್ರಿಯವಾದ ಕವಿಸಮಯಗಳು, ವಿವಿಧ ಅಲಂಕಾರ ಚಮತ್ಕಾರಗಳು, ಪ್ರಾಚೀನಕವಿಪ್ರಿಯವಾದ ಉಪಮಾನಾದಿಗಳು ಕಂಡುಬರುತ್ತವೆ. ಅಲ್ಲದೆ, ಆತನ ಅನುಭವಕ್ಕೆ ಬಂದ ಇತರ ಸಾಮತಿಗಳು ಹೋಲಿಕೆಗಳು ಕಾವ್ಯದ ಸ್ವಾರಸ್ಯವನ್ನು ಹೆಚ್ಚಿಸಿರುತ್ತವೆ. ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಗಳ ಬರೆವಣಿಗೆಯಲ್ಲಿ ಅವರವರ ಶಕ್ತ್ಯನುಸಾರ ಉಪಮಾನಗಳೂ ಗಾದೆಗಳೂ ವಿಶೇಷವಾಗಿ ಗೋಚರವಾಗುತ್ತವೆ. ಹೆಚ್ಚಿನ ಅಧ್ಯಯನದ ಮೂಲಕ ಸಾಧಿಸಬಹುದಾದ ಅಲಂಕಾರ ಚಮತ್ಕಾರಗಳು ಕಡಮೆ. ಒಬ್ಬೊಬ್ಬ ಕವಿಯನ್ನೂ ಆರಿಸಿಕೊಂಡು ಕೆಲವು ಅಂಶಗಳನ್ನು ಕುರಿತು ಇಲ್ಲಿ ಪರಿಶೀಲಿಸಲಾಗಿದೆ.

ಉಪಮಾನಗಳು ಕವಿಯ ಪ್ರತಿಭೆಯನ್ನು ಪರಿಚಯಮಾಡಿಕೊಡುವ ಮುಖ್ಯ ಸಾಧನಗಳು. ನಂಜುಂಡನ ರಚನೆಯಲ್ಲಿ ಚಿರಪರಿಚಿತವಾದ ಉಪಮಾನಗಳೂ ಹೊಸಹೊಸದಾದ ಉಪಮಾನಗಳೂ ಕೂಡಿ

ಕೊಂಡು ಬರುತ್ತವೆ. ತನ್ನ ಕಥಾನಾಯಕನನ್ನು ಅರ್ಜುನನ ಅವತಾರವೆಂದು ನಂಬಿರುವ ಈ ಕವಿ ಕುಮಾರ ರಾಮನನ್ನು ವರ್ಣಿಸುವಾಗ ಅನೇಕ ಬಾರಿ ಭಾರತ, ರಾಮಾಯಣ, ಭಾಗವತಗಳಿಗೆ ಸಂಬಂಧಿಸಿದ ಉದಾ ಹರಣೆಗಳನ್ನು ಕೊಟ್ಟು ಚಿತ್ರಿಸಿರುತ್ತಾನೆ. ಆದ್ದರಿಂದ ಈತನ ಉಪಮಾನಗಳನ್ನು ಬೇರೆಬೇರೆ ಗುಂಪುಗಳನ್ನಾಗಿ ವಿಂಗಡಿಸಿಕೊಂಡು ವಿಚಾರಿಸಬಹುದು.

ಪ್ರಾಚೀನ ಕವಿಗಳನ್ನು ಹೃತ್ಪೂರ್ವಕವಾಗಿ ಸ್ತುತಿಸಿರುವ ನಂಜುಂಡನಿಗೆ ಅವರ ರೀತಿ ರಚನೆಗಳು ಮೇಲ್ಪಂಕ್ತಿಯಿದ್ದಂತೆ. "ನೀರ ತೊಲಗಿಸಿ ಪಾಲ್ಗುಡಿವ ಹಂಸೆಯವೊಲುದಾರಗುಣಗಳಿಗೊಲಿವುತ", "ಧರೆ ಬೆಸಲಾದಂತೆ ಬಂದ ಸುರಿತ್ರಾಣಬಲಕಂಜದೆ", "ಮೇಘನಿನದವ ಕೇಳಿದ ಕೇಕಿಯ ವನಿತೆಯಂತೆ", "ಸುರುಚಿರ ವದನವೆಸೆದುದು ಶೈವಾಲಂಬೊರೆದಂಬುಜದಂತೆ ಕಣ್ಗೆ", "ನೀರದ ನಿನದವ ಕೇಳ್ದ ಸಾಮಜವೈರಿ ಯಂದದಲಿ", "ಬೆಟ್ಟಗಳನು ಸುರಪತಿ ವಜ್ರದಿಂ ಕಡಿದಟ್ಟೆ ಬೆನ್ನಟ್ಟುವಂದದಲಿ", "ರಾಹು ಚಂದ್ರನ ತಾಗುವಂತೆ", "ಗಿರಿಯ ಮೋಹರವ ಗೀರ್ವಾಣೇಂದ್ರ ಪೊಗುವಂತೆ", "ಸಿಂಗದಶಿಶುವನಾನೆಯ ಜಂಗುಳಿ ಬಂದು ಪಿಂಗದೆ ಬಳಸಿಕೊಂಬಂತೆ", "ಅಱತ ಚಕೋರ ಜೊನ್ನಮನುಱ್ ಬಯಸುವ ತೆಱದಿಂದ", "ಇರುಳಿನ ಜಕ್ಕವಕ್ಕಿಯ ಪೆಂಡತಿಯಂತಳಲಿದಳು", "ವಡಬಾಗ್ನಿಯನೊಳಗಂಗೀಕರಿಸಿರ್ದ ಕಡಲಂತೆ"– ಇವೇ ಮೊದಲಾದ ಸುಪ್ರಸಿದ್ಧವಾದ ಪ್ರಯೋಗಗಳು ಕಾವ್ಯದ ಉದ್ದಕ್ಕೂ ಕಂಡುಬರುತ್ತವೆ.

ಪೌರಾಣಿಕ ದೃಷ್ಟಾಂತಗಳನ್ನು ನೋಡಿದರೆ ಕವಿಗೆ ಭಾರತದ ಮೇಲೆ ಹೆಚ್ಚಿನ ಅಭಿಮಾನವಿದ್ದಂತಿದೆ. ತನ್ನ ಕಥಾನಾಯಕ ಅರ್ಜುನನ ಅಂಶವಾದ್ದರಿಂದ ಪುನಃ ಪುನಃ ಭಾರತದಿಂದ ಉದಾಹರಣೆಗಳನ್ನು ಆರಿಸಿ ಕೊಟ್ಟಿರುವನು. ರಾಮನ ಸಾಹಸಕ್ಕೆ ಸಂಬಂಧಿಸಿದ ಕೆಲವು ಸಾದೃಶ್ಯಗಳನ್ನು ನೋಡಬಹುದು. "ಕುರುಸೇನೆಗೆಂತೊರ್ವನೆ ಪಾರ್ಥನಿದಿರಾಗಿ ಧುರವನೆಸಗಿದನೆಂಬಾ ನರರ ಸಂದೇಹವ ಪರಿಹರಿಸಿದೆ", "ಮಲೆತನೇಕಾಂಗದೊಳಗೆ ಭೀಮ ಕೌರವಬಲಕಿದಿರಾಗಿ ನಿಂದಂತೆ", "ಗೋಗ್ರಹಣದೊಳು ಕೌರವಬಲವ ನುಗ್ರಕೋಪದೊಳೆಯ್ತಂದು ವಿಗ್ರಹದೊಳಗೆ ಜಯಿಸಿದನು", "ಮಾರುತಿಗೆಣೆ ಪಾರ್ಥಗೆ ಪಾಟ ತರಣಿ ಕುಮಾರಗೆ ಸರಿಯೆಂದೊರೆಯರೆ ಈ ರಾಮನನು", "ಅಂದು ಗೋಗ್ರಹಣದೊಳಗೆ ಕುರುಬಲಕಿಂದ್ರನಂದನ ಮಲೆತು ನಿಂದಂತೆ ಸುರುತ್ರಾಣಬಲಕೊರ್ವನೆ ರಾಮನಾದನು", "ಮುರಹರನಿಂದ್ರತನಯನಿಂದ ಕುರುರಾಯ ನುರುಸೇನಾಚಕ್ರವನು ಇರದೆ ಕೊಲಿಸಿದಂತೆ", "ಕೊಳುಗುಳದೊಳು ಕಾದಿ ರವಿಸೂನು ರಥ ಕಳಕುಳವಾಗ ಲಾತ್ಮಯೋಗದೊಳು ಬಳಿಸಂದು ನಿಂದ ತೆಱದೊಳು", "ಅಗಣಿತ ಶರಮಧ್ಯದೊಳಗಿರ್ದ ಭೀಷ್ಮನ ಬಗೆಯ ವೊಲಿರ್ದನಾ ರಾಮು". ಇದೇ ರೀತಿಯಾಗಿ ಇತರ ಸಂದರ್ಭಗಳಿಗೂ ಅನ್ವಯಿಸುವಂತೆ ಮಹಾಭಾರತದಿಂದ ಹೋಲಿಕೆಗಳನ್ನು ಕೊಟ್ಟಿರುತ್ತಾನೆ. ರಾಮಾಯಣ ಮತ್ತು ಭಾಗವತಗಳಿಂದ ಹೆಚ್ಚಾಗಿ ಆರಿಸಿಕೊಳ್ಳದಿದ್ದರೂ ಒಂದೆರಡನ್ನು ಗಮನಿಸಬಹುದು. "ಹನುಮನನಟ್ಟಿಯಾ ದಶರಥನಂದನ ದನುಜಾಧೀಶ ರಾವಣನ ಮೊನೆಯ ಮುಱಿದು ಮತ್ತವನ ಕೊಂದುದಿಲ್ಲವೆ ಮನುಜೇಶ ಕಳುಪು ನೀನೆನ್ನ" ಎಂಬುದಾಗಿ ಕಾಟಣ್ಣನು ಕಂಪಿಲನನ್ನು ಕೋರುವನು. "ಕಾಳಿಂದಿಯ ಪೊಗುವಂತೆ ಕಂಸಾರಿ ಗೋಪಾಲತನಯರೊಡಗೂಡಿ", "ಇಂಗಡಲಿಂದ ವೈಕುಂಠಕ್ಕೆ ಹರಿ ಪೋಪ ಭಂಗಿಯಿಂದಾ ರಾಯಕುವರ ತುಂಗಭದ್ರಾನದಿಯಿಂದಾ ನಗರಿಗೆ ಬೆಡಂಗಿನಿಂದೆಯಿದಿದನಿತ್ತ", "ಹದಿನಾಲ್ಕು ವರುಷದ ಹರೆಯದೊಳಾ ರಾಮನೊದವಿ ತಾಟಕಿಯ ಒದೆದು ನಡೆದ ತೆಱದಿಂದಾ ರಾಮನಾ ಸುದತಿಯನೊದಱೆ ನಡೆದನು", "ಪೆಂಡಿರ ಮಾತ ಕೇಳಿದ ರಾಮನಂತೆ"— ಇಂತೆಯೇ ಇತರ ಅನೇಕ ಪೌರಾಣಿಕ ಸಂದರ್ಭಗಳನ್ನು ಕಾವ್ಯದಲ್ಲಿ ಕಾಣಬಹುದು.

ಉಪಮಾನಗಳ ಮೂಲಕ ಒಮ್ಮೊಮ್ಮೆ ಅಪೂರ್ವವಾದ ಚಿತ್ರಗಳನ್ನು ಕಣ್ಣು ಮುಂದೆ ತಂದು ನಿಲ್ಲಿಸು ತ್ತಾನೆ. ಮಲ್ಲಿಗೆಯ ಹೂವಿನ ಸಮೂಹವನ್ನೇ ಕಂಡಾಗ "ಚಿತ್ತಜಕೀರ್ತಿಲತೆಯ ಬಿತ್ತುಗಳವೊಲು ಚಿತ್ರಕಾ ನಂದವನೀವ ಒತ್ತಿನ ಮುಗುಳು ಮಲ್ಲಿಗೆಯವಂಗಡವೆಸೆದತ್ತಾ ಸುರವನದೊಳಗೆ" ಎನ್ನುವನು. ಅದೇ ಹೂ

ದೋಟ "ಅಳಿಗಳ ಜೇವಣಶಾಲೆಯಂಗಜವೀರನಲಗಿನಶಾಲೆ ಬಾಲೆಯರ ಬೆಳುನೋಟ ಸಿರಿಯ ಬಿನದಶಾಲೆ" ಯಂತೆ ಇದ್ದಿತು ಎನ್ನುವನು. ಬಿಳಿಯ ಬಾವುಟಗಳು "ಗಗನ ಗಂಗೆಯು ಪರಿಕಾಲ್ಗಳ ಪರಿಯಂತೆ" ಇದ್ದುವಂತೆ. ಕೋಟೆಯ ತೆನೆಗಳು "ನಗರಲಕ್ಷ್ಮಿಯ ಪೊಱಕಾವಲ ಮಾರಿಯ ನೆಗೆದ ಪಲ್ಗಳ ಪಂಕ್ತಿಯಂತೆ" ಇದ್ದುವು ಎನ್ನುತ್ತಾನೆ. ರಾಮನ ವೀರೋತ್ಸಾಹವನ್ನು ಬಗೆಬಗೆಯಾಗಿ ಹೊಗಳಿರುವ ಈ ಉಪಮಾನಗಳ ಸೊಗಸನ್ನು ನೋಡಿ: "ಕಾಲಾಳೆಂದೆಂಬ ಕದಳಿವನವನು ಲೀಲೆಯಿಂ ಮುಱಿದೀಡಾಡಿ ಕಾಳಗದೊಳು ನಲಿದುದು ರಾಮನೆಂಬಾಭೀಳ ಮದೋನ್ಮದ ದಂತಿ", "ಕೂರಾನೆಗ(ಳುಗ?)ಳೆಂಬ ಕಾಡಾನೆಗಳ ವಿದಾರಿಸಿ ಬಿಡದೆ ಬೆಂಬತ್ತಿ ಓರಂತೆ ಪರಿದಾಡಿದುದು ರಾಮನೆಂದೆಂಬೀ ವಾರಣವೈರಿ ರಣದೊಳು", "ತುಱುಗಿದ ತುರಗಗಳೆಂದೆಂಬ ಪಶುಗಳ ಮುಱಿದಿಕ್ಕಿ ರಣವೆಂದೆಂಬ ತುಱುಪಟ್ಟಿಯೊಳ್ ರಾಮನೆಂದೆಂಬ ಪೆರ್ಬುಲಿ ಬಿಱುವರಿದುದು", "ಸುರುತಾಳಬಲವೆಂದೆಂಬ ಕತ್ತಲೆಯನೊತ್ತರಿಸಿ ರಣಾಂಕಣವೆಂಬ ವರ ಗಗನಾಂಗಣದೊಳು ರಾಮನೆಂದೆಂಬ ತರಣಿ ಬಿಡದೆ ತೊಳಲಿದುದು". ಈ ಎಡೆಗಳಲ್ಲಿ ಉಪಮಾನಗಳನ್ನು ಲಂಬಿಸಿ ಹೇಳಿರುವುದರಿಂದ ಅವು ಹಳೆಯದಾದರೂ ಮನಸೆಳೆಯುತ್ತವೆ.

ಈ ಅಪಾರವಾದ ಪ್ರಾಚೀನ ಪ್ರಯೋಗಗಳ ಮಧ್ಯೆ ಒಮ್ಮೊಮ್ಮೆ ಹೊಸ ಹೊಸ ಹೋಲಿಕೆಗಳನ್ನು ಕಂಡಾಗ ಯಾರಿಗಾದರೂ ಆನಂದವಾಗದೆ ಇರದು. ಅವುಗಳಲ್ಲಿ ಕೆಲವನ್ನಾದರೂ ಇಲ್ಲಿ ಪರಿಶೀಲಿಸಬಹುದು. "ಧುರದೊಳೆಚ್ಚಾಡಿ ಬಿಲ್ಲವರು ಬರೆಯಿಸಿಕೊಂಡರು ತಲೆಗಳ ಕಾಲನ ಕರಣಿಕರುಗಳ ಕೈಯಿಂದ", "ಕಡಿಖಂಡವಾದ ಸುಭಟರ ಸಂದಣಿಸಿದ ಮೈಯ ಖಂಡಗಳು ರಣದೇವತೆ ಮುಡಿದೀಡಾಡಿದ ದಾಸಣ ಹೂಗಳಂತೆ ಮೆಱೆದವು", "ತೆಲುಗರ ಮೋಹರವಿದೆ ಮೇರೆಯ ಮಿಱಿದ ಜಲನಿಧಿಯಂತೆ ಕಂಪಿಲನ ಬಲವಿದೆ ಬೆಂಚೆಯುವೊಲು", "ಮಸೆದಲಗಿನ ಬಲ್ಲೆಯಗಳ ಮೊನೆಯ ನಡುವೆಸೆದನು ಮೋಹರದೊಳಗೆ ಅಸಿಪಂಜರದ ನಡುವಣ ಯೋಗಿಯ ಪೊಚ್ಚ ಪೊಸಬಗೆಯಂತಾ ರಾಮು", "ಅಗ್ನಿಯ ಮೇಲೆ ತುಪ್ಪದ ತುಂತುಱು ಬಿದ್ದಂತವಳ ಅಂತರಂಗದೊಳಂಗಜಾಗ್ನಿ ಪೊಗೆವುತೋರಂತೆ ಪೆರ್ಚಿದುದು", "ಹೊನ್ನಂಬನೀರೊಳೆಚ್ಚಂತಾದಪುದು", "ಸರಸಕಲಾಪ್ರೌಢೆಗೆ ತಂಗಿ ನಿನಗಾನೊರೆವುದು ನೀತಿವಾತುಗಳ ಪರಿಮಳದಿಂಪನು ತುಂಬಿಗೆ ಪೇಳುವ ಪರಿಯಂತಾಗದೇನಿಹುದೆ", "ವಾರಣ ನುಂಗಿದ ಬೆಳಗಾಯಂತಾ ವಾರಿಜನೇತ್ರೆ ಎದೆಯೊಳು ಸಾರವಡಗಿದ ಕಾಮಾಗ್ನಿಯಿಂ ರಾಮನ ದೂರಿಸುತಿರ್ದಳೇನೆಂಬೆ", "ಒರ್ವ ಶಬರನೆಸೆದನು ಬಿಡದೆ ಕೋಣನನೇಱಿ ಪೋಪ ಕೃತಾಂತನಂತೆ", "ನಳಿನ ನಾಳದ ನೂಲಿಂದ ಸೊಕ್ಕಾನೆ ಬೆಂಬಳಿ ಸಂದುಬಹುದೆ ಚಿಕ್ಕಮ್ಮ". "ಕಾಟಣ್ಣ ಕೇಳು ನಾವಾಡಿದಿಂದಿನ ಲಗ್ಗೆಯಾಟ ಸಗ್ಗದ ಸೂಳೆಯರ ಕೂಟಕೆ ಕುಂಟಣಿಯಾಯ್ತು", "ಮಾಲೆಗಾತಿಯ ತೆಱದಿಂದ ಪುಸಿಯ ಪೂಮಾಲೆಯ ಕಟ್ಟಿ ಮಾಱಿದಳು", "ನಯವಿಲ್ಲದರಸಿನ ವಿಕ್ರಮ ತೈಲಾಶ್ರಯವಿರಹಿತ ದೀಪದಂತೆ", "ಮೃಗತೃಷ್ಣಾಂಬುವ ಬಂಜೆಯ ಮಗನಿಂದ ಮಿಗೆ ಪೊಯ್ಸಿ", "ಬಿಸಿಲ ಕುದುರೆಯ ಪಿಡಿದು ತಂದು ವಾದದ ಹೊಸಹೊನ್ನ ಕಡಿವಾಣಯಿಕ್ಕಿ", "ಚೆಲ್ಲಿತು ಪಾಳೆಯ ಕಂಡಕಡೆಗೆ ಗುಂಡುಗಲ್ಲು ನೀರೊಳು ಬಿದ್ದಂತೆ", "ಪಡಗಿನ ಪರದನಂದದೊಳಾ ಕಾಟಣ್ಣ ಹಿಡಿಗುದುರೆಯ ಸಾವಿರವನು ಬಿಡದೆ ಚಳತೆಮಾಡಿ ತಂದೊಪ್ಪಿಸಿದನಂದು", "ಮಾನವಮಿಯೊಳು ಮೇಳಾಪಿಸಿದಸಿಪೂಜೆಯನಾಂತ ವೇತಾಳನಂತೆಸೆದನಾ ರಾಮು", "ನೆಳಲು ನೆಳಲು ಸೋಂಕಿದಂತೆ ದೇವಸ್ತ್ರೀಯರೊಳಗೆ ದೇವತೆಗಳ ಕೂಟ", "ಆ ರಣಭೂಮಿ ನೀರ್ತೆಗೆದ ಬಲ್ಗಡಲಂತೆ ಕಣ್ಗೆ ಮೆಱೆದುದು", "ಜೋಳದ ಕೆಯ ಕಾಯಿಸುವೆನೆನುತ ಸುರುತಾಳನ ಭಟರ ಜಱೆದಳು"—ಈ ಮಾತುಗಳನ್ನು ನೋಡಿದರೆ ನಂಜುಂಡನು ಹೇಗೆ ಹೊಸ ಹೊಸದಾಗಿ ಸಾದೃಶ್ಯಗಳನ್ನು ಸೃಷ್ಟಿಸಬಲ್ಲನೆಂಬುದು ವಿದಿತವಾಗುತ್ತದೆ. ಇಂಥ ಸೂಕ್ತಿಗಳು ಬೇಕಾದಷ್ಟು ತೋರಿಬರುತ್ತವೆ.

ಈತನು ಪಂಡಿತಪ್ರಿಯವಾದ ಇತರ ಅಲಂಕಾರಗಳನ್ನೂ ಬಳಸಬಲ್ಲ. ಎಂಥ ಕವಿಗೇ ಆಗಲಿ ರೂಪ

ಕಾಲಂಕಾರವೆಂದರೆ ತುಂಬ ಮೆಚ್ಚು. ನಂಜುಂಡನೂ ಈ ಅಭಿಲಾಷೆಗೆ ಹೊರತೇನಲ್ಲ. ಬಡಾಯಿಯನ್ನು ಕೊಚ್ಚಿಕೊಳ್ಳುವ ಮಾತಿನಮಲ್ಲರನ್ನು ಕುರಿತು ಖಾನರು "ಹೇಳಲೇನಿವರು ನಾಲಗೆಗಣೆಯಿಂದೆಚ್ಚರೇಳೆಂಟು ಕೊಪ್ಪರಿಕೆಯನು" ಎನ್ನುತ್ತಾರೆ. ಕುಮಾರರಾಮನನ್ನು ಕಂಡ ತಾಯಿ "ಪುಳಕದ ಗುಡಿಗಟ್ಟಿದಳು ಮೈಯೊಳು ಕಣ್ಣಬೆಳಗಿನ ದೀಪನೆತ್ತಿದಳು ತಳುವದಾನಂದಾಶ್ರು ಜಲಪಿಡಿದಳಾ ನಳಿನವದನೆ ಸುತಗೆ" ಎಂಬುದು ಒಪ್ಪುವಂತಿದೆ. "ಕೋಳುವೋಯ್ತೆರ್ದೆಗೋಟೆ ಮನಸಿಜನೃಪನ ಕಾಲಾಳ ಕಾಲಾಟ ಮಸಗಿತು" ಎಂಬಲ್ಲಿ ವಿರಹಿಯ ಭಾವನೆ ಸ್ಪಷ್ಟವಾಗುತ್ತದೆ. "ಕಂಪಿಲನ ಕುಲವನ ಚೈತ್ರ ಕುಮಾರರಾಮುಗ" ಎಂಬ ಹೇಳಿಕೆ ತಂದೆ ಮಕ್ಕಳ ಸೌಭಾಗ್ಯವನ್ನು ಸಾರಿ ಹೇಳುವಂತಿದೆ. ಉತ್ಪ್ರೇಕ್ಷೆಗೂ ಎಡೆಯಿಲ್ಲದೆ ಇಲ್ಲ. "ತರಣಿಯ ಕುದುರೆ ಸೇನಾಪದ ಧೂಳಿ ಭರದಿಂದ ಹೊಲಬುದಪ್ಪಿಳೆಗೆಯಿರದೆಯ್ತಂದುದೆಂದೆನೆ ವೀರರಾಮನ ತುರಗ ವೆಸೆದುದು ಕಣ್ಗಳಿಗೆ", "ನೆತ್ತರಿಂ ಪೊರೆದಿಳೆ ಗಗನದೊಳ್ಪ್ರತಿಬಿಂಬಿಸಿತ್ತೆನೆ ಸಂಧ್ಯಾರಾಗಯೆತ್ತ ನೋಡಿದಡಾಗಸ ದೆಡೆಯೊಳಗೆಸೆದತ್ತದನೇನ ಬಣ್ಣಿಪೆನು?" "ಕೋಕಗಳ ವಿರಹಾಗ್ನಿಯ ಕರ್ಬೊಗೆ ಕವಿದತ್ತೆನಲಿರದೆ ಪರ್ವಿ ದುದಂಧಕಾರ"—ಇದೇ ರೀತಿ, ಇತರ ಕವಿಗಳಲ್ಲಿ ಕಂಡುಬರುವಂತೆಯೇ ಸೂರ್ಯೋದಯ ಸೂರ್ಯಾಸ್ತ ಗಳನ್ನು ಚಿತ್ರಿಸುವ ಉತ್ಪ್ರೇಕ್ಷೆಗಳು ಆಗಾಗ್ಗೆ ತೋರಿಬರುತ್ತವೆ. ನಂಜುಂಡನಿಗೆ ಒಂದು ತೆರನಾದ ಪ್ರತೀ ಪಾಲಂಕಾರದಲ್ಲಿ ಹೆಚ್ಚು ಅಭಿಮಾನವಿದ್ದಂತಿದೆ. ಉದಾಹರಣೆಗೆ, "ಪೊಳೆವ ಮೀನುಗಳಿವೆ ಪೊಳೆಯಿಲ್ಲ ತುಂಬಿಯ ಬಳಗಗಳಿವೆ ಬನವಿಲ್ಲ, ಥಳಥಳಿಸುವ ಚಂದ್ರನಿದೆ ರಾತ್ರಿಯಿಲ್ಲಯೆಂದೆಳಸಿ ನೋಡಿದರು ನೋಟಕರು." ರತ್ನಿಯ ಮುಖದ ವರ್ಣನೆಯಿದು. ಕಣ್ಣು, ಕುರುಳು, ಮುಖಗಳನ್ನು ಸುಪ್ರಸಿದ್ಧವಾದ ಮೀನು, ತುಂಬಿ, ಚಂದ್ರನಿಗೆ ಹೋಲಿಸಿದ್ದರೂ ಅವು ಉಪಮಾನ ವಸ್ತುಗಳಿಗಿಂತಲೂ ಮಿಗಿಲಾಗಿತ್ತೆಂದು ವರ್ಣಿಸಿರುತ್ತಾನೆ. ಇಂತೆಯೇ ರಾಮನ ಸೌಂದರ್ಯವನ್ನು ಚಿತ್ರಿಸುವಾಗ "ಅಲರ್ವಿಲ್ಲಿಲ್ಲದಂಗಜನಂತೆ ಬಜ್ಜರ ದಲಗಿಲ್ಲದಮರೇಂದ್ರನಂತೆ ಕಲೆಯಿಲ್ಲದಿಂದುವಿನಂತಲ್ಲಿಗೆಯ್ತಂದನಲಘುವಿಕ್ರಮ ರಾಮನಾಥ" ಎಂದು ಹೇಳುವನು. ಉಲ್ಲೇಖಾಲಂಕಾರವನ್ನು ಹೋಲುವ ಒಂದೆರಡು ನಿದರ್ಶನಗಳನ್ನು ಪರಿಶೀಲಿಸಬಹುದು. "ಸುರನಗದಂತೆ ಮಂದರದಂತೆ ರೋಹಣಗಿರಿಯಂತೆ ನವರತ್ನಗಳ ಸರಗಳಿಂ ಕನಕಕಳಸಗಳಿಂ ರಾಮನ ವರ ವೈಜಯಂತಿ ಮೆಱೆದುದು," "ಕುದುರೆಯೊ ಕುವರನ ಪೂರ್ವದ ಪುಣ್ಯದೊಂದುದಯವೊ ವಿಜಯಾಂಗನೆಯ್ಯ ಗದಕಿನ ರೂಪೊಯೆಂದೆನೆ ನೋಳ್ಪರ ಕಣ್ಗೆ ಮುದವಿತ್ತುದಾ ದಿವ್ಯವಾಜಿ," "ವಿನಯ ನಾಲಗೆಯನಾಂತುದೊ ವಿತರಣಗುಣ ತನುವಿಡಿದುದೊ ವೀರಧರ್ಮ ಮನುಜರೂಪಾಂತುದೊ ಎಂದು ಕೊಂಡಾಡದ ಜನಗಳಿಲ್ಲಾ ರಾಮನನು." ಸಂದೇಹಾಲಂಕಾರದ ಈ ಸೊಬಗನ್ನು ನೋಡಿ: "ರಾಮನೊ ದಶರಥರಾಮನೊ ಬಲಭದ್ರ ರಾಮನೊ ಗಂಡುಗೊಡಲಿಯ ರಾಮನೊ ಎಂದಿಂದ್ರ ಪೊಗಳಿದನು." "ಕಡುಕಾಮಿಗೆಲ್ಲಿಯ ಕುಲಶೀಲ," "ಕೆಟ್ಟರಸಿಗುಂಟೆ ಸಾಮಜ ತುರಗ ಪದಾತಿ," "ಮಕ್ಕಳಾಟಿಕೆ ಮಾರಿಯಾದುದು." "ಎಳೆವೆಣ್ಗಳೊಲಿ ದೊಡೆ ಹರಣವಳಿವುದನಱಿವರೆ"—ಮುಂತಾದ ಅರ್ಥಾಂತರನ್ಯಾಸಾಲಂಕಾರದ ಪಂಕ್ತಿಗಳು ಗಾದೆಗಳಂತೆ ಅಲ್ಲೊಮ್ಮೆ ಇಲ್ಲೊಮ್ಮೆ ಮನಸೆಳೆಯುತ್ತವೆ. "ಅವಳ ರೂಪಿಗವಳೆ ಸರಿಯಲ್ಲದೆ ದಿವಿಜಾಂಗನೆಯರೆಣೆಯಿಲ್ಲ" ಎಂಬಲ್ಲಿ ಅನನ್ವಯಾಲಂಕಾರದ ಪರಿಚಯವಾಗುತ್ತದೆ. "ಆ ರತಿ ಬಹುರೂಪನಾಂತಳೆಂಬಂತಿರಲಾರತಿ ವಿಡಿದೆಡೆವಿಡದೆ ಕೇರಿಕೇರಿಯೊಳು ಕಣ್ಗೆಸೆದರಲರ್ವಿಲ್ಲನ ನಾರಿಯರಂತೆ ನಾರಿಯರು" ಎನ್ನುವಲ್ಲಿ ಇರುವ ಯಮಕಾಲಂಕಾರವೂ ಸುಲಭವೇದ್ಯ. "ಸಿಂಗ ಸಿಡಿಲು ಕಿಡಿಗಳ ನೋಳ್ಪಡೆನಿತು ಮಾತಂಗ ಪರ್ವತ ಕಾನನಗಳಾ ಭಂಗಿಯೆನಿತು" ಎಂಬುದರಲ್ಲಿ ಯಥಾಸಂಖ್ಯಾಲಂಕಾರ ಸುಸ್ಪಷ್ಟವಾಗುತ್ತದೆ. ಹೀಗೆಯೇ ನಂಜುಂಡನ ಕಾವ್ಯವನ್ನು ಒಂದೇ ಸಮನಾಗಿ ನೋಡುತ್ತ ಹೋದರೆ ಬಗೆಬಗೆಯಾದ ಅರ್ಥಾಲಂಕಾರ ಶಬ್ದಾ ಲಂಕಾರಗಳು ಕಂಡುಬರುತ್ತವೆ.

ನಂಜುಂಡನು ಉದಾಹರಿಸಿರುವ ನಾಣ್ಣುಡಿಗಳು ಅವನ ಜೀವನಾನುಭವವನ್ನು ಸ್ವಲ್ಪಮಟ್ಟಿಗಾದರೂ

ಪರಿಚಯಮಾಡಿಕೊಡಬಲ್ಲವು. "ಕಳ್ಳಮಡಕೆಯ ಪೂಜಿಪವೊಲು ಚಿಲುಪಾಲುಳ್ಳ ಮಡಕೆಯ ಪೂಜಿಪರೆ," "ಹುಲಿಯುಪವಾಸ ಪಶುಗಳ ನೆರವಿಯಸುಗೊಳಿಸದೆ ಸುಮ್ಮನಿರ್ದಪುದೆ," "ಅಂಗೈಯ ನೆಲ್ಲಿಯ ಕಾಯಂತೆ ಲೋಕಂಗಳು ನಿನ್ನಜೀವಿನೊಳು ಪಿಂಗದೆ ನೆಲಸಿಹವು," "ಮೊಲದಾ ತಲೆಯ ಕೋಡಿವರು ತೆಗೆದರು," "ಕೊಲುವ ಹುಲಿಗೆ ಕೋಲುಗೊಂಡೆಗ್ಗನಂತೆ," "ಉಗುರಿಂದ ಪೋಪುದಕೇತಕೆ ಕೊಡಲಿಯ ತೆಗವೆ," "ಅರಸಿಂಗಾಱು ಬಾಯೆಂದೆಂಬ ಗಾದೆ," "ಬಲ್ಲಿದಗೆ ಬಟ್ಟೆ ಸಸಿನವದೆಂಬ ಗಾದೆ"—ಇಂಥ ಹೇಳಿಕೆಗಳು ಸಾಕಾದಷ್ಟಿವೆ.

ನಂಜುಂಡ "ಕಾವ್ಯವಿದ್ಯಾಪ್ರಚಯ ಪರಿಚಯ"ವನ್ನು ಚೆನ್ನಾಗಿ ಪಡೆದಿದ್ದವನು. ಹಿರಿಯ ಕವಿಗಳ ಕೃತಿಗಳನ್ನು ಓದಿ ಮನನ ಮಾಡಿದ್ದವನು. ಆದ್ದರಿಂದ ಈತನ ಮೇಲೆ ಇತರರ ಪ್ರಭಾವ ಬಿದ್ದಿರುವುದುಂಟು. "ಚೇತನಾಚೇತನವೆಂಬ ವಿವೇಕ ಕಾಮಾತುರಶೀಲರಿಗುಂಟೆ" ಎನ್ನುವ ವಾಕ್ಯವನ್ನು ಓದಿದಾಗ ಕಾಳಿದಾಸನ ನೆನಪಾಗದೆ ಇರದು. "ಕಾಲಾಗ್ನಿ ರುದ್ರ ಕೋಪಾಟೋಪದಿಂ ಪಾತಾಳದಿಂದೇಳ್ವ ತೆಜದೊಳು" ಎನ್ನುವುದು ರನ್ನನ ಉಕ್ತಿಯನ್ನೇ ಹೋಲುತ್ತದೆ. "ಸುರಕರಿ ಗಂಗಾಪುಳಿನತಳದೊಳು ಮೈಗರೆವಂತಾ ನೃಪತನಯ ಹರುಷ ದಿಂ ಪೋಗಿ ಪವಡಿಸಿದನತಿ ಮೃದುತರ ಸಿತತಳ್ಪದೊಳಂದು" ಎಂಬ ವರ್ಣನೆ ಜನ್ನನ ವಾಕ್ಯಸರಣಿಯನ್ನೇ ಹೋಲುತ್ತದೆ. ಬೇಟೆಯ ಸಂದರ್ಭ, ಬಾದುರಖಾನನು ಮುಂಗುಲಿರಾಯನ ಬಿಲ್ಲಿಗೆ ಹೆದೆಯೇರಿಸಿದ ಸನ್ನಿವೇಶ ಮೊದಲಾದ ಘಟನೆಗಳು ರಾಘವಾಂಕ, ಕುಮಾರವ್ಯಾಸ ಮೊದಲಾದವರ ಕಾವ್ಯಗಳಲ್ಲಿ ಬರುವ ಅಂತಹ ಪ್ರಸಂಗಗಳನ್ನೇ (ಉದಾಹರಣೆಗೆ, ಹರಿಶ್ಚಂದ್ರನ ಬೇಟೆ, ವೇಷಮರೆಸಿಕೊಂಡ ಅರ್ಜುನನು ಮತ್ಸ್ಯಯಂತ್ರ ವನ್ನು ಹೆದೆಯೇರಿಸಿದ್ದು) ಸ್ಮರಣೆಗೆ ತರುತ್ತವೆ. ಪಂಪನು ಅರಿಕೇಸರಿಯನ್ನೇ ಅರ್ಜುನನೆಂದು ಭಾವಿಸಿದರೆ ನಂಜುಂಡನು ಕುಮಾರರಾಮನನ್ನು ಅರ್ಜುನನ ಅಂಶವೆಂದು ಗ್ರಹಿಸಿರುತ್ತಾನೆ. ಹರಿಹರನ ಭಕ್ತಶಿರೋಮಣಿ ಗಳು ಕೈಲಾಸದಲ್ಲಿ ನಡೆದ ಯಾವುದೋ ಒಂದು ಘಟನೆಯ ಪರಿಣಾಮವಾಗಿ ಭೂಮಿಗೆ ಇಳಿದು ಬಂದಂತೆ ಕುಮಾರರಾಮನೂ ತನ್ನ ಪರದಾರಸೋದರತ್ವದ ಪರೀಕ್ಷಾರ್ಥವಾಗಿಯೇ ಜನ್ಮ ತಾಳುತ್ತಾನೆ. ನಂಜುಂಡನ ಶೈಲಿಯಲ್ಲಿ ಹಿರಿಯ ಕವಿಗಳ ಹಿರಿಮೆಯೂ ಸ್ವತಂತ್ರವಾದ ಕಾವ್ಯಶಕ್ತಿಯೂ ಸರಿಸಮನಾಗಿ ಕಂಡುಬರುತ್ತವೆ. ಆತನ ಕಾಲದಲ್ಲಿ ಪ್ರಚಲಿತವಾಗಿದ್ದ ಸಾಮಾನ್ಯ ಕಥೆಯೊಂದನ್ನು, ಅದು ಪುರಾಣೋಕ್ತವಲ್ಲದಿದ್ದರೂ, ಧೈರ್ಯ ದಿಂದ ವಸ್ತುವನ್ನಾಗಿಟ್ಟುಕೊಂಡು, ಅದರಲ್ಲಿ ರಸವನ್ನೂ ಭಾವವನ್ನೂ ತುಂಬಿ ಹೇಳಿರುವ ಕವಿಯ ಶೈಲಿ ಸಾಕಾ ದಷ್ಟು ಸ್ವಾದುವಾಗಿಯೂ ಶಕ್ತಿಯುಕ್ತವಾಗಿಯೂ ಇದೆ.

ಪಾಂಚಾಳ ಗಂಗನ ಕೃತಿ ಏಕರೀತಿಯಾಗಿ ಇಲ್ಲದೆ ಇರುವುದರಿಂದ ಇಲ್ಲಿ ಆತನ ವೈಶಿಷ್ಟ್ಯವನ್ನು ಕುರಿತು ಹೇಳುವುದು ಅಸಮಗ್ರವಾಗಬಹುದು. ಆದರೂ, ಈ ಸಂಬಂಧದಲ್ಲಿ ಆರಿಸಿಕೊಂಡಿರುವ ಮುಖ್ಯ ಪ್ರತಿ ಗಳಲ್ಲಿಯೂ, ಹಾಗೂ ಬೇರೆಬೇರೆ ಪ್ರಭೇದಗಳಲ್ಲಿಯೂ ಸಮಾನವಾಗಿ ತೋರಿಬರುವ ಪದ್ಯಗಳನ್ನು ಅವ ಲಂಬಿಸಿ, ಗಂಗನ ಶೈಲಿಯನ್ನು ಸ್ಥೂಲವಾಗಿಯಾದರೂ ಪರಿಚಯಮಾಡಿಕೊಳ್ಳಬಹುದು. ಸಾಧಾರಣ ಮಟ್ಟದ ಕವಿಯಾದರೂ ಈತನಲ್ಲಿಯೂ ಪೂರ್ವಕವಿಪ್ರಿಯವಾದ ಅನೇಕ ಭಾವನೆಗಳು ವಿದಿತವಾಗುತ್ತವೆ. "ಕದಳಿಯೊಳಗೆ ಮದಕರಿ ಹೊಕ್ಕು ತುಳಿವಂತೆ ಸದೆದನು ರಾಯ ರಾವುತರ," "ಸಿಡಿಲು ಪರ್ವತಕೆಯೆರಗುವಂತೆ ತರಿದರು ಕಡುಗಲಿ ರಾಮನ ಭಟರು," "ಖಂಡೆಯ ಝಳಪಿಸಿ ಕದನಕ್ಕೆ ನಡೆದನು ಹಿಂಡುಗಜಕೆ ಸಿಂಹದಂತೆ" —ಯುದ್ಧವನ್ನು ಕುರಿತು ಹೇಳಿರುವ ಈ ಹೋಲಿಕೆಗಳು ಹೊಸದೇನಲ್ಲ. "ಕಾಮನ ಪಟ್ಟದಾನೆಯು ಅರ್ತಿ ಯಿಂದಲಿ ಪ್ರೇಮದಿ ಶೃಂಗರಿಪಂತೆ ಕೋಮಲೆಯರು ಬಗೆಬಗೆ ನಾಣ್ಯವನಿಟ್ಟು ಸೀಮೆಯ ಹೊರವಂಟರಾಗ," "ಶಂಕೆಯಿಲ್ಲದೆ ಮದಗಜದಂತೆ ನಡೆದಳು ರಿಂಕಿದ ಕುಚವಲಗುತಲಿ," "ಉತ್ತಮ ದೇವಾಂಗ ವಸ್ತ್ರವನುಟ್ಟಳು ಚಿತ್ರದ ಪುತ್ಥಳಿಯಂತೆ"—ಈ ಸ್ತ್ರೀವರ್ಣನೆಗಳು ಸಾಂಪ್ರದಾಯಿಕ ವರ್ಗಕ್ಕೆ ಸೇರಿದುವೇ ಆಗಿವೆ. "ನಳಿನ ಪತ್ರದ ಜಲದಂತೆ ಕುಮ್ಮಟವಾಗ ಕಳವಳಿಸಿತು ಭಯಗೊಂಡು" ಎಂಬುದಂತೂ ಚಿರಪರಿಚಿತವಾದ ದೃಷ್ಟಾಂತ.

"ಇಳೆಬೆಸಲಾದಂತೆ ಹೊಳೆವ ನೇಮಿಯ ದಂಡು ಇಳಿಯಿತು ಮುಗಿಲಗಲದಲಿ" ಎನ್ನುವ ವಾಕ್ಯಸರಣಿಯೂ ಗೊತ್ತಿರತಕ್ಕದ್ದೆ. "ತಂಬಟೆ ಭೇರಿ ನಿಸ್ಸಾಳ ಸೂಳೈಸಲು ಕುಂಭಿನಿ ನಡುಗುವಂದದಲಿ" ಎನ್ನುವುದೂ ಮೇಲಿಂದ ಮೇಲೆ ಕೇಳಿದ ಮಾತೇ ಸರಿ! ಆದರೆ, ಇತರ ಕೃತಿಗಳ ಅಧ್ಯಯನದಿಂದ ಈ ರೀತಿ ಬಳಸಿರುವ ಉದಾಹರಣೆಗಳು ಹೆಚ್ಚಾಗಿಲ್ಲ. ಕವಿಸಮಯ, ಶಬ್ದ ಚಮತ್ಕಾರ, ಅಲಂಕಾರಪ್ರಯೋಗಗಳ ಉದ್ದೇಶ ಈ ಕವಿಗೆ ಬಹುಮಟ್ಟಿಗೆ ಇರುವುದಿಲ್ಲ.

ಈ ಕಾವ್ಯದ ಸರಳಶೈಲಿಗೆ ತಕ್ಕಂತೆ ಕವಿ ತನ್ನ ಅನುಭವಕ್ಕೆ ಸಹಜವಾದ ಅನೇಕ ಉಪಮಾನಗಳನ್ನು ಸಮಯೋಚಿತವಾಗಿ ಬಳಸಿರುತ್ತಾನೆ. ಅವುಗಳು ಸ್ವಾರಸ್ಯವಾಗಿಯೂ, ಒಮ್ಮೊಮ್ಮೆ ಹೊಚ್ಚ ಹೊಸದಾಗಿಯೂ ಇರುವುದುಂಟು. ಪ್ರತಾಪರುದ್ರನ ಆಸ್ಥಾನದಲ್ಲಿದ್ದ ಜಂಗಮರು "ಉತ್ತಮ ರಜತಗಿರಿಯನೊಪ್ಪವಿಟ್ಟಂತೆ" ಇದ್ದರು ಎನ್ನುವ ಚಿತ್ರ ಒಪ್ಪುವಂತಿದೆ. ಕುಮಾರರಾಮನು "ಚಪ್ಪನ್ನದೇಶದ ರಾಯರ ಮುಖಕೆಲ್ಲ ದರ್ಪಣ" ವಾಗಿದ್ದನಂತೆ! ಅಷ್ಟೇ ಅಲ್ಲ; ಮಗನ ರೂಪು ಲಾವಣ್ಯಗಳು ಅದ್ವಿತೀಯವಾಗಿದ್ದುದನ್ನು ಕಂಡ ಹರಿಯಾಲಮ್ಮ "ಜಗದೊಳು ಮಗನೆ ಕನ್ನಡಿಗೆ ಕನ್ನಡಿಯುಂಟೆ" ಎಂದು ಹೇಳುವುದು ಸರಳವಾದರೂ ತುಂಬ ಅರ್ಥವತ್ತಾಗಿದೆ. ಪ್ರತಾಪರುದ್ರನ ಸಮೀಪಕ್ಕೆ ಬಂದ ರಾಮನನ್ನು "ತಾರಕಿಯೆಡಗೆ ಚಂದ್ರಮ ಬಪ್ಪ ತೆರನಂತೆ, ಹಾರದೆಡೆಗೆ ಜೀವರತ್ನ" ಎಂದು ವರ್ಣಿಸಿರುವುದು ಬಳಕೆಯಲ್ಲಿರುವ ಮಾತಿಗೆ ಹೊಸ ಹೊಳಪನ್ನು ಕೊಟ್ಟಂತಿದೆ. ದಿಕ್ಕುಗೆಟ್ಟು ಚೆದರಿದ ದಂಡನ್ನು "ಗುಂಡು ಕವಡೆಯ ರಾಸಿಯ ಕೊಂಡ ತೆರನಂತೆ" ಆಯಿತು ಎನ್ನುವ ಕಲ್ಪನೆ ನವೀನವಾಗಿದೆ. ಹೀಗೆಯೇ, ಚೆಂಡಾಟದ ರಭಸಕ್ಕೆ ಸೂರ್ಯಚಂದ್ರರು ತಲ್ಲಣಿಸಿದ್ದಲ್ಲದೆ "ಬೆಟ್ಟವಂಜೋಡಿತಾಕ್ಷಣದಿ" ಎಂಬ ನಿರೂಪಣೆ ಬೆರಗುಗೊಳಿಸುತ್ತದೆ. ರತ್ನಿ ಕಂಪಿಲನಿಗೆ ಹೇಸಿ "ಮಳೆಗಾಲದಲ್ಲಿ ಮಲ್ಲಿಗೆ ಬಾಡಿದಂತೆ ಅಳಿದೆನು" ಎಂದು ಹೇಳುವಾಗ ಅವಳ ಜುಗುಪ್ಸೆಯೂ, "ಸೀರೆಯ ಸೆರಗನು ನಾರು ಸೀಳುವಂತೆ ಸೀಳಿ" ಎಂಬಲ್ಲಿ ಅವಳ ಕ್ರೋಧವೂ ತಾನಾಗಿಯೇ ವ್ಯಕ್ತವಾಗುತ್ತವೆ. ಕಡೆಯಲ್ಲಿ ಹಟ ತೊಟ್ಟು ನಿಂತ ರಾಮನು "ದುರ್ಗಕ್ಕೆ ಎನಗೆ ಮದುವೆ" ಎಂದು ಘೋಷಿಸುವುದು ಅವನ ವ್ಯಕ್ತಿತ್ವಕ್ಕೆ ತಕ್ಕಂತಿದೆ. ಕುಮ್ಮಟದ ಮುತ್ತಿಗೆಯನ್ನು ಕುರಿತು "ಕಾಲನ ಕಾಟವಾಯಿತು ಕುಮ್ಮಟಕಿನ್ನು ಲೀಲೆಯಾಯಿತು ಶೌರ್ಯದಲಿ" ಎಂದು ಹೇಳುವಾಗ ಕಾಳಗದ ಭೀಷಣ ಚಿತ್ರ ತಾನಾಗಿ ಕಣ್ಣಮುಂದೆ ಸುಳಿಯುತ್ತದೆ. ಕುಮಾರರಾಮನ ಕಾಳಗವನ್ನು ಕಂಡು ತತ್ತರಿಸಿದ ಮಾತಂಗಿಯ ದಂಡು "ಕಲ್ಲೊಳು ಕಾದಬಹುದು ರಾಮನ ಕೂಡೆ ನಿಲ್ಲಬಾರದು" ಎಂದು ನಿಟ್ಟುಸಿರುಬಿಡುವ ಬಗೆ ಸಂದರ್ಭಕ್ಕೆ ತಕ್ಕಂತಿದೆ. ರಾಮನನ್ನು ಬಿಟ್ಟು ಹೋಗಲಾರದ ಕಾಟಣ್ಣನನ್ನು ಕುರಿತು "ಸುಣ್ಣ ಸಾಸುವೆಯನು ಒಡಲೊಳು ಹೊಯ್ದಂತೆ ಅಣ್ಣ ಕಾಟಣ್ಣ ಹೊರಳಿದನು" ಎಂಬ ವರ್ಣನೆಯಾಗಲಿ, ಕೆಲಸವನ್ನು ಮುಗಿಸಿ ಓಡಿಬಂದ ಆತನನ್ನು "ಉರಿಗೊಂಡ ಪುತ್ತಳಿಯಂತೆ" ಇದ್ದನು ಎಂದು ಹೇಳುವುದಾಗಲಿ ಕವಿಯ ಸಾಮರ್ಥ್ಯವನ್ನು ಪ್ರಕಟಪಡಿಸುತ್ತವೆ. ಅಂಬುನಾಟಿದ್ದ ಕುಮಾರರಾಮನ ಚಿತ್ರವಂತೂ ಅಚ್ಚಳಿಯದಂತೆ ಉಳಿದುಕೊಂಡು ಬಂದಿದೆ. "ನೆಟ್ಟವು ಸರಳು ರಾಮಯ್ಯನ ಮೈಯೊಳು ಬೊಟ್ಟನೂರೋರೆ ತೆರಪಿಲ್ಲ" ಎನ್ನುವ ವಾಕ್ಯ ಯಾರನ್ನಾದರೂ ಒಲಿಸದೆ ಇರದು. ಈ ರೀತಿಯಾಗಿ ಗಂಗನು ಬಹು ಸರಳವಾದ ಮಾತುಗಳಲ್ಲಿ ತನ್ನ ಗುರಿಯನ್ನು ಸಾಧಿಸಿರುತ್ತಾನೆ. ಅವನೇ ಹೇಳಿರುವಂತೆ ಅವನ ಬರೆವಣಿಗೆ ಬಾಣದಂತೆ ನೇರವಾದದ್ದು; ಗೊತ್ತಾದ ಗುರಿಯುಳ್ಳದ್ದು ("ರಾಮನ ಕೃತಿಬಾಣವ ಉರ್ವಿಯೊಳೆಚ್ಚ ಗಂಗಯ್ಯ").

ಈತನು ಪೌರಾಣಿಕ ಉಪಮಾನಗಳನ್ನು ನಂಜುಂಡನಂತೆ ಹೆಚ್ಚಾಗಿ ಬಳಸದಿದ್ದರೂ ಒಮ್ಮೊಮ್ಮೆ ಸೂಕ್ಷ್ಮವಾಗಿ ಸೂಚಿಸುವುದುಂಟು. ರಾಮನ ಮುಂದೆ ನಿಲ್ಲಲಾರದೆ ಪದೇ ಪದೇ ಹಿಂತಿರುಗಿ ಬಂದ ತನ್ನವರನ್ನು ಕಂಡು ಸುಲ್ತಾನನು "ನೆತ್ತರ ಕಡಲ್ಬರಿವಂದದಿ ಪೊಯ್ವಾಗ ಹತ್ತುತಲೆಯ ರಾವಣನೆ" ಎಂದು ಚಕಿತನಾಗುತ್ತಾನೆ. ರಾಮನ ರೂಪು ಪರಾಕ್ರಮಗಳನ್ನು "ಕಾಳಗದಲಿ ಕಲಿಪಾರ್ಥನೊ ಭೀಮನೊ, ಆಳುತನದಿ

ಮನ್ಮಥನೊ" ಎಂದು ಒಂದೇ ಬಾರಿಗೆ ಹೇಳಿ ಹೊಗಳಿರುತ್ತಾನೆ. ಅಲಂಕೃತಳಾದ ಹೆಂಗಸೊಬ್ಬಳು "ಚಂದ್ರನ ವತ್ತಿನ ರೋಹಿಣಿಯಂತೆ" ಇದ್ದಳಂತೆ! ರಾಮನು ತನ್ನಲ್ಲಿಗೆ ಬರಲು ಹಿಂತೆಗೆಯುವುದನ್ನು ಕಂಡು ರತ್ನಿ ಕಾಟನೊಡನೆ "ರಾಮುಗದೇನು ನಾಯಕತನ ಬರುವರೆ ಪ್ರೇಮದಿ ಚೆಂಡನೊಯ್ಯುವದಕೆ ಸೀಮೆಯೊಳಗೆ ಧೆರ್ಯದ ಹನುಮಂತನೊ" ಎಂದು ಆಕ್ಷೇಪಿಸುವಳು. ಚೆಂಡಿನಿಂದ ಈ ಮೊದಲೇ ಘಾಸಿಯಾಗಿದ್ದ ಮುಮ್ಮಡಿ ಸಿಂಗನು ಅದನ್ನು "ಉಡುರಾಜನಂದದಿ ಮೈಯೆಲ್ಲ ಕೆಡುತಿದೆ(ರೆ?) ಮಡಗಿ ಪೂಜಿಸಿದನು ಮಗನೆ" ಎಂದು ಹರಿಯಾಲದೇವಿ ರಾಮನಿಗೆ ಹೇಳುವಳು. ಚೆಂಡಿನ ಪ್ರಸ್ತಾಪ ಬಂದಾಗ "ವಿಧಿಯಿಂದ ರಾವಣ ಮಡಿದನು, ಎಲೆ ತಾಯೆ ವಿಧಿಯಿಂದ ಕೀಚಕನಳಿದ ವಿಧಿಯಿಂದ ವಾಲಿಸುಗ್ರಿವರು ಕೆಟ್ಟರು, ವಿಧಿ ಮಿಾರುವರಾರು ತಾಯೆ" ಎಂಬ ರಾಮನ ವಾದದಲ್ಲಿ ರಾಮಾಯಣ ಭಾರತಗಳು ಅಡಕವಾಗಿವೆ. ಇದೇ ಸಂದರ್ಭದಲ್ಲಿ ರಾಮನು "ತಲೆ ಹೋದೀತೆಂದು ಶೂದ್ರಕ ವೀರನು ಸಲೆ ತನ್ನ ಕೈಕಾಲ ಕೊಯ್ಸಿ ಇಳೆಯೊಳು ದೇಗುಲದೊಳಗೆ ಬಿದ್ದಿರಲಾಗ ತಲೆಯು ಕಟ್ಟಿತು ಕಂಚ್ಯಾಲಕ್ಕೆ" ಎಂದು ಮತ್ತೊಂದು ವೃತ್ತಾಂತವನ್ನು ಉದಾಹರಿಸುತ್ತಾನೆ.[1] ಹೀಗೆಯೇ ರತ್ನಾಜಿ ತನಗೆ ಸಗ್ಗದ ರಾಮನನ್ನು ಕುರಿತು "ಕಲ್ಯಾಣದಲ್ಲಿ ರಾಮಯ್ಯನ ಹೆಂಡತಿ ಕಲಿಚಿಕ್ಕಯ್ಯನ ಭ್ರಮಿಸಿ ಒಲ್ಲದ ಕಾರಣ ಶಿರವ ಕೊಯ್ಸಿದಳೆಂಬ ಸೊಲ್ಲನಾದರು ಕೇಳ್ದರಿಯಾ" ಎಂದು ಎಚ್ಚರಿಸಿರುವ ಘಟನೆಯೂ ಪರಿಚಿತವಾದದ್ದು.[2] ರಾಮನ ಪಾಲಿಗೆ ರಕ್ಕಸಿಯಾದ ರತ್ನಿ ಕುಪಿತಳಾದಾಗ "ಕರಿಯಭಂಟನ ತಿಂದ ರಕ್ಕಸಿ ಯಂತೆ" ಇದ್ದಳು ಎನ್ನುತ್ತಾನೆ. ನಿರಾಭರಣನಾಗಿ ಮಾಸಿದ ಬಟ್ಟೆಯನ್ನುಟ್ಟು, ಮ್ಲಾನವದನನಾಗಿ ರತ್ನಿಯ ಬಳಿಗೆ ಹೊರಟ ಕುಮಾರರಾಮನು "ನೆಟ್ಟನೆ ರಾಹು ನುಂಗಿದ ಶಶಿಯಂದದಿ" ಇದ್ದನಂತೆ. ಮಾತಂಗಿ "ಭಾಳ ಲೋಚನ ಕಣ್ಣು ದೆರೆದಂತೆ ದುರ್ಗಕ್ಕೆ ಕಾಳಗವನು ಗಂಟಿಕ್ಕಿದಳು" ಎಂದು ಹೇಳುವಾಗ ಕುಮ್ಮಟದುರ್ಗದ ಕಡೆಗಾಲ ಸಮಿಾಪಿಸಿತೆಂಬ ಕಲ್ಪನೆ ಸ್ವವಿದಿತವಾಗುತ್ತದೆ. ಜನಪ್ರಿಯವಾದ ಪುರಾಣ, ಪೂರ್ವಕಥೆ, ಐತಿಹ್ಯಗಳ ಮೂಲಕ ಪಾಂಚಾಳಗಂಗನು ಈ ರೀತಿಯಾಗಿ ಉಪಕೃತನಾಗಿರುತ್ತಾನೆ.

"ಅರಸು ರಾಕ್ಷಸನಾದರೆ ಮಂತ್ರಿ ಹೆಬ್ಬುಲಿ", "ಆಡೆದ್ದು ಹುಲಿಯ ನುಂಗುವುದೆ", "ಕನ್ನವನಿಕ್ಕಿ ಕಳ್ಳನು ಮನೆಯ ಪೊಕ್ಕು ಕೆಮ್ಮಿದಂತಾಯಿತು"—ಎಂಬ ಈ ನಾಣ್ಣುಡಿಗಳು ಕಾವ್ಯದಲ್ಲಿ ಬಹಳ ಚೆನ್ನಾಗಿ ಹೊಂದಿ ಕೊಂಡು ಬಂದಿವೆ.

ಮಹಲಿಂಗಸ್ವಾಮಿಯ ಬರೆವಣಿಗೆಯಲ್ಲಿ ಉಪಮಾನಗಳಿಗಾಗಲಿ, ಗಾದೆಗಳಿಗಾಲಿ, ಪೂರ್ವಕಥೆಗಳಿ ಗಾಗಲಿ ಅಭಾವವಿಲ್ಲ. ನಂಜುಂಡನಂತೆ ಪಂಡಿತಮಾನ್ಯನಲ್ಲದಿದ್ದರೂ ಪಾಂಚಾಳಗಂಗನ ಜಾಡಿನಲ್ಲಿಯೇ ಬಹು ದೂರ ನಡೆದಿದ್ದಾನೆ ಎನ್ನಬಹುದು. ಪ್ರಾಚೀನ ಕಾವ್ಯಗಳ ಶ್ರವಣದ ಪರಿಣಾಮವನ್ನೂ ನೋಡಬಹುದು. ಸಾಂಪ್ರದಾಯಿಕವಾದ ಉಪಮಾನಗಳನ್ನು ಸೂಕ್ತವಾಗಿ ಬಳಸಿರುತ್ತಾನೆ. "ಸಿಡಿಲೆರಗಿ ಹೊಡೆಯಲು ಕೊಡೆ ಕಾಯ್ವುದೆಲೆ ಮರುಳೆ" ಎಂಬ ಹೇಳಿಕೆ ತಟ್ಟನೆ ರಾಘವಾಂಕನನ್ನು ನೆನಪಿಗೆ ತರದೆ ಇರದು. "ಗರುಡನ ಸೀಮೆಯಲಿ ಉರಗನ ಹಬ್ಬ ಮಾಡುವರೆ," "ಕೆಂಡಕಿರುವೆ ಮುತ್ತಿ ಹಿಂದಕೆ ತಿರುಗುವುದೆ" "ಸೀಗೆಲಡಗಿದ ಬಾಳೆಯಾಗೆ", "ಗರುಡನು ಉರುಗಗೆ ಮೊರೆದು ಎರಗುವ ತೆರದಿ", "ಗಿರಿಗೆ ಬಂದಡರ್ವಂತೆ ಸಿಡಿಲು," "ಕಬ್ಬು ಕದಳಿಯ ವನಕೆ ಕರಿನೂರು ಹಸಿದಿರ್ದು ಬಿದ್ದಂತೆ ಬಾಚಿ ಸವರುತಲಿ," "ಮರದ ನೆಲ್ಲಿಯ ಕಾಯ ಉದುರುಕುಟ್ಟಿದ ಪರಿಯಾಗೆ," "ಚಂದ್ರನ ಪ್ರಭೆ ಕಂಡು ಅಂಬುಧಿ ನಲಿವಂತೆ," "ಚಂದ್ರಪ್ರತಿಗೆ ರಾಹು ಬಂದು ತುಡುಕುವ ತೆರದಿ," "ಮಂಜು ಮುಸುಕಲು ಬೆದರಿ ಅಂಜುವುದೇನು ಕುಲಗಿರಿಯು"—ಇವೇ ಮೊದಲಾದ ಪ್ರಯೋಗಗಳು ಕುಮಾರವ್ಯಾಸನನ್ನೋ ಇತರ ಕವಿಗಳನ್ನೋ ನೆನಪಿಗೆ ತರದೆ ಇರಲಾರವು.

---

1. ಇದರ ವಿವರಗಳಿಗೆ "ಸೋಮೇಶ್ವರ ಶತಕ", ಪರಿಷತ್ತಿನ ಮುದ್ರಣ (೧೯೪೯), ಪು. ೭೮–೭೯ ನ್ನು ನೋಡಿ.

2. ನಿಜಲಿಂಗ ಚಿಕ್ಕಯ್ಯನ ಮಹಿಮೆ, ಶರಣಲೀಲಾಮೃತ, ಸಂ. xiv.

ಆದರೆ, ಈ ಚಿತ್ರಗಳು ಎಂದೆಂದಿಗಾದರೂ ಜನಪ್ರಿಯವಾದುವು. ಕವಿ ಜನತೆಯ ಅಭಿರುಚಿಯನ್ನು ಅಲಕ್ಷ್ಯ ಮಾಡಲಾರ.

ಸಾಂಪ್ರದಾಯಿಕ ಉಪಮಾನಗಳಂತೆಯೇ ಮಹಲಿಂಗಸ್ವಾಮಿಯ ಕೃತಿಯಲ್ಲಿ ಪೌರಾಣಿಕ ದೃಷ್ಟಾಂತಗಳೂ ಅಲ್ಲಲ್ಲಿಯೇ ಕಂಡುಬರುತ್ತವೆ. ಊರಿನ ಅಭೇಧ್ಯತೆಯನ್ನು ಕುರಿತು "ರಾವಣನ ಲಂಕೆಯ ಪುರವೊ" ಎಂದು ಹೇಳಿರುವುದುಂಟು. "ಹುಚ್ಚಾಗಿ ಅಳಿವನೆ ಹತ್ತು ತಲೆಯವ ಕಪಿಯು ಸುಟ್ಟು ಬಾರದೆ ಲಂಕೆಪುರವ," "ಕಳಲೆಯ ಹರಿವಂತೆ ಕೊಂದು ರಕ್ತವ ಹರಿಸಿ ಬರುವೆನು ಹನುಮನ ತೆರದಿ," "ರಾಮರ ಬಲವೆಲ್ಲ ಲಯವಾದ (ಗೆ ?) ಹನುಮಂತ ಸಂಜೀವನ ತಂದ ತೆರನಾಯ್ತು" ಎಂಬ ಹೋಲಿಕೆಗಳು ಕವಿಯ ರಾಮಾಯಣದ ಅಭಿಮಾನವನ್ನು ಪರಿಚಯಮಾಡಿಕೊಡುತ್ತವೆ. ಇದೇ ರೀತಿ, "ಇಂದ್ರನಗರಕೆ ಮಿಗಿಲೆಂದು ಪೇಳಲುಬಹುದು ಕಂದರ್ಪಪಿತನ ದ್ವಾರಕಿಯೊ," "ಮುತ್ತಿನ ಪಲ್ಲಕ್ಕಿ ಹತ್ತಿ ಚೆನ್ನಿಗರಾಮ ಪಕ್ಷಿವಾಹನ ಸುತನಂತೆ.... ನಡೆಯೆ," "ಗೋವಿಂದನೇರುವ ಗರುಡನಾರ್ಭಟದೊಳು ನಿಜ ಛಲಶಕ್ತಿಯು ಬಂತು," "ಭೀಮನು ಸಾಹಸದಿ, ಗೋವಿಂದನ ತನುಜನೆ ಲಾವಣ್ಯಭಾವಬಿಂಕದಲಿ," "ರಾಮಗೆ ತಲೆಯೆಷ್ಟು ಬಾಣಾಸುರನ ತೆರದಿ ಸಾವಿರ ತೋಳ ಪಡೆದಿಹನೆ," "ಕಂದ ರಾಮೈಗೆ ಪ್ರತಿಯೊಂದು ಕಾಣಲುಬಹುದೆ ಹಿಡಿಂಬನ ಮುರಿದ ಭೀಮ [ನ] ಹುದು," "ಬೆನವಾನಂದದಿ ನೀನು ಒಡಲಾ ಬೆಳೆಸಿ ಮಂತ್ರಿ ಸರಿಪಾಲು ಒಡವೆಯ ಗಳಿಸಿ ಪರಕಾರ್ಯವೆಂದರೆ ಚಳಿಜ್ವರ ಬರುವುದು"—ಎಂಬ ಸಾದೃಶ್ಯಗಳು ಕವಿಗೆ ಇತರ ಕೃತಿಗಳಲ್ಲಿಯೂ ಇರುವ ಅನುರಾಗವನ್ನು ವ್ಯಕ್ತಪಡಿಸುವುವು. ಜನಪ್ರಿಯ ಕವಿಗಳಿಗೆ ರಾಮಾಯಣ, ಭಾರತ, ಭಾಗವತಗಳ ಸನ್ನಿವೇಶಗಳು ಅಕ್ಷಯ ನಿಧಿ. ಅವುಗಳು ಮತೀಯ ಮಡುಗಳಲ್ಲ. ಈ ಹೃದಯವೈಶಾಲ್ಯಕ್ಕೆ ಸಂತೋಷಪಡಬೇಕಾದುದು. ಬಿಡಿಬಿಡಿಯಾಗಿ ಈ ಘಟನೆಗಳನ್ನು ಸೂಚಿಸಿರುವಂತೆಯೇ ಮಹಲಿಂಗಸ್ವಾಮಿ ಅನೇಕ ಉಪಕಥೆಗಳನ್ನು ಹೇಗೆ ಉದಾಹರಿಸಿರುತ್ತಾನೆ ಎನ್ನುವುದನ್ನು ಈ ಮೊದಲೇ ವಿಚಾರಿಸಲಾಗಿದೆ. ಇವನ ರಚನೆಯ ವೈಶಿಷ್ಟ್ಯವಿದು.

ಪರಾವಲಂಬಿಯಾದ ನಿದರ್ಶನಗಳಲ್ಲಿಯೇ ಕವಿಯ ಶಕ್ತಿ ಮುಗಿಯುವುದಿಲ್ಲ. ಅವನಿಗೆ ಜೀವನದ ಗಾಢವಾದ ಪರಿಚಯವಿದೆಯೆನ್ನಲು ಅವನು ಬಳಸಿರುವ ಇತರ ಉಪಮಾನಗಳೇ ಸಾಕ್ಷಿ. ರಾಶಿರಾಶಿಯಾಗಿ ಹೊಸಹೊಸ ಹೋಲಿಕೆಗಳನ್ನು ಕೊಟ್ಟಿರುತ್ತಾನೆ. ಆದರಲ್ಲಿಯೂ ಸಾಮಾನ್ಯವರ್ಗದವರ ಜೀವನದ ಕಡೆ ಅವನ ಗಮನ ಹೆಚ್ಚಾಗಿ ಹರಿದಿರುವಂತಿದೆ. "ಸಂತಾನ ಪಡೆಯದ ಬಳಿಕ ಜೇನಿಟ್ಟು ಪರರ ತಿಂಬಂತೆ", "ಜೇನ್ನೊಣದ ಮೊತ್ತಗಳು ಕವಿದಂತೆ ಮಳೆಯಗರೆವುತಲಿ", "ನೋಡಯ್ಯ ಕರ್ಮ ಜೇನಿಗೆ ಕಿಚ್ಚಿನ ತೆರನಾಯಿತೈ ಲಕ್ಷಜೀವ", "ಜೇನು ಪುಳಗಳಿಗೆ ಬೇಗೆಯನು ತೋರಿದ ತೆರನಾಗಿ ಸಾಗುವುದು ಯಮಪುರಕೆ ಕೂಳು ಹುಟ್ಟದೆ ಕೂಲಿ ಮಾಡೆ", "ಉರಿಕೊಂಡ ಜೇನಿನ ಹುಳಕಿಂತ ಕಡೆಯಾಗಿ ಯಮನ ಕಂಡರು ತುರಗ ಮಂದಿ", "ಬೆಟ್ಟಕ್ಕೆ ಜೇನಿಟ್ಟು ವ್ಯಾಧನು ತಿಂದಂತೆ ಅರ್ಥವ ಗಳಿಸಿನ್ನು ಹಾಳು"—ಈ ಹೋಲಿಕೆಗಳಲ್ಲಿ ಕವಿಯ ಜೀವನಾನುಭವದ ಒಂದು ಮುಖದ ಪರಿಚಯವಾಗುತ್ತದೆ. ಇಂತೆಯೇ ಬೇಟೆಗೆ ಸಂಬಂಧಿಸಿದ ಒಂದೆರಡು ಉಪಮಾನಗಳನ್ನು ನೋಡಬಹುದು. "ಕೋಳಿಯ ಬಡಿದಂತೆ ಕಾಲಿಡಿದು ಬಡಿವೆನು ಮಂತ್ರಿ ಹೀನಾಯ ಬಿಡದು ಧರೆಯೊಳಗೆ", "ಬೆಟ್ಟಕೆ ಬೇಗೆಯು ಹತ್ತಿದ ತೆರದೊಳು ಕುಟ್ಟಿಕೊಳ್ಳುತ ಬಂದಳಾಗ", "ಕರಿ ಗಜವು ಇರುಬಿನಾ ಬಲೆಗೆ ಸೇರಿತು ಎಂದು ನಡೆದಳು ಬೆನ್ನೊಡನೆ ಬೇಗ ರತ್ನಿ", "ಪಶುವಿಂಡು ವ್ಯಾಘ್ರನಾ ಹೊಸಗಾಳಿ ಬಂದಂತೆ ದೆಸೆಗೆಟ್ಟುವೋಡೆ ನೃಪರೆಲ್ಲ", "ಮುರಿದೋಡು ಹಂದಿಯು ಬೆದರಿಸಲು ಹುಲ್ಲೆಯ ಮರಿಯಂತೆ ಗಿಡಕೊಬ್ಬರಾಗೆ", "ಇರುಬಿನ ಗಜದಂತೆ ಹೆಣಗುವರು ಎಡಬಲನ ಜೀವದಾಸೆಗಳನು ತೊರೆದು", "ಹಗೆಯವನ ಕೊಲಲಿಕ್ಕೆ ಇದು ಒಳ್ಳೆ ಸಮಯವು ಮದಗಜವು ಇರುಬ ಬಿದ್ದಂತೆ", "ಗಾಯೊಡೆದ ವ್ಯಾಘ್ರನು ಗೂಡಿನೊಳಪೊಕ್ಕಂತೆ", "ಹೆಂಬಾದ ಕುರಿಯಂತೆ ಹರಿಸಾಡಿ ಕಡಿವರೆ ತಲೆ ಬಿದ್ದರೆ ಮುಂಡ ಓಡುವುದು", "ಕಡಿಗೆ ಹೊಕ್ಕರು ರಾಯಕುಮಾರರೀರ್ವರು ಬಂದು

ಕುರಿಗಳಂದದಿ ತಲೆ ಅರಿಯೆ", "ಓರುಗಲ್ಲಮ್ಮಗೆ ಹದಿನಾರು ಸಾವಿರ ಕುರಿಯಕಾರರು ಕಡಿದಂತೆ", "ಹೋದ ದಂಡನು ಎಲ್ಲ ಆದುಕೊಂಡನು ರಾಮ ಮಿಾನನ್ನು ಬಕರಾಜ ತಿಂದಂತೆ", "ಮೊಲ ಹಿಡಿಯದ ನಾಯಿ ಹೆಬ್ಬುಲಿಯ ಕೊಲ್ಲುವುದುಂಟೆ", "ಕಾಣದೆ ಮಲಗಿರುವ ಹುಲಿಯ ಎಬ್ಬಿಸಿದಂತೆ ಮಾಡಿಕೊಳ್ಳಲಿ ಬೇಡ ಮಗನೆ", "ಮಾರಿಗೆ ಹೊಡೆ [ನಂ] ತಾ ಕುರಿಗಳಂದದಿ ಕಡಿಯೆ," "ರಣದುರ್ಗಿ ಹಸುವಾಗಿ ಕುರಿ ಹಿಂಡ ಬಡಿತಿಂಬ ತೆರದಿ ಕೊಂದರು ಈರ್ವರು," "ಬಗುಳಲಮ್ಮದ ನಾಯ ಬೇಂಟೆಯ ಕರೆದೊಯ್ಯೆ ಹುಲಿಯ ಕಾಣಲು ನಿಲ್ಲುವುದೆ"—ಈ ಹಲವಾರು ಚಿತ್ರಗಳು ಕವಿಯ ಅಭಿರುಚಿಯನ್ನೂ ಅನುಭವವನ್ನೂ ತಿಳಿಸುತ್ತವೆ. ಪಂಥ ಮುರಿದು ಬೀಳಲು "ಅಂಬಲಿಗೆ ತೆಳುವಾಗಿ ಹಿಂದಣ ಪಂಥ ಏನಾಯ್ತೋ" ಎಂದು ಮೂದಲಿಸುವುದು ನವೀನವಾಗಿದೆ. "ನುಡಿಯ ಕೇಳುತ ರುದ್ರ ತಾ ಮರನಾದ" ಎಂಬುದು ಸಹಜವಾಗಿದೆ. "ಕೆರೆ ಬತ್ತಿ ಬಾಯಾರಿ ಶರಧಿಗೆ ಬಂದಂತ ತೆರನಾಯಿತಲ್ಲೋ ಲಿಂಗಣ್ಣ" ಎನ್ನುವುದರಲ್ಲಿ ವಿಫಲತೆಯ ಚಿತ್ರ ಸ್ವವಿದಿತವಾಗುವಂತಿದೆ; "ಬಡತನವೆಂಬುದು ಹೊಲೆತನ ಧರೆಯೊಳಗೆ ಬಲುಮೆಗಳೆ ಲೇಸು" ಎಂಬಲ್ಲಿ ವೀರನ ಜೀವನದ ದರ್ಶನವಾಗುತ್ತದೆ. ಬೆತ್ತಲೆ ನಿಂತ ಶರಣಾಗತರನ್ನು ಕಂಡು "ಶ್ರವಣನ ಪರಿಯಾಗಿ ಕೆಲರು ಬೆತ್ತಲೆ ನಿಂದು ಕರಮುಗಿದು ಬುಡಕೆ ನಾ ಒಬ್ಬ" ಎನ್ನುವ ವಾಕ್ಯಸರಣಿ ಅಸಹಾಯಕತೆಯನ್ನು ಒತ್ತಿ ಹೇಳು ವಂತಿದೆ. "ಮೂಢರಿಗೆ ಮುರಿದರ್ಥ ಒಡೆದು ಪೇಳಲು ಕುರುಡಗೆ ಪಟ ಹಿಡಿದಂತೆ ಕಾಣುವುದು" ಎಂಬ ಮಾತುಗಳು ಸ್ವಯಂ ವೇದ್ಯವಾಗುವಂತಿವೆ. "ಲಕ್ಷ್ಮಾ ಉಳಿ ಕೊಡತಿಯ ಪೆಟ್ಟು ನಿರ್ವ್ಯಸದೆ ಸೃಷ್ಟಿಯೊಳು ಲಿಂಗಾ ಎನಿಸುವುದೆ" ಎಂಬ ನುಡಿ ಲೋಕಾನುಭವವನ್ನು ಕುರಿತದ್ದಾಗಿದೆ. "ನಾಯಿ ಕೂಗಲು ತಲೆಯ ತೋರುವನೆ ದಿನಕರನು ತಾಂಬ್ರಾಚೂಡನು ಸ್ವರವಿಡದೇ, ನೀರು ನಿಲ್ಲದೆ ಕೆಸರೇ" ಎಂಬ ಸರಣಿಗೆ ವ್ಯಾಖ್ಯಾನವೇ ಬೇಕಿಲ್ಲ. "ಕಾಳಿಂಗ ತನ್ನಯ ಸಂತಾನವ ತಿಂದಂತೆ ರಾಮನ ತಿಂದ ಕಂಪಿಲನು" ಎಂಬ ಹೇಳಿಕೆಯಲ್ಲಿ ಜನರ ನಂಬಿಕೆಯನ್ನು ಎಷ್ಟು ಚೆನ್ನಾಗಿ ಬಳಸಿಕೊಂಡಿರುತ್ತಾನೆ! "ಗಾಜಿನ ಬಳೆ ಇಟ್ಟ ಬಾಲ (ಲೆಯ?) ರಿಗೆ ಕಡೆಮಾಡಿ ಬೀಜಕೊಂದನು ಬಿಡಲಿಲ್ಲ" ಎಂಬಲ್ಲಿನ ಕಡೆಯ ಮಾತು ಬಳಕೆ ನುಡಿಯ ಬೆಡಗನ್ನು ಹಿಡಿದೆತ್ತಿ ತೋರುವಂತಿದೆ. ಮಹಾರಾಜನ ಶಂಕೆಯನ್ನು ಚಿತ್ರಿಸುವಾಗ "ತಾವರೆಯೆಲೆಯೊಳು ನೀರಿನಂದದಿ ಕುಳಿತು ಆಡುವ ಮಂತ್ರಿಯೊಡನೆ" ಎಂದು ಹೇಳಿರುವುದು ಉಪಮಾನವೊಂದರ ಪುನರುಜ್ಜೀವನ ಪ್ರಯತ್ನಕ್ಕೆ ಸಂಕೇತವಾಗಿದೆ. ಹಳೆಯ ಹೋಲಿಕೆಗಳಾದರೂ ಬಳಸುವವನ ಪ್ರತಿಭೆಯನ್ನು ಅನುಸರಿಸಿ ಅವು ಸರ್ವದಾ ಹೊಳೆಯದೆ ಇರವು.

ಜನಜೀವನವನ್ನು ಮರೆಯದೆ ಅದರಿಂದ ಸ್ಫೂರ್ತಿಗೊಳ್ಳುವ ಕವಿಗೆ ನಿತ್ಯದ ಮಾತುಗಳು ಮನ ಸೆಳೆಯುವಂತೆಯೇ ಹಲವಾರು ರೀತಿಯ ನಾಣ್ಣುಡಿಗಳು ಅವನನ್ನು ಮೇಲಿಂದ ಮೇಲೆ ಮನವುಬ್ಬುವಂತೆ ಮಾಡುತ್ತವೆ. ಮಹಲಿಂಗಸ್ವಾಮಿಯ ಕೃತಿಯಲ್ಲಿ ಇವೂ ಸಾಕಾದಷ್ಟು ಕಂಡುಬರುತ್ತವೆ. "ವಿಪರೀತ ಕಾಲಕೆ ವಿನಾಶಬುದ್ಧಿಗಳೆಂಬಾ ತೆರಬಂತು ಮುನಿವರಿಗೆ ಮಗನೇ" ಎಂಬಲ್ಲಿ ಗಾದೆಯೇ ತಿರುಗಮುರುಗಾಗಿರುವುದು ಸೋಜಿಗವಾಗಿದೆ. "ಕೆಂಡ ಕರದೊಳು ಪಿಡಿದು ಮಂಡೆ ತುರಸಿದ ತೆರವು," "ಹೋಗುವ ಮಾರಿಯ ಊರಿಗೆ ಕರಕೊಂಡ ತೀರಾಯಿತಲ್ಲ," "ಮುಂಗೈಯ ಹುಣ್ಣಿಗೆ ಮುಕುರವ್ಯಾತಕೆ ಮಂತ್ರಿ," "ಊರ್ಯಾಲೆ (ರೆಲ್ಲ?) ಸೂರೆಯ ಹೋದಾಗ ಅಗಸೆಯ ಮಾಡಿದ ತೆರನಾಯ್ತು," "ಕಮ್ಮರಗೇರಿಲಿ ಕದರು ಮಾರಿಪ ಗಾದೆ," "ಹಾದಿ ಸೂಳೆಯ ನೆಚ್ಚಿ ಮನೆಯ ಹೆಂಡಿರ ಬಿಟ್ಟ ಗಾದೆ," "ಹೀನಾಯದಾ ಸ್ವಾನ (ಶ್ವಾನ) ಬಲ್ಲುದೆ ದಿವ್ಯಗಂಧ ವಾಸನೆ ಫಲವ," "ಬಡವನ ಸತಿಗಿಂತ ಬಲ್ಲಿದನ ಮನೆಯೊಳಗೆ ಗೌಡಿಯಾಗಿರಲು ಉತ್ತಮವು," "ಬಾಲೆ ಯರ ಜಾಲಗಳು ಮಾದೇವರಿಗೆ ತಿಳಿಯದು" "ಕೋಡಗವು ಮುದಿ ಆಗೆ ಹಂಬೋದ ಬಿಡುವುದೆ", "ಅಡಿಗೆ ಯಾಗದ ಮುನ್ನ ಎಲೆಯನು ಹಾಸಿದ ತೆರ ಬಂತು", "ಕತ್ತೆಗೆ ಕಡಿವಾಣಯಿಕ್ಕಿ ಜೀವನ ಮಾಡೆ ಉತ್ತಮ ತೇಜಿ ಎನಿಸುವುದೆ", "ಹಾಲ ಕುಡಿಸಲು ಕಷ್ಟ ರೋಗವು ಬಂದಲ್ಲಿ ಸ್ನೇಹದಿ ವಿಷವ ಮೆಲ್ಲಿಸರೆ", "ಕಳ್ಳಸತಿಯರ

ಮಾತು ಕರ್ನಕ್ಕೆ ಹಿತ ಕಾಣೆ (ಣೊ ?) ಸುಳ್ಳಿನ ಮುಂದೆ ನಿಜ ತರವೆ", "ಇರುಳು ನೋಡಿದ ಬಾವಿ ಹಗಲು ದುಂಬಿದುಯೆಂಬ ತೆರನಾದುದು", "ಒಲಿಯಾಲು ನಾರಿ ಒಲಿಯದಿದ್ದರೆ ಮಾರಿ", "ಕಳ್ಳ ಕಳ್ಳಗೆ ನೆಂಟು ಕಡಲೆ ಬೆಲ್ಲಕೆ ಜೋಡು ಬೆಳ್ಳುಳ್ಳಿ ಜೋಡು ಅಗ್ರಣಿಗೆ (ಒಗ್ಗರಣೆ?)", "ಮಣ್ಣಮಡಕೆಯು ಮೆಚ್ಚಿ ದೊಣ್ಣೆಯಲಿ ಹಗೆಗೊಂಡ", "ಸಾಧಿಸುವ ಸರ್ಪನ ಹುತ್ತಕ್ಕೆ ಸಿರವಿತ್ತು ತಾ ಮಲಗಿದಂತಾಯಿತು ಮಂತ್ರಿ" "ಮಾರ್ಜಾಲಗೆ ಸರಸಗಳು ಮೂಷಕಕೆ ಪರಮಾತ್ಮ ಹೋಗದೆ", "ಸಾವಿರ ಚಿತ್ರವ ಮಸಿಯು ನುಂಗಿದ ಗಾದೆ" "ನಗುವ ಸವತೆರು ಮುಂದೆ ಎಡಹಿದ ತೆರನಾಯ್ತು", "ಎತ್ತು ಕರುವನು ಈಯೆ ಹಿತ್ತಲಿಗೆ ಹೊಡೆಯೆಂಬ ಅರ್ಥ"—ಈ ರೀತಿ ಹೆಜ್ಜೆ ಹೆಜ್ಜೆಗೂ ಗಾದೆಗಳನ್ನು ಬಳಸುವುದನ್ನು ಕಾಣುತ್ತೇವೆ. ಜೈನಕವಿಯಾದ ನಯಸೇನನು ಹೇಗೆ ತನ್ನ ಗಾದೆಗಳ ಸಂಗ್ರಹದಿಂದ ನಮ್ಮ ಮನಸ್ಸನ್ನು ಒಲಿಸುವನೋ ಹಾಗೆಯೇ ಈ ಜನಪ್ರಿಯ ಕವಿಯೂ ನಮ್ಮ ಗಮನವನ್ನು ಹಿಡಿದು ನಿಲ್ಲಿಸುತ್ತಾನೆ.

ಮಹಲಿಂಗಸ್ವಾಮಿಯ ರಚನೆಯಲ್ಲಿ ಇನ್ನೊಂದು ವಿಶೇಷ ಕಂಡುಬರುವುದುಂಟು. ಈತನು ಆಡುಮಾತಿನ ಸರಣಿಯನ್ನು ಬಹುಮಟ್ಟಿಗೆ ಅನುಸರಿಸುವುದರಿಂದ, ತಾನು ಕೇಳಿರಬಹುದಾದ ಕೆಲವು ನುಡಿಗಟ್ಟುಗಳನ್ನೂ, ದ್ವಿರುಕ್ತಿಗಳನ್ನೂ ಪಾಮರಪ್ರಿಯವಾಗುವ ರೀತಿಯಲ್ಲಿ ಬಳಸಿರುತ್ತಾನೆ. ಸೋತವರ ಮೂಗಿಗೆ ಸುಣ್ಣ ಬಳೆಯುವುದೊಂದು ಹಳೆಯ ಪದ್ಧತಿ. ಕುಮಾರವ್ಯಾಸನು ಇದನ್ನು ಹೇಳಿರುತ್ತಾನೆ. ಮಹಲಿಂಗಸ್ವಾಮಿ ಈ ಅಭಿಪ್ರಾಯವನ್ನು ಬಗೆಬಗೆಯಾಗಿ ನಿರೂಪಿಸಿರುತ್ತಾನೆ. " ಪಿಡಿದು ಮೂಗಿಗೆ ಸುಣ್ಣ ಎಳದು ಬಿಡಿಸಿದ ಧರ್ಮಸೆರೆಯ", "ಹೆದರಬೇಡವೊ ಎಂದು ಪಿಡಿದು ಕರದೊಳು ಜುಟ್ಟ ತುದಿಮೂಗಿನೊಳಗಿಟ್ಟ ನಾವು", "ಪಣೆ ಸುಣ್ಣ ಕಾದುದು ಭೂಪ", "ಇಡು ನಿನ್ನ ಪುಟಗಳನು ಹಿಡಿಯದಿದ್ದರೆ ಎನಗೆ ಇಡಿಸಣ್ಣ ಮೂಗಿಗೆ ಸುಣ್ಣ." ಯುದ್ಧ ಮೊದಲಾಯಿತು ಎಂಬುದನ್ನು ಈ ಕವಿ ಹೇಳುವ ರೀತಿಯೇ ಬೇರೆ. "ಜಗಳ ಕಚ್ಚಲು ಹನುಮನಿರುವ ಬಾಗಿಲ ಮುಂದೆ" "ಕಚ್ಚಾಲು ರಣರಂಗ ಕೊನೆಯ ಮಂದಿಗೆ ಜಗಳ", "ಜಗಳ ಕಚ್ಚಿತು ಮಸಗುತಲಿ"–ಇವುಗಳು ಮಾತಿನ ವೈಖರಿಯನ್ನೇ ಹೋಲುವಂತಿವೆ. (ಇದು "ಸುರು ಹಚ್ಚು" ಎಂಬ ಉತ್ತರ ಕರ್ಣಾಟಕದ ಫಕ್ಕಿಯನ್ನು ಹೋಲುತ್ತದೆಯಲ್ಲವೆ?) ಅಸಂಖ್ಯಾತ ಜನರನ್ನು ಸಂಹಾರಮಾಡಿದನೆಂದು ಹೇಳುವಲ್ಲಿ "ಹನ್ನೆರಡು ಬೀದಿಯ ಕಡಿದ", " ಕೊಚ್ಚಿದಾ ಎರಡು ಬೀದಿಯನು ", "ತಾರ ಮಲಗಲು ಹತ್ತು ಬೀದಿ", " ಮೂರು ಬೀದಿಯ ಕಡಿಯೆ ", ಮೂರಾರು ಬೀದಿಯ ಸವರಲು ", " ಹತ್ತೆಂಟು ಬೀದಿ ದಾರಿಯ ಮಾಡಿ ", " ತರಿಗಡಿಯೆ ಮೂವತ್ತು ಬೀದಿ " " ಉದುರುಗುಟ್ಟಲು ನಾಲ್ಕು ಬೀದಿ " ಎಂಬುದಾಗಿ ಪುನಃ ಪುನಃ ಹೇಳುವನು. " ಮೂಗರಿದನು ಮುಸುಣಿ ಸಹಿತ ", " ತೀಡಿದ ಬಿಸಿನೀರ ಬುಡಕೆ ", " ತಣ್ಣಗಾದುದು ಆಟ ತಿನ್ನಿ ಹುರುಳಿಯ ಕಾಳ ", "ಸರಿ ಮಂತ್ರಿ ಈ ಮಾತು ಶತವರುಷ ತುಂಬಿತು ", "ಅರು ಲಕ್ಷ ದಂಡಾ ಒಬ್ಬನೆ ಕಡಿವಾಗ ಸೀರೆಗಳಿದ್ದವೆ ನಿಮಗೆ ", " ಬಾಲೆಯಿಂದಲಿ ಎನ್ನ ಹೋದ ಮೀಸೆಯು ಬಂದು ಕೂಡ್ಯಾವು ಎಂದ ಸುರಿತಾಳ ", "ಬಂದ ದೊರೆಗಳನೆಲ್ಲ ಮುಖದಿದಿರ ನೀರನು ಇಳುಹಿ ", "ಪಾಪಾಸ ಮೆಟ್ಟ ತಿಂಬುವರು " " ತಾತಾ ತೂತಾಗೆ ವಜ್ರಾಂಗಿ ", "ಮೂರು ಸಾವಿರ ಬಡಿದ ನೀರ ಕೇಳದ ತೆರದಿ " ಎಂಬ ನುಡಿಗಟ್ಟುಗಳು ಆಗಿನ ಕಾಲದಲ್ಲಿ ಕವಿ ಕೇಳಿದ ಬಳಕೆಮಾತಿನ ವಿವಿಧ ವಿಧಾನಗಳಿದ್ದಿರಬೇಕು.

ದ್ವಿರುಕ್ತಿ ಪ್ರಯೋಗಗಳಂತೂ ಅಮಿತವಾಗಿ ಕಾಣುತ್ತವೆ. " ಸದರು ವಾಲಗ, " " ಬೆಂಕಿಯ ಕೆಂಡ," " ಸರಳಂಬು " " ಬೀದಿದಾರಿ," " ಪಾಣಿಯ ಜಲ," " ಪಂಚೈದು," " ಪುಡಿಮಣ್ಣು " " ಭೂಮಿಪಾತಾಳ ", " ವಾರುಧಿ ಕಡಲು ", " ನಡುಮಧ್ಯಾ " " ಹುಸಿಸುಳ್ಳು ", " ಹುಸಿಯ ಸಟೆ ", " ನಿಜ ಸತ್ಯ ", " ಗಿರಿಜೆ ಪಾರ್ವತಿ ", " ಜಲವುದಕ ", " ತಲೆಮಂಡೆ ", " ಬಾರಾಹನ್ನೆರಡು ", " ಅಂದಣಪಲ್ಲಕ್ಕಿ ", " ಸುಳ್ಳಾಬದ್ದ ", " ಕೋಡಗಕಪಿ ", " ಸಂಗ್ರಾಮ ಆಹವ ", " ಚಂದ್ರಾರ್ಕ ಸೂರ್ಯರು ", " ವಾಸನೆ ಪರಿಮಳ " " ಸಪ್ತೇಳು ", " ಅಂಬಿನ ಸರಳು ", " ಪಾದದ ಅಡಿ ", " ಪಡೆಯದಂಡು ", " ವಾಲೆ ಕಾಗದ ", " ಪಂತಿ

ಸಾಲು ", "ಛಲಪಂಥ", "ಜೋಡಿಲೀರ್ವರು ", "ವಟಪತ್ರದೆಲೆ ".—ಮೊದಲನೆಯ ಶಬ್ದ ಸುಲಭವಾಗಿ ಅರ್ಥವಾಗದೆ ಹೋದಾಗ ಅದರ ಅರ್ಥವನ್ನು ತಿಳಿಸುವ ಸಲುವಾಗಿ ಹೀಗೆ ದ್ವಿರುಕ್ತಿಗಳನ್ನು ಬಳಸುವುದುಂಟು. ಪ್ರಕೃತದಲ್ಲಿ ಅಂಥ ಪ್ರಸಂಗವೇನೂ ಕಂಡುಬರುವುದಿಲ್ಲ. ಆದ್ದರಿಂದ ಇದನ್ನು ಕವಿಯ ಭಾಷೆಯ ಒಂದು ವೈಶಿಷ್ಟ್ಯವೆಂದೇ ಪರಿಗಣಿಸಬೇಕಾಗುತ್ತದೆ.

ನಂಜುಂಡ, ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಗಳ ಶಬ್ದಸಂಯೋಜನೆ ಅವರವರ ದೃಷ್ಟಿಗೆ ತಕ್ಕಂತಿದೆ. ನಂಜುಂಡನ ಪ್ರೌಢ ಸರಣಿಯಲ್ಲಿ ಕನ್ನಡ ಸಂಸ್ಕೃತಶಬ್ದಗಳು ಹಿತವಾಗಿ ಕೂಡಿಬರುತ್ತವೆ. ಗಂಗನಲ್ಲಿ ಕನ್ನಡನುಡಿಗಳ ಬಳಕೆಯೇ ಹೆಚ್ಚು. ಮಹಲಿಂಗಸ್ವಾಮಿಯಲ್ಲಿ ಹಲಕೆಲವು ಗ್ರಾಮ್ಯಪ್ರಯೋಗಗಳೂ ಕಂಡು ಬರುತ್ತವೆ. ಉದಾಹರಣೆಗೆ, "ಹೊತ್ತುಣಿತೆ ಮುಂಜಾನೆ", "ಹಾರ್ಯೊಡೆ", "ಕಾಕೊಡೆ" "ಮಣಿಹ್ಯಾ", "ಇಪರೀತ" ಮುಂತಾದುವು ಗಮನಾರ್ಹವಾದುವು. ಹೀಗೆಯೇ ಈತನಲ್ಲಿ "ಪವುರ್ನೋಮಿ", "ಚೆತುರ ಭಾಗ", "ಪ್ರವುಡ", "ಪವಲಕ್ಷ್ಯ", "ಕಾಮಜೇನು", "ರಕ್ಷಣ್ಯ" ಎಂಬ ತದ್ಭವರೂಪಗಳೂ ವಿದಿತ ವಾಗುತ್ತವೆ. (ಮಹಲಿಂಗಸ್ವಾಮಿಯ ಕೃತಿಯ ಒಂದೇ ಒಂದು ಹಸ್ತಪ್ರತಿ ಸಿಕ್ಕಿರುವುದರಿಂದ ಈ ಪ್ರಯೋಗ ಗಳ ಬಗ್ಗೆ ಪ್ರಕೃತದಲ್ಲಿ ಖಚಿತವಾಗಿ ಹೆಚ್ಚಿಗೆ ಹೇಳುವಂತಿಲ್ಲ.)

ಈ ಮೂವರ ಕವಿಗಳ ಕಾಲಕ್ಕಾಗಲೆ, ಮುಸಲ್ಮಾನರ ಸಂಪರ್ಕದಿಂದ ಕನ್ನಡದಲ್ಲಿ ಉರ್ದು ಪದಗಳು ಬಳಕೆಗೆ ಬಂದಿದ್ದವಷ್ಟೆ. ಪ್ರಕೃತ ಕಾವ್ಯದ ಕಥೆಯಲ್ಲಿ ಪ್ರತಿಪಕ್ಷದವರು ಮುಸಲ್ಮಾನರೇ ಆಗಿರುವುದರಿಂದ ಅಂತಹ ಪ್ರಯೋಗಗಳು ಸಮಯೋಚಿತವಾಗಿ ಬರುತ್ತವೆ. ಕವಿ ನಂಜುಂಡನಲ್ಲಿಯೂ ಗಂಗನಲ್ಲಿಯೂ "ಕಾಗಜ", "ಮುಲ್ಲುಕ", "ಖಾನ", "ಸುರುತಾಳ (ಸುಲ್ತಾನ)", "ಗುಲಾಮ" "ಸಲಾಮು", "ವಜೀರ", "ಫೌಜು", "ಬಿಬ್ಬಿ" ಮೊದಲಾದ ಶಬ್ದಗಳು ಪ್ರಯೋಗವಾಗಿವೆ. ಮಹಲಿಂಗಸ್ವಾಮಿಯಲ್ಲಿ ಯಾದರೋ ಇವುಗಳಲ್ಲದೆ "ಮರಗಾಯ", "ಚೋರಿ", "ಮುಖಲ್ದಾರ್", "ಮುಸಲುಮಾನ", "ಬಕರಿ", "ಹುಶಾರು" "ಜಾಂಡ್ಯ", "ಮಾರುಮಾರು", "ಡೇರ್ಯ", "ಪಾಶ್ಚ್ಯ", "ಹುಜೂರು", "ಫಿರಂಗಿ" ಮುಂತಾದ ಇತರ ಶಬ್ದಗಳೂ ಪ್ರಯೋಗವಾಗಿವೆ.

ಈ ಮೊದಲೇ ಹೇಳಿರುವ ಕಥಾಸಂಗ್ರಹ ಮತ್ತು ವರ್ಣನಾವಿಭಾಗಗಳಲ್ಲಿ ಈ ಕವಿಗಳ ಸಂಭಾಷಣಾ ಸಂವಿಧಾನವನ್ನು ಮನಗಾಣಬಹುದು. ಪ್ರತಿಯೊಂದು ಕೃತಿಯನ್ನೂ ಬೇರೆಬೇರೆಯಾಗಿ ವಿಚಾರಮಾಡಿದಂತೆಲ್ಲ ಒಬ್ಬೊಬ್ಬರ ಶೈಲಿಯೂ ಹೇಗೆ ವಿಶಿಷ್ಟವಾದುದೆಂಬುದು ವ್ಯಕ್ತವಾಗುತ್ತದೆ. ನಂಜುಂಡನ ಪ್ರೌಢ ವೈಖರಿಯಿಂದ ಮೊದಲ್ಗೊಂಡು ಮಹಲಿಂಗಸ್ವಾಮಿಯ ಪಾಮರ ಪ್ರಿಯವಾದ ಸರಳರಚನೆಯವರೆಗೂ ಕುಮಾರರಾಮನ ಕಥೆ ವ್ಯಾಪಿಸಿರುತ್ತದೆ. ಆಯಾ ಕವಿಯ ಸಂಸ್ಕಾರ, ಗ್ರಂಥವ್ಯಾಸಂಗ, ಅನುಭವಗಳಿಗೆ ತಕ್ಕಂತೆ ಅದು ಬೇರೆ ಬೇರೆ ಯಾಗಿದೆ.

## ಸಾಂಗತ್ಯಪ್ರಯೋಗ

ಕುಮಾರರಾಮನ ಕಥೆಯನ್ನು ಬರೆದಿರುವ ಮೂವರು ಕವಿಗಳೂ ಸಾಂಗತ್ಯವನ್ನೇ ಬಳಸಿರುತ್ತಾರೆ. ಕ್ರಿ.ಶ. ೧೬ನೆಯ ಶತಮಾನವನ್ನು ಸಾಂಗತ್ಯದ ಶ್ರೇಷ್ಠಯುಗವೆಂದು ಹಿಂದೆಯೇ ಹೇಳಲಾಯಿತಷ್ಟೆ. ಆ ಪ್ರಭಾವ ನಂಜುಂಡನ ಮೇಲೆ ಬಿದ್ದಿರಬೇಕೆಂದು ತೋರುತ್ತದೆ. ಇದಲ್ಲದೆ, ಕಥೆಯನ್ನು ನಿರರ್ಗಳವಾಗಿಯೂ, ಲಲಿತವಾಗಿಯೂ ಹಾಡಿನ ರೂಪದಲ್ಲಿ ಹೇಳಿ ತಣಿಸುವುದಕ್ಕೆ ಸಾಂಗತ್ಯ ಸೊಗಸಾದ ಒಂದು ಮಟ್ಟು. ಇದನ್ನು ಕವಿಗಳು ಹಾಡುಗಬ್ಬ, ಪದಕೃತಿ, ಪದ ಕವಿತೆ(?) ಮತ್ತು ಸಂಗತಿ ಎಂಬುದಾಗಿಯೂ ಕರೆದಿರುತ್ತಾರೆ. ಸಾಂಗತ್ಯ ದಲ್ಲಿ ಇನ್ನೂ ಕೆಲವು ಅನುಕೂಲಗಳುಂಟು. ರತ್ನಾಕರವರ್ಣಿ ಸಾಂಗತ್ಯವನ್ನು ಕುರಿತು "ರಳ ಕುಳ ಶಿಥಿಲ

ಸಮಾಸಮುಂತಾದವರೊಳಗಿಲ್ಲಿ ಕೆಲವುಳ್ಳರುಂಟು ಕೆಲವಿಲ್ಲಾದರು ಇಲ್ಲವೇಕೆಂದರವರ ಕೋಟಲೆಯೇಕೆ ಹಾಡುಗಬ್ಬದೊಳು" ಎಂದು ಹೇಳಿರುತ್ತಾನೆ. ಆದ್ದರಿಂದ, ಸಾಂಗತ್ಯದ ರಚನೆಯಲ್ಲಿ ನಿರ್ಬಂಧವು ಸ್ವಲ್ಪ ಕಡಮೆ ಎಂದಂತಾಯಿತು. ಎಲ್ಲಕ್ಕೂ ಮಿಗಿಲಾಗಿ ಅದು ಇಂದಿಗೂ ಅಂಶಗಣವಾಗಿರುವುದರಿಂದ ಗಣವಿನ್ಯಾಸದಲ್ಲಿಯೂ ಒಂದು ರೀತಿಯಾದ ಸ್ವಾತಂತ್ರ್ಯವೂ ಸುಭಗತೆಯೂ ಉಂಟು.

ಕನ್ನಡದಲ್ಲಿ ಸಾಂಗತ್ಯದ ರಚನೆ ಎಂದು ಆರಂಭವಾಯಿತು ಎನ್ನುವುದು ಇಂದಿಗೂ ಒಂದು ಸಮಸ್ಯೆಯಾಗಿ ಉಳಿದಿದೆ. ನಾಗವರ್ಮನಾಗಲಿ, ಈಶ್ವರಕವಿಯಾಗಲಿ ಇದರ ಪ್ರಸ್ತಾವವನ್ನು ಮಾಡಿಲ್ಲ. "ಕನ್ನಡ ಕೈಪಿಡಿ"ಯಲ್ಲಿ "ಗೀತಿಕೆಯ ಎರಡು ಪಾದಗಳ ಅಥವಾ ಪಿರಿಯಕ್ಕರದ ಎರಡು ಪಾದಗಳ ರೂಪಾಂತರವೇ ಸಾಂಗತ್ಯವಾಗಿ ತೋರುವುದು" ಎಂದು ಹೇಳಿದೆ.[1] ಡಾ|| ಡಿ. ಎಸ್. ಕರ್ಕಿ ಅವರು ಇದು "ತ್ರಿಪದಿಯಿಂದ ಹೊರಟ ಮಟ್ಟೆಂದೂ, ತ್ರಿಪದಿಯ ಎರಡನೆಯ ಚರಣವನ್ನು ಆವೃತ್ತಿ ಮಾಡಿ ಹಾಡುವ ರೂಢಿಯು ಸಾಂಗತ್ಯದ ರೂಪನಿರ್ಮಾಣಕ್ಕೆ ದಾರಿಮಾಡಿತು" ಎಂದೂ ಹೇಳಿರುತ್ತಾರೆ.[2] ಗೀತಿಕೆಯ ಪ್ರಯೋಗಗಳು ಒಂದೇ ರೀತಿಯಾಗಿಲ್ಲ. ಪಿರಿಯಕ್ಕರದ ಒಂದು ಚರಣಕ್ಕೂ ಸಾಂಗತ್ಯದ ಎರಡು ಚರಣಗಳಿಗೂ ಗಣಸಂಖ್ಯೆಯಲ್ಲಿ ಹೋಲಿಕೆಯಿದ್ದರೂ ಅಳತೆಯಲ್ಲಿ ಸಮಾನತೆಯಿಲ್ಲ. ಆದ್ದರಿಂದ, ಸಾಂಗತ್ಯದ ಗಣರಚನೆಯನ್ನೂ, ಚರಣದ ವ್ಯಾಪ್ತಿಯನ್ನೂ, ಒಮ್ಮೊಮ್ಮೆ ಕಂಡುಬರುವ ಒಳಪ್ರಾಸವನ್ನೂ ಗಮನಿಸಿದರೆ, ಇದು ತ್ರಿಪದಿಯನ್ನು ಅವಲಂಬಿಸಿಯೇ ಉದಿಸಿರಬಹುದು ಎಂದು ತೋರುತ್ತದೆ. ತ್ರಿಪದಿಯ ಎರಡನೆಯ ಚರಣವನ್ನು ಪುನರಾವೃತ್ತಿ ಮಾಡುವ ಬದಲು, ಹೊಸ ಚರಣವನ್ನೇ ಜೋಡಿಸಿ, ತ್ರಿಪದಿಯ ರಸ ದಶ ಸ್ಥಾನಗಳಲ್ಲಿನ ಬ್ರಹ್ಮಗಣದ ನಿರ್ಬಂಧವನ್ನು ತೆಗೆದುಹಾಕಿದರೆ ಬಹುಮಟ್ಟಿಗೆ ಸಾಂಗತ್ಯ ಸಿದ್ಧವಾಗುತ್ತದೆ.

ಪ್ರಕೃತದಲ್ಲಿ, ಸಾಂಗತ್ಯದ ಮೊದಲನೆಯ ಕೃತಿಯೆಂದು ಭಾವಿಸಲಾಗಿರುವ ದೇಪರಾಜನ "ಸೊಬಗಿನ ಸೋನೆ"ಯ ರಚನೆ ವಿಶಿಷ್ಟವಾಗಿದೆ.

ಹರಿಯೆನೆ ಶಂಖ ಚಕ್ರಾಂಕಿತ ಶಿವನೆನೆ
ಸುರಸಿಂಧುವಹವಬ್ಜ | ಭವನೆನೆ
ಸರಸತಿಯಾಣ್ಮನಿಂದ್ರನೆನೆ ಬಳಾಹಕ
ಪರಿವೃತ ಮುದ್ರ ಪೂ | ರ್ವ ಸಮುದ್ರ

(ಕಚ. ಸಂ. ii, ಪು. ೪೪)

ಇಲ್ಲಿ ಎರಡು ಮತ್ತು ನಾಲ್ಕನೆಯ ಚರಣಗಳ ಅಂತ್ಯಗಣ ರೂಢಿಯಲ್ಲಿರುವ ಬ್ರಹ್ಮಗಣದ ಬದಲು ವಿಷ್ಣುಗಣವಾಗಿದೆ.[3] ಇಂಥ ಸಾಂಗತ್ಯ ಪ್ರಯೋಗಗಳು ಹೆಚ್ಚಾಗಿ ದೊರೆಯುವುದಿಲ್ಲ. ನಿಜಗುಣ ಶಿವಯೋಗಿಯ "ಪರಮಾನುಭವ ಬೋಧೆ", ಶಾಂತಮಲ್ಲನ "ಅನುಭವಮುದ್ರೆ"ಗಳಲ್ಲಿ ಕಂಡುಬರುತ್ತದೆ. ಯಕ್ಷಗಾನಗಳಲ್ಲಿ ಆಗಾಗ್ಗೆ ಕಂಡುಬರುವುದುಂಟು. ಈ ವಿರಳ ರೀತಿಯನ್ನು "ಸೊಬಗಿನ ಸೋನೆ ವರ್ಣ" ಎಂದು ನಿರ್ದೇಶಿಸಿರುವುದುಂಟು. ಸಾಂಗತ್ಯದ ನಿರ್ಮಾಣದಲ್ಲಿ ಇದನ್ನು ಒಂದು ವಿಶಿಷ್ಟವಾದ ಪ್ರಯೋಗವೆಂದು ಇಟ್ಟುಕೊಳ್ಳಬಹುದು.

---

1. ಸಂ. ೧, ಪು. ೧೩೨, ೧೯೫೫.

2. ಕನ್ನಡ ಛಂದೋವಿಕಾಸ, ೧೯೫೬, ಪು. ೨೦೪.

3. ಈ ಗಣವನ್ನು "ಕೈಪಿಡಿ"ಯಲ್ಲಿ "ಬ್ರ+೧ ಅಂಶ" ಎಂದು ವಿಭಾಗಿಸಿ ಕಡೆಯ ಅಂಶವನ್ನು ಒಂದು ಗಣಕ್ಕೆ ಸಮಾನವೆಂಬುದಾಗಿ ಭಾವಿಸಿರುತ್ತಾರೆ (ಪು. ೧೩೪). ಚಿಕ್ಕ ಚರಣಗಳಲ್ಲಿಯೂ ನಾಲ್ಕು ಗಣಗಳ ಲೆಕ್ಕವನ್ನು ಇಟ್ಟುಕೊಂಡರೆ ಅರ್ಧಸಮವೃತ್ತದ ಸ್ವರೂಪಕ್ಕೆ ಭಂಗಬರಹುದಾದ್ದರಿಂದ ಕಡೆಯ ಗಣವನ್ನು ಒಂದು ವಿಷ್ಣುವೆಂದೇ ಎಣಿಸಿ, ಕಾಲಕ್ರಮದಲ್ಲಿ ಇದರ ಸ್ಥಾನದಲ್ಲಿ ಬ್ರಹ್ಮವು ಬಂದಿರಬಹುದೆಂದು ಹೇಳಲವಕಾಶವಿದೆ.

ತ್ರಿಪದಿಯಲ್ಲಿ ಒಳಪ್ರಾಸದ ಪ್ರಾಚುರ್ಯ ಕಂಡುಬರುವಂತೆಯೇ ಸಾಂಗತ್ಯದ ಕೆಲವು ರಚನೆಗಳಲ್ಲಿಯೂ ತೋರಿಬರುತ್ತದೆ. ಈ ಒಳಪ್ರಾಸವನ್ನೂ ಅಂಶಗಣದ ಧಾಟಿಯನ್ನೂ ಕಂಡು ಈ ರಚನೆಯನ್ನು ಮೂಲ ಷಟ್ಪದವೆಂದೋ ಶರಷಟ್ಪದಿಯೆಂದೋ ಕೆಲವರು ಭಾವಿಸಿರುತ್ತಾರೆ. ಡಾ|| ಬಿ. ಎಸ್. ಗದ್ದಗಿಮಠ ಅವರು, "ಹಂಪೆಯ ಹರಿಹರನ ಷಟ್ಪದಿಕಾವ್ಯ" ಎಂಬ ಲೇಖನವೊಂದರಲ್ಲಿ[1] ಇಂಥ ಕೆಲವು ಪದ್ಯಗಳನ್ನು ಉದಾಹರಿಸಿ ಇವುಗಳನ್ನು ಮೂಲಷಟ್ಪದಿ ಎಂದು ಕರೆದಿರುವರು. ಇವುಗಳಲ್ಲಿ ಒಂದರ ನಡೆಯನ್ನು ನೋಡಬಹುದು.

ಕವಿ ಹರೀಶ್ವರ ಕೀರ್ತಿ
ಭುವನ ಮಧ್ಯದಲೊಪ್ಪಿ
ತವೆ ಮೆರೆವುದು ಪಲತೆರದಿ |
ಶಿವಗಣ ಸ್ತೋತ್ರದ
ಶ್ರವಣಸುಖವನೀವ
ಸವಿನುಡಿ ಮುಕ್ತಿಯ ಮಾರ್ಗ ||

ಇಲ್ಲಿ ೩ ಮತ್ತು ೬ ನೆಯ ಚರಣಗಳು ಒಂದೇ ರೀತಿಯಾಗಿದ್ದರೂ ಕಡೆಯ ಗಣ, ಮೂಲಷಟ್ಪದದಲ್ಲಿ ಇರುವಂತೆ ರುದ್ರಗಣವಾಗಿರದೆ ಬ್ರಹ್ಮಗಣವಾಗಿರುವುದು ಗಮನಾರ್ಹವಾದುದು. ಶ್ರೀಯುತರು ಕೊಟ್ಟಿರುವ ಇತರ ಉದಾಹರಣೆಗಳಲ್ಲಿ, ಒಂದರಲ್ಲಿ ಇಂತೆಯೇ ಅಂತ್ಯಗಣಗಳು ಬ್ರಹ್ಮವಾಗಿಯೂ, ಇನ್ನೊಂದರಲ್ಲಿ ಅಸಮಾನ ಪಾದಗಳೂ, ಒಂದು ಪದ್ಯಾರ್ಧದಲ್ಲಿ ರುದ್ರಗಣವೂ ಬಂದಿರುತ್ತವೆ. ಹೀಗೆ ನಿಯತವಾದ ಗಣವಿನ್ಯಾಸ ಇಲ್ಲದೆ ಇರುವುದರಿಂದ ಈ ರಚನೆಯ ಬಗ್ಗೆ ಹಲವು ಸಂದೇಹಗಳು ಉಳಿಯುತ್ತವೆ. ಬ್ರಹ್ಮಗಣ ವನ್ನು ಉಳ್ಳ ಮತ್ತು ಸಮಾನಪಾದಗಳು ಇರುವ ರಚನೆಗಳನ್ನು ಗಮನಿಸಿದರೆ ಇದು ಸಾಂಗತ್ಯದ ನಡೆಯೇ ಆಗಿರುವುದನ್ನು ಕಾಣಬಹುದು.

ಇಂಥ ಮತ್ತೊಂದು ನಿದರ್ಶನವನ್ನು ನಂಜುಂಡಕವಿಯ "ಭೈರವೇಶ್ವರ ಕಾವ್ಯ"ದಲ್ಲಿ ನೋಡಬಹುದು.

ಪೂಗಂಪನುಂಡುಂಡು
ರಾಗಿಪ ಭ್ರಮರಗಳ್
ತೀಗುವ ಸೋಗೆ ಸೊಕ್ಕೇರಿ |
ಕೂಗುವ ಪಿಕಮಂದ
ವೇಗದಂಚೆಗಳಿಂದ
ಬಾಗಿ ಕೇಳೀವನವಿಹುದು || (ಸಂ. ii, ಪು. ೨೪)

ಈ ಗ್ರಂಥವನ್ನು ಪ್ರಕಟಿಸಿರುವ ಸಂಪಾದಕರು ಇದರ ರಚನೆಯನ್ನು ಕುರಿತು "ಈ ಗ್ರಂಥವನ್ನು ಕೆಲವು ಓದುಗರು ಸಾಂಗತ್ಯದಿಂದ ರಚಿತವಾಗಿದೆ ಎಂದು ಭಾವಿಸಿದ್ದಾರೆ....೧, ೨, ೪, ೫ನೆಯ ಪಾದಗಳು ಸ್ವಲ್ಪ ಹೆಚ್ಚು ಕಮ್ಮಿ ಕುಸುಮಷಟ್ಪದಿಯ ಮಾತ್ರೆಗಳನ್ನೇ ಹೋಲುವುದಾದರೂ, ೩, ೬ ನೆಯ ಪಾದಗಳು ಶರ ಷಟ್ಪದಿಯ ಮಾತ್ರೆಗಳನ್ನೇ ಹೆಚ್ಚಾಗಿ ಅನುಸರಿಸಿರುವುದರಿಂದ ನಾವು ಶರಷಟ್ಪದಿ ಎಂದೇ ನಿಶ್ಚೈಸಿದ್ದೇವೆ"[2] ಎಂದು ಹೇಳಿರುತ್ತಾರೆ. ಇದಲ್ಲದೆ ಅವರೇ, ಮುಂದುವರಿದು "ಕವಿಯು ಷಟ್ಪದಿಯ ನಿಯಮಗಳಿಗೆ ಸರಿ ಯಾಗಿ ಗಣ, ಪ್ರಾಸು, ಮಾತ್ರೆ ಇವುಗಳನ್ನು ಕ್ರಮವಾಗಿ ಬಳಸಿರುವುದಿಲ್ಲ[3] ಎಂದೂ ಹೇಳಿರುತ್ತಾರೆ. ಕವಿ

1. ಶರಣಸಾಹಿತ್ಯ, ಸಂ. xxi, ಸಂ. ೪, ಜುಲೈ ೧೯೫೪, ಪು. ೧೨೯–೧೩೧.
2. ಪ್ರಸ್ತಾವನೆ, ಪು. ೧೮–೧೯.
3. ಅದೇ, ಪು. ೧೯.

ಚರಿತೆಕಾರರು ಇದನ್ನು ಸ್ಪಷ್ಟವಾಗಿ ಸಾಂಗತ್ಯವೆಂದೇ ಹೇಳಿರುತ್ತಾರೆ.[1] ವಾಸ್ತವವಾದ ಅಂಶವೂ ಅಷ್ಟೆ. ಮೇಲೆ ಉದಾಹರಿಸಿರುವ ಎರಡು ರಚನೆಗಳೂ ಒಳಪ್ರಾಸವನ್ನು ಒಳಗೊಂಡ ಸಾಂಗತ್ಯಗಳಾಗುತ್ತವೆ. ಇವುಗಳ ಗಣವಿನ್ಯಾಸವನ್ನು ಹೀಗೆ ತೋರಿಸಬಹುದು :

(i) ಕವಿ ಹರೀ | ಶ್ವರಕೀರ್ತಿ | ಭುವನವು | ಧ್ಯದೊಲೊಪ್ಪಿ
ತವೆ ಮೆರೆ | ವುದು ಪಲ | ತೆರದಿ
ಶಿವಗಣ | ಸ್ತೋತ್ರದ | ಶ್ರವಣಸು | ಖವನೀವ
ಸವಿನುಡಿ | ಮುಕ್ತಿಯ | ಮಾರ್ಗ

(ii) ಪೂಗಂಪ | ನುಂಡುಂಡು | ರಾಗಿಪ | ಭ್ರಮರಗಳ್
ತೇಗುವ | ಸೋಗೆ ಸೊ | ಕ್ಕೇರಿ
ಕೂಗುವ | ಪಿಕ ಮಂದ | ವೇಗದಂ | ಚೆಗಳಿಂದ
ಬಾಗಿಕೇ | ಳೀವನ | ವಿಹುದು

ಈ ಒಳಪ್ರಾಸವನ್ನು ನೋಡಿದರೆ ತ್ರಿಪದಿಯು ನೆನಪಾಗುವುದು ಸಹಜ. ಸಾಂಗತ್ಯದ ಬೆಳವಣಿಗೆಗೆ ತ್ರಿಪದಿಯೆ ತಳಹದಿಯಿರಬಹುದೆಂಬ ಊಹೆಗೆ ಇದು ನೆರವಾಗಬಲ್ಲುದು.

ಸಾಂಗತ್ಯವನ್ನು ಅಂಶಗಣಘಟಿತವಾದುದೆಂದು ಈ ಮೊದಲೇ ಹೇಳಿದೆಯಷ್ಟೆ. ಆದರೆ, ಇದನ್ನು ಮಾತ್ರಾಗಣಕ್ಕೆ ಒಳಪಡಿಸಲು ಕೆಲವರು ಪ್ರಯತ್ನಿಸಿರುವುದುಂಟು. ಶ್ರೀ. ಕೆ. ಜಿ. ಕುಂದಣಗಾರರು, ಇದು ಪ್ರಾಕೃತದ ಘತ್ತಾಪಟ್ಪದಿಯ ಮಾದರಿಯನ್ನು ಹೋಲುವುದಾಗಿ ಸೂಚಿಸಿ, ಆ ನಿಯಮಕ್ಕೆ ಅನುಸಾರವಾಗಿ ಈ ಕೆಳಗೆ ಕಂಡಂತೆ ಒಂದು ಪದ್ಯಕ್ಕೆ ಪ್ರಸ್ತಾರ ಹಾಕಿರುತ್ತಾರೆ.

ಬಿಗಿದುಟ್ಟ ಕಾಸೆ ಸು (೧೦ ಮಾತ್ರೆಗಳು)
ತ್ತಿದ ಚಂದ್ರಗಾವಿ ( ೮ ,, )
ಮಿಗೆ ರಂಗುವೆತ್ತಲ್ಲಿ ಮೆರೆಯೆ | (೧೩ ,, )
ಹಗುರ ಶೃಂಗಾರದಿ ದೊ (೧೦ ,, )
ರೆಯ ಬೀಳ್ಕೊಂಡನು ( ೮ ,, )
ಜಗವ ಸೋಲಿಸುವ ಚೆನ್ನಿಗನು || (೧೩ ,, )

ಆದರೆ, ಅವರೇ ಕೊಡುವ ಇನ್ನೊಂದು ಉದಾಹರಣೆ ಈ ನಿಯಮಕ್ಕೆ ಹೊರತಾಗಿರುತ್ತದೆ.

ಚರಿಸಿದೆನಿರುಳು ರಕ್ಕ (೧೦ ಮಾತ್ರೆಗಳು)
ಸನಂತೆ ದೋಷಾ ( ೮ ,, )
ಕರನಾದೆನೀ ಪಾಪವನು | (೧೨ ,, )
ಪರಿಹರಿಸುವೆನೆಂದ (೧೦ ,, )
ಸ್ತಾದ್ರಿಯೇರಿಕ ( ೮ ,, )
ಮ್ಮರಿ ಬೀಳ್ವವೊಲು ಬಿದ್ದನಿಂದು[2] || (೧೩ ,, )

---

1. ಕಚ. ಸಂ. ii, ಪು. ೨೬೫.

2. "Sangatya and Satpadi metres in Kannada", Journal of the University of Bombay, Vol. VI, Part III and VI.

ಇಲ್ಲಿ ಮಾತ್ರಾಸಂಖ್ಯೆ ನಿಯತವಾಗಿ ಬಂದಿಲ್ಲವೆಂಬುದನ್ನು ಲೇಖಕರೂ ಗಮನಿಸಿರುತ್ತಾರೆ. ಆದರೂ ಮೂರನೆಯ ಚರಣದಲ್ಲಿರುವ "ಪಾಪವನು" ಎಂಬುದನ್ನು "ಪಾಪವನ್ನು" ಎಂಬುದಾಗಿ ತಿದ್ದಿಕೊಂಡು ಇದನ್ನೂ ಘತ್ತಾಷಟ್ಪದಿಯ ಲಕ್ಷಣಕ್ಕೆ ಸರಿಹೊಂದಿಸಲು ಪ್ರಯತ್ನಿಸಿರುತ್ತಾರೆ.[1] ಹೀಗೆ ತಿದ್ದಿಕೊಳ್ಳಲು ಆಧಾರವೇನಿದೆ? [ಶ್ರೀಯುತರು ಕೊಟ್ಟಿರುವ ಮತ್ತೊಂದು ಉದಾಹರಣೆಯಲ್ಲಿ ಬರುವ "ಸುರಭಿಕರನ ಬೀಡುದಾಣ" (೧೨) ಎಂಬ ಮೂರನೆಯ ಚರಣವನ್ನೂ "ದಿರವಾದುದಾ ಜನಪದವು" (೧೨) ಎಂಬ ಆರನೆಯ ಚರಣವನ್ನೂ ಕಡೆಯ ಅಕ್ಷರವನ್ನು ಎಳೆದುಕೊಂಡು ೧೩ ಮಾತ್ರೆಗಳಿಗೆ ಹೊಂದಿಸಿಕೊಳ್ಳಬೇಕೆಂದು ಸೂಚಿಸಿರುತ್ತಾರೆ.[2] ಈ ರೀತಿ ಒಂದೊಂದು ಸಂದರ್ಭಕ್ಕೂ ಒಂದೊಂದು ನಿಯಮವನ್ನು ಕಲ್ಪಿಸಿಕೊಳ್ಳುವುದಕ್ಕಿಂತಲೂ ಈ ರಚನೆಗಳನ್ನು ಅಂಶಗಣಕ್ಕೆ ಅಳವಡಿಸುವುದೇ ಸಹಜವಾಗಿ ಕಾಣುತ್ತದೆ.] ಇದಲ್ಲದೆ ಸುಸ್ಪಷ್ಟವಾಗಿ ಕಂಡುಬರುವ ದ್ವಿತೀಯಾಕ್ಷರಪ್ರಾಸ (ಆದಿಪ್ರಾಸ) ವನ್ನು ಕಡೆಗಣಿಸಿ ಈ ರಚನೆಗಳನ್ನು ಆರು ಪಾದಗಳಾಗಿ ವಿಂಗಡಿಸುವ ಔಚಿತ್ಯವಾದರೂ ಏನು? ಘತ್ತಾಷಟ್ಪದಿಯಲ್ಲಿ ಅನುಪ್ರಾಸಕ್ಕೆ ಸ್ಥಾನವಿರುವುದಾಗಿ ತಿಳಿದುಬರುತ್ತದೆ.[3] ಕನ್ನಡದಲ್ಲಿ ಪ್ರಾಸಕ್ಕೆ ದೊರಕಿರುವ ಪ್ರಾಶಸ್ತ್ಯವನ್ನು ಗಮನಿಸಿದರೆ ನಮ್ಮ ಕವಿಗಳು ಇದನ್ನು ಎಂದಾದರೂ ಬಿಡುತ್ತಾರೆಯೆ ಎನ್ನಿಸುತ್ತದೆ.

ಶ್ರೀ. ಉಗ್ರಾಣ ಮಂಗೇಶರಾಯರು "ನೂತನ ಶಾಲಾ ವ್ಯಾಕರಣ" ಎಂಬ ಗ್ರಂಥದಲ್ಲಿ "ಸಾಂಗತ್ಯವು ಭಾಷಾಸಾಹಿತ್ಯ ದೃಷ್ಟಿಯಿಂದ ಒಂದು ಹಳೆಯ ಬಂಧವಲ್ಲ. ಅದು ಬಹುಕಾಲ ಹೆಂಗುಸರ ಬಾಯಲ್ಲಿ ಹಾಡಾಗಿಯೇ ನಲಿದಾಡುತ್ತಲಿತ್ತು. ಇದಕ್ಕೆ ಛಂದೋಂಬುಧಿಯಲ್ಲಿ ನಾಗವರ್ಮನು ಲಕ್ಷಣ ಹೇಳಲಿಕ್ಕೆ ಕಾರಣವೇ ಇಲ್ಲ. ಅದಕ್ಕೆ ಈಗ ಲಕ್ಷಣವನ್ನು ಬರೆಯುವಾಗ ಬ್ರಹ್ಮ, ವಿಷ್ಣು, ರುದ್ರಗಣಗಳ ಕೋಲಿನಲ್ಲಿ ಅದನ್ನು ಅಳೆಯಬೇಡ.

ಅದು ಬರೀ ಹಾಡಿನ ಮಟ್ಟು. ಅದಕ್ಕೆ ತಾಳವೇ ಪ್ರಧಾನ. ಹೆಚ್ಚಾಗಿ ಐದು ಮಾತ್ರೆಗಳು ತೋರುವುವು. ಒಂದೊಂದು ಗಣದಲ್ಲಿ ನಾಲ್ಕು ಮಾತ್ರೆಗಳು ಕಾಣಲೂಬಹುದು. ಹೆಂಗಸರು ಹಾಡುವ ಒಂದು ಧಾಟಿಯ ಪ್ರಕಾರ ಗಣಕ್ಕೆ ಆರು ಮಾತ್ರೆಗಳೂ ರಾಗದಲ್ಲಿ ಸಿಕ್ಕುವುವು (ಪು. ೧೦೩-೧೦೪)" ಎನ್ನುವರು. ಲೇಖಕರ ಮಾತುಗಳನ್ನೇ ಪರಿಶೀಲಿಸಿದರೆ, ಸಾಂಗತ್ಯವನ್ನು ಮಾತ್ರಾಗಣಗಳಲ್ಲಿ ಹಿಡಿದಿಡಲು ಹೇಗೆ ಅಸಾಧ್ಯವೆಂದು ವಿದಿತವಾಗುತ್ತದೆ.

ಮುಖ್ಯವಾಗಿ, ಸಾಂಗತ್ಯ ಅಂಶಗಣಗಳಿಂದ ಕೂಡಿದ ಒಂದು ರಚನೆ. ನಾಲ್ಕು ಚರಣಗಳುಳ್ಳ ಅರ್ಧಸಮ ವೃತ್ತ. ೧ ಮತ್ತು ೩ ನೆಯ ಚರಣಗಳಲ್ಲಿ ೪ ವಿಷ್ಣುಗಣಗಳೂ ೨ ಮತ್ತು ೪ ನೆಯ ಚರಣಗಳಲ್ಲಿ ೨ ವಿಷ್ಣು ಮತ್ತು ೧ ಬ್ರಹ್ಮಗಣವೂ ಬರುತ್ತವೆ. ವಿಷ್ಣುಗಣಕ್ಕೆ ಬದಲಾಗಿ ಬ್ರಹ್ಮಗಣ ಬರುವುದುಂಟು. ದ್ವಿತೀಯಾಕ್ಷರ ಪ್ರಾಸ ನಿಯತವಾಗಿ ಬರುತ್ತದೆ. ಒಳಪ್ರಾಸ ಬಂದರೂ ಬರಬಹುದು.

ಇನ್ನು ನಂಜುಂಡ, ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿಗಳು ಮಾಡಿರುವ ಪ್ರಯೋಗವನ್ನೂ ವೈವಿಧ್ಯವನ್ನೂ ಗಮನಿಸಬಹುದು. ನಂಜುಂಡನು ಸುಪ್ರಸಿದ್ಧವಾದ ಪದ್ಧತಿಯನ್ನೇ ಅನುಸರಿಸಿರುತ್ತಾನೆ.

---

1. "Sangatya and Satpadi metres in Kannada", Journal of the University of Bombay, Vol. VI, Part III and VI, P. 52.

2. Ibid. P. 52.

3. "ಅಸ್ಯಾಂ ಘತ್ತಾಯಾಂ ಪ್ರಥಮದ್ವಿತೀಯಯೋಃ ತೃತೀಯ ಷಷ್ಠಯೋಃ ಚತುರ್ಥ ಪಂಚಮಯೋಃ ಪಾದಯೋಃ ಅನುಪ್ರಾಸಃ." ಕವಿದರ್ಪಣಂ, ABORI, Vol. xvii, Part I. P. 38.

ಒಮ್ಮೊಮ್ಮೆ ವಿಷ್ಣುಗಣಕ್ಕೆ ಬದಲಾಗಿ ಬ್ರಹ್ಮಗಣ ಬರುವುದುಂಟು. ಉದಾಹರಣೆಗಾಗಿ ಈ ಕೆಳಗಿನ ಪದ್ಯಗಳನ್ನು ನೋಡಿ :-

ಬ್ರ ಬ್ರ
(i) ಮದದಾ | ನೆಯ ಮೋ | ಹರ ಮುಸು | ಕಿತು ಬಂದು
ಕುದುರೆಯ | ಪೌಜು ಕ | ವಿದುದು | (xv, ೭೦)

ಬ್ರ ಬ್ರ
(ii) ಚರರೆ | ಯ್ತಂದಾ | ಸುದ್ದಿಯ | ಕಂಪಿಲ |
ಧರಣಿ ಪ | ತಿಗೆ ಪೇಳ | ಲವರು | (xvi, ೨೫)

ಬ್ರ
(iii) ಸುರುತಾಳ | ಗಾ ಸು | ದ್ದಿಯ ನೇಮಿ | ಖಾನನು
ಭರದಿಂದ | ಪೋಗಿ ಬಿ | ನ್ನವಿಸೆ |
ಬ್ರ
ತೆರಳ|ನ್ನೇಕೆ ಸಂ | ದೇಹ ಕು | ಮ್ಮಟಕೆಂ
ದೊರೆದನ | ವನಿಗಸು | ರೇಂದ್ರ | (xix, ೪)

ಬ್ರ
(iv) ಬಲುಮುಂದಿ | ಪೊಱ ಮ | ಟ್ಟುದು ದಂಡ | ನಾಥನ |
ಕೆಲ ಬಲ | ದೊಳಗೆ ಖೋ | ಯೆನುತ | (xix, ೧೮)

ವಿಷ್ಣುಗಣದ ಸ್ಥಾನದಲ್ಲಿ ರುದ್ರಗಣ ಬಂದಿರುವುದೂ ಉಂಟು.

ಬ್ರ ರು
(v) ಕುರುರಾ | ಯನ ಮೈದು | ನನ ಕೊಲೆಗೆ | ಧರ್ಮಜ |
ನರನ ಕ | ಳುಪವ ತೆ | ಱದೊಳು[1] | (xv, ೧೯)

ನಂಜುಂಡನು ಪ್ರಾಸಸ್ಥಾನದಲ್ಲಿ ಶಕಟರೇಫವನ್ನು ಬಹುಮಟ್ಟಿಗೆ ಶುದ್ಧವಾಗಿ ಬಳಸಿದ್ದಾನೆ.

ಪಾಂಚಾಳಗಂಗನ ಕೃತಿಯ ಮೂಲಪಾಠ ನಿಷ್ಕರ್ಷೆಯಾಗಿಲ್ಲದಿರುವುದರಿಂದ ಛಂದೋನಿರ್ಣಯ ತೊಡಕಾದುದೇ ಸರಿ. ಆದರೆ, ಹಲವರ ಕೈವಾಡದಿಂದ ಛಂದಸ್ಸಿನ ಮೇಲೆ ಎಂಥ ಪರಿಣಾಮವುಂಟಾಗಿದೆಯೆಂಬುದನ್ನು ಕೆಲವು ನಿದರ್ಶನಗಳ ಮೂಲಕ ತಿಳಿಯಬಹುದು.

(i) ಕನ್ನಡ | ಕವಿಜಾಣ | ರನ್ನದ | ಕವಿಜಾತಿ |
ಇನ್ನು ಮು | ನ್ನಿನ ಪಾಂ | ಚಾಲಾ |
ಚೆನ್ನಿಗ | ಚೆಲುವ ಪ್ರ | ಸಂಗ | ಗಂಗಯ್ಯ |
ಸಂ]ಪನ್ನ ಪೇ | ಳಿದನು ಯಿಾ | ಕೃತಿಯ | (ಗಂ. ೧, i, ೧೦.)

---

1. ಈ ಮೇಲಿನ ಉದಾಹರಣೆಗಳನ್ನು ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಪರಿಷ್ಕೃತ ಮುದ್ರಣದಿಂದ ಆರಿಸಿದೆ.

ಇದೇ ಪದ್ಯ ಬೇರೆ ಪ್ರತಿಗಳಲ್ಲಿ ಹೀಗಿದೆ :–

ಕನ್ನಡ । ದೇಶಕ್ಕೆ । ರನ್ನದ । ಪದಜಾತಿ ।
ಇನ್ನು ಮು । ನ್ನಿನ ಪಂ । ಚಾಸ್ಯ ।
ಚನ್ನ ಭು । ಜಂಗೇಶ । ಪುತ್ರ । ಗಂಗಯ್ಯ ।
ವರ್ಣಿಸಿ । ದನು ಈ । ಕಥೆಯ । (ಗಂ. ೩, ix, ೬)

ಕನ್ನಡ । ಕವಿಜಾಣ । ರನ್ನನು । ಗಂಗುಗ ।
ಇನ್ನು ಮು । ನ್ನವೆ ಪಾಂ । ಚಾಳಾ ।
ಚನ್ನ ಭು । ಜಂಗನ । ಭೃತ್ಯ ಗಂ । ಗಯ್ಯ ಸಂ ।
ಪನ್ನ ಪೇ । ಳಿದನೀ । ಕೃತಿಯ । (ಗಂ. ४, i, ೧೩)

(ii) ಜೀವಗಳ್ಳರ ಗಂಡ ಕೋವಿದ ರಾಮನ
ನೀ]ನಾವ ಪರಿಯು ಕೊಂದೆ ಮಂತ್ರಿ (ಗಂ. ೧, v, ೨೮४)

ಜೀವಗಳ್ಳರ ಗಂಡ ಕೋವಿದ ರಾಮಯ್ಯ
ಆವ ಪರಿಯಲಿ ಕೊಂದೆ ಹೇಳೊ (ಗಂ. ೩, xxx, ೬೦)

ಜೀವಗಳ್ಳರ ಗಂಡ ಕೋವಿದ ರಾಮಯ್ಯ
ಆವ ಠಾವಿಲಿ ಕೊಂದೆ ಹೇಳೊ (ಗಂ. ೫, xii, ೩೩)

(iii) ತಂದೆಯ ವಂಶಕ್ಕೆ ಕುಂದು ತಂದವನಲ್ಲ
ಅಂದೇ ಕೊಂದಳು ಚಿಕ್ಕಮ್ಮ
ಸಂಗ್ರಾಮ ಧೀರ ಕಾಟಣ್ಣ ನೀ ಕೇಳೆಂದು
ನೊಂದು ನುಡಿದ ರಾಮನಾಥ (ಗಂ. ೧, viii, ೧೬४)

ತಂದೆಯ ವಂಶಕ್ಕೆ ಕುಂದು ತಂದವನಲ್ಲ
ಅಂದೇ ಕೊಂದಳೊ ಚಿಕ್ಕಮ್ಮ
ಕಂದರ್ಪರೂಪ ಕಾಟಣ್ಣ ಕೇಳೆನುತಲಿ
ನೊಂದು ನುಡಿದ ರಾಮನಾಥ (ಗಂ. ೩, xxxiv, ೨೩೮)

ತಂದೆಯ ವಾಕ್ಯಕ್ಕೆ ಕುಂದು ತಂದವನಲ್ಲ
ಅಂದು ಕೊಂದಾಳೊ ಚಿಕ್ಕಮ್ಮ
ಸಂಗ್ರಾಮ ಧೀರ ಕಾಟಣ್ಣ ನೀ ಕೇಳೆಂದು
ನೊಂದು ನುಡಿದನು ರಾಮನಾಥ (ಗಂ. ೫, xv, ೧೫೭)

(iv) ಸಾರಿ ಹೇಳುವ ಹೆಗ್ಗಾಳೆಗೆ ತುರುಕರ
ಪಾಳೆಯ ಗದಗಾಪಿಸಿತು
ದಾಳಿಕಾರನು ರಾಮ ಧೀರ ಬರುತಹನೆಂದು
ಜಾಣರಾದವರೆಲ್ಲ ತೊಲಗಿ (ಗಂ. ೧, viii, ೧೩೭)

ಕಾಳೆಯ ಧ್ವನಿಯ ಕೇಳುತಲಾಗ ತುರುಕರು
ಪಾಳೆಯ ಗದಗದಿಸುತ್ತ
ದಾಳಿಯ ಬರುತನದಕೊ ಯಂದು ರಾಮಯ್ಯ
ಕೇಳಿ ತನ್ನೊಳು ಬೆದರುತಲಿ (ಗಂ. ೩, xxxiv, ೨೦೦)

ಸಾರುತ ಒದರುವ ಹೆಗ್ಗಾಳೆ ತುರುಕರ
ಪಾಳ್ಯೆಯದೊಳಗೆ ಕಂಪಿಸಿತು
ದಾಳಿಕಾರನು ರಾಮಯ್ಯ ಬರುತಾನೆಂದು
ಜಾಣರೆಲ್ಲರು ನೀವು ತೊಲಗಿ (ಗಂ. ೫. xv, ೧೩೪)

(v) ಹಾರವ । ಹರಿದಿಟ್ಟು । ಸೀರೆಯ । ಸೆರಗನು ।
?
ನಾರ ಸೀ । ಳುವಂತೆ । ಸೀಳಿ । (ಗಂ. ೧. v, ೧೫೧)

ಹಾರವ । ಹರಿದಿಟ್ಟು । ಸೀರೆಯ । ಸೆರಗನು ।
ನಾರು ಸೀ । ಳಿದ ಹಾಗೆ । ಸೀಳಿ । (ಗಂ. ೩, xxix, ೨೮)

ಹಾರವ । ಹರಿದಿಟ್ಟು । ಸೀರೆಯ । ಸೆರಗನು ।
? ?
ನಾರು ಸೀ । ಳುವಂತೆ । ಸೀಳಿದಳು । (ಗಂ. ೫, xi, ೨೨)

ಈ ಉದಾಹರಣೆಗಳಲ್ಲಿ ಬರುವ ಅಧಿಕಾಕ್ಷರ, ಪ್ರಾಸಮಿಶ್ರಣ ಮತ್ತು ವಿಷಮಗಣಗಳು ಹೇಗೆ ಛಂದೋಭಂಗಕ್ಕೆ ಕಾರಣವಾಗಿವೆಯೆಂಬುದನ್ನೂ, ಶುದ್ಧ ಪಾಠವನ್ನು ನಿರ್ಣಯಿಸುವಾಗ ಈ ದೋಷಗಳಿಲ್ಲದ ಪದ್ಯಗಳು ಹೇಗೆ ನೆರವಾಗಬಲ್ಲುವು ಎಂಬುದನ್ನೂ ಮನಗಾಣಬಹುದು.

ಮಹಲಿಂಗಸ್ವಾಮಿಯ ಕೃತಿಯಲ್ಲಿ ಪ್ರಾಸವನ್ನು ನಿಯತವಾಗಿ ಪರಿಪಾಲಿಸದೆ ಇರುವುದು ವಿಶೇಷವಾದ ಅಂಶ. ತಾನಾಗಿ ಕೂಡಿ ಬಂದರೆ ಉಂಟು ; ಇಲ್ಲದಿದ್ದರೆ ಇಲ್ಲ.

ಪ್ರಾಸರಹಿತಕ್ಕೆ :—

ಸದರಿನೊಳಗೆ ಕುಳಿತು ಚದುರ ಬಲ್ಲಾಳರಾಯ
ಕರವಿಡಿದು ತನ್ನ ಮಂತ್ರಿಯನು
ಮುಳುಗುವ ತೆರಬಂತು ಮುದಿಯ ಕಂಪಿಲನಿಗೆ
ನಗುತ ಬಲ್ಲಾಳನಾಡುವನು (iii, ೨೦೬)

ಸಮಯಕಾಲವನರಿತು ಗೆಲಬೇಕು ವೈರಿಯ
ಮುಳುಗು ಮುಗ್ಗಿದ ಕಾಲದೊಳಗೆ
ನರಿ ಬಂದು ಗುಂಡಿಯ ಕೆಡೆದಾಗ ಜನಕೊಂದು
ಯಿಡಬೇಕು ಕಲ್ಲೆಂಬ ಗಾದೆ (v, ೧೧೦)

ಎರಡೆರಡು ಪಾದಗಳಲ್ಲಿ ಮಾತ್ರವೇ ಪ್ರಾಸವಿರುವುದುಂಟು :—

ಬಲವನು ಲಯಮಾಡಿ ಉಳಿದುಹೋಗಲುಯೆಂದು
ಯಿಳೆಯ ಕೆತ್ತಿಸುವೆ ಬಾಚಿಯಲಿ
ಮಡದಿ ಮಕ್ಕಳ ಮುಂದೆ ನಗೆಗೆಡಿಸುವುದಕಿಲ್ಲಿ
ಮಡಿದುಹೋಗಲು ಗತಿಯುಂಟು (v, ೬೬)

ಕೂಡಿ ಬಂದರೆ ಪೂರ್ಣಪ್ರಾಸವೂ ಉಂಟು :—

ರು ರು
ಗರುಡನು । ಉರುಗಾಗೆ । ಮೊರೆದು ಯೆರ । ಗುವ ತೆರದಿ ।
ಗಿರಿಗೆಬಂ । ದಡರ್ವಂತೆ । ಸಿಡಿಲು ।
ಯರಡುಭಾ । ಗದಮೇಲೆ । ಅನುಜರೀ । ರ್ವರುಯೇರೆ ।
ರು ರು
ಕೊರೆದು ಕೆಡೆ । ವುತ ಕಣಿಕೆ । ತೆರದಿ । (iv, ೪೭)

ಆಗಿಂದಾಗ್ಗೆ ಒಳಪ್ರಾಸವೂ ಕಂಡುಬರುವುದುಂಟು :—

ರು
ಬಲ್ಲಾಳ । ನೆಂದರೆ । ಬಲ್ಲಿದ । ಜಗದೊಳಗೆ ।
ರು ರು
ಯೆಲ್ಲ ದೊರೆ । ಗಳಿಗೆ ನವ । ಘಟೆಯು ।
ರು
ನೆಲ್ಲಿಯ । ಕಾಯಂತೆ । ಚೆಲ್ಲಿಹೋ । ಗಲು ಬುರುಡೆ ।
ರು
ಉರುಳಿತ್ತು । ರಣಮಯವು । ಭೂಪ । (vi, ೬೩)

ಮಹಲಿಂಗಸ್ವಾಮಿಯ ರಚನೆಯಲ್ಲಿ ಮೇಲಿಂದಮೇಲೆ ಬರುವ ರುದ್ರಗಣದ ಪ್ರಾಚುರ್ಯವನ್ನೂ ಇಲ್ಲಿ ಗುರುತಿಸಲಾಗಿದೆ. ಹಾಡುಗಬ್ಬದ ಸೌಲಭ್ಯವನ್ನು ಈ ಪ್ರಯೋಗಗಳಲ್ಲಿ ಕಾಣಬಹುದು.

ಕುಮಾರರಾಮನ ಸಾಂಗತ್ಯಗಳಲ್ಲಿ ಕಂಡುಬರುವ ಈ ವೈವಿಧ್ಯಗಳು ಸಾಂಗತ್ಯದ ಸ್ವರೂಪವನ್ನು ತಕ್ಕಮಟ್ಟಿಗೆ ಪರಿಚಯಮಾಡಿಕೊಡಬಲ್ಲವು. ಪ್ರಾಸರಚನೆ, ಗಣಗಳ ಸ್ವರೂಪಗಳಲ್ಲಿ ಕವಿಗಳು ವಹಿಸಿರುವ ಸ್ವಾತಂತ್ರ್ಯ ಗಮನಾರ್ಹವಾದುದು. ಸಾಂಗತ್ಯದ ಈ ಸೌಲಭ್ಯವೇ ಅದರ ಅಂಶಗಣದ ನಡೆಯನ್ನು ಇಂದಿಗೂ ಕಾಪಾಡಿಕೊಂಡು ಬರಲು ಕಾರಣವಾಗಿದೆ. ಹೆಂಗಸರ ಹಾಡುಗಳಲ್ಲಿಯೂ, ಹರಿದಾಸರ ಕೀರ್ತನೆಗಳಲ್ಲಿಯೂ ಸಾಂಗತ್ಯದ ಧಾಟಿಯನ್ನು ಕಾಣಬಹುದು. ಇಂಥ ಜನಪ್ರಿಯವೂ, ಸ್ವಾತಂತ್ರ್ಯಯುತವೂ ಆದ ಪದ್ಧತಿಯನ್ನು ಕುಮಾರರಾಮನ ಕಥೆಗೆ ಆರಿಸಿಕೊಂಡಿರುವುದು ಸಾಧುವಾಗಿದೆ. ಸಾಂಗತ್ಯ ವೀರರಸ ಪ್ರತಿಪಾದನೆಗೆ ತಕ್ಕ ವಾಹನವಾಗಲಾರದು ಎಂಬುದಾಗಿ ಡಾ|| ಡಿ. ಎಸ್. ಕರ್ಕಿ ಅವರು ಅಭಿಪ್ರಾಯ ಪಡುತ್ತಾರೆ.[1] ಮೇಲಿಂದಮೇಲೆ ಯುದ್ಧಪ್ರಸಂಗಗಳನ್ನೇ ಒಳಗೊಂಡಿರುವ ಕುಮಾರರಾಮನ ಸಾಂಗತ್ಯಗಳನ್ನು ಪರಿಶೀಲಿಸಿದರೆ ಈ ಅಭಿಪ್ರಾಯವನ್ನು ಸಾರ್ವತ್ರಿಕವೆನ್ನಲು ಕಷ್ಟವಾದೀತು.

---

1. ಕನ್ನಡ ಛಂದೋವಿಕಾಸ, ೧೯೫೬, ಪುಟ ೨೧೭.

# ೧೩. ಜೀವನ ಚಿತ್ರಣ

ಕುಮಾರರಾಮನ ಕಥೆ ಹೇಗೆ ಐತಿಹಾಸಿಕ ಹಿನ್ನೆಲೆಯನ್ನು ಒಳಗೊಂಡಿದೆಯೆಂಬುದನ್ನು ಈಗಾಗಲೇ ನೋಡಿರುತ್ತೇವೆ. ಕವಿಗಳೇ ಹೇಳಿರುವಂತೆ ಇದು "ನರಕೃತಿ"ಯಾದ್ದರಿಂದ ಜನಜೀವನಕ್ಕೆ ಸಂಬಂಧಿಸಿದ ಅಂಶಗಳು ಸಂದರ್ಭೋಚಿತವಾಗಿ ಬರುತ್ತವೆ. ಕವಿಗಳು ತಾವು ಕಂಡಿದ್ದನ್ನೋ, ಕೇಳಿದ್ದನ್ನೋ, ಇತರ ಕೃತಿಗಳಲ್ಲಿ ಓದಿದ್ದನ್ನೋ ತಮ್ಮ ರಚನೆಯಲ್ಲಿ ಬಳಸಿಕೊಳ್ಳುವುದು ಒಂದು ಪದ್ಧತಿ. ನಂಜುಂಡನಂತಹ ವಿದ್ವತ್ಕವಿಯ ಬರವಣಿಗೆಯಲ್ಲಿ ಇಂಥ ನಿದರ್ಶನಗಳು ಕಂಡುಬರಬಹುದು. ಇಲ್ಲವೇ ಹೆಚ್ಚು ಪರಿಣತರಲ್ಲದ ಗಂಗ ಮತ್ತು ಮಹಲಿಂಗಸ್ವಾಮಿಗಳಂಥವರು ಕೇವಲ ತಮ್ಮ ಜೀವನಾನುಭವದಿಂದಲೇ ಅನೇಕ ವಿಚಾರಗಳನ್ನು ಕಾವ್ಯದಲ್ಲಿ ನಿರೂಪಿಸಿರಬಹುದು. ಅಂತೂ ಕುಮಾರರಾಮನ ಸಾಂಗತ್ಯಗಳನ್ನು ಓದಿದಾಗ ಒಂದು ಕಡೆ ವೀರಜೀವನದ ಚಿತ್ರ ಕಂಡುಬಂದರೆ, ಇನ್ನೊಂದು ಕಡೆ ನಿತ್ಯಜೀವನದ ಪರಿಚಯವೂ ಆಗುತ್ತದೆ.

ಮೊದಲು ಇಲ್ಲಿ ವ್ಯಕ್ತವಾಗುವ ಸಾಹಸಜೀವನವನ್ನೇ ನೋಡಬಹುದು. ಕಥಾನಾಯಕನಾದ ಕುಮಾರರಾಮನೂ ಆತನ ವಂಶೀಯರೂ ಹುಟ್ಟುಗಲಿಗಳಾದ ಬೇಡನಾಯಕರು. ಇವರಿಗೆ ಯುದ್ಧವೆಂದರೆ ಪರಮ ಸಂತೋಷ. ಇಂಥವರಿಗೆ ತಮ್ಮದೇ ಆದ ಕೋಟೆಕೊತ್ತಲಗಳನ್ನು ಕಟ್ಟಿಕೊಂಡು ಜೀವಿಸುವುದರಲ್ಲಿಯೇ ಅಮಿತ ಉತ್ಸಾಹ. ಆದ್ದರಿಂದ ಗಂಗನ ಕೆಲವು ಪ್ರತಿಗಳಲ್ಲಿ (ಗಂ. ೨, ಗಂ. ೫.) ಕೋಟೆಯ ನಿರ್ಮಾಣದಿಂದಲೇ ಕಾವ್ಯವು ಪ್ರಾರಂಭವಾಗುವುದು ಅರ್ಥವತ್ತಾಗಿದೆ. ಕುಮಾರರಾಮನಿಗೆ ಸಂಬಂಧಿಸಿದ ಕೈಫಿಯತ್ತುಗಳಲ್ಲಿಯೂ ಇದರ ಪ್ರಸ್ತಾಪವು ಬರುವುದರಿಂದ ಈ ವಿಷಯವು ಪರಿಶೀಲನಾರ್ಹವಾಗಿದೆ. ಬೇಟೆಗಾಗಿ ಬಂದಿದ್ದ ಕಂಪಿಲನಿಗೆ ಹೊಸಮಲೆ ಸುರಕ್ಷಿತವಾದ ಸ್ಥಳವೆಂದು ವ್ಯಕ್ತವಾಗುತ್ತದೆ. ಅಲ್ಲಿ ಕೋಟೆಯನ್ನು ನಿರ್ಮಿಸುವಂತೆ ಮಂತ್ರಿಗೆ ಆಜ್ಞಾಪಿಸುತ್ತಾನೆ. ಅದೇ ಮೇರೆಗೆ ಆ ಸ್ಥಳದಲ್ಲಿ ಬಲವಾದ ಕೋಟೆಯೊಂದು ನಿರ್ಮಾಣವಾಗುತ್ತದೆ. ಅಗಳು, ಆಳ್ವೇರಿ, ಮುಗಿಲಟ್ಟಳೆ, ಕೊತ್ತಳ, ಅಂಬುಗಂಡಿ, ಅಗಸೆ ಬಾಗಿಲು, ಹುಲಿಮುಖ ಮೊದಲಾದುವು ಸಿದ್ಧವಾದುವು. ಸೋಮಬೀದಿ, ಸೂರ್ಯಬೀದಿಗಳು ಅಣಿಯಾದುವು. ಉಪ್ಪರಿಗೆಯ ಮನೆಗಳನ್ನು ಕಟ್ಟಿದರು. ವಿವಿಧಬಗೆಯಾದ ಅಂಗಡಿಗಳು, ಸೂಳೆಗೇರಿಗಳು ತೋರಿಬಂದುವು. ಕಂಪಿಲನ ಅರಮನೆಯ ವೈಭವವನ್ನು ಕೇಳಬೇಕೆ! ದಿವಾನಚಾವಡಿ, ಚಿತ್ರದ ಚಾವಡಿ, ಮುತ್ತಿನಚಾವಡಿ, ಪಚ್ಚೆಗಂಧದ ಚಾವಡಿ, ಭಂಡಾರ, ಬೊಕ್ಕಸದ ಮನೆಗಳು, ನವರಂಗ, ರಾಣಿವಾಸ ಮೊದಲಾದುವು ಸಜ್ಜಾದುವು. ಇದೇ ಹೆಸರುವಾಸಿಯಾಗಿ ಬೆಳಗಿ ಬಾಳಿದ ಹೊಸಮಲೆದುರ್ಗ! ಕಂಪಿಲನಂತೆಯೇ ಕುಮಾರರಾಮನೂ ಕುಮ್ಮಟದುರ್ಗವನ್ನು ಕಟ್ಟಿಸಿದನೆಂದು ವರ್ಣಿತವಾಗಿದೆ.

ಗಿರಿದುರ್ಗವೆನ್ನಿಸಿದ ಕುಮ್ಮಟದುರ್ಗ ವೈರಿಗಳೆದೆಗೆ ಅಂಕುಶವಾಗಿತ್ತು. ಯುದ್ಧಕಾಲದಲ್ಲಂತೂ ಅದರ ವ್ಯವಸ್ಥೆ ವರ್ಣಿಸಲಸಾಧ್ಯ. ನಂಜುಂಡನ ನಿರೂಪಣೆಯಿಂದ ಒಂದೆರಡು ಮಾತುಗಳನ್ನು ಇಲ್ಲಿ ಉದಾಹರಿಸಬಹುದು. ನೇಮಿಖಾನನು ಎರಡನೆಯಬಾರಿ ದಂಡೆತ್ತಿ ಬಂದಾಗ ಬೈಚಪ್ಪನು ಆ ದುರ್ಗವನ್ನು ಬಹು ಎಚ್ಚರಿಕೆಯಿಂದ ಭದ್ರಪಡಿಸಿದನು. "ಅಗಳು, ಆಳ್ವೇರಿ, ಕೋಟೆ, ಕೊತ್ತಳ, ನೆಲದಿಡ್ಡಿ, ಮುಗಿಲಟ್ಟಳೆ, ನೆಲಗುಮ್ಮ,....ಪುಲಿಮೊಗಗಳ"ನ್ನು ಸರಿಪಡಿಸಿದನು. ಅಂಬುಕಂಡಿ, ಪೆಟಲಕಂಡಿ, ಹೊಸಬೀಗದಬಾಗಿಲು, ಲಾಳವುಂಡಿಗೆ ಮೊದಲಾದುವು ತೋರಿಬಂದುವು. ಇಡುವ ಡೆಂಕಣಿ, ಹಾಕುವ ಗುಂಡು, ಮೇಲೆ ಕೆಡಹುವ ತೊಲೆ, ಹತ್ತಿದವರನ್ನು ಹೊಡೆಯುವ ಬಲ್ಗುಡಿ, ಪೊಟ್ಟಟ್ಟೆ, ಗಡೆ, ದಡಿ, ದಸಿ, ಕವಣೆಕಲ್ಲು, ಎತ್ತುಗುಂಡು, ಪೆಟಲಯಂತ್ರ, ಚಾಪ, ಬಿಗಿಉರುಳು, ಬಿಲ್ಲಂಬು, ಕತ್ತರಿ, ಎಣ್ಣೆಗೊಡ, ಹುರಿದ ಮಳಲರಾಸಿ, ಕಾಸಿದಂಬಲಿ, ಸುಡುವ ಸುಣ್ಣಕಲ್ಲು, ಉರಿವ ಪುಲ್ಗಳದೊಂದೆ, ಸುರಿವ ಕೆಂಡದ ತರಿಗೊರಡು, ತಳಿ, ನೂಲಹರಿಗೆ, ಬದ್ದರ,

ಸಾರವಮಾರಿ, ದಿಬ್ಬಿ—ಇವೇ ಮುಂತಾದ ನಾನಾ ಆಯುಧಸಾಮಗ್ರಿಗಳನ್ನು ಅಣಿಮಾಡಿದನು.

ಇನ್ನು ಸೇನೆಯ ವಿಷಯ. ಹಸ್ತಿ, ಅಶ್ವ, ಪದಾತಿದಳದವರ ಚಿತ್ರ ಪುನಃ ಪುನಃ ಬರುತ್ತದೆ. ಕಾಲ್ಪೊರಜೆ, ಪೊಕ್ಕುಳಘಂಟೆ, ಗುಳ, ತಳಸಂಕಲೆ, ಮೊಳೆವಣೆ, ಕೂರಂಕುಶ, ರನ್ನದ ಮೊಗರಂಬ, ಬೆಳ್ಳಿಯ ಪಕ್ಕರೆ, ಚಿನ್ನದ ಪೊರಜೆ ಮೊದಲಾದುವು ಆನೆಯ ಅಲಂಕಾರಗಳು. ಹಲ್ಲಣ, ಹಕ್ಕರಿಕೆ, ಸವಗ, ಜೋಡು ಗಳನ್ನು ಸಜ್ಜುಗೊಳಿಸಿ ರಾವುತರು ರಣಾಭಿಮುಖರಾಗುತ್ತಿದ್ದರು. ಈ ರಾವುತರಲ್ಲಿ ಕನ್ನಡಿಗರು, ತುರುಕರು, ಒಡ್ಡಿಯರು, ಲಾಳ, ಆರಿಯ, ಗೌಳ, ಗುರ್ಜರ ಮುಂತಾದವರು ತಮತಮಗೆ ತಕ್ಕಂತೆ ವೇಷತೊಟ್ಟು ಯುದ್ಧಸನ್ನದ್ಧರಾಗುತ್ತಿದ್ದರು. ಡಿಳ್ಳಿಯ ಸುಲ್ತಾನನ ಆಸ್ಥಾನದಲ್ಲಿದ್ದ ಖಾನರು ಕಡಿದಾಬೆ, ಜವದಾಡೆ, ದಶರಥಿ, ದುಗುಲದ ಪೈಠಣಿ, ಸುಕ್ಕುಗುಪ್ಪಸ, ಎಕತಾಯಿಗಳಿಂದ ಅಲಂಕೃತರಾಗಿದ್ದರೆಂದು ತಿಳಿದುಬರುತ್ತದೆ. ಗಂಗ ಮತ್ತು ಮಹಲಿಂಗಸ್ವಾಮಿಗಳಲ್ಲಿ ಈ ವಿವರವೂ ವೈವಿಧ್ಯವೂ ಕಂಡುಬರುವುದಿಲ್ಲ. ನಂಜುಂಡನಲ್ಲಿ ಈ ವಿವರಗಳು ಬೆರಗುಗೊಳಿಸುತ್ತವೆ. ಇಂತೆಯೇ ಈ ಕೃತಿಗಳಲ್ಲಿ ಕಾಳಗಗಳ ವರ್ಣನೆಗಂತೂ ಇತಿಮಿತಿಯಿಲ್ಲ. ಬಯಲಿನಲ್ಲಿ ನಿಂತು ಹೋರಾಡುವ ಕಾಳಗಗಳು ಒಂದು ರೀತಿಯಾದರೆ, ಕೋಟೆಯ ಆವರಣದಲ್ಲಿಯೇ ನಿಂತು ಪ್ರತಿಭಟಿಸುವ ಕಾಳಗ ಮತ್ತೊಂದು ಬಗೆಯಾದುದು. ಪಿಳ್ಳೆಗೋಟೆಯ ರಕ್ಷಣೆ, ಜೀರುಮುತ್ತಿಗೆಯ ಸಾಹಸ, ಚೋರಗಂಡಿಯ ಸನ್ನಾಹ—ಇವೇ ಮೊದಲಾದ ಚಿತ್ರಗಳು ಆಯಾ ಸಂದರ್ಭಗಳಲ್ಲಿ ವರ್ಣಿತವಾಗಿವೆ. "ಇರುಳು ಕಗ್ಗೊಲೆ"ಯೆಂಬುದು ಈ ಜನರಲ್ಲಿ ವಿಶೇಷವಾಗಿ ರೂಢಿಯಲ್ಲಿತ್ತೆಂದು ತೋರುತ್ತದೆ.

ಸ್ತ್ರೀಪುರುಷರಿಬ್ಬರೂ ಸರಿಸಮನಾಗಿ ಆಭರಣಗಳನ್ನು ಧರಿಸುತ್ತಿದ್ದ ಕಾಲವದು! ಚೆಂಡನ್ನು ತೆಗೆದು ಕೊಂಡುಬರಲು ತಾಯಿಯ ಬಳಿಗೆ ಹೊರಡುವ ಕುಮಾರರಾಮನು, ಆಭರಣಾಲಯವನ್ನು ಹೊಕ್ಕು ಅಲಂಕಾರ ಮಾಡಿಕೊಳ್ಳುವ ಚಿತ್ರ ಮನಮೋಹಕವಾಗಿದೆ. ಶಿರೋಬಂಧ, ಕಸ್ತೂರಿ ತಿಲಕ, ಮುತ್ತಿನ ಕಡಕು, ಮುಕ್ತಾ ಹಾರ, ವಜ್ರದ ಬಾಹುಪೂರ, ಪೊಂಬಟ್ಟೆ, ಕಡೆಯ, ಕನಕದ ಕಟಿಸೂತ್ರ, ಪದಕ, ಹೀರಾವಳಿ, ಇವೇ ಮೊದಲಾದುವು ಅವನ ಚೆಲುವನ್ನು ಇಮ್ಮಡಿಸುತ್ತಿದ್ದುವು. ಯುದ್ಧಕ್ಕೆ ಸಿದ್ಧನಾಗುವಾಗಲಂತೂ ಒಂದೊಂದು ತೊಡವೂ ಒಂದೊಂದು ಬಿರುದಿನ ಸಂಕೇತವಾಗುತ್ತದೆ. ಉಡಿದಾರ, ಉಂಗುರ, ರನ್ನದ ಕಂಠಮಾಲೆ, ಕಾಲ ತೊಡರು, ರನ್ನದ ಬಾವುಲಿ, ಮಣಿದೊಡರು, ಸರಬೊಂಬೆ, ರನ್ನದ ಬಂಕು, ವಜ್ರದ ಪೆಂಡೆಯ, ಕಂಕಣ ಮೊದಲಾದ ಬಗೆಬಗೆಯಾದ ನಗಗಳು ಅವನ ಮೈಮೇಲೆ ಝುಗಝುಗಿಸುತ್ತಿದ್ದುವು.

ಪುರುಷರೇ ಇಷ್ಟು ಶಿಸ್ತುಗಾರರೆಂದ ಮೇಲೆ ಇನ್ನು ಹೆಂಗಸರನ್ನು ಕೇಳಬೇಕೆ! ಅದರಲ್ಲಿಯೂ ರಾಜನ ಅಚ್ಚುಮೆಚ್ಚಿನ ರಾಣಿಯಾದ ರತ್ನಿಗೆ ಏನು ಕಡಮೆ? ಕುಮಾರರಾಮನನ್ನು ಎದುರುಗೊಳ್ಳಲು ಆಕೆ ವಿವಿಧ ವಸ್ತ್ರಾಭರಣಗಳನ್ನು ಧರಿಸುವಳು. ಮಜ್ಜನ, ಕೇಶರಂಜನಗಳಾದ ಬಳಿಕ ಆಕೆಯನ್ನು ಒಬ್ಬೊಬ್ಬ ದಾಸಿಯೂ ಅಲಂಕರಿಸತೊಡಗುವಳು. ಮುತ್ತಿನ ಬೊಟ್ಟು, ಮುತ್ತಿನ ಮೂಕುತಿ, ಪೊಂಬಳೆ, ನೀಲಕಂಕಣ, ತೋರಹಾರ, ವಜ್ರದೋಲೆ, ಮಣಿಕಾಂಚಿ, ನೂಪುರ, ಮುತ್ತಿನ ಮುಡಿಕಟ್ಟು, ಜೋಳಯ, ಭುಜಕೀರ್ತಿ, ಹತ್ತಕಟ್ಟಿನ ಹಾರ, ಪದಕ, ಮುರಿ, ಹಸ್ತಸರ, ಸರಪಣಿ, ಉಂಗುರ, ಅಂದುಗೆ, ವೀರಮುದ್ರಿಕೆ, ತೋಳಬಂದಿ, ಕಡಗ, ಸೂಡಗ, ಪೆಂಡೆಯ ಮುಂತಾದುವು ರತ್ನಿಯ ವಿಲಾಸ ವೈಭಗಳ ವೈಶಿಷ್ಟ್ಯ!

ಈವರೆಗೆ ವೀರಜೀವನವನ್ನೂ ರಾಜವೈಭವವನ್ನೂ ಪರಿಚಯ ಮಾಡಿಕೊಂಡಂತೆಯೇ, ಈ ಕಾವ್ಯಗಳಲ್ಲಿ ಸಾಮಾನ್ಯ ಜೀವನದ ಕೆಲವು ಲಕ್ಷಣಗಳನ್ನೂ ಕಾಣಬಹುದು. ಕಂಪಿಲನು ಬೇಟೆಗಾಗಿ ಹೊರಟ ಸಂದರ್ಭದಲ್ಲಿ ಬೇಡ, ಬೇಡಿತಿಯರ ವರ್ಣನೆಯೂ, ಬೇಟೆಯಲ್ಲಿ ಬಳಸುವ ಅನೇಕ ರೀತಿಯಾದ ಬಲೆ ಮತ್ತು ಇತರ ಸಾಧನ ಗಳ ವಿವರವೂ ತೋರಿಬರುತ್ತವೆ. ಬೇಡರಂತಯೇ ಬೇಡಿತಿಯರೂ ತಮಗೆ ತಕ್ಕಂತೆ, ತೊಡೆಚಲ್ಲಣ, ಮೊಲೆ ಕಟ್ಟು, ಹೆಣೆದ ಜಡೆ, ಕಲ್ಲಿ, ಸುರಗಿಗಳಿಂದ ಕೂಡಿ ಬಂದರಂತೆ! ಬೇಟೆನಾಯಿಗಳ ಬಳಗವೇ ನೆರೆಯುತ್ತದೆ. ಶಬರರು ಹೆಬ್ಬಲೆ, ತೆರೆಸಿರೆ(?) ಕಾಲ್ಕಣ್ಣೆ, ಬೆಳ್ಳಾರ, ಹಬ್ಬುಗೆವಲೆ, ಕುಡುಗೋಲು, ಕತ್ತಿ, ಕೊಡಲಿ, ಹೇರಿಟ್ಟೆ,

ಬಡಿಕೋಲು, ಇಡುಗೈದು, ಗುಡಿ, ಗೂಡಾರ, ಸರಾತಿ ಪೆಟ್ಟಿಗೆ, ಗಿಂಡಿ, ಪಡಿಗ, ಮಂಚ, ಮುಂತಾದ ಸಕಲ ಸಾಮಗ್ರಿಗಳನ್ನೂ ಅಣಿಮಾಡಿಕೊಂಡು ಹೊರಡುವರು. ಗಂಗನಲ್ಲಿ, ಕುಮಾರರಾಮನು ನೀರಾಟವಾಡುವ ಸಂದರ್ಭದಲ್ಲಿ ಮೀನಿನ ಬೇಟೆಯ ಚಿತ್ರವೊಂದು ಬರುತ್ತದೆ. ಬಾಳೆಮೀನು, ಕೆಮ್ಮೀನು ಮೊದಲಾದ ಮೀನುಗಳ ಹೆಸರುಗಳು ಸೂಚಿತವಾಗಿವೆ.

ಗಂಗ ಮತ್ತು ಮಹಲಿಂಗಸ್ವಾಮಿಯ ಕೃತಿಗಳಲ್ಲಿ, ದಂಡನ್ನು ಕಂಡು ಹೆದರಿದ ಊರಿನ ಜನರು ಗೂಳೆಯ ತೆರಳುವುದು ಬಹು ಸೊಗಸಾಗಿ ಚಿತ್ರಿತವಾಗಿದೆ. ನೇಮಿಯ ಆಕ್ರಮಣದಿಂದ ಹೆದರಿದ ಸಾಮಾನ್ಯರು ತಮ್ಮ ತಮ್ಮ ಸಾಮಾನುಗಳ ಸಮೇತ ಹೊರಡಲನುವಾಗುವರು. ಬೇಡರು, ಕಬ್ಬಿಲರು, ಕುರುಬರು, ಅಗಸರು, ಕುಂಬಾರರು, ತೆಲುಗರು (?), ತಿಗುಳರು (?), ಕೊಟ್ಟಗಾರರು, ಓದಿಸುವ ಅಯ್ಯಗಳು, ಪಾಂಚಾಳರು, ಕೋಮಟಿಗರು, ಗಾಣಿಗರು, ವ್ಯಾಪಾರಿಗಳು, ಹೊಲೆಯರು, ಒಕ್ಕಲಿಗರು, ಮೇದರು, ಉಪ್ಪಲಿಕಾರರು, ಕೊರವರು ಮುಂತಾದ ನಾನಾ ಜಾತಿಗಳವರು ತಮ್ಮ ಕಸುಬಿಗೆ ಸೇರಿದ ಸಾಮಗ್ರಿಗಳನ್ನು ಹೊತ್ತುನಡೆದ ರೆಂಬ ದೀರ್ಘವರ್ಣನೆ ಬಹುಸ್ವಾರಸ್ಯವಾಗಿದೆ.[1] ನಂಜುಂಡನ ಕೃತಿಯಲ್ಲಿ ಆಯುಧ, ಆಭರಣಗಳ ಹೆಸರನ್ನು ಕೇಳಿ ಆಶ್ಚರ್ಯಪಡುವಂತೆ, ಈ ವಿವಿಧ ವೃತ್ತಿಗಳ ಹತ್ಯಾರುಗಳನ್ನು ಕಂಡು ತಲೆದೂಗುವಂತಾಗುತ್ತದೆ.

ಜೀವನದಲ್ಲಿ ವಿಲಾಸಕ್ಕೆ ಅವಕಾಶವಿರುವಂತೆಯೇ ಕಾವ್ಯದಲ್ಲಿಯೂ ಅದಕ್ಕೆ ಎಡೆಯುಂಟು. ಕುಮಾರ ರಾಮನ ಸಾಂಗತ್ಯಗಳಲ್ಲಿ ಇದರ ಕಡೆಗೆ ಕವಿಗಳ ಚಿತ್ತ ಹರಿಯದೆ ಇಲ್ಲ. ನಂಜುಂಡನು ಇದಕ್ಕಾಗಿಯೇ ಪ್ರತ್ಯೇಕವಾಗಿ ಒಂದು ಚಂದ್ರಿಕಾವಿಹಾರದ ಸಂದರ್ಭವನ್ನು ಸೃಷ್ಟಿಸಿರುತ್ತಾನೆ. ಈತನಿಗಿಂತಲೂ ಉಚಿತವಾಗಿ ಉಳಿದಿಬ್ಬರ ಕೃತಿಗಳಲ್ಲಿ ಸೂಳೆಯರ ಬೆಡಗು ಬಿನ್ನಾಣಗಳ ವರ್ಣನೆ ಬಂದಿರುತ್ತದೆ. ರಾಮನ ಚೆಂಡಾಟವನ್ನು ನೋಡುವ ಸಲುವಾಗಿ ಹಲವಾರುಮಂದಿ ಸೇರಬೇಕಷ್ಟೆ. ಆ ಸಂದರ್ಭದಲ್ಲಿ ಸುತ್ತಮುತ್ತಲಿನ ಊರಿನ ಗಣಿಕೆ

---

1. ಕಾಡಮೊಲ್ಲೆಯ ಸೊಪ್ಪು ಓಡಿಲಿ ಹುರಿತಿಂಬ ನಾಡ ನಾಯಕಮಕ್ಕಳೆಲ್ಲ ।
ಕೊಡೆ ಕೈಯಲಿ ನಾಯಿ ಬಡಿಕೋಲ ಹಿಡಿಕೊಂಡು ಬೇಡರ ಗೂಳೆಯ ನಡೆಯೆ ॥

ನೆತ್ತಿಮೇಲಣ ಗಂಟು ಬೇಡರಿಗಾಗಲೆ ಹಸ್ತದ ಮೇಲಣ ಗಿಡುಗ ।
ಎತ್ತಿದ ಹಕ್ಕಿಯ ಕೈಯಲ್ಲಿ ಬಿಲ್ಲು ಮತ್ತೆ ತೆರಳಿತು ಗೂಳೆಯವು ॥

ಕುರಿಯ ಹಿಂಡುಗಳನು ತೆರಳಿಕೊಳ್ಳುತಲಿ ಮರಿಗಳನೆತ್ತಿ ಹೆಗಲಿಗೆ ।
ಮರುಗುವ ಹೆಂಡಿರ ಹಿಡಿಕೊಂಡಾಗ ಕುರುಬರು ಗೂಳೆಯ ತೆರಳೆ ॥

ಮುಸುಕು ತಲೆಯ ಮೇಲೆ ಕುಸುಬೆ ಹೂವಿನ ಹೇರು ಹೊಸಬಗೆ ಬಣ್ಣ ಕಟ್ಟುಗಳು ।
ದೆಸೆಯುಳ್ಳ ಕಟ್ವಾಣಿ ಕೊಡತಿ ಹೆಗಲ ಮೇಲೆ ಅಸಗರ ಗೂಳೆವು ನಡೆಯೆ ॥

ಓದುವ ಹಲಗೆ ಕಡತ ಬಳಪದ ಹೊರೆ ವೇದದ ಪೆಟ್ಟಿಗೆ ಮುಂದೆ ।
ಓದಿಸುವಯ್ಯಗಳೊಡನೆ ಹೆಮ್ಮಕ್ಕಳು ಸಾಧಿಸಿ ಗೂಳೆವ ನಡೆಯೆ ॥

ಮುಟ್ಟಿ ಬೇಹಾರಮಾಡಿ ಲಾಭವ ಗಳಿಸುವ ಕಟ್ವಾಳು ಹಲವು ಸಮಯದ ।
ಪಟ್ಟಣ ಸ್ವಾಮಿ ಎಲ್ಲರು ಕೂಡಿಕೊಂಡಾಗ ಸೆಟ್ಟೇರ ಗೂಳೆವು ನಡೆಯೆ ॥

ಅಡಿಗಲ್ಲು ತಿದಿಮುಟ್ಟು ಹಿಡಿದ ಇಕ್ಕಳ ಕೈಯಬಿಡದೆ ಕೆತ್ತುವ ಬಾಚಿಗಳು ।
ಎಡಗೈಯಲುಳಿ ಸಹವಾಗಿ ವೀರ ಪಾಂಚಾಳ ನಡೆದಾನು ಗೂಳೆಯದೊಳಗೆ ॥

ಒಕ್ಕಲಿಗರು ಹಟ್ಟಿಕಾರರು ಹಲಬರು ಜಕ್ಕುಲವರ ಪೈಕದವರು ।
ಮಿಕ್ಕಿನ ನಾನಾ ಜಾತಿಯರೆಲ್ಲರು ಕೂಡಿ ದೊಕ್ಕನೆ ಕುಮ್ಮಟಿಕಾಗಿ ॥

ಕುಂಬಾರ ತಿಗುಳ ತೆಲುಗ ಕೊಟ್ಟಗಾರರು ಅಂಬಿಗರ ಗೂಳೆವು ನಡೆಯೆ ।
ಕುಂಭಿನಿಯೊಳು ಹಳ್ಳಿಕಾರರಸದಳವು ಇಂಬಿಲ್ಲದೆ ನಡೆವಾಗ ॥

(ಗಂ. ೭, iii, ೫೮–೬೬)

ಯರೆಲ್ಲ ಬಂದು ಸೇರಿದರೆಂದು ಹೇಳಿರುತ್ತಾರೆ. ಆಯಾ ವೇಶ್ಯೆಯ ಊರನ್ನೂ, ಹೆಸರನ್ನೂ, ವೈಶಿಷ್ಟ್ಯವನ್ನೂ ಈ ಕವಿಗಳು ಅತ್ಯಂತ ಆಕರ್ಷಕವಾಗಿ ಪರಿಚಯಮಾಡಿಕೊಟ್ಟಿತ್ತಾರೆ.

ಯಾವ ಕಾಲದ ಜನಜೀವನವೇ ಆಗಲಿ ಸಂಪ್ರದಾಯವನ್ನು ಕಡೆಗಣಿಸುವಂತಿಲ್ಲ. ನಾಗರಿಕತೆಗೆ ತಕ್ಕಂತೆ ಅದು ಪರಿವರ್ತನೆಯಾದೀತೇ ಹೊರತು, ಹೆಸರಿಲ್ಲದಂತೆ ಅಳಿಸಿ ಹೋಗಲಾರದು. ಕುಮಾರರಾಮನ ಕಥೆಯಲ್ಲಿ ಬರುವ ಕೆಲವು ಸಂದರ್ಭಗಳು ಜನರ ಸಾಂಪ್ರದಾಯಿಕ ಶ್ರದ್ಧೆಯನ್ನು ವ್ಯಕ್ತಪಡಿಸುತ್ತವೆ. ಕುಮಾರರಾಮನ ಮದುವೆಯ ಪ್ರಸ್ತಾವವು ನಂಜುಂಡನಲ್ಲಿಯೂ, ಗಂಗನ ಕೆಲವು ಪ್ರತಿಗಳಲ್ಲಿಯೂ ಮಹಲಿಂಗಸ್ವಾಮಿ ಯಲ್ಲಿಯೂ ಬರುತ್ತದೆ. ಗಂಗನ ನಿರೂಪಣೆ ಏಕರೀತಿಯಾಗಿ ಇಲ್ಲದಿರುವುದರಿಂದ, ಈ ಬಗ್ಗೆ ನಂಜುಂಡ ಮತ್ತು ಮಹಲಿಂಗಸ್ವಾಮಿಯರ ರಚನೆಯನ್ನು ಸ್ವಲ್ಪ ಗಮನಿಸಬಹುದು. ನಂಜುಂಡನು, ರಾಜಕುಮಾರನಾದ ರಾಮನಿಗೆ ತಕ್ಕಂತೆಯೇ ಈ ಸನ್ನಿವೇಶವನ್ನು ವೈಭವದಿಂದ ಚಿತ್ರಿಸಿರುತ್ತಾನೆ (viii, ೧೦೨–೧೪೦). ಮುತ್ತು, ಹವಳ, ಪಚ್ಚೆ, ನೀಲಗಳಿಂದ ನಿರ್ಮಿಸಿದ ಮಂಟಪದಲ್ಲಿ ಕುಮಾರರಾಮನ ಮದುವೆ ನೆರವೇರುತ್ತದೆ. "ಪಂಚ ಮಹಾವಾದ್ಯ ವೊಳಗೆ ಕಂಪಿಲ ನೃಪ ಪಂಚಕಲ್ಯಾಣಮನೊಸೆದು ಪಂಚೇಷುನಿಭರೂಪಗೆ ಕುವರಗೆ" ಮಾಡಿ ಸಂತೋಷಪಡುತ್ತಾನೆ. ಆ ಪಂಚವಧುಗಳು "ತೆಂಕಣಗಾಳಿಯ ನಸು ಸೋಂಕಿನಿಂ ಬಿಡದಂಕುರಿಸುವ ಚೂತಲತೆಯ ಸಂಕುಳದಂತೆ" ಪುಳಕಗೊಳ್ಳುತ್ತಾರೆ. (ಇದು ಪಂಪನ ಪ್ರಭಾವವೋ ಏನೊ !) ಮಹಲಿಂಗ ಸ್ವಾಮಿಯಲ್ಲಿ ಈ ಆಡಂಬರವಿಲ್ಲದಿದ್ದರೂ ಆತ್ಮೀಯತೆಯಿದೆ. ಮುತ್ತೈದೆಯರು ಒರಳಿನಲ್ಲಿ ಒನಕೆಯಿಟ್ಟು ಸುವ್ವಿ ಹೇಳುತ್ತಾರೆ. "ಚಂದನದ ಒನಕೆಗೆ ಗಂಧದಕ್ಷತೆ ಇಟ್ಟು....ಶಂಭು ಜಾಟಂಗೀಶ ದಯವಾಗೊ ನಿಮ್ಮಯ ವರ ಪಿಂಡ ಪುತ್ರರ ಸಲಹು" ಎಂದು ಹಾಡುತ್ತಾರೆ. ದೇವಾನುದೇವತೆಗಳೂ ವೀಕ್ಷಕರಾಗುತ್ತಾರೆ. ಈಶ್ವರನು ಪಾರ್ವತಿಗೆ ರಾಮನ ಮಹಿಮೆಯನ್ನು ತಿಳಿಸುತ್ತಾನೆ. ಶುಭಮುಹೂರ್ತದಲ್ಲಿ, ಜೋಯಿಸರ ಮಂತ್ರ ದೊಂದಿಗೆ ಅಂತಃಪಟದ ಶಾಸ್ತ್ರ ನೆರವೇರುತ್ತದೆ. ಸತಿಪತಿಯರಿಗೆ "ಬೇಗ ಶುಕ್ರನ ತೋರಿ ಸೆರಗ ಗಂಟನೆ ಹೂಡಿ" ಮಂದಿರಕ್ಕೆ ಕರೆತರುತ್ತಾರೆ. ಹಸೆಯಮೇಲೆ ಕೂಡಿಸಿ, ಹರೆಯದ ಹೆಂಗಸರು ಧವಳ ರಾಗವನ್ನು ಹಾಡುತ್ತಾರೆ. ದಂಪತಿಗಳಿಗೆ ಎಲ್ಲರ ಆಶೀರ್ವಾದವೂ ಲಭಿಸುತ್ತದೆ. ತೊಟ್ಟಿಲು ತೂಗುವುದು, ಓಕುಳಿ ಆಡು ವುದು, ನಾಗವಲ್ಲಿ ಮೊದಲಾದ ಪದ್ಧತಿಗಳನ್ನು ಕವಿ ಸೂಚಿಸುತ್ತಾನೆ. ಮದುವೆಯ ವಿಷಯದಲ್ಲಿ ಒಬ್ಬೊಬ್ಬ ಕವಿಯೂ ತನ್ನ ತನ್ನ ಅನುಭವಕ್ಕೆ ಅನುಗುಣವಾಗಿ ಚಿತ್ರಿಸಿರುವ ಈ ಸನ್ನಿವೇಶಗಳು ವಿಶಿಷ್ಟವಾಗಿವೆ.

ಸಂಪ್ರದಾಯದ ದೃಷ್ಟಿಯಿಂದ ನಂಜುಂಡ ಮತ್ತು ಗಂಗರಲ್ಲಿ ಬರುವ ಶೂಲದ ಹಬ್ಬವೂ ಗಮನಾರ್ಹ ವಾದದ್ದು. ನಂಜುಂಡನು ಅದನ್ನು ವಸಂತ ಋತುವಿನಲ್ಲಿ ಆಚರಿಸುವ ಒಂದು ವರ್ಷಾವಧಿ ಹಬ್ಬವೆಂದು ಚಿತ್ರಿಸಿದರೆ, ಗಂಗನು ಕುಮಾರರಾಮನು ಗುಂಡುಬ್ರಹ್ಮಯ್ಯನಿಗೆ ತಾನು ಹರಕೆ ಹೊತ್ತಿದ್ದರಿಂದ ಮಾಡಿದ ನೆಂದು ಹೇಳಿರುತ್ತಾನೆ. ಈ ಗುಂಡುಬ್ರಹ್ಮಯ್ಯನ ಪ್ರಸ್ತಾಪವನ್ನು ಮಹಲಿಂಗಸ್ವಾಮಿಯೂ ಮಾಡಿರುತ್ತಾನೆ. ಈ ಹಬ್ಬದ ಆಚರಣೆ ಎಷ್ಟು ಹಳೆಯದೋ ಏನೋ ! ಇದು ಸುರಪುರದ ಬೇಡರಲ್ಲಿ ಆಚರಣೆಯಲ್ಲಿದೆಯೆಂದು ಶ್ರೀ. ಕಪಟರಾಳ ಕೃಷ್ಣರಾಯರು ತಮ್ಮ ಲೇಖನವೊಂದರಲ್ಲಿ ತಿಳಿಸಿರುತ್ತಾರೆ[1]

ಇದೇ ರೀತಿ ದೇವರಿಗೆ ಹರಕೆ ಹೊರುವ ಪದ್ಧತಿ ಬಹಳ ಹಳೆಯದಷ್ಟೆ. ಈ ಕಾವ್ಯದ ಕಥಾನಾಯಕನಾದ ಕುಮಾರರಾಮನು ಒಬ್ಬ ವರಪುತ್ರ. ಜಟ್ಟಂಗಿರಾಮನ ಅನುಗ್ರಹದಿಂದ ಹುಟ್ಟಿದವನು. ಅವನು ದೈವ ವಾದಿಯೂ ಹೌದು ಎನ್ನುವುದನ್ನು ಈಗಾಗಲೇ ಕಂಡಿದ್ದೇವೆ. ರತ್ನಿಯ ದೂತಿಯಾದ ಸಂಗಿ ಒಡತಿಯ ಸಲು ವಾಗಿ ನಾನಾ ಹರಕೆಗಳನ್ನು ಹೊತ್ತಳೆಂದು ನಂಜುಂಡನು ವರ್ಣಿಸುತ್ತಾನೆ. ಆಕೆ ಕಂಚಿಯ ಕಾಮಾಕ್ಷಿ, ಪಂಪಾದೇವಿ ಮತ್ತು ಕುಟಿಲದೇವತೆಯರಲ್ಲಿ ಮೊರೆಯಿಡುತ್ತಾಳೆ. ಬೇವಿನುಡುಗೆ, ಬಾಯಿಬೀಗ, ಮುಡಿ

1. "ಕಂಪಿಲರಾಯನೂ ಅವನ ಸ್ಥಾನಮಾನವೂ," ಶರಣಸಾಹಿತ್ಯ, ಸಂ. iv, ಸಂ. ೫ ಮತ್ತು ೬.

ಸಮರ್ಪಣೆ ಮೊದಲಾದ ಸೇವೆಗಳನ್ನು ಸಲ್ಲಿಸುವುದಾಗಿ ಹೇಳುತ್ತಾಳೆ. ಗಂಗ ಮತ್ತು ಮಹಲಿಂಗಸ್ವಾಮಿಯರಲ್ಲಿ ರತ್ನಾಜಿ, ಮುತ್ತಿನ ಚೆಂಡು ತನ್ನ ಮನೆಯಲ್ಲಿ ಬಂದು ಬೀಳಲೆಂದೂ, ರಾಮನು ತನ್ನ ವಶವಾಗಲೆಂದೂ ಹಲವಾರು ದೇವತೆಗಳಲ್ಲಿ ಬಗೆಬಗೆಯಾಗಿ ಬೇಡಿಕೊಳ್ಳುತ್ತಾಳೆ. ಗುತ್ತಿಯಲ್ಲಮ್ಮ, ಪರ್ವತದ ಮಲ್ಲಯ್ಯ, ಗುಂಟನೂರಮ್ಮ, ಮೊದಲಾದ ದೇವರುಗಳ ಹೆಸರುಗಳು ಕೇಳಬರುತ್ತವೆ. ಒಬ್ಬೊಬ್ಬ ದೇವತೆಗೂ ಒಂದೊಂದು ರೀತಿಯಾದ ಹರಕೆಯನ್ನು ಹೊರುತ್ತಾಳೆ. ಕಟ್ಟುನಿಟ್ಟಾದ ವ್ರತಗಳನ್ನು ಮೊದಲ್ಗೊಂಡು ಪ್ರಾಣಿಬಲಿಯ ವರೆಗೂ ವಿವರಣೆಯಿದೆ. ಹರಿಯಾಲದೇವಿ, ರಾಮನ ಕೈಯಿಂದ ಮುತ್ತಿನ ಚೆಂಡಿಗೆ ಕೊಡಿಸುವ ಬಲಿಗಳೂ ಇದೇ ರೀತಿಯಾಗಿವೆ. ಇಂಥ ವಿವರಗಳು ನಂಜುಂಡನಿಗಿಂತ ಇತರ ಕೃತಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ಜನರ ನಂಬಿಕೆಗಳಲ್ಲಿ ಶಕುನದ ಪಾತ್ರ ದೊಡ್ಡದೇ ಸರಿ. ರತ್ನಾಜಿಯ ಕುಟಿಲತನಕ್ಕೆ ಒಳಗಾಗಿ ಕುಮಾರರಾಮನು ಸತ್ತನೆಂಬ ಸುದ್ದಿಯನ್ನು ಸುಲ್ತಾನನು ನಂಬಿದರೂ, ನೇಮಿ ನಂಬಲಿಲ್ಲವೆಂದು ಗಂಗನೂ ಮಹಲಿಂಗಸ್ವಾಮಿಯೂ ಚಿತ್ರಿಸಿರುತ್ತಾರೆ. ಒಡೆಯನ ಬಲಾತ್ಕಾರಕ್ಕೆ ಸಿಕ್ಕಿ ಅವನು ಕುಮ್ಮಟದ ಮೇಲೆ ದಂಡೆತ್ತಿ ಹೋಗುತ್ತಾನೆ. ಆದರೂ ಆತನ ಆತಂಕ ತಪ್ಪಲಿಲ್ಲ. ನಡುದಾರಿಯಲ್ಲಿ ಟಗರು ಮತ್ತು ಹುಂಜಗಳ ಕಾಳಗಗಳನ್ನು ಏರ್ಪಡಿಸಿ ಶಕುನ ನೋಡುತ್ತಾನೆ. ದುರ್ಬಲವಾದ ಟಗರು ಮತ್ತು ಹುಂಜಗಳಿಗೆ ರಾಮನೆಂದು ಹೆಸರಿಟ್ಟದ್ದರಿಂದಲೇ ಅವು ವಿಜಯಿಗಳಾಗಲು ಅವನ ಸಂದೇಹ ದೃಢವಾಗುತ್ತದೆ. ರತ್ನಿಯ ದುರಾಗ್ರಹಕ್ಕೆ ಗುರಿಯಾಗಬೇಕಾಗುವ ಘಟನೆ ಕುಮಾರರಾಮನಿಗೆ ದುಃಸ್ವಪ್ನ ಮೂಲಕವಾಗಿ ಮುಂಚಿತವಾಗಿಯೇ ತಿಳಿಯುವುದೆಂದು ನಂಜುಂಡನ ಕಲ್ಪನೆ. ಬೇಟೆಗಾಗಿ ಹೊರಟಿದ್ದ ರಾಮನಿಗೆ ಒಂದಲ್ಲ ಒಂದು ಅಪಶಕುನವಾಗಲು ಅವನು ಊರಿನಲ್ಲಿ ಉಳಿಯುತ್ತಾನೆ. ಚೆಂಡನ್ನು ತರುವಾಗ ಯಾರೋ ಒಂಟಸೀನನ್ನು ಸೀನುವುದೇ ಅವನ ಕೇಡಿಗೆ ಕಾರಣವಾಯಿತಂತೆ! ಪುಷ್ಪಪ್ರಸಾದದ ಸಂಗತಿಯೂ ಇಲ್ಲಿ ಬರುವುದುಂಟು.

ವೀರನಾದವನು ವೀರಮರಣವನ್ನು ಹಾರೈಸುವಂತೆಯೇ ಸತಿಯಾದವಳು ಸಹಗಮನವನ್ನು ಬಯಸ್ಸುವುದು ಪೂರ್ವಿಕರ ಒಂದು ಲಕ್ಷಣ. ರಾಮನ ಮರಣದ ವೃತ್ತಾಂತವನ್ನು ಕೇಳಿದ ಆತನ ಐದುಜನ ಹೆಂಡತಿಯರೂ ಮಾವನ ಬಳಿಗೆ ಬಂದು ಚಿತೆ ಬೇಡುವ ಸನ್ನಿವೇಶವನ್ನು ಎಲ್ಲ ಕವಿಗಳೂ ಚಿತ್ರಿಸಿರುತ್ತಾರೆ. ನಂಜುಂಡನ ಕೃತಿಯಲ್ಲಿರುವ ಇದರ ವಿವರವನ್ನು ಕಥಾಭಾಗದಲ್ಲಿ ಕಾಣಬಹುದು (ಪು. ೬೫, ೬೬). ಅಲ್ಲಿ ಕಂಡುಬರುವ ಆ ಮಾಸತಿಯರ ಉಡುಗೆ ತೊಡುಗೆ, ಅಗ್ನಿಪ್ರವೇಶದ ಕ್ರಮ ಮೊದಲಾದುವು ಗಮನಾರ್ಹವಾದುವು. ಕಾವ್ಯದ ಅಂತ್ಯದಲ್ಲಿ ವಾಸ್ತವವಾಗಿ ಒದಗಿಬರುವ ಈ ಚಿತಾರೋಹಣದ ಪ್ರಸಂಗವಂತೂ ಹೃದಯಸ್ಪರ್ಶಿಯಾಗಿದೆ.

ಈ ಕವಿಗಳು ಬದುಕಿ ಬಾಳಿದ ಒಬ್ಬ ವೀರನ ಜೀವನವನ್ನು ತಮ್ಮ ಕೃತಿಗಳಿಗೆ ವಸ್ತುವಾಗಿ ಆರಿಸಿಕೊಂಡಿದ್ದರಿಂದ ಜೀವನದ ನಾನಾ ಮುಖಗಳನ್ನು ಚಿತ್ರಿಸಲು ಅವಕಾಶವಾಯಿತು. ಈ ಸಂಗತಿಗಳು ಕಥಾನಾಯಕನ ಕಾಲದ ಯಥಾವತ್ತಾದ ಚಿತ್ರವಾಗದಿದ್ದರೂ ಆಯಾ ಕವಿಯ ಕಾಲದ ಪ್ರಪಂಚಜ್ಞಾನವನ್ನು ತಕ್ಕಮಟ್ಟಿಗಾದರೂ ಮಾಡಿಕೊಡುತ್ತವೆ ಎನ್ನಬಹುದು. ನಂಜುಂಡನ ಕಾಲದಲ್ಲಿ ಕನ್ನಡ ನಾಡಿನಲ್ಲಿ ಪೌರುಷವು ತಲೆಯೆತ್ತಿ ಮೆರೆಯುತ್ತಿತ್ತು. ಅವನ ಮನೆತನದವರೂ ಸಹ ಗಟ್ಟಿಗರೆನಿಸಿದ್ದರು. ಆದ್ದರಿಂದ, ಅವನ ಕಾವ್ಯದಲ್ಲಿ ವೀರಜೀವನದ ವಿವರಗಳು ಕಂಡುಬರುತ್ತವೆ. ಉಳಿದಿಬ್ಬರ ಗಮನ ಸಾಮಾನ್ಯ ಜೀವನದ ಕಡೆಗೂ ಹರಿದಿರುವುದರಿಂದ ಅವರ ರಚನೆಗಳಿಗೆ ಒಂದು ವೈಶಿಷ್ಟ್ಯವುಂಟಾಗಿದೆ. ಎಲ್ಲ ಕೃತಿಗಳನ್ನೂ ಒಟ್ಟಿಗೆ ನೋಡಿದಾಗ, ಇಲ್ಲಿ, ಆದರ್ಶ ಜೀವನದ ಉನ್ನತ ಚಿತ್ರವೂ, ನಿತ್ಯಜೀವನದ ಸರಳತೆಯೂ ಜೊತೆಜೊತೆಯಾಗಿ ತೋರಬರುತ್ತವೆ.

# ೧೪. ಕುಮಾರರಾಮನ ಸಾಂಗತ್ಯಗಳ ಸ್ಥಾನ

ಕನ್ನಡ ಸಾಹಿತ್ಯದಲ್ಲಿ ಕುಮಾರರಾಮನ ಸಾಂಗತ್ಯಗಳ ಸ್ಥಾನವನ್ನು ನಿಷ್ಕರ್ಷಿಸುವವರು ಮುಖ್ಯವಾಗಿ ಎರಡು ದೃಷ್ಟಿಗಳಿಂದ ಅವುಗಳನ್ನು ಪರಿಶೀಲಿಸಬೇಕಾಗುತ್ತದೆ. ಇವುಗಳಲ್ಲಿ ಸಾಹಿತ್ಯ ಮತ್ತು ಇತಿಹಾಸಗಳು ಬೆರೆತು ಬರುವುದರಿಂದ ಈ ಎರಡು ಅಂಶಗಳನ್ನೂ ಲಕ್ಷಿಸಬೇಕಾಗುತ್ತದೆ. ಅಲ್ಲದೆ, ಈ ಕೃತಿಗಳು ಇತರ ರಚನೆಗಳ ಮೇಲೆ ಏನಾದರೂ ಪ್ರಭಾವವನ್ನು ಬೀರಿರಬಹುದೆ ಎಂಬುದನ್ನೂ ವಿಚಾರಿಸುವುದು ಆಗತ್ಯ.

ಐತಿಹಾಸಿಕ ವಿಷಯವನ್ನು ಕಾವ್ಯದಲ್ಲಿ ಬೆರೆಸಿ ಹೇಳುವುದು ಕನ್ನಡಕ್ಕೆ ಹೊಸತೇನೂ ಅಲ್ಲ. ಕವಿ ಪಂಪನೇ ಇದಕ್ಕೆ ಸಾಕ್ಷಿ. ಆತನ ತರುವಾಯ ರನ್ನನೂ ಈ ಪದ್ಧತಿಯನ್ನು ಅನುಸರಿಸಿರುತ್ತಾನೆ. ಆಸ್ಥಾನಗಳಲ್ಲಿ ಸ್ಥಾನ ಪಡೆದಿದ್ದ ಈ ಕವಿಗಳು ತಮ್ಮ ತಮ್ಮ ಪ್ರಭುಗಳ ಮೇಲಿನ ಭಕ್ತಿಯನ್ನು ಹೀಗೆ ಹೇಳ ಹೊರಟಿದ್ದು ಸಹಜವೇ ಸರಿ. ಆದರೆ ಈ ಕೃತಿಗಳಲ್ಲಿ ಇವರು ತಮ್ಮ ಪ್ರಭುಗಳನ್ನು ನೇರವಾಗಿ ಹೊಗಳದೆ, ಅವರ ಸಮಗ್ರ ಜೀವನವನ್ನೇ ವಸ್ತುವಾಗಿ ಇಟ್ಟುಕೊಳ್ಳದೆ, ಸುಪ್ರಸಿದ್ಧವಾದ ವಸ್ತುವಿನ ಕಥಾನಾಯಕನೊಂದಿಗೆ ಅಭೇದಭಾವವನ್ನು ಕಲ್ಪಿಸಿ ಅಲ್ಪಸ್ವಲ್ಪ ನಿರೂಪಿಸಿರುತ್ತಾರೆ. ಆದ್ದರಿಂದ, ಇಲ್ಲಿ ಕಾವ್ಯವಸ್ತುವಿನಲ್ಲಿ ಚರಿತ್ರಾಂಶವು ಪ್ರಾಸಂಗಿಕವಾಗಿ ಕೂಡಿಕೊಂಡು ಬಂದಿದೆ. ಈ ಸಂಪ್ರದಾಯವೂ ಹರಿಹರನ ಕಾಲಕ್ಕೆ ಅಪ್ರಿಯವಾಯಿತೆನ್ನಬಹುದು. ಭಕ್ತಿಯುಗದ ಕವಿಗಳು ರಾಜಮನ್ನಣೆಯನ್ನು ನಿರೀಕ್ಷಿಸದೆ ಹೋದುದರಿಂದ ಅವರ ಸರಣಿ ಬಹುಮಟ್ಟಿಗೆ ಸ್ವತಂತ್ರವಾಯಿತು. ಹರಿಹರನು ಈ ಪದ್ಧತಿಯನ್ನೇ ಮನಸ್ಸಿನಲ್ಲಿಟ್ಟುಕೊಂಡು "ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ತಾನನವರತಂ ಪೊಗಳ್ದು ಕೆಡಬೇಡೆಲೆ ಮಾನವ" ಎಂದು ಸಾರಿ ಹೇಳಿರುವನೆಂದು ಕಾಣುತ್ತದೆ. ಅಲ್ಲದೆ, ತಾನು "ದೇವದೇವೋತ್ತಮನ ಶರಣರಂ ಪಾಡಿ" ಮೇಲ್ಪಂಕ್ತಿಯನ್ನೂ ಹಾಕಿಕೊಡುವನು. ಈ ರೀತಿ ಸಾಹಿತ್ಯದ ದೃಷ್ಟಿಯೇ ಬದಲಾಯಿಸಿರಬೇಕಾದರೆ, ಮತ್ತೆ ಬೇಡರ ವೀರನೊಬ್ಬನನ್ನು ಕಥಾನಾಯಕನನ್ನಾಗಿ ಇಟ್ಟುಕೊಂಡು, ೧೬ನೆಯ ಶತಮಾನದಲ್ಲಿ ಶಿವಕವಿಯೊಬ್ಬನು ಕಾವ್ಯವನ್ನು ಬರೆಯುವುದೆಂದರೆ ಅವನಿಗೆ ಬಹುಮಟ್ಟಿನ ಕೆಚ್ಚು ಅಗತ್ಯ. ಕವಿ ನಂಜುಂಡನು ತಾನು ಕೈಕೊಂಡಿರುವ ಕಾರ್ಯದ ಹೊಣೆಯನ್ನು ಚೆನ್ನಾಗಿ ಬಲ್ಲ. ಆದ್ದರಿಂದಲೇ "ಇದು ಪುಣ್ಯಕಥೆಯಲ್ಲಿದು ಪೂರ್ವೋಕ್ತಚರಿತವಲ್ಲಿದು ಪುರಾಣದೊಳುಕ್ತವಲ್ಲ ಇದನೆಂತಾಲಿಪೆನು" ಎಂದು ಆಕ್ಷೇಪಿಸಬಹುದಾದವರನ್ನು ಕುರಿತು "ವೀರತೆ ಶುಚಿತೆಯೆಂಬೆರಡು ಗುಣಂಗಳ ಮೇರೆಯ ಮೀಱದೆ ನಡೆದು ಧಾರುಣಿಯನು ಮೆಚ್ಚಿಸಿದ ವೀರರಾಮನ ಚಾರು ಚರಿತವ ಪೇಳುವೆನು" ಎಂದು ಸಮಾಧಾನ ಹೇಳಿ ತನ್ನ ಕಥಾವಸ್ತುವಿನ ಅಗ್ಗಳಿಕೆಯನ್ನು ಸ್ಥಾಪಿಸುತ್ತಾನೆ. ಈ ವಸ್ತುವನ್ನೇ ಆರಿಸಿಕೊಂಡಿರುವ ಪಾಂಚಾಳಗಂಗನೂ ಮಹಲಿಂಗಸ್ವಾಮಿಯೂ ಹೀಗೆಯೇ ಹೇಳಿರುತ್ತಾರೆ.[1] ಆದರೂ, ಈ ಕವಿಗಳೂ ಪರೋಕ್ಷವಾಗಿ ಸ್ತುತಿಸುವ ಸಂಪ್ರದಾಯವನ್ನು ಅನುಸರಿಸದೆ ಇಲ್ಲ. ತಮ್ಮ ಕಥಾನಾಯಕನನ್ನು ದೈವಾಂಶಸಂಭೂತನೆಂದು ಭಾವಿಸಿ ಆ ಮೂಲಕ ಆತನ ಸಾಹಸಕಾರ್ಯಗಳನ್ನು ನಿರೂಪಿಸುತ್ತಾರೆ. ಏನೇ

---

1. ನರಕೃತಿಯನು ಕೇಳಿ ಫಲವಿಲ್ಲವೆನುತಲಿ ಬರಿದೆ ಸಂದೇಹಿಸಬೇಡ ।
ಪರನಾರಿಯ ಸಹೋದರ ರಾಮನಾಥನ ಪರಿ ಕೇಳಲು ಮುಕ್ತಿಯಹುದು ॥

(ಗಂ. i, ೯)

ನರಕೃತಿಯನು ಕೇಳಿ ಫಲವಿಲ್ಲಯೆನಬೇಡಿ ಹರನ ಮೂಲದಲಿ ಜನಿಸಿದರ ।
ನರಕಾರ್ಯವಿಲ್ಲರೆ, ಮರದೊಳು ಜನಿಸುವರಾರು ಸುರಕೋಟಿಶರಣ ಸಂತತಿಯ ॥

(ಮ. ಲಿಂ. iii, ೫೨)

ಆಗಲಿ, ಕಂಡು ಕೇಳಿದ ಸಂಗತಿಗಳನ್ನು ಅವಲಂಬಿಸಿ ಒಂದು ಐತಿಹಾಸಿಕ ಹಿನ್ನೆಲೆಯನ್ನೂ, ರಸಿಕರಿಗೆ ಮನ ವೊಪ್ಪುವಂತೆ ರತ್ನಾಜಿಯ ಪ್ರಸಂಗವನ್ನೂ, ಕಾವ್ಯದ ಮಹತ್ವವು ಮಿಗಿಲಾಗುವಂತೆ ಪೌರಾಣಿಕವೃತ್ತಾಂತ ವನ್ನೂ ಮುಪ್ಪುರಿಯಾಗಿ ಹೆಣೆದಿರುವ ನಂಜುಂಡನ ನೈಪುಣ್ಯ ಅಪೂರ್ವವಾದದ್ದು. ಈತನ "ಕುಮಾರರಾಮ ಚರಿತೆ"ಗೆ, ಐತಿಹಾಸಿಕವಸ್ತುವನ್ನು ಒಳಗೊಂಡಿರುವ ಕನ್ನಡದ ಕೃತಿಗಳಲ್ಲಿ ಒಂದು ಮುಖ್ಯಸ್ಥಾನವಿದೆ. ಈತನ ಬಳಿಕ ಅದೇ ವಸ್ತು ಮತ್ತೆ ಮತ್ತೆ ಕವಿಗಳ ಮನಸ್ಸನ್ನು ಸೆಳೆದಿರುವುದನ್ನು ಕಂಡರೆ, ಈ ದಿಟ್ಟತನದ ಪ್ರಯತ್ನಕ್ಕೆ ಹೇಗೆ ಪುರಸ್ಕಾರ ದೊರೆತಿದೆಯೆಂಬುದು ವಿದಿತವಾಗುತ್ತದೆ. ಮುಂದೆಯೂ ಕನ್ನಡ ಸಾಹಿತ್ಯದಲ್ಲಿ ತೋರಿಬಂದ "ಚಿಕ್ಕದೇವರಾಜ ವಿಜಯ", "ಕಂಠೀರವ ನರಸರಾಜ ವಿಜಯ", "ದೇವರಾಜೇಂದ್ರ ಸಾಂಗತ್ಯ", "ಕೆಳದಿನೃಪವಿಜಯ", "ಸಿರುಮನ ಚರಿತೆ", "ತೋಂಟದರಾಯನ ಸಾಂಗತ್ಯ", ಮುಂತಾದ ಇತರ ಕೃತಿಗಳು ಈ ಪರಂಪರೆ ಹೇಗೆ ಬೆಳೆದು ಬೆಳಗಿತು ಎನ್ನುವುದನ್ನು ತೋರಿಸುತ್ತವೆ. ಸಾಮಾನ್ಯನಾದ ಗೊಲ್ಲರ ಸಿರುಮನೂ ಸೊಣ್ಣ ಬೈರೇಗೌಡನೂ ಕಾವ್ಯದ ನಾಯಕರಾಗುವುದು ಗಮನಾರ್ಹ ವಾದುದು.

ಪ್ರಕೃತದಲ್ಲಿ, "ಕುಮಾರರಾಮ ಚರಿತೆ"ಯ ಸಂವಿಧಾನವನ್ನೇ ಹೋಲುವ "ಕಂಠೀರವ ನರಸರಾಜ ವಿಜಯ"ದ ಮುಖ್ಯಾಂಶಗಳನ್ನು ಇಲ್ಲಿ ಸ್ವಲ್ಪ ಪರಿಶೀಲಿಸಬಹುದು. ನಂಜುಂಡನು ಕಾವ್ಯವನ್ನು ರಚಿಸಿದ ಒಂದುನೂರು ವರ್ಷಗಳ ತರುವಾಯ ಈ ಕಾವ್ಯ ಗೋವಿಂದವೈದ್ಯನಿಂದ ರಚಿತವಾಗಿರುತ್ತದೆ. ಇಬ್ಬರು ಕವಿಗಳೂ ಸಾಂಗತ್ಯವನ್ನೇ ಆರಿಸಿಕೊಂಡಿರುವುದು ಮೊದಲನೆಯ ಸಾಮ್ಯ. ಅನಂತರ, ಕಥಾನಾಯಕನಾದ ಕಂಠೀರವ ನರಸರಾಜನ ಬಗ್ಗೆ ಗೋವಿಂದವೈದ್ಯನು, ತನ್ನ ಅಭಿಪ್ರಾಯವನ್ನು ಮುಂದಿಡುತ್ತಾನೆ. ತನ್ನ ಕಾವ್ಯವನ್ನು ನರಕೃತಿಯೆಂದು ಭಾವಿಸಿ ಹಿಂತೆಗೆಯಬಾರದೆಂದೂ, ಕಂಠೀರವ ನರಸರಾಜನು ಸಾಕ್ಷಾತ್ ನರಸಿಂಹನ ಅವತಾರವೇ ಸರಿಯೆಂದೂ ಸಾರಿ ಹೇಳುವನು.[1] ಕಂಠೀರವ ನರಸರಾಜನು ನರಸಿಂಹಜಯಂತಿ ಯಂದು ಹುಟ್ಟಿದುದೇ ಈ ಭಾವನೆಗೆ ಪ್ರೇರಣೆಯಾಗಿರಬಹುದು. ನಂಜುಂಡನಂತೆಯೇ ಅವತಾರದ ಪೀಠಿಕೆ ಯನ್ನು ವಿಸ್ತರಿಸುವನು. ಕುಮಾರರಾಮನ ಕಥೆಯಲ್ಲಿ ಬರುವಂತೆಯೇ ಇಲ್ಲಿಯೂ ಕಥಾನಾಯಕನು ತನಗೆ ಕಿರುಕುಳವನ್ನು ಕೊಡುತ್ತಿದ್ದ ಅನೇಕ ಸಣ್ಣ ಸಣ್ಣ ರಾಜರುಗಳನ್ನು ಗೆಲ್ಲಬೇಕಾಗುತ್ತದೆ. ಎಲ್ಲಕ್ಕೂ ಮಿಗಿಲಾಗಿ ಇಲ್ಲಿಯೂ ಮುಸಲ್ಮಾನರ ಕಾಟ ಹೇಳತೀರದು. ಕುಮಾರರಾಮನ ಕಾಲಕ್ಕೆ ಡಿಳ್ಳಿಯ ಸುಲ್ತಾನನು ಶತ್ರುವಾಗಿ ಪರಿಣಮಿಸಿ, ನೇಮಿಯನ್ನು ಪದೇ ಪದೇ ಕಳುಹಿಸಿದಂತೆ, ನರಸರಾಜನ ಕಾಲಕ್ಕೆ ಬಿಜಾಪುರದ ಬಾದಷಹನು ರಣದುಲ್ಲಾ ಖಾನನೇ ಮೊದಲಾದವರನ್ನು ಪುನಃ ಪುನಃ ಕಳುಹಿಸುತ್ತಾನೆ. ಗಿರಿದುರ್ಗವಾದ ಕುಮ್ಮಟದ ಮುತ್ತಿಗೆ ನಡೆದಂತೆಯೇ ಜಲದುರ್ಗವೆನ್ನಿಸಿದ ಶ್ರೀರಂಗಪಟ್ಟಣದ ಮುತ್ತಿಗೆ ನಡೆಯುತ್ತದೆ. ಮಂತ್ರಿ ಬೈಚಪ್ಪನು ಹೇಗೆ ನಮ್ಮ ಮನಸ್ಸನ್ನು ಸೆಳೆಯುತ್ತಾನೆಯೋ ಹಾಗೆಯೇ ಈ ಕೃತಿಯಲ್ಲಿ ಮಂತ್ರಿ ನಂಜರಾಜನು ಪ್ರಮುಖ

---

1. ದೇವತಾಸ್ತುತಿಯಲ್ಲ ಕೇಳ್ವೊಡೆ ನರಸ್ತುತಿ ಯಾವ ವೆಗ್ಗಳವೆನಬೇಡ ।
ನಾ ವಿಷ್ಣುಃ ಪೃಥಿವೀಪತಿಯೆಂದು ವೇದಾವಳಿಗಳು ಸಾರುತಿವೆ ಕೊ ॥
ಇನಿತಲ್ಲದಂದಿನ ನರಸಿಂಹ ಕಲಿಯುಗ ದನುಜರ ಸಂಹರಿಸುವೊಡೆ ।
ಮನುಜಾವತಾರದೆ ಬಂದರಸನ ಕಥೆ ವಿನುತವಿಜಯ ಕೇಳ್ದರಿಗೆ ॥
ಇದಕೆ ತಾರ್ಕಣೆ ಯಾವುದೆನೆ ನರಹರಿಯಂದುದುಭವಿಸಿದ ಮಾಸ ತಿಥಿಯು ।
ಪುದಿದತಿ ಶುಭವಾರ ಸಂಜೆಯೊಳುದಿಸಿದ ಪದುಮಾಕ್ಷನೀತ ತಾನೈಸೆ ॥
ಈ ಮಹಿಮನ ಸುಚರಿತ್ರ ಶೌರ್ಯಗಳ ಸುತ್ರಾಮಭೋಗವ ಧರ್ಮದಿರವ ।
ನೇಮದೆ ಮಾಂಗಲ್ಯಕೃತಿಯಾಗೆ ಪೇಳ್ವೆನು ಪ್ರೇಮದೆ ಕೇಳ್ವುದುತ್ತಮರು ॥
(ಕಂಠೀರವ ನರಸರಾಜ ವಿಜಯ, ಸಂ. i, ಪ. ೧೭–೨೦)

ನಾಗಿ ಕಾಣುತ್ತಾನೆ. ಐತಿಹಾಸಿಕ ಸನ್ನಿವೇಶಗಳಲ್ಲಿ ಇಷ್ಟು ಸಾಮ್ಯವಿರುವಂತೆಯೇ, ಕುಮಾರರಾಮನ ಕಥೆಯಲ್ಲಿ ಬರುವ ರತ್ನಿಯ ವಿರಹದ ಸಂದರ್ಭಕ್ಕೂ, "ಕಂಠೀರವ ನರಸರಾಜ ವಿಜಯ"ದ ಮದನ ಮೋಹಿನಿಯ ಕಾಮತೃಷ್ಣೆಗೂ ಸಾದೃಶ್ಯವಿದೆ. ಆದರೆ, ರತ್ನಿಯ ಪಾತ್ರ ಕುಮಾರರಾಮನ ಕಥೆಯಲ್ಲಿ ಹಾಸು ಹೊಕ್ಕಾಗಿ ಹೆಣೆದುಕೊಂಡು ಬಂದಿದ್ದರೆ, ಪ್ರಕೃತ ಕಾವ್ಯದಲ್ಲಿ ಮದನ ಮೋಹಿನಿಯ ಪ್ರಸಂಗ ಪ್ರತ್ಯೇಕವಾಗಿ ನಿಲ್ಲುತ್ತದೆ. ಯುದ್ಧವರ್ಣನೆ, ಜನಜೀವನದ ಚಿತ್ರಣ, ಕೋಟೆ ಕೊತ್ತಲಗಳ ವಿವರಣೆ ಮೊದಲಾದುವು ಗಳಲ್ಲಿಯೂ ಈ ಕೃತಿಗಳಲ್ಲಿ ಹೋಲಿಕೆಯುಟು. ಇವುಗಳನ್ನು ಗಮನಿಸಿದರೆ ನಂಜುಂಡನ ರಚನೆ ಹೇಗೆ ಇತರರಿಗೆ ಮಾರ್ಗದರ್ಶಕವಾಗಿರಬಹುದೆಂದು ಊಹಿಸಲು ಅವಕಾಶವಿದೆ.

ಕೇವಲ ಇತಿಹಾಸದ ದೃಷ್ಟಿಯಿಂದ ಈ ಕೃತಿಗಳನ್ನು ನೋಡಿದರೆ ಇದರಲ್ಲಿ ಕಂಡುಬರುವ ಕೆಲವು ಅಂಶ ಗಳಾದರೂ ಹೊಸಬೆಳಕನ್ನು ಬೀರದೆ ಇರಲಾರವು. ವಿಜಯನಗರದ ಸ್ಥಾಪನೆಗೆ ಪೂರ್ವಭಾವಿಯಾಗಿ ಆ ಪ್ರದೇಶದ ಸುತ್ತಮುತ್ತಲಿನ ರಾಜಕೀಯ ಪರಿಸ್ಥಿತಿ ಹೇಗಿದ್ದಿತು ಎಂಬುದನ್ನು ಇಲ್ಲಿ ಮನಗಾಣಬಹುದು. ಮುಸಲ್ಮಾನರ ದಾಳಿಗೆ ಸಿಕ್ಕಿ ದೇವಗಿರಿಯ ರಾಮದೇವರಾಯ, ಕಾಕತೀಯ ರುದ್ರನು ಆಹುತಿಯಾಗಿದ್ದ ಕಾಲವದು. ಹೊಯ್ಸಳ ಬಲ್ಲಾಳನು ತುರುಕರೊಂದಿಗೆ ಒಪ್ಪಂದವನ್ನು ಮಾಡಿಕೊಂಡು ಕಪ್ಪ ಕಾಣಿಕೆಗಳನ್ನು ತೆತ್ತ ಕಾಲವದು. ಇಂಥ ಕಷ್ಟಕಾಲದಲ್ಲಿ ಬೇಡನಾಯಕನೊಬ್ಬನು ಪ್ರಬಲರಾದ ಶತ್ರುಗಳನ್ನು ಹೇಗೆ ಎದುರಿಸಿ ನಿಂತನೆಂಬ ಸಂಗತಿ ಇಲ್ಲಿ ಅಡಕವಾಗಿದೆ. ಶಾಸನಗಳಲ್ಲಿಯೂ, ವಿದೇಶೀಯರ ಬರಹಗಳಲ್ಲಿಯೂ ಮುಮ್ಮಡಿ ಸಿಂಗ, ಇಲ್ಲವೇ ಕಂಪಿಲರಾಯನ ಹೆಸರುಗಳೇ ಕೇಳಿಬರುತ್ತಿದ್ದ ಕಾಲದಲ್ಲಿ, ಅದೇ ವಂಶೀಯನಾದ ಕುಮಾರ ರಾಮನ ವಿಷಯವನ್ನು ತಿಳಿಯಲು ಈ ಕೃತಿಗಳೇ ಮುಖ್ಯ ಆಧಾರಗಳಾಗಿದ್ದುವು. ಇತ್ತೀಚೆಗೆ ಕುಮಾರರಾಮನ ಹೆಸರೂ ಶಾಸನಗಳಲ್ಲಿ ಕಂಡುಬಂದಮೇಲೆ ಈ ಕೃತಿಗಳು ಮೇಲಿಂದ ಮೇಲೆ ವಿದ್ವಾಂಸರ ಗಮನವನ್ನು ಸೆಳೆಯ ಲಾರಂಭಿಸಿವೆ. ಬಾದೂರನ ಪಲಾಯನ, ಕುಮ್ಮಟದ ಮುತ್ತಿಗೆಗಳನ್ನು ಕುರಿತು ವಿದೇಶೀಯ ಪ್ರವಾಸಿಗಳ ಸತ್ಯಾಂಶವನ್ನು ನಿಷ್ಕರ್ಷಿಸಲು ನಮ್ಮದೇ ಆದ ಈ ಕೃತಿಗಳು ಹೊಸ ಸಾಧನಗಳಾಗಿವೆ. ಕಂಪಿಲರಾಯನ ಹೆಸರನ್ನು ಮಾತ್ರ ಕೇಳುತ್ತಿದ್ದವರಿಗೆ, ಆತನ ಪೂರ್ವೋತ್ತರಗಳು, ಆತನ ಅಧಿಕಾರಾವಧಿಯಲ್ಲಿ ನಡೆದಿರಬಹು ದಾದ ಕಾಳಗಗಳು, ಆತನ ಶತ್ರುವರ್ಗ ಮುಂತಾದ ಇತರ ಸಂಗತಿಗಳನ್ನು ಇವು ಪರಿಚಯಮಾಡಿಕೊಡು ತ್ತವೆ. ಕಂಪಿಲನ ಆಸ್ಥಾನದಲ್ಲಿ ಭಾವಸಂಗಮ, ಹರಿಹರ ಮತ್ತು ಬುಕ್ಕ ಎಂಬುವರು ಇದ್ದರೆಂದು ಈ ಕೃತಿ ಗಳಲ್ಲಿ ಹೇಳಿರುವುದರಿಂದಲೇ ವಿಜಯನಗರದ ಸ್ಥಾಪನೆಗೆ ಇವರೇ ಮೂಲಪುರುಷರಿರಬಹುದೆ ಎಂಬ ಅಭಿ ಪ್ರಾಯವೊಂದು ಉದಯವಾಗಿದೆ. ಮುಖ್ಯವಾಗಿ, ಕುಮಾರರಾಮನ ಸಾಂಗತ್ಯಗಳಲ್ಲಿ ಕಂಡುಬರುವ ಪ್ರತಿಯೊಂದು ವಿಷಯವನ್ನೂ ಐತಿಹಾಸಿಕವೆಂದು ಹೇಳಲಾಗದಿದ್ದರೂ, ಆಗಿನ ಕಾಲದ ಚರಿತ್ರೆಯನ್ನು ಬರೆಯುವವರಿಗೆ ಈ ಕೃತಿಗಳನ್ನು ಒಂದು ಆಧಾರವಾಗಿ ಪರಿಗಣಿಸುವಷ್ಟುಮಟ್ಟಿಗೆ ಸ್ಥೂಲವಾಗಿ ಇಲ್ಲಿ ಕೆಲವು ಸಂಗತಿಗಳು ದೊರೆಯುತ್ತವೆ.

"ಕುಮಾರರಾಮನ ಸಾಂಗತ್ಯ"ಗಳಲ್ಲಿ ವೀರಚರಿತೆಯ ಕೆಲವು ಲಕ್ಷಣಗಳು ವಿಶದವಾಗುತ್ತವೆ. ಸಾಹಸ ಮತ್ತು ಅನುರಾಗಗಳು ವೀರಚರಿತೆಗೆ ಬಹು ಪ್ರಿಯವಾದ ವಸ್ತುಗಳು. ನಂಜುಂಡನ ಹೇಳಿಕೆಯ ಮೇರೆಗೆ ಪ್ರಕೃತ ಕಥಾವಸ್ತುವಿನಲ್ಲಿ ವೀರತೆ ಮತ್ತು ಶುಚಿತೆಗಳು ಪ್ರಧಾನವಾದ ಅಂಶಗಳು. ಇಲ್ಲಿ ನಾಯಕನ ಅನುರಾಗವು ಸಾಹಸಕ್ಕೆ ಪ್ರೇರಕವಾಗಿಲ್ಲದಿದ್ದರೂ ಭಾರತೀಯ ಸಂಸ್ಕೃತಿಯ ಹಿರಿಮೆಗೆ ತಕ್ಕಂತೆ ಅದು "ಪರದಾರ ಸೋದರತ್ವ"ವನ್ನು ಕುರಿತುದಾಗಿದೆ. ಆದರೂ ಜಾತಿ ಮತಗಳನ್ನು ಮೀರಿದ ಬಾಬಮ್ಮನ ಪರಿಶುದ್ಧ ಪ್ರೇಮಕ್ಕೆ ಕುಮಾರರಾಮನ ಸಾಹಸ ಸೌಂದರ್ಯಗಳೇ ಮುಖ್ಯ ಕಾರಣವೆನ್ನುವುದನ್ನು ಮರೆಯುವಂತಿಲ್ಲ. ಪರಾಕ್ರಮದ ಭಾಗವಂತೂ ಧಾರಾಳವಾಗಿ ಕಾವ್ಯದಲ್ಲಿ ತಾನೇ ತಾನಾಗಿ ಆವರಿಸಿಕೊಂಡಿರುತ್ತದೆ. ತರುಣನಾದ ಕುಮಾರರಾಮನು ಕದನವೆಂದರೆ ಕತ್ತಿಹಿಡಿದು ಅನುವಾಗುವ ಒಂದೊಂದು ಸಂದರ್ಭವೂ ಮನೋಹರವಾಗಿದೆ.

ಕುದುರೆಯನ್ನು ಗೆದ್ದುತರುವ ಪ್ರಸಂಗ, ಕೆಣಕಿಬಂದವರನ್ನು ಕೆರಳಿ ನರಳಿಸುವ ಸಾಹಸ, ಮರೆಹೊಕ್ಕಿ ಬಂದವರನ್ನು ಜೀವವಿರುವತನಕ ಸಂರಕ್ಷಿಸುವ ಸ್ವಧರ್ಮನಿಷ್ಠೆ, ಕೀರ್ತಿಗಾಗಿ ಪ್ರಾಣವನ್ನೇ ಪಣವಿಟ್ಟು ಹೋರಾಡುವ ಪ್ರತಿಷ್ಠೆ ಇವೇ ಮೊದಲಾದುವು ಇಲ್ಲಿ ವೀರನೊಬ್ಬನ ಉದಾತ್ತ ಚಿತ್ರವನ್ನು ಹಿಡಿದೆತ್ತಿ ತೋರಿಸುತ್ತವೆ. ಜನಾನುರಾಗಕ್ಕೆ ಪಾತ್ರನಾದ ಜಾತಿವೀರನೊಬ್ಬನ ಸಮಗ್ರ ಜೀವನವನ್ನು ಜನಪ್ರಿಯವಾದ ಸಾಂಗತ್ಯದ ಧಾಟಿಯಲ್ಲಿ ನಿರೂಪಿಸಿರುವ ಈ ಪ್ರಯತ್ನಗಳು ಪ್ರಶಂಸಾರ್ಹವಾಗಿವೆ.

ಕುಮಾರರಾಮನ ಸಾಂಗತ್ಯಗಳು ಬೇಡರ ನಾಯಕನೊಬ್ಬನ ವೃತ್ತಾಂತವನ್ನು ಒಳಗೊಂಡಿರುವುದರಿಂದ ಇವುಗಳಲ್ಲಿ ಈ ಜನಾಂಗಕ್ಕೆ ಸಂಬಂಧಿಸಿದ ವಿಶಿಷ್ಟವಾದ ಸಂಗತಿಗಳೇನಾದರೂ ಅಡಕವಾಗಿವೆಯೆ ಎಂಬುದನ್ನು ಇಲ್ಲಿ ವಿಚಾರಿಸುವುದು ಅಪ್ರಕೃತವಾಗಲಾರದು. ನಂಜುಂಡ ಮತ್ತು ಪಾಂಚಾಳ ಗಂಗರಲ್ಲಿ ಕುಮಾರರಾಮನನ್ನು ದೈವಾಂಶಪುರುಷನೆಂದು ಮಾತ್ರವೇ ಗಣಿಸಿದ್ದರೆ, ಮಹಲಿಂಗಸ್ವಾಮಿಯಲ್ಲಿ ರಾಮನಾಥದೇವಾಲಯದ ಸ್ಥಾಪನೆ, ಕುಮಾರರಾಮನ ಜಾತ್ರೆ ಮುಂತಾದ ಇತರ ವಿಷಯಗಳೂ ಕೇಳಿಬರುತ್ತವೆ (xviii, ೧೦೨ ; xix ೨೫೫). ಈ ಸೂಚನೆಗಳು ಸಂಗೂರಿನ ಶಿಲಾಶಾಸನದಲ್ಲಿ ಬರುವ ಕುಮಾರರಾಮನಾಥ ದೇವರ ಪ್ರತಿಷ್ಠೆಯನ್ನೂ[1] ಕುಮ್ಮಟದುರ್ಗದಲ್ಲಿ ವರ್ಷಕ್ಕೊಮ್ಮೆ ಆಚರಿಸುವ ಕುಮಾರರಾಮನ ಉತ್ಸವವನ್ನೂ[2] ಹೋಲುತ್ತವೆ. ಕುಮಾರರಾಮನ ರುಂಡವು ಲಿಂಗಾಕೃತಿಯಾಯಿತೆಂದೂ, ಅದಕ್ಕೆ ಪೂಜೆ ಸಲ್ಲಿಸುವತನಕ ಹಾನಿ ತಪ್ಪಲಿಲ್ಲವೆಂದೂ ಈ ಕಾವ್ಯಗಳಲ್ಲಿ ಬರುತ್ತವೆ. ಇದು ಮೇಲೆ ಹೇಳಿದ ಉತ್ಸವದಲ್ಲಿ ರುಂಡಾಕೃತಿಗಳನ್ನು ಪೂಜಿಸುವ ಸಂಪ್ರದಾಯವನ್ನೇ ಸ್ಮರಣೆಗೆ ತರುತ್ತದೆ. ಕಾವ್ಯದಲ್ಲಿ ಪ್ರಾಸಂಗಿಕವಾಗಿ ಬರುವ ಶೂಲದ ಹಬ್ಬವು ಇಂದಿಗೂ ಸುರಪುರದ ಬೇಡರಲ್ಲಿ ಆಚರಣೆಯಲ್ಲಿರುವುದಾಗಿ ತಿಳಿದುಬರುತ್ತದೆ.[3] ಹೀಗೆಯೇ ಇಲ್ಲಿ ವರ್ಣಿತವಾಗಿರುವ ಬಹುಪತ್ನೀತ್ವ, ಸಹಗಮನ ಮೊದಲಾದುವು ಬೇಡರಲ್ಲಿ ಒಂದು ಕಾಲದಲ್ಲಿ ವಿಶೇಷವಾಗಿ ಬಳಕೆಯಲ್ಲಿತ್ತೆಂಬುದಾಗಿ ಶ್ರೀ. ಎಂ. ಎಸ್. ಪುಟ್ಟಣ್ಣ ಅವರು ಸೂಚಿಸಿರುತ್ತಾರೆ.[4] ಇಂತೆಯೇ ಪ್ರಾಸಂಗಿಕವಾಗಿ ಉಲ್ಲೇಖಿತವಾಗಿರುವ ಆನೆಗೊಂದಿ, ರಾಯದುರ್ಗ, ಪೆನುಗೊಂಡೆ, ಗಂಡಿಕೋಟೆ (ಗುಡಿಕೋಟೆ ?), ಗುತ್ತಿ, ಆದವಾನಿ ಮೊದಲಾದ ಎಡೆಗಳು ಪಾಳಯಗಾರರ ಚರಿತ್ರೆಯಲ್ಲಿ ಒಂದಲ್ಲ ಒಂದು ರೀತಿಯಾಗಿ ಸುಪ್ರಸಿದ್ಧವಾಗಿವೆ. ಎಲ್ಲಕ್ಕಿಂತಲೂ ಮಿಗಿಲಾಗಿ ಈ ಕೃತಿಗಳ ಪ್ರಧಾನ ಪಾತ್ರಗಳು ಮತ್ತು ವೀರಯೋಧರ ಹೆಸರುಗಳು ಈ ದೃಷ್ಟಿಯಿಂದ ಗಮನಾರ್ಹವಾಗಿವೆ. ನಂಜುಂಡನಲ್ಲಿ ಕುಮಾರರಾಮನು ಧನುರ್ವಿದ್ಯೆಯನ್ನು "ಗುರುಮುಖದಿಂದ ವೇತಾಳ ನಿದಿರೊಳು ಬರಿಸಿಕೊಂಡನು (vii, ೮೪)" ಎಂದು ಹೇಳಿರುವಂತೆಯೇ ಗಂಗನ ಒಂದು ಪ್ರತಿಯಲ್ಲಿ "ಉತ್ತಮ ಬೈತಾಳದೇವರ ಪೂಜಿಸಿ ಚಿತ್ರದ ಸಾಧನೆಯ ತೋರಿ (ಗಂ. ೫, iii, ೩೪)" ಎಂದು ಬಂದಿದೆ. ಈ ಬೇತಾಳ ಪೂಜೆಯ ವೈಶಿಷ್ಟ್ಯವು ವಿಚಾರಾರ್ಹವಾಗಿದೆ. ಮಹಲಿಂಗಸ್ವಾಮಿ ಕುಮಾರರಾಮನ ಮಗನಾದ ಜಟ್ಟಂಗಿರಾಯನನ್ನು "ಕಾಮಕೇತಕಿ ಭೂಪಾಲ ( i, ೩೭)" ಎಂದು ಸಂಬೋಧಿಸಿದ್ದರೆ, ಗಂಗನ ಒಂದು ಪ್ರತಿಯಲ್ಲಿ ಕಂಪಿಲರಾಯನ ತಂದೆಯನ್ನು "ಕುಲದಲ್ಲಿ ಪೂವಾಲಿ ಮುಂಮಡಿ ಸಿಂಗನು (ಗಂ. ೨, i, ೧೩)" ಎಂದು ಕರೆದಿದೆ. ಗಂಗನ ಇದೇ ಪ್ರತಿಯಲ್ಲಿಯೇ ಹರಿಯಾಲದೇವಿಯನ್ನು "ಗುಜ್ಜಾರಿಯನಾಳ್ವ" ಆರೇಯ ಚಾರಾಮರಾಯನ ಮಗಳೆಂದು ಹೇಳಿರುವಂತೆಯೇ (ಗಂ. ೨, ii, ೧೩–೧೮) ರಾಮಘಡದ ಶಿಲಾಶಾಸನದಲ್ಲಿ ಈಕೆಯನ್ನು "ವೀರಗುಜ್ಜಲ ಹರಿಹರದೇವಿ" ಎಂದು ಕರೆಯಲಾಗಿದೆ.[5] ಈ ಹೆಸರುಗಳ ಹಿಂದೆ

---

1. EI, xxiii, P. 185.
2. QJMS, Vol. xx, No. 4, P. 268.
3. "ಕಂಪಿಲರಾಯನೂ ಅವನ ಸ್ಥಾನಮಾನವೂ," ಶರಣಸಾಹಿತ್ಯ, ಸಂ. iv, ಸಂ. ೫ ಮತ್ತು ೬.
4. ಪಾಳಯಗಾರರು, ಪು. ೮೦–೮೧.
5. ARSIE, 1943-45, P. 65.

ಬರುವ ವಿಶೇಷಣಗಳು ಬೇಡರ ಶಾಖೆಗಳಾದ "ಕಾಮಗೇತಿ" "ಪುವ್ವಲ" ಮತ್ತು "ಗುಜ್ಜಲ" ಎಂಬುವು ಗಳೆಂದು ಸ್ಪಷ್ಟವಾಗುತ್ತದೆ.[1] ಈ ಅಂಶವನ್ನು ಗಮನಿಸಿಯೇ ದಿ|| ಹುಲ್ಲೂರು ಶ್ರೀನಿವಾಸ ಜೋಯಿಸರು ಈ ಮನೆತನವನ್ನು ಕುರಿತು ತಾವು ಬರೆದಿರುವ ಲೇಖನಮಾಲೆಯನ್ನು "ಪುವ್ವಲ ಅರಸರು" ಎಂದು ಕರೆದಿರುತ್ತಾರೆ.[2] ಗಂಗನಲ್ಲಿ ಕುಮಾರರಾಮನನ್ನು ಒಮ್ಮೊಮ್ಮೆ "ಕೊಟ್ಟದ ಬೇಡ" ಎಂಬುದಾಗಿ ಕರೆದಿರುವುದುಂಟು. ಶ್ರೀ. ದೇಸಾಯಿ ಪಾಂಡುರಂಗರಾಯರು "ಕೊಟ್ಟಗಾರ" ಎಂದರೆ ಕೋಟೆ ಕೊತ್ತಲಗಳನ್ನು ಕಾಯುತ್ತಿದ್ದವರೆಂದು ಅಭಿಪ್ರಾಯ ಪಡುತ್ತಾರೆ.[3] ಈ 'ಕೊಟ್ಟದ' ಎಂಬ ಮಾತಿನಲ್ಲಿ ಇದೇ ಅರ್ಥವು ಹುದುಗಿದೆಯೋ ಅಥವಾ ಅದೂ ಒಂದು ಬೇಡರ ಉಪಶಾಖೆಯೋ ತಿಳಿಯದು. ಬೇಡ ನಾಯಕನಾದ ಮುಮ್ಮಡಿಸಿಂಗನ ತರುವಾಯ ಕಂಪಿಲನು ತನ್ನ ತಾಯಿಯಾದ ಮಂಚಕ್ಕ(?)ನೊಂದಿಗೆ ಜಟ್ಟಂಗಿಗಿರಿಗೂ, ಅನಂತರ ಲೋಹಗಿರಿಗೂ ಸಂಸಾರ ಸಮೇತನಾಗಿ ವಲಸೆಹೋಗಿ ನೆಲಸಿದನೆಂದು ಹೇಳುವಲ್ಲಿ "ಕಂಪಳಯೆದ್ದು" ಹೋದನೆಂಬ ಪ್ರಯೋಗವಿದೆ (ಗಂ. ೨, i, ೨೬). ಒಂದು ಕಾಲದಲ್ಲಿ ಬೇಡರ ಮುಖ್ಯ ನೆಲೆಯಾಗಿದ್ದ ಆನೆಗೊಂದಿಯಿಂದ ಅನೇಕ ಶಾಖೆಗಳ ವರು ಬೇರೆ ಬೇರೆ ಕಡೆಗಳಿಗೆ ಹೋಗಿ ನೆಲೆಸಿದುದನ್ನು "ಕಂಪಳ" ಎಂದು ಕರೆದಿರುವುದುಂಟು.[4] ಗ್ರಂಥದಲ್ಲಿನ ಪ್ರಯೋಗವೂ ಈ ಪಾರಿಭಾಷಿಕಾರ್ಥವನ್ನೇ ಸೂಚಿಸುವಂತಿದೆ. ಈ ಸಂದರ್ಭದಲ್ಲಿ "ಗಂ. ೨" ರಲ್ಲಿ ಮಾತ್ರವೇ ಕಂಡುಬರುವ ಕೆಲವು ಅಧಿಕಾಂಶಗಳನ್ನು ನೋಡಿದರೆ, ಕುಮಾರರಾಮನ ಸಾಂಗತ್ಯದಲ್ಲಿ ಬೇಡರಿಗೆ ಸಂಬಂಧಿಸಿದ ವಿಶೇಷ ವೃತ್ತಾಂತಗಳನ್ನು ಸೇರಿಸಲು ಯಾರೋ ಪ್ರಯತ್ನಿಸಿರಬೇಕೆಂದು ಭಾಸವಾಗದೆ ಇರದು. ಗಂಗನ ಕೃತಿಯಲ್ಲಿ ಕಂಡುಬರುವ ಇತರ ಪಾಠಭೇದಗಳೂ ಇಂಥ ಪ್ರಯತ್ನಗಳ ಫಲವೇ ಇರಬಹುದು. (ಇವು ಗಳು ಕುಮಾರರಾಮನ ಸಾಂಗತ್ಯವನ್ನು ಒಂದು ಜನಾಂಗದ ಆರಾಧ್ಯ ಕೃತಿಯನ್ನಾಗಿ ಮಾಡಲು ತೊಡಗಿದ ಪ್ರಯತ್ನಗಳಿದ್ದರೂ ಇರಬಹುದು. ಈ ಮಾತು ಗಂಗನ ಕೃತಿಗೆ ಹೆಚ್ಚಾಗಿ ಅನ್ವಯಿಸುತ್ತದೆ.) ಪ್ರಕೃತದಲ್ಲಿ ಈ ವೀರಕಥಾನಕಗಳು ಎಲ್ಲರೂ ಕೇಳಿ ಆನಂದಪಡಬಹುದಾದ ಅಂಶಗಳನ್ನೇ ಹೆಚ್ಚಾಗಿ ಒಳಗೊಂಡಿರುವುದರಿಂದ ಇವು, ಕೇವಲ ಒಂದು ಗುಂಪಿನವರ ಸ್ವತ್ತಾಗಿ ಉಳಿಯದೆ, ಎಲ್ಲರಿಗೂ ಎಲ್ಲ ಕಾಲಕ್ಕೂ ಪ್ರಿಯವಾಗಿದೆ. ಮಹ ಲಿಂಗಸ್ವಾಮಿಯ ಕೃತಿಯಲ್ಲಿ ಹರಿಯಮ್ಮನು "ಪುತ್ರ ನೀನಳಿಯಲು ಧಾತ್ರಿಯು ಉಳ್ಳನಕ ಕೀರ್ತಿ ಮೆರೆಯದೆ ಕಾವ್ಯದಲಿ (xviii, ೨೧೩)" ಎಂದು ಹೊಗಳಿ ಹೇಳಿರುವಂತೆಯೇ ಕುಮಾರರಾಮನ ಕೀರ್ತಿ ಆಚಂದ್ರಾರ್ಕ ವಾಗಿದೆ. ಕುಮಾರರಾಮನಿಗೆ ಈ ಸಾರ್ವತ್ರಿಕವೂ ಶಾಶ್ವತವೂ ಆದ ಪದವಿಯನ್ನು ಕಟ್ಟಿ ಮೆರೆಸಿರುವ ಕನ್ನಡ ಕವಿಗಳು ಧನ್ಯರೇ ಸರಿ.

---

1. ವಾಲ್ಮೀಕ ವಂಶಪಾವನಿ, ಪು. ೫, ೪೩, ೪೫. ಇವುಗಳನ್ನು "ಬೆಡಗು"ಗಳೆಂದು ಕರೆಯುತ್ತಾರೆ.
2. ಶರಣಸಾಹಿತ್ಯ, ಸಂಪುಟಗಳು vi-xi.
3. ಕಸಾಪಪ, ಸಂ. xli, ಸಂ. ೨, ಪು. ೬೧.
4. ವಾಲ್ಮೀಕ ವಂಶಪಾವನಿ, ಪು. ೯–೧೧.

# ಅನುಬಂಧ ೧

## ಗಂಗನ ಪ್ರತಿಗಳ ಪರಸ್ಪರ ಸಂಬಂಧ ಸೂಚಿಕೆ

| ಪ್ರತಿ | ಒಟ್ಟು ಪದ್ಯಗಳು | ಪ್ರತಿ | ಒಟ್ಟು ಪದ್ಯಗಳು | ಸಮಾನ ಪದ್ಯಗಳು |
|---|---|---|---|---|
| ಗಂಗ ೧ | ೧೮೮೫ | ಗಂಗ ೨ | ೨೫೭೩ | ೩೦೮ |
| ,, | ,, | ಗಂಗ ೩ | ೪೭೫೧ | ೬೮೭ |
| ,, | ,, | ಗಂಗ ೫ | ೨೨೦೫ | ೫೭೯\|\| |
| ,, | ,, | ಗಂಗ ೬ | ೧೧೨೦ | ೩೮೭\|\| |
| ಗಂಗ ೨ | ೨೫೭೩ | ಗಂಗ ೩ | ೪೭೫೧ | ೧೪೨೧\|\| |
| ,, | ,, | ಗಂಗ ೫ | ೨೨೦೫ | ೪೬೯ |
| ,, | ,, | ಗಂಗ ೬ | ೧೧೨೦ | ೪೬೬ |
| ಗಂಗ ೩ | ೪೭೫೧ | ಗಂಗ ೫ | ೨೨೦೫ | ೯೦೯\|\| |
| ,, | ,, | ಗಂಗ ೬ | ೧೧೨೦ | ೭೨೯\|\| |
| ಗಂಗ ೫ | ೨೨೦೫ | ಗಂಗ ೬ | ೧೧೨೦ | ೭೪೯ |
| ಗಂಗ ೬ | ೧೧೨೦ | ಗಂಗ ೭ | ೧೦೯೦ | ೭೯೯\|\| |

**ಷರಾ :** (i) ಹೋಲಿಕೆಗಳನ್ನು ಗುರುತಿಸುವುದರಲ್ಲಿ ಪದ್ಯಾರ್ಥವನ್ನು ಕನಿಷ್ಠ ಪ್ರಮಾಣವನ್ನಾಗಿ ಇಟ್ಟುಕೊಳ್ಳಲಾಗಿದೆ.

(ii) ಪಾಠಾಂತರಗಳನ್ನೂ ಗಮನಿಸಲಾಗಿದೆ.

(iii) ಗಂಗ ೩ರ ಒಟ್ಟು ಪದ್ಯಗಳ ಸಂಖ್ಯೆಯಲ್ಲಿ ನಂಜುಂಡನ ಕೃತಿಗೆ ಸೇರಿದ ಪದ್ಯಗಳು ಸೇರಿಲ್ಲ.

(iv) ಗಂಗ ೬ ಮತ್ತು ಗಂಗ ೭ ಒಂದೇ ರೀತಿಯಾಗಿರುವುದರಿಂದ, ಗಂಗ ೭ನ್ನು ಬಿಡಿಯಾಗಿ ತೆಗೆದುಕೊಂಡಿಲ್ಲ.

# ಅನುಬಂಧ ೨

## ಗಂಗನ ಪ್ರತಿಗಳ ವಿಷಯಾನುಕ್ರಮಣಿಕೆ

| ವಿಷಯ | ಗಂಗ ೧ | ಗಂಗ ೨ | ಗಂಗ ೩ | ಗಂಗ ೪ | ಗಂಗ ೫ | ಗಂಗ ೬ |
|---|---|---|---|---|---|---|
| ಪೀಠಿಕಾ ಪದ್ಯಗಳು | I ೧-೩೭ | I ೧-೧೨ | .... | I ೧-೧೭ | .... | I ೧-೧೪ |
| ವಂಶ ಚರಿತ್ರೆ | I ೩೮-೧೦೩ | I ೧೩-೩೧<br>II ೧-೪೩<br>IV ೮-೫೩ | .... | ? | I ೬೭-೬೮<br>II ೨-೨೭<br>II ೩೪-೬೭<br>III ೨-೭೫ | |
| ಅವತಾರ ಪೀಠಿಕೆ | ? | II ೧೯-೨೭<br>III ೧-೧೯ | .... | ? | ? | |
| ಪಾದುಕೆಯ ಪ್ರಸಂಗ | ? | V ೪೯-೯೨ | VI ೩೯-೯೬ | I ೨೦-೨೯<br>VII ೨೫-೩೦ | ? | |
| ಜಗತಾಪಿಯ ಯುದ್ಧ | ? | VI ೧೦-೮೯ | VII ೧೨-೧೪೫ | I ೩೨-೪೯ | IV ೩-೫೫ | |
| ಓರುಗಲ್ಲಿನ ಯುದ್ಧ | II ೧-೨೮೮ | VIII ೧೧-೨೧೩ | IX ೨೩-೩೫೯ | I ೧೨೬-೪೦೫<br>II ೧-೨೪೫ | V ೩-೧೩೪<br>VI ೩-೧೨೬ | |

| | | | | | | |
|---|---|---|---|---|---|---|
| ಹುಳಿಯಾರು<br>ಮಾರಭೂಪಾಲನ ಯುದ್ಧ | I ೧೪೪-೧೬೩ | IX ೧-೭೪ | X ೬-೫೬ | ? | ? | |
| ಬಾದೂರನ ಪಲಾಯನ | I ೧೬೯-೧೭೩ | X ೫-೩೨ | XIII ೪-೧೦ | ? | ? | |
| ನೇಮಿಯ ಮುಕ್ತಿಗೆ I | I ೧೭೯-೨೧೨ | X ೪೪-೧೨೫<br>XI ೧-೧೫೨<br>XII ೧-೬೩ | XIII ೧೨೫-೧೪೭<br>XIV ೫-೧೯೭<br>XV ೩-೧೧೨ | ? | ? | |
| ಬಲ್ಲಾಳನ ಯುದ್ಧ | I ೧೧೨-೧೩೩ | XIII ೧೧-೧೨೬ | XVI ೩೫-೧೯೬ | ? | ? | |
| ಶೂಲದ ಹಬ್ಬ | III ೧-೧೦೪ | ? | XVII ೧೦-೧೭<br>XIX ೨-೨೩ | ? | VII ೯-೮೯ | |
| ನೀರಾಟ | III ೧೪೧-೧೫೧ | XIV ೪-೨೫ | XXV ೨-೩೦ | III ೫೫-೯೬ | VIII ೫೪-೭೦ | |
| ಚೆಂಡಾಟ | III ೧೫೨-೧೬೫<br>IV ೩೦-೧೨೮<br>V ೨-೩೦ | XV ೬೦-೧೧೫<br>XVI ೧೨೧-೧೫೨ | XXVI ೩-೧೪೦<br>XXVII ೧೨೫-೧೭೭ | III ೧೧೦-೨೨೪<br>೨೮೪-೩೦೨<br>IV ೩-೫೩ | VIII ೭೩-೮೫<br>೧೩೦-೨೧೮<br>IX ೩-೨೭<br>೨೫೪-೨೬೫ | I ೨೩-೧೦೬<br>೨೦೫-೨೧೩ |
| ರತ್ನಾಜಿಯ ವ್ಯಾಮೋಹ | III ೧೦೪-೧೦೮<br>IV ೧೨೯-೨೫೯ | XVI ೧೨-೧೨೦<br>[illegible]-೧೭೨ | XVIII ೨-೨೩<br>XIX ೪೦-೪೧<br>XXVII ೫೨-೧೨೪ | III ೩೮೮-೫೯೦ | VII ೯೧-೧೨೫<br>IX ೨೮-೧೧೮<br>೨೧೮-೨೫೩<br>X ೨-೧೧ | I ೧೨೩-೧೪೧<br>೧೭೫-೨೦೪<br>೨೦೪-೨೨೩ |

| ವಿಷಯ | ಗಂಗ ೧ | ಗಂಗ ೨ | ಗಂಗ ೩ | ಗಂಗ ೪ | ಗಂಗ ೫ | ಗಂಗ ೬ |
|---|---|---|---|---|---|---|
| ರತ್ನಾಜಿಯ ಹಗರಣ ಮತ್ತು ನೆಲಮಾಳಿಗೆಯ ಪ್ರಸಂಗ | V ೩೦-೨೫೧ | XVII ೪-೧೪೨<br>XVIII ೩-೬೨<br>XIX ೩-೩೦ | XXVIII ೩-೧೬೭<br>XXIX ೩-೯೦<br>XXX ೩-೨೪ | IV ೧೫೦-೨೫೧<br>೨೬೯-೨೭೯<br>೩೦೬-೩೪೫<br>೩೮೮-೪೧೦ | X ೨೦-೧೨೧<br>XI ೪-೧೦೯ | I ೨೩೦-೨೫೭<br>೨೬೩-೩೩೦<br>II ೧-೨೬<br>೩೮-೫೭<br>೮೫-೯೦ |
| ನೇಮಿಯ ಮುತ್ತಿಗೆ II | VI ೧-೧೪೬<br>VII ೧-೧೭೧ | XX ೨೦-೧೪೮<br>XXI ೩-೧೧೧ | XXXI ೩-೧೬೭<br>೨೪೪-೨೪೮<br>XXXII ೩-೧೦೪<br>XXXIII ೨-೫೯ | V ೧೮-೨೩<br>೪೯-೬೪<br>೯೦-೯೧<br>೧೬೪-೧೭೧<br>VI ೨-೧೨೩ | XIII ೨೮-೧೯೫<br>XIV ೩-೧೧೮ | III ೨೦-೮೪<br>೧೧೭-೧೨೩<br>೧೬೪-೨೧೬ |
| ಸುರುತಾಳನ ಮುಗಳ ಪ್ರಸಂಗ | VIII ೧೯೯-೨೧೫ | V ೧-೧೬<br>XXIII ೬೨-೬೪<br>XXIV ೨-೫ | XII ೮೦-೮೪<br>XXXIV ೩೪೨-೩೪೫ | VII ೪೧೭-೪೨೫ | XV ೧೯೨-೨೦೬ | IV ೨೨೮-೨೪೩ |
| ಮಾತಂಗಿಯ ಕಾಳಗ | VIII ೧೪-೧೯೨ | XXIV ೨೬-೮೯<br>XXV ೨-೩೫ | XXXIV ೫೮-೨೭೫ | VII ೬೬-೪೧೧ | XV ೨೦-೧೮೨ | IV ೨೩-೧೫೮<br>೧೯೬-೨೦೭ |
| ರೂಪಿದೇವಯ್ಯನ ಪ್ರಸಂಗ | ? | .... | XXXIV ೩೧೭-೩೪೧<br>XXXV ೩-೬ | ಭಟ್ಟರಮಲ್ಲ ?<br>VII ೪೨೬-೪೩೭ | XV ೨೨೫-೨೪೩ | IV ೨೫೫-೨೮೩ |
| ರಾಮನ ಮರಣೋತ್ತರ ವಿವರಗಳು | VIII ೨೧೬-೨೪೩ | .... | XXXVI ೩-೯೦<br>XXXVII ೩-೧೪೯ | VII ೪೨೬-೪೫೯ | .... | IV ೩೦೨ |

ಷರಾ : 1. ಗಂಗ ೬ ಮತ್ತು ಗಂಗ ೭ ಒಂದೇ ರೀತಿಯಾಗಿರುವುದರಿಂದ ಗಂಗ ೭ನ್ನು ಬಿಡಿಯಾಗಿ ತೆಗೆದುಕೊಂಡಿಲ್ಲ. 2. ಗಂಗ ೩ರಲ್ಲಿ ನಂಜುಂಡನ ಕೃತಿಗೆ ಸೇರಿದ ಕಥಾಭಾಗವನ್ನು ಸೇರಿಸಿಲ್ಲ. 3. .... = ಪ್ರತಿ ತ್ರುಟಿತವಾಗಿದೆ. 4. ? = ಉಕ್ತ ವಿಚಾರವಿಲ್ಲ.

## ಅನುಬಂಧ ೩

### ಮೂರು ಕೃತಿಗಳ ಮುಖ್ಯ ಘಟನೆಗಳ ಕ್ರಮ

| ನಂಜುಂಡ | ಪಾಂಚಾಳ ಗಂಗ | ಮಹಲಿಂಗಸ್ವಾಮಿ |
|---|---|---|
| ೧. ಹುಳಿಯೇರು ಕಾಳಗ | ಜಗತಾಪಿಯ ಯುದ್ಧ | ಬಲ್ಲಾಳನ ಯುದ್ಧ |
| ೨. ಬಲ್ಲಾಳನ ಯುದ್ಧ | ವೀರರುದ್ರನೊಂದಿಗೆ ಯುದ್ಧ | ಗುತ್ತಿಯ ಕಾಳಗ |
| ೩. ವೀರರುದ್ರನ ಕಾಳಗ | ಹುಳಿಯಾರಿನ ಯುದ್ಧ | ಬಾದೂರನ ಪಲಾಯನ |
| ೪. ಕರಿಪತಿ ಕಪಿಲೇಶ್ವರನ ಕಾಳಗ | ಬಾದೂರನ ಪಲಾಯನ | ನೇಮಿಯ ಮುತ್ತಿಗೆ I |
| ೫. ಬಾದುರನ ವೃತ್ತಾಂತ | ನೇಮಿಯ ಮುತ್ತಿಗೆ I | ವೀರರುದ್ರನೊಂದಿಗೆ ಯುದ್ಧ |
| ೬. ನೇಮಿಯ ಮುತ್ತಿಗೆ I | ಬಲ್ಲಾಳನ ಕಾಳಗ | ಚೆಂಡಾಟ |
| ೭. ಶೂಲದ ಹಬ್ಬ | ಶೂಲದ ಹಬ್ಬ | ನೆಲಮಾಳಿಗೆಯ ಪ್ರಸಂಗ |
| ೮. ಚೆಂಡಾಟ | ಚೆಂಡಾಟ | ನೇಮಿಯ ಮುತ್ತಿಗೆ II |
| ೯. ನೆಲಮಾಳಿಗೆಯ ಪ್ರಸಂಗ | ನೆಲಮಾಳಿಗೆಯ ಪ್ರಸಂಗ | ಮಾತಂಗಿಯ ಕಾಳಗ |
| ೧೦. ನೇಮಿಯ ಮುತ್ತಿಗೆ II | ನೇಮಿಯ ಮುತ್ತಿಗೆ II | — |
| ೧೧. ಮಾತಂಗಿಯ ಕಾಳಗ | ಮಾತಂಗಿಯ ಕಾಳಗ | — |

## ಅನುಬಂಧ ೪

### ಸಂಗೂರಿನ ಶಾಸನ

೧. ಸ್ವಸ್ತಿ (1) ಸಮಸ್ತ ಭುವನಾಶ್ರಯ ಶ್ರೀ ಪೃ(ಪ್ರಿ)ಥ್ವೀ ವಲ್ಲಭ ಮಹಾರಾಜಾಧಿರಾಜ ರಾಜ ಪರಮೇಶ್ವರ ಸತ್ಯಾ

೨. ಶ್ರಯ ಕುಳತಿಲಕ ಶ್ರೀ ವೀರಪ್ರತಾಪ ಹರಿಹರ ಮಹಾರಾಯರ ಕುಮಾರ ದೇವರಾಯ

೩. ರು ಸುಕ(ಖ)ದಿಂ ರಾಜ್ಯಂಗೆಯ್ಯುತ್ತಿರದ್ದಲ್ಲು [1] ಗೋವೆಯ ರಾಜ್ಯಕ್ಕೆ ಸಲುಹ(ವ) ಚಂದ್ರ ಗುತ್ತಿಯ ನಾಡೊಳಗಣ

೪. ಚಂಗಾಪುರದಲು ಕಂಪಿಲರಾಯನ ಬಾಹತ್ತರ ವಿನಿಯೋಗಾಧಿಪತಿ ಪತಿಕಾರ್ಯಧುರಂ

೫. ಧರನುಮಪ್ಪ ಬೈಚವೆಗ್ಗಡೆಯ ಮೊಮ್ಮ ಸೇನಾಧಿಪತಿ ಸಂಗಮನ ಕುಮಾರ ಮಾದರಸು

೬. ಕುಮಾರ ರಾಮನಾಥದೇವರ ಪ್ರತಿಷ್ಠೆಯ ಶಕವರ್ಷ ೧೩೨೯ನೆಯ ಸರ್ವ[ಜಿ]ತು ಸಂವತ್ಸರದ ಆ

೭. ಶ್ವಯುಜ ಸುದ್ಧ ೧೦ ಆದಿತ್ಯವಾರದಲು ಮಾಡಿಸಿದ[ರು] [1] ಮಂಗಳ ಮಹಾಶ್ರೀ

೮. ಶ್ರೀ ಶ್ರೀ ಶ್ರೀ ಶ್ರೀ ||

EI, XXIII, P. 185
A. D. 1407

## ಅನುಬಂಧ ೫

### ತೀರ್ಥಹಳ್ಳಿಯ ಶಾಸನ

ಕೊಕ್ಕೋಡು ಗ್ರಾಮದ ಮಜರೆ ಕೊಳವಳ್ಳಿ ಗ್ರಾಮದ ಮಾಸ್ತಿ ದೇವಸ್ಥಾನದಲ್ಲಿರುವ ವೀರಗಲ್ಲು

೧. ಶ್ರೀ ಗಣಾಧಿಪತಿಯೇಂ ನಮಃ ನಮಸ್ತುಂಗಶಿರಚುಂಬಿ ಚಂದ್ರ ಚಾಮರ ಚಾರವೇ ತ್ರಯಿ ಲೋಕ್ಯ ನಗರಾರಂಭಾ ಮೂಲಸ್ತಂಭಯ ಶಂಭವೇ ಸ್ವಸ್ತಿ ಶ್ರೀ ಜಯಾದ್ಯುದಯ ಸಕವರುಶ ಸಾವಿರದ ಮೂನೂರ ಅಯಿವತ ನಾ

೨. ಲ್ಕು ಸಂದು ವರ್ತಮಾನ ಪರಿಧಾವಿ ಸಂವತ್ಸರದ ಮಾರ್ಗಶಿರ ಬಹುಳ ಬಿದಿಗೆಯುಂ ಬುಧವಾರ ದಲೂ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪದೇವರಾಯ ಮಹಾ

೩. ರಾಯರು ಶ್ರೀ ವಿರೂಪಾಕ್ಷ ದೇವರ ಸಂನಿಧಿಯಲ್ಲಿ ಸುಖ ಸಂಕಥಾವಿನೋದದಿಂ ಸಮಸ್ತ ಧರ್ಮ್ಮಾ ಶ್ರಮಂಗಳನೂ ಪಾಲಿಸುತ್ತಿಹ ಕಾಲದಲ್ಲಿ ಆ ರಾಯರ ನಿ

೪. ರೂಪದಿಂ ಬ್ರಂಹ್ಮ ಕ್ಷತ್ರಿಯರುಮಪ್ಪ ರಾಯಪ್ಪ ಒಡೆಯರ ಕುಮಾರ ಸಿರಿಗಿರಿನಾಥ ಒಡೆಯರೂ ಆರಗದ ರಾಜ್ಯವನೂ ಪಾಲಿಸುತ್ತ ಇಹ ಕಾಲದಲ್ಲಿ

೫. ಸಾತಳಿಗೆಯ ನಾಡ ಕೊಳವಳಿಗೆ ಪಠಾವಳಿ ಬಂದು ಕಾದಿದಲ್ಲಿ ಆ ಬೊಂಮರಸ ಹೆಗ್ಗಡೆಯರ ಮಗ ಪುಟ್ಟಗಡೆ ದಳವನೂ ಮುಱಿದು ಆ ರಣದೊಳಗೆ ಕುಮಾರ ರಾಮ

೬. ನಾಥನ ಪ್ರತಾಪವಾಗಿ ಅಂಬುಗೂಡಾಗಿ ಸ್ವರ್ಗ್ಗವನೂ ಸೂಱೆಕೊಂಡದಕೆ ಬೊಂಮರಸ ಹೆಗ್ಗಡೆ ಯರೂ ಆಂದ ಬಯಲ ಭೂಮಿಯ ಒಳಗೆ ಜೋಯಿಸ

೭. ಸಿಂಗಂಣಗಳಿಗೆ ಆಯಿದು ಸಲಗೆ ಭೂಮಿಯನು ದಾನ ಧಾರಾಪೂರ್ವ್ವಕವಾಗಿ ಕೊಟ್ಟರು ಯಿಾ ವೀರಗಲ್ಲಾ ಮಾಡಿದೋವ ಸೂರೋಜನ ಮಗ ವಿರೋಜ ಮಂಗಳ ಮಹಶ್ರೀಶ್ರೀ.

EC, VIII, Part II, Tirthahally 23.
A. D. 1432

# ಅನುಬಂಧ ೬

## ರಾಮುಘಡದ ಶಾಸನ ೧

### ರಾಮುದೇವ ದೇವಸ್ಥಾನದ ಬಳಿಯಲ್ಲಿರುವ ವೀರಗಲ್ಲು

೧. ಶ್ರೀಮತು [ದುನ್ದುಭಿ] ಸಂವತ್ಸರದ ಫಾಲ್ಗುಣ ಸುದ್ಧ ೧೫ [ಸೋಮ] ವಾರದಲು ಶ್ರೀ ವೀರ·
ಕಂಪಿ

೨. ಲ ದೇವನ ಮೇಲೆ ಬಲ್ಲಾಳರಾಯನು [ದಂಡೆತ್ತಿ ಬಂದಲಿ] ಯಿಬ್ಬರು ದಾಯದ ದಂಡಿನೊ

೩. ಳಗೆ ದಂಡಿನ ಬಯಿಚಯ್ಯನು ಆ ಸಮರಂಗದ ಕಟ್ಟೆನಲ್ಲಿ ಹೊಕ್ಕು ಆ ಕಂಪಿಲದೇವನು

೪. ಬಯಿ [ಚ] ಬೋವನ ಕುದಿರೆ [ಯ] ನು ಯೇರಿದಡೆ ಆ ಬಯಿಚ ಬೋವನು ಸಮರಂಗದ ಕಟ್ಟೆ

೫. [ನಲ್ಲಿ] ತಿರಿಗಿ ಹಾರಿ ಹೊಯಿದಾಡಿ ಬಿದ್ದನು ||

A.R. No. 75 of 1943–44
A.D. 1323

(ಭಾರತ ಸರ್ಕಾರದ ಶಾಸನದ ಇಲಾಖೆಯ ಕೃಪೆಯಿಂದ)

## ಅನುಬಂಧ ೭

### ರಾಮುಘಡದ ಶಾಸನ ೨

ರಾಮದೇವರ ದೇವಸ್ಥಾನದ ಮುಂಭಾಗದ ಗೋಡೆಗೆ ಒರಗಿಸಿರುವ ಕಲ್ಲು

೧. ಶ್ರೀ ಗಣಾಧಿಪತಯೇ ನಮಃ ॥ ಶುಭಮಸ್ತು
೨. ಶಾಲಿವಾಹನ ಶಖವರುಷ ೧೪[೫೦]ನೆಯ ಸರ್ವ
೩. ಜಿತು ಸಂವತ್ಸರದ ಆಶ್ವಿಜ [ಶು] ೧೦ ಶ್ರೀ [ಕ್ರಿಷ್ಣ]
೪. ದೇವ ಮಹಾರಾಯರೂ [ಪೃಥ್ವೀ] ರಾಜ್ಯಂ [ಪಾಲಿಸು]
೫. ತ್ತಿರಲೂ ಹೊಸಮಲೆಯ ದುರ್ಗದಲೂ ಮುತ
೬. ಯ ಮುಂಮಡಿ ಸಿಂಗನ ಕುಮಾರ ಖಂಡೆಯರಾಯ
೭. ಕಂಪಿಲರಾಯನ ಪಟಕೆ ಸಲುವ ರಾಣೀವಾಸ ವೀರ ಗುಜಲ ಹರಿ
೮. ಹರದೇವಿಯರ ಪುತ್ರ ಹೊಸಮಲೆಯ ರಾಮನಾ
೯. 'ಥ ವೊಡೆಯರು ಛಪ್ಪನ ದೇಶದ ರಾಯರ ಗಂಡ ಆತನ
೧೦. ಮನೆಯ ಹಾಡುಕಾಱ ಸೋಮಣಯ್ಯ
೧೧. ವಿಜೆಯಾನಗರದ ಹೂವಿನ ಬಾವಿಲ ಹನುಮಂತ
೧೨. ದೇವರ ಪೂಜಾರಿ ರಾಮಣನು ಆತನ ಮಗನು ಸೋಮಣ
೧೩. ಯನು ಶಿಷ್ಯ ರಾಮನಾಥನ ಕೋನೇರಿನಾಯಕನ ಮಗಳು ಕಾ
೧೪. ಟಿ ನಾಯಕವೊಡೆಯು ಹಳದ ರಾಮನಾಥನ ಗೋಪಾಯಿ
೧೫. ಆಕೆಯ ತಂಮ ರಾಮನಾಥದೇವರ ತೂಳದ ರಾಮಣನು
೧೬. ಹೊಸಮಲೆಯ ದು[ರ್ಗ]ದ ರಾಮನಾಥದೇವರ ಗುಡಿಯನು
೧೭. ಕಟ್ಟಿಸ್ತಳು ಗಂಟೆ ಜೇಗಟೆ ಹರಿವಾಣ ಚೆಂಬು ಮೇಲೆ
೧೮. ಹೊನ್ನನು ಸಮರ್ಪಿಸಿ ರಾಮನಾಥನ ಕಾಲದ ಪೂರ್ವದ ಛಪ್ಪನ್ನ
೧೯. ಸಮಂದಿ ವೀರರಿಗೆ ವೀರಸ್ವರ್ಗ್ಗ ಆಗಬೇಕೆಂದು ಕಟ್ಟಿಸ್ತಳು

[ಇದರ ಕೆಳಗಡೆ ಕಮಾನಿನಾಕಾರದಲ್ಲಿ ಪೀಠದ ಮೇಲೆ ಒಬ್ಬ ಮನುಷ್ಯನ ಆಕೃತಿಯಿದೆ. ಈ ಸ್ಥಳದ ಎಡ ಮತ್ತು ಬಲಗಡೆಯ ಅಂಚುಗಳಲ್ಲಿ ಶಾಸನ ಮುಂದುವರಿಯುತ್ತದೆ.

ಎಡಗಡೆಯ ಅಂಚಿನಲ್ಲಿ ಕೆಳಗಡೆ]

೨೦. ಛಪ್ಪನ ದೇಶದ
೨೧. ಹಾಡುಕಾಱ
೨೨. ಙಿಽಡೆ........
೨೩. ...............
೨೪. ...............

[ಬಲಗಡೆಯ ಅಂಚಿನಲ್ಲಿ ಕೆಳಗಡೆ]

೨೫. ಱಚುವ ಹಾಡುಕಾಱ ಬೇಗೆ ಮಸ್ತ್ರಕಾಶೂಲ ಗೋಪ

[ಈ ಸ್ಥಳದ ಕೆಳಗಡೆಯಲ್ಲಿ]

೨೬. ಯಿವ್ವುರು ಸಮರ್ಪ್ಪಿಸಿ. ಪಾದತಿರ್ಥ

A.R. No. 76 of 1943–44
A.D. 1528

(ಭಾರತ ಸರ್ಕಾರದ ಶಾಸನದ ಇಲಾಖೆಯ ಕೃಪೆಯಿಂದ)

## ಅನುಬಂಧ ಆ

### ಹಂಪೆಯ ಶಾಸನ

ಪ್ರಸನ್ನ ವಿರೂಪಾಕ್ಷ ದೇವಸ್ಥಾನದ ಬಳಿಯಲ್ಲಿರುವ ಕಂಪಿಲದೇವನ ಶಾಸನ

ಶ್ರೀ ಸಂಗಮೇಶ್ವರ ದೇವರ ದಿವ್ಯ ಶ್ರೀ ಪಾದಪದ್ಮಾರಾಧಕರುಮಪ್ಪ
ಮುಮ್ಮಡಿ ಸಿಂಗೆಯನಾಯಕನ ಕೊಮಾರ ವೀರ ಕಂಪಿಲಿದೇವನು
ತಮ್ಮ ತಾಯಿ ಮಾದನಯಕಿತಿ ಸಿಂಗೆಯನಯಕ ಪರಮೆಯ
ನಯಕ ಇಂತು ಮೂವರ ಲಿಂಗ ಪ್ರತಿಷ್ಠಿಯ ಮಾಡಿಸಿದ ಶಿವಾಲ್ಯಾ ||

FSVH, Vol. II, P. 1

# ಅನುಬಂಧ ೯

## ಆಧಾರ ಸಾಹಿತ್ಯ

### ಹಸ್ತಪ್ರತಿಗಳು

ನಂಜುಂಡನ " ಕುಮಾರರಾಮ ಚರಿತ "—

(i) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

(ii) ಶ್ರೀ. ಡಿ.ಎಲ್. ನರಸಿಂಹಾಚಾರ್ಯರ ಪ್ರತಿ

(iii) ಸರ್ಕಾರದ ಪ್ರಾಚ್ಯ ಪುಸ್ತಕ ಭಂಡಾರ, ಮದರಾಸು (D. 892).

ಪಾಂಚಾಳ ಗಂಗನ " ಚೆನ್ನರಾಮನ ಸಾಂಗತ್ಯ"—

(i) ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಪ್ರತಿಗಳು (ಗಂ. ೧, ಗಂ. ೨, ಗಂ. ૩, ಗಂ. ೭).

(ii) ಶ್ರೀ. ಎಸ್. ನಾಗರಾಜ ಅವರ ಪ್ರತಿ (ಗಂ. ೫).

(iii) ಸ್ವಂತ ಪ್ರತಿ (ಗಂ. ೬).

(iv) ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು (ಗಂ. ೪) (K. 199)

ಮಹಲಿಂಗಸ್ವಾಮಿಯ "ಬಾಲರಾಮನ ಸಾಂಗತ್ಯ"—

ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಪ್ರತಿ

ಕೈಫಿಯತ್ತುಗಳು

ಸರ್ಕಾರದ ಪ್ರಾಚ್ಯ ಪುಸ್ತಕ ಭಂಡಾರ, ಮದರಾಸು.

ಗುಂಡುಬ್ರಹ್ಮಯ್ಯಗಳ ಸುವ್ವಿ (K.B. 351)

ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು.

ದೇವಚಂದ್ರನ " ರಾಜಾವಳಿ ಕಥೆ." (K.A. 65)

ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು.

ಬತ್ತೀಸ ಪುತ್ತಳಿ ಕಥೆ (K.A. 78, K. 33, K. 139)

ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು.

ಸಿರುಮನ ಚರಿತೆ (ರಾಮಕವಿ)

ಶ್ರೀ. ಹುಲ್ಲೂರು ಶ್ರೀನಿವಾಸ ಜೋಯಿಸರ ಪ್ರತಿ

### ಹಸ್ತಪ್ರತಿಗಳ ಪಟ್ಟಿಗಳು


Alphabetical Catalogue of Kannada Manuscripts—Oriental Research Institute, Mysore.

A Catalogue Raisonnee of Oriental Manuscripts, Vols. I, II and III —Rev. W. Taylor.

A Descriptive Catalogue of Manuscripts, Vol. III — Kannada Research Institute, Dharwar.

A Descriptive Catalogue of the Kannada Manuscripts, Vol. V—The Govt. Oriental Manuscript Library, Madras.

An Alphabetical Index of Kanarese Manuscripts—The Govt. Oriental Manuscripts Library, Madras.

An Alphabetical Index of Kannada Manuscripts, Mackenzie's Collection —The Govt. Oriental Manuscripts Library, Madras.

The Mackenzie Collection—Ed. H H. Wilson.

ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ತೃತೀಯ ಸಂಪುಟ—ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು.

## ಗ್ರಂಥಗಳು

**ಕನ್ನಡ—**

ಅನಂತರಂಗಾಚಾರ್, ಎನ್. — ಕುಮಾರರಾಮ ಸಾಂಗತ್ಯ ಸಂಗ್ರಹ

ಕರ್ಕಿ, ಡಿ.ಎಸ್. — ಕನ್ನಡ ಛಂದೋವಿಕಾಸ (೧೯೫೭)

ಕರ್ಣಪಾರ್ಯ — ನೇಮಿನಾಥ ಪುರಾಣ

ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ— ಕನ್ನಡ ನಾಡಿನ ಚರಿತ್ರೆ
ಸೋಮೇಶ್ವರ ಶತಕ

ಕರಾಕೃ — ಗುಡ್ಡಾಡಿನ ಹಾಡ್ಗತೆಗಳು

ಕರೀಂಖಾನ್, ಎಸ್.ಕೆ. — ಜನಪದಗೀತೆ (ಭಾಗ ೧)

ಕೃತಿಕರ್ತ (?) — ಕುಮಾರರಾಮನ ಕಥೆ (ಯಕ್ಷಗಾನ)

ಕೃಷ್ಣರಾವ್, ಕೆ.ಎಂ. — ಯಕ್ಷಗಾನ ಸಾಹಿತ್ಯ

ಕೃಷ್ಣಶಾಸ್ತ್ರೀ, ಎ.ಆರ್. — ಕಥಾಮೃತ

ಕೃಷ್ಣಶರ್ಮ, ಬೆಟಗೇರಿ — ಕರ್ಣಾಟಕ ಜನಜೀವನ

ಕೃಷ್ಣಮೂರ್ತಿ, ಮತಿಘಟ್ಟ
ಮತ್ತು ಗುಂಡಪ್ಪ, ಎಲ್. — ನಾಡಪದಗಳು

ಗದ್ದಗಿಮಠ, ಬಿ.ಎಸ್. — ಕನ್ನಡ ಜಾನಪದ ಗೀತಗಳು (ಹಸ್ತ ಪ್ರತಿ)
ಕುಮಾರರಾಮನ ದುಂದುಮೆ
ಜನತಾ ಗೀತಗಳು

ಗೋವಿಂದ ವೈದ್ಯ — ಕಂಠೀರವ ನರಸರಾಜ ವಿಜಯ

ಚದುರಂಗ — ಕುಮಾರರಾಮ

ಚೆನ್ನಪ್ಪ ಕವಿ — ಶರಣಲೀಲಾಮೃತ

ಜನ್ನ — ಯಶೋಧರ ಚರಿತೆ

ಜವರೇಗೌಡ, ದೇ. — ನಂಜುಂಡ ಕವಿ

ದೇಜಗೌ — ಕಡುಗಲಿ ಕುಮಾರರಾಮ

ನರಸಿಂಹಾಚಾರ್ಯ, ಆರ್. — ಕರ್ಣಾಟಕ ಕವಿಚರಿತೆ (೩ ಸಂಪುಟಗಳು)

ನರಸಿಂಹಾಚಾರ್, ಎಸ್. ಜಿ. — ಪದ್ಯಸಾರ (ಭಾಗ ೧)
ನರಸಿಂಹಾಚಾರ್, ಡಿ.ಎಲ್. — ಕನ್ನಡ ಗ್ರಂಥ ಸಂಪಾದನೆ
ಬಿದಿರೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ
ನಾಗವರ್ಮ — ಕನ್ನಡ ಛಂದಸ್ಸು (ಸಂ. ಕಿಟ್ಟೆಲ್, ಎಫ್.)
ನಾಗವರ್ಮ — ಕರ್ಣಾಟಕ ಭಾಷಾಭೂಷಣ (ಸಂ. ರೈಸ್, ಬಿ. ಎಲ್.)
ನೇಮಿಚಂದ್ರ — ನೇಮಿನಾಥ ಪುರಾಣ (ಅರ್ಧನೇಮಿ)
ನಂಜುಂಡ — ಭೈರವೇಶ್ವರ ಕಾವ್ಯ
ನಂಜುಂಡ — ರಾಮನಾಥ ಚರಿತ (ಪೂರ್ವಾರ್ಧ ಮತ್ತು ಉತ್ತರಾರ್ಧ : ಸಂ. ದೇವೀರಪ್ಪ, ಎಚ್.)
ಪಾರ್ಶ್ವಪಂಡಿತ — ಪಾರ್ಶ್ವನಾಥ ಪುರಾಣ
ಪುಟ್ಟಣ್ಣ, ಎಂ.ಎಸ್. — ಪಾಳೆಯಗಾರರು
ಪಾಂಡುರಂಗರಾವ್, ದೇಸಾಯಿ — ನಾಗರಮರಿ (" ಕಂಪಿಲ ಕುಮಾರ ")
ಬೇಟೆರಾಯ ದೀಕ್ಷಿತ — ಸಾರಂಗಧರ ನಾಟಕ
ಬೇಂದ್ರೆ, ದ.ರಾ. — ಶ್ರೀ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ
ಬಂಧುವರ್ಮ — ಜೀವ ಸಂಬೋಧನಂ
ಭಟ್ಟಾಕಳಂಕ — ಕರ್ಣಾಟಕ ಶಬ್ದಾನುಶಾಸನ (ಸಂ. ರೈಸ್, ಬಿ.ಎಲ್.)
ಮುಗಳಿ, ರಂ. ಶ್ರೀ. — ಕನ್ನಡ ಸಾಹಿತ್ಯ ಚರಿತ್ರೆ (೧೯೫೩)
ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ — ಕನ್ನಡ ಕೈಪಿಡಿ, ಸಂಪುಟ ೧ (೧೯೫೫)
ಮಂಗರಸ — ಜಯನೃಪ ಕಾವ್ಯ
ನೇಮಿಜಿನೇಶ ಸಂಗತಿ
ಸಮ್ಯಕ್ತ್ವ ಕೌಮುದಿ
ಮಂಗೇಶರಾವ್, ಉಗ್ರಾಣ — ನೂತನ ಶಾಲಾ ವ್ಯಾಕರಣ
ರಾಮಶರ್ಮ, ಮೈ.ಹ. — ರಣಧೀರ ರಾಮನಾಥ
ರಾಮಶಾಸ್ತ್ರಿ — ಕೊಮಾರರಾಮನ ನಾಟಕವು (ಯಕ್ಷಗಾನ)
ರಂಗನಾಯಕ, ವಿ. — ವಾಲ್ಮೀಕ ವಂಶಪಾವನಿ
ಲಕ್ಷ್ಮೀಶ — ಜೈಮಿನಿ ಭಾರತ
ಲಿಂಗಣ್ಣ — ಕೆಳದಿ ನೃಪವಿಜಯಂ
ವರದರಾಜರಾವ್, ಜಿ. — ಕುಮ್ಮಟ ಕೇಸರಿ
ವರದರಾಜ, ಹುಯಿಲುಗೋಳ — ಅಮೃತಮತಿ (" ರತ್ನಾಜಿ ")
ವಸುದೇವ, ಭೂಪಾಲಂ — ಕುಮ್ಮಟ ವಲ್ಲಭ
ವಿರೂಪಾಕ್ಷ ಪಂಡಿತ — ಚೆನ್ನಬಸವ ಪುರಾಣ
ವೆಂಕಟಸುಬ್ಬಯ್ಯ, ಎ. — ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ
ವೆಂಕಟರಾವ್, ಆಲೂರು — ಕರ್ನಾಟಕ ವೀರರತ್ನಗಳು ("ರಣರಂಗ ಸಿಂಗ ಕುಮಾರರಾಮ"

ವೆಂಕಟರಂಗೋ ಕಟ್ಟಿ — ಮುಂಬೈ–ಕರ್ಣಾಟಕ ಗೆಜೆಟಿಯರ್

ವೆಂಕಟೇಶ, ಸಾಂಗಲಿ — ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ (ಪ್ರಥಮ ಸಂಪುಟ)

ಶಿಶುಮಾಯಣ — ತ್ರಿಪುರದಹನ ಸಾಂಗತ್ಯ

ಶಂಬಯ್ಯ — ಸಾರಂಗಧರನ ಕಥೆ (ಯಕ್ಷಗಾನ)

ಶಾಂತಲಿಂಗದೇಶಿಕ — ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ, ಭಾಗ ೧ (ಸಂ. ಬಸವಾರಾಧ್ಯ, ಎನ್.)

ಶ್ರೀಧರಾಚಾರ್ಯ — ಜಾತಕ ತಿಲಕ (ಮದರಾಸಿನ ಪ್ರಕಟನೆ ಮತ್ತು ಮೈಸೂರಿನ ಪ್ರಕಟನೆ)

ಶ್ರೀನಿವಾಸ ಜೋಯಿಸ, ಹುಲ್ಲೂರು — ಕಪೋತವಾಕ್ಯ (ಸಂಪಾದಿತ)
ಗಂಡುಗಲಿ ಕುಮಾರರಾಮ (೧೯೪೧- ೧೯೫೨)
ನಾಡಕತೆಗಳು ("ಬಾಬಮ್ಮ")
ಹುಳಿಯಾರು ಮಾರಭೂಪಾಲ (ಸಂಪಾದಿತ)

ಶ್ರೀನಿವಾಸರಾವ್, ಕೊರಟಿ — ಕನ್ನಡಿಗರ ಕಾಳರಾತ್ರಿ

ಶ್ರೀಸ್ವಾಮಿ — ನಡೆದು ಬಂದ ದಾರಿ, ಸಂಪುಟ ೨ ("ಮುತ್ತಿನ ಹಾರ").

ಸಿದ್ದಲಿಂಗಪ್ಪ — ಕರೀಭಂಟನ ಕಥೆ (ಯಕ್ಷಗಾನ)

ಸ್ಮಾರಕ ಸಂಪುಟ — ಪಂಜೆಯವರ ನೆನಪಿಗಾಗಿ

ಹರತಿ — ಕ್ಷಾತ್ರಾಂಶ ಪ್ರಬೋಧ

ಹೊಸಳ್ಳಯ್ಯ, ಸಿ.ಆರ್. — ಅಮರಕೀರ್ತಿ (" ಕುಮಾರರಾಮ ")


**ತೆಲುಗು :**


ಗೌರನ — ನವನಾಥಚರಿತ (ಸಂ. ರಾಮಕೃಷ್ಣಯ್ಯ, ಕೆ.)

ರಾಮರಾಜು, ಬಿ. — ತೆಲುಗು ಜಾನಪದ ಗೇಯಸಾಹಿತ್ಯಮು

ರಾಮಾಚಾರ್ಯುಲು, ಶ್ರೀನಿವಾಸಪುರಂ ಮತ್ತು ಇತರರು— ಕಂಪಿಲರಾಯಲು (ಸೋಮೇಶ್ವರುಡು) (ಮೂಲ ಲೇಖಕರು : ಶ್ರೀನಿವಾಸರಾವ್, ಕೊರಟಿ)

ಲೇಖನ ಸಂಗ್ರಹ — ಕಾಕತೀಯ ಸಂಚಿಕ

ವೆಂಕಟರಮಣಯ್ಯ, ಎನ್. (ಸಂ) — ಕುಮಾರರಾಮುನಿ ಕಥ

ವೇಂಕಟಪತಿ, ಚೇಮಕೂರ — ಸಾರಂಗಧರ ಚರಿತ್ರಮು

ಸಿದ್ಧನಗೌಡ — ಸಾರಂಗಧರ ನಾಟಕಮು

ಸುಬ್ಬಯ್ಯನಾಯುಡು, ವೈ.ವಿ. — ವಾಲ್ಮೀಕಿ ನಾಯಕುಲ ಜೀವಿತ ಚರಿತ್ರಮು


**ಸಂಸ್ಕೃತ :**


ವಾವಿಳ್ಳ, ರಾಮಸ್ವಾಮಿಶಾಸ್ತ್ರಿ ಪ್ರಕಾಶನ — ವಿಕ್ರಮಾರ್ಕ ಚರಿತ್ರಂ

ಸೋಮದೇವ — ಕಥಾಸರಿತ್ಸಾಗರ

ಕ್ಷೇಮೇಂದ್ರ — ಬೃಹತ್ಕಥಾಮಂಜರಿ

ಇಂಗ್ಲಿಷ್ :


Bowra, C.M. – Heroic Poetry

Briggs, John – History of the Rise of the Mahomedan Power in India (M.K. Ferishta)

Buchanan, Francis – Travels, Vol. II

Dakshina Murthy, N. – Founders of Vijayanagara (Thesis for M.A. 1933-34)

Derrett, J.D.M. – The Hoysalas

Desai, P. B. – Jainism in South India

Dow, A. – The History of Hindustan (2nd Edn.)

Edgerton, F. – The Pancatantra Reconstructed, 2 Vols. Vikrama's Adventures, 2 Vols.

Elliot and Dowson – The History of India (1953)

Emeneau, M. B. – Jambaladatta's Version of the Vetalapancavinsati

Francis, W – Bellary Gazetteer

Hayavadana Rao, C. – History of Mysore, Vol. 1

Heras, H. Rev. – Beginnings of Vijayanagar History

Hunter, W. W. – A History of Orissa, Vol. 1

Katre, S.M. and Gode, P.K. – Introduction to Indian Textual Criticism

Krishnaswami Aiyangar, S. – South India and Her Muhammadan Invaders

Mahalingam, T.V. – Economic Life in Vijayanagar Empire

Mahatab, H. – The History of Orissa

Majumdar, R. C. – The Delhi Sultanate

Nilakanta Sästri, K.A. and Venkataramanayya, N. – Further Sources of Vijayanagar History Vols. I, II and III.

Nilakanta Sastri, K.A. – Foreign Notices of South India

Panchamukhi, R. S. – Archeology of Karnatak

Rama Rao, M. – Glimpses of Dakkan History The Kakatiyas of Warangal

Rice, B.L. and Hayavadana Rao, C. – Mysore Gazetteer Vols.

Salatore, B.A. – Social and Political Life in Vijayanagara Empire

Sewell, R. – A Forgotten Empire

Smith, V. A. – Asoka (1909)

Srikantayya, S. – Founders of Vijayanagar

Suryanarayana Rao, B. – The Never to be Forgotten Empire

Swami Kannu Pillai, L.D. – An Indian Ephemeris

Tawney, C. H. – The Ocean of Story, Vol. I
Venkataramanayya, N. – Kampili and Vijayanagara
The Early Muslim Expansion in South India
.... Vijayanagara Sex-Centenary Commemoration Volume
Way, A.S. (Ed.) – Hippolytus (Euripedes)

**Inscriptions :**

Annual Reports of the Mysore Archeological Department
Annual Report on South Indian Epigraphy
Bombay Karnatak Inscriptions
Epigraphia Carnatica Vols.
Epigraphia Indica
Historical Inscriptions of Southern India—R. Sewell
Inscriptions of the Madras Presidency, Vol. I—V. Rangacharya
South Indian Inscriptions, Vols. IX and XX.

## ಲೇಖನಗಳು

**ಕನ್ನಡ :**

ಕೃಷ್ಣರಾವ್, ಕಪಟರಾಳ — ಕಂಪಿಲರಾಯನೂ ಅವನ ಸ್ಥಾನಮಾನವೂ (ಶರಣ ಸಾಹಿತ್ಯ, ಸಂ. iv, ಸಂ. ೫ ಮತ್ತು ೬)
ಕೂಡ್ಲಿಗಿ, ಆರ್.ಎಸ್. — ಕುಮಾರರಾಮನ ಚರಿತೆ (ಜಕ, ಜೂನ್ ೧೯೪೨)
ಗದ್ದಗಿ ಮಠ, ಬಿ.ಎಸ್. — ಕುಮಾರರಾಮನ ದುಂದುಮೆ (ಪ್ರಕ, ಸಂ. xli, ಸಂ. ೨ ಮತ್ತು ೩)
ಬಯಲಾಟ (ಕಸಾಪಪ, ಸಂ. xlii, ಸಂ. ೨)
ಹಂಪೆಯ ಹರಿಹರನ ಷಟ್ಪದಿ ಕಾವ್ಯ (ಶರಣ ಸಾಹಿತ್ಯ, ಸಂ. xxi, ಸಂ. ४)
ನರಸಿಂಹಾಚಾರ್, ಡಿ.ಎಲ್. — ಕುಮಾರರಾಮನ ಸಾಂಗತ್ಯ (ಕನ್ನಡ ನುಡಿ, ಸಂ. iii, ಸಂ. ४४)
ಪದ್ಮನಾಭನ ಜಿನದತ್ತರಾಯ ಚರಿತ್ರೆ (ಬಾಗಿನ, ಪು. ೨೭೬–೨೯೬)
ಪರಮಶಿವಯ್ಯ, ಜೀ.ಶಂ. — ಬಸವಕುಮಾರ ಲೋಹಿತ ಕುಮಾರ (ಸುಧಾ, ೨೦–೨–೧೯೬೬)

ಪಾಂಡುರಂಗರಾವ್, ದೇಸಾಯಿ — ಅಪಪ್ರಚಾರಕ್ಕೆ ಆಹುತಿಯಾದ ವಿಜಯನಗರ (ಕರ್ಮವೀರ, ೨೧–೯–೧೯೫೮)
ಕರ್ನಾಟಕದ ಪ್ರಥಮ ಸ್ವಾತಂತ್ರ್ಯವೀರ ಕುಮಾರರಾಮ (ಕರ್ಮವೀರ, ೧೦–೧–೧೯೬೦)
ತಳವಾರ (ಕಸಾಪಪ, ಸಂ. xlii, ಸಂ. ೨)
.... ಬುಕ್ಕರಾಯ ಚರಿತ್ರೆ (ಕಸಾಪಪ, ಸಂ. viii, ಸಂ. ೧)

ರಾಜಪುರೋಹಿತ, ನಾ.ಶ್ರೀ. — ಕುಮಾರರಾಮ ಮತ್ತು ಬೈಚಪ್ಪ ಮಂತ್ರಿ (ಕರ್ಮವೀರ, ೧೩–೪–೧೯೪೨)
ಗಂಡುಗಲಿ ಕುಮಾರರಾಮ (ಕರ್ಮವೀರ, ೨–೨–೧೯೪೨)

ಶ್ರೀನಿವಾಸಜೋಯಿಸ, ಹುಲ್ಲೂರು — ಕವಿಜಾಣ ಗಂಗಯ್ಯ (ವಾಗ್ಭೂಷಣ ಸಂ. ? ಸಂ. ?)*
ಕುಮಾರರಾಮನ ಸಾಂಗತ್ಯಗಳು (ಕಸಾಪಪ, ಸಂ. xxvi, ಸಂ. ೧)
ಕುಮಾರರಾಮನ ಕಥೆ (ಸುಬೋಧ, ಅಕ್ಟೋಬರ್ ೧೯೪೦)
ಕುಮಾರರಾಮನ ಸಾಹಸಗಳು I (ಜಕ, ಸಂ. ? ಸಂ. ?)*
ಕುಮಾರರಾಮನ ಸಾಹಸಗಳು II (ಜಕ, ಸಂ. ? ಸಂ. ?)*
ಕುಮಾರರಾಮನ ಸಾಹಸಗಳು (ಜಕ, ಸಂ. xxi, ಸಂ. ೧೧)
ಗಂಡುಗಲಿ ಕುಮಾರರಾಮ (ಕರ್ಮವೀರ, ೨೩–೨–೧೯೪೨)
ದೊರವಡಿ (ಪ್ರಕ, ಸಂ. xxv, ಸಂ. ೧)
ಪುನ್ನಲ ಅರಸರು (ಲೇಖನ ೧ ರಿಂದ ೧೧) (ಶರಣ ಸಾಹಿತ್ಯ, ಸಂ. vi ರಿಂದ xi)
ಬಾದೂರಖಾನ (ಐತಿಹಾಸಿಕ ಕಥೆ) (ಜಕ, ಸಂ. xviii, ಸಂ. ೪)
ಬಾಲಕುಮಾರರಾಮನ ಸಾಂಗತ್ಯ (ಶರಣ ಸಾಹಿತ್ಯ, ಸಂ. vii, ಸಂ. ೨ ಮತ್ತು ೩)
ಮಹಾಸತಿ (ಶರಣ ಸಾಹಿತ್ಯ, ಸಂ. x, ಸಂ. ೫)
ಹುಳಿಯಾರು ವಿಜಯ (ವಿಚಾರವಾಹಿನಿ, ಸಂ. ii, ಪು. ೩೨೭)

---

* ಬಿಡಿಯಾದ ಲೇಖನವನ್ನು ಮಾತ್ರ ಕಂಡಿರುವುದರಿಂದ, ಇದರ ಪ್ರಕಟನೆಯ ವಿವರ ದೊರೆತಿಲ್ಲ.

ಇಂಗ್ಲಿಷ್ :

Grierson, G. A. – Vararuchi as a Guesser of Acrostics (Indian Antiquary, Vol. X, pp. 366-370)

Kundanagar, K. G. – Sangatya and Satpadi Metres in Kannada (The Journal of the University of Bombay, Vol. vi, Part III and VI)

Ramasharma, M. H. – Studies in Vijayanagar History—
1. The Identification of Nuniz's Crynamata (QJMS, Vol. XX, No. 1)
2. The Exploits of Kampila and Kumara Ramanatha (QJMS, Vol. XX, No. 2)
3. The Exploits of Kampila and Kumara Ramanatha (Ganga's Version) (Supplement to QJMS, Vol. XX, No. 2)
4. The Exploits of Kampila and Kumara Ramanatha (QJMS, Vol. XX, No. 3)

The Kingdom of Kampila (The Journal of the Bombay Historical Society, Vol. II, No. 2)

Srinivasa Jois, H. – Baicheya Dannayaka (QJMS, Vol. ? No. ?)
Kumara Rama (QJMS, Vol. xxxii, No. 1)

Venkataramanayya, N. – The Founders of Vijayanagara (The Journal of Oriental Research Vol. XII, Part 1)

Venkateswara Iyer, S. V. – New Light on the Beginning of Vijayanagar (The Mysore University Journal, 1923)

